

# ಋಗ್ವೇದಸಂಹಿತಾ

ಭಾಗ—೭

ಪ್ರಥಮಾಷ್ಟಕದಲ್ಲಿ ಆರನೆಯ ಅಧ್ಯಾಯವು

ಪ್ರಥಮ ಮಂಡಲದ ಸೂಕ್ತಗಳು ೮೧—೯೪

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೭

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ



( ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ )

ಭಾಗ—೭

## ಪ್ರಥಮಾಷ್ಟಕದಲ್ಲಿ ಆರನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು—೮೧-೯೪





*Translated with Exhaustive Critical Notes*
*by*

**ASTHANA MAHAVIDWAN**

**H. P. VENKATA RAO.**
*Editor.*

*Printed at*
SREE VINAYAK PRINTING WORKS, MYSORE.
1949

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಿಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

Translator & Editor :

**ಆಸ್ಥಾನ ಮಹಾವಿದ್ವಾನ್** H. P. **ವೆಂಕಟರಾವ್**

## ಸಹಾಯಕ ವಿದ್ವನ್ಮಂಡಲಿ

1. **ಜಿ. ಕೃಷ್ಣಮೂರ್ತಿಭಟ್ಟ,** ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. **ಆಸ್ಥಾನ್ ವಿದ್ವಾನ್ ಬ್ರ॥ ಶ್ರೀ॥** H. **ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು.
6. **ಬ್ರ॥ ಶ್ರೀ॥** G. N. **ಚಕ್ರವರ್ತಿ** M. A.
   Professor of Sanskrit. St. Philomina's College, Mysore.
7. **ಬ್ರ॥ ಶ್ರೀ॥ ವೆಂಕಟರಮಣಾಚಾರ್,** M. A., B. T., ಸಾಹಿತ್ಯವಿದ್ವಾನ್.
8. **ಬ್ರ॥ ಶ್ರೀ॥** S. **ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್,
   Govt. Oriental Research Institute, Mysore.
10. **ಬ್ರ॥ ಶ್ರೀ॥** S. **ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು.
    Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ
**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**
ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಪೀಠಿಕೆ.

ಋಗ್ವೇದವನ್ನು ಅರ್ಥಾನುವಾದವಿವರಣೆಗಳೊಡನೆ ವಿವರಿಸುವಾಗ ಪ್ರತಿಸೂಕ್ತದ ಆದಿಯಲ್ಲಿಯೂ ಆ ಸೂಕ್ತಕ್ಕೆ ಸಂಬಂಧಪಟ್ಟ ಋಷಿದೇವತಾಛಂದಸ್ಸುಗಳನ್ನೂ, ವಿನಿಯೋಗವನ್ನೂ ಹೇಳುವುದು ಆರ್ಷೇಯಕಾಲದಿಂದ ಬಂದ ಪದ್ಧತಿಯು. ಇದನ್ನನುಸರಿಸಿ ಭಾಷ್ಯಕಾರರಾದ ಸಾಯಣಾಚಾರ್ಯರು ಪ್ರತಿಸೂಕ್ತದ ಪ್ರಾರಂಭದಲ್ಲಿ ಋಷಿದೇವತಾಛಂದಸ್ಸುಗಳನ್ನು ಅನುಕ್ರಮಣಿಕೆಯಲ್ಲಿರುವಂತೆ ವಿವರಿಸಿ ವಿನಿಯೋಗವನ್ನು ಆಶ್ವಲಾಯನಶ್ರೌತಸೂತ್ರದಲ್ಲಿ ಉಕ್ತವಾಗಿರುವಂತೆ ಹೇಳಿರುವರು. ಇಲ್ಲಿ ಅನುಕ್ರಮಣಿಕೆಯೆಂದರೆ ಶೌನಕಋಷಿಗಳಿಂದ ಪ್ರೋಕ್ತವಾದ ಸರ್ವಾನುಕ್ರಮಣಿಯು. ಇದರಲ್ಲಿ ಪ್ರತಿಸೂಕ್ತದಲ್ಲಿರುವ ಋಕ್ಸಂಖ್ಯೆ, ಆ ಋಕ್ಕುಗಳ ದ್ರಷ್ಟೃಗಳಾದ ಋಷಿಗಳ ಹೆಸರು, ಸೂಕ್ತದ ದೇವತೆ ಮತ್ತು ಋಕ್ಕುಗಳ ಛಂದಸ್ಸು ಮೊದಲಾದ ವಿಷಯಗಳ ನಿರೂಪಣೆ ಇದೆ. ಈ ಅನುಕ್ರಮಣಿಕೆಯಲ್ಲದೆ ಋಷಿಗಳ ವಿಷಯಗಳನ್ನು ಹೇಳುವ ಆರ್ಷೇಯಾನುಕ್ರಮಣಿ, ಛಂದಸ್ಸಿನ ವಿಷಯವನ್ನು ಹೇಳುವ ಛಂದೋನುಕ್ರಮಣಿ ಮೊದಲಾದ ಬೇರೆ ಬೇರೆ ಅನುಕ್ರಮಣಿಕೆಗಳಿವೆ. ಇದನ್ನನುಸರಿಸಿ ಭಾಷ್ಯಕಾರರು ಸೂಕ್ತದ ಋಷಿದೇವತಾಛಂದಸ್ಸುಗಳನ್ನು ವಿವರಿಸುವರು. ವಿನಿಯೋಗಕ್ರಮವನ್ನು ಆಶ್ವಲಾಯನಶ್ರೌತಸೂತ್ರವನ್ನನುಸರಿಸಿ ಹೇಳಿರುವರು. ಋಷಿಗಳು, ಅನುಕ್ರಮಣಿಕೆಗಳು, ಶ್ರೌತಸೂತ್ರಗಳು ಮೊದಲಾದ ವಿಷಯಗಳನ್ನು ನಾವು ಋಗ್ವೇದಸಂಹಿತೆಯ ಪ್ರಥಮಭಾಗದಲ್ಲಿ ಪೂರ್ವಪೀಠಿಕಾ ಪ್ರಕರಣದಲ್ಲಿ ಹಿಂದೆ ವಿವರಿಸಿದ್ದರೂ ಪ್ರಕೃತಸಂದರ್ಭದಲ್ಲಿ ಛಂದಸ್ಸುಗಳ ವಿಷಯವಾಗಿ ಸೂಕ್ಷ್ಮಪರಿಚಯವನ್ನು ಕೊಡುವುದು ವಾಚಕರ ಹಿತದೃಷ್ಟಿಯಿಂದ ಯುಕ್ತವಾಗಿರುವುದು. ಏಕೆಂದರೆ ಋಗ್ವೇದವೆಲ್ಲವೂ ಛಂದೋಬದ್ಧವಾದ ಮಂತ್ರಗಳಿಂದ ಕೂಡಿರುವುದು. ಯಜುರ್ವೇದಾದಿಗಳಲ್ಲಿರುವಂತೆ ಗದ್ಯರೂಪವಾದ ವಾಕ್ಯಗಳಿಲ್ಲ. ಇದರಲ್ಲಿರುವ ಮಂತ್ರಗಳೆಲ್ಲವೂ ಛಂದಸ್ಸಿನ ನಿಯಮಕ್ಕೆ ಒಳಪಟ್ಟು ಪ್ರೌಢಶೈಲಿಯ ಭಾಷೆಯಿಂದ ಕೂಡಿರುವುದು. ಇಂತಹ ಛಂದೋಬದ್ಧವಾದ ಮಂತ್ರಗಳಿಗೆ ಋಕ್ಕುಗಳೆಂದು ಹೆಸರು. ಈ ಋಕ್ಕುಗಳಲ್ಲಿ ಅಕ್ಷರಸಂಖ್ಯೆ ಮತ್ತು ಪಾದಸಂಖ್ಯೆಗೆ ಅನುಸಾರವಾಗಿ ಅನೇಕ ಭೇದಪ್ರಭೇದಗಳಿರುವುವು. ವೇದಮಂತ್ರಗಳಿಗೆ ದ್ರಷ್ಟೃಗಳಾದ ಋಷಿಗಳು ಅನೇಕರಿರುವುದರಿಂದ ಛಂದಸ್ಸುಗಳಲ್ಲಿ ಕಂಡುಬರುವ ವೈವಿಧ್ಯವು ಸಹಜವಾಗಿಯೇ ಇರುವುದು. ವೇದಾಂಗವೆಂಬ ಹೆಸರಿನಿಂದ ಪ್ರಸಿದ್ಧವಾದ ಪಿಂಗಳಕೃತ ಛಂದಸ್ಸೆಂಬ ಗ್ರಂಥದಲ್ಲಿ ಛಂದಸ್ಸಿನ ವಿವರಗಳು ನಿರೂಪಿತವಾಗಿದ್ದರೂ ಆ ಗ್ರಂಥವು ಅಷ್ಟು ಪ್ರಾಚೀನವೆಂದು ಪರಿಗಣಿಸಲ್ಪಡುವುದಿಲ್ಲ. ಏಕೆಂದರೆ ಆ ಗ್ರಂಥದಲ್ಲಿ ವೇದದಲ್ಲಿ ಹೇಳಿರುವ ಛಂದಸ್ಸಿನ ವಿಷಯಗಳ ಜತೆಯಲ್ಲಿ ಆಧುನಿಕ ಸಂಸ್ಕೃತದಲ್ಲಿ ಬಳಕೆಯಲ್ಲಿರುವ ಶ್ಲೋಕಗಳ ವೃತ್ತಲಕ್ಷಣಾದಿಗಳ ವಿವರವೂ ಇರುವುದರಿಂದ ಈ ಗ್ರಂಥವು ಅಷ್ಟು ಪ್ರಮಾಣಾರ್ಹವಲ್ಲ. ಈ ವಿಷಯದಲ್ಲಿ ಕಾತ್ಯಾಯನಮಹರ್ಷಿವಿರಚಿತವಾದ ಸರ್ವಾನುಕ್ರಮಣಿಯೆಂಬ ಗ್ರಂಥವು ಪ್ರಾಚೀನವೂ ಪ್ರಮಾಣಾರ್ಹವೂ ಆಗಿರುವುದರಿಂದ ಅದರಲ್ಲಿರುವ ವಿಷಯನಿರೂಪಣೆಯ ಆಧಾರದ ಮೇಲೆ ಋಗ್ವೇದದ ಛಂದಸ್ಸುಗಳ ವಿಷಯವಾಗಿ ಸೂಕ್ಷ್ಮವಿವರಣೆಯನ್ನು ಇಲ್ಲಿ ಕೊಟ್ಟಿರುವೆವು.

ಛಂದಸ್ಸುಗಳನ್ನು ಕ್ರಮಪಡಿಸುವಾಗ ಅದರಲ್ಲಿರುವ ಅಕ್ಷರಸಂಖ್ಯೆಯನ್ನು ಮಾತ್ರವೇ ಪರಿಗಣಿಸಲಾಗುವುದು. ಅಕ್ಷರಗಳಲ್ಲಿ ದೀರ್ಘ, ಹ್ರಸ್ವ, ಸಂಯುಕ್ತಾಕ್ಷರ ಮೊದಲಾದ ವ್ಯತ್ಯಾಸಗಳಿಗೆ ಪ್ರಾಮುಖ್ಯತೆಯಿಲ್ಲ. ಕ್ಲೃಪ್ತವಾದ

ಅಕ್ಷರಗಳ ಸಂಖ್ಯೆ ಮಾತ್ರವೇ ಛಂದಸ್ಸುಗಳ ಕ್ರಮವನ್ನು ನಿರ್ಣಯಿಸುವುದಕ್ಕೆ ಮುಖ್ಯಸಾಧನವಾಗಿರುವುದು. ಈ ವಿಷಯದಲ್ಲಿ **ಯದಕ್ಷರಪರಿಮಾಣಂ ತಚ್ಛಂದಃ** ಎಂದು ಕಾತ್ಯಾಯನ ಮಹರ್ಷಿಗಳು ಹೇಳಿರುವರು.

ಮುಖ್ಯವಾದ ಛಂದಸ್ಸುಗಳು ಏಳು ಇದ್ದರೂ ಅಕ್ಷರಸಂಖ್ಯೆಗೆ ಅನುಸಾರವಾಗಿ ಹದಿನಾಲ್ಕು ಮುಖ್ಯ ಛಂದಸ್ಸುಗಳಿರುವುವೆಂದು ಪರಿಗಣಿಸಬಹುದು. ಇತರ ಛಂದಸ್ಸುಗಳು ಈ ಮುಖ್ಯಛಂದಸ್ಸುಗಳ ಪ್ರಭೇದಗಳು. ಮುಖ್ಯವಾದ ಛಂದಸ್ಸುಗಳ ಹೆಸರುಗಳನ್ನೂ ಅವುಗಳಲ್ಲಿರುವ ಅಕ್ಷರಸಂಖ್ಯೆಯನ್ನೂ ಕೆಳಗೆ ಕೊಟ್ಟಿದೆ.

| | | | | | | | |
|---|---|---|---|---|---|---|---|
| 1. | ಗಾಯತ್ರೀ | 24 | ಅಕ್ಷರಗಳು | 8. | ಅತಿಜಗತೀ | 52 | ಅಕ್ಷರಗಳು |
| 2. | ಉಷ್ಣಿಕ್ | 28 | ,, | 9. | ಶಕ್ವರೀ | 56 | ,, |
| 3. | ಅನುಷ್ಟುಪ್ | 32 | ,, | 10. | ಅತಿಶಕ್ವರೀ | 60 | ,, |
| 4. | ಬೃಹತೀ | 36 | ,, | 11. | ಅಷ್ಟಿ | 64 | ,, |
| 5. | ಪಂಕ್ತಿ | 40 | ,, | 12. | ಅತ್ಯಷ್ಟಿ | 68 | ,, |
| 6. | ತ್ರಿಷ್ಟುಪ್ | 44 | ,, | 13. | ಧೃತಿ | 72 | ,, |
| 7. | ಜಗತೀ | 48 | ,, | 14. | ಅತಿಧೃತಿ | 76 | ,, |

ಇವುಗಳಲ್ಲಿ ಗಾಯತ್ರೀಛಂದಸ್ಸಿನಲ್ಲಿ ಮೂರು ಪಾದಗಳಿರುವುವು. ಪ್ರತಿಪಾದದಲ್ಲಿಯೂ ಎಂಟು ಅಕ್ಷರಗಳಿರುವುವು. ಆದುದರಿಂದ ಒಟ್ಟು ಗಾಯತ್ರೀಛಂದಸ್ಸಿಗೆ ಇಪ್ಪತ್ತುನಾಲ್ಕು ಅಕ್ಷರಗಳು. ಈ ಛಂದಸ್ಸಿನಲ್ಲಿ ಮೊದಲಿನ ಎರಡು ಪಾದಗಳು ಸೇರಿ ಒಂದೇ ವಾಕ್ಯವಾದ ಪೂರ್ವಾರ್ಧವೆಂದೂ ಮೂರನೆಯ ಒಂದು ಪಾದ ಮಾತ್ರ ಉತ್ತರಾರ್ಧವೆಂದೂ ಹೇಳಲ್ಪಡುವುದು.

ಪಂಕ್ತಿ ಎಂಬ ಛಂದಸ್ಸಿನಲ್ಲಿ ಎಂಟು ಅಕ್ಷರಗಳ ಐದು ಪಾದಗಳಿರುವುವು. ಪೂರ್ವಾರ್ಧದಲ್ಲಿ ಎರಡು ಪಾದಗಳೂ ಉತ್ತರಾರ್ಧದಲ್ಲಿ ಮೂರು ಪಾದಗಳೂ ಇರುವುವು. ಶಕ್ವರೀಛಂದಸ್ಸಿನಲ್ಲಿ ಏಳು ಪಾದಗಳಿರುವುವು.

ಉಷ್ಣಿಕ್ ಮೊದಲಾದ ಛಂದಸ್ಸುಗಳಲ್ಲಿ ನಾಲ್ಕು ಪಾದಗಳಿರುವುವು. ಎರಡೆರಡು ಪಾದಗಳಿಗೆ ಒಂದು ಅರ್ಧ ಋಕ್ಕು. ಅಕ್ಷರಸಂಖ್ಯೆಯು ಅದೇ ರೀತಿ ಇರುವುದು. ಕಡೆಯ ಛಂದಸ್ಸಾದ ಅತಿಧೃತಿಯಲ್ಲಿ ಈ ಯಾವ ಕ್ರಮವೂ ಕಂಡುಬರುವುದಿಲ್ಲ. ಎಪ್ಪತ್ತಾರು ಅಕ್ಷರುಗಳು ಮಾತ್ರ ಇರುವುವು. ಛಂದಸ್ಸುಗಳ ಅಕ್ಷರಸಂಖ್ಯೆ ಮೊದಲಾದ ವಿಷಯಗಳ ವಿಸ್ತಾರವಾದ ವಿವರಣೆಯು ಉದಾಹರಣೆಸಹಿತವಾಗಿ ಋ. ಸಂ. ಪ್ರಥಮಭಾಗದ ಪೂರ್ವಪೀಠಿಕೆಯ ಹನ್ನೆರಡನೆಯ ಪ್ರಕರಣದಲ್ಲಿ (ಪೇಜುಗಳು 221-231) ವಿವರಿಸಲಾಗಿರುವುದು.

ಋಗ್ವೇದದಲ್ಲಿ ಬಹುಭಾಗವು ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಋಕ್ಕುಗಳಿಂದಲೇ ಕೂಡಿರುವುದು. ಶೌನಕಮಹರ್ಷಿವಿರಚಿತವಾದ ಛಂದೋನುಕ್ರಮಣಿಯಲ್ಲಿ ಹೇಳಿರುವಂತೆ ಋಗ್ವೇದದಲ್ಲಿರುವ (ಶಾಕಲಶಾಖೆ) ವಿಧವಿಧವಾದ ಛಂದಸ್ಸುಗಳ ಮತ್ತು ಋಕ್ಕುಗಳ ಸಂಖ್ಯೆಯು ಈ ರೀತಿ ಇರುವುದು—

| | | | | | |
|---|---|---|---|---|---|
| 1. | ಗಾಯತ್ರೀ ಛಂದಸ್ಸಿನ ಋಕ್ಕುಗಳು ಒಟ್ಟು | | | .... | ೨೪೬೭ |
| 2. | ಉಷ್ಣಿಕ್ | ,, | ,, | .... | ೩೪೧ |
| 3. | ಅನುಷ್ಟುಪ್ | ,, | ,, | .... | ೮೫೫ |
| 4. | ಬೃಹತೀ | ,, | ,, | .... | ೧೮೧ |
| 5. | ಪಂಕ್ತಿಃ | ,, | ,, | .... | ೩೧೨ |
| 6. | ತ್ರಿಷ್ಟುಪ್ | ,, | ,, | .... | ೪೨೫೩ |
| 7. | ಜಗತೀ | ,, | ,, | .... | ೧೩೪೮ |
| 8. | ಅತಿಜಗತೀ | ,, | ,, | .... | ೧೭ |
| 9. | ಶಕ್ವರೀ | ,, | ,, | .... | ೧೯ |
| 10. | ಅತಿಶಕ್ವರೀ | ,, | ,, | .... | ೯ |
| 11. | ಅಷ್ಟಿ | ,, | , | .... | ೬ |
| 12. | ಅತ್ಯಷ್ಟಿ | ,, | ,, | .... | ೮೪ |
| 13. | ಧೃತಿ | ,, | ,, | .... | ೨ |
| 14. | ಅತಿಧೃತಿ | ,, | ,, | .... | ೧ |

ಮೇಲೆ ಹೇಳಿದ ಈ ಮುಖ್ಯವಾದ ಛಂದಸ್ಸುಗಳಲ್ಲದೆ ಇವುಗಳಲ್ಲಿರುವ ಅನೇಕ ಭೇದಪ್ರಭೇದಗಳೂ ಮಿಶ್ರವಾದ ಛಂದಸ್ಸುಗಳೂ ಅನೇಕವಾಗಿರುವುವು. ಮತ್ತು—

| | | | | |
|---|---|---|---|---|
| ಒಂದು ಪಾದಮಾತ್ರವಿರುವ ಋಕ್ಕುಗಳು | | | | 6 |
| ಎರಡು ಪಾದಗಳಿರುವ | | ,, | .... | 17 |
| ಪ್ರಾಗಾಥ ಬಾರ್ಹತಛಂದಸ್ಸಿನ ,, | | | .... | 194 |
| ಕಕುಭ | ,, | ,, | .... | 55 |
| ಮಹಾಬಾರ್ಹತ | ,, | ,, | .... | 257 |

ಎಂಬ ಋಕ್ಕುಗಳೂ ಇರುವವು. ಎರಡು ಪಾದಗಳಿರುವ ದ್ವಿಪದಾ ವಿರಾಟ್ ಎಂಬ ಛಂದಸ್ಸಿನಲ್ಲಿ ಎರಡು ಪಾದಗಳು ಸೇರಿರುವ ಒಂದು ಅರ್ಧ ಋಕ್ಕುಮಾತ್ರವಿರುವುದೆಂದು ಕೆಲವರು ಹೇಳುವರು. ಮತ್ತೆ ಕೆಲವರು ಅಧ್ಯಯನ ಅನುಕೂಲಕ್ಕಾಗಿ ಈ ದ್ವಿಪಾದ ವಿರಾಟ್ ಛಂದಸ್ಸಿನ ಎರಡು ಅರ್ಧ ಋಕ್ಕಗಳನ್ನು ಸೇರಿಸಿ ನಾಲ್ಕು ಪಾದಗಳಿರುವ ಒಂದು ಋಕ್ಕೆಂದು ಹೇಳುವರು. ಈ ರೀತಿಯಾದ ಅಭಿಪ್ರಾಯಭೇದದಿಂದ ಒಟ್ಟು ಛಂದಸ್ಸಿನ ಸಂಖ್ಯೆಗಳಲ್ಲಿ ವ್ಯತ್ಯಾಸ ಕಂಡುಬರಬಹುದು. ಆದರೆ ಈ ವ್ಯತ್ಯಾಸವು ಅಷ್ಟು ಗಮನಾರ್ಹವಾದುದಲ್ಲವೆಂದು ಹೇಳಬಹುದು.

ಋಷಿದೃಷ್ಟವಾದ ಋಗ್ವೇದದ ಋಕ್ಕುಗಳಲ್ಲಿ ಕ್ಲಪ್ತಸಂಖ್ಯೆಯ ಅಕ್ಷರಗಳು ಸ್ವಲ್ಪವೂ ವ್ಯತ್ಯಾಸವಿಲ್ಲದೆ ಇರುವವು ಎಂದು ಹೇಳುವುದಕ್ಕಾಗುವುದಿಲ್ಲ. ಅನೇಕ ಸಂದರ್ಭಗಳಲ್ಲಿ ಕ್ಲಪ್ತಸಂಖ್ಯೆಗಿಂತ ಒಂದು ಅಕ್ಷರ ಹೆಚ್ಚಾಗಿಯೂ ಅಥವಾ ಕಮ್ಮಿಯಾಗಿಯೂ ಇರಬಹುದು. ಈ ವಿಷಯದಲ್ಲಿ— **ಊನಾಧಿಕೇನೈಕೇನ ನಿಚೃದ್ಭೂರಿಜೌ । ದ್ವಾಭ್ಯಾಂ ವಿರಾಟ್ಸ್ವರಾಜೌ ॥** ಎಂದು ಕಾತ್ಯಾಯನ ಋಷಿಗಳು ಹೇಳಿರುವರು. ಎಂದರೆ ಋಕ್ಕಿನ

ಪಾದದಲ್ಲಿ ಒಂದು ಅಕ್ಷರ ಕಮ್ಮಿಯಾಗಿದ್ದರೆ ಅದಕ್ಕೆ ನಿಚೃತ್ ಎಂದೂ ಹೆಚ್ಚಾಗಿದ್ದರೆ ಭೂರಿ ಎಂದೂ ಹೇಳಲ್ಪಡುವುದು. ಅದರಂತೆ ಎರಡು ಅಕ್ಷರಗಳು ಕಮ್ಮಿಯಾಗಿದ್ದರೆ ವಿರಾಟ್ ಎಂದೂ ಹೆಚ್ಚಾಗಿದ್ದರೆ ಸ್ವರಾಟ್ ಎಂತಲೂ ಹೆಸರು. ಕೆಲವು ಸಂದರ್ಭಗಳಲ್ಲಿ ಉಚ್ಚಾರಣ ಕ್ರಮಾನುಸಾರವಾಗಿ ಸಂಯುಕ್ತಾಕ್ಷರವನ್ನು ಎರಡು ಅಕ್ಷರಗಳೆಂದು ಪರಿಗಣಿಸ ಲಾಗಿರುವುದು. ಗಾಯತ್ರೀ ಛಂದಸ್ಸಿನ ಋಕ್ಕಾದ ತತ್ಸವಿತುರ್ವರೇಣ್ಯಂ ಎಂಬ ಪ್ರಸಿದ್ಧಗಾಯತ್ರೀಮಂತ್ರದ ಪ್ರಥಮಪಾದದಲ್ಲಿ ಎಂಟು ಅಕ್ಷರಗಳಿಗೆ ಬದಲಾಗಿ ಏಳು ಅಕ್ಷರಗಳು ಮಾತ್ರ ಇರುವವು. ಇದನ್ನು ಸರಿಪಡಿಸುವುದ ಕ್ಕಾಗಿ ಪಾದದ ಕಡೆಯ ಅಕ್ಷರವಾದ ಣ್ಯಂ ಎಂಬ ಸಂಯುಕ್ತಾಕ್ಷರವು ಣಿ+ಅಂ ಎಂಬ ಎರಡು ಅಕ್ಷರಗಳನ್ನೊಳ ಗೊಂಡಿರುವುದೆಂದು ಕೆಲವರು ಭಾವಿಸುವರು. ಇಂತಹ ಲೋಪಗಳು ಬೇಕಾದಷ್ಟಿರುವುದರಿಂದ ಅಕ್ಷರಸಂಖ್ಯೆಯ ಕ್ರಮವನ್ನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸಿದಂತೆ ಕಂಡುಬರುವುದಿಲ್ಲ. ಆದುದರಿಂದ ಗಾಯತ್ರೀ ಮಂತ್ರದಲ್ಲಿ ೨೩ ಅಕ್ಷರಗಳು ಮಾತ್ರವಿರುವುದರಿಂದ ಇದನ್ನು ನಿಚೃದ್ಗಾಯತ್ರೀ ಛಂದಸ್ಸಿನ ಋಕ್ಕೆಂದು ಹೇಳುವರು. ಅದರಂತೆ ಗಾಯತ್ರೀ ಛಂದಸ್ಸಿನ ಋಕ್ಕಿನಲ್ಲಿ ಒಂದು ಅಕ್ಷರ ಹೆಚ್ಚಾಗಿದ್ದಲ್ಲಿ ಅದನ್ನು ಭೂರಿಗ್ಗಾಯತ್ರೀ ಎಂದು ಹೇಳುವರು. ಮತ್ತು ಪಂಕ್ತಿಛಂದಸ್ಸಿನಲ್ಲಿ ನಿಯಮಪ್ರಕಾರ ೪೦ ಅಕ್ಷರಗಳಿರುವವು. ಎರಡು ಅಕ್ಷರ ಕಮ್ಮಿಯಾಗಿದ್ದರೆ ಎಂದರೆ ಒಂದು ಪಂಕ್ತಿಛಂದಸ್ಸಿನ ಋಕ್ಕಿನಲ್ಲಿ ೩೮ ಅಕ್ಷರಗಳು ಮಾತ್ರವಿದ್ದಲ್ಲಿ ಅದಕ್ಕೆ ವಿರಾಟ್ಪಂಕ್ತಿಯೆಂದೂ, ಎರಡು ಅಕ್ಷರ ಹೆಚ್ಚಾಗಿ ದ್ದಲ್ಲಿ ಎಂದರೆ ೪೨ ಅಕ್ಷರಗಳಿದ್ದಲ್ಲಿ ಸ್ವರಾಟ್ ಪಂಕ್ತಿಯೆಂದೂ ಹೇಳುವರು. ನಾವು ಹಿಂದೆ ಹೇಳಿದಂತೆ ಛಂದಸ್ಸುಗಳ ವಿಸ್ತಾರವಾದ ವಿವರಣೆಯು ಋ. ಸಂ. ಭಾಗ ೧ರ ಪೂರ್ವಪೀಠಿಕೆಯ ೧೨ನೆಯ ಪ್ರಕರಣದಲ್ಲಿ ಉಕ್ತವಾಗಿರುವುದು.

ಮೇಲಿನ ಪಟ್ಟಿಯಲ್ಲಿ ಕಂಡುಬರುವಂತೆ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳು ಋಗ್ವೇದದಲ್ಲಿ ಹೆಚ್ಚಾಗಿರುವುದ ರಿಂದ ಎಂದರೆ ೪೨೫೩ ಋಕ್ಕುಗಳಿರುವುದರಿಂದ ಈ ತ್ರಿಷ್ಟುಪ್ ಛಂದಸ್ಸೇ ಹೆಚ್ಚಾಗಿ ಬಳಕೆಯಲ್ಲಿತ್ತೆಂದು ಹೇಳಬಹುದು. ಆಧುನಿಕಸಂಸ್ಕೃತದಲ್ಲಿಯೂ ಸಹ ೩೨ ಅಕ್ಷರಗಳ ಅನುಷ್ಟುಪ್ ವೃತ್ತಕ್ಕೆ ಪ್ರಾಧಾನ್ಯತೆ ಇರುವುದು. ಪುರಾಣಾದಿ ಯಾದ ಅನೇಕ ಗ್ರಂಥಗಳು ಈ ಅನುಷ್ಟುಪ್ ವೃತ್ತದಲ್ಲಿಯೇ ಬರೆಯಲ್ಪಟ್ಟಿರುವುವು. ವೇದದಲ್ಲಿರುವ ಛಂದಸ್ಸಿನ ಕ್ರಮವನ್ನೇ ಅನುಸರಿಸಿ ಕೆಲವು ವ್ಯತ್ಯಾಸಗಳೊಡನೆ ಆಧುನಿಕಸಂಸ್ಕೃತದಲ್ಲಿ ಅನೇಕ ವೃತ್ತಗಳು ನಿರ್ಮಿತವಾಗಿರುವವು. ಹೇಗೆಂದರೆ ೩೨ ಅಕ್ಷರಗಳುಳ್ಳ ಅನುಷ್ಟುಪ್ ಛಂದಸ್ಸನ್ನನುಸರಿಸಿ ೩೨ ಅಕ್ಷರಗಳ ಅನುಷ್ಟುಪ್‌ವೃತ್ತವೂ ಹನ್ನೊಂದ ಅಕ್ಷರಗಳ ಪಾದಗಳುಳ್ಳ ತ್ರಿಷ್ಟುಪ್ ಛಂದಸ್ಸನ್ನನುಸರಿಸಿ ಇಂದ್ರವಜ್ರ ಮತ್ತು ಉಪೇಂದ್ರವಜ್ರವೆಂಬ ವೃತ್ತಗಳೂ, ಹನ್ನೆರಡು ಅಕ್ಷರಗಳುಳ್ಳ ಪಾದಗಳಿಂದ ಕೂಡಿದ ಜಗತೀ ಛಂದಸ್ಸನ್ನನುಸರಿಸಿ ವಂಶಸ್ಥವೃತ್ತವೂ, ಶಕ್ವರೀ ಛಂದಸ್ಸನ್ನ ನುಸರಿಸಿ ವಸಂತತಿಲಕಾ ಎಂಬ ವೃತ್ತವೂ ರಚಿಸಲ್ಪಟ್ಟಿರುವವು.

ಅನುಷ್ಟುಪ್‌ವೃತ್ತದ ಅಕ್ಷರಗಳ ಸಂಯೋಜನೆಯಲ್ಲಿ ಅಷ್ಟು ಕಟ್ಟುನಿಟ್ಟಾದ ನಿಯಮವಿಲ್ಲದ್ದರಿಂದ ಈ ವೃತ್ತವೇ ಅನೇಕ ಆಧುನಿಕ ಸಂಸ್ಕೃತಗ್ರಂಥರಚನೆಯಲ್ಲಿ ಬಳಸಲಾಗಿರುವುದು. ಈ ವೃತ್ತದಲ್ಲಿ ನಾಲ್ಕು ಪಾದಗಳಿದ್ದು ಪ್ರತಿಪಾದದಲ್ಲಿಯೂ ಎಂಟು ಅಕ್ಷರಗಳಿರುವುವು. ಎರಡನೆಯ ಮತ್ತು ನಾಲ್ಕನೆಯ ಪಾದಗಳ ಏಳನೆಯ ಅಕ್ಷರವು ಹ್ರಸ್ವವಾಗಿರಬೇಕು. ಹಾಗೆಯೇ ಮೊದಲನೆಯ ಮತ್ತು ಮೂರನೆಯ ಪಾದಗಳ ಐದನೆಯ ಅಕ್ಷರವು ಹ್ರಸ್ವ ವಾಗಿರಬೇಕು. ಇಷ್ಟುಮಾತ್ರವಿದ್ದರೆ ಈ ವೃತ್ತರಚನೆಯು ಸಾಧ್ಯವು. ಹೆಚ್ಚು ನಿಯಮಗಳನ್ನು ಅನುಸರಿಸ ಬೇಕಾಗಿಲ್ಲ. ಆದುದರಿಂದ ಈ ವೃತ್ತವೇ ವಿಶೇಷವಾಗಿ ಬಳಕೆಯಲ್ಲಿರುವುದು.

ಹಿಂದೆ ಹೇಳಿದ ಗಾಯತ್ರ್ಯಾದಿಛಂದಸ್ಸುಗಳು ಬಹಳ ಪುರಾತನವಾದವು. ಅತಿಪ್ರಾಚೀನಕಾಲವಾದ ಋಗ್ವೇದಕಾಲದಲ್ಲಿಯೂ ಸಹ ಋಷಿಗಳು ದೇವತೆಗಳನ್ನು ಛಂದೋಬದ್ಧವಾದ ವಾಕ್ಯಗಳಿಂದಲೇ ಎಂದರೆ ಋಕ್ಕು ಗಳಿಂದಲೇ ಸ್ತೋತ್ರಮಾಡುವುದು ಪದ್ಧತಿಯಾಗಿರುವಂತೆ ಋಗ್ವೇದದ ಅನೇಕ ಋಕ್ಕುಗಳಲ್ಲಿ ಕಂಡುಬರುವುದು—

**ಅಗ್ನೇರ್ಗಾಯತ್ರ್ಯಭವತ್ಸಯುಗ್ವೋಷ್ಣಿಹಯಾ ಸವಿತಾ ಸಂ ಬಭೂವ ।**
**ಅನುಷ್ಟುಭಾ ಸೋಮ ಉಕ್ಥೈರ್ಮಹಸ್ವಾನ್ ಬೃಹಸ್ಪತೇರ್ಬೃಹತೀ ವಾಚಮಾವತ್ ॥**
**ವಿರಾಣ್ಮಿತ್ರಾವರುಣಯೋರಭಿಶ್ರೀರಿಂದ್ರಸ್ಯ ತ್ರಿಷ್ಟುಬಿಹ ಭಾಗೋ ಅಹ್ನಃ ।**
**ವಿಶ್ವಾನ್ದೇವಾನ್ ಜಗತ್ಯಾ ವಿವೇಶ ತೇನ ಚಾಕ್ಲೃಪ್ರ ಋಷಯೋ ಮನುಷ್ಯಾಃ ॥**
( ಋ. ಸಂ. ೧೦-೧೩೦-೪ ಮತ್ತು ೫ )

**ತ್ರಿಷ್ಟುಬ್ಗಾಯತ್ರೀ ಛಂದಾಂಸಿ ಸರ್ವಾ ತಾ ಯಮ ಆಹಿತಾ ।**
(ಋ. ಸಂ. ೧೦-೧೪-೧೬)

ಈ ಋಕ್ಕುಗಳಲ್ಲಿ ಗಾಯತ್ರ್ಯಾದಿಛಂದಸ್ಸಿನ ಹೆಸರುಗಳಿರುವುದಲ್ಲದೆ ಅಗ್ನಿಯಿಂದ ಗಾಯತ್ರೀ ಛಂದಸ್ಸೂ, ಸೂರ್ಯನಿಂದ ಉಷ್ಣಿಕ್‌ಛಂದಸ್ಸೂ, ಸೋಮನಿಂದ ಅನುಷ್ಟುಪ್ ಛಂದಸ್ಸೂ, ಬೃಹಸ್ಪತಿಯಿಂದ ಬೃಹತೀಛಂದಸ್ಸೂ, ಮಿತ್ರಾವರುಣರಿಂದ ವಿರಾಟ್‌ಛಂದಸ್ಸೂ ಉತ್ಪನ್ನವಾದವೆಂಬ ವಿವರಣೆ ಇರುವುದು. ಮತ್ತು ತ್ರಿಷ್ಟುಪ್ ಛಂದಸ್ಸನ್ನು ಇಂದ್ರನೇ ಕಂಡುಹಿಡಿದಿದ್ದುದರಿಂದ ಆ ಛಂದಸ್ಸಿನಿಂದಲೇ ಇಂದ್ರನನ್ನು ಋಷಿಗಳು ವಿಶೇಷವಾಗಿ ಸ್ತೋತ್ರಮಾಡಿರುವುದು ಕಂಡುಬರುವುದು. ಅದರಂತೆ ವಿಶ್ವೇದೇವತೆಗಳು ಜಗತೀಛಂದಸ್ಸನ್ನು ನಿರ್ಮಿಸಿದರು. ಶಕ್ವರೀಛಂದಸ್ಸನ್ನು ಸಾಮಗಾನಮಾಡುವ ಋತ್ವಿಜರು ವಿಶೇಷವಾಗಿ ಉಪಯೋಗಿಸುವರು ಈ ವಿಷಯದಲ್ಲಿ—

**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।**
(ಋ. ಸಂ. ೧೦-೭೧-೧೧)

**ಯಚ್ಛಕ್ವರೀಷು ಬೃಹತಾ ರವೇಣೇಂದ್ರೇ ಶುಷ್ಮಮದಧಾತಾ ವಸಿಷ್ಠಾಃ ।**
(ಋ. ಸಂ. ೭-೩೩-೫)

ಎಂಬ ಋಕ್ಕಗಳು ಈ ಅರ್ಥವನ್ನು ಸಮರ್ಥಿಸುವುವು. ಆದುದರಿಂದ ಗಾಯತ್ರೀ, ಮೊದಲಾದ ಛಂದಸ್ಸುಗಳು ಬಹುಪುರಾತನ ಕಾಲದಿಂದಲೂ ಬಳಕೆಯಲ್ಲಿರುವುದೆಂಬುದು ಸ್ಪಷ್ಟವಾಗಿರುವುದು.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂ ಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ, ಜಿ. ಸಿ. ಎಸ್. ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹ ಮಾಡುತ್ತಿರುವುದು, ಕರ್ನಾಟಕಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ

ಎಂಬ ಮಂತ್ರನಾಮಾಂಕಿತರಾದ)ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ, ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತ್ಯೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ವಿರೋಧಿನಾಮ ಸಂ॥ ಪುಷ್ಯ ಶುದ್ಧ ಏಕಾದಶಿ ಶುಕ್ರವಾರ
30—12—1949

ಅನುವಾದಕ
**ಹೆಚ್. ವಿ. ವೆಂಕಟರಾವ್,**
ಆಸ್ಥಾನ ಮಹಾ ವಿದ್ವಾನ್



ಕೆ. ವೆಂಕಟಸುಬ್ಬಯ್ಯ, ಪ್ರಿಂಟರ್, ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು

|| ಶ್ರೀ ||

# ವಿಷಯಾನುಕ್ರಮಣಿಕೆ



## ಪ್ರಥಮಾಷ್ಟಕದಲ್ಲಿ ಆರನೆಯ ಅಧ್ಯಾಯವು

ಪ್ರಥಮಮಂಡಲದ ಸೂಕ್ತಗಳು ೮೧—೯೪

---

ಏಳನೆಯ ಭಾಗದ ವಿಷಯಾನುಕ್ರಮಣಿಕೆ ಸಮಾಪ್ತವು.

———— :O: ————



॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

ಭಾಗ—೭

## ॥ ಪ್ರಥಮಾಷ್ಟಕೇ ಷಷ್ಠೋಽಧ್ಯಾಯಃ ॥

### ॥ ಮೊದಲನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು ॥

ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ದಶತಯ್ಯಾಃ ಪಂಚಮೋಽಯಮಧ್ಯಾಯೋ ವ್ಯಾಕೃತಃ ಪುರಾ ।
ಧೀಮತಾ ಸಾಯಣಾರ್ಯೇಣ ಷಷ್ಠೋಽಧ್ಯಾಯೋಽಥ ವರ್ಣ್ಯತೇ ॥

ಪ್ರಥಮೇ ಮಂಡಲೇ ತ್ರಯೋದಶಾನುವಾಕೇ ಸಪ್ತ ಸೂಕ್ತಾನಿ ವ್ಯಾಕೃತಾನಿ । ಇಂದ್ರೋ ಮದಾಯೇತಿ ನವರ್ಚಮಷ್ಟಮಂ ಸೂಕ್ತಂ । ಅತ್ರಾನುಕ್ರಮ್ಯತೇ । ಇಂದ್ರೋ ನವೇತಿ । ಋಷಿಶ್ಚಾನ್ಯಸ್ಮಾ-ದೃಷೇಃ (ಅನು. ೧೨-೨) ಇತಿ ಪರಿಭಾಷಯಾ ರಹೂಗಣಪುತ್ರಸ್ಯ ಗೋತಮಸ್ಯಾನುವೃತ್ತೇರಸ್ಯ ಸೂಕ್ತಸ್ಯ ಸ ಋಷಿಃ । ಪೂರ್ವಸೂಕ್ತೇ ಪಾಂಕ್ತಂ ಹೀತ್ಯುಕ್ತತ್ವಾತ್ತುಹ್ಯಾದಿಪರಿಭಾಷಯೇದಮುತ್ತರಂ ಚ ಸೂಕ್ತಂ

**ಸಾಂಕ್ತಂ। ಅನಾದೇಶಪರಿಭಾಷಯೇಂದ್ರೋ ದೇವತಾ॥ ಪೃಷ್ಠ್ಯಸ್ಯ ಪಂಚಮೇಽಹನಿ ನಿಷ್ಕೇವಲ್ಯಶಸ್ತ್ರ ಇದಂ ಸೂಕ್ತಂ। ಸೂತ್ರಿತಂ ಚ। ಪ್ರೇದಂ ಬ್ರಹ್ಮೇಂದ್ರೋ ಮದಾಯ ಸತ್ರಾ ಮದಾಸ ಇತಿ ನಿಷ್ಕೇವಲ್ಯಂ। ಆ. ೭-೧೨। ಇತಿ॥ ಆರಂಭಣೀಯೇ ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇ ಸವನೇ ಬ್ರಾಹ್ಮಣಾಚ್ಛಂಸಿನಃ ಶಸ್ತ್ರ ಇಂದ್ರೋ ಮದಾಯೇತ್ಯಾದ್ಯಸ್ತ್ರ್ಯೃಚೋ ವೈಕಲ್ಪಿಕಃ ಸ್ತೋತ್ರಿಯಃ। ಹೋತ್ರಕಾಣಾಮಿತಿ ಖಂಡೇ ಸೂತ್ರಿತಂ। ಇಂದ್ರೋ ಮದಾಯ ವಾವೃಧೇ ಮದೇ ಮದೇ ಹಿ ನೋ ದದಿಃ। ಆ. ೭-೪। ಇತಿ॥ ಮಹಾವ್ರತೇ ನಿಷ್ಕೇವಲ್ಯ ಉತ್ತರಪಕ್ಷ ಇಂದ್ರೋ ಮದಾಯೇತ್ಯೇಕಾ ಶಂಸನೀಯಾ। ತಥೈವ ಪಂಚಮಾರಣ್ಯಕೇ ಸೂತ್ರಿತಂ। ಇಂದ್ರೋ ಮದಾಯ ವಾವೃಧ ಇತಿ ಪಂಕ್ತಿಃ ಸೂದದೋಹಾಃ। ಐ. ಆ. ೫-೨-೨। ಇತಿ॥**

ಅನುವಾದವು— ಪ್ರಥಮ ಮಂಡಲದ ಹದಿಮೂರನೆಯ ಅನುವಾಕದಲ್ಲಿ ಇದುವರೆಗೆ ಏಳು ಸೂಕ್ತಗಳು ಮುಗಿದು ಎಂಟನೆಯ **ಇಂದ್ರೋಮದಾಯ** ಎಂಬ ಸೂಕ್ತವು ಆರಂಭವಾಗುವುದು. ಇದರಲ್ಲಿ ಒಂಭತ್ತು ಋಕ್ಕು ಗಳಿರುವುವು. ಅನುಕ್ರಮಣಿಕೆಯಲ್ಲಿ **ಇಂದ್ರೋ ನವ** ಎಂದು ಹೇಳಿರುವುದು (ಅನು. ೧೨-೨) ಈ ಸೂಕ್ತಕ್ಕೆ ರಹೂಗಣ ಪುತ್ರನಾದ ಗೋತಮನೆಂಬುವನು ಋಷಿಯು. ಹಿಂದೆ ಹೇಳಿದಂತೆ ಈ ಸೂಕ್ತವೂ ಮುಂದಿನ ಸೂಕ್ತವೂ ಪಂಕ್ತಿ ಛಂದಸ್ಸವು. ಇಂದ್ರನೇ ದೇವತೆಯು. ಪೃಷ್ಠ್ಯಯಾಗದ ಐದನೆಯ ದಿನದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದಲ್ಲಿ **ಪ್ರೇದಂ ಬ್ರಹ್ಮೇಂದ್ರೋ ಮದಾಯ ಸತ್ರಾ ಮದಾಸ ಇತಿ ನಿಷ್ಕೇವಲ್ಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೧೨) ಆರಂಭಣೀಯ ದಲ್ಲಿಯೂ ಕೂಡ ಇಪ್ಪತ್ತನಾಲ್ಕನೆಯ ದಿನ ಮಾಧ್ಯಂದಿನ ಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು **ಇಂದ್ರೋ ಮದಾಯ** ಎಂಬ ಮೂರು ಋಕ್ಕುಗಳನ್ನು ಸ್ತೋತ್ರಿಯ ಮಂತ್ರಗಳನ್ನಾಗಿ ಪಠಿಸಬೇಕೆಂದು ವೈಕಲ್ಪಿಕವಾಗಿ ಹೇಳಿರುವುದು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ **ಹೋತ್ರಕಾಣಾಂ** ಎಂಬ ಖಂಡದಲ್ಲಿ **ಇಂದ್ರೋ-ಮದಾಯ ವಾವೃಧೇ ಮದೇ ಮದೇ ಹಿ ನೋ ದದಿಃ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. (ಆ. ೭-೪) ಮಹಾವ್ರತದಲ್ಲಿಯೂ ಸಹ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ **ಇಂದ್ರೋ ಮದಾಯ** ಎಂಬ ಒಂದು ಋಕ್ಕನ್ನು ಪಠಿಸ ಬೇಕೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ **ಇಂದ್ರೋಮದಾಯ ವಾವೃಧ ಇತಿ ಪಂಕ್ತಿಃ ಸೂದ-ದೋಹಾಃ** ಎಂಬ ವಾಕ್ಯದಲ್ಲಿ ಹೇಳಿರುವುದು. (ಐ. ಆ. ೫-೨-೨)

॥ ಓಂ ॥

## ಸೂಕ್ತ—೮೧

॥ ಮಂಡಲ—೧ ॥ ಅನುವಾಕ—೧೩ ॥ ಸೂಕ್ತ—೮೧ ॥

॥ ಅಷ್ಟಕ— ೧ ॥ ಅಧ್ಯಾಯ— ೬ ॥ ವರ್ಗ—೧, ೨, ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೯ ॥

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ಇಂದ್ರಃ ॥

। ಛಂದಃ—ಪಂಕ್ತಿಃ ॥

॥ ಸಂಹಿತಾಪಾಠಃ ॥

ಇಂದ್ರೋ ಮದಾಯ ವಾವೃಧೇ ಶವಸೇ ವೃತ್ರಹಾ ನೃಭಿಃ।
ತಮಿನ್ಮಹತ್ಸ್ವಾಜಿಷೂತೇಮರ್ಭೇ ಹವಾಮಹೇ ಸ ವಾಜೇಷು
ಪ್ರ ನೋಽವಿಷತ್ ॥೧॥

॥ ಪದಪಾಠಃ ॥

ಇಂದ್ರಃ । ಮದಾಯ । ವವೃಧೇ । ಶವಸೇ । ವೃತ್ರಽಹಾ । ನೃಽಭಿಃ ।
ತಂ । ಇತ್ । ಮಹತ್ಽಸು । ಆಜಿಷು । ಉತ । ಈಂ । ಅರ್ಭೇ । ಹವಾಮಹೇ ।
ಸ । ವಾಜೇಷು । ಪ್ರ । ನಃ । ಅವಿಷತ್ ॥ ೧ ॥

॥ ಸಾಯಣಭಾಷ್ಯಂ ॥

ವೃತ್ರಹಾ ವೃತ್ರಸ್ಯಾವರಕಸ್ಯ ವೃಷ್ಟಿನಿರೋಧಕಸ್ಯ ಮೇಘಸ್ಯಾಸುರಸ್ಯ ವಾ ಹಂತಾ । ಯದ್ವಾ। ಆವರಕಾಣಾಂ ಶತ್ರೂಣಾಂ ಹಂತೇಂದ್ರೋ ಮದಾಯ ಹರ್ಷಾರ್ಥಂ ಶವಸೇ। ಬಲನಾಮೈತತ್ । ಬಲಾರ್ಥಂ ಚ ನೃಭಿರ್ಯಜ್ಞಸ್ಯ ನೇತೃಭಿರ್ಋತ್ವಿಗ್ಭಿರ್ವವೃಧೇ । ಸ್ತೋತ್ರಶಸ್ತ್ರರೂಪಾಭಿಃ ಸ್ತುತಿಭಿಃ ಪ್ರವರ್ಧಿತೋ ಬಭೂವ । ಸ್ತುತ್ಯಾ ಹಿ ದೇವತಾ ಪ್ರಾಪ್ತಬಲಾ ಸತೀ ಪ್ರವರ್ಧತೇ । ತಮಿತ್ತಮೇವೇಂದ್ರಂ ಮಹತ್ಸು ಪ್ರಭೂತೇಷ್ವಾಜಿಷು ಸಂಗ್ರಾಮೇಷು ಹವಾಮಹೇ । ಅಸ್ಮಾಕಂ ರಕ್ಷಣಾಯಾಹ್ವಯಾಮಹೇ । ಉತಾಪಿ ಚೇಮೇನಮರ್ಭೇಽಲ್ಪೇ ಸಂಗ್ರಾಮೇ ಹವಾಮಹೇ । ಅಸ್ಮಾಭಿರಾಹೂತಃ ಸ ಚೇಂದ್ರೋ ವಾಜೇಷು ಸಂಗ್ರಾಮೇಷು ನೋಽಸ್ಮಾನ್ ಪ್ರಾವಿಷತ್ । ಪ್ರಾವತು । ಪ್ರಕರ್ಷೇಣ ರಕ್ಷತು ॥ ವವೃಧೇ । ವೃಧೇಃ ಕರ್ಮಣಿ ಲಿಟ್ । ಸಂಹಿತಾಯಾಮಭ್ಯಾಸಸ್ಯಾನ್ಯೇಷಾಮಪಿ ದೃಶ್ಯತ ಇತಿ ದೀರ್ಘತ್ವಂ । ತುಜಾದಿತ್ವೇ ಹಿ ತೂತುಜಾನ ಇತಿವತ್ಪದಕಾಲೇ ದೀರ್ಘಃ ಶ್ರೂಯೇತ । ನೃಭಿಃ । ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯು-ದಾತ್ತತ್ವಸ್ಯ ನೃ ಚಾನ್ಯತರಸ್ಯಾಮಿತಿ ಪ್ರತಿಷೇಧಃ । ಹವಾಮಹೇ । ಹ್ವಯತೇರ್ಲಟಿ ಹ್ವ ಇತ್ಯನುವೃತ್ತೌ ಬಹುಲಂ ಛಂದಸೀತಿ ಸಂಪ್ರಸಾರಣಂ । ಶಪಿ ಗುಣಾವಾದೇಶೌ। ಅವಿಷತ್। ಅವ ರಕ್ಷಣೇ । ಲೇಟ್ಯಡಾಗಮಃ। ಇತಶ್ಚ ಲೋಪ ಇತೀಕಾರಲೋಪಃ । ಸಿಬ್ಬಹುಲಂ ಲೇಟೀತಿ ಸಿಪ್ । ತಸ್ಯಾರ್ಧಧಾತುಕತ್ವಾದ್ವಲಾದಿಲಕ್ಷಣ ಇಟ್ ॥ ೧ ॥

॥ ಪ್ರತಿಪದಾರ್ಥ ॥

**ವೃತ್ರಹಾ**—ವೃತ್ರಾಸುರನ ಹಂತಕನಾದ ಅಥವಾ ( ಲೋಕವನ್ನು ) ಆವರಿಸುವ ಶತ್ರುವಿನ ಹಂತಕನಾದ । **ಇಂದ್ರಃ**—ಇಂದ್ರನು । **ಮದಾಯ**—ಸಂತೃಪ್ತಿಗಾಗಿಯೂ । **ಶವಸೇ**—ಶಕ್ತಿಗಾಗಿಯೂ । **ನೃಭಿಃ**—(ಋತ್ವಿಗ್ರೂಪರಾದ) ಮಾನವರಿಂದ । **ವವೃಧೇ**—(ಸ್ತುತನಾಗಿ) ಪ್ರವೃದ್ಧನಾದನು । **ತಮಿತ್**—ಅದೇ ಇಂದ್ರನನ್ನು । **ಮಹತ್ಸು**—ಪ್ರಬಲಗಳಾದ । **ಆಜಿಷು**—ಯುದ್ಧಗಳಲ್ಲಿ । **ಹವಾಮಹೇ**—(ನಮ್ಮ ರಕ್ಷಣೆಗಾಗಿ) ಕರೆಯುತ್ತೇವೆ । **ಉತ**—ಮತ್ತು । **ಈಂ**—ಆ ಇಂದ್ರನನ್ನೇ । **ಅರ್ಭೇ**—ಸಣ್ಣ ಯುದ್ಧದಲ್ಲೂ (ಕರೆಯುತ್ತೇವೆ) । **ಸಃ**—ಆ ಇಂದ್ರನು । **ವಾಜೇಷು**—ಯುದ್ಧಗಳಲ್ಲಿ । **ನಃ** ನಮ್ಮನ್ನು । **ಪ್ರ ಅವಿಷತ್**—ಸಂಪೂರ್ಣವಾಗಿ ಕಾಪಾಡಲಿ ॥

॥ ಭಾವಾರ್ಥ ॥

ವೃತ್ರಾಸುರನ ಹಂತಕನಾದ ಇಂದ್ರನನ್ನು ಋತ್ವಿಕ್ಕುಗಳು ಯಾವಾಗಲೂ ಅವನಿಗೆ ಸಂತೃಪ್ತಿಯನ್ನುಂಟು ಮಾಡುವುದಕ್ಕೂ ಮತ್ತು ಅವನ ಬಲವನ್ನು ಬೆಳೆಸುವುದಕ್ಕೂ ಸಹ ಸ್ತೋತ್ರಮಾಡುತ್ತಾರೆ. ಆ ಸ್ತೋತ್ರಗಳಿಂದ ಇಂದ್ರನ ಮಹಿಮೆಯು ವೃದ್ಧಿಯಾಗುತ್ತದೆ. ಆ ಇಂದ್ರನನ್ನು ನಾವು ದೊಡ್ಡದೊಡ್ಡ ಯುದ್ಧಗಳಲ್ಲೂ ಮತ್ತು ಸಣ್ಣಸಣ್ಣ ಯುದ್ಧಗಳಲ್ಲೂ ಸಹ ರಕ್ಷಣೆಗಾಗಿ ಪ್ರಾರ್ಥಿಸಿ ಕರೆಯುತ್ತೇವೆ. ಅವನು ನಮ್ಮನ್ನು ಸಂಪೂರ್ಣವಾಗಿ ಕಾಪಾಡಲಿ.

English Translation

Indra, the slayer of Vritra, acquires vigour by means of men's praises ( or is pleased by our praises ) We invoke him in great battles as well as in little conflicts ; may he defend us in (all such) battles.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವು—ಮನುಷ್ಯರು ಮಾಡುವ ಸ್ತೋತ್ರಾದಿಗಳಿಂದ ದೇವತೆಗಳ ಬಲವು ವೃದ್ಧಿಯಾಗುವುದು ಎಂದರೆ ಹೆಚ್ಚುವುದು ಎಂದು ಪ್ರಸಿದ್ಧಿಯು. ಆದುದರಿಂದ ಮನುಷ್ಯರಾದ ನಾವು ಮಾಡುವ ಸ್ತೋತ್ರಗಳಿಂದ ಇಂದ್ರನ ಬಲವು ಅತಿಶಯವಾಗಿದ್ದರೂ ಇನ್ನೂ ಹೆಚ್ಚಾಗಿ ಅಭಿವೃದ್ಧಿಗೊಳ್ಳಲಿ. ಇಂತಹ ವೃತ್ರಸಂಹಾರಕನಾದ ಇಂದ್ರನನ್ನು ನಾವು ದೊಡ್ಡ ಯುದ್ಧಗಳಲ್ಲಿಯೇ ಆಗಲಿ, ಸಣ್ಣ ಪುಟ್ಟ ಕದನಗಳಲ್ಲಿಯೇ ಆಗಲಿ, ನಮ್ಮನ್ನು ಕಾಪಾಡುವುದಕ್ಕಾಗಿ ನಾವು ಪ್ರಾರ್ಥಿಸಿ ಕರೆಯುತ್ತೇವೆ ಇಂದ್ರನು ನಮ್ಮನ್ನು ಸಣ್ಣದು, ದೊಡ್ಡದು, ಮತ್ತು ಎಲ್ಲಾ ವಿಧವಾದ ಯುದ್ಧಗಳಲ್ಲಿಯೂ ಕಾಪಾಡಲಿ.

ಮದಾಯ ಹರ್ಷಾರ್ಥಂ । ಇಂದ್ರನಿಗೆ ಸಂತೋಷವಾಗುವುದಕ್ಕಾಗಿ. ನಮ್ಮ ಪ್ರಾರ್ಥನೆ ಅಥವಾ ಸ್ತೋತ್ರಗಳಿಂದ ಇಂದ್ರನು ಸಂತೋಷಪಡುವನೆಂದಭಿಪ್ರಾಯವು.

ಶವಸೇ— ಇಂದ್ರನ ಬಲಾಭಿವೃದ್ಧ್ಯರ್ಥವಾಗಿ. ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಶವಃ ಎಂಬ ಶಬ್ದವು ಪಠಿತವಾಗಿರುವುದರಿಂದ ಶವಸೇ ಎಂದರೆ ಬಲಕ್ಕಾಗಿ ಎಂದರ್ಥವು. ಶವಸೇ ಎಂಬ ರೂಪವು ಶವಸ್ ಎಂಬ ಸಕಾರಾಂತಶಬ್ದದ ಚತುರ್ಥ್ಯೇಕವಚನವು.

**ಆಜಿಷು, ವಾಜೇಷು**— ಈ ಶಬ್ದಗಳು, ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಈ ಶಬ್ದಗಳಿಗೆ ಯುದ್ಧಗಳಲ್ಲಿ ಎಂದರ್ಥವು. (ನಿ.--೩-೯)

**ಅರ್ಭೆ— ಅರ್ಭ ಇತ್ಯಲ್ಪನಾಮ ।** ಸಣ್ಣದಾದ, ಅಲ್ಪವಾದ.

॥ ವ್ಯಾಕರಣಪ್ರಕ್ರಿಯಾ ॥

**ವವೃಧೆ**—ವೃಧು ವೃದ್ಧೌ ಧಾತು, ಭ್ವಾದಿ. ವೃಧಧಾತುವಿಗೆ ಕರ್ಮಾರ್ಥದಲ್ಲಿ ಲಿಟ್. **ಭಾವಕರ್ಮಣೋಃ** (ಪಾ. ಸೂ. ೧-೩-೧೩) ಈ ಸೂತ್ರದಿಂದ ಆತ್ಮನೇಪದ ಬಂದಿರುತ್ತದೆ. ಇಲ್ಲಿ **ಲಿಟಿ ಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬ ಸೂತ್ರದಿಂದ ಧಾತುವಿಗೆ ದ್ವಿತ್ವ ಬಂದು **ಹಲಾದಿಃ ಶೇಷಃ** (ಪಾ. ಸೂ. ೭-೪-೬೦) ಎಂಬ ಸೂತ್ರದಿಂದ ಅಭ್ಯಾಸ ಸಂಜ್ಞೆಯುಳ್ಳ ಆದಿಭಾಗದಲ್ಲಿ ವಕಾರಮಾತ್ರ ಉಳಿದು ತಿಙ್ ಸೇರಿಸಿದಾಗ ವವೃಧೆ ಎಂದಾಗುತ್ತದೆ- **ಅನ್ಯೇಷಾಮಪಿ ದೃಶ್ಯತೆ** (ಪಾ. ಸೂ. ೬-೩-೧೩೭) ಅನುಕ್ತವಾದವುಗಳಿಗೂ ಪೂರ್ವಪದಗಳಿಗೆ ದೀರ್ಘವು ಬರುತ್ತದೆ. ಆದುದರಿಂದ ಮಂತ್ರಪಾಠದಲ್ಲಿ ವಾವೃಧೆ ಎಂದು ಅಭ್ಯಾಸಸಂಜ್ಞೆಯುಳ್ಳ ಪೂರ್ವಖಂಡಕ್ಕೆ ದೀರ್ಘವು ಬಂದಿದೆ. ಇದು ಐಚ್ಛಿಕವಾದುದು. ತೂತುಜಾನ ಮುಂತಾದ ಶಬ್ದಗಳಲ್ಲಿ ಅಭ್ಯಾಸಕ್ಕೆ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬ ಸೂತ್ರದಿಂದ ದೀರ್ಘವು ವಿಹಿತವಾಗಿರುವುದು. ಆ ಗಣದಲ್ಲಿ ಈ ಶಬ್ದವನ್ನೂ ಸೇರಿಸಬಹುದಿತ್ತು. ಆದರೆ ಹಾಗೆ ಸೇರಿಸಿದರೆ ಅದು ನಿತ್ಯವಾಗಿ ಬರುವುದರಿಂದ ಪದಕಾಲದಲ್ಲಿಯೂ ದೀರ್ಘವು ಶ್ರುತವಾಗಬೇಕಾದೀತು. ಪದಕಾಲದಲ್ಲಿ ದೀರ್ಘವು ಇಲ್ಲದಿನ್ನುದರಿಂದ ಹಿಂದೆ ಹೇಳಿದಂತೆ ಮಂತ್ರದಲ್ಲಿ ಮಾತ್ರ ಹೇಳಬೇಕು.

**ನೃಭಿಃ**—ಋಕಾರಾಂತವಾದ ನೃಶಬ್ದದ ಮೇಲೆ ತೃತೀಯಾಬಹುವಚನ ವಿಭಕ್ತಿ. ಇಲ್ಲಿ **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಎಂಬ ಸೂತ್ರದಿಂದ ಸಪ್ತಮೀಬಹುವಚನ ವಿಷಯದಲ್ಲಿ ಒಂದು ಸ್ವರದಿಂದ ಕೂಡಿರುವ, ಪದದ ಪರದಲ್ಲಿರುವ ತೃತೀಯಾ ಮುಂತಾದ ವಿಭಕ್ತಿಗಳು ಉದಾತ್ತಸ್ವರವನ್ನು ಹೊಂದುತ್ತವೆ ಎಂದಿರುವುದರಿಂದ ಅಂತೋದಾತ್ತವಾಗಬೇಕಿತ್ತು. ಆದರೆ **ನೃಚಾನ್ಯತರಸ್ಯಾಮ್** (ಪಾ. ಸೂ. ೬-೧-೧೮೪) ಎಂಬ ಸೂತ್ರದಿಂದ ನೃಶಬ್ದದ ಮೇಲಿರುವ ಝಲಾದಿಯಾದ ವಿಭಕ್ತಿಯು ವಿಕಲ್ಪವಾಗಿ ಉದಾತ್ತಸ್ವರವನ್ನು ಹೊಂದುತ್ತದೆ ಎಂಬುದರಿಂದ ಉದಾತ್ತಸ್ವರವು ಬರಲಿಲ್ಲ.

**ಹವಾಮಹೆ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು, ಭ್ವಾದಿ, ಲಟ್ ಉತ್ತಮಪುರುಷ ಬಹುವಚನ ಇದಕ್ಕೆ ನಿ ಅಭಿ ಉಪ ವಿ ಎಂಬ ಉಪಸರ್ಗಗಳು ಪೂರ್ವದಲ್ಲಿರುವಾಗ **ಹ್ವಃ ಸಂಪ್ರಸಾರಣಂ ಚ ನ್ಯಭ್ಯುಪವಿಷು** (ಪಾ. ಸೂ. ೩-೩-೭೨) ಎಂಬ ಸೂತ್ರದಿಂದ ಸಂಪ್ರಸಾರಣವು ವಿಹಿತವಾದರೂ ಇಲ್ಲಿ ಹ್ವಃ ಎಂಬುದನ್ನು ಅನುವೃತ್ತಿ ಮಾಡಿಕೊಂಡು ಬಹುಲಂ ಛಂದಸಿ ಎಂಬುದರಿಂದ ನಿ ಮುಂತಾದ ಉಪಪದವಿಲ್ಲದಿದ್ದರೂ ಸಂಪ್ರಸಾರಣ ಬರುತ್ತದೆ. ಯಣ್‌ಸ್ಥಾನದಲ್ಲಿ ಬರತಕ್ಕ ಇಕ್ಕಿಗೆ (ಇ ಉ ಋ ಲೃ) ಸಂಪ್ರಸಾರಣವೆಂದು ಹೆಸರು. ಇಲ್ಲಿ ವಕಾರಕ್ಕೆ ಉಕಾರ ಬಂದರೆ **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬ ಸೂತ್ರದಿಂದ ಮುಂದಿರುವ ಏಕಾರಕ್ಕೆ ಪೂರ್ವರೂಪ ಬರುತ್ತದೆ. ಹು+ಮಹೆ ಎಂದಿರುವಾಗ **ಕರ್ತರಿ ಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಶಬ್ವಿಕರಣ ಪ್ರತ್ಯಯ ಬರುತ್ತದೆ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಸೂತ್ರದಿಂದ ಗುಣ ಬಂದರೆ ಓಕಾರ ಬರುತ್ತದೆ.

ಓಕಾರಕ್ಕೆ ಶಪ್ಪಿನ ಅಕಾರ ಪರದಲ್ಲಿರುವಾಗ ಅವಾದೇಶಸಂಧಿ ಬಂದರೆ ಹವ+ಮಹೆ ಎಂದಾಗುತ್ತದೆ. ಯಞಾದಿ ಪ್ರತ್ಯಯಪರದಲ್ಲಿರುವುದರಿಂದ **ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ಅಂಗಕ್ಕೆ ದೀರ್ಘಬಂದರೆ ಹವಾಮಹೆ ಎಂದಾಗುತ್ತದೆ.

**ಅವಿಷತ್**—ಅವ ರಕ್ಷಣೆ ಧಾತು, ಭ್ವಾದಿ. ಲೇಟಿನಲ್ಲಿ ಪ್ರಥಮಪುರುಷ ಏಕವಚನರೂಪವು. ವಿಧ್ಯಾದ್ಯರ್ಥದಲ್ಲಿ ವೇದದಲ್ಲಿ ಮಾತ್ರ ಲೇಟಿನ ಪ್ರಯೋಗ. ಅದನ್ನೇ **ಲಿಙರ್ಥೇ ಲೇಟ್** (ಪಾ. ಸೂ. ೩.೪.೭) ಎಂಬ ಸೂತ್ರದಲ್ಲಿ ಹೇಳಿರುತ್ತಾರೆ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬ ಸೂತ್ರದಿಂದ ಲೇಟಿಗೆ (ಅದಕ್ಕೆ ಬಂದಿರತಕ್ಕ ತಿಪಿಗೆ) ಅಡಾಗಮ ಬಂದಿದೆ. ತಿಎಂಬುದರ ಆದಿಗೆ ಬಂದಾಗ **ಇತಶ್ಚಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಲೇಟಿನ ತಿಪಿನ ಇಕಾರಕ್ಕೆ ಲೋಪಬರುತ್ತದೆ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೪-೩೪) ಎಂಬ ಸೂತ್ರದಲ್ಲಿ ಲೇಟ್ ಪರದಲ್ಲಿರುವಾಗ ಧಾತುವಿಗೆ ಸಿಪ್ ಎಂಬ ವಿಕರಣಪ್ರತ್ಯಯವು ಬರುತ್ತದೆ. ತಿಙ್ ಮತ್ತು ಶಿತ್ ಆಗದೆ ಇದ್ದುದರಿಂದ ಸಿಪ್ ಎಂಬುದಕ್ಕೆ ಆರ್ಧಧಾತುಕಸಂಜ್ಞೆ ಇದೆ. ಆದುದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಸೂತ್ರದಿಂದ ವಲಾದಿಯಾದುದರಿಂದ ಇಡಾಗಮ ಬರುತ್ತದೆ. ಅವ್+ಇಸ್+ಅತ್ ಎಂದಿರುವಾಗ ಪ್ರತ್ಯಯದ ಸಕಾರಕ್ಕೆ ಷತ್ವ ಬರುತ್ತದೆ. ಅವಿಷತ್. ॥ ೧ ॥

॥ ಸಂಹಿತಾಪಾಠಃ ॥

ಅಸಿ ಹಿ ವೀರ ಸೇನ್ಯೋಽಸಿ ಭೂರಿ ಪರಾದದಿಃ ।
ಅಸಿ ದಭ್ರಸ್ಯ ಚಿದ್ವೃಧೋ ಯಜಮಾನಾಯ ಶಿಕ್ಷಸಿ ಸುನ್ವತೇ
ಭೂರಿ ತೇ ವಸು ॥ ೨ ॥

॥ ಪದಪಾಠಃ ॥

ಅಸಿ । ಹಿ । ವೀರ । ಸೇನ್ಯಃ । ಅಸಿ । ಭೂರಿ । ಪರಾಽದದಿಃ ।
ಅಸಿ । ದಭ್ರಸ್ಯ । ಚಿತ್ । ವೃಧಃ । ಯಜಮಾನಾಯ । ಶಿಕ್ಷಸಿ । ಸುನ್ವತೇ ।
ಭೂರಿ । ತೇ । ವಸು ॥ ೨ ॥

॥ ಸಾಯಣಭಾಷ್ಯಂ ॥

**ಹೇ ವೀರ ಶತ್ರುಕ್ಷೇಪಣಕುಶಲೇಂದ್ರ ತ್ವಂ ಸೇನ್ಯೋಽಸಿ। ಸೇನಾರ್ಹೋ ಭವಸಿ। ತ್ವಮೇಕೋಽಪಿ ಸೇನಾಸದೃಶೋ ಭವಸೀತ್ಯರ್ಥಃ। ಹಿ ಯಸ್ಮಾದೇವಂ ತಸ್ಮಾದ್ಭೂರಿ ಪ್ರಭೂತಂ ಶತ್ರೂಣಾಂ ಧನಂ ಪರಾದದಿಃ ಪರಾದಾತಾ ಶತ್ರೂಣಾಂ ಪರಾಙ್ಮುಖಂ ಯಥಾ ಭವತಿ ತಥಾ ಆದಾತಾಸಿ। ಭವಸಿ। ದಭ್ರಸ್ಯ ಚಿತ್। ಅಲ್ಪನಾಮ್ನೈತತ್ । ಅಲ್ಪಸ್ಯಾಪಿ ತವ ಸ್ತೋತುರ್ವೃಧೋ ವರ್ಧಯಿತಾಸಿ। ತಥಾ ಯಜಮಾನಾಯ ಯಾಗಂ ಕುರ್ವತೇ ಸುನ್ವತೇ ಸೋಮಾಭಿಷವಂ ಕುರ್ವತೇ ಪುರುಷಾಯ ಶಿಕ್ಷಸಿ। ಅಪೇಕ್ಷಿತಂ ಧನಂ ದದಾಸಿ। ಶಿಕ್ಷತಿರ್ದಾನಕರ್ಮಾ। ಯಸ್ಮಾತ್ತೇ ತವ ವಸು ಧನಂ ಭೂರಿ ಬಹುಲಮಕ್ಷಯಂ ಧನಂ ವಿದ್ಯತೇ। ತಸ್ಮಾದ್ದದಾಸೀತಿ ಭಾವಃ ॥ ಪರಾದದಿಃ। ಡುದಾಞ್ ದಾನೇ। ಆದೃಗಮಹನಜನ ಇತಿ ಕಿಪ್ರತ್ಯಯಃ। ಲಿಡ್ವದ್ಭಾವಾದ್ದ್ವಿರ್ವಚನೇ ಹ್ರಸ್ವತ್ವಂ। ಆತೋ ಲೋಪ ಇಟಿ ಚೇತ್ಯಾಕಾರಲೋಪಃ। ವೃಧಃ। ವೃಧೇ-ರಂತರ್ಭಾವಿತಣ್ಯರ್ಥಾದಿಗುಪಧಲಕ್ಷಣಃ ಕಃ। ಸುನ್ವತೇ। ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥ ೨ ॥**

॥ ಪ್ರತಿಪದಾರ್ಥ ॥

**ವೀರ**— ಪರಾಕ್ರಮಶಾಲಿಯಾದ ಇಂದ್ರನೇ, (ನೀನು)। **ಸೇನ್ಯಃ ಅಸಿ**— (ದೊಡ್ಡ ಸೇನೆಯ ಬಲವುಳ್ಳ) ಯೋಧನಾಗಿದ್ದೀಯೆ. । **ಹಿ**— ಆದ್ದರಿಂದಲೇ । **ಭೂರಿ**— (ಶತ್ರುಗಳ) ಅತ್ಯಧಿಕವಾದ ಧನವನ್ನು। **ಪರಾದದಿಃ**— ಕೊಳ್ಳೆಹೊಡೆದು ತಂದು ಕೊಡುವವನಾಗಿ। **ಅಸಿ**— ಆಗಿದ್ದೀಯೆ. । **ದಭ್ರಸ್ಯ ಚಿತ್**—ಅಲ್ಪನಾದರೂ ಸಹ ನಿನ್ನ ಸ್ತೋತೃವಿಗೆ। **ವೃಧಃ**—ವೃದ್ಧಿಯನ್ನುಂಟುಮಾಡುವವನಾಗಿ । **ಅಸಿ**— ಆಗಿದ್ದೀಯೆ. । **ಯಜಮಾನಾಯ**— ಯಜ್ಞಕರ್ತನೂ। **ಸುನ್ವತೇ**— ಸೋಮರಸವನ್ನು ಹಿಂಡುವವನೂ ಆದ ಯಜಮಾನನಿಗೆ। **ಶಿಕ್ಷಸಿ**— (ಅಪೇಕ್ಷಿತವಾದ ಧನವನ್ನು) ಕೊಡುತ್ತೀಯೆ. (ಏತಕ್ಕೆಂದರೆ)। **ತೇ**— ನಿನಗೆ। **ವಸು**— ಧನವು। **ಭೂರಿ**— ಪ್ರಭೂತವಾಗಿ (ಇದೆ)।

॥ ಭಾವಾರ್ಥ ॥

ಪರಾಕ್ರಮಶಾಲಿಯಾದ ಇಂದ್ರನೇ, ನೀನು ಒಬ್ಬನೇ ಆದರೂ ಸಹ ಒಂದು ದೊಡ್ಡಸೇನೆಯ ಬಲವುಳ್ಳ ಯೋಧನಾಗಿದ್ದೀಯೆ. ಆದ್ದರಿಂದಲೇ ನಿನ್ನ ಶತ್ರುಗಳನ್ನು ಸದೆಬಡಿದು ಅವರ ಧನವನ್ನು ಕೊಳ್ಳೆಹೊಡೆದು ನಮಗೆ ತಂದು ಕೊಡುತ್ತೀಯೆ. ನಿನ್ನ ಸ್ತೋತೃವು ಅಲ್ಪನಾದರೂ ಅವನನ್ನು ವೃದ್ಧಿಗೆ ತರುತ್ತೀಯೆ- ನಿನಗೆ ಅತ್ಯಧಿಕವಾದ ಧನವಿರುವುದರಿಂದ ನೀನು, ಯಜ್ಞಕರ್ತನೂ ಸೋಮರಸವನ್ನು ಹಿಂಡಿ ಅರ್ಪಿಸುವವನೂ ಆದ ಯಜಮಾನನಿಗೆ ಅವನ ಅಪೇಕ್ಷಿತವಾದ ಧನವನ್ನು ಕೊಡುತ್ತೀಯೆ.

## English Translation

O Indra, you are a hero, you have the strength of an army ; you are the giver of much booty ; though your worshipper is humble you make him great and you bestow riches upon the sacrificer who offers you Soma-libations ; for your wealth is abundant.

॥ ವಿಶೇಷವಿಷಯಗಳು ॥

**ಸೇನ್ಯಃ—ಸೇನಾರ್ಹಃ । ತ್ವಮೇಕೋऽಪಿ ಸೇನಾಸದೃಶೋ ಭವಸಿ ।** ಇಂದ್ರನು ಒಬ್ಬನೇ ಆದರೂ ಒಂದು ಸೇನೆಗೆ ಇರುವಷ್ಟು ಬಲವು ಅವನಿಗಿರುವುದು ಎಂದಭಿಪ್ರಾಯವು.

**ಭೂರಿ**— ಬಹಳವಾಗಿ, much, abundant.

**ಪರಾದದಿಃ—ಡುದಾಞ್ ದಾನೇ । ಪರಸ್ಯ ಆದಾತಾ ।** ಶತ್ರುಗಳಲ್ಲಿರುವ ಧನವನ್ನು ಕೊಡುವವನು. ಎಂದರೆ ನಮ್ಮ ಸ್ತೋತ್ರಗಳಿಂದ ಇಂದ್ರನು ಪ್ರೀತನಾಗಿ ಯುದ್ಧದಲ್ಲಿ ನಮಗೆ ಜಯವನ್ನುಂಟುಮಾಡುವುದರಿಂದ ಆ ಶತ್ರುವಿನಲ್ಲಿರುವ ಧನವು ನಮಗೆ ಲಭಿಸುವುದೆಂದಭಿಪ್ರಾಯವು.

**ದಭ್ರಸ್ಯ— ಅಲ್ಪಸ್ಯ ।** ಅಲ್ಪನಾದವನ, ದೊಡ್ಡವನಲ್ಲದವನ, ಪ್ರಸಿದ್ಧನಲ್ಲದವನ. ಋಹನ್, ಹ್ರಸ್ವಃ ಮೊದಲಾದ ಹನ್ನೊಂದು ಅಲ್ಪನಾಮಗಳ ಮಧ್ಯದಲ್ಲಿ ದಭ್ರ ಶಬ್ದವು ಪಠಿತವಾಗಿರುವುದು.

**ಶಿಕ್ಷಸಿ**— ದಾತಿ ದಾಶತಿ ಮೊದಲಾದ ಹತ್ತು ದಾನಕರ್ಮನಾಮಗಳ ಮಧ್ಯದಲ್ಲಿ ಶಿಕ್ಷತಿ ಶಬ್ದವು ಪಠಿತವಾಗಿರುವುದರಿಂದ ಶಿಕ್ಷತಿ ಎಂದರೆ ಕೊಡುತ್ತಾನೆ ಎಂದರ್ಥವು. (ನಿ. ೩-೧೯)

॥ ವ್ಯಾಕರಣಪ್ರಕ್ರಿಯಾ॥

**ಪರಾದದಿಃ**- ಡುದಾಞ್‌ದಾನೆ, ಧಾತು. ಜುಹೋತ್ಯಾದಿ, ಉಭಯಪದೀ, ಪರಾ ಎಂಬುದು ಉಪಸರ್ಗ. **ಆದೃಗಮಹನಜನಃ ಕಿಕಿನೌ ಲಿಟ್ ಚ** (ಪಾ. ಸೂ ೩-೨-೧೭೧) ಆಕಾರಾಂತ ಧಾತುಗಳ ಮೇಲೂ, ಋಕಾರಾಂತ ಧಾತುಗಳ ಮೇಲೂ, ಗಮಾದಿಗಳ, ಮೇಲೂ ಛಂದಸಿನಲ್ಲಿ ಕಿ ಕಿನ್ ಪ್ರತ್ಯಯಗಳು ಬರುತ್ತವೆ. ಅವು ಲಿಟ್ಟಿನ ಧರ್ಮವನ್ನು ಹೊಂದುತ್ತವೆ ಎಂಬುದರಿಂದ ಇಲ್ಲಿ ದಾ ಎಂಬುದು ಆಕಾರಾಂತ ಧಾತುವಾದುದರಿಂದ ಕಿ ಪ್ರತ್ಯಯ ಬಂದಿದೆ. ಕಿ ಎಂಬಲ್ಲಿ **ಲಶಕ್ವತದ್ಧಿತೆ** (ಪಾ. ಸೂ. ೧-೩-೮) ಎಂಬ ಸೂತ್ರದಿಂದ ಕಕಾರವು ಇತ್ತಾಗಿ ಲೋಪವನ್ನು ಹೊಂದುತ್ತದೆ. ಲಿಟ್ ಪರದಲ್ಲಿರುವಾಗ ಧಾತುವಿಗೆ ದ್ವಿತ್ವವನ್ನು ಹೇಳುವುದರಿಂದ ಇಲ್ಲಿ ಕಿಪ್ರತ್ಯಯಕ್ಕೆ ಲಿಡ್ವದ್ಭಾವ ಹೇಳಿದುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ದ್ವಿತ್ವ ಬಂದ ಮೇಲೆ ಪೂರ್ವಖಂಡಕ್ಕೆ ಅಭ್ಯಾಸಸಂಜ್ಞೆಯಿರುವಾಗ **ಹ್ರಸ್ವಃ** (ಪಾ. ಸೂ. ೭-೪-೫೯) ಎಂಬುದರಿಂದ ಹ್ರಸ್ವ ಬರುತ್ತದೆ. ದದಾ+ಇ ಎಂದಿರುವಾಗ **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಕಿತ್ ಙಿತ್ ಆದ ಅಜಾದಿಯಾದ ಆರ್ಧಧಾತುಕವು ಪರದಲ್ಲಿರುವಾಗ ಆಕಾರಕ್ಕೆ ಲೋಪ ಬರುತ್ತದೆ ಎಂಬುದರಿಂದ ಇಲ್ಲಿ ಕಿಪ್ರತ್ಯಯ ಪರದಲ್ಲಿರುವುದರಿಂದ ಧಾತುವಿನ ಆಕಾರಕ್ಕೆ ಲೋಪಬರುತ್ತದೆ. ಕೃದಂತವಾದುದರಿಂದ ಪ್ರಾತಿಪದಿಕಸಂಜ್ಞೆ ಬಂದು ಪ್ರಥಮಾ ಏಕವಚನವನ್ನು ಹೊಂದಿದೆ.

**ವೃಧಃ**—ವೃಧು ವೃದ್ಧೌ ಧಾತು, ಭ್ವಾದಿ. ಕೆಲವು ಧಾತುಗಳು ಪ್ರೇರಣಾರ್ಥಕವಾದ ಣಿಚ್ಚನ್ನು ಹೊಂದದಿದ್ದರೂ ಣಿಚ್ಚಿನ ಪ್ರೇರಣಾರ್ಥವನ್ನು ತಮ್ಮ ಅರ್ಥದೊಡನೆ ಗರ್ಭೀಕರಿಸಿ ತಿಳಿಸುತ್ತವೆ. ಇವುಗಳಿಗೆ ಅಂತರ್ಭಾವಿತಣ್ಯರ್ಥಕಧಾತುಗಳೆಂದು ಹೆಸರು. ವೃಧುಧಾತುವು ಅಂತಹದಲ್ಲವಾದರೂ ಪ್ರಕರಣವನ್ನನುಸರಿಸಿ ಇಲ್ಲಿ ವೃದ್ಧಿಪಡಿಸುವವನು ಎಂದು ಸ್ವೀಕರಿಸಬೇಕಾದುದರಿಂದ ಅಂತರ್ಭಾವಿತಣ್ಯರ್ಥಕವೆಂದು ಭಾವಿಸಬೇಕು. **ಇಗುಪಧ-ಜ್ಞಾಪ್ರೀಕಿರಃಕಃ** (ಪಾ. ಸೂ. ೩-೧-೧೩೫) ಇಕ್ ಉಪಧೆಯುಳ್ಳ ಧಾತು, ಜ್ಞಾ, ಪ್ರೀ, ಕಿರ್ ಇವುಗಳಿಗೆ ಕ ಪ್ರತ್ಯಯ

ಬರುತ್ತದೆ. ಉಪಧೆ ಎಂದರೆ **ಅಲೋಽಂತ್ಯಾತ್ಪೂರ್ವ ಉಪಧಾ** (ಪಾ. ಸೂ. ೧-೧-೬೫) ಎಂಬುದರಿಂದ ಅಂತ್ಯ ವರ್ಣಕ್ಕಿಂತಲೂ ಪೂರ್ವದಲ್ಲಿರುವ ವರ್ಣ. ಇಲ್ಲಿ ಋಕಾರವು (ಇಕ್) ಉಪಧೆಯಾಗಿರುವುದರಿಂದ ಕಪ್ರತ್ಯಯ ಬಂದಿದೆ. ಕಕಾರವು ಲೋಪವಾದರೆ ಉಳಿಯುವುದು ಅಕಾರ. ಕಿತ್ತಾದುದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂದು ನಿಷೇಧಮಾಡುವುದರಿಂದ ಧಾತುವಿನ ಋಕಾರಕ್ಕೆ ಗುಣಬರುವುದಿಲ್ಲ. ವೃಧಃ ||

**ಸುನ್ವತೇ**—ಷುಞ್ ಅಭಿಷವೇ. ಧಾತು, ಸ್ವಾದಿ, ಇದರ ಮೇಲೆ **ಲಟಃ ಶತೃಶಾನಚಾವಪ್ರಥಮಾಸಮಾನಾಧಿಕರಣೆ** (ಪಾ. ಸೂ. ೩-೨-೧೨೪) ಎಂಬ ಸೂತ್ರದಿಂದ ಶತೃಪ್ರತ್ಯಯ ಬಂದಿದೆ. ಶತೃ ಪ್ರತ್ಯಯದಲ್ಲಿ ಶಕಾರವು ಇತ್ತಾದುದರಿಂದ ವಿಕರಣಪ್ರತ್ಯಯವು ಬರುತ್ತದೆ. ಸ್ವಾದಿಗೆ ಶ್ನು ಎಂಬುದು ವಿಕರಣಪ್ರತ್ಯಯ. ಕೃದಂತವಾದುದರಿಂದ ಪ್ರಾತಿಪದಿಕ ಸಂಜ್ಞೆಯು ಇದೆ. ಸುನ್ವತ್ ಶಬ್ದದ ಮೇಲೆ ಚತುರ್ಥೀವಿಭಕ್ತಿ ಏಕವಚನಪ್ರತ್ಯಯಮಾಡಿದಾಗ ಉಕ್ತರೂಪವಾಗಿದೆ. ಇಲ್ಲಿ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧-೪) ಸೂತ್ರದಿಂದ ವಿಭಕ್ತಿಗೆ ಅನುದಾತ್ತಸ್ವರ ಬರಬೇಕಿತ್ತು. ಆದರೆ ಇದಕ್ಕೆ ಅಪವಾದವಾಗಿ **ಶತುರನುಮೋ ನದ್ಯಜಾದೀ** (ಪಾ. ಸೂ. ೬.೧-೧೭೩) ಎಂದು ನುಮ್ ಇಲ್ಲದಿರುವ ಶತೃಪ್ರತ್ಯಯವೇ ಕೊನೆಯಲ್ಲಿರುವ ಅಂತೋದಾತ್ತವಾದ ಶಬ್ದದ ಪರದಲ್ಲಿರುವ ಅಜಾದಿಯಾದ ಶಸಾದಿವಿಭಕ್ತಿಯು ಉದಾತ್ತವಾಗುತ್ತದೆ ಎಂದು ವಿಧಿಸಿರುವುದರಿಂದ ಇಲ್ಲಿ ನುಮ್ ಇಲ್ಲದಿರುವುದರಿಂದ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗಿರುವುದರಿಂದಲೂ ಚತುರ್ಥ್ಯೇಕವಚನವು ಅಜಾದಿಯಾಗಿರುವುದರಿಂದ ಉದಾತ್ತವಾಗುತ್ತದೆ. || ೨ ||



|| ಸಂಹಿತಾಪಾಠಃ ||

ಯದುದೀರತ ಆಜಯೋ ಧೃಷ್ಣವೇ ಧೀಯತೇ ಧನಾ ।
ಯುಕ್ಷ್ವಾ ಮದಚ್ಯುತಾ ಹರೀ ಕಂ ಹನಃ ಕಂ ವಸೌ ದಧೋಽ-
ಸ್ಮಾಁ ಇಂದ್ರ ವಸೌ ದಧಃ || ೩ ||

ಪದಪಾಠಃ

ಯತ್ । ಉತ್ऽಈರತೇ । ಆಜಯಃ । ಧೃಷ್ಣವೇ । ಧೀಯತೇ । ಧನಾ ।
ಯುಕ್ಷ್ವ । ಮದऽಚ್ಯುತಾ । ಹರೀ ಇತಿ । ಕಂ । ಹನಃ । ಕಂ । ವಸೌ । ದಧಃ ।
ಅಸ್ಮಾನ್ । ಇಂದ್ರ । ವಸೌ । ದಧಃ || ೩ ||

ಸಾಯಣಭಾಷ್ಯಂ

ಅತ್ರೇದಮಾಖ್ಯಾನಂ । ರಹೂಗಣಪುತ್ರೋ ಗೋತಮಃ ಕುರುಸೃಂಜಯಾನಾಂ ರಾಜ್ಞಾಂ ಪುರೋಹಿತ ಆಸೀತ್ । ತೇಷಾಂ ರಾಜ್ಞಾಂ ಪರೈಃ ಸಹ ಯುದ್ಧೇ ಸತಿ ಸ ಋಷಿರನೇನ ಸೂಕ್ತೇನೇಂದ್ರಂ ಸ್ತುತ್ವಾ ಸ್ವಕೀಯಾನಾಂ ಜಯಂ ಪ್ರಾರ್ಥಯಾಮಾಸೇತಿ । ತಸ್ಯ ಚ ತತ್ಪುರೋಹಿತತ್ವಂ ವಾಜಸನೇಯಿಭಿ-ರಾಮ್ನಾತಂ । ಗೋತಮೋ ಹಿ ವೈ ರಾಹೂಗಣ ಉಭಯೇಷಾಂ ಕುರುಸೃಂಜಯಾನಾಂ ಪುರೋಹಿತ ಆಸೀದಿತಿ ॥ ಯದ್ಯದಾಜಯಃ ಸಂಗ್ರಾಮಾ ಉದೀರತೇ ಉದ್ಗಚ್ಛಂತಿ ಉತ್ಪದ್ಯಂತೇ ತದಾನೀಂ ಧನಾ ಧನಂ ಧೃಷ್ಣವೇ ಯೋ ಧೃಷ್ಣುರ್ಧರ್ಷಯಿತಾ ಶತ್ರೂಣಾಂ ಜೇತಾ ಭವತಿ ತಸ್ಮೈ ಧೀಯತೇ । ನಿಧೀಯತೇ । ಜಯತೋ ಧನಂ ಭವತೀತ್ಯರ್ಥಃ । ಹೇ ಇಂದ್ರ ತ್ವಂ ತಾದೃಶೇಷು ಯುದ್ಧೇಷು ಪ್ರವೃತ್ತೇಷು ಮದಚ್ಯುತಾ ಶತ್ರೂಣಾಂ ಮದಸ್ಯ ಗರ್ವಸ್ಯ ಚ್ಯಾವಯಿತಾರೌ ಹರೀ ತ್ವದೀಯಾವಶ್ವೌ ಯುಕ್ಷ್ವ । ರಥೇ ಯೋಜಯ । ಯೋಜಯಿತ್ವಾ ಚ ಕಂ ಕಂಚಿದ್ರಾಜಾನಂ ತವ ಪರಿಚರಣಮಕುರ್ವಂತಂ ಹನಃ । ಹನ್ಯಾಃ । ಕಂಚನ ತ್ವಾಂ ಪರಿಚರಂತಂ ವಸೌ ವಸುನಿ ಧನೇ ದಧಃ । ಸ್ಥಾಪಯಸಿ । ಅತೋ ಜಯಪರಾಜಯಯೋ-ಸ್ತ್ವಮೇವ ಕಾರಯಿತಾಸಿ । ತಸ್ಮಾತ್ ಹೇ ಇಂದ್ರಾಸ್ಮಾನಸ್ಮದೀಯಾನ್ರಾಜ್ಞೋ ವಸೌ ಧನೇ ದಧಃ । ಸ್ಥಾಪಯ ॥ ಉದೀರತೇ । ಈರ ಗತೌ । ಆದಾದಿಕಃ । ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರ ಏವ ಶಿಷ್ಯತೇ । ಯದ್ವೃತ್ತಯೋಗಾದನಿಘಾತಃ । ಧನಾ । ಸುಪಾಂ ಸುಲುಗಿತಿ ಡಾದೇಶಃ । ಯುಕ್ಷ್ವ । ಯುಜಿರ್ ಯೋಗೇ । ಅಂತರ್ಭಾವಿತಣ್ಯರ್ಥಾಲ್ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್। ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ । ಹನಃ । ಹಂತೇರ್ಲೇಟಿ ಸಿಪ್ಯಡಾಗಮಃ । ಹನಶ್ಚ ದಧಶ್ಚೇತಿ ಚಾರ್ಥಪ್ರತೀತೇಶ್ಚಾದಿಲೋಪೇ ವಿಭಾಷೇತಿ ಪ್ರಥಮಾಯಾಸ್ತಿಙ್ವಿಭಕ್ತೇರ್ನಿಘಾತಪ್ರತಿಷೇಧಃ । ವಸೌ । ಲಿಂಗವ್ಯತ್ಯಯಃ । ದಧಃ । ದಧ ಧಾರಣೇ ಲೇಟಿ। ವ್ಯತ್ಯಯೇನ ಪರಸ್ಮೈಪದಂ ॥ ೩ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಆಜಯಃ**—ಯುದ್ಧಗಳು । **ಉದೀರತೇ**—ಸಂಭವಿಸುತ್ತವೆಯೋ, (ಆಗ ) । **ಧನಾ** - ಧನವು । **ಧೃಷ್ಣವೇ**-– ಶತ್ರುವನ್ನು ಸೋಲಿಸತಕ್ಕ ವೀರನಿಗೆ । **ಧೀಯತೇ**— ಬಂದು ಸೇರುತ್ತದೆ. (ಎಲೈ ಇಂದ್ರನೇ) । **ಮದಚ್ಯುತಾ**—(ಶತ್ರುಗಳ)ಗರ್ವವನ್ನು ಅಡಗಿಸತಕ್ಕ, । **ಹರೀ**—ನಿನ್ನ ಕುದುರೆಗಳನ್ನು । **ಯುಕ್ಷ್ವ**— (ರಥಕ್ಕೆ) ಸೇರಿಸು. । **ಕಂ**— (ನಿನ್ನ ಪೂಜೆಮಾಡದಿರುವ) ಯಾವನನ್ನಾಗಲಿ । **ಹನಃ**—ಕೊಲ್ಲು. । (ನಿನ್ನ ಪೂಜೆ ಮಾಡತಕ್ಕವನನ್ನು) **ವಸೌ**—ಧನದಲ್ಲಿ । **ದಧಃ**—ಸ್ಥಿರವಾಗಿಡು. । **ಇಂದ್ರ**—ಎಲೈ ಇಂದ್ರನೇ. । **ಅಸ್ಮಾನ್** – ನಮ್ಮನ್ನು । **ವಸೌ** – ಐಶ್ವರ್ಯದಲ್ಲಿ । **ದಧಃ**— ಸ್ಥಾಪಿಸಿಡು. ।

ಭಾವಾರ್ಥ

ಯುದ್ಧಗಳು ಸಂಭವಿಸಿದಾಗ ಶತ್ರುವನ್ನು ಸೋಲಿಸತಕ್ಕ ವೀರನಿಗೆ ಧನವು ಲಭಿಸುತ್ತದೆ. ಆದುದರಿಂದ ಶತ್ರುನಾಶಕನಾದ ಇಂದ್ರನೇ, ಶತ್ರುಗಳ ಗರ್ವವನ್ನು ಅಡಗಿಸತಕ್ಕ ನಿನ್ನ ಕುದುರೆಗಳನ್ನು ರಥಕ್ಕೆ ಕಟ್ಟಿ ಸಿದ್ಧಪಡಿಸು. ನಿನ್ನ ಪೂಜೆಮಾಡದಿರುವ ರಾಜರನ್ನು ನಾಶವಾಡಿ ನಿನ್ನ ಪೂಜೆಯನ್ನು ಮಾಡತಕ್ಕ ರಾಜರನ್ನು ಐಶ್ವರ್ಯವಂತರನ್ನಾಗಿ ಮಾಡು. ನಮಗೆ ಪ್ರಭೂತವಾದ ಧನವನ್ನು ಕೊಡು.

## English Translation

When battles arise, wealth will be the rewards of the victor ; O Indra, yoke your horses, humblers of the pride of the enemies, in order that you may kill one and give wealth to another. Place us in possession of wealth.

॥ ವಿಶೇಷವಿಷಯಗಳು ॥

ಭಾಷ್ಯಕಾರರು ಇಲ್ಲಿ ಒಂದು ಉಪಾಖ್ಯಾನವನ್ನು ಹೇಳಿರುವರು—ಈ ಸೂಕ್ತದ ಋಷಿಯಾದ ರಹೂಗಣ ಪುತ್ರನಾದ ಗೋತಮನು ಕುರು ಮತ್ತು ಸೃಂಜಯ ಎಂಬ ಜನಾಂಗದ ರಾಜರುಗಳಿಗೆ ಪುರೋಹಿತನಾಗಿದ್ದನು. ಆಗ ಆ ರಾಜರು ತಮ್ಮ ಶತ್ರುರಾಜರೊಡನೆ ಯುದ್ಧಮಾಡುವ ಕಾಲದಲ್ಲಿ ಈ ಗೋತಮನು ಈ ಸೂಕ್ತದಿಂದ ಇಂದ್ರನನ್ನು ಸ್ತೋತ್ರಮಾಡಿ ಇಂದ್ರನು ಪ್ರಸನ್ನನಾಗುವಂತೆ ಮಾಡಿದನು. ಇಂದ್ರನು ಮೇಲೆ ಹೇಳಿದ ಕುರು ಸೃಂಜಯ ರಾಜರುಗಳಿಗೆ ಯುದ್ಧದಲ್ಲಿ ಜಯವುಂಟಾಗುವಂತೆ ಮಾಡಿದನು. ಈ ವಿಷಯವನ್ನೇ ಈ ಋಕ್ಕಿನಲ್ಲಿ ಋಷಿಯು ಸೂಚಿಸಿರುವನೆಂದು ಭಾಷ್ಯಕಾರರು ಹೇಳಿರುವರು. ಮತ್ತು ಈ ಗೋತಮನು ಕುರುಸೃಂಜಯರಿಗೆ ಪುರೋಹಿತನಾಗಿದ್ದನೆಂಬ ವಿಷಯದಲ್ಲಿ **ಗೋತಮೋ ಹ ವೈ ರಾಹುಗಣ ಉಭಯೋಷಾಂ ಕುರುಸೃಂಜಯಾನಾಂ ಪುರೋಹಿತ ಆಸೀತ್** ಎಂಬ ವಾಜಸನೇಯಿ ಶ್ರುತಿವಾಕ್ಯವನ್ನು ಉದಾಹರಿಸಿರುವರು.

**ಉದೀರತೇ - ಈರ ಗತೌ ।** ಪ್ರಾಪ್ತವಾಗುವಾಗ, ಸಂಭವಿಸುವಾಗ, arise, happen.

**ಆಜಯಃ**— ಯುದ್ಧಗಳು. (ನಿ. ೩-೯)

**ಧೃಷ್ಣವೇ—ಧಾರ್ಷ್ಟ್ಯಯುಕ್ತಾಯ.** ಬಲವುಳ್ಳವನಿಗೆ ; ಯುದ್ಧದಲ್ಲಿ ಬಲವುಳ್ಳವನು ಗೆಲ್ಲುವುದು ಸ್ವಾಭಾವಿಕವು.

**ಮದಚ್ಯುತಾ**—ಶತ್ರುಗಳ ಗರ್ವವನ್ನಡಗಿಸುವ. ಎಂದರೆ ಈ ಕುದುರೆಗಳ ಸಹಾಯದಿಂದ ಇಂದ್ರನು ಶತ್ರುಗಳನ್ನು ಗೆಲ್ಲುವುದರಿಂದ, ಕುದುರೆಗಳು ಶತ್ರುವಿನ ಗರ್ವವನ್ನು ಅಡಗಿಸಲು ಸಹಾಯಮಾಡುವುವು. ಆದುದರಿಂದ ಕುದುರೆಗಳನ್ನು ಈ ಶಬ್ದದಿಂದ ಕರೆಯಲಾಗಿದೆ.

ವ್ಯಾಕರಣಪ್ರಕ್ರಿಯಾ

**ಉದೀರತೆ**—ಈರಗತೌ ಧಾತು. ಅದಾದಿ, ಉತ್ ಉಪಸರ್ಗ. ಉಪಸರ್ಗದಿಂದ ಧಾತ್ವರ್ಥವು ಬೇರೆಯಾಗುವುದು. ಇದನ್ನೇ, "ಉಪಸರ್ಗೇಣ ಧಾತ್ವರ್ಥಃ ಬಲಾದನ್ಯಃ ಪ್ರತೀಯತೆ" ಎಂದು ಹೇಳಿರುವರು. ಅದಾದಿಯಲ್ಲಿ ವಿಕರಣಕ್ಕೆ ಲುಕ್ ಬರುತ್ತದೆ. ಇದು ಅನುದಾತ್ತೇತ್ತಾದ ಧಾತು. **ತಾಸ್ಯನುದಾತ್ತೇನ್‌ಙಿ ದುಪದೇಶಾಲ್ಲಸಾರ್ವಧಾತುಕಮನುದಾತ್ತಮಹ್ನಿಙ್ಘೋಃ** (ಪಾ. ಸೂ. ೬-೧-೧೮೬) ತಾಸ್, ಅನುದಾತ್ತೇತ್ತಾದ ಧಾತು, ಮುಂತಾದವುಗಳ ಪರದಲ್ಲಿರುವ ಲಕಾರದ ಸ್ಥಾನದಲ್ಲಿ ಬಂದಿರುವ, ಸಾರ್ವಧಾತುಕ ಸಂಜ್ಞೆಯುಳ್ಳ, ತಿಙಿಗೆ ಅನುದಾತ್ತಸ್ವರವು ಬರುತ್ತದೆ ಎಂಬುದರಿಂದ ಇಲ್ಲಿ ಲಙಿನ ಸ್ಥಾನದಲ್ಲಿ ಬಂದಿರುವ ತಿಙಾದೇಶವು ಸಾರ್ವಧಾತುಕ ಸಂಜ್ಞೆಯನ್ನು ಹೊಂದಿರುವುದರಿಂದ ಅನುದಾತ್ತಸ್ವರವನ್ನು ಹೊಂದಿದೆ. ಪ್ರತ್ಯಯಸ್ವರವಿಲ್ಲದಿದುದರಿಂದ

ಧಾತುಸ್ವರವೇ ಉಳಿಯುತ್ತದೆ. ಅಂತೋದಾತ್ತವೇ ಧಾತುಸ್ವರ. ಪೂರ್ವಸೂತ್ರದಿಂದ ಇಲ್ಲಿ ಅನುದಾತ್ತವು ವಿಹಿತವಾದರೂ ಅದಕ್ಕೆ ಶ್ರವಣಮಾತ್ರ ಇಲ್ಲ. ಇದಕ್ಕೆ ಅಪವಾದವಾಗಿ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬ ಸೂತ್ರವು ಆರಬ್ಧವಾಗಿದೆ. ಯಾವ ಸ್ಥಲದಲ್ಲಿಯಾದರೂ ಯಚ್ಛಬ್ದವಿದ್ದರೆ ಅದರ ಪರದಲ್ಲಿರುವ ತಿಙಂತವು ಅನುದಾತ್ತವಾಗುವುದಿಲ್ಲವೆಂದಿರುವುದರಿಂದ ಇಲ್ಲಿ ಮಂತ್ರಪಾಠದಲ್ಲಿ 'ಯದುದೀರತ' ಎಂದಿರುವುದರಿಂದ ಯಚ್ಛಬ್ದಸಂಬಂಧ ಬಂದಿದೆ. ಆದುದರಿಂದ ಅನುದಾತ್ತವು ನಿಷಿದ್ಧವಾಗಿದೆ.

**ಧನಾ**—ಧನಶಬ್ದದ ಮೇಲೆ ದ್ವಿತೀಯೈಕವಚನ ಬಂದಿದೆ. ಧನ+ಅಮ್ ಎಂದಿರುವಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬ ಸೂತ್ರದಿಂದ ಅಮ್ ವಿಭಕ್ತಿಗೆ ಡಾ ಎಂಬ ಆದೇಶವು ಬಂದಿದೆ. ಡಾ ಎಂಬಲ್ಲಿ ಡಕಾರವು ಇತ್ಸಂಜ್ಞೆಯಿಂದ ಲೋಪವಾಗುವುದರಿಂದ ಆ ಎಂಬುದು ಉಳಿಯುತ್ತದೆ. ಡಾಪರದಲ್ಲಿರುವಾಗ ಧನ ಎಂಬ ಪ್ರಕೃತಿಯಲ್ಲಿರುವ ಕೊನೆಯ ಅಕಾರವು ಲುಪ್ತವಾಗುತ್ತದೆ. ಆಕಾರವನ್ನು ಸೇರಿಸಿದಾಗ ರೂಪಸಿದ್ಧಿಯಾಗುವುದು.

**ಯುಕ್ಷ್ವ**—ಯುಜಿರ್ ಯೋಗೇ, ಧಾತು, ರುಧಾದಿ, ಉಭಯಪದೀ. ಇದು ಣಿಚ್ಚಿನ ಪ್ರೇರಣಾರ್ಥವನ್ನು ಗರ್ಭೀಕರಿಸಿದೆ. ಣಿಜರ್ಥವನ್ನೂ ಧಾತ್ವರ್ಥದೊಡನೆ ಸೇರಿಸಿ ಹೇಳಬೇಕು. ವಿಧ್ಯರ್ಥದಲ್ಲಿ ಲೋಟ್ ಬಂದಿದೆ. ರುಧಾದಿಗೆ ಶ್ನಮ್ ಎಂಬ ವಿಕರಣಪ್ರತ್ಯಯವು ವಿಹಿತವಾಗಿದೆ. ಇಲ್ಲಿ **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಎಂಬುದರಿಂದ ಪ್ರಾಪ್ತವಾದ ವಿಕರಣಪ್ರತ್ಯಯಕ್ಕೆ ಲುಕ್ ಬಂದಿದೆ. **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಏತ್ವವನ್ನು ಹೊಂದಿದ ಮಧ್ಯಮಪುರುಷದ ಸೆ ಪ್ರತ್ಯಯದ ಏಕಾರಕ್ಕೆ ವ ಎಂಬ ಆದೇಶವು ಬರುತ್ತದೆ. ಧಾತುವಿನ ಜಕಾರಕ್ಕೆ **ಚೋಃ ಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಗಕಾರ ಬಂದರೆ **ಚರ್ತ್ವ**ದಿಂದ ಅದಕ್ಕೆ ಕಕಾರವೂ, ಕಕಾರದ ಪರದಲ್ಲಿರುವ ಸಕಾರಕ್ಕೆ ಷತ್ವವೂ ಬಂದರೆ ಕಕಾರಷಕಾರಗಳ ಯೋಗದಿಂದ ಕ್ಷಕಾರವಾಗುತ್ತದೆ. ಕ್ಷ ಎಂಬುದು ಬೇರೆ ವರ್ಣವಲ್ಲ. ಯುಕ್ಷ್ವ ಎಂದಿರುವಾಗ, **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎರಡು ಸ್ವರವಿರುವ ತಿಙಂತದ ಕೊನೆಯ ಅಕಾರಕ್ಕೆ ಮಂತ್ರದಲ್ಲಿ ದೀರ್ಘ ಬರುತ್ತದೆ ಎಂಬುದರಿಂದ ಇಲ್ಲಿ ಮಂತ್ರಪಾಠದಲ್ಲಿ ಯುಕ್ಷ್ವಾ ಎಂದು ದೀರ್ಘವು ಶ್ರುತವಾಗಿದೆ.

**ಹನಃ**—ಹನ ಹಿಂಸಾಗತ್ಯೋಃ. ಧಾತು, ಅದಾದಿ, ಪರಸ್ಮೈಪದಿ, ವಿಧ್ಯರ್ಥದಲ್ಲಿ ಲೇಟ್ ಬಂದಿದೆ. ಮಧ್ಯಮಪುರುಷದ ಸಿಪ್ ಬಂದಾಗ ಹಿಂದೆ ಹೇಳಿದಂತೆ (೧-೬-೮೧-೧) ಸಿಪ್ಪಿಗೆ ಅಡಾಗಮ ಬರುತ್ತದೆ. ಹನಸ್ ಎಂದಿರುವಾಗ ಹಲ್ ವರ್ಣದ ಪರದಲ್ಲಿದ್ದುದರಿಂದ ಸಿಪ್ಪಿಗೆ ಲೋಪಬಾರದೆ ರುತ್ವವಿಸರ್ಗಗಳು ಬಂದಿವೆ. ಸಿಪ್ಪಿನಲ್ಲಿ ಪಕಾರ ಇತ್ತಾದುದರಿಂದ ಅನುದಾತ್ತಸ್ವರ ಬರಬೇಕಿತ್ತು. ಆದರೆ **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಚ, ವಾ, ಹಾ. ಅಹ ಇವುಗಳು ಲೋಪವಾದಾಗ ಪ್ರಥಮೋಚ್ಚರಿತವಾದ ತಿಙ್ ವಿಭಕ್ತಿಯು ಅನುದಾತ್ತವಾಗುವುದಿಲ್ಲವೆಂಬುದರಿಂದ ಇಲ್ಲಿ ಹನಶ್ಚ, ದಧಶ್ಚ ಎಂದು ಚಾರ್ಥವು ತೋರುವುದರಿಂದ ಚಕಾರಲೋಪವಾಗಿದೆ ಎಂದು ಭಾವಿಸಬೇಕು. ಇದರಿಂದ ಅನುದಾತ್ತಸ್ವರವು ಬರುವುದಿಲ್ಲ.

**ವಸೌ**—ಸಪ್ತಮ್ಯೇಕವಚನ. ವಸುಶಬ್ದವು ಲೋಕದಲ್ಲಿ ನಪುಂಸಕಲಿಂಗ. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಛಂದಸ್ಸಿನಲ್ಲಿ ಲಿಂಗಾದಿಗಳು ವ್ಯತ್ಯಾಸವನ್ನು ಹೊಂದುತ್ತವೆ ಎಂಬುದರಿಂದ ಇಲ್ಲಿ ಪುಲ್ಲಿಂಗದ ರೂಪವನ್ನು ಹೊಂದಿದೆ.

**ದಧಃ**—ದಧ ಧಾರಣೆ ಧಾತು. ಭ್ವಾದಿ, ಆತ್ಮನೇಪದಿ. ಲೇಟನಲ್ಲಿ ಮಧ್ಯಮಪುರುಷ ಏಕವಚನದ ರೂಪ. ಆತ್ಮನೇಪದದಲ್ಲಿ ದಧಸ್ವ ಎಂದಾಗಬೇಕಾಗುವುದು. ಆದರೆ ಹಿಂದೆ ಹೇಳಿದಂತೆ **ವ್ಯತ್ಯಯೋಬಹುಲಂ** ಎಂಬುದರಿಂದ ಇಲ್ಲಿ ಆತ್ಮನೇಪದಕ್ಕೆ ಬದಲಾಗಿ ಪರಸ್ಮೈಪದವು ಬಂದಿದೆ. ಶಬ್ವಿಕರಣ ಪ್ರತ್ಯಯ ಬರುತ್ತದೆ. ಸಿಪ್ಸಿನ ಸಕಾರಕ್ಕೆ ರುತ್ವವಿಸರ್ಗಗಳು ಬರುತ್ತವೆ. ॥ ೩ ॥



॥ ಸಂಹಿತಾಪಾಠಃ ॥

ಕೃತ್ವಾ ಮಹಾँ ಅನುಷ್ವಧಂ ಭೀಮ ಆ ವಾವೃಧೇ ಶವಃ।
ಶ್ರಿಯ ಋಷ್ವ ಉಪಾಕಯೋರ್ನಿ ಶಿಪ್ರೀ ಹರಿವಾನ್ದಧೇ ಹಸ್ತ-
ಯೋರ್ವಜ್ರಮಾಯಸಂ ॥ ೪ ॥

ಪದಪಾಠಃ

ಕ್ರತ್ವಾ । ಮಹಾನ್ । ಅನುಽಸ್ವಧಂ । ಭೀಮಃ । ಆ । ವವೃಧೇ । ಶವಃ ।
ಶ್ರಿಯೇ । ಋಷ್ವಃ । ಉಪಾಕಯೋಃ । ನಿ । ಶಿಪ್ರೀ । ಹರಿಽವಾನ್ । ದಧೇ ।
ಹಸ್ತಯೋಃ । ವಜ್ರಂ । ಆಯಸಂ ॥ ೪ ॥

ಸಾಯಣಭಾಷ್ಯಂ

ಕ್ರತ್ವಾ ಕರ್ಮಣಾ ಪ್ರಜ್ಞಯಾ ವಾ ಮಹಾನ್ ಸರ್ವಾಧಿಕೋ ಭೀಮಃ ಶತ್ರೂಣಾಂ ಭಯಂಕರ ಇಂದ್ರೋಽನುಷ್ವಧಂ । ಸ್ವಧೇತ್ಯನ್ನನಾಮ । ಸ್ವಧಾಯಾಂ । ವಿಭಕ್ತ್ಯರ್ಥೇಽವ್ಯಯೀಭಾವಃ । ಸೋಮಲಕ್ಷಣಸ್ಯಾನ್ನಸ್ಯ ಪಾನೇ ಸತೀತ್ಯರ್ಥಃ । ಶವ ಆತ್ಮೀಯಂ ಬಲಮಾ ವವೃಧೇ । ಆಭಿಮುಖ್ಯೇನ ಪ್ರಾವರ್ಧಯತ್ । ತದನಂತರಮೃಷ್ವೋ ದರ್ಶನೀಯಃ ಶಿಪ್ರೀ । ಶಿಪ್ರೇ ಹನೂ ನಾಸಿಕೇ ವಾ । ತದ್ಯುಕ್ತಃ ಹರಿವಾನ್ ಹರಿನಾಮಕಾಶ್ವೋಪೇತ ಇಂದ್ರ ಉಪಾಕಯೋಃ । ಅಂತಿಕನಾಮೈತತ್ । ಸಮೀಪವರ್ತಿನೋ-

ಹಸ್ತಯೋರ್ಬಾಹ್ವೋರಾಯಸಮಯೋಮಯಂ ವಜ್ರಂ ಶ್ರಿಯೇ ಸಂಪದರ್ಥಂ ನಿ ದಧೇ। ನಿದಧಾತಿ। ಸ್ಥಾಪಯತಿ। ಸೋಮಪಾನೇನ ಹೃಷ್ಟಃ ಪ್ರಬಲ ಇಂದ್ರಃ ಶತ್ರೂಣಾಂ ಹನನಾಯ ಹಸ್ತೇ ವಜ್ರಂ ಗೃಹ್ಣಾತೀತಿ ತಾತ್ಪರ್ಯಾರ್ಥಃ॥ ಕ್ರತ್ವಾ। ಜಸಾದಿಷು ಛಂದಸಿ ವಾವಚನಮಿತಿ ನಾಭಾವಸ್ಯ ವಿಕಲ್ಪಿತತ್ವಾದಭಾವಃ। ಆಯಸಂ। ತಸ್ಯ ವಿಕಾರ ಇತ್ಯಣ್ಪ್ರತ್ಯಯಃ ॥ ೫ ॥

॥ ಪ್ರತಿಪದಾರ್ಥ ॥

**ಕ್ರತ್ವಾ**—ಕರ್ಮದಿಂದ ಅಥವಾ ಪ್ರಜ್ಞೆಯಿಂದ। **ಮಹಾನ್**—ಶ್ರೇಷ್ಠನಾದವನೂ। **ಭೀಮಃ**—(ಶತ್ರುಗಳಿಗೆ) ಭಯಂಕರನೂ ಆದ ಇಂದ್ರನು। **ಅನುಷ್ವಧಂ**—(ಸೋಮರೂಪವಾದ) ಅನ್ನ ಸೇವನೆಯಾದಮೇಲೆ। **ಶವಃ**—(ತನ್ನ) ಬಲವನ್ನು। **ಆ ವವೃಧೇ**—ಸಂಪೂರ್ಣವಾಗಿ ವೃದ್ಧಿಮಾಡಿಕೊಂಡನು। **ಶುಷ್ಟಃ**—ಮನೋಹರವಾದ ರೂಪವುಳ್ಳವನೂ। **ಶಿಪ್ರೀ**—ಸುಂದರವಾದ ಗಲ್ಲ ಅಥವಾ ಮೂಗುಳ್ಳವನೂ। **ಹರಿವಾನ್**—ಹರಿಯೆಂಬ ಕುದುರೆಗಳಿಂದ ಕೂಡಿದವನೂ ಆದ ಇಂದ್ರನು। **ಉಪಾಕಯೋಃ**—(ತನ್ನ) ಪಾರ್ಶ್ವಗಳಲ್ಲಿರುವ। **ಹಸ್ತಯೋಃ**—ಕೈಗಳಲ್ಲಿ। **ಆಯಸಂ**—ಉಕ್ಕಿನಿಂದ ಮಾಡಿದ। **ವಜ್ರಂ**—ವಜ್ರಾಯುಧವನ್ನು। **ಶ್ರಿಯೇ**—(ನಮ್ಮ) ಸಂಪತ್ತಿಗಾಗಿ। **ನಿ ದಧೇ**—ಹಿಡಿದುಕೊಂಡಿದ್ದಾನೆ.

ಭಾವಾರ್ಥ

ಯಜ್ಞಕರ್ಮದಿಂದ ಶ್ರೇಷ್ಠನಾದವನೂ ಮತ್ತು ಶತ್ರುಗಳಿಗೆ ಭಯಂಕರನಾದವನೂ ಆದ ಇಂದ್ರನು ಸೋಮರಸರೂಪವಾದ ಅನ್ನಸೇವನೆಯಿಂದ ತನ್ನ ಶಕ್ತಿಯನ್ನು ಬಹಳವಾಗಿ ಬೆಳೆಸಿಕೊಂಡಿದ್ದಾನೆ. ಮನೋಹರವಾದ ರೂಪವುಳ್ಳವನೂ, ಸುಂದರವಾದ ಕೆನ್ನೆಯುಳ್ಳವನೂ ಮತ್ತು ಹರಿಯೆಂಬ ಕುದುರೆಗಳಿಂದ ಕೂಡಿದವನೂ ಆದ ಇಂದ್ರನು ತನ್ನ ಪಾರ್ಶ್ವದಲ್ಲಿರುವ ಕೈಗಳಲ್ಲಿ ಉಕ್ಕಿನಿಂದ ನಿರ್ಮಿತವಾದ ವಜ್ರಾಯುಧವನ್ನು ನಮಗೆ ಸಂಪತ್ತನ್ನು ತಂದುಕೊಡುವುದಕ್ಕಾಗಿ ಹಿಡಿದುಕೊಂಡಿದ್ದಾನೆ.

English Translation

Sacrifices make Indra mighty; he is formidable to the enemies; partaking of the sacrificial food, Indra has increased his strength; he has a handsome chin and is pleasing in appearance. He possesses two good horses; he grasps the iron thunderbolt in his hands for our prosperity.

ವಿಶೇಷವಿಷಯಗಳು

**ಕ್ರತ್ವಾ—ಕರ್ಮಣಾ।** ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಕ್ರತುಃ ಎಂಬ ಶಬ್ದವು ಪಠಿತವಾಗಿರುವುದರಿಂದ ( ನಿ. ೩-೨ ) ಕ್ರತ್ವಾ ಎಂದರೆ ಕರ್ಮದಿಂದ ; ಯಜ್ಞಾನುಷ್ಠಾನಾದಿಕರ್ಮಗಳಿಂದ ; ಮನುಷ್ಯರು ಮಾಡುವ ಯಜ್ಞಾದಿ ಕರ್ಮಗಳಲ್ಲಿ ಅರ್ಪಿಸುವ ಹವಿಸ್ಸಿನಿಂದ ದೇವತೆಗಳ ಶಕ್ತಿಯು ಅಭಿವೃದ್ಧಿಗೊಳ್ಳುವುದು ಎಂದು ಹೇಳುವರು.

**ಅನುಷ್ವಧಂ**—ಸ್ವಧಾ ಎಂದರೆ ಅನ್ನವು (ನಿ. ೩-೯) ಅನುಷ್ವಧಂ ಅನ್ವನ್ನಂ ಎಂದು ಯಾಸ್ಕರ ವಚನವಿರುವುದು (ನಿ. ೪-೯) ಇಲ್ಲಿ ಅನ್ನವೆಂದರೆ ಹವಿಸ್ಸಿನ ರೂಪದಲ್ಲಿರುವ ಅನ್ನವು. ಈ ಅನ್ನದ ಸೇವನೆಯಿಂದ ಇಂದ್ರನ ಶಕ್ತಿಯು ಅಭಿವೃದ್ಧಿಗೊಳ್ಳುವುದು.

**ಋಷ್ವಃ—ದರ್ಶನೀಯಃ** | ಸುಂದರನಾದವನು

**ಉಪಾಕಯೋಃ**—ಉಪಾಕವೆಂದರೆ ಸಮೀಪ. ( ನಿ. ೩-೯ ) ಇಲ್ಲಿ ಉಪಾಕಯೋಃ ಎಂಬ ಶಬ್ದವು ಹಸ್ತಯೋಃ ಎಂಬ ಶಬ್ದಕ್ಕೆ ವಿಶೇಷಣವಾಗಿದ್ದರೂ ಈ ಶಬ್ದವನ್ನು **ವಜ್ರಮಾಯಸಂ** ಎಂಬ ಶಬ್ದಗಳೊಡನೆ ಸಮನ್ವಯಮಾಡಿದಲ್ಲಿ ತನ್ನ ಸಮೀಪದಲ್ಲಿರುವ ಉಕ್ಕಿನ ವಜ್ರಾಯುಧವನ್ನು ಕೈಯಿಂದ ತೆಗೆದುಕೊಂಡನು ಎಂದು ಅರ್ಥವು ಸರಿಯಾಗಿ ಹೊಂದುವುದು, ಅಥವಾ ಉಪಾಕಯೋಃ ಎಂದರೆ ಎರಡುಪಾರ್ಶ್ವಗಳಲ್ಲಿರುವ, ಹಸ್ತಯೋಃ ಕೈಗಳಲ್ಲಿ ಎಂದರೆ ಎರಡು ಕೈಗಳಿಂದಲೂ ಎಂಬ ಅರ್ಥವನ್ನು ಬೇಕಾದರೂ ಹೇಳಬಹುದು.

**ಆಯಸಂ**—ಕಬ್ಬಿಣ ಅಥವಾ ಉಕ್ಕಿನಿಂದ ಮಾಡಲ್ಪಟ್ಟಿರುವ ಎಂದರ್ಥವು. ಇಂದ್ರನ ವಜ್ರಾಯುಧವನ್ನು ತ್ವಷ್ಟೃವು ಕಬ್ಬಿಣದಿಂದ ಮಾಡಿಕೊಟ್ಟನೆಂದು **ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ** (ಋ.ಸಂ. ೧೦-೪೮-೩) ಎಂಬ ಋಕ್ಕು ಸ್ಪಷ್ಟವಾಗಿ ತಿಳಿಸುವುದು.

**ಶ್ರಿಯೇ ವಜ್ರಂ ನಿದಧೇ**—( ನಮ್ಮ ) ಸಂಪತ್ತಿಗಾಗಿ ವಜ್ರಾಯುಧವನ್ನು ಧರಿಸಿದನು ಎಂದರೆ ಇಂದ್ರನು ವಜ್ರಾಯುಧವನ್ನು ಕೈಗಳಲ್ಲಿ ತೆಗೆದುಕೊಂಡು ನಮ್ಮ ಶತ್ರುಗಳನ್ನು ನಾಶಮಾಡಿ ಅವರಲ್ಲಿರುವ ಸಂಪತ್ತನ್ನು ನಮಗೆ ದೊರಕಿಸಿಕೊಡುವನು ಎಂದಭಿಪ್ರಾಯವು.

### ವ್ಯಾಕರಣಪ್ರಕ್ರಿಯಾ

**ಕ್ರತ್ವಾ**—ಕ್ರತುಶಬ್ದದ ಮೇಲೆ ತೃತೀಯಾವಿಭಕ್ತಿ ಬಂದಿದೆ. ಇಲ್ಲಿ ಘಿಸಂಜ್ಞಾ ಇರುವುದರಿಂದ **ಆಙೋನಾಸ್ತ್ರಿಯಾಂ** (ಪಾ ಸೂ. ೭-೩-೧೨೦) ಎಂಬುದರಿಂದ ನಾ ಭಾವವು ತೃತೀಯಾವಿಭಕ್ತಿಗೆ ಪ್ರಾಪ್ತವಾಗುತ್ತದೆ. ಆದರೆ ' ಜಸಾದಿಷು ಛಂದಸಿ ವಾ ವಚನಂ ' ಎಂಬ ವಾರ್ತಿಕದಿಂದ ಜಸಾದಿವಿಭಕ್ತಿಗಳಿಗೆ ಛಂದಸ್ಸಿನಲ್ಲಿ ಆದೇಶಗಳು ವಿಕಲ್ಪವಾಗಿ ಬರುತ್ತವೆ ಎಂಬುದರಿಂದ ಇಲ್ಲಿ ನಾಭಾವಮಾಡಲಿಲ್ಲ. ಅಥವಾ **ಷಷ್ಠೀಯುಕ್ತಃ ಛಂದಸಿ ವಾ** (ಪಾ. ಸೂ. ೧-೪-೦) ಎಂಬ ಸೂತ್ರದಲ್ಲಿ ಯೋಗವಿಭಾಗವನ್ನು ಆಶ್ರಯಿಸಿ ವೈಕಲ್ಪಿಕವನ್ನು ಹೇಳಬೇಕು. ಯೋಗವಿಭಾಗವೆಂದರೆ ಒಂದು ಸೂತ್ರವನ್ನೇ ಪ್ರಕರಣಾನುಸಾರವಾಗಿ ಲಕ್ಷ್ಯಸಿದ್ಧಿಗೋಸ್ಕರ ತುಂಡುಮಾಡಿಕೊಂಡು ಅರ್ಥಾಂತರವನ್ನು ಸ್ವೀಕರಿಸುವುದು. ಇಲ್ಲಿ **ಛಂದಸಿ ವಾ** ಎಂದು ವಿಭಾಗಮಾಡಿಕೊಂಡರೆ ಎಲ್ಲಾ ಕಾರ್ಯಗಳೂ ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುತ್ತವೆ ಎಂದರ್ಥವಾಗುತ್ತದೆ. ಇದನ್ನೇ ಆಯಾಯ ಕಾರ್ಯವಿಧಿಸುವಲ್ಲಿ **ಬಹುಲಂ ಛಂದಸಿ** ಎಂಬ ಸೂತ್ರವನ್ನು ಆರಂಭಿಸಿ ವೈಕಲ್ಪಿಕವನ್ನು ಹೇಳುತ್ತಾರೆ. ಹೀಗೆ ಯೋಗವಿಭಾಗಮಾಡಿಕೊಂಡು ಅರ್ಥ ಹೇಳಿದರೆ ಆಗ ಅವೆಲ್ಲವೂ ಈ ಅರ್ಥದ ಸ್ಪಷ್ಟವಿವರಣೆಯಾಗುತ್ತವೆ. ಯೋಗವಿಭಾಗದಿಂದ ಬಂದರ್ಥವನ್ನು ಸ್ವೀಕರಿಸಿದಾಗ ಘಿ ಸಂಜ್ಞೆಯೂ ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುವುದರಿಂದ ಇಲ್ಲಿ ನಾಭಾವ ಬರಲಿಲ್ಲವೆಂದು ಹೇಳಬಹುದು. ವಿಭಕ್ತಿಯೇ ಉಳಿದಿರುವಾಗ ಯಣ್‌ಸಂಧಿ ಬಂದಿದೆ.

**ಆಯಸಂ**—ದ್ವಿತೀಯೈಕವಚನ. **ತಸ್ಯ ವಿಕಾರಃ** (ಪಾ. ಸೂ. ೪-೩-೧೩೪) ಅದರ ವಿಕಾರ ಎಂಬರ್ಥದಲ್ಲಿ ಅಣ್‌ಪ್ರತ್ಯಯವು ಷಷ್ಠ್ಯಂತದ ಮೇಲೆ ಬರುತ್ತದೆ ಎಂಬುದರಿಂದ ಇಲ್ಲಿ ಲೋಹವಿಕಾರವೆಂಬರ್ಥವಿರುವುದರಿಂದ ಅಯಸ್ ಎಂಬ ಶಬ್ದದ ಮೇಲೆ ಅಣ್‌ಪ್ರತ್ಯಯ ಬಂದಿದೆ. ಪ್ರತ್ಯಯದಲ್ಲಿ ಣಕಾರವು ಇತ್ತಾಗುತ್ತದೆ. ಆದುದರಿಂದ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಸೂತ್ರದಿಂದ ಞಿತ್, ಣಿತ್, ಪ್ರತ್ಯಯವು ಪರದಲ್ಲಿರುವಾಗ ಅಂಗದ ಮೊದಲನೆಯ ಸ್ವರಕ್ಕೆ ವೃದ್ಧಿ ಬರುತ್ತದೆ ಎಂಬುದರಿಂದ ಇಲ್ಲಿ ಅಕಾರಕ್ಕೆ ವೃದ್ಧಿ ಬರುತ್ತದೆ. **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಎಂಬುದರಿಂದ ಪ್ರತ್ಯಯಸ್ವರವಿರುವಾಗ ಅಂತೋದಾತ್ತವಾಗುತ್ತದೆ. ಇದಕ್ಕೆ ಅಮ್ ವಿಭಕ್ತಿಯು ಪರದಲ್ಲಿರುವಾಗ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಸೂತ್ರದಿಂದ ಪೂರ್ವರೂಪ ಬರುತ್ತದೆ. ವಿಭಕ್ತಿಯು ಅನುದಾತ್ತವಾದರೂ **ಅನುದಾತ್ತಸ್ಯ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಅನುದಾತ್ತಪರದಲ್ಲಿರುವಾಗ, ಉದಾತ್ತಕ್ಕೆ ಲೋಪಬಂದಾಗ, ಪರದ ಅನುದಾತ್ತಕ್ಕೆ ಉದಾತ್ತಸ್ವರವೇ ಬರುತ್ತದೆ ಎಂಬುದರಿಂದ ಇಲ್ಲಿ ಉದಾತ್ತವು ಬಂದಿದೆ.

**ಅನುಸ್ವಧಮ್**—ಸ್ವಧಾಯಾಂ ಅನುಸ್ವಧಂ. **ಅವ್ಯಯಂ ವಿಭಕ್ತಿಸಮೀಪ** (ಪಾ. ಸೂ. ೨-೧-೬) ಎಂಬ ಸೂತ್ರದಿಂದ ವಿಭಕ್ತ್ಯರ್ಥದಲ್ಲಿ ಅವ್ಯಯೀಭಾವಸಮಾಸ ಬಂದಿದೆ. **ಸಮಾಸಸ್ಯ** (ಪಾ. ಸೂ. ೬-೧-೨೨೩) ಸೂತ್ರದಿಂದ ಸಮಾಸಕ್ಕೆ ಅಂತೋದಾತ್ತ ಬರುತ್ತದೆ ಎಂಬುದರಿಂದ ಇಲ್ಲಿ ಅಂತೋದಾತ್ತವಾಗಿದೆ. ॥ ೪ ॥



ಸಂಹಿತಾಪಾಠಃ

ಆ ಪಪ್ರೌ ಪಾರ್ಥಿವಂ ರಜೋ ಬದ್ಬಧೇ ರೋಚನಾ ದಿವಿ।
ನ ತ್ವಾವಾಁ ಇಂದ್ರ ಕಶ್ಚನ ನ ಜಾತೋ ನ ಜನಿಷ್ಯತೇಽತಿ ವಿಶ್ವಂ ವವಕ್ಷಿಥ ॥ ೫ ॥

ಪದಪಾಠಃ

ಆ । ಪಪ್ರೌ । ಪಾರ್ಥಿವಂ । ರಜಃ । ಬದ್ಬಧೇ । ರೋಚನಾ । ದಿವಿ ।
ನ । ತ್ವಾಽವಾನ್ । ಇಂದ್ರ । ಕಃ । ಚನ । ನ । ಜಾತಃ । ನ । ಜನಿಷ್ಯತೇ । ಅತಿ । ವಿಶ್ವಂ । ವವಕ್ಷಿಥ ॥ ೫ ॥

ಸಾಯಣಭಾಷ್ಯಂ

ಇಂದ್ರಃ ಸ್ವತೇಜಸಾ ಪಾರ್ಥಿವಂ ಪೃಥಿವ್ಯಾಃ ಸಂಬಂಧಿ ವಸ್ತುಜಾತಂ ರಜೋಽಂತರಿಕ್ಷಲೋಕಂ ಚಾ ಪಪ್ರೌ । ಆಪೂರಯತಿ । ತಥಾ ದಿವಿ ದ್ಯುಲೋಕೇ ರೋಚನಾ ರೋಚಮಾನಾನಿ ದೀಪ್ತಾನಿ ನಕ್ಷತ್ರಾಣಿ ಬದ್ಬಧೇ । ಬಬಂಧ । ಸ್ಥಾಪಿತವಾನ್ । ಅತೋ ಹೇ ಇಂದ್ರ ತ್ವಾವಾನ್ ತ್ವತ್ಸದೃಶಃ ಕಶ್ಚನ ನ ಜಾತೋ ನೋತ್ಪನ್ನೋಽಸ್ತಿ । ನ ಚ ಜನಿಷ್ಯತೇ । ಉತ್ಪತ್ಸ್ಯಮಾನೋಽಪಿ ನಾಸ್ತಿ । ತಾದೃಶಸ್ತ್ವಂ ವಿಶ್ವಂ ಸರ್ವಂ ರಕ್ಷಿತವ್ಯಂ ಜಗದತಿ ವವಕ್ಷಿಥ । ಅತಿಶಯೇನ ವೋಢುಮಿಚ್ಛಸಿ । ಸರ್ವಸ್ಯ ಜಗತೋ ನಿರ್ವಾಹಕೋ ಭವಸೀತ್ಯರ್ಥಃ ॥ ಪಪ್ರೌ । ಪ್ರಾ ಪೂರಣೇ । ಲಿಟ್ಯಾತ ಔ ಣಲಃ । । ಪಾ. ೭-೧-೩೪ । ಇತ್ಯೌಕಾರಾದೇಶಃ ಪಾರ್ಥಿವಂ । ಪೃಥಿವ್ಯಾ ಞಾಞೌ । ಪಾ. ೪-೧-೮೫-೨ । ಇತ್ಯಞ್ಪ್ರತ್ಯಯಃ । ಞಿತ್ತ್ವಾದಾದ್ಯುದಾತ್ತತ್ವಂ । ರಜಃ । ರಜಂತ್ಯಸ್ಮಿನ್ ಗಂಧರ್ವಾದಯ ಇತಿ ರಜೋಽಂತರಿಕ್ಷಂ । ರಂಜ ರಾಗೇ । ಅಸುನಿ ರಜಕರಜನರಜಃಸೂಪಸಂಖ್ಯಾನಂ । ಕಾ. ೬-೪-೨೪-೪ । ಇತಿ ನಲೋಪಃ । ಬದ್ಬಧೇ । ಬಧ ಬಂಧನೇ । ಲಿಟಿ ವ್ಯತ್ಯಯೇನ ಹಲಾದಿಶೇಷಾಭಾವಃ । ಏಕಹಲ್ಮಧ್ಯಗತತ್ವಾಭಾವಾದೇತ್ವಾಭ್ಯಾಸಲೋಪಾವಪಿ ನ ಸ್ತಃ । ಪಾದಾದಿತ್ವಾನ್ನಿಘಾತಾಭಾವಃ । ತ್ವಾವಾನ್ । ವತುಪ್ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಮಿತಿ ವತುಪ್ । ಆ ಸರ್ವನಾಮ್ನ ಇತ್ಯಾತ್ವಂ । ವವಕ್ಷಿಥ । ವಹ ಪ್ರಾಪಣೇ । ಅಸ್ಮಾದಿಚ್ಛಾ । ಸನಿ ಸನ್ಯತ ಇತೀತ್ವಸ್ಯ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತ್ಯಭಾವಃ । ಸನಂತಾಲ್ಲಿಟ್ಯಮಂತ್ರ ಇತಿ ನಿಷೇಧಾದಾಮ್ಪ್ರತ್ಯಯಾಭಾವಃ ॥ ೫ ॥

॥ ಪ್ರತಿಪದಾರ್ಥ ॥

**ಪಾರ್ಥಿವಂ**—(ಎಲೈ ಇಂದ್ರನೆ) ಪೃಥ್ವೀ ಲೋಕವನ್ನೂ । **ರಜಃ**—ಅಂತರಿಕ್ಷ ಲೋಕವನ್ನೂ ಸಹ । **ಆ ಪಪ್ರೌ**—(ನಿನ್ನ ಪ್ರಭಾವದಿಂದ) ತುಂಬಿದ್ದೀಯೆ । **ದಿವಿ**—ದ್ಯು ಲೋಕದಲ್ಲಿ । **ರೋಚನಾ**—ಪ್ರಕಾಶಿಸುವ ನಕ್ಷತ್ರಗಳನ್ನು । **ಬದ್ಬಧೇ**—ಭದ್ರವಾಗಿ ನೆಲೆಗೊಳಿಸಿದ್ದೀಯೆ । **ಇಂದ್ರ**—ಎಲೈ ಇಂದ್ರನೇ । **ತ್ವಾವಾನ್**—ನಿನಗೆ ಸದೃಶನಾಗಿ । **ಕಶ್ಚನ**—ಯಾವನೂ ಕೂಡ । **ನ ಜಾತಃ**—ಹುಟ್ಟಿಲ್ಲ । **ನ ಚ ಜನಿಷ್ಯತೇ**—ಹುಟ್ಟುವುದೂ ಇಲ್ಲ. । (ಅಂತಹ ನೀನು) **ವಿಶ್ವಂ**—ಸಕಲ ಜಗತ್ತನ್ನೂ । **ಅತಿ ವವಕ್ಷಿಥ**—ಅತಿಶಯವಾಗಿ ಎತ್ತಿಹಿಡಿಯಲು ಇಚ್ಛಿಸುತ್ತೀಯೆ.

ಭಾವಾರ್ಥ

ಎಲೈ ಇಂದ್ರನೇ, ನೀನು ನಿನ್ನ ಮಹಿಮೆಯಿಂದ ಪೃಥಿವ್ಯಂತರಿಕ್ಷಲೋಕಗಳನ್ನೆಲ್ಲಾ ತುಂಬಿದ್ದೀಯೆ. ದ್ಯುಲೋಕದಲ್ಲಿ ಪ್ರಕಾಶಿಸುವ ನಕ್ಷತ್ರಗಳನ್ನು ಭದ್ರವಾಗಿ ನೆಲೆಗೊಳಿಸಿದ್ದೀಯೆ. ಎಲೈ ಇಂದ್ರನೇ, ನಿನಗೆ ಸದೃಶನಾದವನು ಹಿಂದೆಯೂ ಹುಟ್ಟಿಲ್ಲ, ಮುಂದೆಯೂ ಹುಟ್ಟುವುದಿಲ್ಲ. ಅಂತಹ ಮಹಾಮಹಿಮನಾದ ನೀನು ಸಕಲ ಜಗತ್ತನ್ನೂ ಅತಿ ಸುರಕ್ಷಿತವಾಗಿ ಎತ್ತಿ ಹಿಡಿಯಲಿಚ್ಛಿಸುತ್ತೀಯೆ.

## English Translation

Indra has filled the Surface of the earth and the firmament with his glory; he has established the constellations in the sky; O Indra, no one like

you (having such powers as you have) has ever been born or nor will be born. You have sustained the entire Universe.

ವಿಶೇಷವಿಷಯಗಳು

**ಪಾರ್ಥಿವಂ—ಪೃಥಿವ್ಯಾಃಸಂಬಂಧಿ ।** ಭೂಮಿಯಲ್ಲಿರುವ ಸಮಸ್ತ ವಸ್ತುಗಳನ್ನು

**ರಜಃ—ಅಂತರಿಕ್ಷಲೋಕವು ಎಂದರೆ ಅಂತರಿಕ್ಷದಲ್ಲಿರುವ ವಸ್ತುಸಮೂಹವು.**

**ತ್ವಾವಾನ್—ನಿನ್ನ ಸಮಾನನಾದವನು, ನಿನ್ನಂತಿರುವವನು.**

ವ್ಯಾಕರಣಪ್ರಕ್ರಿಯಾ

**ಪಪ್ರೌ—**ಪ್ರಾ ಪೂರಣೇ ಧಾತು. ಅದಾದಿ, ಪರಸ್ಮೈಪದಿ, ಲಿಟ್‌ಪ್ರಥಮಪುರುಷೈಕವಚನ. ಲಿಟ್‌ಪರದಲ್ಲಿರುವಾಗ ಧಾತುವಿಗೆ ದ್ವಿತ್ವಬರುತ್ತದೆ. ಪ್ರಾಪ್ರಾ ಎಂದಿರುವಾಗ **ಹಲಾದಿಃ ಶೇಷಃ** (ಪಾ. ಸೂ. ೭-೪-೬೦) ಸೂತ್ರದಿಂದ ಪೂರ್ವಖಂಡದಲ್ಲಿ ಪಾಮಾತ್ರ ಉಳಿಯುತ್ತದೆ. **ಹ್ರಸ್ವಃ** (ಪಾ. ಸೂ. ೭-೪-೫೯) ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವಬರುತ್ತದೆ. ಲಿಟ್ಟಿನ ಪ್ರಥಮಪುರುಷೈಕ ವಚನವಾದ ತಿಪ್ಪಿಗೆ **ಪರಸ್ಮೈಪದಾನಾಂ ಣಲತು** (ಪಾ. ಸೂ. ೩-೪-೮೨) ಎಂಬುದರಿಂದ ಣಲ್ ಎಂಬ ಆದೇಶ ಬರುತ್ತದೆ. **ಆತ ಔಣಲಃ** (ಪಾ. ಸೂ. ೭-೧-೩೪) ಆಕಾರಾಂತವಾದ ಧಾತುವಿನ ಪರದಲ್ಲಿರುವ ಣಲ್‌ವಿಭಕ್ತಿಗೆ ಔಕಾರಾದೇಶ ಬರುತ್ತದೆ. ಇಲ್ಲಿ ಪ್ರಾ ಎಂಬುದು ಆಕಾರಾಂತವಾದುದರಿಂದ ಪರದಲ್ಲಿರುವ ಣಲ್ಲಿಗೆ ಔತ್ವಬಂದರೆ ಪಪ್ರಾ+ಔ ಎಂದಾಗುತ್ತದೆ. ವೃದ್ಧಿರೇಚಿ ಎಂಬುದರಿಂದ ವೃದ್ಧಿಯು ಬಂದು ರೂಪಸಿದ್ಧಿಯಾಗಿದೆ.

**ಪಾರ್ಥಿವಂ—ದಿತ್ಯದಿತ್ಯಾದಿತ್ಯಪತ್ಯುತ್ತರಪದಾಣ್ಣ್ಯಃ** (ಪಾ. ಸೂ. ೪-೧-೮೫) ಎಂಬ ಸೂತ್ರವಿಷಯದಲ್ಲಿ **ಪೃಥಿವ್ಯಾ ಞಾಞೌ** (ವಾರ್ತಿಕ ೨೫೫೪) ಎಂಬ ವಾರ್ತಿಕವು ಆರಬ್ಧವಾಗಿದೆ. ತಸ್ಯ ಇದಂ (ಅದರಸಂಬಂಧಿ) ಎಂಬರ್ಥದಲ್ಲಿ ಇಲ್ಲಿ ಪೃಥಿವೀಶಬ್ದದ ಮೇಲೆ ಅಞ್‌ಪ್ರತ್ಯಯ ಬಂದಿದೆ. ಞಿತ್ತಾದುದರಿಂದ ಪ್ರಕೃತಿಯ ಆದ್ಯಚ್ಚಾದ ಋಕಾರಕ್ಕೆ ವೃದ್ಧಿಬರುತ್ತದೆ. **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬುದರಿಂದ ಋಕಾರಸ್ಥಾನಕ್ಕೆ ವೃದ್ಧಿಯಾದ ಆಕಾರವು ರ ಪರವಾಗಿ ಬರುತ್ತದೆ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ತದ್ಧಿತಪ್ರತ್ಯಯ ಪರದಲ್ಲಿರುವುದರಿಂದ ಪೃಥಿವೀ ಶಬ್ದದಲ್ಲಿರುವ ಈಕಾರವು ಲೋಪವಾಗುತ್ತದೆ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಞಿದಂತವಾದದ್ದೂ ನಿದಂತವಾದದ್ದೂ ಆದ್ಯುದಾತ್ತವಾಗುತ್ತದೆ. ಎಂಬುದರಿಂದ ಇಲ್ಲಿ ಪಾರ್ಥಿವಶಬ್ದವು ಅಞಂತವಾದುದರಿಂದ ಆದ್ಯುದಾತ್ತವಾಗಿದೆ.

ರಜಃ—ರಜಂತಿ ಅಸ್ಮಿನ್ ಗಂಧರ್ವಾದಯಃ ಇತಿ ರಜಃ ಅಂತರಿಕ್ಷಂ. ರಜಸ್ಸೆಂದರೆ ಇಲ್ಲಿ ಆಕಾಶವೆಂದರ್ಥ. ಗಂಧರ್ವಾದಿದೇವತೆಗಳು ಇಲ್ಲಿ ವಿಹರಿಸುತ್ತಾರೆ. ದೇವತೆಗಳ ಸಂಚಾರಮಾರ್ಗವೇ ಆಕಾಶವಾಗಿದೆ. ರಂಜ ರಾಗೆ ಧಾತು. ಅಧಿಕರಣಾರ್ಥದಲ್ಲಿ ಅಸುನ್‌ಪ್ರತ್ಯಯ ಬಂದಿದೆ. ರಂಜ್+ಅಸುನ್ ಎಂದಿರುವಾಗ **ರಜಕರಜನರಜಃಸೂಪಸಂಖ್ಯಾನಮ್** (ಕಾ. ೬-೪-೨೪-೪) ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪಬರುತ್ತದೆ. ಅಸುನ್ ಪ್ರತ್ಯಯದಲ್ಲಿ ಅಸ್ ಉಳಿಯುತ್ತದೆ. ಪ್ರತ್ಯಯ ಸೇರಿಸಿದಾಗ ಸಕಾರಾಂತ ಶಬ್ದವಾಗುತ್ತದೆ.

**ಬದ್ಬಧೆ**—ಬಧ ಬಂಧನೆ, ಧಾತು, ಭ್ವಾದಿ, ಲಿಟ್ ಆತ್ಮನೇಪದ ಪ್ರಥಮಪುರುಷೈಕವಚನ. ಲಿಟ್ ಪರದಲ್ಲಿರುವಾಗ ಧಾತುವಿಗೆ ದ್ವಿತ್ವ ಬರುತ್ತದೆ. ಬಧ್+ಬಧ್+ಎ ಎಂದಿರುವಾಗ **ಹಲಾದಿಃ ಶೇಷಃ** (ಪಾ. ಸೂ. ೭-೪-೬೦) ಎಂಬುದರಿಂದ ಅಭ್ಯಾಸಸಂಜ್ಞೆಯುಳ್ಳ ಪೂರ್ವಖಂಡದಲ್ಲಿ ಆದಿವ್ಯಂಜನ ಮಾತ್ರ ಉಳಿಯಬೇಕಾಗಿತ್ತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಛಂದಸ್ಸಿನಲ್ಲಿ ವ್ಯತ್ಯಾಸವನ್ನು ಸ್ವೀಕರಿಸಿರುವುದರಿಂದ ಹಿಂದೆ ಹೇಳಿದಂತೆ ಯೋಗವಿಭಾಗದಿಂದ ಎಲ್ಲಾ ಕಾರ್ಯಗಳೂ ವಿಕಲ್ಪವಾಗುತ್ತವೆ ಎಂದು ಸ್ವೀಕರಿಸಿರುವುದರಿಂದಲೂ, ಇಲ್ಲಿ ಆದಿಶೇಷವು ಬಂದಿಲ್ಲ. ಅಭ್ಯಾಸದ ಧಕಾರಕ್ಕೆ **ಝಲಾಂ ಜಶ್ ಝಶಿ** (ಪಾ. ಸೂ. ೮-೪-೫೩) ಎಂಬುದರಿಂದ ದಕಾರಾದೇಶ ಬಂದಿದೆ. **ಅತಏಕಹಲ್ಮಧ್ಯೇಽನಾದೇಶಾದೇರ್ಲಿಟಿ** (ಪಾ. ಸೂ. ೬-೪-೧೨೦) ಲಿಟನ್ನು ನಿಮಿತ್ತೀಕರಿಸಿ ಯಾವ ಆದೇಶವೂ ಆದಿಯಲ್ಲಿ ಬಾರದೆ ಇರುವ ಅಂಗದ ಅವಯವವಾದ ಸಂಯುಕ್ತಹಲ್ಮಧ್ಯದಲ್ಲಿರದ ಅಕಾರಕ್ಕೆ ಏತ್ವವೂ ಅಭ್ಯಾಸಲೋಪವೂ ಬರುತ್ತದೆ ಎಂಬುದರಿಂದ ಇಲ್ಲಿ ಏತ್ವಾಭ್ಯಾಸಲೋಪಗಳು ಪ್ರಾಪ್ತವಾಗುತ್ತವೆ. ಆದರೆ ವ್ಯತ್ಯಯದಿಂದ ಅಭ್ಯಾಸದಲ್ಲಿ ಹಲಾದಿಶೇಷವನ್ನು ಮಾಡದಿರುವುದರಿಂದ ಅಂಗದ ಅಕಾರವು ಸಂಯುಕ್ತ ಹಲ್ಮಧ್ಯವಾದುದರಿಂದ ಏತ್ವಾಭ್ಯಾಸಲೋಪಗಳು ಬರುವುದಿಲ್ಲ. **ಅನುದಾತ್ತಂ ಸರ್ವಮಪಾದಾದೌ** (ಪಾ. ಸೂ. (ಪಾ. ಸೂ. ೮-೧-೧೮) ಸೂತ್ರದಿಂದ ಪಾದದ ಆದಿಯಲ್ಲಿರುವುದರಿಂದ ಇಲ್ಲಿ ನಿಘಾತಪ್ರತಿಷೇಧ ಬಂದಿದೆ.

**ತ್ವಾವಾನ್—ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ. ಸೂ. ೫-೧-೯೪) ಸೂತ್ರದಿಂದ ಅದು ಇವನಿಗೆ ಅಥವಾ ಇವನಲ್ಲಿ ಇದೆ ಎಂಬರ್ಥದಲ್ಲಿ ಮತುಪ್‌ಪ್ರತ್ಯಯವು ವಿಹಿತವಾಗಿದೆ. ಆದರೆ 'ಮತುಪ್‌ಪ್ರಕರಣೆ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯೇ ಉಪಸಂಖ್ಯಾನಂ (ವಾರ್ತಿಕಂ) ಎಂಬುದರಿಂದ ಛಂದಸ್ಸಿನಲ್ಲಿ ಯುಷ್ಮದಸ್ಮದ್ ಶಬ್ದಗಳ ಮೇಲೆ ಸಾದೃಶ್ಯಾರ್ಥದಲ್ಲಿಯೂ ಮತುಪ್ ಪ್ರತ್ಯಯ ಬರುತ್ತದೆ. ಇಲ್ಲಿ ಯುಷ್ಮದ್ ಶಬ್ದದ ಮೇಲೆ ಸಾದೃಶ್ಯಾರ್ಥದಲ್ಲಿ ಮತುಪ್ ಪ್ರತ್ಯಯ ಬಂದಾಗ ಆ ಪ್ರತ್ಯಯಪರದಲ್ಲಿರುವಾಗ **ಪ್ರತ್ಯಯೋತ್ತರಪದಯೋಶ್ಚ** (ಪಾ. ಸೂ. ೭-೨-೯೮) ಸೂತ್ರದಿಂದ ಏಕತ್ವಸಂಖ್ಯಾವಿಶಿಷ್ಟಾರ್ಥವನ್ನು ಹೇಳುವ ಯುಷ್ಮದ್ ಶಬ್ದದ ಮಪರ್ಯಂತದವರೆಗೆ ತ್ವ ಎಂಬ ಆದೇಶ ಬರುತ್ತದೆ. ತ್ವ+ಅದ್+ಮತ್ ಎಂದಿರುವಾಗ **ಶೇಷೇಲೋಪಃ** (ಪಾ. ಸೂ. ೭-೨-೯೦) ಎಂಬ ಸೂತ್ರದಿಂದ ಮಪರ್ಯಂತ ಮೇಲಿರುವ ಪ್ರಕೃತಿಭಾಗಕ್ಕೆ ಲೋಪಬರುತ್ತದೆ. **ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಮಕಾರ, ಅಕಾರ ಕೊನೆಯಲ್ಲಿರುವ ಅಥವಾ ಮಕಾರ, ಅಕಾರ ಉಪಧೆಯಾಗಿರುವ ಯವಾದಿಭಿನ್ನವಾದ ಶಬ್ದಗಳ ಪರದಲ್ಲಿರುವ ಮತುಪಿನ ಮಕಾರಕ್ಕೆ ವಕಾರ ಬರುತ್ತದೆ. ಉಪಧೆಯೆಂದರೆ ಅಂತ್ಯವರ್ಣದ ಪೂರ್ವವರ್ಣ. ಇಲ್ಲಿ ಅಕಾರಾಂತದ ಪರದಲ್ಲಿ ಇರುವುದರಿಂದ ಮತುಪಿನ ಮಕಾರಕ್ಕೆ ವಕಾರ ಬಂದಿದೆ. **ಆಸರ್ವನಾಮ್ನಃ** (ಪಾ. ಸೂ. ೬-೩-೯೧) ದೃಕ್, ದೃಶ, ವತುಪ್ ಇವುಗಳು ಪರದಲ್ಲಿರುವಾಗ ಸರ್ವನಾಮ ಶಬ್ದಗಳಿಗೆ ಆಕಾರವು ಅಂತಾದೇಶವಾಗಿ ಬರುತ್ತದೆ ಎಂಬುದರಿಂದ ಇಲ್ಲಿ ವತು ಪರದಲ್ಲಿರುವುದರಿಂದ ತ್ವ ಎಂಬುದಕ್ಕೆ ದೀರ್ಘ ಬಂದಿದೆ. ಮತುಪಿನಲ್ಲಿ ಉಕಾರ ಇತ್ತಾದುದರಿಂದ ಸರ್ವನಾಮಸ್ಥಾನ ಸಂಜ್ಞೆಯುಳ್ಳ ವಿಭಕ್ತಿ ಪರದಲ್ಲಿರುವುದರಿಂದ ನುಮಾಗಮ ಬರುತ್ತದೆ. **ಅತ್ವಸಂತಸ್ಯ ಚಾಧಾತೋಃ** (ಪಾ. ಸೂ. ೬-೪-೧೪) ಸೂತ್ರದಿಂದ ಉಪಧೆಗೆ ದೀರ್ಘ ಬರುತ್ತದೆ. ತ್ವಾವಾನ್‌ತ್+ಸ್ ಎಂದಿರುವಾಗ ಸುವಿಭಕ್ತಿಗೆ **ಹಲ್‌ಙ್ಯಾಭ್ಯೋ** (ಪಾ. ಸೂ. ೬-೧-೬೮) ಸೂತ್ರದಿಂದ ಲೋಪಬಂದರೆ ಕೊನೆಯ ತಕಾರಕ್ಕೆ ಸಂಯೋಗಾಂತಲಕ್ಷಣ ಲೋಪಬರುತ್ತದೆ. ಸಂಯೋಗಾಂತಲೋಪವು ಅಸಿದ್ಧಕಾಂಡದಲ್ಲಿ ಪಠಿತವಾದುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಲೋಪ ಬರುವುದಿಲ್ಲ.

**ವವಕ್ಷಿಥ**—ವಹ ಪ್ರಾಪಣೇ. ಧಾತು, ಭ್ವಾದಿ. ಇದಕ್ಕೆ ಇಚ್ಛಾರ್ಥದಲ್ಲಿ ಸನ್ ಬಂದಿದೆ. ಸನ್ ಪರದಲ್ಲಿರುವಾಗ **ಸನ್ಯಙೋಃ** (ಪಾ. ಸೂ. ೬-೧-೯) ಸೂತ್ರದಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸದ ಆದಿಹಲಿಗೆ ಶೇಷ ಬರುತ್ತದೆ. **ಸನ್ಯತಃ** (ಪಾ. ಸೂ. ೭-೪-೭೯) ಸನ್ ಪರದಲ್ಲಿರುವಾಗ ಅಭ್ಯಾಸದ ಅಕಾರಕ್ಕೆ ಇಕಾರ ಬರುತ್ತದೆ. ಇಲ್ಲಿಯೂ ಪ್ರಾಪ್ತವಾದರೆ ವಾ ಛಂದಸಿ ಎಂದು ಯೋಗವಿಭಾಗದಿಂದ ಸಿದ್ಧವಾದ ' ಸರ್ವೇ ವಿಧಯ ಶ್ಛಂದಸಿ ವಿಕಲ್ಪ್ಯಂತೆ ' ಎಂಬ ವಾಕ್ಯವನ್ನನುಸರಿಸಿ ಇಲ್ಲಿ ಇತ್ವವನ್ನು ಮಾಡಲಿಲ್ಲ. ವವಹ್+ಸ ಎಂದಿರುವಾಗ **ಹೋಢಃ** (ಪಾ. ಸೂ. ೮-೨-೩೧) ಸೂತ್ರದಿಂದ ಹಕಾರಕ್ಕೆ ಢಕಾರಾದೇಶ ಬರುತ್ತದೆ. **ಷಢೋಃ ಕಃ ಸಿ** (ಪಾ. ಸೂ. ೮-೨-೪೧) ಎಂಬುದರಿಂದ ಢಕಾರಕ್ಕೆ ಸಕಾರ ಪರದಲ್ಲಿರುವಾಗ ಕಕಾರ ಬರುತ್ತದೆ.. ಸನ್ ಪ್ರತ್ಯಯವಾದುದರಿಂದ ಕಕಾರದ ಪರದಲ್ಲಿರುವುದರಿಂದ ಷತ್ವ ಬರುತ್ತದೆ. ಕಕಾರ ಷಕಾರಗಳಿಗೆ ಸಂಬಂಧ ಬಂದರೆ ಕ್ಷಕಾರವಾಗುತ್ತದೆ. ವವಕ್ಷ ಎಂಬುದು ಸನ್ನಂತವಾದುದರಿಂದ **ಸನಾದ್ಯಂತಾಧಾತವಃ** (ಪಾ. ಸೂ. ೩-೧-೩೨) ಎಂಬುದರಿಂದ ಧಾತು ಸಂಜ್ಞೆ ಬರುತ್ತದೆ. ಲಿಟ್ ಮಧ್ಯಮಪುರುಷೈಕವಚನ ವಿವಕ್ಷೆಮಾಡಿದಾಗ ಧಾತುವು ಅನೇಕಾಚಾದುದರಿಂದ **ಕಾಸ್ಪ್ರತ್ಯಯಾದಾಮಮಂತ್ರೇ ಲಿಟಿ** (ಪಾ. ಸೂ. ೩-೧-೩೬) ಸೂತ್ರದಿಂದ ಆಮ್ ಪ್ರಾಪ್ತವಾದರೆ ಸೂತ್ರದಲ್ಲಿ ಅಮಂತ್ರೇ ಎಂದು ನಿಷೇಧಮಾಡಿದುದರಿಂದ ಛಂದಸ್ಸಿನಲ್ಲಿ ಆಮ್ ಬರುವುದಿಲ್ಲ. ಲಿಟ್ಪ್ರತ್ಯಯ ಪರದಲ್ಲಿರುವಾಗ ದ್ವಿತ್ವವು ಪ್ರಾಪ್ತವಾದರೂ ಅನಭ್ಯಾಸಸ್ಯ ಎಂದು ನಿಷೇಧಮಾಡಿದುದರಿಂದ ಪುನಃ ದ್ವಿತ್ವ ಬರುವುದಿಲ್ಲ. ಸಿಪ್ಪಿಗೆ ಥಲ್ ಎಂಬ ಆದೇಶವು ಬರುತ್ತದೆ. ವಲಾದಿಯಾದ ಆರ್ಧಧಾತುಕವಾದುದರಿಂದ ಥ ಎಂಬುದಕ್ಕೆ ಇಡಾಗಮ ಬಂದರೆ ಸನಿನ ಅಕಾರಕ್ಕೆ **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಲೋಪ ಬರುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ಯೋ ಅರ್ಯೋ ಮರ್ತಭೋಜನಂ ಪರಾದದಾತಿ ದಾಶುಷೇ ।
ಇಂದ್ರೋ ಅಸ್ಮಭ್ಯಂ ಶಿಕ್ಷತು ವಿ ಭಜಾ ಭೂರಿ ತೇ ವಸು ಭ-
ಕ್ಷೀಯ ತವ ರಾಧಸಃ ॥ ೬ ॥

॥ ಪದಪಾಠಃ ॥

ಯಃ । ಅರ್ಯಃ । ಮರ್ತಽಭೋಜನಂ । ಪರಾಽದದಾತಿ । ದಾಶುಷೇ ।

ಇಂದ್ರಃ । ಅಸ್ಮಭ್ಯಂ । ಶಿಕ್ಷತು । ವಿ । ಭಜ । ಭೂರಿ । ತೇ । ವಸು । ಭಕ್ಷೀಯ ।

ತವ । ರಾಧಸಃ ॥ ೬ ॥

ಸಾಯಣಭಾಷ್ಯಂ

ಅರ್ಯಃ ಸ್ವಾಮೀ ಪಾಲಯಿತಾ ಯ ಇಂದ್ರೋ ಮರ್ತಭೋಜನಂ ಸರ್ವೈರ್ಮನುಷ್ಯೈರುಪಭೋಜ್ಯಮನ್ನಂ ದಾಶುಷೇ ಚರುಪುರೋಡಾಶಾದೀನಿ ದತ್ತವತೇ ಯಜಮಾನಾಯ ಪರಾದದಾತಿ ಪ್ರಯಚ್ಛತಿ ಸ ಇಂದ್ರೋಽಸ್ಮಭ್ಯಂ ಶಿಕ್ಷತು । ತಾದೃಶಮನ್ನಂ ದದಾತು । ಅವಶಿಷ್ಟಪಾದದ್ವಯಂ ಪ್ರತ್ಯಕ್ಷಕೃತಂ । ಹೇ ಇಂದ್ರ ಅಸ್ಮಭ್ಯಂ ದಾತುಂ ಧನಂ ವಿ ಭಜ । ವಿಭಕ್ತಂ ಕುರು । ಯತಸ್ತೇ ತವ ವಸು ಧನಂ ಭೂರಿ ಬಹುಲಮಸಂಖ್ಯಾತಂ ಅತಸ್ತವ ರಾಧಸೋ ಧನಸ್ಯೈಕದೇಶಂ ಭಕ್ಷೀಯ । ಭಜೇಯ । ಪ್ರಾಪ್ನುಯಾಂ ॥ ಪರಾದದಾತಿ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ತಿಙಿ ಚೋದಾತ್ತವತೀತಿ ಗತೇರನುದಾತ್ತತ್ವಂ । ದಾಶುಷೇ । ದಾಶೃ ದಾನೇ । ದಾಶ್ವಾನ್ ಸಾಹ್ವಾನಿತಿ ಕ್ವಸುಪ್ರತ್ಯಯಾಂತೋ ನಿಪಾತ್ಯತೇ । ಚತುರ್ಥ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಭಕ್ಷೀಯ । ಭಜ ಸೇವಾಯಾಂ । ಪ್ರಾರ್ಥನಾಯಾಂ ಲಿಙ್ ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾಚ್ಛಬಭಾವಃ ಸಲೋಪಾಭಾವಶ್ಚ । ಏಕಾಚ ಇತೀಟ್ಪ್ರತಿಷೇಧಃ । ಆಗಮಾನುದಾತ್ತತ್ವೇ ಪ್ರತ್ಯಯಸ್ವರ ಏವ ಶಿಷ್ಯತೇ । ಪೂರ್ವಪದಸ್ಯಾಸಮಾನವಾಕ್ಯಗತತ್ವಾನ್ನಿಘಾತಾಭಾವಃ । ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾ ಇತಿ ವಚನಾತ್ ॥ ೬ ॥

ಪ್ರತಿಪದಾರ್ಥ

**ಅರ್ಯಃ**— ಪಾಲಕನಾದ । **ಯಃ**— ಯಾವ ಇಂದ್ರನು । **ಮರ್ತಭೋಜನಂ**— ಮಾನವನು ಭೋಗಿಸತಕ್ಕ ಅನ್ನವನ್ನು । **ದಾಶುಷೇ**— ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೆ । **ಪರಾದದಾತಿ**- ಕೊಡುತ್ತಾನೆಯೋ । **ಇಂದ್ರಃ**—ಆ ಇಂದ್ರನು । **ಅಸ್ಮಭ್ಯಂ**—ನಮಗೆ । **ಶಿಕ್ಷತು**—(ಅದೇ ಅನ್ನವನ್ನು)ಕೊಡಲಿ । (ಎಲೈ ಇಂದ್ರನೇ) **ವಿಭಜ** (ನಿನ್ನ ಧನವನ್ನು) ಹಂಚಿ ಭಾಗಮಾಡು । **ತೇ**— ನಿನ್ನ । **ವಸು**— ಧನವು । **ಭೂರಿ**—ಅಧಿಕವಾದುದು (ಆದ್ದರಿಂದ) । **ತವ**—ನಿನ್ನ । **ರಾಧಸಃ**—ಧನದ ಒಂದು ಭಾಗವನ್ನು । **ಭಕ್ಷೀಯ**- ನಾನೂ ಹೊಂದುವೆನು. ।

ಭಾವಾರ್ಥ

ಪಾಲಕನಾದ ಇಂದ್ರನು ಮಾನವರ ಉಪಭೋಗಕ್ಕೆ ಯೋಗ್ಯವಾದ ಅನ್ನವನ್ನು ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೆ ಕೊಡುವಂತೆಯೇ ನನುಗೂ ಕೊಡಲಿ. ಎಲೈ ಇಂದ್ರನೇ ನಿನ್ನ ಧನವು ಅತ್ಯಧಿಕವಾದುದು. ಅದನ್ನು ಹಂಚಿ ವಿಭಾಗಮಾಡು. ಆದರ ಒಂದು ಭಾಗವನ್ನು ನನಗೂ ಸಿಕ್ಕುವಂತೆ ಮಾಡು.

English Translation

Indra, the protector, gives the food that is fit for mortals, to the giver of oblations ; let that Indra bestow food on us ; O Indra, distribute your wealth which is abundant so that I may obtain a portion of your vast riches.

ವಿಶೇಷವಿಷಯಗಳು

**ಮರ್ತಭೋಜನಂ— ಸರ್ವೈರ್ಮನುಷ್ಯೈರುಪಭೋಜ್ಯಮನ್ನಂ ।** ಮನುಷ್ಯರು ಸೇವಿಸುವುದಕ್ಕೆ ಯೋಗ್ಯವಾದ ಅನ್ನವನ್ನು ; ಪ್ರಪಂಚದಲ್ಲಿರುವ ಪ್ರಾಣಿಕೋಟಿಗಳಲ್ಲಿ ಒಂದೊಂದು ಜಾತಿಯ ಪ್ರಾಣಿಗಳ ಆಹಾರವು ಒಂದೊಂದು ವಿಧವಾಗಿರುವುದು. ಗೋಮಹಿಷ್ಯಾದಿಗಳಿಗೆ ತೃಣ (ಹುಲ್ಲು)ವೇ ಮುಖ್ಯವಾದ ಆಹಾರವು. ವ್ಯಾಘ್ರಾದಿಗಳಿಗೆ ಮಾಂಸವು ಆಹಾರವು. ಅದರಂತೆ ಮನುಷ್ಯರಿಗೆ ಯೋಗ್ಯವಾದ ಎಂದರೆ ಸ್ವಾಭಾವಿಕವಾದ ಧಾನ್ಯಾದಿ ಆಹಾರಗಳನ್ನು ಎಂದಭಿಪ್ರಾಯವು. ಈ ಶಬ್ದಪ್ರಯೋಗವಿರುವ ಕೆಲವು ಉದಾಹರಣೆಗಳನ್ನು ಕೊಡುವೆವು.

**ರಾಸ್ವಾ ಚನೋ ಅಮೃತ ಮರ್ತಭೋಜನಂ ತ್ಮನೇ ತೋಕಾಯ ತನಯಾಯ ಮೃಳ ।**
(ಋ. ಸಂ. ೧-೧೧೪-೬)

**ವ್ಯ೧ ರ್ವೀಂ ಪೃಥ್ವೀಮಮತಿಂ ಸೃಜಾನ ಆ ನೃಭ್ಯೋ ಮರ್ತಭೋಜನಂ ಸುವಾನಃ ।**
(ಋ. ಸಂ. ೭-೩೮-೨)

**ವಿಶ್ರಯಮಾಣೋ ಅಮತಿಮುರೂಚೀಂ ಮರ್ತಭೋಜನಮಧ ರಾಸತೇ ನಃ ।**
(ಋ. ಸಂ. ೭-೪೫-೩)

**ಯತ್ತೇ ದಿವೋ ದುಹಿತರ್ಮರ್ತಭೋಜನಂ ತದ್ರಾಸ್ವ ಭುನಜಾಮಹೈ ।**
(ಋ. ಸಂ. ೭-೮೧-೫)

**ವಿಶ್ವಾ ಸೂನೋ ಸಹಸೋ ಮರ್ತಭೋಜನಾ ರಾಸ್ವ ತದ್ಯತ್ತ್ವೇಮಹೇ ।**
(ಋ. ಸ. ೭-೧೬-೪)

**ಶಿಕ್ಷತು— ಶಿಕ್ಷತಿರ್ದಾನಕರ್ಮಾ ।** (ನಿ. ೩-೨೦) ಶಿಕ್ಷತು ಎಂದರೆ ಕೊಡಲಿ ಎಂದರ್ಥವು.

**ರಾಧಸಃ**– ಧನದ. ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ರಾಧಃ ಎಂಬ ಶಬ್ದವು ಪಠಿತವಾಗಿರುವುದು. (ನಿ. ೩-೯)

ವ್ಯಾಕರಣಪ್ರಕ್ರಿಯಾ

**ಪರಾದದಾತಿ**— ಪರಾ ಎಂಬುದು ಉಪಸರ್ಗ. ಡುದಾಞ್ ದಾನೇ ಧಾತು. ಜುಹೋತ್ಯಾದಿಗೆ ಶ್ಲುವಿಕರಣ. ಶ್ಲುಪರದಲ್ಲಿರುವಾಗ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹ್ರಸ್ವ ಬರುತ್ತದೆ. **ಉಪಸರ್ಗಾಃ ಕ್ರಿಯಾಯೋಗೇ** (ಪಾ. ಸೂ. ೧-೪-೫೯) **ಗತಿಶ್ಚ** (ಪಾ. ಸೂ. ೧-೪-೬೦) ಎಂಬುದಕ್ಕೆ ಗತಿ ಸಂಜ್ಞೆಯೂ ವಿಹಿತವಾಗಿದೆ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಅನಿಟ್ಟಾಗಿಯೂ ಅಜಾದಿಯಾಗಿಯೂ ಇರುವ ಲಸ್ಥಾನಿಕ ಸಾರ್ವಧಾತುಕವು ಪರದಲ್ಲಿರುವಾಗ ಅಭ್ಯಸ್ತದ ಆದಿಯು ಉದಾತ್ತವಾಗುತ್ತದೆ. ಉಭೆ ಅಭ್ಯಸ್ತಂ ಎಂಬುದರಿಂದ ಷಷ್ಠಾಧ್ಯಾಯದ ಸೂತ್ರದಿಂದ ವಿಹಿತವಾದ ದ್ವಿತ್ವವನ್ನು ಹೊಂದಿದ ಎರಡು ಖಂಡಗಳಿಗೂ ಅಭ್ಯಸ್ತವೆಂದು ಹೆಸರು. ಈ ಸೂತ್ರದಿಂದ ಇಲ್ಲಿ ಆದ್ಯುದಾತ್ತ ಸ್ವರವು ಬಂದಿದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಉದಾತ್ತವುಳ್ಳ ತಿಙಂತವು ಪರದಲ್ಲಿರುವಾಗ ಗತಿಯು ಅನುದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಪರಾ ಎಂಬ ಗತಿಗೆ "ನಿಪಾತಾ ಆದ್ಯುದಾತ್ತಾ" ಎಂದು ಸಾಮಾನ್ಯಸೂತ್ರದಿಂದ ಪ್ರಾಪ್ತವಾದ ಆದ್ಯುದಾತ್ತವು ಬಾಧಿಸಲ್ಪಟ್ಟು ಅನುದಾತ್ತಸ್ವರವು ಬರುತ್ತದೆ.

**ದಾಶುಷೇ**— ದಾಶೃ ದಾನೇ, ಧಾತು, ಭ್ವಾದಿ. **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಈ ಮೂರು ಶಬ್ದಗಳು ನಿಪಾತಿತಗಳಾಗಿವೆ. ದಾಶೃಧಾತುವಿಗೆ ಕ್ವಸುಪ್ರತ್ಯಯವು ವಿಹಿತವಾದುದಲ್ಲದೆ ಅದಕ್ಕೆ ವಲಾದಿಲಕ್ಷಣ ಇಣ್ ನಿಷೇಧವೂ ಕ್ವಸು ಪರದಲ್ಲಿರುವಾಗ ಬರಬೇಕಾದ ಧಾತುದ್ವಿತ್ವನಿಷೇಧವೂ ನಿಪಾತದಿಂದ ಸಿದ್ಧವಾಗುತ್ತದೆ. ದಾಶ್ವಸ್ ಶಬ್ದದ ಮೇಲೆ ಚತುರ್ಥೀ ಏಕವಚನ ಪ್ರತ್ಯಯಮಾಡಿದಾಗ **ವಸೋಃ ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ವಸ್ವಂತವಾದ ಭ ಸಂಜ್ಞೆಯುಳ್ಳ ಅಂಗಕ್ಕೆ ಸಂಪ್ರಸಾರಣ ಬರುತ್ತದೆ ಎಂಬುದರಿಂದ ಇಲ್ಲಿ ಙೆ ಎಂಬ ಅಜಾದಿಪ್ರತ್ಯಯ ಪರದಲ್ಲಿರುವುದರಿಂದ ಪೂರ್ವಕ್ಕೆ (ಅಂಗಕ್ಕೆ) ಭಸಂಜ್ಞೆ ಇರುವುದರಿಂದ ಸಂಪ್ರಸಾರಣ ಬಂದಿದೆ. ಯಣ್ಣಿನ ಸ್ಥಾನಕ್ಕೆ ಬರುವ ಇಕ್ ವರ್ಣಕ್ಕೆ ಸಂಪ್ರಸಾರಣವೆಂದು ಹೆಸರು. ಇಲ್ಲಿ ವಕಾರಕ್ಕೆ ಉಕಾರ ರೂಪವಾದ ಸಂಪ್ರಸಾರಣಕ್ಕೆ ಅಟ್ ಪರದಲ್ಲಿರುವಾಗ **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಸೂತ್ರದಿಂದ ಪೂರ್ವರೂಪ ಬರುತ್ತದೆ. ದಾಶುಸ್+ಏ ಎಂದಿರುವಾಗ **ಶಾಸಿವಸಿಘಸೀನಾಂಚ** (ಪಾ. ಸೂ. ೮-೩-೬೦) **ಇಣ್** ಕವರ್ಗದ ಪರದಲ್ಲಿರುವ ಶಾಸ್, ವಸ್, ಘಸ್ ಸಂಬಂಧವಾದ ಸಕಾರಕ್ಕೆ ಮೂರ್ಧನ್ಯಾದೇಶವು ಬರುವುದು ಎಂಬುದರಿಂದ ಇಲ್ಲಿ ಸಂಪ್ರಸಾರಣದ ಪರದಲ್ಲಿರುವ ವಸ್ ಸಂಬಂಧಿ ಸಕಾರಕ್ಕೆ ಷತ್ವ ಬಂದಿದೆ. ದಾಶುಷೆ ಎಂದಾಗುತ್ತದೆ.

**ಭಕ್ಷೀಯ**— ಭಜ ಸೇವಾಯಾಂ ಧಾತು, ಭ್ವಾದಿ. **ವಿಧಿನಿಮಂತ್ರಣಾ** (ಪಾ. ಸೂ. ೩-೩-೧೬೧) ಸೂತ್ರದಿಂದ ಪ್ರಾರ್ಥನಾರ್ಥದಲ್ಲಿ ಲಿಙ್. ಆಶೀರ್ಲಿಙಿಗೆ ಆರ್ಧಧಾತುಕಸಂಜ್ಞೆ ಇದ್ದರೂ ವಿಧಿಲಿಙಿಗೆ ಲೋಕದಲ್ಲಿ ಇಲ್ಲ. ಆದರೆ **ಛಂದಸ್ಯುಭಯಥಾ** ಧಾತ್ವಧಿಕಾರದಲ್ಲಿ ವಿಹಿತವಾದ ಪ್ರತ್ಯಯಗಳೆಲ್ಲವೂ ಛಂದಸ್ಸಿನಲ್ಲಿ ಉಭಯ ಸಂಜ್ಞೆಯನ್ನು ಹೊಂದುತ್ತವೆ ಎಂಬುದರಿಂದ ಇಲ್ಲಿ ವಿಧಿಲಿಙಿಗೆ ಆರ್ಧಧಾತುಕಸಂಜ್ಞೆ ಬಂದಿದೆ. ಸಾರ್ವಧಾತುಕ ಪರದಲ್ಲಿರುವಾಗ ವಿಹಿತವಾದ ಶಪ್ ವಿಕರಣವು ಬರುವುದಿಲ್ಲ. ಲಿಙುತ್ತಮಪುರುಷೈಕವಚನಕ್ಕೆ ಇಟೋತ್ ಎಂಬ ಸೂತ್ರದಿಂದ ಅತ್ವವು ಬರುತ್ತದೆ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಲಿಙಿಗೆ ಸೀಯುಟಾಗಮವು ಬರುತ್ತದೆ. ಭಜ್+ಸೀಯ್+ಅ ಎಂದಿರುವಾಗ ಧಾತುವಿನ ಜಕಾರಕ್ಕೆ **ಚೋಃ ಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಕುತ್ವವು ಬಂದರೆ ಗಕಾರ ಬರುತ್ತದೆ. ಗಕಾರಕ್ಕೆ ಚರ್ತ್ವದಿಂದ ಕಕಾರ ಬಂದರೆ ಭಕ್+ಸೀಯ

ಎಂದಾಗುತ್ತದೆ. ಯದಾಗಮಸ್ವಾಯದಿಂದ ಸೀಯುಟ್ ಲಿಜಿಗೆ ಬಂದುದರಿಂದ ಪ್ರತ್ಯಯಾವಯವವಾದುದರಿಂದ ಕವರ್ಗದ ಪರದಲ್ಲಿ ಬಂದುದರಿಂದ ಹಿಂದೆ ಹೇಳಿದಂತೆ ಷತ್ವಬರುತ್ತದೆ. ಕಕಾರ ಷಕಾರಯೋಗದಿಂದ ಕ್ಷಕಾರವಾದಾಗ ಭಕ್ಷೀಯ ಎಂದು ರೂಪಸಿದ್ಧಿಯಾಗುತ್ತದೆ. ಆರ್ಧಧಾತುಕಸಂಜ್ಞೆ ಇರುವುದರಿಂದಲೇ ಲಿಜಿನ ಸಕಾರಕ್ಕೆ ಬರಬೇಕಾದ ಲೋಪವೂ ಬರುವುದಿಲ್ಲ. ಸೀಯುಡಾಗಮು ಬಂದಮೇಲೆ ವಲಾದಿ ಆರ್ಧಧಾತುಕವಾಗುತ್ತದೆ. ಆದರೆ **ಏಕಾಚ ಉಪದೇಶೇಽನುದಾತ್ತಾತ್** (ಪಾ. ಸೂ. ೭-೨-೧೦) ಸೂತ್ರದಿಂದ ಇಣ್ನಿಷೇಧ ಬರುತ್ತದೆ ಉಪದೇಶದಲ್ಲಿ ಏಕಾಚ್ಚಾಗಿಯೂ ಅನುದಾತ್ತವಾಗಿಯೂ ಇರುವ ಧಾತುವಿನ ಪರದಲ್ಲಿರುವ ವಲಾದಿ ಆರ್ಧಧಾತುಕಕ್ಕೆ ಇಟ್ ಬರುವುದಿಲ್ಲವೆಂದು ಆ ಸೂತ್ರದ ಅರ್ಥ. ಇಲ್ಲಿ ಭಜಧಾತುವು ಏಕಾಚ್ಚಾಗಿಯೂ ಅನುದಾತ್ತವಾಗಿಯೂ ಇರುವುದರಿಂದ ಇಟ್ ಬರುವುದಿಲ್ಲ. ಆಗವೂ ಅನುದಾತ್ತಾಃ ಎಂಬುದರಿಂದ ಸೀಯುಡಾಗಮುವು ಅನುದಾತ್ತವಾದುದರಿಂದ ಪ್ರತ್ಯಯ ಸ್ವರವು ಸತಿಶಿಷ್ಟಸ್ವರವಾಗಿರುವುದರಿಂದ ಉದಾತ್ತಸ್ವರವೇ ಉಳಿಯುತ್ತದೆ. **ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾಃ** (ವಾ ೪-೭-೧೮) ಏಕವಾಕ್ಯದಲ್ಲಿ ಅನುದಾತ್ತವಾದ ಯುಷ್ಮದಸ್ಮದಾದೇಶಗಳು ಬರುತ್ತವೆ ಎಂಬುದರಿಂದ ಇಲ್ಲಿ ಪೂರ್ವಪದವು ಸಮಾನವಾಕ್ಯದಲ್ಲಿರದಿದ್ದುದರಿಂದ ಅನುದಾತ್ತವು ಬರುವುದಿಲ್ಲ. ॥ ೬ ॥



॥ ಸಂಹಿತಾಪಾಠಃ ॥

ಮದೇಮದೇ ಹಿ ನೋ ದದಿರ್ಯೂಥಾ ಗವಾಮೃಜುಕ್ರತುಃ ।
ಸಂ ಗೃಭಾಯ ಪುರೂ ಶತೋಭಯಾಹಸ್ತ್ಯಾ ವಸು ಶಿಶೀಹಿ
ರಾಯ ಆ ಭರ ॥ ೭ ॥

ಪದಪಾಠಃ

ಮದೇಽಮದೇ । ಹಿ । ನಃ । ದದಿಃ । ಯೂಥಾ । ಗವಾಂ । ಋಜುಽಕ್ರತುಃ ।
ಸಂ । ಗೃಭಾಯ । ಪುರು । ಶತಾ । ಉಭಯಾಹಸ್ತ್ಯಾ । ವಸು । ಶಿಶೀಹಿ ।
ರಾಯಃ । ಆ । ಭರ ॥ ೭ ॥

ಸಾಯಣಭಾಷ್ಯಂ

ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಬ್ರಾಹ್ಮಣಾಚ್ಛಂಸಿನೋ ಮದೇಮದೇ ಹಿ ನೋ ದದಿರಿತಿ ವೈಕಲ್ಪಿಕೋಽನುರೂಪಸ್ತೃಚಃ। ಹೋತ್ರಕಾಣಾಮಿತಿ ಖಂಡೇ ಸೂತ್ರಿತಂ। ಮದೇಮದೇ ಹಿ ನೋ ದದಿಃ ಸುರೂಪಕೃತ್ನುಮೂತಯೇ। ಆ. ೭-೪। ಇತಿ॥

ಮದೇ ಮದೇ ಸೋಮಪಾನೇನ ಹರ್ಷೇ ಹರ್ಷೇ ಸತಿ ಋಜುಕ್ರತುರ್ಋಜುಕರ್ಮಾ ಸ ಇಂದ್ರೋ ನೋಽಸ್ಮಭ್ಯಂ ಗವಾಂ ಯೂಥಾ ಯೂಥಾನಿ ದದಿರ್ಹಿ ಗೋಯೂಥಾನಾಂ ದಾತಾ ಖಲು। ಹೇ ಇಂದ್ರ ಸ ತ್ವಂ ಪುರು। ಪುರೂಣಿ ಪ್ರಭೂತಾನಿ ಶತಾ ಶತಸಂಖ್ಯಾಕಾನಿ। ಅಪರಿಮಿತಾನೀತ್ಯರ್ಥಃ। ವಸು ವಸೂನಿ ಧನಾನ್ಯುಭಯಾಹಸ್ತ್ಯುಭಾಭ್ಯಾಂ ಹಸ್ತಾಭ್ಯಾಂ ಸಂ ಗೃಭಾಯ। ಅಸ್ಮಭ್ಯಂ ದಾತುಂ ಸಮ್ಯಗ್ಗೃಹಾಣ। ಶಿಶೀಹಿ। ಅಸ್ಮಾಂಸ್ತೀಕ್ಷ್ಣೀಕುರು। ನಿಶಿತಬುದ್ಧಿಯುಕ್ತಾನ್ ಕುರ್ವಿತ್ಯರ್ಥಃ। ರಾಯೋ ಧನಾನಿ ಹಸ್ತಯೋಃ ಸ್ಥಿತಾನ್ಯಾ ಭರ। ಆಹರ। ಪ್ರಯಚ್ಛ॥ ದದಿಃ। ಡುದಾಞ್ ದಾನೇ। ಆದೃಗಮಹನಜನ ಇತಿ ಕಿಪ್ರತ್ಯಯಃ ಯೂಥಾ। ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ। ಗವಾಂ। ಸಾವೇಕಾಚ ಇತಿ ಪ್ರಾಪ್ತಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ। ಗೃಭಾಯ। ಗ್ರಹ ಉಪಾದಾನೇ। ಛಂದಸಿ ಶಾಯಜಪಿ। । ಪಾ. ೩-೧-೮೪। ಇತಿ ಶ್ನಾಪ್ರತ್ಯಯಸ್ಯ ಶಾಯಜಾದೇಶಃ। ಹೃಗ್ರಹೋರ್ಭ ಇತಿ ಭತ್ವಂ। ಉಭಯಾಹಸ್ತ್ಯ। ಉಭಯಹಸ್ತಶಬ್ದಾದುತ್ತರಸ್ಯ ತೃತೀಯಾದ್ವಿವಚನಸ್ಯ ಸುಪಾಂ ಸುಲುಗಿತಿ ಡ್ಯಾದೇಶಃ। ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘತ್ವಂ। ಸಮಾಸಾಂತೋದಾತ್ತತ್ವೇ ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ। ವಸು। ಸುಪಾಂ ಸುಲುಗಿತಿ ವಿಭಕ್ತೇರ್ಲುಕ್। ಶಿಶೀಹಿ। ಶೋ ತನೂಕರಣೇ। ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ। ಆದೇಚ ಇತ್ಯಾತ್ವಂ। ಇದಿತ್ಯನುವೃತ್ತೌ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ। ಈ ಹಲ್ಯಘೋರಿತಿ ಧಾತೋರೀತ್ವಂ। ಪಾದಾದಿತ್ವಾನ್ನಿಘಾತಾಭಾವಃ। ರಾಯಃ। ಊಡಿದಮಿತಿ ವಿಭಕ್ತೇರುದಾತ್ತತ್ವಂ ॥ ೭॥

ಪ್ರತಿಪದಾರ್ಥ

**ಮದೇಮದೇ**— (ಸೋಮರಸಪಾನದಿಂದ) ಪುನಃ ಪುನಃ ಸಂತೋಷಯುಕ್ತನಾಗಿರಲು । **ಋಜುಕ್ರತುಃ**— ಪ್ರಾಮಾಣಿಕವಾದ ಯಜ್ಞಕರ್ಮವುಳ್ಳ ಇಂದ್ರನು । ನಃ—ನಮಗೆ । **ಗವಾಂ ಯೂಥಾ**— ಗೋವುಗಳ ಸಮೂಹವನ್ನು । **ದದಿ ಹಿ**—ಕೊಡುತ್ತಾನಲ್ಲವೇ ? (ಎಲೈ ಇಂದ್ರನೇ) । **ಪುರು**—ಪ್ರಭೂತವಾದವೂ । **ಶತಾ**—ನೂರಾರು ಬಗೆಯುಳ್ಳವೂ ಆದ । **ವಸು**—ಧನಗಳನ್ನು । **ಉಭಯಾಹಸ್ತ್ಯ**— ಎರಡು ಕೈಗಳಿಂದಲೂ । **ಸಂಗೃಭಾಯ**— ಪೂರ್ಣವಾಗಿ ತೆಗೆದುಕೊ. । **ಶಿಶೀಹಿ**—(ನಮ್ಮ ಬುದ್ಧಿಯನ್ನು)ಚುರುಕಾಗುವಂತೆ ಮಾಡು. । **ರಾಯಃ**— (ನಿನ್ನ ಕೈಯಲ್ಲಿರುವ) ಧನಗಳನ್ನು । **ಆ ಭರ**—ತಂದು ಕೊಡು.

ಭಾವಾರ್ಥ

ಪದೇ ಪದೇ ಸೋಮರಸಪಾನದಿಂದ ಅತ್ಯಧಿಕವಾದ ಸಂತೋಷಯುಕ್ತನೂ ಮತ್ತು ಪ್ರಾಮಾಣಿಕವಾದ ಯಜ್ಞಕರ್ಮವುಳ್ಳವನೂ ಆದ ಇಂದ್ರನು ನಮಗೆ ಗೋವುಗಳ ಸಮೂಹವನ್ನು ಕೊಡುವನು. ಎಲೈ ಇಂದ್ರನೇ,

ಪ್ರಭೂತವಾದುದೂ ಮತ್ತು ನೂರಾರು ಬಗೆಯುಳ್ಳವೂ ಆದ ಧನಗಳನ್ನು ಎರಡು ಕೈಗಳಲ್ಲೂ ಪೂರ್ಣವಾಗಿ ತುಂಬಿ ಕೊಂಡು ಬಂದು ನಮಗೆ ಕೊಡು. ಮತ್ತು ನಮ್ಮ ಬುದ್ಧಿಯನ್ನು ಚುರುಕಾಗುವಂತೆ ಮಾಡು.

## English Translation

( Indra ) the performer of pious acts is the giver of herds of cattle to us after being exhilerated with frequent drinking of our Soma ; take up, Indra, with both hands hundreds of wealth ; sharpen (our minds ); procure us wealth.

## ॥ ವಿಶೇಷವಿಷಯಗಳು ॥

**ಮದೇ ಮದೇ**— ಸೋಮಪಾನದಿಂದ ಸಂತೋಷವುಳ್ಳವನಾಗಿ. ಮದೇ ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ, ಇದಕ್ಕೆ ಬಹಳವಾಗಿ ಅಥವಾ ಪದೇ ಪದೆ ಹರ್ಷಯುಕ್ತನಾಗಿ ಎಂದರ್ಥವು.

**ಋಜುಕ್ರತುಃ**— **ಋಜು**–ಸತ್ಯವಾದ, **ಕ್ರತುಃ**–ಕರ್ಮವುಳ್ಳವನು ಎಂದರೆ ಇಂದ್ರನು ಮಾತಿಗೆ ತಪ್ಪುವವ ನಲ್ಲ. ಖಂಡಿತವಾಗಿಯೂ ಒಳ್ಳೆಯ ಕೆಲಸಗಳನ್ನೇ ಮಾಡುವವನು.

**ಶಿಶೀಹಿ**— **ಶೋ ತನೂಕರಣೇ ।** ನಮ್ಮ ಬುದ್ಧಿಯನ್ನು ಚುರುಕಾಗುವಂತೆ ಮಾಡು, ನಮ್ಮನ್ನು ಬುದ್ಧಿವಂತರನ್ನಾಗಿ ಮಾಡು.

## ವ್ಯಾಕರಣಪ್ರಕ್ರಿಯಾ

**ದದಿಃ**— ಡುದಾಞ್ ದಾನೇ. ಧಾತು ಜುಹೋತ್ಯಾದಿ. **ಆದೃಗಮಹನಜನಃ ಕಿಕಿನೌ ಲಿಟ್ ಚ** (ಪಾ. ಸೂ. ೩-೨-೧೭೧) ಎಂಬುದರಿಂದ ಆದಂತವಾದ ಧಾತುವಾದುದರಿಂದ ಕಿ ಪ್ರತ್ಯಯವು ಬಂದಿದೆ. ಅದು ಲಿಟ್‌ಭಾವವನ್ನು ಹೊಂದುವುದರಿಂದ ಧಾತುವಿಗೆ ದ್ವಿತ್ವವೂ ಅಭ್ಯಾಸಕ್ಕೆ ಹ್ರಸ್ವವೂ ಬರುತ್ತದೆ. ಕಿತ್ತಾದಪ್ರತ್ಯಯ ಪರದಲ್ಲಿರುವುದರಿಂದ ಆತೋಲೋಪ ಇಟಿ ಚ ಎಂಬುದರಿಂದ ಆಕಾರಲೋಪ ಬರುತ್ತದೆ. ಪ್ರತ್ಯಯಸ್ವರವು ಬಂದಿದೆ.

**ಯೂಥಾ**— ದ್ವಿತೀಯಾಬಹುವಚನ. **ಜಶ್ಶಸೋಃ ಶಿಃ** (ಪಾ. ಸೂ. ೭-೧-೨೦) ಎಂಬುದರಿಂದ ಪ್ರಥಮಾ ದ್ವಿತೀಯಾ ಬಹುವಚನಗಳಿಗೆ ಶಿ ಎಂಬುದು ಸರ್ವಾದೇಶವಾಗಿ ಬರುತ್ತದೆ. ಅದಕ್ಕೆ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಛಂದಸ್ಸಿನಲ್ಲಿ ವಿಕಲ್ಪವಾಗಿ ಶಿ **ಪ್ರತ್ಯಯಕ್ಕೆ ಲೋಪ** ಬರುತ್ತದೆ ಎಂಬುದರಿಂದ ಲೋಪ ಬರುತ್ತದೆ.

**ಗವಾಂ**— **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ಇಲ್ಲಿ ಷಷ್ಠಿಯು ಉದಾತ್ತವಾಗಬೇಕಾಗುತ್ತದೆ. ಆದರೆ ಅದಕ್ಕೆ ಅಪವಾದವಾಗಿ **ನಗೋಶ್ವನ್‌ಸಾವವರ್ಣರಾಡಂ-ಕುಂಕೃದ್ಭ್ಯಃ** (ಪಾ. ಸೂ. ೬-೧-೧೮೨) ಎಂಬ ಸೂತ್ರವು ಆರಬ್ಧವಾಗಿದೆ. ಇವುಗಳಿಗೆ ಹಿಂದೆ ಹೇಳಿದ ಕಾರ್ಯಗಳು ಬರುವುದಿಲ್ಲ. ಆದುದರಿಂದ ಅಂತೋದಾತ್ತವಾಗಲಿಲ್ಲ.

**ಗೃಭಾಯ**—ಗ್ರಹ ಉಪಾದಾನೆ ಧಾತು. ಕ್ರ್ಯಾದಿ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಕ್ರ್ಯಾದಿಗಳಿಗೆ ಶ್ನಾ ಎಂಬ ವಿಕರಣಪ್ರತ್ಯಯವು ಪ್ರಾಪ್ತವಾಗುತ್ತದೆ. ಲೋಟ್ ಮಧ್ಯಮಪುರುಷೈಕ ವಚನದ ಸಿಪ್ಪಿಗೆ ಹಿ ಎಂಬ ಆದೇಶ ಬರುತ್ತದೆ. ಹಿ ಪರದಲ್ಲಿರುವಾಗ ಶ್ನಾವಿಕರಣವು ಪ್ರಾಪ್ತವಾದರೆ **ಛಂದಸಿ ಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ಶಾಯಜಾದೇಶ ಬರುತ್ತದೆ. ಶಾಯಚಿನಲ್ಲಿ ಆಯ ಎಂಬುದು ಉಳಿಯುತ್ತದೆ. ಗೃಹಾಯ+ಹಿ ಎಂದಿರುವಾಗ **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತುಸಂಬಂಧಿ ಹಕಾರಕ್ಕೆ ಭಕಾರಾದೇಶವು ಬರುತ್ತದೆ. ಅಕಾರದ ಪರದಲ್ಲಿ ಹಿ ಬಂದಿರುವುದರಿಂದ **ಅತೋ ಹೇಃ** (ಪಾ. ಸೂ. ೬-೪.೧೦೫) ಎಂಬುದರಿಂದ ಹಿಗೆ ಲುಕ್ ಬರುತ್ತದೆ. ಗೃಭಾಯ ಎಂದು ಉಳಿಯುತ್ತದೆ.

**ಉಭಯಾಹಸ್ತ್ಯಾ**—ಉಭೌ ಚ ತೌ ಹಸ್ತೌ ಚ ಉಭಯಹಸ್ತೌ. ಉಭಯಹಸ್ತ ಶಬ್ದದ ಮೇಲೆ ತೃತೀಯಾದ್ವಿವಚನ ವಿವಕ್ಷೆಮಾಡಿದಾಗ ಉಭಯಹಸ್ತ+ಭ್ಯಾಂ ಎಂದಿರುವಾಗ **ಸುಪಾಂ ಸುಲುಕ್‌ಸವರ್ಣ** (ಪಾ. ಸೂ. ೭-೧-೩೯) ಎಂಬುದರಿಂದ ಭ್ಯಾಂ ಎಂಬ ವಿಭಕ್ತಿಗೆ ಡ್ಯಾ ಎಂಬ ಆದೇಶ ಬರುತ್ತದೆ. ಡ್ಯಾ ಎಂಬಲ್ಲಿ ಡಕಾರ ಇತ್ತಾಗುತ್ತದೆ. ಡಿತ್ತಾದುದರಿಂದ ಉಭಯಹಸ್ತ ಎಂಬ ಪ್ರಕೃತಿಯ ಟಿಗೆ (ಅಂತ್ಯವರ್ಣಕ್ಕೆ) ಲೋಪ ಬರುತ್ತದೆ. **ಅನ್ಯೇಷಾಮಪಿ ದೃಶ್ಯತೆ** (ಪಾ. ಸೂ. ೬-೩-೧೩೭) ಎಂಬುದರಿಂದ ನಿಮಿತ್ತವಿಲ್ಲದಿದ್ದರೂ ಪೂರ್ವಪದಕ್ಕೆ ದೀರ್ಘ ಬರುವುದರಿಂದ ಇಲ್ಲಿ ಉಭಯವೆಂಬ ಪೂರ್ವಪದಕ್ಕೆ ದೀರ್ಘಬಂದರೆ ಉಭಯಾಹಸ್ತ್ಯಾ ಎಂತಾಗುತ್ತದೆ. ಇಲ್ಲಿ ವಿಭಕ್ತಿಗೆ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತಸ್ವರವಿದ್ದರೂ ಇಲ್ಲಿ ಉದಾತ್ತನಿವೃತ್ತಿ ಸ್ವರದಿಂದ ಉದಾತ್ತವೇ ಬರುತ್ತದೆ. **ಸಮಾಸಸ್ಯ** (ಪಾ. ಸೂ. ೬-೧-೨೨೩) ಸೂತ್ರದಿಂದ ಸಮಾಸವು ಅಂತೋದಾತ್ತವಾಗುತ್ತದೆ. ಇದಕ್ಕೆ ಅನುದಾತ್ತವು ಪರದಲ್ಲಿರುವಾಗ ಲೋಪ ಬರುವುದರಿಂದ **ಅನುದಾತ್ತಸ್ಯಚಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಅನುದಾತ್ತಸ್ವರವುಳ್ಳ ವಿಭಕ್ತಿಯು ಉದಾತ್ತವಾಗುತ್ತದೆ ಎಂದು ಅಭಿಪ್ರಾಯ. ಉಭಯಾಹಸ್ತ್ಯಾ ಎಂಬುದು ಅಂತೋದಾತ್ತವಾಗಿಯೇ ಉಳಿಯುವುದು ಎಂದರ್ಥ.

**ವಸು**—ವಸು ಶಬ್ದದ ಮೇಲೆ ದ್ವಿತೀಯಾ ಬಹುವಚನ ಬಂದಿದೆ. ವಸು+ಶಸ್ ಎಂದಿರುವಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಶಸ್‌ವಿಭಕ್ತಿಗೆ ಲುಕ್ ಬಂದಿದೆ.

**ಶಿಶೀಹಿ**—ಶೋ ತನೂಕರಣೆ ಧಾತು. ದಿವಾದಿ. ಲೋಟ್ ಮಧ್ಯಮಪುರುಷೈಕವಚನ. ದಿವಾದಿಯಾದುದರಿಂದ ಶ್ಯನ್‌ಪ್ರಾಪ್ತವಾದರೆ **ಬಹುಲಂ ಛಂದಸಿ** ಎಂದು ಆಶ್ರಯಿಸಿ ಅಂದರೆ **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಸೂತ್ರದಿಂದ ಛಂದಸ್ಸಿನಲ್ಲಿ ವಿಕರಣಗಳು ವ್ಯತ್ಯಾಸವನ್ನು ಹೊಂದುತ್ತವೆ ಎಂಬುದರಿಂದ ಇಲ್ಲಿ ಶ್ಯನ್ನಿಗೆ ಬದಲಾಗಿ ಶ್ಲುವಿಕರಣ ಬಂದಿದೆ. **ಆದೇಚ ಉಪದೇಶೇಽಶಿತಿ** (ಪಾ. ಸೂ. ೬.೧-೪೫) ಉಪದೇಶದಲ್ಲಿ ಏಜಂತವಾದ ಧಾತುವಿಗೆ ಆತ್ವಬರುತ್ತದೆ ಎಂಬುದರಿಂದ ಇಲ್ಲಿ ಧಾತುವಿಗೆ ಆತ್ವ ಬರುತ್ತದೆ. ಶ್ಲುವಿಕರಣ ಪರದಲ್ಲಿರುವಾಗ **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಶಶಾ+ಹಿ ಎಂದಿರುವಾಗ **ಬಹುಲಂ ಛಂದಸಿ** (ಪಾ. ಸೂ. ೭-೪-೭೭) ಇತ್ ಎಂದು ಪೂರ್ವಸೂತ್ರದಿಂದ ಅನುವೃತ್ತನಾಗುತ್ತದೆ. ಛಂದಸ್ಸಿನಲ್ಲಿ ಅಭ್ಯಾಸಕ್ಕೆ ಇಕಾರಬರುತ್ತದೆ ಎಂಬುದರಿಂದ ಅಭ್ಯಾಸದ ಶಕಾರಕ್ಕೆ ಇತ್ವ ಬರುತ್ತದೆ. **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಶ್ನಾ ಮತ್ತು ಅಭ್ಯಸ್ತದ ಆಕಾರಕ್ಕೆ ಸಾರ್ವಧಾತುಕಸಂಜ್ಞೆಯಿರುವ ಕಿತ್ ಜಿತ್ತಾದ ಪ್ರತ್ಯಯಪರದಲ್ಲಿರುವಾಗ ಈತ್ವ

ಒರುತ್ತದೆ. ದ್ವಿತ್ವಹೊಂದಿದ ಸಮುದಾಯಕ್ಕೆ ಅಭ್ಯಸ್ತವೆಂದು ಹೆಸರು. ಹಿ ಎಂಬುದು ಸಾರ್ವಧಾತುಕ ಸಂಜ್ಞೆಯುಳ್ಳ ಹಲಾದಿಪ್ರತ್ಯಯವಾಗಿದೆ. ಇದು ಸಿಪ್ಪಿನ ಸ್ಥಾನಕ್ಕೆ ಬಂದರೂ **ಅಪಿಚ್ಚ** ಎಂದು ವಿಧಾನಮಾಡಿರುವುದರಿಂದ ಙಿತ್ತಾಗುತ್ತದೆ. ಆದುದರಿಂದ ಧಾತುವಿನ ಆಕಾರಕ್ಕೆ ಈತ್ವಬಂದರೆ ಶಿಶೀಹಿ ಎಂದಾಗುತ್ತದೆ. ಪಾದದ ಆದಿಯಲ್ಲಿರುವುದರಿಂದ ಅಪಾದಾದೌ ಎಂದು ನಿಷೇಧಮಾಡಿರುವುದರಿಂದ ಸರ್ವಾನುದಾತ್ತವಾಗುವುದಿಲ್ಲ.

**ರಾಯಃ**—ರೈ ಶಬ್ದದ ಮೇಲೆ ದ್ವಿತೀಯಾಬಹುವಚನ ಬಂದಿದೆ. ಸುಪ್ಪಿಗೆ ಬರುವ ಅನುದಾತ್ತಸ್ವರವು ಇಲ್ಲಿ ಬಂದಿಲ್ಲ. **ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಏಕಾಚ್ ಅಂತೋದಾತ್ತವಾಗಿರುವ ಇವುಗಳ ಮೇಲಿರುವ ಸರ್ವನಾಮಸ್ಥಾನ ಸಂಜ್ಞೆ ಇಲ್ಲದ ವಿಭಕ್ತಿಯು ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಶಸ್ಸಿಗೆ ಉದಾತ್ತಸ್ವರ ಬಂದಿದೆ. ಸತಿಶಿಷ್ಟಸ್ವರವಾದುದರಿಂದ ಉಳಿದದ್ದು ಅನುದಾತ್ತವಾಗುತ್ತದೆ. ‖ ೭ ‖



‖ ಸಂಹಿತಾಪಾಠಃ ‖

ಮಾದಯಸ್ವ ಸುತೇ ಸಚಾ ಶವಸೇ ಶೂರ ರಾಧಸೇ ।
ವಿದ್ಮಾ ಹಿ ತ್ವಾ ಪುರೂವಸುಮುಪ ಕಾಮಾನ್ತ್ಸಸೃಜ್ಮಹೇಽಥಾ
ನೋಽವಿತಾ ಭವ ॥ ೮ ॥

‖ ಪದಪಾಠಃ ‖

ಮಾದಯಸ್ವ । ಸುತೇ । ಸಚಾ । ಶವಸೇ । ಶೂರ । ರಾಧಸೇ ।
ವಿದ್ಮ । ಹಿ । ತ್ವಾ । ಪುರುಽವಸುಂ । ಉಪ । ಕಾಮಾನ್ । ಸಸೃಜ್ಮಹೇ । ಅಥ । ನಃ ।
ಅವಿತಾ । ಭವ ॥ ೮ ॥

ಸಾಯಣಭಾಷ್ಯಂ

**ಹೇ ಶೂರ ಶೌರ್ಯವನ್ನಿಂದ್ರ ಸುತೇ ಸೋಮೇಽಭಿಷುತೇ ಸತ್ಯಾಗತ್ಯ ಸಚಾಸ್ಮಾಕಂ ಸಖಾ ಸನ್ ಮಾದಯಸ್ವ । ತೇನ ಸೋಮೇನ ತೃಪ್ತೋ ಭವ । ಕಿಮರ್ಥಂ । ಶವಸೇ ಬಲಾರ್ಥಂ ರಾಧಸೇಽಸ್ಮಾಕಂ ಧನಾರ್ಥಂ ಚ । ತ್ವಾ ತ್ವಾಂ ಪುರೂವಸುಂ ಬಹುಧನಂ ವಿದ್ಮ ಹಿ । ವಯಂ ಜಾನೀಮಃ ಖಲು । ಅತೋಽಸ್ಮದೀಯಾನ್ ಕಾಮಾನ್ ಮಾತ್ರಾ ಗವಾ ವತ್ಸಾನಿವ ತ್ವಯೋಪ ಸಸೃಜ್ಮಹೇ ಹಿ। ತ್ವಯಾ ಖಲ್ವೇಕೀಕುರ್ಮಃ। ಅಥಾನಂತರಂ ನೋಽಸ್ಮಾಕಮವಿತಾಭಿಲಷಿತಫಲಪ್ರದಾನೇನ ರಕ್ಷಿತಾ ಭವ ॥ ಮಾದಯಸ್ವ । ಮದ ತೃಪ್ತಿಯೋಗೇ । ಚುರಾದಿರಾತ್ಮನೇಪದೀ। ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಣಿಚ ಏವ ಸ್ವರಃ ಶಿಷ್ಯತೇ । ಸಸೃಜ್ಮಹೇ । ಸೃಜ ವಿಸರ್ಗೇ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ। ಪ್ರತ್ಯಯಾದ್ಯುದಾತ್ತತ್ವಂ । ಅತ್ರಾಪಿ ಹಿಶಬ್ದಾನುಷಂಗಾಚ್ಛಂದಸ್ಯನೇಕಮಪಿ ಸಾಕಾಂಕ್ಷಂ ( ಪಾ. ೮-೧-೩೫ ) ಇತಿ ನಿಘಾತಪ್ರತಿಷೇಧಃ ॥ ೮ ॥**

॥ ಪ್ರತಿಪದಾರ್ಥ ॥

**ಶೂರ**— ಪರಾಕ್ರಮಶಾಲಿಯಾದ ಇಂದ್ರನೇ । **ಸುತೇ**—(ಸೋಮರಸವನ್ನು) ಹಿಂಡಿದಾಗ (ಬಂದು) । **ಸಚಾ**— (ನಮ್ಮ) ಸ್ನೇಹಿತನಾಗಿ । **ಶವಸೇ**—ಶಕ್ತ್ಯುತ್ಪಾದನೆಗಾಗಿಯೂ । **ರಾಧಸೇ**— ಧನಲಾಭಕ್ಕಾಗಿಯೂ । **ಮಾದಯಸ್ವ**—(ಸೋಮರಸಪಾನದಿಂದ) ಸಂತೃಪ್ತನಾಗು. । **ತ್ವಾ**—ನಿನ್ನನ್ನು । **ಪುರೂವಸುಂ**—ಅಧಿಕವಾದ ಧನವಂತನೆಂಬುದಾಗಿ । **ವಿದ್ಮ ಹಿ**— ತಿಳಿದೇ ಇದ್ದೇವೆ. (ಮತ್ತು) । **ಕಾಮಾನ್**—(ನಮ್ಮ)ಇಷ್ಟಾರ್ಥಗಳನ್ನು । **ಉಪ ಸಸೃಜ್ಮಹೇ**—(ನಿನ್ನಲ್ಲಿ) ಒಪ್ಪಿಸಿಕೊಳ್ಳುತ್ತೇವೆ. । **ಅಥ**— ಅನಂತರ । **ನಃ**—ನಮಗೆ । **ಅವಿತಾ**—ರಕ್ಷಕನಾಗಿ । **ಭವ**— ಆಗು. ।

॥ ಭಾವಾರ್ಥ ॥

ಪರಾಕ್ರಮಶಾಲಿಯಾದ ಎಲೈ ಇಂದ್ರನೇ, ನಾವು ಸೋಮರಸವನ್ನು ಹಿಂಡಿದಾಗ ನಮ್ಮ ಸ್ನೇಹಿತನಾಗಿ ಬಂದು ನಮ್ಮ ಶಕ್ತ್ಯುತ್ಪಾದನೆಗಾಗಿಯೂ ಧನಲಾಭಕ್ಕಾಗಿಯೂ ಸೋಮರಸ ಪಾನಮಾಡಿ ಸಂತೃಪ್ತನಾಗು. ನೀನು ಅತ್ಯಧಿಕವಾದ ಧನವಂತನೆಂದು ನಾವು ತಿಳಿದೇ ಇದ್ದೇವೆ. ಆದ್ದರಿಂದ ನಮ್ಮ ಇಷ್ಟಾರ್ಥಗಳನ್ನು ನಿನ್ನಲ್ಲಿ ಒಪ್ಪಿಸಿಕೊಳ್ಳುತ್ತೇವೆ. ಆ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವುದರಿಂದ ನಮ್ಮ ರಕ್ಷಕನಾಗಿ ಆಗು

English Translation

O hero, enjoy with us the Soma-libation for increasing our strength and wealth ; we know you to be the possesser of vast riches and express our desire to you ; be therefore our protector

॥ ವಿಶೇಷವಿಷಯಗಳು ॥

**ಸಚಾ—ಸಚೆ ಸಹೇತ್ಯರ್ಥಃ** (ನಿ.-೫-೬) ಸಚಾ ಎಂದರೆ ಸಹಿತವಾಗಿ ಎಂದರ್ಥವು.

**ಶವಸೇ**— ಬಲಾಭಿವೃದ್ಧಿಗಾಗಿ. ಓಜಃ ಪಾಜಃ ಮೊದಲಾದ ಇಪ್ಪತ್ತೆಂಟುಬಲನಾಮಗಳ ಮಧ್ಯದಲ್ಲಿ ಶವಸ್ ಶಬ್ದವು ಪಠಿತವಾಗಿರುವುದು (ನಿ ೨-೯)

**ರಾಧಸೇ**—ಧನಾರ್ಥವಾಗಿ, ಧನಲಾಭಕ್ಕಾಗಿ. ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳಲ್ಲಿ ರಾಧಸ್ ಶಬ್ದವು ಪಠಿತವಾಗಿದೆ. (ನಿ. ೨-೯)

**ಪುರುವಸುಂ**—ಬಹಳ ಧನವುಳ್ಳವನು.

**ಉಪ ಸಸೃಜ್ಮಹೇ— ಸೃಜ ವಿಸರ್ಗೇ ।** ನಮ್ಮ ಇಷ್ಟಾರ್ಥಗಳನ್ನು ನಿನ್ನಲ್ಲಿ ನಿವೇದಿಸಿಕೊಳ್ಳುತ್ತೇವೆ ಅರಿಕೆಮಾಡಿಕೊಳ್ಳುತ್ತೇವೆ.

**ಅವಿತಾ— ಅವ ರಕ್ಷಣೇ ।** ಕಾಪಾಡುವವನು, ಸಂರಕ್ಷಕನು.

॥ ವ್ಯಾಕರಣಪ್ರಕ್ರಿಯಾ ॥

**ಮಾದಯಸ್ವ**—ಮದ ತೃಪ್ತಿಯೋಗೇ ಧಾತು. ಚುರಾದಿ. **ಸತ್ಯಾಪಪಾಶ** (ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್ ಬರುತ್ತದೆ. **ಣಿಚಶ್ಚ** (ಪಾ. ಸೂ. ೧-೩-೭೪) ಎಂಬುದರಿಂದ ಣಿಜಂತವಾದುದು ಉಭಯಪದಿಯಾದರೂ ಆಕುಸ್ಮಾದಾತ್ಮನೇಪದಿನಃ ಎಂದು ವಿಶೇಷವಾಗಿ ವಿಧಿಸಿರುವುದರಿಂದ ಈ ಧಾತುವು ಆಕುಸ್ಮೀಯವಾಗಿರುವುದರಿಂದ ಕೇವಲ ಆತ್ಮನೇಪದಿಯಾಗಿದೆ. ಸನಾದ್ಯಂತವಾದುದರಿಂದ ಧಾತುಸಂಜ್ಞೆಯನ್ನು ಹೊಂದಿದೆ. ಣಿಚ್ ಪರದಲ್ಲಿರುವಾಗ ಧಾತುವಿನ ಉಪಧೆಗೆ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಸೂತ್ರದಿಂದ ದೀರ್ಘ ಬರುತ್ತದೆ. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷೈಕವಚನ ಪ್ರತ್ಯಯಮಾಡಿದಾಗ ಮಾದಿ+ಸ್ವ ಎಂದಾಗುತ್ತದೆ. ಶಪ್ ವಿಕರಣಪ್ರತ್ಯಯ ಬಂದಾಗ ಧಾತುವಿನ ಇಕಾರಕ್ಕೆ ಗುಣಾಯಾದೇಶಗಳು ಬರುತ್ತವೆ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಶಪ್ ವಿಕರಣದಲ್ಲಿ ಶಕಾರಪಕಾರ ಇತ್ತಾಗುವುದರಿಂದ ಅದುಪದೇಶವಾಗಿದೆ ಎಂಬ ತಾತ್ಪರ್ಯದಿಂದ ಅನುಬಂಧಗಳು ಅನವಯವಗಳು ಎಂಬ ಅಭಿಪ್ರಾಯದಿಂದಲೂ ಅದುಪದೇಶದ ಪರದಲ್ಲಿರುವುದರಿಂದ ಲಸ್ಥಾನಿಕ ಸಾರ್ವಧಾತುಕವು ಅನುದಾತ್ತವಾಗುತ್ತದೆ. ಆಗ ಣಿಚಿನ ಸ್ವರವೇ ಸತಿಶಿಷ್ಟವಾಗುವುದರಿಂದ ಣಿಚ್ಚಿನ ಸ್ವರವೇ ಉಳಿಯುತ್ತದೆ.

**ಸಸೃಜ್ಮಹೆ**—ಸೃಜ ವಿಸರ್ಗೇ ಧಾತು. ದಿವಾದಿ. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಶ್ಯನ್ನಿಗೆ ಬದಲಾಗಿ ಶ್ಲುವಿಕರಣ ಬರುತ್ತದೆ ಲಟ್ ಉತ್ತಮಪುರುಷ ಬಹುವಚನ ಪರದಲ್ಲಿರುವಾಗ ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸದ ಆದಿಹಲಿಗೆ ಶೇಷ ಬಂದಾಗ ಸಸೃಜ್ಮಹೆ ಎಂದಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರವು ಸತಿಶಿಷ್ಟವಾದುದರಿಂದ ಪ್ರತ್ಯಯಸ್ವರ ಬಂದಿದೆ. ಅತಿಙಂತದ ಪರದಲ್ಲಿರುವ ತಿಙಂತಕ್ಕೆ ಅನುದಾತ್ತಸ್ವರವು ಪೂರ್ಣವಾಗಿ ಬರುತ್ತದೆ. ಆದರೆ **ಛಂದಸ್ಯನೇಕಮಪಿ ಸಾಕಾಂಕ್ಷಂ** (ಪಾ. ಸೂ. ೮-೧-೩೫) ಹಿ ಎಂಬುದರೊಡನೆ ಕೂಡಿರುವ ಸಾಕಾಂಕ್ಷವಾದ ಅನೇಕ ತಿಙಂತಗಳು ಅನುದಾತ್ತವಾಗುವುದಿಲ್ಲ. ಅಪಿ ಶಬ್ದದಿಂದ ಏಕವಾದ ತಿಙಂತವೂ ನಿಘಾತವನ್ನು ಹೊಂದುವುದಿಲ್ಲ ಎಂಬುದರಿಂದ ಇಲ್ಲಿ ಪೂರ್ವದ ಹಿ ಎಂಬುದರೊಡನೆ ಸಂಬಂಧವಿರುವುದರಿಂದ ಸರ್ವಾನುದಾತ್ತ ಪ್ರತಿಷೇಧ ಬಂದಿದೆ. ॥ ೮ ॥

ಸಂಹಿತಾಪಾಠಃ

ಏತೇ ತ ಇಂದ್ರ ಜಂತವೋ ವಿಶ್ವಂ ಪುಷ್ಯಂತಿ ವಾರ್ಯಂ।
ಅಂತರ್ಹಿ ಖ್ಯೋ ಜನಾನಾಮರ್ಯೋ ವೇದೋ ಅದಾಶುಷಾಂ
ತೇಷಾಂ ನೋ ವೇದ ಆ ಭರ ॥ ೯ ॥

ಪದಪಾಠಃ

ಏತೇ । ತೇ । ಇಂದ್ರ । ಜಂತವಃ । ವಿಶ್ವಂ । ಪುಷ್ಯಂತಿ । ವಾರ್ಯಂ ।
ಅಂತಃ । ಹಿ । ಖ್ಯಃ । ಜನಾನಾಂ । ಅರ್ಯಃ । ವೇದಃ । ಅದಾಶುಷಾಂ। ತೇಷಾಂ।
ನಃ । ವೇದಃ । ಆ । ಭರ ॥ ೯ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತವ ಸ್ವಭೂತಾ ಏತೇ ಜಂತವೋ ಯಜಮಾನಲಕ್ಷಣಾ ಜನಾ ವಿಶ್ವಂ ಸರ್ವಂ ವಾರ್ಯಂ ಸರ್ವೈಃ ಸಂಭಜನೀಯಂ ಹವಿಃ ಪುಷ್ಯಂತಿ। ವರ್ಧಯಂತಿ। ಅದಾಶುಷಾಂ ಹವಿಷಾಮದಾತೄಣಾಂ ಜನಾನಾಮಂತರ್ಮಧ್ಯೇ ವಿದ್ಯಮಾನಂ ವೇದೋ ಧನಮರ್ಯಃ ಸರ್ವೇಷಾಂ ಸ್ವಾಮೀ ತ್ವಂ ಖ್ಯೋ ಹಿ । ಪಶ್ಯಸಿ ಹಿ । ಜಾನಾಸೀತ್ಯರ್ಥಃ। ತೇಷಾಮಯಜಮಾನಾನಾಂ ವೇದೋ ಧನಂ ನೋಽಸ್ಮಭ್ಯಮಾ ಭರ । ಆಹರ । ಪ್ರಯಚ್ಛೇತಿ ಯಾವತ್ । ಅಯಜಮಾನೇಷು ವಿದ್ಯಮಾನಂ ಧನಂ ಯಾಗಾನುಪಯುಕ್ತತ್ವಾ- ದ್ವ್ಯರ್ಥಮೇವ ಭವೇತ್ । ಅತಸ್ತಸ್ಯ ಧನಸ್ಯ ಸಾರ್ಥಕತ್ವಾಯ ತದೀಯಂ ಧನಮುಪಹೃತ್ಯ ಯಜಮಾ- ನೇಭ್ಯಃ ಪ್ರಯಚ್ಛೇತಿ ತಾತ್ಪರ್ಯಾರ್ಥಃ ॥ ಖ್ಯಃ । ಖ್ಯಾ ಪ್ರಕಥನೇ । ಅಯಂ ದರ್ಶನಾರ್ಥೋಽಪಿ । ವರ್ತಮಾನೇ ಛಾಂದಸೋ ಲುಙ್ । ಅಸ್ಯತಿವಕ್ತಿಖ್ಯಾತಿಭ್ಯೋಽಙಿತ್ಯಾದಿನಾ ಚ್ಲೇರಙಾದೇಶಃ । ಆತೋ. ಲೋಪ ಇಟಿ ಚೇತ್ಯಾಕಾರಲೋಪಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ! ಹಿ ಚೇತಿ ನಿಘಾತ- ಪತಿಷೇಧಃ ।' ೯ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ, । ತೇ—ನಿನಗೆ ಸೇರಿದ । ಏತೇ ಜಂತವಃ—( ಯಜ್ಞಮಾಡತಕ್ಕ ) ಈ ಸಕಲ ಜನರೂ । ವಿಶ್ವಂ—ಸಮಸ್ತವಾದುದೂ । ವಾರ್ಯಂ—(ಎಲ್ಲರಿಗೂ) ಬೇಕಾದುದೂ ಆದ ಹವಿಸ್ಸನ್ನು । ಪುಷ್ಯಂತಿ—

ಬೆಳೆಸುತ್ತಾರೆ. (ಅರ್ಪಿಸುತ್ತಾರೆ) । **ಅದಾಶುಷಾಂ**—ಹವಿಸ್ಸನ್ನು ಅರ್ಪಿಸದಿರುವ । **ಜನಾನಾಂ ಅಂತಃ**—(ಶತ್ರು) ಜನಗಳಲ್ಲಿರತಕ್ಕ । **ವೇದಃ**—ಧನವನ್ನು । **ಅರ್ಯಃ**—( ಎಲ್ಲರಿಗೂ ಒಡೆಯನಾದ ನೀನು । **ಖ್ಯಃ ಹಿ**—ತಿಳಿದೇ ಇದ್ದೀಯೆ । **ತೇಷಾಂ**—(ಯಜ್ಞಮಾಡದಿರುವ) ಆ ಜನಗಳ । **ವೇದಃ**—ಧನವನ್ನು । **ನಃ**—ನಮಗೆ । **ಆ ಭರ** ತಂದುಕೊಡು ॥

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಯಾಜಮಾನ್ಯಕ್ಕೆ ಸೇರಿದ ಈ ಸಕಲ ಯಜ್ಞಕರ್ತರೂ ಸಹ ಎಲ್ಲರಿಗೂ ಭೋಗ್ಯವಾದ ಹವಿಸ್ಸನ್ನು ಸಂಪೂರ್ಣವಾಗಿ ಬೆಳೆಯುವಂತೆ ಮಾಡುತ್ತಾರೆ. ಯಜ್ಞವನ್ನು ಮಾಡದೇ ಹವಿಸ್ಸನ್ನು ಅರ್ಪಿಸದೇ ಇರುವ ಜನರಲ್ಲಿರತಕ್ಕ ಧನವನ್ನು ಎಲ್ಲದಕ್ಕೂ ಒಡೆಯನಾದ ನೀನು ಅರಿತೇ ಇದ್ದೀಯೆ. ಹಾಗೆ ಯಜ್ಞಮಾಡದೇ ವ್ಯರ್ಥ ಮಾಡತಕ್ಕಧನವನ್ನು ತಂದು ಯಜ್ಞಮಾಡಿಸಾರ್ಥಕವಾಗಿ ಉಪಯೋಗಿಸತಕ್ಕ ನಮಗೆ ತಂದುಕೊಡು.

## English Translation

O Indra, these creatures (men) cherish the libation that may be desired by all ; lord of all, you know what riches these men who make no offerings, possess ; bring their wealth to us.

॥ ವಿಶೇಷವಿಷಯಗಳು ॥

**ತೇ ಜಂತವಃ**— ಇಲ್ಲಿ ಜಂತವಃ ಎಂಬ ಶಬ್ದವು ಪ್ರಾಣಿಗಳೆಂಬ ಅರ್ಥವನ್ನು ಸೂಚಿಸುವುದಾದರೂ ಮನುಷ್ಯರೆಂಬ ಅರ್ಥವನ್ನೇ ಹೇಳಬೇಕು. ತೇ ಎಂದರೆ ನಿನ್ನ ಅಥವಾ ಈ ಎಂಬ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು. ನಿನಗೆ ಹವಿಸ್ಸನ್ನರ್ಪಿಸುವ ಯಜಮಾನರಾದಿಯಾದ ಜನರು ಎಂದಭಿಪ್ರಾಯವು.

**ಪುಷ್ಯಂತಿ**—ಪೋಷಿಸುತ್ತಾರೆ, cherish. ಎಂದರೆ ಅಪೇಕ್ಷಿಸುತ್ತಾರೆ.

**ವಾರ್ಯಂ—ಸರ್ವೈಃ ಸಂಭಜನೀಯಂ** । ಎಲ್ಲರಿಗೂ ಬೇಕಾದ ; ಎಲ್ಲರೂ ಅಪೇಕ್ಷಿಸುವ.

**ಖ್ಯಃ ವೇದಃ—ಖ್ಯಾ ಪ್ರಕಥನೇ, ವಿದ ಜ್ಞಾನೇ** ಈ ಎರಡು ಶಬ್ದಗಳೂ ಸಮಾನಾರ್ಥ ವಾಚಕಗಳು

**ಅದಾಶುಷಾಂ**—ಕೊಡದಿರುವ ಎಂದರೆ ಇಂದ್ರನಿಗೆ ಹವಿಃ ಪ್ರದಾನಾದಿಗಳನ್ನು ಅರ್ಪಿಸದಿರುವ ; ಯಜ್ಞ ಮಾಡದಿರುವವರ.

ವ್ಯಾಕರಣಪ್ರಕ್ರಿಯಾ

ಖ್ಯಃ— ಖ್ಯಾ ಪ್ರಕಥನೆ ಧಾತು. ಅದಾದಿ. ಇದು ದರ್ಶನರೂಪಾರ್ಥದಲ್ಲಿಯೂ ಇದೆ. **ಛಂದಸಿ ಲುಙ್-ಲಙ್‌ಲಿಟಃ** ( ಪಾ. ಸೂ. ೩-೪-೬ ) ಧಾತ್ವರ್ಥ ಸಂಬಂಧವಿರುವಾಗ ಸರ್ವಕಾಲದಲ್ಲಿಯೂ ಈ ಮೂರು ಲಕಾರಗಳು ಬರುತ್ತವೆ ಎಂಬುದರಿಂದ ಇಲ್ಲಿ ವರ್ತಮಾನಾರ್ಥದಲ್ಲಿ ಲುಙ್ ಬಂದಿದೆ. ಮಧ್ಯಮಪುರುಷೈಕವಚನ ವಿವಕ್ಷಾ ಮಾಡಿದಾಗ ಸಿಪ್ ಪ್ರತ್ಯಯ ಬರುತ್ತದೆ. **ಚ್ಲಿ ಲುಙಿ** ( ಪಾ. ಸೂ. ೩-೧-೪೩ ) ಎಂಬುದರಿಂದ ಲುಙಾನಲ್ಲಿ ಚ್ಲಿ

ವಿಕರಣವು ಬರುತ್ತದೆ. ಚ್ಲಿಗೆ **ಅಸ್ಯತಿವಕ್ತಿಖ್ಯಾತಿಭ್ಯೋಽಙ್** (ಪಾ. ಸೂ. ೩-೧-೫೨) ಎಂಬುದರಿಂದ ಅಙ್ ಎಂಬ ಆದೇಶ ಬರುತ್ತದೆ. ಖ್ಯಾ+ಅ+ಸ್ ಎಂದಿರುವಾಗ **ಆತೋಲೋಪ ಇಟಿ ಚ** ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ ಬರುತ್ತದೆ. ಲುಙ್‌ನಲ್ಲಿ ಹಲಾದಿಯಾದ ಧಾತುವಿಗೆ ಅಡಾಗಮ ಪ್ರಾಪ್ತವಾಗುತ್ತದೆ. ಆದರೆ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಛಂದಸ್ಸಿನಲ್ಲಿ ಮಾಙ್‌ಯೋಗವಿಲ್ಲದಿದ್ದರೂ ಅಟ್ ಆಟ್ ಆಗಮಗಳು ಧಾತುವಿಗೆ ಬರುವುದಿಲ್ಲವೆಂಬುದರಿಂದ ಇಲ್ಲಿ ಯಾವ ಯೋಗವಿಲ್ಲದಿದ್ದರೂ ಅಡಾಗಮವು ಬರುವುದಿಲ್ಲ. **ಹಿಂಚ** (೮-೧-೩೪) ಹಿ ಎಂಬುದರಿಂದ ಕೂಡಿಕೊಂಡ ತಿಙಂತವು ಸರ್ವಾನುದಾತ್ತವಾಗುವುದಿಲ್ಲವೆಂಬುದರಿಂದ ಇಲ್ಲಿ ತಿಙತಿಙಃ ಎಂಬ ಸೂತ್ರದಿಂದ ಪ್ರಾಪ್ತವಾದ ಸರ್ವಾನುದಾತ್ತಸ್ವರವು ಬರುವುದಿಲ್ಲ. ॥ ೯ ॥



# ಎಂಭತ್ತೆರಡನೆಯ ಸೂಕ್ತವು

**ಉಪೋ ಷ್ವಿತಿ ಷಡೃಚಂ ನವಮಂ ಸೂಕ್ತಂ ಗೋತಮಸ್ಯಾರ್ಷಮೈಂದ್ರಂ । ಅಂತ್ಯಾ ಜಗತೀ । ಆದ್ಯಾಃ ಪಂಕ್ತಯಃ । ಅನುಕ್ರಾಂತಂ ಚ । ಉಪೋಷು ಷಟ್ ಜಗತ್ಯಂತಮಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಷೋಡಶಿಶಸ್ತ್ರ ಆದ್ಯಾ ಸುಸಂದೃಶಮಿತ್ಯಾದಿಕೇ ದ್ವೇ ಋಚೌ ಚ ವಿನಿಯುಜ್ಯತೇ । ಅಥ ಷೋಡಶೀತಿ ಖಂಡೇ ಸೂತ್ರಿತಂ । ಉಪೋ ಷು ಶೃಣುಹೀ ಗಿರಃ ಸುಸಂದೃಶಂ ತ್ವಾ ವಯಂ ಮಘವನ್ನಿ-ತ್ಯೇಕಾ ದ್ವೇ ಚ ಪಂಕ್ತೀ । ( ಆ. ೬-೨ ) ಇತಿ**

ಅನುವಾದವು— **ಉಪೋ ಷು** ಎಂಬುವುದು ಈ ಹದಿಮೂರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಈ ಸೂಕ್ತದಲ್ಲಿ ಆರು ಋಕ್ಕುಗಳಿರುವುವು. ಗೋತಮನೇ ಋಷಿಯು. ಇಂದ್ರನು ದೇವತೆಯು. ಪಂಕ್ತಿಛಂದಸ್ಸು ಕೊನೆಯ ಋಕ್ಕು ಮಾತ್ರ ಜಗತೀಛಂದಸ್ಕವು. ಸೂಕ್ತವಿನಿಯೋಗವು ಲೈಂಗಿಕವು. ಷೋಡಶಿ ಎಂಬ ಸೋಮಯಾಗ ವಿಶೇಷದಲ್ಲಿ ಮೊದಲನೆಯ ಋಕ್ಕು ಮತ್ತು **ಸುಸಂದೃಶಂ, ಸ ಘಾತಂ ವೃಷಣಂ** ಎಂಬ ಎರಡು ಋಕ್ಕುಗಳೂ ಶಸ್ತ್ರಮಂತ್ರಪಠನದಲ್ಲಿ ಪಂಕ್ತಿಛಂದಸ್ಸಿನ ಋಕ್ಕುಗಳನ್ನು ಪಠಿಸುವಾಗ ವಿನಿಯೋಗಿಸಲ್ಪಡುವವು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ **ಅಥ ಷೋಡಶೀ** ಎಂಬ ಖಂಡದಲ್ಲಿ **ಉಪೋ ಷು ಶೃಣುಹೀ ಗಿರಃ ಸುಸಂದೃಶಂ ಮಘವನ್ನಿತ್ಯೇಕಾ ದ್ವೇ ಚ ಪಂಕ್ತೀ** ಎಂಬ ಸೂತ್ರದಿಂದ ವಿಸ್ಪೃತವಾಗಿರುವುದು. (ಆ. ೬-೨)



॥ ಓಂ ॥

## ಸೂಕ್ತ—೮೨

॥ ಮಂಡಲ—೧ ॥ ಅನುವಾಕ—೧೩ ॥ ಸೂಕ್ತ—೮೨ ॥

॥ ಅಷ್ಟಕ— ೧ ॥ ಅಧ್ಯಾಯ— ೬ ॥ ವರ್ಗ— ೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೬ ॥

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ಇಂದ್ರಃ ॥

॥ ಛಂದಃ—೧-೫ ಪಂಕ್ತಿಃ । ೬. ಜಗತೀ ॥

॥ ಸಂಹಿತಾಪಾಠಃ ॥

ಉಪ್ರೋ ಷು ಶೃಣುಹೀ ಗಿರೋ ಮಘವನ್ಮಾತಥಾ ಇವ।
ಯದಾ ನಃ ಸೂನೃತಾವತಃ ಕರ ಆದರ್ಥಯಾಸ ಇದ್ಯೋಜಾ
ನ್ವಿಂದ್ರ ತೇ ಹರೀ ॥೧॥

ಪದಪಾಠಃ

ಉಪ್ರೋ ಇತಿ । ಸು । ಶೃಣುಹಿ । ಗಿರಃ । ಮಘ ಽ ವನ್ । ಮಾ । ಅತಥಾಃ ಽ ಇವ ।
ಯದಾ । ನಃ । ಸೂನೃತಾ ಽ ವತಃ । ಕರಃ । ಆತ್ । ಅರ್ಥಯಾಸೇ । ಇತ್ ।
ಯೋಜ । ನು । ಇಂದ್ರ । ತೇ । ಹರೀ ಇತಿ ॥ ೧ ॥

ಸಾಯಣಭಾಷ್ಯಂ

ಹೇ ಮಘವನ್ ಧನವನ್ನಿಂದ್ರ ಗಿರೋಽಸ್ಮದೀಯಾಃ ಸ್ತುತೀರುಪೋ ಉಪೈವ ಸು ಶೃಣುಹಿ। ಉಪಗತ್ಯ ಸಮ್ಯಕ್ ಶೃಣು। ಅತಥಾ ಇವ ಪೂರ್ವಂ ಯಥಾವಿಧಸ್ತ್ವಂ ತದ್ವಿಪರೀತೋ ಮಾ ಭೂಃ। ಅಸ್ಮಾಸು ಪೂರ್ವಂ ಯಥಾನುಗ್ರಹಬುದ್ಧಿಯುಕ್ತಸ್ತಥಾವಿಧ ಏವ ಭವೇತ್ಯರ್ಥಃ। ಅಪಿ ಚ ನೋಽಸ್ಮಾನ್ ಸೂನೃತಾವತಃ। ಪ್ರಿಯಸತ್ಯಾತ್ಮಿಕಾ ವಾಕ್ ಸೂನೃತಾ। ತಯಾ ಸ್ತುತಿರೂಪಯಾ ವಾಚಾ ಯುಕ್ತಾನ್ಯದಾ ಕರಃ ಕರೋಷಿ ಆದನಂತರಂ ತ್ವನುಪ್ಯರ್ಥಯಾಸ ಇತ್। ಅರ್ಥಯಸ ಏವ। ಯಾಚಯಸ ಏವ। ನ ತೂದಾಸ್ಸೇ। ಅಸ್ಮಾಭಿಃ ಪ್ರಯುಕ್ತಾಃ ಸ್ತುತೀಸ್ತ್ವಮಪಿ ಸ್ವೀಕರೋಷೀತ್ಯರ್ಥಃ। ಅತೋ ಹೇ ಇಂದ್ರ ತೇ ಹರೀ ತ್ವದೀಯಾವಶ್ವೌ ನು ಕ್ಷಿಪ್ರಂ ಯೋಜ। ರಥೇ ಯೋಜಯ॥ ಶೃಣುಹಿ। ಉತಶ್ಚ ಪ್ರತ್ಯಯಾಚ್ಛಂದಸಿ ವಾ ವಚನಮಿತಿ ವಚನಾದುತಶ್ಚ ಪ್ರತ್ಯಯಾದಿತಿ ಹೇರ್ಲುಗಭಾವಃ। ಅತಥಾ ಇವ। ತಥೇವಾಚರತಿ ತಥಾತಿ। ಸರ್ವಪ್ರಾತಿಪದಿಕೇಭ್ಯ ಇತ್ಯೇಕೇ। ಕಾ. ೩-೧-೧೧-೨। ಇತಿ ಕ್ವಿಪ್। ತಥಾತೇರಪ್ರತ್ಯಯಃ। ನ ತಥಾ ಇವ ಅತಥಾ ಇವ। ಅವ್ಯಯಪೂರ್ವಪದಪ್ರಕೃತಿಸ್ವರತ್ವಂ। ಕರಃ। ಡುಕೃಞ್ ಕರಣೇ। ಲುಙಃ ಕೃಮೃದೃರುಹಿಭ್ಯಶ್ಛಂದಸೀತಿ ಚ್ಲೇರಙಾದೇಶಃ। ನನ್ವಙಃ ಸತಿ ಶಿಷ್ಟತ್ವಾತ್ ಚಿತ್ಸ್ವರೇಣಾಂತೋದಾತ್ತೇನ ಭವಿತವ್ಯಂ। ತರ್ಹಿ ಲಙಿ ವ್ಯತ್ಯಯೇನ ಶಪ್। ನನು ಡುಕೃಞ್ ಕರಣ ಇತಿ ಭೂವಾದೌ ಪಠ್ಯತೇ। ಅತೋ ವ್ಯತ್ಯಯಃ ಕಸ್ಮಾತ್ ಕ್ರಿಯತ ಇತಿ ಚೇತ್ ನೈವಂ। ಯಸ್ಮಾದಸ್ಯ ಧಾತೋಸ್ತತ್ರ ಪಾಠೋಽನಾರ್ಷಃ। ತಥಾ ಹಿ। ಕಃ ಕರತ್ಕರತೀತ್ಯತ್ರ ಯದಾಹತುನ್ಯಾಸಕಾರಹರದತ್ತೌ ವ್ಯತ್ಯಯೇನ ಶಬಿತಿ ತಸ್ಮಾದಸ್ಯ ಧಾತೋರ್ಭೂವಾದೌ ಪಾಠೋ ನಾಸ್ತೀತಿ ಗಮ್ಯತೇ। ಕಿಂಚ ಯದ್ಯಯಂ ಪಠ್ಯೇತ ಕರದಿತ್ಯೇವಮಾದಿರೂಪಸಿದ್ಧ್ಯರ್ಥಂ ಕೃಮೃದೃರುಹಿಭ್ಯಶ್ಛಂದಸೀತಿ ಕರೋತೇರಙ್ವಿಧಾನಮನರ್ಥಕಂ ಸ್ಯಾತ್। ಅಸ್ಮಾಲ್ಲಙಃ ಶಪ್ಯಸ್ಯ ರೂಪಸ್ಯ ಸಿದ್ಧಿಃ। ಲಙ್‌ಲುಙೋರರ್ಥಭೇದಾಲ್ಲುಙ್ಯೇತದ್ರೂಪಸಿದ್ಧಯೇ ಕರ್ತವ್ಯಮಙ್ವಿಧಾನಮಿತಿ ಚೇನ್ನ। ಛಂದಸಿ ಲುಙ್‌ಲಙ್‌ಲಿಟ ಇತಿ ಲುಙಾದೀನಾಮೇಕತ್ರ ವಿಧಾನೇನಾರ್ಥಭೇದಾಭಾವಾದಿತ್ಯನೇನ ಪ್ರಕಾರೇಣಾಸ್ಮಾಭಿರ್ಧಾತುವೃತ್ತಾವಯಂ ಧಾತುರ್ನಿರಾಕೃತಃ। ಅತೋ ವ್ಯತ್ಯಯೇನೇತಿ ಸಿದ್ಧಂ। ಅರ್ಥಯಾಸೇ। ಅರ್ಥ ಯಾಚ್ಞಾಯಾಂ। ಚುರಾದಿರಾತ್ಮನೇಪದೀ। ಲೇಟ್ಯಾಡಾಗಮಃ। ಯೋಜ। ಯುಜಿರ್ ಯೋಗೇ। ಣ್ಯಂತಾಲ್ಲೋಟಿ ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ। ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ ॥ ೧ ॥

॥ ಪ್ರತಿಪದಾರ್ಥ ॥

**ಮಘವನ್**— ಧನವಂತನಾದ ಇಂದ್ರನೇ, । **ಗಿರಃ**—( ನಮ್ಮ ) ಸ್ತೋತ್ರವಾಕ್ಯಗಳನ್ನು । **ಉಪೋ**— ಸಮೀಪದಲ್ಲಿಯೇ ಬಂದು । **ಸು ಶೃಣುಹಿ**— ಚೆನ್ನಾಗಿ ಆಲಿಸಿ ಕೇಳು. । **ಅತಥಾ ಇವ** – (ನಮ್ಮ ಮೇಲೆ ಅಭಿಮಾನದಿಂದ) ಹಿಂದೆ ಇದ್ದುದಕ್ಕೆ ವ್ಯತ್ಯಾಸವಾಗಿ । **ಮಾ**— ಇರಬೇಡ. । **ನಃ**— ನಮ್ಮನ್ನು । **ಸೂನೃತಾವತಃ**— ಪ್ರಿಯವಾಗಿಯೂ ಸತ್ಯಾತ್ಮಿಕವಾಗಿಯೂ ಇರುವ ವಾಕ್ಕುಳ್ಳವರನ್ನಾಗಿ । **ಯದಾ**— ಯಾವಾಗ। **ಕರಃ**— ಮಾಡುತ್ತೀಯೋ। **ಆತ್**— ಆ ಅನಂತರ । **ಅರ್ಥಯಸೇ ಇತ್**— (ಆ ಸ್ತೋತ್ರವಾಕ್ಯಗಳನ್ನು) ಖಂಡಿತವಾಗಿಯೂ ಅಪೇಕ್ಷಿಸು

ತ್ತೀಯೆ । (ಆದ್ದರಿಂದ) **ಇಂದ್ರ**— ಎಲೈ ಇಂದ್ರನೇ । **ತೇ**— ನಿನ್ನ । **ಹರೀ**— ಕುದುರೆಗಳನ್ನು । **ನು**— ಜಾಗ್ರತೆಯಾಗಿ । **ಯೋಜ**—(ರಥಕ್ಕೆ) ಸೇರಿಸಿಕಟ್ಟು.

ಭಾವಾರ್ಥ

ಎಲೈ ಧನವಂತನಾದ ಇಂದ್ರನೇ, ನಮ್ಮ ಸ್ತೋತ್ರವಾಕ್ಕುಗಳನ್ನು ನಮ್ಮ ಸಮೀಪದಲ್ಲಿಯೇ ಬಂದು ಕೇಳು. ಹಿಂದೆ ನಮ್ಮ ಮೇಲೆ ಅಭಿಮಾನವನ್ನಿಟ್ಟಿದ್ದಂತೆಯೇ ಈಗಲೂ ಇನ್ನು ಮುಂದೆಯೂ ಇಡು. ಅದನ್ನು ಬದಲಾಯಿಸಬೇಡ. ನೀನು ಯಾವಾಗ ನಮ್ಮನ್ನು ಪ್ರಿಯವಾಗಿಯೂ ಸತ್ಯಾತ್ಮಕವಾಗಿಯೂ ಇರುವ ವಾಕ್ಕುಳ್ಳವರನ್ನಾಗಿ ಮಾಡುತ್ತೀಯೋ, ಆಗ ಖಂಡಿತವಾಗಿಯೂ ನಮ್ಮ ಸ್ತೋತ್ರಗಳನ್ನು ಅಪೇಕ್ಷಿಸಿಯೇ ತೀರುತ್ತೀಯೆ. ಆದ್ದರಿಂದ ಎಲೈ ಇಂದ್ರನೇ, ನಿನ್ನ ಕುದುರೆಗಳನ್ನು ಜಾಗ್ರತೆಯಾಗಿ ರಥಕ್ಕೆ ಸೇರಿಸಿ ಕಟ್ಟು. ಮತ್ತು ನಮ್ಮಲ್ಲಿಗೆ ದಯಮಾಡು.

## English Translation

Indra, come and hear our praises ; do not be different from what you have been ; you have made us truth-speaking men and therefore you are requested to hear our praises. quickly yoke your horses.

ವಿಶೇಷವಿಷಯಗಳು

ಈ ಋಕ್ಕಿನ ಅರ್ಥವು ಸರಿಯಾಗಿ ಹೊಂದುವುದಕ್ಕಾಗಿ ಅನೇಕ ಪದಗಳನ್ನು ಅಧ್ಯಾಹಾರಮಾಡಬೇಕಾಗಿರುವುದು. ಅರ್ಥವು ಸರಿಯಾಗಿ ಹೊಂದುವುದಿಲ್ಲ. ಈ ಸೂಕ್ತದ ಮೊದಲನೇ ಐದು ಋಕ್ಕುಗಳಲ್ಲಿ ಕೊನೆಯ ಪಾದವಾದ **ಯೋಜಾ ನ್ವಿಂದ್ರ ತೇ ಹರೀ** ಎಂಬ ವಾಕ್ಯವು ಪುನಃ ಪುನಃ ಪಠಿತವಾಗಿರುವುದು. ಪಂಕ್ತಿಛಂದಸ್ಸಿನಲ್ಲಿ ಐದು ಪಾದಗಳಿರುವವು.

**ಉಪೋ**—ಸಮೀಪದಲ್ಲಿದ್ದುಕೊಂಡು ಅಥವಾ ಸಮೀಪಕ್ಕೆ ಬಂದು ಕೇಳು ಎಂದರ್ಥವು.

**ಅತಥಾಇವ—ನ ತಥಾ ಇವ ಅತಥಾ ಇವ** । ಹಿಂದೆ ಇದ್ದಂತಲ್ಲದೆ, ಬೇರೆ ವಿಧವಾಗಿ ಎಂದರೆ ಇದುವರಿಗೂ ನಮ್ಮಲ್ಲಿ ಅನುಗ್ರಹಬುದ್ಧಿಯನ್ನಿಟ್ಟಂತೆ ಈಗಲೂ ಅದೇರೀತಿ ಇರು. ಬೇರೆ ವಿಧವಾಗಿ ಇರಬೇಡ ಎಂದಭಿಪ್ರಾಯವು.

**ಸೂನೃತಾವತಃ—ಸೂನೃತಾ** ಎಂದರೆ **ಪ್ರಿಯಸತ್ಯಾತ್ಮಿಕಾ ವಾಕ್,** ಪ್ರಿಯವೂ ಸತ್ಯವೂ ಆದ ಮಾತುಗಳು. ಅವುಗಳನ್ನುಳ್ಳವರನ್ನಾಗಿ ; ಎಂದರೆ ನಾವು ಮಾಡುವ ಸ್ತೋತ್ರರೂಪವಾದ ವಾಕ್ಯಗಳು ನಿನಗೆ ಪ್ರಿಯವಾಗಿಯೂ ಸತ್ಯದಿಂದ ಕೂಡಿಯೂ ಇರಲಿ ಎಂದಭಿಪ್ರಾಯವು.

**ಅರ್ಥಯಾಸೇ— ಯಾಚ್ಯಸೇ** । ಪ್ರಾರ್ಥಿಸಲ್ಪಡುತ್ತೀಯೆ ಎಂದರೆ ನಾವು ನಿನ್ನನ್ನು ಪ್ರಾರ್ಥಿಸುತ್ತೇವೆ.

**ಯೋಜ**— ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಅಂತ್ಯಾಕ್ಷರವು ದೀರ್ಘವಾಗಿರುವುದು.

|| ವ್ಯಾಕರಣಪ್ರಕ್ರಿಯಾ ||

**ಶೃಣುಹಿ**—ಶ್ರು ಶ್ರವಣೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷೈಕವಚನದ ಸಿಪ್ಪಿಗೆ ಹಿ ಆದೇಶ ಬಂದಿದೆ. **ಶ್ರುವಃ ಶೃಚ** (ಪಾ. ಸೂ ೩-೧-೭೪) ಶ್ರು ಧಾತುವಿಗೆ ಶೃ ಎಂಬ ಆದೇಶವೂ ಶಪ್ ಸ್ಥಾನದಲ್ಲಿ ಶ್ನುವಿಕರಣವೂ ಬರುತ್ತದೆ. ಶೃಣುಹಿ ಎಂದಿರುವಾಗ **ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್** (ಪಾ. ಸೂ. ೬-೪-೧೦೬) ಎಂಬುದರಿಂದ ಉಕಾರಾಂತಪ್ರತ್ಯಯದ ಪರದಲ್ಲಿರುವ ಹಿಗೆ ಲುಕ್ ಪ್ರಾಪ್ತವಾದರೆ **ಉತಶ್ಚ ಪ್ರತ್ಯಯಾಚ್ಛಂದಸಿ ವಾವಚನಂ** (ವಾರ್ತಿಕ) ಎಂಬುದರಿಂದ ವಿಕಲ್ಪವಿಧಾನಮಾಡಿರುವುದರಿಂದ ಹಿಗೆ ಲೋಪ ಬರುವುದಿಲ್ಲ.

**ಅತಥಾ ಇವ**—ತಥೇವ ಆಚರತಿ, ಅದರಂತೆ ಆಚರಿಸುತ್ತಾನೆ, ಎಂಬರ್ಥದಲ್ಲಿ ತಥಾತಿ ಎಂದು ಕ್ರಿಯಾಪದವಾಗುತ್ತದೆ. **ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಾ ವಕ್ತವ್ಯಃ** (ಕಾ. ವಾ. ೩-೧-೧೧-೨) ಎಲ್ಲಾ ಪ್ರಾತಿಪದಿಕದ ಮೇಲೂ ಆಚರಿಸುತ್ತಾನೆ ಎಂಬರ್ಥದಲ್ಲಿ ಕ್ವಿಪ್ ಪ್ರತ್ಯಯ ಬರುತ್ತದೆ. ಸನಾದಿಯಲ್ಲಿ ಕ್ವಿಪ್ ಸೇರಿರುವುದರಿಂದ ತದಂತಕ್ಕೆ ಧಾತು ಸಂಜ್ಞೆ ಬರುತ್ತದೆ. ಸ್ತ್ರಿಯಾಂ ಕ್ತಿನ್ ಎಂಬ ಅಧಿಕಾರದಲ್ಲಿ, **ಅಪ್ರತ್ಯಯಾತ್** (ಪಾ. ಸೂ. ೩-೩-೧೦೨) ಪ್ರತ್ಯಯಾಂತವಾದ ಧಾತುವಿನ ಮೇಲೆ ಸ್ತ್ರೀತ್ವವಿವಕ್ಷೆ ಇರುವಾಗ ಅ ಎಂಬ ಕೃತ್‌ಪ್ರತ್ಯಯವು ಬರುತ್ತದೆ. ಅದಂತವಾದುದರಿಂದ ಟಾಪ್‌ಪ್ರತ್ಯಯ ಬಂದಿದೆ. ನ ತಥಾ ಇವ ಅತಥಾ ಇವ (ಹಾಗೆ ಅದಂತೆ ಆಚರಿಸದಿರುವುದು.) **ತತ್ಪುರುಷೆ ತುಲ್ಯಾರ್ಥ** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿ ಸ್ವರವು ಬಂದಿದೆ.

**ಕರಃ**—ಡುಕೃಞ್ ಕರಣೇ ಧಾತು. ಲುಙ್ ಮಧ್ಯಮಪುರುಷೈಕವಚನ. ಲುಙ್ ಪರದಲ್ಲಿರುವಾಗ ಚ್ಲಿವಿಕರಣ ಬಂದರೆ ಅದಕ್ಕೆ ಸಿಜಾದೇಶ ಪ್ರಾಪ್ತವಾಗುತ್ತದೆ. ಇಲ್ಲಿ **ಕೃ ಮೃ ದೃರುಹಿಭ್ಯಶ್ಛಂದಸಿ** (ಪಾ. ಸೂ. ೩-೧-೫೯) ಎಂಬುದರಿಂದ ಚ್ಲಿಗೆ ಅಜಾದೇಶ ಬಂದಿದೆ. **ವ್ಯತ್ಯಯೋ ಬಹುಲಂ** ಎಂಬುದರಿಂದ ಅಙ್ ಙಿತ್ತಾದರೂ ಧಾತುವಿಗೆ ಗುಣಬರುತ್ತದೆ. **ಬಹುಲಂ ಛಂದಸ್ಯಮಾಙ್ ಯೋಗೇಪಿ** (ಪಾ. ಸೂ. ೬-೪-೭೫) ಎಂಬುದರಿಂದ ಮಾಙ್ ಯೋಗವಿಲ್ಲದಿದ್ದರೂ ಧಾತುವಿಗೆ ಅಡಾಗಮ ಬಂದಿಲ್ಲ. ಕರ್+ಅ+ಸ್ ಎಂದಿರುವಾಗ ರುತ್ವವಿಸರ್ಗಗಳು ಬಂದರೆ ಕರಃ ಎಂದಾಗುತ್ತದೆ. ಇಲ್ಲಿ ಚ್ಲಿಸ್ಥಾನಕ್ಕೆ ಅಜಾದೇಶ ಬಂದಿದೆ. ಆದುದರಿಂದ ಇಲ್ಲಿ ಚಿತ್ಸ್ವರದಿಂದ ಅಂತೋದಾತ್ತವಾಗಲಿ ಎಂದು ಶಂಕಿಸಬಹುದು. ಅಙ್ ಸ್ವರಕ್ಕೆ ಇಲ್ಲಿ ಪ್ರಾಬಲ್ಯವಿರುವುದಿಲ್ಲ. ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯಃ ಎಂದು ವಿಕರಣದಲ್ಲಿ ಆ ನ್ಯಾಯ ಬರುವುದಿಲ್ಲ. ಆದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತವಾಗಲಿ ಎನ್ನಲು ಅವಕಾಶವಿದೆ. ಹೀಗೆ ಶಂಕೆ ಬಂದರೆ ಇಲ್ಲಿ ಲಕಾರವ್ಯತ್ಯಾಸದಿಂದ ಸಮಾಧಾನ ಹೇಳಬೇಕು. ಅಂದರೆ ಲಙ್ ಲಕಾರವನ್ನು ಆಶ್ರಯಿಸುವುದರಿಂದ ದೋಷಕ್ಕೆ ಅವಕಾಶವಿಲ್ಲ. ಲಙ್‌ನಲ್ಲಿ ಚ್ಲಿವಿಕರಣ ಬರುವುದಿಲ್ಲ. ಉವಿಕರಣ ಪ್ರಾಪ್ತವಾದರೆ ವ್ಯತ್ಯಯದಿಂದ ಶಪ್ ವಿಕರಣವನ್ನು ಹೇಳಬೇಕು. ಅಡಾಗಮವು ಹಿಂದೆ ಹೇಳಿದಂತೆ ಬರುವುದಿಲ್ಲ. ಇದರಿಂದ ಉಕ್ತರೂಪಸಿದ್ಧಿಯೂ ಅನಿಷ್ಟಸ್ವರ ನಿರಾಸವೂ ಆಗುವುದು. ಆದರೆ ಹೀಗೆ ಮಾಡುವಾಗ ಇನ್ನೊಂದು ಆಶಂಕೆ ಬರುತ್ತದೆ. ಡುಕೃಞ್‌ಕರಣೆ ಎಂಬುದು ಭ್ವಾದಿಯಲ್ಲಿ ಪಾಠಮಾಡಲ್ಪಟ್ಟಿದೆ. ಭ್ವಾದಿಗೆ ಸ್ವಭಾವಸಿದ್ಧವಾದ ಶಪ್ ವಿಕರಣಪ್ರತ್ಯಯವಿರುವಾಗ ಇಲ್ಲಿ **ವ್ಯತ್ಯಯೋ ಬಹುಲಂ** ಎಂಬುದನ್ನು ಆಶ್ರಯಿಸಿ ಏಕೆ ಶಪ್ ವಿಕರಣವನ್ನು ಆಶ್ರಯಿಸಬೇಕು? ಎಂದು ಶಂಕೆಬರುತ್ತದೆ. ಈ ಶಂಕೆಯು ಪ್ರಮಾಣರಹಿತವಾದದ್ದು. ಕೃಞ್ ಧಾತುವನ್ನು ಭ್ವಾದಿಯಲ್ಲಿ ಪಾಠಮಾಡುವುದು ಪಾಣಿನಿಸಮ್ಮತವಲ್ಲ. ಅದು ಅನಾರ್ಷಪಾಠ. ಆದುದರಿಂದಲೇ **ಕಃ ಕರತ್‌ಕರತಿಕೃಧಿಕೃತೇಷ್ವನದಿತೇಃ** (ಪಾ. ಸೂ. ೮-೩-೫೦) ಎಂಬ ಸೂತ್ರ

ವಲ್ಲಿ ಕರತ್ ಕರತಿ ಎಂದು ಪಾಣಿನಿಗಳು ಹೇಳಿದುದು ಅಸಂಗತವಾಗುತ್ತದೆ. ವಾಸ್ತವವಾಗಿಯೂ ಕರೋತಿ ಎಂದುಚ್ಚರಿಸಬೇಕಿತ್ತು ಎಂದು ಶಂಕಿಸಿ ಕರತಿ ಎಂಬ ರೂಪಸಿದ್ಧಿಗೋಸ್ಕರ ನ್ಯಾಸಕಾರ ಹರದತ್ತರು ವ್ಯತ್ಯಯದಿಂದ ಶಪ್‌ಬಂದಿದೆ ಎಂದು ಸಮಾಧಾನ ಹೇಳಿರುವರು. ಸೂತ್ರವೂ ಛಂದಸ್ಸೆಂದೇ ಪರಿಗಣಿಸಲ್ಪಟ್ಟಿದೆ. ಆದುದರಿಂದ ಇದಕ್ಕೆ ಭ್ವಾದಿಯಲ್ಲಿ ಪಾಠವಿಲ್ಲವೆಂದು ತಿಳಿಯುತ್ತದೆ. ಇನ್ನೊಂದು ಜ್ಞಾಪಕವನ್ನೂ ಹೇಳಬಹುದು. ಕರತ್, ಕರತಿ ಇತ್ಯಾದಿರೂಪಸಿದ್ಧಿಗೋಸ್ಕರವೇ ಹಿಂದೆ ಹೇಳಿದಂತೆ **ಕೃಮೃದೃರುಹಿಭ್ಯಶ್ಛಂದಸಿ** ಎಂದು ಕೃಧಾತುವಿಗೆ ಅಜ್ವಿಧಾನ ಮಾಡಿರುವರು. ಇಲ್ಲವಾದರೆ ಹಾಗೆ ಅಜ್ವಿಧಾನಕ್ಕೆ ವೈಯರ್ಥ್ಯ ಬರಬೇಕಾಗುತ್ತದೆ. ಆದುದರಿಂದ ಅಂತೋದಾತ್ತ ಸ್ವರ ಪ್ರಾಪ್ತವಾದರೆ ಹಿಂದೆ ಹೇಳಿದಂತೆ ಲಙನ್ನು ಆಶ್ರಯಿಸಿ ವ್ಯತ್ಯಯದಿಂದ ಶಬ್ವಿಕರಣದಿಂದ ರೂಪಸಿದ್ಧಿಯಾಗುತ್ತದೆ. ಇಲ್ಲಿ ಸೂತ್ರಜ್ಞಾಪಕದಿಂದ ಕೃಞ್‌ಧಾತುವು ಭ್ವಾದಿಯಲ್ಲಿ ಇಲ್ಲ ಎಂಬುದರಲ್ಲಿ ಪೂರ್ವಪಕ್ಷಿಯು ಆಕ್ಷೇಪಿಸುತ್ತಾನೆ. ಲುಙ್ ಮತ್ತು ಲಙ್ ಲಕಾರಗಳಿಗೆ ವಾಸ್ತವವಾದ ಅರ್ಥಭೇದವಿದೆ. ಆದುದರಿಂದ ಲುಙಃನಲ್ಲಿ ಮಾತ್ರ ರೂಪಸಿದ್ಧಿಯಾಗಬೇಕೆಂದು ಕೃಮೃ ಸೂತ್ರದಲ್ಲಿ ಅಙ್‌ವಿಧಾನಮಾಡಿರುತ್ತಾರೆ. ಆದುದರಿಂದ ವೈಯರ್ಥ್ಯಕ್ಕೆ ಅವಕಾಶವಿಲ್ಲ. ಇದರಿಂದ ಭ್ವಾದಿಯಲ್ಲಿ ಇಲ್ಲವೆಂದು ಜ್ಞಾಪಿಸಲು ಎಡೆಯಿಲ್ಲವೆಂದು ಅವನ ಅಭಿಪ್ರಾಯ. ಆದರೆ ಇದು ಸರಿಯಾದುದಲ್ಲ. ಛಂದಸ್ಸಿನಲ್ಲಿ ಕಾಲತ್ರಯದಲ್ಲಿಯೂ ಯಾವ ವ್ಯತ್ಯಾಸವೂ ಇಲ್ಲದೇನೇ **ಛಂದಸಿ ಲುಙ್ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬ ಸೂತ್ರದಿಂದ ಮೂರು ಲಕಾರಗಳು ಬರುತ್ತವೆ. ಆದ್ದರಿಂದ ಅರ್ಥಭೇದವು ಎಲ್ಲಿಂದ ಬರಬೇಕು ? ಇದನ್ನು ಆಶ್ರಯಿಸಿಯೇ ನ್ಯಾಸಕಾರಹರದತ್ತರ ಮತವನ್ನೂ ಸೂತ್ರಜ್ಞಾಪಕವನ್ನೂ ನಾವು ಆಶ್ರಯಿಸಿ ಭ್ವಾದಿಯಲ್ಲಿ ಈ ಧಾತುಪಾಠವಿಲ್ಲವೆಂದು ನಿರಾಕರಿಸಿದ್ದೇವೆ. ರೂಪಸಿದ್ಧಿಗೋಸ್ಕರ **ವ್ಯತ್ಯಯೋ ಬಹುಲಂ** ಎಂಬುದನ್ನು ಆಶ್ರಯಿಸಿರುತ್ತೇನೆ.

**ಅರ್ಥಯಾಸೆ**—ಅರ್ಥ ಯಾಚ್ಞಾಯಾಂ ಧಾತು. ಚುರಾದಿ. ಆಕುಸ್ಮಾದಾತ್ಮನೇಪದಿನಃ ಎಂದು ವಿಶೇಷವಾಗಿ ವಿಧಾನಮಾಡಿರುವುದರಿಂದ ಣಿಚ್ಚನ್ನು ಹೊಂದಿದರೂ ಕೇವಲ ಆತ್ಮನೇಪದಪ್ರತ್ಯಯಗಳನ್ನು ಹೊಂದುತ್ತದೆ. ಲೇಟ್ ಮಧ್ಯಮಪುರುಷೈಕವಚನ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಸೂತ್ರದಿಂದ ಲೇಟಿನ ತಿಙಃಗೆ ಆಡಾಗಮ ಬಂದಿದೆ. ಶಪ್‌ವಿಕರಣ ಬಂದಾಗ ಣಿಚ್ಚಿಗೆ ಗುಣಾಯಾದೇಶಗಳು ಬರುತ್ತವೆ.

**ಯೋಜ**—ಯುಜಿರ್ ಯೋಗೆ ಧಾತು. ರುಧಾದಿ. ಪ್ರೇರಣಾರ್ಥದಲ್ಲಿ **ಹೇತುಮತಿಚ** ( ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಪ್ರತ್ಯಯ ಬರುತ್ತದೆ. ಣಿಚ್ ಪರದಲ್ಲಿರುವಾಗ **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಉಪಧೆಗೆ ಗುಣಬರುತ್ತದೆ ಯೋಜಿ ಎಂಬ ಣ್ಯಂತರೂಪವು ಸನಾದ್ಯಂತವಾದುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ವಿಧ್ಯರ್ಥದಲ್ಲಿ ಲೋಟ್ ಮಧ್ಯಮಪುರುಷೈಕವಚನಕ್ಕೆ ಹಿ ಎಂಬ ಆದೇಶವು ಬರುತ್ತದೆ. ಶಪ್‌ವಿಕರಣಪ್ರತ್ಯಯವು ಬರುತ್ತದೆ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಶಪ್‌ವಿಕರಣಕ್ಕೆ ಆರ್ಧಧಾತುಕಸಂಜ್ಞೆಯು ಬರುತ್ತದೆ ಯೋಜಿ+ಅ+ಹಿ ಎಂದಿರುವಾಗ **ಣೇರನಿಟಿ** (ಪಾ. ಸೂ. ೬-೪-೫೧) ಅನಿಟಾದಿಯಾದ ಆರ್ಧಧಾತುಕವು ಪರದಲ್ಲಿರುವಾಗ ಣಿಗೆ ಲೋಪ ಬರುತ್ತದೆ. ಎಂಬುದರಿಂದ ಇಲ್ಲಿ ಣಿಗೆ ಲೋಪ ಬರುತ್ತದೆ. ಅತೋ ಹೇಃ ಎಂಬುದರಿಂದ ಅಕಾರದ ಪರದಲ್ಲಿರುವ ಹಿಗೆ ಲೋಪ ಬರುತ್ತದೆ. ಯೋಜ್+ಅ ಯೋಜ ಎಂದು ಸಿದ್ಧವಾಗುತ್ತದೆ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ದ್ವ್ಯಚ್ಕವಾದ ತಿಙಂತದ ಕೊನೆಯ ಅಕಾರಕ್ಕೆ ದೀರ್ಘ ಬರುತ್ತದೆ ಎಂಬುದರಿಂದ ಮಂತ್ರದಲ್ಲಿ ಯೋಜಾ ಎಂದು ದೀರ್ಘಬಂದಿದೆ ||೧||

ಸಂಹಿತಾಪಾಠಃ

ಅಕ್ಷನ್ನಮೀಮದಂತ ಹ್ಯವ ಪ್ರಿಯಾ ಅಧೂಷತ ।
ಅಸ್ತೋಷತ ಸ್ವಭಾನವೋ ವಿಪ್ರಾ ನವಿಷ್ಠಯಾ ಮತೀ ಯೋಜಾ
ನ್ವಿಂದ್ರ ತೇ ಹರೀ ॥ ೨ ॥

ಪದಪಾಠಃ

ಅಕ್ಷನ್ । ಅಮೀಮದಂತ । ಹಿ । ಅವ । ಪ್ರಿಯಾಃ । ಅಧೂಷತ ।
ಅಸ್ತೋಷತ । ಸ್ವಽಭಾನವಃ । ವಿಪ್ರಾಃ । ನವಿಷ್ಠಯಾ । ಮತೀ । ಯೋಜ । ನು ।
ಇಂದ್ರ । ತೇ । ಹರೀ ಇತಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಯಾ ದತ್ತಾನ್ಯನ್ನಾನ್ಯಕ್ಷನ್ । ಯಜಮಾನಾ ಭುಕ್ತವಂತಃ । ಭುಕ್ತ್ವಾ ಚಾಮೀಮದಂತ ಹಿ । ತೃಪ್ತಾಶ್ಚಾಸನ್ । ಪ್ರಿಯಾಃ ಸ್ವಕೀಯಾಸ್ತನೂರವಾಧೂಷತ । ಅಕಂಪಯನ್ । ಅತಿಶಯಿತರಸಾಸ್ವಾದನೇನ ವಕ್ತುಮಶಕ್ನುವಂತಃ ಶರೀರಾಣ್ಯಕಂಪಯನ್ । ತದನಂತರಂ ಸ್ವಭಾನವಃ ಸ್ವಾಯತ್ತದೀಪ್ತಯೋ ವಿಪ್ರಾ ಮೇಧಾವಿನಸ್ತೇ ನವಿಷ್ಠಯಾ ನವಿತೃತಮಯಾ ಮತೀ ಮತ್ಯಾ ಸ್ತುತ್ಯಾಽಸ್ತೋಷತ । ಅಸ್ತುವನ್ । ಅನ್ಯತ್ಪೂರ್ವವದ್ಯೋಜ್ಯಂ ॥ ಅಕ್ಷನ್ । ಅದೇರ್ಲುಙಿ ಲುಙ್ಸನೋರ್ಘಸ್ಲೃ । ಪಾ. ೨-೪-೩೭ । ಇತಿ ಘಸ್ಲಾದೇಶಃ । ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ಗಮಹನೇತ್ಯಾದಿನೋಪಧಾಲೋಪಃ । ಖರಿ ಚೇತಿ ಚರ್ತ್ವಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಅಡಾಗಮ ಉದಾತ್ತಃ । ಅಮೀಮದಂತ । ಮದ ತೃಪ್ತಿಯೋಗೇ । ಚುರಾದಿರಾತ್ಮನೇಪದೀ । ಲುಙಿ ಚ್ಲೇಶ್ಚಙಿ ಣಿಲೋಪೋಪಧಾಹ್ರಸ್ವತ್ವದ್ವಿರ್ಭಾವಸನ್ವದ್ಭಾವೇತ್ವದೀರ್ಘಾಃ । ಅಧೂಷತ । ಧೂಞ್ ಕಂಪನೇ । ಲುಙಿ ಸಿಚಿ ವ್ಯತ್ಯಯೇನ ಗುಣಾಭಾವಃ । ಯದ್ವಾ । ಛಂದಸ್ಯುಭಯಥೇತಿ ಸಿಚಃ ಸಾರ್ವಧಾತುಕತ್ವೇನ ಙಿತ್ತ್ವಾತ್ ಕ್ಙಿತಿ ಚೇತಿ ಪ್ರತಿಷೇಧಃ । ಅಥವಾ ಧೂ ವಿಧೂನನೇ । ತೌದಾದಿಕಃ । ಕುಟಾದಿಃ । ಅಸ್ಮಾತ್ಕರ್ಮಣಿ ಲುಙಿ ಗಾಙ್ಕುಟಾದಿಭ್ಯ ಇತಿ ಸಿಚೋ ಙಿತ್ತ್ವಾದ್ಗುಣಾಭಾವಃ । ನವಿಷ್ಠಯಾ । ಣು ಸ್ತುತೌ । ಕರಣಭೂತಾಯಾ ಅಪಿ ಸ್ತುತೇಃ ಸ್ವವ್ಯಾಪಾರೇ ಕರ್ತೃತ್ವಾತ್ತೃಚ್ । ತದಂತಾತ್ ತುಶ್ಛಂದಸೀತೀಷ್ಠನ್ಪ್ರತ್ಯಯಃ । ತುರಿಷ್ಠೇಮೇ-

**ಯಃಸ್ಸ್ವಿತಿ ತ್ರಲೋಪಃ । ಮತೀ । ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘತ್ವಂ । ಮಂತ್ರೇ ವೃಷೇಷಪಚಮನೇತಿ ಕ್ತಿನ ಉದಾತ್ತತ್ವಂ ॥ ೨ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಅಕ್ಷನ್**—(ನೀನು ದಯಪಾಲಿಸಿದ ಅನ್ನಗಳನ್ನು) ತಿಂದವರಾಗಿ । **ಅಮೀಮದಂತ ಹಿ**—(ಯಜಮಾನರು) ಸಂಪೂರ್ಣವಾಗಿ ತೃಪ್ತರಾದರು. । **ಪ್ರಿಯಾಃ**— (ತಮ್ಮ) ಪ್ರಿಯವಾದ ದೇಹಗಳನ್ನು । **ಅವ ಅಧೂಷತ**— (ಸಂತೋಷಾತಿಶಯದಿಂದ) ಚೆನ್ನಾಗಿ ಕಂಪಿಸುವಂತೆ ಮಾಡಿದರು. (ಎಂದರೆ ಸಂತೋಷದಿಂದ ತಲೆದೂಗಿದರು) । **ಸ್ವಭಾನವಃ**— ಸ್ವಯಂ ಪ್ರಕಾಶಕರೂ । **ವಿಪ್ರಾಃ**— ಮೇಧಾವಿಗಳೂ ಆದ ಅವರು । **ನವಿಷ್ಠಯಾ**— ಅತ್ಯಂತ ಹೊಸದೂ ಮತ್ತು ಶ್ರೇಷ್ಠವೂ ಆದ । **ಮತೀ**—ಸ್ತೋತ್ರದಿಂದ । **ಅಸ್ತೋಷತ**— (ನಿನ್ನನ್ನು) ಸ್ತುತಿಸಿದ್ದಾರೆ. (ಆದ್ದರಿಂದ) । **(ಇಂದ್ರ**— ಎಲೈ ಇಂದ್ರನೇ) । **ತೇ**— ನಿನ್ನ । **ಹರೀ**— ಕುದುರೆಗಳನ್ನು । **ನು**— ಜಾಗ್ರತೆಯಾಗಿ । **ಯೋಜ**—(ರಥಕ್ಕೆ) ಸೇರಿಸಿಕಟ್ಟು. ।

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ದಯಪಾಲಿಸಿದ ಅನ್ನಗಳನ್ನು ತಿಂದು ನಿನ್ನ ಭಕ್ತರಾದ ಯಜಮಾನರು ಸಂಪೂರ್ಣವಾಗಿ ತೃಪ್ತರಾದರು. ಮತ್ತು ತಮ್ಮ ಅತಿಶಯವಾದ ಸಂತೋಷವನ್ನು ತಮ್ಮ ದೇಹಗಳ ಕಂಪನದ ಮೂಲಕ ವ್ಯಕ್ತಪಡಿಸಿದರು. ಎಂದರೆ ಸಂತೋಷಸೂಚಕವಾಗಿ ತಲೆಯನ್ನಲ್ಲಾಡಿಸಿದರು. ಸ್ವಯಂ ಪ್ರಕಾಶಕರೂ, ಮೇಧಾವಿಗಳೂ ಆದ ಆ ಯಜಮಾನರು ಅತ್ಯಂತ ಹೊಸದೂ ಶ್ರೇಷ್ಠವಾದುದೂ ಆದ ಸ್ತೋತ್ರದಿಂದ ನಿನ್ನನ್ನು ಸ್ತುತಿಸಿದ್ದಾರೆ. ಆ ಸ್ತೋತ್ರವನ್ನು ಕೇಳುವುದಕ್ಕಾಗಿ ನಿನ್ನ ಕುದುರೆಗಳನ್ನು ರಥಕ್ಕೆ ಕಟ್ಟಿಕೊಂಡು ಜಾಗ್ರತೆಯಾಗಿ ದಯಮಾಡು.

English Translation

Your worshippers have eaten the food which you had given and they are satisfied with it ; they have expressed their satisfaction by the movements of their bodies. Self-inspired and wise men have glorified you with commendable praises ; therefore, Indra quickly yoke your horses.

ವಿಶೇಷವಿಷಯಗಳು

**ಅಕ್ಷನ್**—ಅದ ಭಕ್ಷಣೇ । ತಿಂದವರಾಗಿ.

**ಅಧೂಷತ**— ಅತಿಶಯಿತರಸಾಸ್ವಾದನೇನ ವಕ್ತುಮಶಕ್ನುವಂತಃ ಶರೀರಾಣ್ಯಕಂಪಯನ್ । ಇಂದ್ರನು ಕೊಟ್ಟ ಆಹಾರವು ಬಹಳ ರುಚಿಕರವಾಗಿದ್ದುದರಿಂದ ಅದನ್ನು ತಿಂದು ತಮ್ಮ ಮೆಚ್ಚುಗೆಯನ್ನೂ ತೃಪ್ತಿಯನ್ನೂ ಸೂಚಿಸುವುದಕ್ಕಾಗಿ ಶರೀರವನ್ನು ಅಥವಾ ತಲೆಯನ್ನಲ್ಲಾಡಿಸಿದರೆಂದಭಿಪ್ರಾಯವು. ಲೋಕ ವ್ಯವಹಾರದಲ್ಲಿ ಸಂಗೀತಾದಿಶ್ರವಣಕಾಲದಲ್ಲಿ ನಮ್ಮ ಮನಸ್ಸಿಗೆ ಉಂಟಾಗುವ ಹರ್ಷಾತಿಶಯವನ್ನು ನಾವು ಬಾಯಿನಿಂದ ಹೇಳುವ

ದಕ್ಕೆ ಬದಲಾಗಿ ನಮ್ಮ ಮೆಚ್ಚುಗೆಯನ್ನು ಸೂಚಿಸುವುದಕ್ಕೆ ತಲೆಯನ್ನಲ್ಲಾಡಿಸುವುದು ರೂಢಿಯಷ್ಟೆ. ಆದರಂತೆ ಇಲ್ಲಿಯೂ ಊಹಿಸಿಕೊಳ್ಳಬೇಕು.

**ಸ್ವಭಾನವಃ—ಸ್ವಾಯತ್ತದೀಪ್ತಯಃ ।** ಸ್ವಪ್ರಕಾಶಮಾನರು ಎಂದರೆ ತಮ್ಮ ಬುದ್ಧಿಯಿಂದಲೇ ಎಲ್ಲವನ್ನು ಗ್ರಹಿಸುವವರು, ಬಹಳ ಬುದ್ಧಿವಂತರು, ಬಹುಚುರುಕಾದ ಬುದ್ಧಿಯುಳ್ಳವರು.

**ನವಿಷ್ಠಯಾ—ಋ ಸ್ತುತಾ ।** ಸ್ತುತಿರೂಪವಾದ ಅಥವಾ ಪ್ರಶಂಸೆಯಿಂದ ಕೂಡಿದ.

ವ್ಯಾಕರಣಪ್ರಕ್ರಿಯಾ

**ಅಕ್ಷನ್**—ಅದ ಭಕ್ಷಣೆ ಧಾತು. ಅದಾದಿ ಲುಙ್ ಪ್ರಥಮಪುರುಷ ಬಹುವಚನ. ಲುಙ್ ಪರದಲ್ಲಿರುವಾಗ **ಲುಙ್‌ಸನೋರ್ಘಸ್ಲೃ** (ಪಾ. ಸೂ. ೨-೪-೩೭) ಲುಙ್ ಮತ್ತು ಸನ್ ಪರದಲ್ಲಿರುವಾಗ ಅದ ಧಾತುವಿಗೆ ಘಸ್ಲೃ ಆದೇಶ ಬರುತ್ತದೆ ಎಂಬುದರಿಂದ ಇಲ್ಲಿ ಘಸ್ಲೃ ಆದೇಶ ಬರುತ್ತದೆ. ಲೃಕಾರವು ಇತ್ಸಂಜ್ಞೆಯನ್ನು ಹೊಂದುತ್ತದೆ ಚ್ಲಿಲುಙಿ ಎಂಬುದರಿಂದ ಸಾಮಾನ್ಯವಾಗಿ ಲುಙನಲ್ಲಿ ಚ್ಲಿವಿಕರಣ ಬಂದರೆ ಅದಕ್ಕೆ **ಮಂತ್ರೆ ಘಸಹ್ವರಣಶ** (ಪಾ. ಸೂ. ೨-೪-೮೦) ಎಂಬುದರಿಂದ (ಲೋಪ) ಲುಕ್ ಬರುತ್ತದೆ. ಲುಙ್ ಬಹುವಚನದ ಝಿ ಪ್ರತ್ಯಯಕ್ಕೆ ಝೋಂತಃ ಎಂಬುದರಿಂದ ಅಂತಾದೇಶ ಬಂದು **ಇತಶ್ಚ** (ಪಾ. ಸೂ. ೩-೪-೧೦೦) ಎಂಬುದರಿಂದ ಕೊನೆಯ ಇಕಾರಕ್ಕೆ ಲೋಪಬಂದರೆ ಅನ್ ಎಂದು ಉಳಿಯುತ್ತದೆ. ಸಾರ್ವಧಾತುಕಮಪಿತ್ ಸೂತ್ರದಿಂದ ಇದು ಙಿತ್ತಾಗುತ್ತದೆ. ಘಸ್+ ಅನ್ ಎಂದಿರುವಾಗ **ಗಮಹನಜನಖನಘಸಾಂ ಲೋಪಃ ಕ್ಙಿತ್ಯನಙಿ** (ಪಾ. ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಅಜಾದಿಯಾದ ತ್ ಪ್ರತ್ಯಯ ಪರದಲ್ಲಿರುವುದರಿಂದ ಲೋಪ ಬರುತ್ತದೆ. ಘಸ್+ಅನ್ ಎಂದಿರುವಾಗ ಘಕಾರಕ್ಕೆ ಸಕಾರರೂಪ ಖರ್ ಪರದಲ್ಲಿರುವುದರಿಂದ ಚರ್ತ್ವ ಬಂದರೆ ಕಕಾರಬರುತ್ತದೆ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಇಣ್ ಕವರ್ಗದ ಪರದಲ್ಲಿರುವ ಇವುಗಳ ಸಕಾರಕ್ಕೆ ಷತ್ವವು ಬರುತ್ತದೆ ಎಂಬುದರಿಂದ ಇಲ್ಲಿ ಕಕಾರದ ಪರದಲ್ಲಿರುವ ಸಕಾರಕ್ಕೆ ಷತ್ವ ಬಂದರೆ ಕಷಯೋಗದಿಂದ ಕ್ಷಕಾರವಾಗುತ್ತದೆ. ಲುಙ್ ಪರದಲ್ಲಿರುವುದರಿಂದ ಧಾತುವಿಗೆ ಅಡಾಗಮ ಬರುತ್ತದೆ. ಆಗಮವಾದುದರಿಂದ ಉದಾತ್ತನಾಗಿದೆ. ಅಕ್ಷನ್ ಎಂಬ ಆದ್ಯುದಾತ್ತ ಶಬ್ದವು ಸಿದ್ಧವಾಗುತ್ತದೆ.

**ಅಮೀಮದಂತ**—ಮದ ತೃಪ್ತಿಯೋಗೆ ಧಾತು. ಚುರಾದಿ. ಆಕುಸ್ಮೀಯವಾಗಿರುವುದರಿಂದ ನಿತ್ಯವಾಗಿ ಆತ್ಮನೇಪದಿ. **ಚುರಾದಿಗೆ** ಸ್ವಾರ್ಥಿಕವಾಗಿ ಣಿಚ್ ಬರುತ್ತದೆ. ಲುಙ್ ಪ್ರಥಮಪುರುಷ ಬಹುವಚನದ ಝ ಪ್ರತ್ಯಯಕ್ಕೆ ಅಂತಾದೇಶ ಬರುತ್ತದೆ. ಮದ್+ಇ+ಅಂತ ಎಂದಿರುವಾಗ ಲುಙ್ ಪರದಲ್ಲಿರುವಾಗ ಸಾಮಾನ್ಯ ಪ್ರಾಪ್ತವಾದ ಚ್ಲಿಗೆ **ಣಿಶ್ರಿದ್ರುಸ್ರು** (ಪಾ. ಸೂ, ೩-೧-೪೮) ಎಂಬುದರಿಂದ ಚಙಾದೇಶ ಬರುತ್ತದೆ. ಮದಿ+ಇ+ಅ+ ಅಂತ ಣಿಚನ್ನು ನಿಮಿತ್ತೀಕರಿಸಿ ಧಾತುವಿನ ಉಪಧೆಗೆ ದೀರ್ಘ ಬರುತ್ತದೆ. ಚಙ್ ಪರದಲ್ಲಿರುವಾಗ **ಣೇರನಿಟಿ** (ಪಾ. ಸೂ. ೬-೪ ೫೧) ಎಂಬುದರಿಂದ ಣಿಚ್ಚಿಗೆ ಲೋಪ ಬರುತ್ತದೆ. ಮಾದ್+ಅ+ಅಂತ ಎಂದಿರುವಾಗ **ಣೌ ಚಙ್ಯುಪಧಾಯಾ ಹ್ರಸ್ವಃ** (ಪಾ. ಸೂ. ೭-೪-೧) ಎಂಬುದರಿಂದ ಅಂಗದ ಉಪಧೆಗೆ ಹ್ರಸ್ವ ಬರುತ್ತದೆ. ಚಙ್ ಪರದಲ್ಲಿರುವುದರಿಂದ **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವಬರುತ್ತದೆ. ಹಲಾದಿಶೇಷ ಬಂದರೆ ಮಮದ್+ಅ+ಅಂತ ಎಂದಿರುವಾಗ **ಸನ್ವಲ್ಲಘುನಿ ಚಙ್‌ಪರೇಽನಗ್ಲೋಪೆ** (ಪಾ. ಸೂ. ೭-೪-೯೩) ಎಂಬುದರಿಂದ

ಣಿ ಪರದಲ್ಲಿರುವುದರಿಂದ ಸನ್ವದ್ಭಾವ ಬರುತ್ತದೆ. ಸನ್ವದ್ಭಾವವಿರುವಾಗ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಸನ್ ಪರದಲ್ಲಿರುವಾಗ ಬರುವ ಇತ್ವವು ಇಲ್ಲಿಯೂ ಅಭ್ಯಾಸಕ್ಕೆ ಬರುತ್ತದೆ. **ದೀರ್ಘೋ ಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ಇತ್ವಕ್ಕೆ ದೀರ್ಘವೂ ಬರುತ್ತದೆ. ಅಡಾಗಮ ಬಂದರೆ ಅವೀವಾಮದಂತ ಎಂದು ಸಿದ್ಧಿಯಾಗುತ್ತದೆ.

**ಅಧೂಷತ**—ಧೂಞ್ ಕಂಪನೆ. ಧಾತು. ಸ್ವಾದಿ. ಲುಙ್ ಪ್ರಥಮಪುರುಷ ಬಹುವಚನ. ಅಕಾರದ ಪರದಲ್ಲಿರದಿದ್ದುದರಿಂದ ಝು ಎಂಬುದಕ್ಕೆ ಅತಾದೇಶಬಂದಿದೆ. ಸಾಮಾನ್ಯಪ್ರಾಪ್ತವಾದ ಚ್ಲಿಗೆ ಸಿಚ್ ಬರುತ್ತದೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಲಘೂಪಧ ಲಕ್ಷಣಗುಣವು ಬರುವುದಿಲ್ಲ. ಇಕ್ಕಿನ ಪರದಲ್ಲಿರುವುದರಿಂದ ಸಿಚ್ಚಿನ ಸಕಾರಕ್ಕೆ ಷತ್ವ ಬರುತ್ತದೆ. ಅಡಾಗಮ ಬಂದರೆ ಅಧೂಷತ ಎಂದು ರೂಪಸಿದ್ಧವಾಗುತ್ತದೆ ಇಲ್ಲಿ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಆರ್ಧಧಾತುಕವಾದ ಸಿಚ್ಚಿಗೆ ಸಾರ್ವಧಾತುಕತ್ವವನ್ನು ಸ್ವೀಕರಿಸಿದರೆ **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಙಿತ್ತಾಗುತ್ತದೆ. ಆಗ ಙಿತ್‌ಪ್ರತ್ಯಯ ಪರದಲ್ಲಿರುವುದರಿಂದ **ಕ್ಙಿತಿಚ** (ಪಾ ಸೂ. ೧-೧-೫) ಎಂಬುದರಿಂದ ಗುಣವಾರಣವಾಗುತ್ತದೆ ಎಂದು ಮತಾಂತರವನ್ನು ಸ್ವೀಕರಿಸಬಹುದು. ಅಥವಾ ಧೂ ವಿಧೂನನೆ ಧಾತು. ತುದಾದಿ. ತುದಾದಿಯಲ್ಲಿಯೂ ಕುಟಾದಿಯಲ್ಲಿ ಸೇರಿದೆ, ಆದುದರಿಂದ **ಗಾಂಕುಟಾದಿಭ್ಯಃ** (ಪಾ. ಸೂ. ೧-೨-೧) ಎಂಬುದರಿಂದ ಪರದಲ್ಲಿರುವ ಞಿತ್ತು ಣಿತ್ತು ಆಗದೆ ಇರುವ ಸಿಚ್ ಪ್ರತ್ಯಯಕ್ಕೆ ಙಿದ್ವದ್ಭಾವ ಬರುತ್ತದೆ. ಧಾತುವಿಗೆ ಕರ್ಮಾರ್ಥದಲ್ಲಿ ಲುಙ್‌ಮಾಡಿದಾಗ ಪ್ರಕೃತ ರೂಪಸಿದ್ಧಿಯಾಗುತ್ತದೆ. ಕರ್ಮಲಕಾರದಲ್ಲಿ **ಭಾವಕರ್ಮಣೋಃ** ಎಂಬುದರಿಂದ ಆತ್ಮನೇಪದವು ಸಿದ್ಧವಾಗುತ್ತದೆ. ಈ ಪಕ್ಷದಲ್ಲಿಯೂ ಪೂರ್ವಸೂತ್ರದಿಂದ ಗುಣಾಭಾವವು ಸಿದ್ಧವಾಗುತ್ತದೆ.

**ನವಿಷ್ಠಯಾ**—ಣು ಸ್ತುತೌ ಧಾತು. ಅದಾದಿ. ಈ ಧಾತುವಿನ ಮೇಲೆ ಕರ್ತ್ರರ್ಥದಲ್ಲಿ ತೃಚ್‌ಪ್ರತ್ಯಯ. ಕರ್ತರಿ ಎಂದು ಅನುವೃತ್ತವಾಗುವಾಗ **ಣ್ವುಲ್‌ತೃಚೌ** (ಪಾ. ಸೂ. ೩-೧-೧೩೩) ಎಂಬುದರಿಂದ ವಿಹಿತವಾಗಿದೆ, ಇಲ್ಲಿ ಸ್ತೋತ್ರರೂಪ ಅರ್ಥವಿರುವುದರಿಂದ ಸ್ತುತಿಯು ಕರಣವಾಗುವಾಗ ಕರ್ತರಿತೃಚ್ ಪ್ರತ್ಯಯ ಹೇಗೆ ಬರುತ್ತದೆ ಎಂಬ ಶಂಕೆ ಬರುವುದು. ಆದರೆ ಆಯಾಯ ಕಾರಕಗಳಿಗೆ ಸ್ವಸ್ವವ್ಯಾಪಾರದಲ್ಲಿ ಪ್ರಾಧಾನ್ಯವಿರುವುದರಿಂದ ಇಲ್ಲಿ ಸ್ವವ್ಯಾಪಾರದಲ್ಲಿ ಕರ್ತೃವಾಗಿದೆಯೆಂದು ಕರ್ತ್ರರ್ಥದಲ್ಲಿ ತೃಚ್ ಬರಲು ಸಂದೇಹವಿಲ್ಲ. ತೃಚ್ ಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. ಣೋಪದೇಶವಾದುದರಿಂದ ಆದಿಗೆ ನಕಾರಬರುತ್ತದೆ. ತೃಜಂತದಮೇಲೆ, **ತುಶ್ಛಂದಸಿ** (ಪಾ. ಸೂ. ೫-೩-೫೯) ತೃನ್ನಂತ ತೃಜಂತದ ಮೇಲೆ ಛಂದಸ್ಸಿನಲ್ಲಿ ಇಷ್ಠನ್ ಈಯಸುನ್ ಪ್ರತ್ಯಯಗಳು ಬರುತ್ತವೆ ಎಂಬುದರಿಂದ ಇಷ್ಠನ್ ಪ್ರತ್ಯಯ ಬರುತ್ತದೆ. ನವ್+ತೃ+ಇಷ್ಠ ಎಂದಿರುವಾಗ **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಇಷ್ಠನ್, ಇಮನ್, ಈಯಸ್ ಪ್ರತ್ಯಯಗಳು ಪರದಲ್ಲಿರುವಾಗ ತೃನ್ ತೃಚ್‌ಗಳಿಗೆ ಲೋಪಬರುತ್ತದೆ ಎಂಬುದರಿಂದ ಇಲ್ಲಿ ಇಷ್ಠನ್ ಪರದಲ್ಲಿರುವುದರಿಂದ ತೃಚ್ಚಿಗೆ ಲೋಪ ಬಂದರೆ ನವಿಷ್ಠ ಎಂದಾಗುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ ಟಾಪ್ ಬರುತ್ತದೆ. ತೃತೀಯೈಕವಚನದಲ್ಲಿ ಉಕ್ತರೂಪಸಿದ್ಧಿಯಾಗುತ್ತದೆ.

**ಮತೀ**—ತೃತೀಯೈಕವಚನವಾದ ಟಾ ಪರದಲ್ಲಿರುವಾಗ **ಸುಪಾಂ ಸುಲುಕ್ ಪೂರ್ವಸವರ್ಣ** (ಪಾ. ಸೂ. ೭-೧-೩೯) ಎಂಬುದರಿಂದ ತೃತೀಯಾವಿಭಕ್ತಿಗೆ ಪೂರ್ವಸವರ್ಣದೀರ್ಘ ಬಂದಿದೆ. ಮನ್‌ಧಾತುವಿಗೆ

**ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್‌ಪ್ರತ್ಯಯ ಬಂದರೆ **ಅನುದಾತ್ತೋಪದೇಶ** ಎಂಬ ಸೂತ್ರದಿಂದ ನಲೋಪ ಬಂದರೆ ಮತಿ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ನಿದಂತವಾದುದರಿಂದ ಆದ್ಯುದಾತ್ತಪ್ರಾಪ್ತವಾದರೆ **ಮಂತ್ರೆ ವೃಷೇಷಪಚಮನವಿದಭೂವೀರಾ ಉದಾತ್ತಿಃ** **(ಪಾ. ಸೂ ೩-೩-೯೬)** ಇವುಗಳಿಗೆ ಕ್ತಿನ್ ಪ್ರತ್ಯಯಬರುತ್ತದೆ. ಅದು ಉದಾತ್ತವಾಗುತ್ತದೆ ಎಂಬುದರಿಂದ ಕ್ತಿನ್ ಉದಾತ್ತಸ್ವರವು ಸತಿಶಿಷ್ಟವಾದುದರಿಂದ ಅಂತೋದಾತ್ತವಾಗುತ್ತದೆ. ॥ ೨ ॥



ಸಂಹಿತಾಪಾಠಃ

ಸುಸಂದೃಶಂ ತ್ವಾ ವಯಂ ಮಘವನ್ವಂದಿಷೀಮಹಿ ।
ಪ್ರ ನೂನಂ ಪೂರ್ಣವಂಧುರಃ ಸ್ತುತೋ ಯಾಹಿ ವಶಾಁ ಅನು
ಯೋಜಾ ನ್ವಿಂದ್ರ ತೇ ಹರೀ ॥ ೩ ॥

ಪದಪಾಠಃ

ಸುಽಸಂದೃಶಂ । ತ್ವಾ । ವಯಂ । ಮಘಽವನ್ । ವಂದಿಷೀಮಹಿ ।
ಪ್ರ । ನೂನಂ । ಪೂರ್ಣಽವಂಧುರಃ । ಸ್ತುತಃ । ಯಾಹಿ । ವಶಾನ್ । ಅನು ।
ಯೋಜ । ನು । ಇಂದ್ರ । ತೇ । ಹರೀ ಇತಿ ॥ ೩ ॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞೇ ಸುಸಂದೃಶಮಿತ್ಯೇಷಾಹವನೀಯೋಪಸ್ಥಾನೇ ವಿನಿಯುಕ್ತಾ। ಸೂತ್ರಿತಂ ಚ। ಆಹವನೀಯಂ ಸುಸಂದೃಶಂ ತ್ವೇತಿ ಪಂಕ್ತ್ಯಾ । ಆ. ೨-೧೯ । ಇತಿ ॥

ಹೇ ಮಘವನ್ನಿಂದ್ರ ಸುಸಂದೃಶಂ ಸುಷ್ಟ್ವನುಗ್ರಹದೃಷ್ಟ್ಯಾ ಸರ್ವಸ್ಯ ದ್ರಷ್ಟಾರಂ ತ್ವಾ ತ್ವಾಂ ವಯಂ ವಂದಿಷೀಮಹಿ। ಸ್ತವಾಮಹಿ। ಸ್ತುತಿಕರ್ತಾರೋ ಭೂಯಾಸ್ಮೇತ್ಯಾಶಾಸ್ಯತೇ। ಅಸ್ಮಾಭಿರ್ವಂದಿಭಿಃ ಸ್ತುತಸ್ತ್ವಂ ಪೂರ್ಣವಂಧುರಃ ಸ್ತೋತೃಭ್ಯೋ ದೇಯೈರ್ಧನೈಃ ಪೂರಿತೇನ ರಥೇನ ಯುಕ್ತಃ ಸನ್ ವಶಾನ್ ಕಾಮಯಮಾನಾನಸ್ಮಾನ್ಯಜಮಾನಾನ್ಪ್ರತಿ ನೂನಂ ಪ್ರ ಯಾಹಿ। ಅವಶ್ಯಂ ಪ್ರತಿಷ್ಠಸ್ವ। ಯೋಜೇತ್ಯಾದಿ ಪೂರ್ವವತ್ ॥ ವಂದಿಷೀಮಹಿ। ವದಿ ಅಭಿವಾದನಸ್ತುತ್ಯೋಃ। ಆಶೀರ್ಲಿಙ್। ಲಿಙ್ಯಾಶಿಷಿ। ಪಾ. ೩-೪-೧೧೬। ಇತಿ ತಸ್ಯಾರ್ಧಧಾತುಕತ್ವೇನ ಲಸಾರ್ವಧಾತುಕಸ್ವರಾಭಾವೇ ಪ್ರತ್ಯಯಾದ್ಯುದಾತ್ತತ್ವಂ। ಮಘವನ್ನಿತ್ಯಸ್ಯಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವೇ ಸತಿ ಪಾದಾದಿತ್ವಾನ್ನಿಘಾತಾಭಾವಃ ॥೩॥

ಪ್ರತಿಪದಾರ್ಥ

**ಮಘವನ್ ಇಂದ್ರ**—ಧನವಂತನಾದ ಇಂದ್ರನೇ, । **ಸುಸಂದೃಶಂ**—(ಎಲ್ಲರ ಮೇಲೂ) ಅನುಗ್ರಹ ಬುದ್ಧಿಯಿಂದ ನೋಡತಕ್ಕ । **ತ್ವಾ**—ನಿನ್ನನ್ನು । **ವಯಂ**—ನಾವು । **ವಂದಿಷೀಮಹಿ**—(ನಮಸ್ಕರಿಸಿ) ಸ್ತೋತ್ರ ಮಾಡುತ್ತೇವೆ. । **ಸ್ತುತಃ**—(ನಮ್ಮಿಂದ) ಸ್ತುತನಾದ ನೀನು । **ಪೂರ್ಣವಂಧುರಃ**—(ಧನದಿಂದ) ಪೂರಿತನಾದ ರಥವುಳ್ಳವನಾಗಿ । **ವಶಾನ್**—(ನಿನ್ನನ್ನು) ಅಪೇಕ್ಷಿಸುವ ಯಜಮಾನರಲ್ಲಿಗೆ । **ನೂನಂ**—ಖಂಡಿತವಾಗಿಯೂ । **ಪ್ರ ಯಾಹಿ**—ಹೋಗಿ ಸೇರು. । **ತೇ**—ನಿನ್ನ । **ಹರೀ**—ಕುದುರೆಗಳನ್ನು । **ನು**—ಬೇಗನೆ । **ಅನುಯೋಜ**—(ರಥಕ್ಕೆ) ಸೇರಿಸಿ ಕಟ್ಟು. ।

ಭಾವಾರ್ಥ

ಧನವಂತನಾದ ಇಂದ್ರನೇ, ನೀನು ಭಕ್ತರಾದ ನಮ್ಮೆಲ್ಲರ ಮೇಲೂ ಅನುಗ್ರಹ ಬುದ್ಧಿಯಿಂದ ನೋಡುತ್ತೀಯೆ. ಅಂತಹ ನಿನ್ನನ್ನು ನಾವು ನಮಸ್ಕರಿಸಿ ಸ್ತುತಿಸುತ್ತೇವೆ. ನಮ್ಮಿಂದ ಸ್ತುತನಾದ ನೀನು ಧನದಿಂದ ಪೂರಿತವಾದ ನಿನ್ನ ರಥದೊಡನೆ ನಿನ್ನನ್ನು ಅಪೇಕ್ಷಿಸುವ ಯಜಮಾನರಲ್ಲಿಗೆ ಹೋಗಿ ಸೇರು. ನಿನ್ನ ಕುದುರೆಗಳನ್ನು ಬೇಗನೆ ರಥಕ್ಕೆ ಸೇರಿಸಿ ಕಟ್ಟಿ ಅವರಲ್ಲಿಗೆ ಹೋಗಿ ಧನವನ್ನು ಹಂಚು.

## English Translation

O Maghavan, we praise you, you look benignly upon all ; praised by us go to those who desire your presence in your chariot well filled with riches ; Indra, quickly yoke your horses.

ವಿಶೇಷವಿಷಯಗಳು

ಮಹಾವ್ರತಯಜ್ಞದಲ್ಲಿ **ಸುಸಂದೃಶಂ** ಎಂಬ ಈ ಋಕ್ಕನ್ನು ಆಹವನೀಯಾಗ್ನಿಯನ್ನು ಉಪಸ್ಥಾನಮಾಡುವಾಗ ಉಪಯೋಗಿಸಬೇಕೆಂದು ಅಶ್ವಲಾಯನಶ್ರೌತಸೂತ್ರದಲ್ಲಿ—ಆಹವನೀಯಂ **ಸುಸಂದೃಶಂ ತ್ವೇತಿ ಪಂಕ್ತ್ಯಾ** ಎಂಬ ಸೂತ್ರದಲ್ಲಿ ವಿವೃತವಾಗಿರುವುದು. (ಅ. ೨-೧೯)

**ಸುಸಂದೃಶಂ—ಸುಷ್ಠು ಅನುಗ್ರಹದೃಷ್ಟ್ಯಾ ದ್ರಷ್ಟಾರಂ |** ಸ್ತೋತ್ರಮಾಡುವವರನ್ನು ಅನುಗ್ರಹದೃಷ್ಟಿಯಿಂದ ನೋಡುವ ಇಂದ್ರನನ್ನು

**ಪೂರ್ಣವಂಧುರಃ—** ಪೂರ್ಣವಾದ ಎಂದರೆ ಸ್ತೋತ್ರಮಾಡುವವರಿಗೆ ಕೊಡಬೇಕಾದ ಧನಾದಿಗಳಿಂದ ಪೂರ್ಣವಾದ ರಥವುಳ್ಳವನು.

**ವಶಾನ್—ಕಾಮಯಮಾನಾನನ್ಯಾನ್ |** ನಿನ್ನನ್ನು ಅಪೇಕ್ಷಿಸುವ ಇತರ ಯಜಮಾನರನ್ನು ಎಂದರೆ ಯಜಮಾನರ ಬಳಿಗೆ ಹೋಗುವುದಕ್ಕಾಗಿ.

ವ್ಯಾಕರಣಪ್ರಕ್ರಿಯಾ

**ವಂದಿಷೀಮಹಿ**—ವದಿ ಅಭಿವಾದನಸ್ತುತ್ಯೋಃ ಧಾತು. ಭ್ವಾದಿ. ಆಶೀರ್ಲಿಙ್ ಉತ್ತಮಪುರುಷ ಬಹುವಚನರೂಪ. ಧಾತುವು ಇದಿತ್ತಾದುದರಿಂದ **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ ಬರುತ್ತದೆ. **ಲಿಙಃಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಲಿಙಿಗೆ ಸೀಯುಡಾಗಮ ಬರುತ್ತದೆ. **ಲಿಙಾಶಿಷಿ** (ಪಾ. ಸೂ. ೩-೪-೧೧೬) ಆಶೀರರ್ಥದಲ್ಲಿ ಬಂದಿರುವ ಲಿಙ್ ಆರ್ಧಧಾತುಕ ಸಂಜ್ಞೆಯನ್ನು ಹೊಂದುತ್ತದೆ ಎಂಬುದರಿಂದ ಇಲ್ಲಿ ಆರ್ಧಧಾತುಕ ಸಂಜ್ಞೆ ಬಂದಿದೆ. ಸೀಯುಟ್ ವಿಶಿಷ್ಟಲಿಙ್‌ಗೆ ವಲಾದಿಲಕ್ಷಣವಾದ ಇಡಾಗಮ ಬಂದರೆ ಸೀಯುಟಿನ ಯಕಾರಕ್ಕೆ ಲೋಪೋವ್ಯೋರ್ವಲಿ ಎಂಬುದರಿಂದ ಲೋಪ ಬಂದರೆ ವಂದ್+ಇ ಸೀಮಹಿ ಎಂದಾಗುತ್ತದೆ. ಆದೇಶಷತ್ವ ಬಂದರೆ (ಆದೇಶಪ್ರತ್ಯಯಯೋಃ) ಪ್ರಕೃತರೂಪಸಿದ್ಧಿಯಾಗುತ್ತದೆ. ವದಿ ಧಾತುವು ಅನುದಾತ್ತೋಪದೇಶವಾದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಲಿಙಿಗೆ ಅನುದಾತ್ತ ಬರಲಿ ಎಂಬ ಶಂಕೆಗೆ ಅವಕಾಶವಿಲ್ಲ. ಹಿಂದೆ ಹೇಳಿದಂತೆ ಆಶೀರ್ಲಿಙಿಗೆ ಆರ್ಧಧಾತುಕ ಸಂಜ್ಞೆಯಿರುವುದರಿಂದ ಲಸ್ಥಾನಿಕ ಸಾರ್ವಧಾತುಕವಾಗದಿದ್ದುದರಿಂದ ಅನುದಾತ್ತ ಸ್ವರವು ಬರುವುದಿಲ್ಲ. **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಎಂಬುದರಿಂದ ಪ್ರತ್ಯಯದ ಆದ್ಯುದಾತ್ತಸ್ವರವೇ ಬರುತ್ತದೆ. **ತಿಙ್ಙತಿಙಃ** (ಪಾ. ಸೂ. ೮-೧-೨೮) ಅತಿಙಂತದ ಪರದಲ್ಲಿರುವ ತಿಙಂತವು ಸರ್ವಾನುದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಪ್ರತ್ಯಯಸ್ವರವೂ ಬಾಧಿತವಾಗಿ ಸರ್ವಾನುದಾತ್ತವಾಗಬೇಕಾಗುತ್ತದೆ. ಆದರೆ, **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಪೂರ್ವದಲ್ಲಿರುವ ಆಮಂತ್ರಿತವು ಇದ್ದರೂ ಇಲ್ಲದಂತಾಗುತ್ತದೆ. (ಆಮಂತ್ರಿತವೆಂದರೆ ಸಂಬೋಧನೆಯ ಪ್ರಥಮಾಕ್ಕೆ ಸಂಜ್ಞೆ) ಎಂಬುದರಿಂದ ಇಲ್ಲಿ ಮಘವನ್ ಎಂಬ ಆಮಂತ್ರಿತವು ಪೂರ್ವದಲ್ಲಿರುವುದರಿಂದ ಅದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ **ವಂದಿಷೀಮಹಿ** ಎಂಬುದೇ ಪಾದದ ಆದಿಯಲ್ಲಿ ಬಂದಂತಾಯಿತು. ಆದುದರಿಂದ **ಅಪಾದಾದೌ** ಎಂದು ಅನುದಾತ್ತವನ್ನು ನಿಷೇಧಿಸಿರುವುದರಿಂದ **ವಂದಿಷೀಮಹಿ** ಎಂಬುದು ಸರ್ವಾನುದಾತ್ತವಾಗದೆ ಪ್ರತ್ಯಯಸ್ವರವನ್ನು ಹೊಂದಿದೆ.

**ಯೋಜ—** ಇದರ ಪ್ರಕ್ರಿಯೆಯನ್ನು ಮೊದಲನೆಯ ಮಂತ್ರದಲ್ಲಿ (೧-೮೨-೧) ವಿವರಿಸಿದೆ. || ೩ ||



॥ ಸಂಹಿತಾಪಾಠಃ ॥

ಸ ಘಾ ತಂ ವೃಷಣಂ ರಥಮಧಿ ತಿಷ್ಠಾತಿ ಗೋವಿದಂ ।
ಯಃ ಪಾತ್ರಂ ಹಾರಿಯೋಜನಂ ಪೂರ್ಣಮಿಂದ್ರ ಚಿಕೇತತಿ
ಯೋಜಾ ನ್ವಿಂದ್ರ ತೇ ಹರೀ ॥ ೪ ॥

॥ ಪದಪಾಠಃ ॥

ಸಃ । ಘ । ತಂ । ವೃಷಣಂ । ರಥಂ । ಅಧಿ । ತಿಷ್ಠಾತಿ । ಗೋಽವಿದಂ ।
ಯಃ । ಪಾತ್ರಂ । ಹಾರಿಽಯೋಜನಂ । ಪೂರ್ಣಂ । ಇಂದ್ರ । ಚಿಕೇತತಿ ।
ಯೋಜ । ನು । ಇಂದ್ರ । ತೇ । ಹರೀ ಇತಿ ॥ ೪ ॥

ಸಾಯಣಭಾಷ್ಯಂ

ಸ ಘು ಸ ಖಲ್ವಿಂದ್ರೋ ವೃಷಣಂ ಕಾಮಾಭಿವರ್ಷಕಂ ಗೋವಿದಂ ಗವಾಂ ಲಂಭಯಿತಾರಂ ತಂ ರಥಮಧಿ ತಿಷ್ಠಾತಿ । ಈದೃಶೇ ರಥೇಽಧಿತಿಷ್ಠತು । ಆರೂಢೋ ಭವತು । ಹೇ ಇಂದ್ರ ಯೋ ರಥೋ ಹಾರಿಯೋಜನಮೇತತ್ಸಂಜ್ಞಕಂ ಧಾನಾಮಿಶ್ರಿತಂ ಪೂರ್ಣಂ ಸೋಮೇನ ಪೂರ್ಣಂ ಪಾತ್ರಂ ಚಿಕೇತತಿ ಜ್ಞಾಪಯತಿ । ತಂ ರಥಮಧಿತಿಷ್ಠೇತಿ ಪೂರ್ವೇಣಾನ್ವಯಃ । ಅಧಿಷ್ಠಾಯ ಚ ತ್ವದೀಯಾವಶ್ವೌ ಕ್ಷಿಪ್ರಂ ಯೋಜಯ ॥ ಘ ಋಚಿ ತನುಘೇತಿ ದೀರ್ಘಃ । ರಥಂ । ಅಧಿಶೀಙ್‌ಸ್ಥಾಸಾಂ ಕರ್ಮ । ಪಾ. ೧-೪-೪೬ । ಇತ್ಯಧಿಕರಣಸ್ಯ ಕರ್ಮಸಂಜ್ಞಾ । ತಿಷ್ಠಾತಿ । ತಿಷ್ಠತೇರ್ಲೇಟ್ಯಾಡಾಗಮಃ । ಚಿಕೇತತಿ । ಕಿತ ಜ್ಞಾನೇ । ಲೇಟ್ಯಡಾಗಮಃ । ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ಬಹುಲಂ ಛಂದಸೀತಿ ವಕ್ತವ್ಯಂ । ಕಾ. ೭-೩-೮೭-೧ । ಇತಿ ವಚನಾನ್ನಾಭ್ಯಸ್ತಸ್ಯಾಚಿ ಪಿತೀತಿ ಲಘೂಪಧಗುಣಪ್ರತಿಷೇಧೋ ನ ಭವತಿ ॥ ೪ ॥

ಪ್ರತಿಪದಾರ್ಥ

ಸ ಘ— ಆದೇ ಇಂದ್ರನು । ಯಃ— ಯಾವ ರಥವು । ಹಾರಿಯೋಜನಂ—( ? ) ಧಾನ್ಯದಿಂದ ಕೂಡಿ ದುದೂ । ಪೂರ್ಣಂ— (ಸೋಮರಸದಿಂದ) ತುಂಬಿರುವುದೂ ಆದ । ಪಾತ್ರಂ— ಪಾತ್ರವನ್ನು । ಚಿಕೇತತಿ— ತೋರಿಸಿಕೊಡುತ್ತದೆಯೋ ಅಂತಹ (ಮತ್ತು) । ವೃಷಣಂ—(ಇಷ್ಟಾರ್ಥಗಳನ್ನು) ಸುರಿಸತಕ್ಕದ್ದೂ । ಗೋವಿದಂ-

ಗೋವುಗಳನ್ನು ಹೊಂದಿಸತಕ್ಕದ್ದೂ ಆದ। **ತಂ ರಥಂ—** ಆ ರಥವನ್ನು। **ಅಧಿ ತಿಷ್ಠತಿ—**ಹತ್ತಿ ಕುಳಿತುಕೊಳ್ಳಲಿ। **ಇಂದ್ರ—** ಎಲೈ ಇಂದ್ರನೇ। **ತೇ—**ನಿನ್ನ। **ಹರೀ—** ಕುದುರೆಗಳನ್ನು। **ನು—** ಜಾಗ್ರತೆಯಾಗಿ। **ಯೋಜ—** (ರಥಕ್ಕೆ) ಕಟ್ಟು.

ಭಾವಾರ್ಥ

ಯಾವ ರಥವು ಧಾನ್ಯದಿಂದ ಕೂಡಿದುದೂ ಮತ್ತು ಸೋಮರಸದಿಂದ ತುಂಬಿದುದೂ ಆದ ಪಾತ್ರವನ್ನು ತಂದು ಕೊಡುತ್ತದೆಯೋ ಮತ್ತು ಯಾವುದು ಭಕ್ತರ ಇಷ್ಟಾರ್ಥಗಳನ್ನು ಸುರಿಸಿ ಗೋವುಗಳನ್ನು ತಂದು ಕೊಡುತ್ತದೆಯೋ ಅಂತಹ ರಥವನ್ನು ಇಂದ್ರನು ಹತ್ತಿ ಕುಳಿತುಕೊಳ್ಳಲಿ. ಎಲೈ ಇಂದ್ರನೇ, ನಿನ್ನ ಕುದುರೆಗಳನ್ನು ಜಾಗ್ರತೆಯಾಗಿ ರಥಕ್ಕೆ ಸೇರಿಸಿಕಟ್ಟು.

English Translation

May he ( Indra ) ascend that chariot which shower blessings, gives cows and which contains vessel filled with the mixture of Soma-juice and barley flour ; Indra, quickly yoke your horses.

ವಿಶೇಷವಿಷಯಗಳು

**ಘ—**ಛಂದಸ್ಸಿನ ಅನುಕೂಲಕ್ಕಾಗಿ ಈ ಅಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಹಾರಿಯೋಜನಂ—** ಹಾರಿ ಎಂಬ ಧಾನ್ಯಮಿಶ್ರವಾದ ಸೋಮರಸವು. ಹಾರಿ ಎಂದರೆ ಬಹುಶಃ ಯವ ಧಾನ್ಯವಿರಬಹುದು. ಆ ಧಾನ್ಯದ ಹಿಟ್ಟನ್ನು ಮಿಶ್ರಮಾಡಿದ ಸೋಮರಸನೆಂದರ್ಥವು. ಈ ಹಾರಿಯೋಜನವೆಂಬ ಶಬ್ದವು ಋಗ್ವೇದದಲ್ಲಿ—

**ಏವಾ ತೇ ಹಾರಿಯೋಜನಾ ಸುವೃಕ್ತೀಂದ್ರ ಬ್ರಹ್ಮಾಣಿ ಗೋತಮಾಸೋ ಅಕ್ರನ್।**
(ಋ. ಸಂ. ೧-೬೧-೧೬)

ಎಂಬ ಋಕ್ಕಿನಲ್ಲಿ ಮಾತ್ರವಿರುವುದು. ಬೇರೆ ಎಲ್ಲಯೂ ಇರುವುದಿಲ್ಲ. ಅಲ್ಲಿ ಈ ಶಬ್ದಕ್ಕೆ ಭಾಷ್ಯಕಾರರು **ಹರ್ಯೋ-ರಶ್ವಯೋರ್ಯೋಜನಂ ಯಸ್ಮಿನ್ ರಥೇ ಸಃ ತಸ್ಯ ಸ್ವಾಮಿತ್ವೇನ ಸಂಬಂಧೀ ಹಾರಿಯೋಜನಃ—**ಎಂದರೆ ಹರೀ ಎಂಬ ಇಂದ್ರನ ಎರಡು ಕುದುರೆಗಳನ್ನು ಹೂಡಿರುವ ರಥವುಳ್ಳ ಇಂದ್ರನೆಂದು ಬೇರೆ ವಿಧವಾಗಿ ಅರ್ಥಮಾಡಿರುವರು. ಯಜುರ್ವೇದತೈತ್ತಿರೀಯಸಂಹಿತೆಯಲ್ಲಿಯೂ—

**ಹರಿರಸಿ ಹಾರಿಯೋಜನೋ ಹರ್ಯೋಃ ಸ್ಥಾತಾ ವಜ್ರಸ್ಯ ಭರ್ತಾ ಪೃಶ್ನೇಃಪ್ರೇತಾ ತಸ್ಯ ತೇ ದೇವ ಸೋಮೇಷ್ಟಯಜುಷಃ ಸ್ತುತಸ್ತೋಮಸ್ಯ ಶಸ್ತೋಕ್ಥಸ್ಯ ಹರಿವಂತಂ ಗ್ರಹಂ ಗೃಹ್ಣಾಮಿ ಹರೀಃ ಸ್ಥ ಹರ್ಯೋರ್ಧಾನಾಃ ಸಹಸೋಮಾ ಇಂದ್ರಾಯ ಸ್ವಾಹಾ॥**
(ತೈ. ಸಂ. ೧-೪-೨೮)

ಮಾಡಿರುವರು. ಈ ಮಂತ್ರದಲ್ಲಿರುವ ಹಾರಿಯೋಜನಃ ಎಂಬ ಶಬ್ದಕ್ಕೆ ಭಟ್ಟಭಾಸ್ಕರಮಿಶ್ರರೆಂಬುವರು ತಮ್ಮ ಭಾಷ್ಯದಲ್ಲಿ—

**ಹರಿರಸೀತಿ । ಸೋಮ ಏವೋಚ್ಯತೇ । ಹರಿರಿಂದ್ರಃ ಸ ಏವ ತ್ವಮಸೀತೀಂದ್ರಾತ್ಮನಾ ಸೋಮಃ ಸ್ತೂಯತೇ । ಯದ್ವಾ ಹರಿರ್ಹರ್ತಾ ಅಭಿಮತಾನಾಂ ಶ್ರೇಯಸಾಮಾಹರ್ತಾ ತ್ವಮಸಿ । ಹಾರಿಯೋಜನಃ ಹರಿಃ ಅಶ್ವವಿಶೇಷಃ ಯೋಜನೋ ವಾಹನಂ ಯಸ್ಯ ಸ ಹರಿಯೋಜನಃ ಇಂದ್ರಃ ತಸ್ಯ ಸ್ವಭೂತಃ ಹಾರಿಯೋಜನಃ ಐಂದ್ರೋಽಸೀತ್ಯರ್ಥಃ ।**

ಎಂದು ಅರ್ಥವಿವರಣೆ ಮಾಡಿರುವರು. ಇಲ್ಲಿ ಹಾರಿಯೋಜನ ಶಬ್ದವನ್ನು ಸೋಮಪರವಾಗಿ ಅರ್ಥಮಾಡಿರುವರು. ಹರೀ ಎಂದರೆ ಇಂದ್ರನ ಕುದುರೆಗಳು ಆ ಕುದುರೆಗಳೇ ವಾಹನವಾಗಿ ವುಳ್ಳವನಿಗೆ **ಹರಿಯೋಜನ** ಎಂದರೆ ಇಂದ್ರನೆಂದು ಹೆಸರು. ಆ ಇಂದ್ರನ ಸಂಬಂಧವಾದುವಕ್ಕೆ **ಹಾರಿಯೋಜನ** ಎಂದು ಹೆಸರು ಎಂದು ವಿವರಿಸಿರುವರು. ಮುಖ್ಯಾಭಿಪ್ರಾಯವೇನೆಂದರೆ— ಇಂದ್ರನಿಗೆ ಅರ್ಪಿಸುವುದಕ್ಕಾಗಿ ಯವಧಾನ್ಯದ ( barley ) ಹಿಟ್ಟನ್ನು ಬೆರಸಿ ಸೋಮರಸವನ್ನು ಸಿದ್ಧಪಡಿಸಿರುವರು. ಇಂದ್ರನಿಗೆ ಮಾತ್ರವೇ ಅರ್ಪಿಸುವುದಕ್ಕೆ ಸಿದ್ಧಪಡಿಸಿದ ಇಂತಹ ಸೋಮರಸವನ್ನು **ಹಾರಿಯೋಜನ** ಎಂದು ಹೇಳುವುದು ರೂಢಿಯಾಗಿರಬಹುದು. ಆ ಕಾರಣದಿಂದಲೇ ಪ್ರಸಕ್ತವಾದ ಈ ಋಕ್ಕಿನಲ್ಲಿ **ಹಾರಿಯೋಜನಂ ಪಾತ್ರಂ ಪೂರ್ಣಂ** ಎಂದರೆ ಇಂದ್ರನಿಗಾಗಿ ವಿಶೇಷ ರೀತಿಯಿಂದ ಯವಧಾನ್ಯದ ಹಿಟ್ಟನ್ನು ಬೆರಸಿ ಸಿದ್ಧಪಡಿಸಿದ ಸೋಮರಸವನ್ನು ತುಂಬಿದ ಪಾತ್ರೆಯನ್ನು ಎಂದು ಅರ್ಥ ವಿವರಣೆ ಮಾಡುವುದು ಯುಕ್ತವಾಗಿರುವುದು.

ವ್ಯಾಕರಣಪ್ರಕ್ರಿಯಾ

**ಘ**—ಖಲು ಎಂಬರ್ಥದಲ್ಲಿ ಅವ್ಯಯ. **ಋಚಿ ತುನುಘಮಕ್ಷುತಂಕುತ್ರೋರುಷ್ಯಾಣಾಂ** (ಪಾ. ಸೂ. ೬-೩-೧೩೩) ಎಂಬುದರಿಂದ ಋಗ್ವೇದದಲ್ಲಿ ಮಾತ್ರ ಘ ಎಂಬುದಕ್ಕೆ ದೀರ್ಘಬರುತ್ತದೆ.

**ರಥಂ**—ದ್ವಿತೀಯೈಕವಚನ. ರಥದಲ್ಲಿ ಕುಳಿತುಕೊಳ್ಳಲಿ ಎಂಬರ್ಥವಿದ್ದರೂ **ಅಧಿಶೀಙ್‌ಸ್ಥಾಸಾಂ ಕರ್ಮ** (ಪಾ. ಸೂ. ೧-೪-೪೬) ಅಧಿ ಎಂಬ ಉಪ ಎಂಬ ಉಪಸರ್ಗದಿಂದ ಕೂಡಿದ ಶೀಙ, ಸ್ಥಾ, ಆಸ ಈ ಮೂರು ಧಾತುಗಳ ಅಧಿಕರಣಕ್ಕೆ (ಧಾತ್ವರ್ಥಕ್ರಿಯಾದಲ್ಲಿ ಅಧಿಕರಣವಾಗಿರುವುದಕ್ಕೆ) ಕರ್ಮಸಂಜ್ಞೆಯು ಬರುತ್ತದೆ ಎಂಬುದರಿಂದ ಕರ್ಮಸಂಜ್ಞೆ ಬಂದು **ಕರ್ಮಣಿ ದ್ವಿತೀಯಾ** (ಪಾ. ಸೂ. ೨-೩-೨) ಎಂಬುದರಿಂದ ದ್ವಿತೀಯಾವಿಭಕ್ತಿ ಬಂದಿದೆ.

**ತಿಷ್ಠಾತಿ**—ಷ್ಠಾ ಗತಿನಿವೃತ್ತೌ ಧಾತು. ಭ್ವಾದಿ. ವಿಧ್ಯರ್ಥದಲ್ಲಿ ಲೇಟ್ ಪ್ರಥಮಪುರುಷೈಕವಚನರೂಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ ಬಂದಿದೆ. ಶಪ್ ವಿಕರಣಪರದಲ್ಲಿರುವಾಗ **ಪಾಘ್ರಾಧ್ಮಾ** (ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ತಿಷ್ಠ ಎಂಬ ಆದೇಶ ಬರುತ್ತದೆ.

**ಚಿಕೇತತಿ**—ಕಿತ ಜ್ಞಾನೇ. ಧಾತು. ಜುಹೋತ್ಯಾದಿ. ಲೇಟ್ ಪ್ರಥಮಪುರುಷೈಕವಚನ. ಜುಹೋತ್ಯಾದಿಗಳಿಗೆ ಶ್ಲುವಿಕರಣ ಪ್ರಾಪ್ತವಾದರೆ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಹಲಾದಿಶೇಷವು ಪ್ರಾಪ್ತವಾದರೆ ಕಿಕೇತ್+ತಿ ಎಂದಾಗುತ್ತದೆ. ಹಿಂದೆ ಹೇಳಿದಂತೆ **ಲೇಟೋಽಡಾಟೌ** ಎಂಬುದರಿಂದ ಲೇಟ್ ಪ್ರತ್ಯ

ಯಕ್ಕೆ ಅಡಾಗನು ಬರುತ್ತದೆ. ಪೂರ್ವಖಂಡ ಅಭ್ಯಾಸಕ್ಕೆ **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಚವರ್ಗವು ಪ್ರಾಪ್ತವಾದರೆ ಆಂತರ್ಯದಿಂದ ಚಕಾರ ಬರುತ್ತದೆ **ಪುಗಂತ ಲಘೂಪಧಸ್ಯ ಚ** (ಪಾ. ಸೂ ೭-೩-೮೬) ಎಂಬುದರಿಂದ ಅಂಗದ ಲಘೂಪಧೆಯಾದ ತಕಾರದ ಪೂರ್ವದಲ್ಲಿರುವ ಇಕಾರಕ್ಕೆ ಗುಣ ಬರುತ್ತದೆ. **ಯದ್ಯಪಿ ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೆ** (ಪಾ. ಸೂ. ೭-೩-೮೭) ಅಜಾದಿಯಾದ ಪಿತ್ತಾದ ಸಾರ್ವಧಾತುಕ ಪರದಲ್ಲಿರುವಾಗ ಅಭ್ಯಸ್ತಕ್ಕೆ ಲಘೂಪಧಗುಣ ಬರುವುದಿಲ್ಲವೆಂದು ನಿಷೇಧವಿದೆ. ದ್ವಿತ್ವವನ್ನು ಹೊಂದಿದ ಎರಡು ಖಂಡಗಳಿಗೆ ಒಟ್ಟಿಗೆ ಅಭ್ಯಸ್ತವೆಂದು ಹೆಸರು. (ಆರನೇ ಅಧ್ಯಾಯದ ಸೂತ್ರದಿಂದ ಮಾತ್ರ ದ್ವಿತ್ವಹೊಂದಿರಬೇಕು) ಆದರೂ ಇಲ್ಲಿ **ಬಹುಲಂ ಛಂದಸೀತಿ ವಕ್ತವ್ಯಮ್** (ಪಾ. ಸೂ. ೭-೩-೮೭ ರಲ್ಲಿ ವಾರ್ತಿಕ ೧) ಎಂಬುದರಿಂದ ಲಘೂಪಧಗುಣಪ್ರತಿಷೇಧವು ಬರುವುದಿಲ್ಲ. ॥ ೪ ॥

॥ ಸಂಹಿತಾಪಾಠಃ ॥

ಯುಕ್ತಸ್ತೇ ಅಸ್ತು ದಕ್ಷಿಣ ಉತ ಸವ್ಯಃ ಶತಕ್ರತೋ ।
ತೇನ ಜಾಯಾಮುಪ ಪ್ರಿಯಾಂ ಮಂದಾನೋ ಯಾಹ್ಯಂಧಸೋ
ಯೋಜಾ ನ್ವಿಂದ್ರ ತೇ ಹರೀ ॥ ೫ ॥

॥ ಪದಪಾಠಃ ॥

ಯುಕ್ತಃ । ತೇ । ಅಸ್ತು । ದಕ್ಷಿಣಃ । ಉತ । ಸವ್ಯಃ । ಶತಕ್ರತೋ ಇತಿ ಶತಽ ಕ್ರತೋ ।
ತೇನ । ಜಾಯಾಂ । ಉಪ । ಪ್ರಿಯಾಂ । ಮಂದಾನಃ । ಯಾಹಿ । ಅಂಧಸಃ ।
ಯೋಜ । ನು । ಇಂದ್ರ । ತೇ । ಹರೀ ಇತಿ ॥ ೫ ॥

ಹೇ ಶತಕ್ರತೋ ಬಹುಕರ್ಮವನ್ನಿಂದ್ರ ತೇ ತ್ವದೀಯೇ ರಥೇ ದಕ್ಷಿಣೋ ದಕ್ಷಿಣಪಾರ್ಶ್ವಸ್ಥೋಽಶ್ವೋ ಯುಕ್ತೋಽಸ್ತು । ಉತಾಪಿ ಚ ಸವ್ಯೋ ವಾಮಪಾರ್ಶ್ವಸ್ಥೋಽಪಿ ಯುಕ್ತೋಽಸ್ತು । ತೇನ ರಥೇನಾಂಧಸಃ ಸೋಮಲಕ್ಷಣಸ್ಯಾನ್ನಸ್ಯ ಪಾನೇನ ಮಂದಾನೋ ಮತ್ತಸ್ತ್ವಂ ಪ್ರಿಯಾಂ ಪ್ರೀಣಯಿತ್ರೀಂ ಜಾಯಾಮುಪ ಯಾಹಿ । ಸಾ ಯತ್ರ ವರ್ತತೇ ತತ್ರ ಗಚ್ಛೇತ್ಯರ್ಥಃ । ತದರ್ಥಂ ಹೇ ಇಂದ್ರ ತ್ವದೀಯಾವಶ್ವೌ ರಥೇ ಕ್ಷಿಪ್ರಂ ಯೋಜಯ । ಅನಯೋತ್ತರಯಾ ಚ ಪೀತಸೋಮಸ್ಯೇಂದ್ರಸ್ಯ ಸ್ವಗೃಹಂ ಪ್ರತಿ ಪ್ರಸ್ಥಾನಂ ಪ್ರತಿಪಾದ್ಯತೇ॥ ಮಂದಾನಃ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು । ಲಿಟಃ ಕಾನಚ್ । ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮಿತಿ ದ್ವಿರ್ವಚನಾಭಾವಃ । ಅಂಧಸಃ । ಅದ ಭಕ್ಷಣೇ । ಅದೇರ್ನುಮ್. ಧಶ್ಚ ಉ. ೪-೨೦೫ । ಇತ್ಯಸುನ್ । ಧಾತೋರ್ನುಮಾಗಮೋ ಧಕಾರಾಂತಾದೇಶಶ್ಚ ॥ ೫ ॥

ಪ್ರತಿಪದಾರ್ಥ

**ಶತಕ್ರತೋ**—ಬಹಳವಾದ ಪವಿತ್ರಕರ್ಮಗಳಿಂದ ಯುಕ್ತನಾದ ಇಂದ್ರನೇ, । **ತೇ**—ನಿನ್ನ ( ರಥಕ್ಕೆ ) **ದಕ್ಷಿಣಃ**—ಬಲಭಾಗದ ಕುದುರೆಯು । **ಯುಕ್ತಃ ಅಸ್ತು**—ಕಟ್ಟಲ್ಪಡಲಿ । **ಸವ್ಯಃ**—ಎಡಭಾಗದ ಕುದುರೆಯೂ ( ಕಟ್ಟಲ್ಪಡಲಿ ) । **ತೇನ**—ಆ ರಥದಿಂದ । **ಅಂಧಸಃ**—ಸೋಮರಸದ (ಪಾನದಿಂದ)। **ಮಂದಾನಃ**—ಸಂತೃಪ್ತನೂ ಮತ್ತನೂ ಆಗಿ । **ಪ್ರಿಯಾಂ**—ನಿನ್ನ ಪ್ರಣಯಿನಿಯಾದ । **ಜಾಯಾಂ**—ಹೆಂಡತಿಯನ್ನು ಕುರಿತು । **ಉಪ ಯಾಹಿ**—ಹೋಗಿ ಸೇರು (ಆದ್ದರಿಂದ) । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಹರೀ**—ಕುದುರೆಗಳನ್ನು । **ನು**—ಜಾಗ್ರತೆಯಾಗಿ । **ಯೋಜ**—(ರಥಕ್ಕೆ) ಕಟ್ಟು ॥

॥ ಭಾವಾರ್ಥ ॥

ಬಹಳವಾದ ಪವಿತ್ರಕರ್ಮಗಳಿಂದ ಯುಕ್ತನಾದ ಇಂದ್ರನೇ, ನಿನ್ನ ರಥಕ್ಕೆ ಎಡಬಲಭಾಗಗಳ ಎರಡು ಕುದುರೆಗಳನ್ನೂ ಕಟ್ಟು. ಆ ರಥದಲ್ಲಿ ಸೋಮರಸಪಾನದಿಂದ ಸಂತೃಪ್ತನೂ ಮತ್ತು ಮತ್ತನೂ ಆಗಿ ನಿನ್ನ ಪ್ರಣಯಿನಿಯಾದ ಹೆಂಡತಿಯಲ್ಲಿಗೆ ಹೋಗಿ ಸೇರಿ ಸುಖಿಸುವುದಕ್ಕಾಗಿ ನಿನ್ನ ಕುದುರೆಗಳನ್ನು ಜಾಗ್ರತೆಯಾಗಿ ರಥಕ್ಕೆ ಕಟ್ಟು.

English Translation

O Satakratu, ( or perfomer of many acts ) let your horses be harnessed on the right and on the left, and exhilerated by the sacrificial food, repair, in your chariot, to your beloved wife ; Indra, quickly yoke your horses.

॥ ವಿಶೇಷವಿಷಯಗಳು ॥

ಈ ಋಕ್ಕನ್ನು ಮುಂದಿನ **ಯುನಜ್ಮಿ ತೇ** ಎಂಬ ಋಕ್ಕನ್ನು ಇಂದ್ರನನ್ನು ತನ್ನ ಸ್ವಸ್ಥಾನಕ್ಕೆ ಸಾಗಕಳುಹಿಸುವಾಗ ಪಠಿಸುವರು.

**ದಕ್ಷಿಣಃ, ಸವ್ಯಃ**—ಎಡಬಲಭಾಗದಲ್ಲಿ ರಥಕ್ಕೆ ಕಟ್ಟಬೇಕಾದ ಕುದುರೆಗಳು.

**ಜಾಯಾಮುಪ ಪ್ರಿಯಾಂ ಯಾಹಿ**— ನಿನ್ನ ಪ್ರೀತಿಪಾತ್ರಳಾದ ಪತ್ನಿಯ ಸಮೀಪಕ್ಕೆ ಹೋಗು ಎಂದರೆ ಸ್ವಗೃಹಾಭಿಮುಖನಾಗು ಎಂದರ್ಥವು.

**ಅಂಧಸಃ ಮಂದಾನಃ** -- ಸೋಮಪಾನದಿಂದಲೂ ಹವಿಸ್ಸನ್ನು ಭಕ್ಷಿಸಿದ್ದರಿಂದಲೂ ಸಂತೋಷಗೊಂಡ ಇಂದ್ರನು. ಅಂಧಃ ಎಂದರೆ ಅನ್ನವು. **(**ನಿ. ೩-೯ **)**.

ವ್ಯಾಕರಣಪ್ರಕ್ರಿಯಾ

**ಮಂದಾನಃ**— ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು. ಧಾತು. ಸ್ತುತಿಸುವುದು, ಸಂತೋಷ ಪಡುವುದು, ಮದವನ್ನು ಹೊಂದುವುದು, ಸ್ವಪ್ನ ನೋಡುವುದು, ಶೋಭಿಸುವುದು, ಹೋಗುವುದು, ಎಂಬರ್ಥಗಳಲ್ಲಿ ಇದೆ. ಭ್ವಾದಿ. ಈ ಧಾತುವಿಗೆ ಲಿಟ್ ಮಾಡಿದಾಗ, **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಛಂದಸ್ಸಿನಲ್ಲಿ ಭೂತಸಾಮಾನ್ಯದಲ್ಲಿ ವಿಹಿತವಾದ ಲಿಟ್ಟಿಗೆ ವಿಕಲ್ಪವಾಗಿ ಕಾನಚ್ ಆದೇಶ ಬರುತ್ತದೆ ; ಎಂಬುದರಿಂದ ಇಲ್ಲಿ ಕಾನಚ್ ಆದೇಶಬಂದಿದೆ. ಕಾನಚಿನಲ್ಲಿ ಆನ ಎಂಬುದು ಉಳಿಯುತ್ತದೆ. ಲಿಟ್ ಪರದಲ್ಲಿರುವಾಗ **ಲಿಟಿ ಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ದ್ವಿತ್ವವು ಪ್ರಾಪ್ತವಾದರೆ **ಛಂದಸಿ ವೇತಿ ವಕ್ತವ್ಯಮ್** (ಪಾ. ಸೂ. ೬-೧-೧ ರಲ್ಲಿ ವಾರ್ತಿಕ ೧) ಎಂಬುದರಿಂದ ದ್ವಿರ್ವಚನವು ಬರುವುದಿಲ್ಲ. ಧಾತುವು ಇದಿತ್ತಾದುದರಿಂದ ನುಮಾಗಮ ಬರುತ್ತದೆ. ಮತ್ತತೆ ಯನ್ನು ಹೊಂದಿದವನು ಎಂಬರ್ಥದಲ್ಲಿ ಮಂದಾನಃ ಎಂದು ರೂಪಸಿದ್ಧಿಯಾಗಿದೆ.

**ಅಂಧಸಃ**— ಅದ ಭಕ್ಷಣೇ ಧಾತು. ಅದಾದಿ, **ಅದೇರ್ನುಮ್ ಧಶ್ಚ** (ಉ. ಸೂ. ೪-೬-೫೫) **ಸರ್ವಧಾತು ಭ್ಯೋಽಸುನ್** (ಉ. ಸೂ. ೪-೬-೨೮) ಎಂಬುದರಿಂದ ಅಸುನ್ ಎಂಬುದು ಅನುವೃತ್ತವಾಗುತ್ತದೆ. ಅದ್ ಧಾತುವಿಗೆ ಭಕ್ತಂ ಅಂದರೆ ಅನ್ನ ಎಂಬರ್ಥದಲ್ಲಿ ಅಸುನ್ ಪ್ರತ್ಯಯವೂ ಧಾತುವಿಗೆ ನುಮಾಗಮವೂ, ಧಾತುವಿನ ದಕಾರಕ್ಕೆ ಧಕಾರವೂ ಬರುತ್ತದೆ. ಅಸುನ್ ಪ್ರತ್ಯಯದಲ್ಲಿ ಅಸ್ ಎಂಬುದು ಉಳಿಯುತ್ತದೆ. ಸಕಾರಾಂತ ಶಬ್ದವಾಗುತ್ತದೆ. ಷಷ್ಠ್ಯೇಕವಚನದಲ್ಲಿ ಙಸ್ ಪ್ರತ್ಯಯಮಾಡಿದಾಗ ರೂಪಸಿದ್ಧಿಯಾಗುತ್ತದೆ.

**ಉಪ+ಯಾಹಿ— ಛಂದಸಿ ಪರೇಽಪಿ** (ಪಾ. ಸೂ. ೧-೪-೮೧) **ವ್ಯವಹಿತಾಶ್ಚ** (ಪಾ. ಸೂ. ೧-೪-೮೨) ಎಂಬುದರಿಂದ ಛಂದಸ್ಸಿನಲ್ಲಿ ಪೂರ್ವದಲ್ಲಿಯೇ ಇರಬೇಕೆಂದು ನಿಯಮವಿಲ್ಲ. ವ್ಯವಧಾನವಿದ್ದಾಗಲೂ ಉಪಸರ್ಗಗಳ ಯೋಗ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಯುನಜ್ಮಿ ತೇ ಬ್ರಹ್ಮಣಾ ಕೇಶಿನಾ ಹರೀ ಉಪ ಪ್ರ ಯಾಹಿ
ದಧಿಷೇ ಗಭಸ್ತ್ಯೋಃ ।
ಉತ್ತ್ವಾ ಸುತಾಸೋ ರಭಸಾ ಅಮಂದಿಷುಃ ಪೂಷಣ್ವಾನ್ವಜ್ರಿ-
ನ್ತ್ಸಮು ಪತ್ನ್ಯಾಮದಃ ॥ ೬ ॥

॥ ಪದಪಾಠಃ ॥

ಯುನಜ್ಮಿ । ತೇ । ಬ್ರಹ್ಮಣಾ । ಕೇಶಿನಾ । ಹರೀ ಇತಿ । ಉಪ । ಪ್ರ । ಯಾಹಿ ।
ದಧಿಷೇ । ಗಭಸ್ತ್ಯೋಃ ।
ಉತ್ । ತ್ವಾ । ಸುತಾಸಃ । ರಭಸಾಃ । ಅಮಂದಿಷುಃ । ಪೂಷಣ್ಽವಾನ್ ।
ವಜ್ರಿನ್ । ಸಂ । ಊಂ ಇತಿ । ಪತ್ನ್ಯಾ । ಅಮದಃ ॥ ೬ ॥

ಸಾಯಣಭಾಷ್ಯಂ

ಅಂತ್ಯೇಷ್ವಹಃಸು ಹಾರಿಯೋಜನಸ್ಯ ಯುನಜ್ಮೀತ್ಯೇಷಾ ಯಾಜ್ಯಾ। ಸೂತ್ರಿತಂ ಚ । ಯುನಜ್ಮಿತೇ ಬ್ರಹ್ಮಣಾ ಕೇಶಿನಾ ಹರೀ ಇತಿ ಯಾಜ್ಯಾನುವಾಕ್ಯೇ ಅಂತ್ಯೇಷ್ವಹಃಸು । ಆ. ೬-೧೧ । ಇತಿ ॥

ಹೇ ಇಂದ್ರ ಕೇಶಿನಾ ಕೇಶಯುಕ್ತೌ ಶಿಖಾವಂತೌ ತೇ ಹರೀ ತ್ವದೀಯಾವಶ್ವೌ ಬ್ರಹ್ಮಣಾ ಸ್ತೋತ್ರರೂಪೇಣ ಮಂತ್ರೇಣ ಯುನಜ್ಮಿ। ರಥೇ ಸಂಯೋಜಯಾಮಿ। ತೇನ ರಥೇನೋಪ ಪ್ರ ಯಾಹಿ। ತ್ವದ್ಗೃಹಮುಪಗಚ್ಛ । ಗಭಸ್ತ್ಯೋಃ। ಬಾಹುನಾಮೈತತ್ । ಬಾಹ್ವೋರಶ್ವಬಂಧಕಾನ್ ರಶ್ಮೀನ್ ದಧಿಷೇ । ಧಾರಯಸ್ವ । ತ್ವಾ ತ್ವಾಂ ಸುತಾಸೋ ಯಜ್ಞೇಽಭಿಷುತಾಃ ಸೋಮಾ ರಭಸಾ ವೇಗವಂತಃ। ತೀವ್ರಾಃ ಕ್ಷಿಪ್ರಂ ಮದಕಾರಿಣ ಇತ್ಯರ್ಥಃ। ಉದಮಂದಿಷುಃ। ಉತ್ಕೃಷ್ಟಮದಯುಕ್ತಮಕಾರ್ಷುಃ । ಹೇ ವಜ್ರಿನ್ ಅತಸ್ತ್ವಂ ಸ್ವಗೃಹಂ ಗತ್ವಾ ಪೂಷಣ್ವಾನ್। ಅತ್ರ ಪೂಷಶಬ್ದಃ ಪುಷ್ಟೌ ವರ್ತತೇ । ಪುಷ್ಟಿರ್ವೈ ಪೂಷಾ ಪುಷ್ಟಿಮೇನಾವರುಂಧ್ಧ ಇತಿ ಶ್ರುತೇಃ। ಸೋಮಪಾನಜನಿತಯಾ ಪುಷ್ಟ್ಯಾ ಯುಕ್ತಃ ಸನ್ ಪತ್ನ್ಯಾ

**ಸ್ವಭಾರ್ಯಯಾ ಸಹ ಸಮು ಅಮದಃ । ಸಮ್ಯಗೇವ ತೃಪ್ತೋ ಭವ ॥ ಕೇಶಿನಾ । ಕೇಶಶಬ್ದಾನ್ಮತ್ವರ್ಥೀಯ ಇನಿಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ರಭಸಾಃ । ಅರ್ಶ ಆದಿತ್ವಾದಚ್ । ಅಮಂದಿಷುಃ । ವ್ಯತ್ಯಯೇನ ಪರಸ್ಮೈಪದಂ । ಪೂಷಣ್ವಾನ್। ಪುಷ ಪುಷ್ಟೌ। ಶ್ವನ್ನುಕ್ಷನ್ನಿತ್ಯಾದೌ ಪೂಷನ್ನಿತಿ ನಿಪಾತ್ಯತೇ । ತಚ್ಚಾತ್ರ ಭಾವಸಾಧನಂ ದ್ರಷ್ಟವ್ಯಂ। ಪೂಷಾಽಸ್ಯಾಸ್ತೀತಿ ಪೂಷಣ್ವಾನ್। ಮಾದುಪಧಾಯಾ ಇತಿ ಮತುಪೋ ವತ್ವಂ । ನಲೋಪೇಽನೋ ನುಟ್ । ಪಾ ೮-೨-೧೬ । ಇತಿ ನುಟ್ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉಧಾತ್ತತ್ವಂ । ಅಮದಃ । ಮದೀ ಹರ್ಷೇ । ಛಂದಸಿ ಲುಙ್‌ಲಙ್‌ಲಿಟ ಇತಿ ಪ್ರಾರ್ಥನಾಯಾಂ ಲಙ್ । ಶ್ಯನಿ ಪ್ರಾಪ್ತೇ ವ್ಯತ್ಯಯೇನ ಶಪ್ ॥**

॥ ಪ್ರತಿಪದಾರ್ಥ ॥

**ಕೇಶಿನಾ**— (ಎಲೈ ಇಂದ್ರನೇ) ಉದ್ದವಾದ ಕೇಸರಗಳಿಂದ ಕೂಡಿದ । **ತೇ**—ನಿನ್ನ । **ಹರೀ**—ಕುದುರೆಗಳನ್ನು । **ಬ್ರಹ್ಮಣಾ**— ಸ್ತೋತ್ರರೂಪವಾದ ಮಂತ್ರಗಳನ್ನು ಹೇಳಿಕೊಂಡು । **ಯುನಜ್ಮಿ**— (ನಿನ್ನ ರಥಕ್ಕೆ) ಕಟ್ಟುತ್ತೇನೆ. । **ಉಪ ಪ್ರಯಾಹಿ**— (ಆ ರಥದಲ್ಲಿ ಕುಳಿತು) ಮನೆಗೆ ಹೊರಡು. । **ಗಭಸ್ತ್ಯೋಃ**— (ನಿನ್ನ) ಕೈಗಳಿಂದ । **ದಧಿಷೇ**— ಲಗಾಮುಗಳನ್ನು ಹಿಡಿ. । **ತ್ವಾ**—ನಿನ್ನನ್ನು । **ಸುತಾಸಃ**—(ಯಜ್ಞನಲ್ಲಿ) ಹಿಂಡಿದವೂ । **ರಭಸಾಃ**— ತೀವ್ರವಾಗಿ ಉದ್ರೇಕವನ್ನುಂಟುಮಾಡುವುವೂ ಆದ ಸೋಮರಸಗಳು । **ಉದಮಂದಿಷುಃ**—ಅಧಿಕವಾಗಿ ಮದಯುಕ್ತನನ್ನಾಗಿ ಮಾಡಿವೆ. (ಆದ್ದರಿಂದ) । **ವಜ್ರಿನ್**— ವಜ್ರಾಯುಧವನ್ನು ಹಿಡಿದಿರುವ ಇಂದ್ರನೇ । **ಪೂಷಣ್ವಾನ್**— (ರಸಪಾನದಿಂದ) ಪುಷ್ಟನಾಗಿ । **ಪತ್ನ್ಯಾ**— ಭಾರ್ಯೆಯೊಡನೆ । **ಸಮು ಅಮದಃ**—ಸಂತೃಪ್ತಿಯನ್ನು ಪಡೆ. ।

॥ ಭಾವಾರ್ಥ

ಎಲೈ ಇಂದ್ರನೇ, ದೀರ್ಘವಾದ ಕೇಸರಗಳಿಂದ ಕೂಡಿದ ನಿನ್ನ ಕುದುರೆಗಳನ್ನು ಮಂತ್ರಪೂರ್ವಕವಾಗಿ ನಿನ್ನ ರಥಕ್ಕೆ ಕಟ್ಟುತ್ತೇನೆ. ಕೈಯಲ್ಲಿ ಕಡಿವಾಣಗಳನ್ನು ಹಿಡಿದುಕೊಂಡು ಗೃಹಾಭಿಮುಖವಾಗಿ ಹೊರಡು. ಜಾಗ್ರತೆ ಮದುವನ್ನುಂಟುಮಾಡತಕ್ಕ ಸೋಮರಸಗಳು ನಿನ್ನನ್ನು ಮತ್ತನನ್ನಾಗಿ ಮಾಡಿವೆ. ಆ ರಸಪಾನದಿಂದ ಪುಷ್ಟನಾದ ನೀನು ಹಿಂತಿರುಗಿ ಮನೆಗೆ ಹೋಗಿ ನಿನ್ನ ಭಾರ್ಯೆಯೊಡನೆ ರಮಿಸಿ ಸಂತೃಪ್ತನಾಗು.

## English Translation

I harness your long-maned horses with proper prayers ; take the reins in your hands, the extracted Soma-juices have exhilerated you ; O weilder of the thunderbolt, thus filled with nourshing food, rejoice with your wife.

॥ ವಿಶೇಷವಿಷಯಗಳು ॥

**ಕೇಶಿನಾ— ಶಿಖಾವಂತೌ ॥** ಕೇಸರಯುಕ್ತವಾದ

**ಗಭಸ್ತ್ಯೋಃ—ಹಸ್ತಯೋಃ ।** ಕೈಗಳಲ್ಲಿ ; ಆಯತೀ ಚ್ಯವಾನಾ ಮೊದಲಾದ ಹನ್ನೆರಡು ಬಾಹುನಾಮಗಳ

ಸಾಧ್ಯದಲ್ಲಿ ಗಭಸ್ತಿ ಎಂಬ ಶಬ್ದವು ಪಠಿತವಾಗಿರುವುದರಿಂದ ಗಭಸ್ತ್ಯೋಃ ಎಂದರೆ ಕೈಗಳಲ್ಲಿ, ಬಾಹುಗಳಲ್ಲಿ ಎಂದರ್ಥವು

**ಪೂಷಣ್ವಾನ್**—ಇಲ್ಲಿ ಪೂಷಶಬ್ದಕ್ಕೆ ಭಾಷ್ಯಕಾರರು ಪುಷ್ಟಿಯೆಂದು ಅರ್ಥಮಾಡಿ ಅದನ್ನು ಸಮರ್ಥಿಸು ವುದಕ್ಕಾಗಿ-**ಪುಷ್ಟಿರ್ವೈ ಪೂಷಾ । ಪುಷ್ಟಿಮೇವಾವರುಂಧೇ** (ತೈ. ಬ್ರಾ. ೨-೭-೨-೧) ಎಂಬ ತೈತ್ತಿರೀಯಬ್ರಾಹ್ಮಣ ಶ್ರುತಿವಾಕ್ಯವನ್ನು ಉದಹರಿಸಿರುವರು

ವ್ಯಾಕರಣಪ್ರಕ್ರಿಯಾ

**ಕೇಶಿನಾ**—ನಕಾರಾಂತ ಶಬ್ದದ ಮೇಲೆ ದ್ವಿತೀಯಾದ್ವಿವಚನದಲ್ಲಿರುವ ರೂಪ. ಕೇಶಾಃ ಅನಯೋಃ ಸಂತಿ- ಕೇಶಗಳು ಇವುಗಳಿಗೆ ಇವೆ ಎಂಬರ್ಥದಲ್ಲಿ **ಅತ ಇನಿ ಠನೌ** (ಪಾ. ಸೂ. ೫-೨-೧೧೫) ಅದಂತಪ್ರಾತಿಪದಿಕದ ಮೇಲೆ ಮತ್ವರ್ಥದಲ್ಲಿ ಇನಿಪ್ರತ್ಯಯ ಬಂದಿದೆ. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಇನಿ ಪರದಲ್ಲಿರುವಾಗ ಕೇಶವೆಂಬುದರ ಅಕಾರಕ್ಕೆ ಲೋಪ ಬರುತ್ತದೆ. ಕೇಶಿನ್+ಔ ಎಂದಿರುವಾಗ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ಬಂದರೆ ರೂಪಸಿದ್ಧಿಯಾಗುತ್ತದೆ.

**ರಭಸಾಃ**—ರಭಸ ಶಬ್ದಕ್ಕೆ ವೇಗವೆಂದರ್ಥ. ಇಲ್ಲಿ ವೇಗಸಹಿತವಾದವುಗಳು ಎಂದರ್ಥ. ರಭಸ ಶಬ್ದವು ಅರ್ಶ ಆದಿಯಲ್ಲಿ ಸೇರಿರುವುದರಿಂದ **ಅರ್ಶಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಮತ್ವರ್ಥದಲ್ಲಿ ಅಚ್‌ಪ್ರತ್ಯಯ ಬರುತ್ತದೆ. ಯಸ್ಯೇತಿ ಚ ಎಂಬುದರಿಂದ ಪ್ರಕೃತಿಯ ಅಕಾರಕ್ಕೆ ಲೋಪಬಂದರೂ ರಭಸವೆಂದೇ ಆಗುತ್ತದೆ. ಪ್ರಥಮಾ ಬಹುವಚನದಲ್ಲಿ ರೂಪಸಿದ್ಧಿಯಾಗಿದೆ.

**ಅಮಂದಿಷುಃ**—ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು. ಧಾತು. ಭ್ವಾದಿ ಆತ್ಮನೇಪದಿ. **ವ್ಯತ್ಯಯೋ ಬಹುಲಂ** ( ಪಾ. ಸೂ. ೩-೧-೮೫ ) ಎಂಬುದರಿಂದ ವ್ಯತ್ಯಯದಿಂದ ಇಲ್ಲಿ ಪರಸ್ಮೈಪದ ಪ್ರತ್ಯಯ ಬರುತ್ತದೆ. ' ಸುಪ್ತಿಙುಪಗ್ರಹ ಲಿಂಗನರಾಣಾಂ ಕಾಲಹಲಚ್ ಸ್ವರಕರ್ತೃಯಙಾಂಚ । ವ್ಯತ್ಯಯ ಮಿಚ್ಛತಿ ಶಾಸ್ತ್ರಕೃದೇಷಾಂ ಸೋಽಪಿ ಚ ಸಿಧ್ಯತಿ ಬಾಹುಲಕೇನ' ಎಂಬ ಕಾರಿಕೆಯಲ್ಲಿಯೂ ಉಪಗ್ರಹಪದದಿಂದ ಪರಸ್ಮೈಪದಾತ್ಮನೇಪದಗಳನ್ನು ತೆಗೆದುಕೊಂಡು ವ್ಯತ್ಯಯವನ್ನು ಹೇಳಿರುವರು. ಬಹುವಚನದ ಝಿ ಪ್ರತ್ಯಯಕ್ಕೆ **ಸಿಜಭ್ಯಸ್ತವಿದಿಭ್ಯಶ್ಚ** (ಪಾ. ಸೂ. ೩-೪-೧೦೯) ಎಂಬುದರಿಂದ ಜುಸಾದೇಶ ಬರುತ್ತದೆ. ಜುಸಿನಲ್ಲಿ ಉಸ್ ಉಳಿಯುತ್ತದೆ. ಲುಙನಲ್ಲಿ ಪ್ರಾಪ್ತವಾದ ಚ್ಲಿಗೆ ಸಿಚ್ ಬಂದರೆ ಸಿಚಿಗೆ ವಲಾದಿಲಕ್ಷಣ ಇಡಾಗಮ ಬರುತ್ತದೆ. ಇಣಿನ ಪರದಲ್ಲಿರುವ ಸಿಚ್ ಸಂಬಂಧಿ ಸಕಾರಕ್ಕೆ ಷತ್ವ ಬರುತ್ತದೆ. ಧಾತುವಿಗೆ ಲುಙ್ ನಿಮಿತ್ತವಾದ ಅಡಾಗಮ ಬರುತ್ತದೆ. ಅಮದ್+ಇಸ್+ಉಸ್ ಧಾತುವಿಗೆ ನುಮಾಗಮ ಬಂದರೆ ರುತ್ವ ವಿಸರ್ಗಗಳು ಬರುತ್ತವೆ.

**ಪೂಷಣ್ವಾನ್**—ಪುಷ ಪುಷ್ಟೌ ಧಾತು. ಈ ಧಾತುವಿನಮೇಲೆ **ಶ್ವನ್ನುಕ್ಷನ್** ( ಉ. ಸೂ. ೧-೧೫೭ ) ಎಂಬುದರಿಂದ ಕನಿನ್ ಪ್ರತ್ಯಯವಾದಿ ನಿಪಾತಿತವಾಗಿದೆ. ಶಾಸ್ತ್ರಾಂತರದಿಂದ ಅಪ್ರಾಪ್ತವಾದ ಕಾರ್ಯಗಳನ್ನು ಸೇರಿಸಿ ಉಚ್ಚರಿಸುವುದೇ ನಿಪಾತವೆನಿಸುತ್ತದೆ. ಇಲ್ಲಿ ಆ ಕನಿನ್ ಪ್ರತ್ಯಯವು ಭಾವಾರ್ಥದಲ್ಲಿ ಬಂದಿದೆ ಎಂದು ಸ್ವೀಕರಿಸ ಬೇಕು. ಪೂಷಾ ಅಸ್ಯ ಅಸ್ತೀತಿ—ಪುಷ್ಟಿಯು (ಬಲ) ಇವನಿಗೆ ಇದೆ ಎಂಬರ್ಥದಲ್ಲಿ **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ ಬರುತ್ತದೆ. ಪೂಷನ್+ಮತ್ ಎಂದಿರುವಾಗ

**ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** ( ಪಾ. ಸೂ. ೮-೨-೯ ) ಎಂಬುದರಿಂದ ಇಲ್ಲಿ ಅಕಾರ ಉಪಧೆಯಾಗಿ ಉಳ್ಳ ಶಬ್ದದ ಮೇಲೆ ಮತುಪ್ ಬಂದುದರಿಂದ ಮತುಪಿನ ಮಕಾರಕ್ಕೆ ವಕಾರ ಬರುತ್ತದೆ. **ಅನೋನುಟ್** ( ಪಾ. ಸೂ. ೮.೨-೧೬ ) ಅನ್ನಂತದ ಪರದಲ್ಲಿರುವ ಮತುಪಿಗೆ ನುಟ್ ಬರುತ್ತದೆ. ಇಲ್ಲಿ ಪೂಷನ್+ವತ್ ಎಂದಿರುವಾಗ ನಲೋಪಃ ಪ್ರಾದಿಪದಿಕಾಂತಸ್ಯ ಎಂಬ ಸೂತ್ರದಿಂದ ಪೂಷನ್ ಎಂಬಲ್ಲಿರುವ ನಕಾರಕ್ಕೆ ಲೋಪ ಬಂದಮೇಲೆ ಸ್ಥಾನಿವದ್ಭಾವದಿಂದಾಗಲಿ ಭೂತಪೂರ್ವಗತಿಯನ್ನು ಆಶ್ರಯಿಸಿಯಾಗಲೀ ಅನ್ನಂತದ ಪರದಲ್ಲಿ ಮತುಪಿದೆಯೆಂದು ನುಡಾಗನು ಬರುತ್ತದೆ. ಅಧ್ಯಯನವಾಗಿ ಬಂದರೆ ಪುನಃ ನಕಾರಶ್ರವಣವಾಗುತ್ತದೆ. ಪ್ರಥಮಾ ಸು ಪರದಲ್ಲಿರುವಾಗ ಮತುಪಿನಲ್ಲಿ ಉಗಿತ್ತ್ವಾದುದರಿಂದ ನುಮ್ ಬರುತ್ತದೆ. ಅತ್ವಂತವಾದುದರಿಂದ ಉಪಧಾ ದೀರ್ಘ ಬರುತ್ತದೆ. ಸಂಯೋಗಾಂತಲೋಪವಾದಿದಾಗ ಅದು ಅಸಿದ್ಧವಾದುದರಿಂದ ಪುನಃ ಕೊನೆಯ ನುಮಿನ ನಕಾರಕ್ಕೆ ಲೋಪಬರುವುದಿಲ್ಲ. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಹ್ರಸ್ವವಾದ ಅಂತೋದಾತ್ತದ ಪರದಲ್ಲಿರುವ ನುಟಿನ ಪರದಲ್ಲಿರುವ ಮತುಪ್ ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ನುಟಿನ ಪರದಲ್ಲಿ ಮತುಪ್ ಇರುವುದರಿಂದ ಉದಾತ್ತಸ್ವರ ಬಂದಿದೆ.

**ಅಮದಃ**— ಮದೀ ಹರ್ಷೇ ಧಾತು ದಿವಾದಿ **ಛಂದಸಿ ಲುಙ್‌ಲಙ್‌ಲಿಟಃ** ( ಪಾ. ಸೂ. ೩-೪-೬ ) ಎಂಬುದರಿಂದ ಪ್ರಾರ್ಥನಾರೂಪ ಅರ್ಥದಲ್ಲಿ ಲಙ್ ಬಂದಿದೆ. ದಿವಾದಿಗೆ ಶ್ಯನ್ ವಿಕರಣವು ಪ್ರಾಪ್ತವಾದರೆ ವ್ಯತ್ಯಯದಿಂದ ಶಪ್ ಬರುತ್ತದೆ. ಮಧ್ಯಮಪುರುಷೈಕವಚನದಲ್ಲಿ ಸಿಪ್ ಪ್ರತ್ಯಯ ಬಂದಾಗ ಮದ್+ಅ+ಸ್. ಎಂದಾಗುತ್ತದೆ ಲಙ ಪರದಲ್ಲಿರುವಾಗ ಧಾತುವಿಗೆ (ಅಂಗಕ್ಕೆ) ಅಡಾಗನು ಬರುತ್ತದೆ. ‖ ೬ ‖



# ಎಂಭತ್ತಮೂರನೆಯ ಸೂಕ್ತವು

**ಅಶ್ವಾವತೀತಿ ಷಡೃಚಂ ದಶಮಂ ಸೂಕ್ತಂ ಗೋತಮಸ್ಯಾರ್ಷಮೈಂದ್ರಂ ಜಾಗತಂ । ತಥಾ ಚಾನುಕ್ರಾಂತಂ । ಅಶ್ವಾವತಿ ಜಾಗತಮಿತಿ । ಅತಿರಾತ್ರೇ ತೃತೀಯೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿಶಸ್ತ್ರ ಇದಂ ಸೂಕ್ತಂ । ಸೂತ್ರಿತಂ ಚ । ಅಶ್ವಾವತಿ ಪ್ರೋಗ್ರಾಂ ಪೀತಿಂ ವೃಷ್ಣ ಇಯರ್ಮಿ ಸತ್ಯಾಮಿತಿ ಯಾಜ್ಯಾ । । ಆ ೬-೪ । ಇತಿ ॥**

ಅನುವಾದವು— **ಅಶ್ವಾವತಿ ಪ್ರಥಮಃ**—ಎಂಬ ಸೂಕ್ತವು ಹದಿಮೂರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋತಮನು ಋಷಿಯು, ಇಂದ್ರನು ದೇವತೆಯು,

ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಶ್ವಾವತಿ ಜಾಗತಂ** ಎಂದು ಹೇಳಿರುವುದು. ಅತಿರಾತ್ರವೆಂಬ ಯಾಗದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರದ ತೃತೀಯಪರ್ಯಾಯದಲ್ಲಿ ಈ ಸೂಕ್ತದ ವಿನಿಯೋಗವಿರುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದಲ್ಲಿ **ಅಶ್ವಾವತಿ ಪ್ರೋಗ್ರಾಂ ಪೀತಿಂ ವೃಷ್ಣ ಇಯರ್ಮ್ಯಿ ಸತ್ಯಾಮಿತಿ ಯಾಜ್ಯಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೪)



## ಸೂಕ್ತ—೮೩

ಮಂಡಲ—೧ ‖ ಅನುವಾಕ—೧೩ ‖ ಸೂಕ್ತ—೮೩ ‖

ಅಷ್ಟಕ—೧ ‖ ಅಧ್ಯಾಯ—೬ ‖ ವರ್ಗ—೪

ಸೂಕ್ತದಲ್ಲಿರುವ ಋಕ್ಸಂಖ್ಯೆ—೬

‖ ಋಷಿಃ—ಗೋತಮೋ ರಾಹೂಗಣಃ ‖

‖ ದೇವತಾ—ಇಂದ್ರಃ ‖

‖ ಛಂದಃ—ಜಗತೀ ‖

ಸಂಹಿತಾಪಾಠಃ

ಅಶ್ವಾ᳚ವತಿ ಪ್ರಥ॒ಮೋ ಗೋಷು॑ ಗಚ್ಛತಿ ಸುಪ್ರಾ॒ವೀರಿ᳚ಂದ್ರ॒ ಮರ್ತ್ಯ॒-
ಸ್ತವೋ॒ತಿಭಿಃ॑ ।
ತಮಿತ್ಪೃ॑ಣಕ್ಷಿ ವಸು॑ನಾ॒ ಭವೀ॑ಯಸಾ॒ ಸಿಂಧು॒ಮಾಪೋ॒ ಯಥಾ॒-
ಭಿತೋ॒ ವಿಚೇ॑ತಸಃ ॥ ೧ ॥

ಪದಪಾಠಃ

ಅಶ್ವಽವತಿ । ಪ್ರಥಮಃ । ಗೋಷು । ಗಚ್ಛತಿ । ಸುಪ್ರಽಅವೀಃ । ಇಂದ್ರ । ಮರ್ತ್ಯಃ । ತವ । ಊತಿಽಭಿಃ ।

ತಂ । ಇತ್ । ಪೃಣಕ್ಷಿ । ವಸುನಾ । ಭವೀಯಸಾ । ಸಿಂಧುಂ । ಆಪಃ । ಯಥಾ । ಅಭಿತಃ । ವಿಽಚೇತಸಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯೋ ಮರ್ತ್ಯೋ ಮನುಷ್ಯಸ್ತವೋತಿಭಿಸ್ತ್ವದೀಯೈ ರಕ್ಷಣೈಃ ಸುಪ್ರಾವೀಃ ಸುಷ್ಠು ಪ್ರರಕ್ಷಿತೋ ಭವತಿ ಸ ಮರ್ತ್ಯೋಽಶ್ವಾವತಿ ಬಹುಭಿರಶ್ವೈರ್ಯುಕ್ತೇ ಗೃಹೇ ವರ್ತಮಾನೋ ಗೋಷು ಪ್ರಾಪ್ತವ್ಯೇಷು ಪ್ರಥಮೋ ಗಚ್ಛತಿ । ಸರ್ವೇಭ್ಯೋ ಯಜಮಾನೇಭ್ಯಃ ಪೂರ್ವಮೇವ ಗೋಮಾನ್ ಭವತೀತ್ಯರ್ಥಃ । ತ್ವಂ ತಮಿತ್ ತಮೇವ ಪುರುಷಂ ಭವೀಯಸಾ ಬಹುತರೇಣ ಭವಿತೃತಮೇನ ವಾ ಶತಸಹಸ್ರಾದಿಸಂಖ್ಯಾಯುಕ್ತೇನ ವಸುನಾ ಧನೇನ ಪೃಣಕ್ಷಿ । ಸಂಪೃಕ್ತಂ ಸಂಪೂರ್ಣಂ ಕರೋಷಿ । ತತ್ರ ದೃಷ್ಟಾಂತಃ । ವಿಚೇತಸೋ ವಿಶಿಷ್ಟಜ್ಞಾನಹೇತುಭೂತಾ ಆಪೋ ಯಥಾಭಿತಃ ಸರ್ವಾಸು ದಿಕ್ಷು ಸಿಂಧುಂ ಸಮುದ್ರಂ ಪೂರಯಂತಿ ತದ್ವತ್ ॥ ಅಶ್ವಾವತಿ । ಮಂತ್ರೇ ಸೋಮಾಶ್ವೇತಿ ಮತೌ ದೀರ್ಘತ್ವಂ । ಸುಪ್ರಾವೀಃ । ಅವಿತೃಸ್ತೃತಂತ್ರಿಭ್ಯ ಈಃ । ಉ ೩-೧೫೮ । ಇತ್ಯವತೇರೀಕಾರಪ್ರತ್ಯಯಃ । ಊತಿಭಿಃ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ । ಪೃಣಕ್ಷಿ । ಪೃಚೀ ಸಂಪರ್ಕೇ । ರೌಧಾದಿಕಃ । ಭವೀಯಸಾ । ಬಹುಶಬ್ದಾದೀಯಸುನಿ ಬಹೋರ್ಲೋಪೋ ಭೂ ಚ ಬಹೋರಿತಿ ಬಹುಶಬ್ದಸ್ಯ ಭೂಭಾವ ಈಯಸುನ ಈಕಾರಲೋಪಶ್ಚ । ಅತ್ರ ತು ಛಾಂದಸತ್ವಾದೀಕಾರಲೋಪೋ ನ ಕ್ರಿಯತೇ ಭೂಭಾವಶ್ಚ ಕ್ರಿಯತೇ । ಅಥವಾ ಭವಿತೃಶಬ್ದಾತ್ತುಶ್ಛಂದಸೀತೀಯಸುನ್ । ತುರಿಷ್ಠೇಮೇಯಃಸ್ವಿತಿ ತೃಲೋಪಃ ॥ ೧ ॥

ಪ್ರತಿಪದಾರ್ಥ

**ಇಂದ್ರ**— ಎಲೈ ಇಂದ್ರನೇ । **ಮರ್ತ್ಯಃ**—(ಯಾವ) ಮಾನವನು । **ತವ**— ನಿನ್ನ । **ಊತಿಭಿಃ**— ರಕ್ಷಣೆಗಳಿಂದ । **ಸುಪ್ರಾವೀಃ**— ಚೆನ್ನಾಗಿ ರಕ್ಷಿತನಾಗುತ್ತಾನೋ, (ಅವನು) । **ಅಶ್ವಾವತಿ**— ಕುದುರೆಗಳಿಂದ ಭರಿತವಾದ ಮನೆಯಲ್ಲಿ (ಇದ್ದುಕೊಂಡು) । **ಗೋಷು**— ಗೋವುಗಳಲ್ಲಿ । **ಪ್ರಥಮಃ**— ಮೊದಲನೆಯವನಾಗಿ । **ಗಚ್ಛತಿ**— ಸೇರುತ್ತಾನೆ. ಎಲ್ಲರಿಗಿಂತಲೂ ಮೊದಲು ಇಂತಹ ಯಜಮಾನನು ಗೋವುಗಳನ್ನು ಹೊಂದುತ್ತಾನೆ. । **ತ್ವಮಿತ್**—ಅದೇ ಯಜಮಾನನನ್ನು । **ಆಪಃ**— ನೀರುಗಳು ಅಥವಾ (ನದಿಗಳು) । **ವಿಚೇತಸಃ**— ಚೇತನರಹಿತವಾದರೂ ಕೂಡ । **ಯಥಾ**— ಯಾವರೀತಿ । **ಅಭಿತಃ**— ಎಲ್ಲಾ ದಿಕ್ಕುಗಳಿಂದಲೂ । **ಸಿಂಧುಂ**—

ಸಮುದ್ರವನ್ನು (ತುಂಬುತ್ತವೆಯೋ)ಹಾಗೆ । **ಭವೀಯಸಾ**— ನಾನಾವಿಧವಾದ ಅಥವಾ ಶ್ರೇಷ್ಠವಾದ । **ವಸುನಾ**— ಧನದಿಂದ । **ಪೃಣಕ್ಷಿ**— ತುಂಬಿದವನನ್ನಾಗಿ ಮಾಡುತ್ತೀಯೆ. ।

ಭಾವಾರ್ಥ

ಎಲೈ ಇಂದ್ರನೇ, ನಿನ್ನಿಂದ ರಕ್ಷಿತನಾದ ಮಾನವನು ಕುದುರೆಗಳಿಂದ ಭರಿತವಾದ ಮನೆಯಲ್ಲಿದ್ದುಕೊಂಡು ಉಳಿದವರೆಲ್ಲರಿಗಿಂತಲೂ ಮುಂಚೆಯೇ ಅಧಿಕವಾದ ಗೋವುಗಳನ್ನು ಪಡೆಯುತ್ತಾನೆ. ನೀನೂ ಆ ಯಜಮಾನನಿಗೆ ಚೇತನರಹಿತವಾದರೂ ಸಹ ಯಾವರೀತಿ ನದಿಗಳು ನಾನಾ ದಿಕ್ಕುಗಳಿಂದಲೂ ಸಮುದ್ರವನ್ನು ನೀರಿನಿಂದ ತುಂಬುತ್ತವೆಯೋ ಹಾಗೆ ಬಹುವಿಧವಾದ ಧನಗಳನ್ನು ಒದಗಿಸಿ ಅವನನ್ನು ಸಂಪದ್ಯುಕ್ತನನ್ನಾಗಿ ಮಾಡುತ್ತೀಯೆ.

English Translation

Indra, the man who is well protected by you dwells in a house with plenty of horses ; he is the first to go to the place where there are cows. fill him with plenty of riches as the rivers unconsciously flow in all directions to reach the ocean.

॥ ವಿಶೇಷವಿಷಯಗಳು ॥

**ಅಶ್ವಾವತಿ**— ಅನೇಕ ಕುದುರೆಗಳಿಂದ ಕೂಡಿದ ಗೃಹದಲ್ಲಿ ಇರುವನು ಎಂದರೆ ಇವನ ಗೃಹದಲ್ಲಿ ಬೇಕಾದಷ್ಟು ಕುದುರೆಗಳಿರುವವು. ಇಲ್ಲಿ ಗೃಹಶಬ್ದವಿಲ್ಲದಿದ್ದರೂ ಭಾಷ್ಯಕಾರರು ಅರ್ಥಸಮನ್ವಯಕ್ಕಾಗಿ ಅಧ್ಯಾಹಾರಮಾಡಿರುವರು. ಈ ಸೂಕ್ತದಲ್ಲಿರುವ ಋಕ್ಕುಗಳೆಲ್ಲವೂ ಅಸ್ಪಷ್ಟಾರ್ಥದಿಂದ ಕೂಡಿರುವವು. ಅನೇಕ ಶಬ್ದಗಳನ್ನು ಅರ್ಥಸಮನ್ವಯಕ್ಕಾಗಿ ಅಧ್ಯಾಹಾರಮಾಡಿಕೊಳ್ಳಬೇಕಾಗಿರುವುದು. ಆದರೂ ಆ ರೀತಿ ಕೆಲವು ಶಬ್ದಗಳನ್ನು ಅಧ್ಯಾಹಾರಮಾಡಿ ಒಂದು ವಿಧವಾದ ಅರ್ಥವನ್ನು ಹೊಂದಿಸಿದರೂ ಋಷಿಯ ಆಶಯವನ್ನು ಸರಿಯಾಗಿ ವಿವರಿಸಲಾಗುವುದೆಂದು ಹೇಳುವುದು ಸಂಶಯಾಸ್ಪದವಾಗಿರುವುದು.

**ಪ್ರಥಮೋ ಗೋಷು ಗಚ್ಛತಿ**— ಈ ವಾಕ್ಯದ ಅರ್ಥವು ಸರಿಯಾಗಿ ಹೊಂದುವುದಿಲ್ಲ. ಆದರೂ **ಅಶ್ವಾವತಿ** ಎಂಬ ಶಬ್ದಕ್ಕೆ ಹೇಳಿದಂತೆ ಇವನ ಗೃಹದಲ್ಲಿ ಅನೇಕ ಗೋವುಗಳಿರುವವು ಎಂಬ ಅರ್ಥವನ್ನೇ ಊಹಿಸಬಹುದು.

**ಸುಪ್ರಾವೀಃ ಊತಿಭಿಃ**—ಇಲ್ಲಿ ನಿನ್ನ ರಕ್ಷಣೆಗಳಿಂದ ರಕ್ಷಿಸಲ್ಪಟ್ಟಿರುವನು. ಎಂದು ದ್ವಿರುಕ್ತಿಯಿರುವುದು. ಎಂದರೆ ನಿನ್ನ ರಕ್ಷಣೆಗೊಳಪಟ್ಟ ಅಥವಾ ನೀನು ರಕ್ಷಿಸುವ ಮನುಷ್ಯನು ಎಂದು ಮುಖ್ಯಾಭಿಪ್ರಾಯವು.

**ತಮಿತ್ ಪೃಣಕ್ಷಿ ವಸುನಾ**—ಧನ ಅಥವಾ ಐಶ್ವರ್ಯದಿಂದ ಆ ಮನುಷ್ಯನನ್ನು ತುಂಬುವೆ. ಎಂದರೆ ಅವನಿಗೆ ಬಹಳ ಐಶ್ವರ್ಯವನ್ನು ಕೊಡುವೆ ಎಂದರ್ಥವು

**ಭವೀಯಸಾ** – ಬಹುತರೇಣ, **ಭವಿತೃತಮೇನ**—ಬಹಳವಾಗಿ, ಯಥೇಚ್ಛವಾಗಿ

ಆಪಃ ವಿಚೇತಸಃ -- **ವಿಚೇತಸಃ** ಎಂಬ ಶಬ್ದಕ್ಕೆ ಭಾಷ್ಯಕಾರರು **ವಿಶಿಷ್ಟಜ್ಞಾನಹೇತುಭೂತಾಃ**

ಎಂದರೆ ಸಮಸ್ತ ಜ್ಞಾನದಿಂದ ಕೂಡಿದ ನೀರುಗಳು ಅಥವಾ ನದಿಗಳು ಎಂದರ್ಥಮಾಡಿರುವರು. ಅಚೇತನವಾದ ನೀರಿಗೆ ಜ್ಞಾನವಿರುವುದು ಹೇಗೆ? ಇದು ಅಸಂಭವನಾದ್ದರಿಂದ **ವಿಚೇತಸಃ**—ಎಂಬ ಶಬ್ದದಲ್ಲಿರುವ ವಿ ಎಂಬ ಉಪಸರ್ಗಕ್ಕೆ ವಿಗತ ಎಂದು ನಿಷೇಧಾರ್ಥವನ್ನು ಹೇಳಿದಲ್ಲಿ ಅರ್ಥವು ಸ್ವಲ್ಪಮಟ್ಟಿಗೆ ಹೊಂದುವುದು ಆದುದರಿಂದ ವಿಚೇತಸಃ ಎಂದರೆ ಜ್ಞಾನರಹಿತವಾದ ನದಿಗಳು ; ಅಥವಾ ನದಿಗಳಿಗ ಸಮುದ್ರಕ್ಕೆ ಹೋಗಿ ಸೇರಬೇಕೆಂಬ ಜ್ಞಾನ ವಿಲ್ಲದಿದ್ದರೂ ನಿಮ್ಮ ಪ್ರದೇಶಗಳಲ್ಲಿ ಹರಿಯುತ್ತಾ ಕೊನೆಗೆ ಸಮುದ್ರವನ್ನು ಸೇರುವಂತೆ ಎಂಬ ಅರ್ಥವನ್ನೇ ಹೇಳಬೇಕಾಗಿರುವುದು.

**ಅಭಿತಃ**—ಎಲ್ಲಾ ಕಡೆಯಲ್ಲಿಯೂ ಎಂದರೆ ನದಿಗಳು ಯಾವ ದಿಕ್ಕಿಗಭಿಮುಖವಾಗಿ ಹರಿಯುತ್ತಿದ್ದರೂ ಕೊನೆಗೆ ಸಮುದ್ರವನ್ನೇ ಸೇರುವವು ; ಎಲ್ಲಾ ದಿಕ್ಕಿನಲ್ಲಿ ಹರಿಯುವ ನದಿಗಳೂ ಸಮುದ್ರವನ್ನೇ ಸೇರುವವು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಾವತಿ**—ಅಶ್ವಾಃ ಅಸ್ಮಿನ್ ಸಂತಿ ( ಕುದುರೆಗಳು ಇಲ್ಲಿ ಇವೆ ) ಎಂಬರ್ಥದಲ್ಲಿ **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ ಬರುತ್ತದೆ. ಮಾದುಪಧಾಯಾ—ಎಂಬ ಸೂತ್ರದಿಂದ ಅಕಾರದ ಪರದಲ್ಲಿರುವುದರಿಂದ ಮತುಪಿನ ಮಕಾರಕ್ಕೆ ವಕಾರ ಬರುತ್ತದೆ. **ಮಂತ್ರೇ ಸೋಮಾಶ್ವೇಂದ್ರಿಯ ವಿಶ್ವದೇವ್ಯಸ್ಯ ಮತೌ** (ಪಾ. ಸೂ. ೬-೩-೧೩೧) ಎಂಬುದರಿಂದ ಮತುಪ್ ಪರದಲ್ಲಿರುವುದರಿಂದ ಮಂತ್ರದಲ್ಲಿ ಅಶ್ವಶಬ್ದಕ್ಕೆ ದೀರ್ಘ ಬರುತ್ತದೆ. ಸಪ್ತಮ್ಯೇಕವಚನ ಙಿ ಪ್ರತ್ಯಯಪರದಲ್ಲಿರುವಾಗ ಅಶ್ವಾವತಿ ಎಂದು ಸಿದ್ಧ ವಾಗುತ್ತದೆ.

**ಸುಪ್ರಾವೀಃ**—ಸು ಪ್ರ ಉಪಸರ್ಗಗಳು. ಅವ ರಕ್ಷಣೆ ಧಾತು. ಭ್ವಾದಿ **ಅವಿತೃಸ್ತೃತಂತ್ರಿಭ್ಯ ಈಃ** (ಉ. ಸೂ. ೩-೪೩೮) ಎಂಬುದರಿಂದ ಅವಧಾತುವಿಗೆ ಈ ಪ್ರತ್ಯಯ ಬರುತ್ತದೆ. ಅವೀ+ಸ್ ಎಂದಿರುವಾಗ ಈ ಪ್ರತ್ಯಯಾಂತವಾದುದರಿಂದ ಹಲ್‌ಙ್ಯಾಭ್ಯೋ ದೀರ್ಘಾತ್– ಸೂತ್ರದಿಂದ ಸುಲೋಪ ಬರುವುದಿಲ್ಲ. ರುತ್ವವಿಸರ್ಗಗಳು ಬಂದಾಗ ಅವೀಃ ಎಂದಾಗುತ್ತದೆ.

**ಊತಿಭಿಃ**—ಅವ ರಕ್ಷಣೇ ಧಾತು. **ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ** (ಪಾ. ಸೂ. ೩-೩-೯೭) ಇವುಗಳಿಗೆ ಕ್ತಿನ್ ಪ್ರತ್ಯಯವು ನಿಪಾತಿತವಾಗಿದೆ. ಊತಿ ಎಂಬಲ್ಲಿ ಅವಧಾತುವಿಗೆ ಕ್ತಿನ್‌ಪ್ರತ್ಯಯ ಮಾಡಿದಾಗ **ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ** (ಪಾ. ಸೂ ೬-೪-೨೦) ಎಂಬುದರಿಂದ ವಕಾರಕ್ಕೆ ಊಠ್ ಬರುತ್ತದೆ. ಸೂತ್ರದಿಂದ ರೂಪ ಸಿದ್ಧವಾದರೂ ಊತಿಜೂತಿ ಎಂಬ ಸೂತ್ರದಿಂದ ಸ್ವರಾರ್ಥವಾಗಿ ನಿಪಾತಮಾಡಿರುತ್ತಾರೆ. ಕ್ತಿನ್ ನಿತ್ತಾದುದರಿಂದ ಬರತಕ್ಕ ಸ್ವರವನ್ನು ಬಾಧಿಸಿ ಉದಾತ್ತಸ್ವರವು ನಿಪಾತಿತವಾಗಿದೆ.

**ಪೃಣಕ್ಷಿ**—ಪೃಚೀ ಸಂಪರ್ಕೇ ಧಾತು. ರುಧಾದಿ. ಇವುಗಳಿಗೆ ಶ್ನಮ್ ವಿಕರಣಪ್ರತ್ಯಯ ಬರುತ್ತದೆ ಮಿತ್ತಾಗುದರಿಂದ ಅಂತ್ಯಾಚಿನ ಪರದಲ್ಲಿ ಬರುತ್ತದೆ. ಪೃನಚ್+ಸಿ ಎಂದಿರುವಾಗ **ಋವರ್ಣಾನ್ನಸ್ಯಣತ್ವಂವಾಚ್ಯಂ** (ವಾರ್ತಿಕ) ಎಂಬುದರಿಂದ ವಿಕರಣಕ್ಕೆ ಣತ್ವವು ಬರುತ್ತದೆ. **ಚೋಃ ಕುಃ** ಎಂಬುದರಿಂದ ಕಕಾರವು ಚಕಾರಕ್ಕೆ

ಬರುತ್ತದೆ. ಕಕಾರದ ಪರದಲ್ಲಿರುವುದರಿಂದ ಪ್ರತ್ಯಯಕ್ಕೆ ಷತ್ವಬಂದಾಗ ಕಕಾರಷಕಾರಯೋಗ ಬಂದಿರುವುದರಿಂದ ಕ್ಷಕಾರವಾಗುತ್ತದೆ.

**ಭವೀಯಸಾ**—ಭವೀಯಸ್ ಶಬ್ದ. ಸಕಾರಾಂತ ತೃತೀಯೈಕವಚನ. **ದ್ವಿವಚನ ವಿಭಜ್ಯೋಪಪದೆ ತರಬೀಯಸುನೌ** (ಪಾ. ಸೂ. ೫-೩-೫೭) ಎಂಬುದರಿಂದ ಅತಿಶಯಾರ್ಥದಲ್ಲಿ ಬಹುಶಬ್ದದ ಮೇಲೆ ಈಯಸುನ್ ಪ್ರತ್ಯಯಬಂದಿದೆ. ಈಯಸುನ್ ಪರದಲ್ಲಿರುವಾಗ **ಬಹೋರ್ಲೋಪೋಭೂಚ ಬಹೋಃ** (ಪಾ. ಸೂ ೬-೪-೧೫೮) ಬಹುಶಬ್ದದ ಮೇಲಿರುವ ಇಮನಿಚ್, ಈಯಸುನ್ ಪ್ರತ್ಯಯಗಳಿಗೆ ಲೋಪಬರುತ್ತದೆ. ಬಹುಶಬ್ದಕ್ಕೆ ಭೂ ಎಂಬ ಆದೇಶ ಬರುತ್ತದೆ. (ಪಂಚಮ್ಯಂತದ ಪರದಲ್ಲಿರುವುದಕ್ಕೆ ಕಾರ್ಯವಿಧಾನಮಾಡಿದರೆ **ಆದೇಃ ಪರಸ್ಯ** (ಪಾ. ಸೂ. (ಪಾ. ಸೂ. ೧-೧-೫೪) ಎಂಬ ಪರಿಭಾಷೆಯಿಂದ ಪರದ ಆದಿಭಾಗಕ್ಕೆ ಮಾತ್ರ ಬರುತ್ತದೆ ಎಂಬುದರಿಂದ ಬಹುಶಬ್ದದ ಪರದಲ್ಲಿರುವ ಈಯಸುನಿನ ಈಕಾರಕ್ಕೆ ಮಾತ್ರ ಲೋಪಪ್ರಾಪ್ತವಾಗುತ್ತದೆ. ಬಹುಶಬ್ದಕ್ಕೆ ಭೂಭಾವವು ಪ್ರಾಪ್ತವಾಗುತ್ತದೆ. ಆದರೆ ಇಲ್ಲಿ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೆ** ಎಂಬ ಯೋಗವಿಭಾಗದಿಂದ ಸಿದ್ಧವಾದ ಅರ್ಥವನ್ನು ಸ್ವೀಕರಿಸಿ ಬಹು ಎಂಬುದಕ್ಕೆ ಭೂಭಾವಮಾತ್ರ ಬರುತ್ತದೆ. ಈಯಸುನಿನ ಈಕಾರಕ್ಕೆ ಲೋಪಮಾತ್ರ ಬರುವುದಿಲ್ಲ. ಈಯಸುನಿನಲ್ಲಿ ಈಯಸ್ ಎಂದು ಉಳಿಯುತ್ತದೆ. ಭೂ+ಈಯಸ್ ಎಂದಿರುವಾಗ **ಓರ್ಗುಣಃ** ಎಂಬುದರಿಂದ ತದ್ಧಿತ ಪರದಲ್ಲಿರುವುದರಿಂದ ಉವರ್ಣಾಂತಕ್ಕೆ ಗುಣ ಬರುತ್ತದೆ. ಭವ್+ಈಯಸ್ ಎಂದಿರುವಾಗ ತೃತೀಯೈಕವಚನ ಟಾವಿಭಕ್ತಿಮಾಡಿದಾಗ ಭವೀಯಸಾ ಎಂದಾಗುತ್ತದೆ. ಅಥವಾ ಇನ್ನೊಂದು ರೀತಿಯಿಂದ ಈ ಶಬ್ದವನ್ನು ಸಿದ್ಧಪಡಿಸಬಹುದು. ಭವಿತೃ ಶಬ್ದದ ಮೇಲೆ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ತೃನ್‌ತೃಜಂತಗಳ ಮೇಲೆ ಛಂದಸ್ಸಿನಲ್ಲಿ ಈಯಸುನ್ ಪ್ರತ್ಯಯವು ಬರುತ್ತದೆ. ಭೂಧಾತುವಿಗೆ ತೃಚ್ ಪ್ರತ್ಯಯಮಾಡಿದಾಗ ಗುಣಾವಾದೇಶಗಳು ಬಂದಾಗ ಭವಿತೃ ಶಬ್ದವಾಗುತ್ತದೆ. ಭವಿತೃ+ಈಯಸ್ ಎಂದಿರುವಾಗ **ತುರಿಷ್ಠೇಮೇಯಃಸು** (ಪಾ. ಸೂ ೬-೪-೧೫೪) ಎಂಬುದರಿಂದ ಇಷ್ಠನ್, ಇಮನಿಚ್ ಈಯಸುನ್ ಪ್ರತ್ಯಯಗಳು ಪರದಲ್ಲಿರುವಾಗ ತೃನ್ ತೃಚ್‌ಗಳಿಗೆ ಲೋಪ ಬರುತ್ತದೆ ಎಂಬುದರಿಂದ ತೃ ಎಂಬುದಕ್ಕೆ ಲೋಪ ಬರುತ್ತದೆ. ಸವರ್ಣದೀರ್ಘ ಬಂದರೆ ಭವೀಯಸ್ ಎಂಬ ರೂಪಸಿದ್ಧಿಯಾಗುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ಆಪೋ ನ ದೇವೀರುಪ ಯಂತಿ ಹೋತ್ರಿಯಮವಃ ಪಶ್ಯಂತಿ ವಿತ-
ತಂ ಯಥಾ ರಜಃ ।
ಪ್ರಾಚೈರ್ದೇವಾಸಃ ಪ್ರ ಣಯಂತಿ ದೇವಯುಂ ಬ್ರಹ್ಮಪ್ರಿಯಂ
ಜೋಷಯಂತೇ ವರಾ ಇವ ॥ ೨ ॥

ಪದಪಾಠಃ

ಆಪಃ । ನ । ದೇವೀಃ । ಉಪ । ಯಂತಿ । ಹೋತ್ರಿಯಂ । ಅವಃ । ಪಶ್ಯಂತಿ ।
ವಿಽತತಂ । ಯಥಾ । ರಜಃ ।
ಪ್ರಾಚೈಃ । ದೇವಾಸಃ । ಪ್ರ । ನಯಂತಿ । ದೇವಽಯುಂ । ಬ್ರಹ್ಮಽಪ್ರಿಯಂ । ಜೋ-
ಷಯಂತೇ । ವರಾಃಽಇವ ॥ ೨ ॥

ಸಾಯಣಭಾಷ್ಯಂ

ಅಪೋನಪ್ತ್ರೀಯೇ ಹೋತೃಚಮಸೇಽದ್ಭಿಃ ಪೂರ್ಯಮಾಣ ಆಪೋ ನ ದೇವೀರಿತ್ಯೇಷಾನು-ವಕ್ತವ್ಯಾ । ಸೂತ್ರಿತಂ ಚ । ಆಪೋ ನ ದೇವೀರುಪ ಯಂತಿ ಹೋತ್ರಿಯಮಿತಿ ಸಮಾಪ್ಯ। ಆ. ೫-೧। ಇತಿ ಬ್ರಾಹ್ಮಣಂ ಚ ಭವತಿ । ಆಪೋ ನ ದೇವೀರುಪ ಯಂತಿ ಹೋತ್ರಿಯಮಿತಿ ಹೋತೃಚಮಸೇ ಸಮವನೀಯಮಾನಾಸ್ವನ್ವಾಹ। ಐ. ಬ್ರಾ. ೨-೨೦ । ಇತಿ ॥

ಹೋತ್ರಿಯಂ ಹೋತುಃ ಸ್ವಭೂತಂ ಚಮಸಂ ದೇವೀರ್ದೇವ್ಯೋ ದ್ಯೋತಮಾನಾ ಆಪೋ ನ ಯಥಾಪ ಉಪ ಯಂತಿ ಉಪಗಚ್ಛಂತಿ ತದ್ವದುಪರಿ ವರ್ತಮಾನಾ ದೇವಾ ಏತಮೇವ ಚಮಸಮವೋಽವಸ್ತಾತ್ಪಶ್ಯಂತಿ । ಹೋತೃಚಮಸೇಽಸ್ಮಾಕಂ ಸೋಮಾಭಿಷವಾಯಾಪಃ ಪೂರಿತಾ ಇತಿ ತೇಷಾಂ ದೃಷ್ಟಿರಪ್ಯಸ್ಮಿನ್ ಸಂಲಗ್ನಾಭೂತ್ । ತತ್ರ ದೃಷ್ಟಾಂತಃ । ವಿತತಂ ವಿಸ್ತೀರ್ಣಂ ರಜೋ ಜ್ಯೋತಿಃ ಸೂರ್ಯಸಂಬಂಧಿ ಯಥಾ ನಿರಂತರಮವಸ್ತಾತ್ಪತತಿ ತದ್ವತ್ । ದೇವಯುಂ ದೇವಾನ್ ಕಾಮಯಮಾನಮೇತಂ ಚಮಸಂ

ಪ್ರಾಚ್ಯೈಃ ಪ್ರಾಚೀನಂ ಯದ್ವಾ ಪ್ರಾಂಚನೈಃ ಪ್ರಗಮನೈರುತ್ತರವೇದ್ಯಭಿಮುಖಂ ಹೋಮಕಾಲೇ ಪ್ರಣಯಂತಿ । ಹೋಮಾರ್ಥೇ ಪ್ರಣೀತಂ ಬಹ್ಮಪ್ರಿಯಂ ಬ್ರಹ್ಮಣಾ ಸೋಮಲಕ್ಷಣೇನಾನ್ನೇನ ಪ್ರೀತಂ ಸಂತೃಪ್ತಂ । ಪೂರಿತಮಿತ್ಯರ್ಥಃ । ಜೋಷಯಂತೇ । ಸರ್ವೇ ದೇವಾಸ್ತಂ ಚಮಸಂ ಸೇವಂತೇ । ವರಾ ಇವ ಕನ್ಯಕಾಂ । ಯಥಾ ವರಾ ಮಮೇಯಂ ಭವಿಷ್ಯತಿ ಮಮೇಯಂ ಭವಿಷ್ಯತೀತಿ ಕನ್ಯಕಾಂ ಸೇವಂತೇ । ಏವಂ ದೇವಾ ಅಪಿ ಮಮಾಯಂ ಸೋಮೋ ಮಮಾಯಂ ಸೋಮ ಇತ್ಯಸ್ಯ ಪಾರ್ಶ್ವೇ ವರ್ತಂತ ಇತ್ಯರ್ಥಃ। ಏವಮುಪೋನಪ್ತ್ರೀಯವಿನಿಯೋಗಾನುಸಾರೇಣ ಯೋಜಿತಂ ಮಂತ್ರಸ್ಯಾನುಷ್ಠೇಯಾರ್ಥಪ್ರಕಾಶಕತ್ವಾತ್॥ ಯದಾ ತು ರಾತ್ರಿಪರ್ಯಾಯೇಽಸ್ಯಾ ವಿನಿಯೋಗಸ್ತದಾ ತ್ವೇವಂ ವ್ಯಾಖ್ಯೇಯಂ । ಹೇ ಇಂದ್ರ ದೇವ್ಯ ಆಪೋ ಯಥಾ ನಿಮ್ನದೇಶಮುಪಗಚ್ಛಂತಿ ಏವಂ ದೇವಾಸ್ತ್ವದೀಯಂ ಸ್ತೋತ್ರಂ ಶುಶ್ರೂಷಮಾಣಾ ಹೋತ್ರಿಯಂ ಹೋತೃಸಂಬಂಧಿ ಧಿಷ್ಣ್ಯಸ್ಥಾನಮುಪಗಚ್ಛಂತಿ । ಉಪಗತ್ಯ ಚಾವಸ್ತಾತ್ಪಶ್ಯಂತಿ ವಿತತಂ ಜ್ಯೋತಿರಿವ । ದೇವಯುಂ ದೇವಾನಾತ್ಮನ ಇಚ್ಛಂತಮೇತಂ ಶಂಸಿತಾರಮಾಗತಾಃ ಸರ್ವೇ ದೇವಾಃ ಪ್ರಾಚೀನಂ ಪ್ರ ಣಯಂತಿ । ಅಗ್ರತೋ ಧಾರಯಂತಿ । ಬ್ರಹ್ಮಪ್ರಿಯಂ ಸ್ತೋತ್ರಪ್ರಿಯಂ ತ್ವಾಂ ಶಂಸಂತಂ ವರಾಃ ಕನ್ಯಕಾ ಇವ ಸೇವಂತೇ ॥ ಹೋತ್ರಿಯಂ । ಹೋತೃಶಬ್ದಾತ್ತಸ್ಯೇದಮರ್ಥೇ ಘಪ್ರತ್ಯಯಃ । ಅವಃ। ಪೂರ್ವಾಧರಾವರಾಣಾಮಸಿ ಪುರಧವಶ್ಚೈಷಾಮಿತ್ಯಸಿಪ್ರತ್ಯಯಾಂತೋದಾತ್ತಃ । ಪ್ರಾಚ್ಯೈಃ। ಉಚ್ಚೈರ್ನೀಚೈರಿತಿವದನ್ವಯಂ । ಯದ್ವಾ । ಪ್ರಪೂರ್ವಾದಂಚತೇರ್ಘಞರ್ಥೇ ಕವಿಧಾನಂ ಸ್ಥಾಸ್ನಾಪಾವ್ಯಧಿಹನಿಯುಧ್ಯರ್ಥಮಿತಿಪರಿಗಣನಸ್ಯೋಪಲಕ್ಷಣಾರ್ಥತ್ವಾದ್ಭಾವೇ ಕಪ್ರತ್ಯಯಃ । ಅನಿದಿತಾಮಿತಿ ನಲೋಪಃ । ಜೋಷಯಂತೇ।ಜುಷೀ ಪ್ರೀತಿಸೇವನಯೋಃ । ಸ್ವಾತ್ಮನಃ ಪ್ರಯೋಜ್ಯತ್ವಾದ್ಧೇತುಮತಿ ಣಿಚ್ ॥ ೨ ॥

॥ ಪ್ರತಿಪದಾರ್ಥ ॥

ಹೋತ್ರಿಯಂ— ಹೋತೃವಿಗೆ ಸೇರಿದ ಚಮಸಪಾತ್ರೆಯನ್ನು । **ದೇವೀಃ**— ಪ್ರಕಾಶಮಾನಗಳಾದ । **ಆಪೋ ನ**— ತೀರ್ಥಗಳು ಬಂದುಸೇರುವಂತೆ । **ಉಪ ಯಂತಿ**—(ದೇವತೆಗಳು) ಬಂದು ಸೇರುವರು । **ವಿತತಂ**— ವಿಸ್ತಾರವಾಗಿ ಹರಡುವ । **ಜ್ಯೋತಿಃ**— ಸೂರ್ಯನ ಕಾಂತಿಯು । **ಯಥಾ**—ಯಾವ ರೀತಿ ಅಧೋಮುಖವಾಗಿ ಪ್ರಸರಿಸುವುದೋ ಹಾಗೆ ದೇವತೆಗಳೂ ಸಹ ಈ ರಸಪೂರಿತವಾದ ಸೌಟನ್ನು । **ಅವಃ**— ಅಧೋಮುಖವಾದ ದೃಷ್ಟಿಯಿಂದ । **ಪಶ್ಯಂತಿ**—ನೋಡುತ್ತಾರೆ । **ದೇವಯುಂ**—ದೇವತೆಗಳನ್ನು ನಿರೀಕ್ಷಿಸಿ ಅವರಿಗೆ ಅರ್ಪಿಸತಕ್ಕ ಈ ಸೌಟನ್ನು । **ಪ್ರಾಚ್ಯೈಃ**—( ಉತ್ತರವೇದಿಯ ) ಮುಂಭಾಗದಲ್ಲಿ । **ದೇವಾಸಃ**—ದೇವತೆಗಳು । **ಪ್ರಣಯಂತಿ**— ತೆಗೆದುಕೊಂಡುಹೋಗುತ್ತಾರೆ । **ಬ್ರಹ್ಮಪ್ರಿಯಂ**— ( ಸೋಮರಸರೂಪವಾದ) ಅನ್ನದಿಂದ ತುಂಬಿರುವ ಚಮಸವನ್ನು । **ವರಾ ಇವ**— ಮದುವೆಯ ಗಂಡುಗಳು ತಮ್ಮ ಹೊಸಪತ್ನಿಯನ್ನು ತನ್ನದೆಂಬ ಅಭಿಮಾನದಿಂದ ಆದರಿಸಿ ಸೇವಿಸಲು ತವಕಪಡುವಂತೆ । **ಜೋಷಯಂತೆ**—(ತಮ್ಮದೆಂದು) ಆದರಿಸಿ ಸೇವಿಸಲು ತವಕಪಡುತ್ತಾರೆ ।

**ಅಥವಾ**

(ಎಲೈ ಇಂದ್ರನೇ) **ದೇವೀಃ**—ಪ್ರಕಾಶಮಾನಗಳಾದ । **ಅಪಃ ನ**—ತೀರ್ಥಗಳು ತಗ್ಗಾದ ಪ್ರದೇಶಗಳಲ್ಲಿ ಹೋಗಿ ಸೇರುವಂತೆ । **ಹೋತ್ರಿಯಂ**— ಹೋತೃಸಂಬಂಧವಾದ ಧಿಷ್ಣ್ಯಸ್ಥಾನವನ್ನು । **ಉಪ ಯಂತಿ**— ದೇವತೆಗಳು (ನಿನ್ನ ಸ್ತೋತ್ರವನ್ನು ಕೇಳುವ ಆಸೆಯಿಂದ ) ಬಂದುಸೇರುತ್ತಾರೆ । ಮತ್ತು **ವಿತತಂ**—ವಿಸ್ತಾರವಾಗಿ ಹರಡುವ । **ರಜಃ ಯಥಾ**— ಜ್ಯೋತಿಯಂತೆ । **ಅವಃ**— ಅಧೋಮುಖವಾಗಿ । **ಪಶ್ಯಂತಿ**— ನೋಡುತ್ತಾರೆ ।

**ದೇವಯುಂ**—ದೇವತೆಗಳ ಅನುಗ್ರಹವನ್ನ ಪೇಕ್ಷಿಸುವ ಸ್ತೋತೃವನ್ನು । **ಪ್ರಾಚೈಃ**—ಮುಂಭಾಗದಲ್ಲಿ (ಪೂರ್ವ ಭಾಗದಲ್ಲಿ) । **ಪ್ರಣಯಂತಿ**—ಕರೆದುಕೊಂಡು ಹೋಗುತ್ತಾರೆ.। **ಬ್ರಹ್ಮಪ್ರಿಯಂ**—ಸ್ತೋತೃಪ್ರಿಯನಾದ ನಿನ್ನನ್ನು । **ವರಾಃಇವ**—ವರರು (ಕನ್ಯರೆಯರನ್ನು ತಮ್ಮದೆಂಬ ಅಭಿಮಾನದಿಂದ ಸೇವಿಸುವಂತೆ) । **ಜೋಷಯಂತೇ** । (ಆದರದಿಂದ) ಸೇವಿಸುತ್ತಾರೆ. ।

ಭಾವಾರ್ಥ

ಹೋತೃವಿಗೆ ಸೇರಿದ ಚಮಸಪಾತ್ರೆಗೆ ಪ್ರಕಾಶಮಾನಗಳಾದ ತೀರ್ಥಗಳು ಬಂದು ಸೇರುವಂತೆ ದೇವತೆಗಳೂ ಸಹ ಅದನ್ನು ಲಕ್ಷ್ಯದಲ್ಲಿಟ್ಟುಕೊಂಡು ಬಂದು ಸೇರುತ್ತಾರೆ. ಯಜ್ಞಭೂಮಿಗೆ ಬಂದಮೇಲೆ ವಿಸ್ತಾರವಾಗಿ, ಹರಡತಕ್ಕ ಸೂರ್ಯನ ಕಾಂತಿಯು ಅಧೋಮುಖವಾಗಿ ಪ್ರಸರಿಸುವಂತೆ ದೇವತೆಗಳ ಅಧೋಮುಖವಾದ ದೃಷ್ಟಿಯು ಈ ರಸಪೂರಿತವಾದ ಸೌಟಿನ ಮೇಲೆ ಬೀಳುತ್ತದೆ. ದೇವತೆಗಳನ್ನು ನಿರೀಕ್ಷಿಸಿ ಅವರಿಗೆ ಅರ್ಪಿಸಬೇಕಾದ ಈ ಸೌಟನ್ನು ಉತ್ತರವೇದಿಯ ಮುಂಭಾಗದಲ್ಲಿ ಶಾಸ್ತ್ರೋಕ್ತವಾಗಿ ತೆಗೆದುಕೊಂಡುಹೋದ ಮೇಲೆ ಸೋಮರಸಪೂರಿತವಾದ ಈ ಚಮಸವನ್ನು ಸೇವಿಸಲು, ಹೊಸದಾಗಿ ಮದುವೆಯಾಗುವವರು ತಾವು ಮದುವೆಯಾಗಬೇಕೆಂದು ಅಪೇಕ್ಷಿಸುವ ಕನ್ಯೆಯನ್ನು ತಮ್ಮನ್ನು ವರಿಸಬೇಕೆಂಬ ಅಪೇಕ್ಷೆಯಿಂದ ಆದರಿಸಿ ಸೇವಿಸಲು ತವಕಪಡುವಂತೆ ಇವರೂ ಆದರದಿಂದ ತವಕಪಡುತ್ತಾರೆ.

English Translation

As the bright waters flow to the sacrificial ladle, so the gods look down upon it ; as the sun's rays spread every where and descends to earth so the gods desirous of being presented to them look down upon it ; the (Chamasa) vessel filled with Soma-libations is brought to the altar with proper rites and the gods are eager to obtain it as the would-be bridgrooms long for their intended brides.

ವಿಶೇಷವಿಷಯಗಳು

**ಹೋತ್ರಿಯಂ**— ಹೋತೃಸಂಬಂಧವಾದ ಚಮಸಪಾತ್ರೆಯು. ಚಮಸಪಾತ್ರೆ ಎಂದರೆ ಯಜ್ಞದಲ್ಲಿ ಋತ್ವಿಗ್ಜನರು ಸೋಮಪಾನಮಾಡುವುದಕ್ಕಾಗಿ ಉಪಯೋಗಿಸುವ ಮರದ ಪಾತ್ರೆಯು. ಇದರ ವಿಸ್ತಾರವಾದ ವಿವರಣೆಗಾಗಿ ಋಗ್ವೇದ ಸಂ. ಭಾಗ ೩. ಪುಟ 412 ನ್ನು ನೋಡಿ. ಋಕ್ಕಿನಲ್ಲಿ ಹೋತ್ರಿಯಂ— ಹೋತೃಸಂಬಂಧವಾದ ಹೋತೃವಿನ ಎಂಬ ಶಬ್ದ ಮಾತ್ರವಿದ್ದರೂ ಭಾಷ್ಯಕಾರರು ಚಮಸವೆಂಬ ಶಬ್ದವನ್ನು ಅಧ್ಯಾಹಾರಮಾಡಿರುವರು.

**ಅಪೋ ನ ದೇವೀರುಪಯಂತಿ ಹೋತ್ರಿಯಮವಃ ಪಶ್ಯಂತಿ**—ಈ ವಾಕ್ಯದಲ್ಲಿ ದೇವಾಃ ಎಂಬ ಶಬ್ದವನ್ನು ಅಧ್ಯಾಹಾರಮಾಡಿರುವರು. ನೀರು ಎಂದರೆ ರಸರೂಪದಿಂದಿರುವ ಸೋಮರಸವು ಯಾವರೀತಿ ಹೋತೃಚಮಸಕ್ಕೆ ಬಂದು ಸೇರುವುದೋ ಅದರಂತೆ ದೇವತೆಗಳ ದೃಷ್ಟಿಯು ಸೋಮಪಾನಕ್ಕಾಗಿ ಆತುರದಿಂದ ಸೋಮರಸಪೂರಿತವಾದ ಚಮಸಪಾತ್ರೆಯಮೇಲೆ ಬೀಳುವುದೆಂದರ್ಥವು.

**ವಿತತಂ ಯಥಾ ರಜಃ**—ಮೇಲಿನ ವಾಕ್ಯಕ್ಕೆ ಒಂದು ದೃಷ್ಟಾಂತವನ್ನು ಹೇಳಿರುವುದು. ಬೆಳಕು ಎಂದರೆ ಸೂರ್ಯನ ರಶ್ಮಿಯು ಅಂತರಿಕ್ಷದಿಂದ ಹೊರಹೊರಟು ಎಲ್ಲವನ್ನೂ ವ್ಯಾಪಿಸುತ್ತಾ ಭೂಮಿಯಮೇಲೆ ಬೀಳುವಂತೆ ದೇವತೆಗಳ ದೃಷ್ಟಿಯು ಸಹ ಭೂಮಿಯ ಮೇಲೆ ಯಜ್ಞವೇದಿಯಲ್ಲಿರುವ ಹೋತೃಚಮಸದ ಮೇಲೆ ಬೀಳುವುದು. ಎಂದು ಉಪಮಾರ್ಥವು

**ಪ್ರಾಚೈರ್ದೇವಾಸಃ ಪ್ರಣಯಂತಿ ದೇವಯುಂ ಬ್ರಹ್ಮಪ್ರಿಯಂ**—ಬ್ರಹ್ಮವೆಂದರೆ ಅನ್ನವು (ನಿ. ೩-೯) ಯಜ್ಞವೇದಿಯಲ್ಲಿ ಪೂರ್ವದಿಕ್ಕಿನಲ್ಲಿರುವ ಆವಹನೀಯಾಗ್ನಿಯ ಸಮೀಪಕ್ಕೆ ದೇವತೆಗಳಿಗೆ ಅರ್ಪಿಸುವ ಹವಿಸ್ಸು ಸೋಮರಸ ಮೊದಲಾದ ಹೋಮದ್ರವ್ಯಗಳನ್ನು ತಂದು ಮಂತ್ರಪಠನದಿಂದ ಸಂಸ್ಕಾರ ಮಾಡುವುದು ರೂಢಿಯು. ಆದರಂತೆ ದೇವತೆಗಳಿಗೆ ಪ್ರೀತಿಪಾತ್ರವಾದ ಹವಿರ್ಲಕ್ಷಣರೂಪವಾದ ಅನ್ನವನ್ನು ಪೂರ್ವದಿಕ್ಕಿಗೆ ತರುವರು. ಅದನ್ನು ದೇವತೆಗಳು ಅಪೇಕ್ಷಿಸುವರು ಎಂದು ಮುಖ್ಯಾಭಿಪ್ರಾಯವು.

**ಜೋಷಯಂತೇ ವರಾ ಇವ**—ದೇವತೆಗಳು ಹವಿಸ್ಸನ್ನು ಅಪೇಕ್ಷಿಸುವ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳಿರುವರು. ಓರ್ವ ಸುಂದರಳಾದ ಕನ್ಯೆಯನ್ನು ಮದುವೆಯಾಗಬೇಕೆಂದು ಅಪೇಕ್ಷಿಸುವ ವರರು (ಕನ್ಯಾರ್ಥಿಗಳು) ತಮಗೆ ಆ ಕನ್ಯೆಯು ದೊರೆಯಬೇಕೆಂದು ಆಸೆಪಟ್ಟು ನಾನಾವಿಧ ಉಪಚಾರಗಳಿಂದ ಅವಳ ಮನಸ್ಸನ್ನು ಒಲಿಸಿಕೊಳ್ಳಲು ಅಪೇಕ್ಷೆಪಡುವಂತೆ ದೇವತೆಗಳು ತಮಗಾಗಿ ಸಿದ್ಧಪಡಿಸಿರುವ ಹವಿಸ್ಸನ್ನು ಮತ್ತು ಸೋಮರಸವನ್ನು ಪಡೆಯುವುದಕ್ಕಾಗಿ ಹಾತೊರೆಯುತ್ತಿರುವರು ಎಂದು ಅಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಹೋತ್ರಿಯಮ್**—ಹು ದಾನಾದನಯೋಃ ಜುಹೋತ್ಯಾದಿ. ಈ ಧಾತುವಿನ ಮೇಲೆ ತೃಚ್ ಪ್ರತ್ಯಯ ಮಾಡಿದರೆ ಧಾತುವಿಗೆ ಗುಣಮಾಡಿದರೆ ಹೋತೃಶಬ್ದವಾಗುತ್ತದೆ. ಹೋತೃಸಂಬಂಧವಾದುದು ಎಂಬರ್ಥದಲ್ಲಿ **ತಸ್ಯೇದಂ** (ಪಾ. ಸೂ. ೪-೩-೧೨೦) ಎಂಬುದರಿಂದ ಘ ಪ್ರತ್ಯಯ ಬರುತ್ತದೆ. ಘ ಎಂಬುದಕ್ಕೆ **ಆಯನೇಯಿನಿ** (ಪಾ. ಸೂ. ೭-೧-೨) ಸೂತ್ರದಿಂದ ಇಯಾದೇಶ ಬರುತ್ತದೆ. ಯಣಾದೇಶ ಬಂದರೆ ಹೋತ್ರಿಯಶಬ್ದವಾಗುತ್ತದೆ.

**ಅವಃ—ಪೂರ್ವಾಧರಾವರಾಣಾಮಸಿ ಪುರಧವಶ್ಚೈಷಾಂ** (ಪಾ. ಸೂ. ೫-೩-೩೯) ಅಸಿ ಎಂಬುದು ಲುಪ್ತಪ್ರಥಮಾಕಶಬ್ದ. ಪೂರ್ವ, ಅಧರ, ಅವರ ಈ ಮೂರು ಶಬ್ದಗಳಿಗೆ ಅಸ್ತಾತ್ಯರ್ಥದಲ್ಲಿ ಅಸಿ ಪ್ರತ್ಯಯವು ಬರುತ್ತದೆ. ಅಸಿಪ್ರತ್ಯಯ ಸಂಬಂಧವಿರುವಾಗ ಮೂರು ಪ್ರಕೃತಿಗಳಿಗೆ ಕ್ರಮವಾಗಿ ಪುರ್, ಅಧ್, ಅವ್, ಎಂಬ ಆದೇಶಗಳು ಬರುತ್ತವೆ. ಅಸ್ತಾತಿಯು ಸ್ವಾರ್ಥದಲ್ಲಿಯೇ ಬರುವುದರಿಂದ ಅಸಿ ಪ್ರತ್ಯಯಕ್ಕೂ ಸ್ವಾರ್ಥವೇ ಅರ್ಥವಾಗುತ್ತದೆ. ಅರ್ಥವನ್ನು ಬೋಧಿಸುವುದು ಪ್ರತ್ಯಯ ಸಾಮಾನ್ಯಲಕ್ಷಣವಾದುದರಿಂದ ಇವುಗಳಿಗೆ ವಿಶೇಷಾರ್ಥ ಬೋಧನಶಕ್ತಿ ಇಲ್ಲದಿದ್ದರೂ ತಮ್ಮ ಪ್ರಕೃತ್ಯರ್ಥವನ್ನೇ ತಿಳಿಸುವುದರಮೂಲಕ ಸಾರ್ಥಕಗಳೆಂದು ತಿಳಿಯಬೇಕು. ಆದುದರಿಂದ ಇಲ್ಲಿ ಅವರ ಎಂಬರ್ಥದಲ್ಲಿಯೇ ಅಸಿಪ್ರತ್ಯಯ ಬರುತ್ತದೆ. ಪ್ರಕೃತಿಗೆ ಅವ್ ಎಂಬ ಆದೇಶ ಬಂದರೆ ಅವ್+ಅಸಿ ಎಂದಾಗುತ್ತದೆ. ಪ್ರತ್ಯಯದಲ್ಲಿ ಇಕಾರ ಉಚ್ಚಾರಣಾರ್ಥವಾದುದರಿಂದ ಸಕಾರಾಂತ ಅವ್ಯಯವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪ್ರಾಚೈಃ**—ಉಚ್ಚೈಃ ನೀಚೈಃ ಎಂಬಂತೆ ಇದೂ ಒಂದು ಅವ್ಯಯ. ಅಥವಾ ಪ್ರ ಎಂಬ ಉಪಸರ್ಗಪೂರ್ವಕವಾದ ಅಂಚು ಧಾತುವಿಗೆ ಭಾವಾರ್ಥದಲ್ಲಿ ಕ ಪ್ರತ್ಯಯಮಾಡಿದರೆ ರೂಪಸಿದ್ಧಿಯಾಗುತ್ತದೆ. ಕ ಎಂಬಲ್ಲಿ ಕಕಾರವು ತದ್ಧಿತಭಿನ್ನಪ್ರತ್ಯಯಾದಿಯಾದುದರಿಂದ ಇತ್ಸಂಜ್ಞೆಯನ್ನು ಹೊಂದುತ್ತದೆ. ಕಿತ್‌ಪ್ರತ್ಯಯ ಪರದಲ್ಲಿರುವುದರಿಂದ **ಅನಿದಿತಾಂ ಹಲ** (ಪಾ. ಸೂ. ೬-೪-೨೪) ಎಂಬುದರಿಂದ ಅಂಚುಧಾತುವಿನಲ್ಲಿರುವ ನಕಾರವು ಲೋಪವಾಗುತ್ತದೆ. ಪ್ರತ್ಯಯ ಸೇರಿಸಿದಾಗ ಅಕಾರಾಂತಶಬ್ದವಾಗುತ್ತದೆ ಕಪ್ರತ್ಯಯಮಾಡುವ ವಿಷಯದಲ್ಲಿ ಒಂದು ಶಂಕೆ ಬರುತ್ತದೆ. ಇಲ್ಲಿ **ಘಞರ್ಥೇ ಕವಿಧಾನಂ** (ವಾರ್ತಿಕ) ಎಂಬುದರಿಂದ ಭಾವಾರ್ಥದಲ್ಲಿ ಕಪ್ರತ್ಯಯವನ್ನು ಹೇಳಬೇಕು. ಆದರೆ ಈ ವಾರ್ತಿಕಶೇಷವಾಗಿ ಭಾಷ್ಯದಲ್ಲಿ '**ಸ್ಥಾಸ್ನಾಪಾವ್ಯಧಿ ಹನಿಯುಧ್ಯರ್ಥಮ್**' ಎಂದು ಪರಿಗಣನಮಾಡಿರುವರು. ಅಂದರೆ ಇಲ್ಲಿ ಪಠಿತವಾದುವುಗಳಿಗೆ ಮಾತ್ರ ಘಞರ್ಥದಲ್ಲಿ ಕಪ್ರತ್ಯಯವು ಬರುತ್ತದೆ ಎಂದು ತಿಳಿಯಬೇಕು. ಹೀಗಿರುವಾಗ ಈ ಧಾತುಪಾಠವನ್ನು ಅಲ್ಲಿ ಮಾಡದಿರುವಾಗ ಹೇಗೆ ಕಪ್ರತ್ಯಯವನ್ನು ಮಾಡಲು ಸಾಧ್ಯ? ಎಂದು ಪ್ರಶ್ನೆ ಬರುತ್ತದೆ. ಆದರೆ ಅಲ್ಲಿ ಪರಿಗಣನದಿಂದ ನಿಯಮಮಾಡಿದುದೆಂದು ತಿಳಿಯಬಾರದು. ಅವು ಉಪಲಕ್ಷಣವೆಂದು ತಿಳಿಯಬೇಕು. ಉಪಲಕ್ಷಣವೆಂದರೆ ಪಠಿತವಾದುವುಗಳ ಸಮಾನಗಳನ್ನೂ ತೆಗೆದುಕೊಳ್ಳಬೇಕೆಂದು ತಾತ್ಪರ್ಯ **ಕಾಕೇಭ್ಯೋ ದಧಿ ರಕ್ಷ್ಯತಾಂ** ಎಂದು ಒಬ್ಬನು ಹೇಳಿದರೆ ಅಲ್ಲಿ ಮೊಸರನ್ನು ಹಾಳುಮಾಡುವ ಕಾಗೆಯನ್ನು ಮಾತ್ರ ನಿರಾಸಬೇಕೆಂದು ವಕ್ತೃವಿಗೆ ತಾತ್ಪರ್ಯವಲ್ಲ. ಕಾಗೆಯಂತೆ ದಧಿಯನ್ನು ಹಾಳುಮಾಡುವ ಮಾರ್ಜಾಲಾದಿಗಳನ್ನೂ ಓಡಿಸಬೇಕೆಂದು ತಾತ್ಪರ್ಯ. ಅಂತೆಯೇ ಇಲ್ಲಿಯೂ ಧಾತುತ್ವದಿಂದ ಸಾದೃಶ್ಯವನ್ನು ಗ್ರಹಿಸಿ ಬೇರೆ ಧಾತುಗಳಿಗೂ ಘಞರ್ಥದಲ್ಲಿ ಕಪ್ರತ್ಯಯ ಬರುವುದೆಂದು ಊಹಿಸಬೇಕು.

**ಜೋಷಯಂತೇ**—ಜುಷೀ ಪ್ರೀತಿಸೇವನಯೋಃ ಧಾತು. ತುದಾದಿ. ಇದಕ್ಕೆ ಹೇತುವ್ಯಾಪಾರ ತೋರುವಾಗ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಪ್ರತ್ಯಯ ಬರುತ್ತದೆ. ಇಲ್ಲಿ ಕೇವಲ ಕರ್ತೃ (ದೇವತೆಗಳು) ವ್ಯಾಪಾರ ತೋರುವುದರಿಂದ ನಿಯೋಜ್ಯನೊಬ್ಬನು ತೋರದಿರುವುದರಿಂದ ಪ್ರಯೋಜ್ಯಗತವ್ಯಾಪಾರವು ಹೇಗೆ ತೋರುವುದು ಎಂಬ ಒಂದು ಶಂಕೆ ಬರುತ್ತದೆ. ಆದರೆ ಸೇವನದಲ್ಲಿ ಸ್ವಾತ್ಮರೇ ಪ್ರಯೋಜ್ಯರಾದುದರಿಂದ ತಮ್ಮಲ್ಲಿರುವ ನಿಯೋಜ್ಯತ್ವವನ್ನು ಸ್ವೀಕರಿಸಿಯೇ **ಣಿಚಶ್ಚ** (ಪಾ. ಸೂ. ೧-೩-೭೪) ಎಂಬುದರಿಂದ ಕರ್ತೃಗಾಮಿ ಕ್ರಿಯಾಫಲವಿರುವಾಗ ಆತ್ಮನೇಪದಪ್ರತ್ಯಯವು ಬರುತ್ತದೆ. ಣಿಚ್ಚಿಗೆ ಶಪ್ ಪರದಲ್ಲಿರುವಾಗ ಗುಣಾಯಾದೇಶಗಳು ಬರುತ್ತವೆ. ॥ ೨ ॥



॥ ಸಂಹಿತಾಪಾಠಃ ॥

ಅಧಿ ದ್ವಯೋರದಧಾ ಉಕ್ಥ್ಯಂ೧ ವಚೋ ಯತಸ್ರುಚಾ ಮಿಥುನಾ
ಯಾ ಸಪರ್ಯತಃ ।
ಅಸಂಯತ್ತೋ ವ್ರತೇ ತೇ ಕ್ಷೇತಿ ಪುಷ್ಯತಿ ಭದ್ರಾ ಶಕ್ತಿರ್ಯಜ
ಮಾನಾಯ ಸುನ್ವತೇ ॥ ೩ ॥

ಪದಪಾಠಃ

ಅಧಿ । ದ್ವಯೋಃ । ಅದಧಾಃ । ಉಕ್ಥ್ಯಂ । ವಚಃ । ಯತಽಸ್ರುಚಾ । ಮಿಥುನಾ ।
ಯಾ । ಸಪರ್ಯತಃ ।
ಅಸಂಽಯತ್ತಃ । ವ್ರತೇ । ತೇ । ಕ್ಷೇತಿ । ಪುಷ್ಯತಿ । ಭದ್ರಾ । ಶಕ್ತಿಃ । ಯಜ-
ಮಾನಾಯ । ಸುನ್ವತೇ ॥ ೩ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯಾಭಿಷ್ಟವೇಽಧಿ ದ್ವಯೋರಿತ್ಯೇಷಾ । ಸ್ತೃಷ್ವೋದಕಮಿತಿ ಖಂಡೇ ಸೂತ್ರಿತಂ । ಅಧಿ ದ್ವಯೋರದಧಾ ಉಕ್ಥ್ಯಂ ವಚಃ ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯತ್ । ಆ. ೪-೬ । ಇತಿ ॥ ಹವಿರ್ಧಾನಪ್ರವರ್ತನೇಽಪ್ಯೇಷಾ । ಸೂತ್ರಿತಂ ಚ । ಯಮೇ ಇವ ಯತಮಾನೇ ಯದೈತಮಧಿದ್ವಯೋರದಧಾ ಉಕ್ಥ್ಯಂ ವಚ ಇತ್ಯರ್ಧರ್ಚೆ ಆರಮೇತ್ । ಆ. ೪-೯ । ಇತಿ ॥

ಹೇ ಇಂದ್ರ ದ್ವಯೋರ್ಹವಿರ್ಧಾನಯೋರುಕ್ಥ್ಯಂ । ಉಕ್ಥ್ಯಂ ಶಸ್ತ್ರಂ । ತದ್ಯೋಗ್ಯಂ ವಚೋ ಯುಜೇ ವಾಮಿತ್ಯಾದಿಮಂತ್ರರೂಪಂ ವಚನಮಧ್ಯದಧಾಃ । ನಿಹಿತವಾನಸಿ । ನನು ಹವಿರ್ಧಾನಯೋ-ರ್ದ್ವಯೋಃ ಕಥಮೇಕಮೇವ ವಚೋಽಧಿನಿಧೀಯತ ಇತ್ಯಾಶಂಕ್ಯ ಬ್ರಾಹ್ಮಣೇನೈವಂ ವ್ಯಾಖ್ಯಾತಂ । ಅಧಿದ್ವಯೋರದಧಾ ಉಕ್ಥ್ಯಂ ವಚ ಇತಿ ದ್ವಯೋರ್ಹ್ಯೇತತ್ತೃತೀಯಂ ಛದಿರಧಿನಿಧೀಯತ ಉಕ್ಥ್ಯಂ ವಚ ಇತಿ ಯದಾಹ ಯಜ್ಞಿಯಂ ವೈ ಕರ್ಮೋಕ್ಥ್ಯಂ ವಚೋ ಯಜ್ಞಮೇವೈತೇನ ಸಮರ್ಧಯತಿ । ಐ. ಬ್ರಾ.

೧-೨೯ । ಇತಿ । ತತ್ರ ಯಥಾ ಹವಿರ್ಧಾನದ್ವಯ ಏಕಮೇವ ತೃತೀಯಂ ಛದಿರಧಿನಿಧೀಯತೇ ಏವಂ ಸ್ತೋತ್ರಮಪ್ಯುಭಯೋರೇಕಂ ಯುಕ್ತಂ। ಉಕ್ಥಂ ನಾಮ ಯಜ್ಞಸಂಬಂಧಿ ಶಸ್ತ್ರಂ ತದ್ಯೋಗ್ಯಂ ವಚನಮಪಿ ಯಜ್ಞಿಯಂ ಕರ್ಮ। ತಸ್ಯ ಯಜ್ಞರೂಪಯೋರ್ಹವಿರ್ಧಾನಯೋರ್ಯಜ್ಞತ್ವಸಂಪಾದನಾಯಾಧಿನಿಧಾನಾದ್ಯಜ್ಞೋಽಪಿ ಸಮೃದ್ಧೋ ಭವತಿ । ಕೀದೃಶಯೋರ್ಹವಿರ್ಧಾನಯೋಃ । ಯತಸ್ರುಚಾ । ಯತಾಃ ಸಂಬದ್ಧಾಃ ಸ್ರುಚೋ ಗ್ರಹಚಮಸಾದಿಲಕ್ಷಣಾನಿ ಪಾತ್ರಾಣಿ ಯಯೋಸ್ತೇ। ಮಿಥುನಾ ಯುಗಲರೂಪೇಣ ವರ್ತಮಾನೇ ಯಾ ಯೇ ಹವಿರ್ಧಾನೇ ತ್ವಾಂ ಸಪರ್ಯತಃ ಪೂಜಯತಸ್ತಯೋರಿತ್ಯರ್ಥಃ। ಕಿಂಚ ಈದೃಗ್ರೂಪಹವಿರ್ಧಾನಯುಕ್ತೋ ಯಜಮಾನೋಽಸಂಯತ್ತಃ ಶತ್ರುಭಿಃ ಸಹ ಯುದ್ಧಾರ್ಥಮನಭಿಗತಃ ಸನ್ ತೇ ವ್ರತೇ ತ್ವದೀಯೇ ಕರ್ಮಣಿ ಕ್ಷೇತಿ । ನಿವಸತಿ । ಪುಷ್ಯತಿ ಚ । ಪ್ರಜಯಾ ಪಶುಭಿಶ್ಚ ಪುಷ್ಟೋ ಭವತಿ ಚ । ಸುನ್ವತೇ ತ್ವದ್ದೇವತ್ಯೇ ಯಾಗೇ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಭದ್ರಾ ಕಲ್ಯಾಣೀ ಶಕ್ತಿರುತ್ಕೃಷ್ಟಂ ಬಲಂ ಭವತಿ । ಏತತ್ಸರ್ವಂ ಹವಿರ್ಧಾನಯೋರುಕ್ಥ್ಯಸ್ಯ ವಚಸೋಽಧಿನಿಧಾನೇನ ತ್ವಯಾ ಕೃತಮಿತ್ಯರ್ಥಃ ॥ ಯತಸ್ರುಚಾ । ಯಮ ಉಪರಮೇ । ನಿಷ್ಠಾಯಾಮನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಇದಮಾದಿಷು ತ್ರಿಷು ಪದೇಷು ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಸಪರ್ಯತಃ । ಸಪರ ಪೂಜಾಯಾಂ । ಕಂಡ್ವಾದಿಭ್ಯೋ ಯಕ್ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ತಸ್ಯೈವ ಸ್ವರಃ ಶಿಷ್ಯತೇ । ಕ್ಷೇತಿ । ಕ್ಷಿ ನಿವಾಸಗತ್ಯೋಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಸುನ್ವತೇ । ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯೇತಿ ಚತುರ್ಥೀ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥ ೩ ॥

ಪ್ರತಿಪದಾರ್ಥ

**ಯತಸ್ರುಚಾ**—(ಎಲೈ ಇಂದ್ರನೇ)ಚಮಸಾದಿಪಾತ್ರೆಗಳಲ್ಲಿ ಒಟ್ಟಿಗೆ ಇಡಲ್ಪಟ್ಟವೂ(ಮತ್ತು) । **ಮಿಥುನಾ**—ಎರಡೆರಡಾಗಿ ಒಟ್ಟಿಗೆ ಇಡಲ್ಪಟ್ಟ । **ಯಾ**—ಯಾವ ಹವಿರ್ಧಾನಗಳು । **ಸಪರ್ಯತಃ**— (ನಿನ್ನನ್ನು) ಪೂಜಿಸುತ್ತವೆಯೋ ಅಂತಹ । **ದ್ವಯೋಃ**— ಹವಿಸ್ಸು ಮತ್ತು ಧಾನ್ಯಗಳಲ್ಲಿ । **ಉಕ್ಥ್ಯಂ**—ಶಸ್ತ್ರರೂಪವಾದ. । **ವಚಃ**-ಮಂತ್ರವಾಕ್ಯನ್ನು । **ಅಧಿ ಅದಧಾಃ**— ಸೇರಿಸಲ್ಪಟ್ಟಿದ್ದೀಯೇ, (ಹೀಗೆ ಮಂತ್ರಪೂರಿತಗಳಾದ ಹವಿರ್ಧಾನಗಳನ್ನು ಹೊಂದಿರುವ ಯಜಮಾನನು) । **ಅಸಂಯತ್ತಃ**—(ಶತ್ರುಗಳೊಡನೆ) ಯುದ್ಧಮಾಡುವ ತೊಂದರೆಯಿಲ್ಲದೆ । **ತೇ**—ನಿನ್ನನ್ನು ಉದ್ದೇಶಿಸಿದ । **ವ್ರತೇ**— ಕರ್ಮದಲ್ಲಿ । **ಕ್ಷೇತಿ**—(ಸುಖವಾಗಿ)ನಿರತನಾಗಿರುತ್ತಾನೆ. । **ಪುಷ್ಯತಿ (ಚ)**-(ಪಶುಪುತ್ರಾದಿಗಳಿಂದ) ವೃದ್ಧಿಯನ್ನೂ ಹೊಂದುತ್ತಾನೆ. । **ಸುನ್ವತೇ**— (ನಿನ್ನನ್ನು ಉದ್ದೇಶಿಸಿ ಮಾಡುವ ಯಜ್ಞದಲ್ಲಿ) ಸೋಮರಸವನ್ನು ಹಿಂಡುವ ಯಜಮಾನನಿಗೆ । **ಭದ್ರಾ**— ಮಂಗಳಕರವಾದ । **ಶಕ್ತಿಃ**— ಬಲವು (ಬೆಳೆಯುತ್ತದೆ..) ।

ಭಾವಾರ್ಥ

ಎಲೈ ಇಂದ್ರನೇ, ಚಮಸಾದಿಪಾತ್ರೆಗಳಲ್ಲಿ ಒಟ್ಟಿಗಿದ್ದು ಯಾವ ಹವಿಸ್ಸು ಮತ್ತು ಧಾನ್ಯಗಳು ನಿನ್ನ ಪೂಜೆಗಾಗಿ ಒಟ್ಟಿಗೆ ಅರ್ಪಿತವಾಗುವುವೋ ಅಂತಹ ಹವಿರ್ಧಾನಗಳೆರಡರಲ್ಲೂ ನೀನು ಉಕ್ಥ್ಯರೂಪವಾದ ಮಂತ್ರವನ್ನು ಸೇರಿಸಿಟ್ಟಿದ್ದೀಯೇ. ಹೀಗೆ ಮಂತ್ರಪೂರಿತವಾದ ಹವಿರ್ಧಾನಗಳನ್ನಿಟ್ಟುಕೊಂಡಿರುವ ಯಜಮಾನನು ಶತ್ರು

ಗಳೊಡನೆ ಯುದ್ಧಮಾಡುವ ತೊಂದರೆಯಿಲ್ಲದೆ ನಿನ್ನನ್ನು ಉದ್ದೇಶಿಸಿದ ಕರ್ಮದಲ್ಲಿ ನಿರತನಾಗಿರುತ್ತಾನೆ. ಪಶುಪುತ್ರಾದಿ ಸಂಪತ್ತನ್ನು ಪಡೆಯುತ್ತಾನೆ. ಮತ್ತು ಯಜ್ಞದಲ್ಲಿ ನಿನಗಾಗಿ ಸೋಮರಸವನ್ನು ಹಿಂಡುವ ಆ ಯಜಮಾನನಿಗೆ ಮಂಗಳಕರವಾದ ಬಲವು ಬೆಳೆಯುತ್ತದೆ.

## English Translation

Indra, you have placed words of sacred praise with both kinds of oblations consisting of grain and butter ; the two oblations are placed together in ladles and jointly presented to you so that the sacrificer, undistrubed is engaged in your worship and is prosperous ; auspicious power is granted to the sacrificer who offers oblations·

### ವಿಶೇಷವಿಷಯಗಳು

ಈ ಋಕ್ಕಿನ ಅರ್ಥವು ತೊಡಕಾಗಿರುವುದು.

**ದ್ವಯೋಃ— ಹವಿರ್ಧಾನಯೋಃ ।** ಋಕ್ಕಿನಲ್ಲಿ ದ್ವಯೋಃ ಎಂಬ ಶಬ್ದ ಮಾತ್ರವಿರುವುದು. ಇದಕ್ಕೆ ಭಾಷ್ಯಕಾರರು **ಹವಿರ್ಧಾನಯೋಃ** ಎಂದು ಅರ್ಥವಿವರಣೆ ಮಾಡಿರುವರು. ಯಾಸ್ಕರು ಹವಿರ್ಧಾನ ಶಬ್ದಕ್ಕೆ **ಹವಿರ್ಧಾನೇ ಹವಿಷಾಂ ನಿಧಾನೇ** ಎಂದು ನಿರ್ವಚನವನ್ನು ಹೇಳಿರುವರು. ಎಂದರೆ **ಹವಿಷಾಂ ನಿಧಾನೇ ಸೋಮಾಸ್ತ್ರಯೋರ್ನಿಧೀಯಂತೇ** ಹವಿಸ್ಸನ್ನು ಸೋಮವನ್ನು ಇಡುವ ಪಾತ್ರೆ ಅಥವಾ ಸ್ಥಳ ಎಂದರ್ಥವು. ಹವಿರ್ಧಾನ ಶಬ್ದವು ಋಗ್ವೇದದಲ್ಲಿ ಎಲ್ಲಿಯೂ ಪಠಿತವಾಗಿಲ್ಲ. ಯಜುರ್ವೇದದಲ್ಲಿ ತೈ. ಸಂ. ೩-೧-೩.೧ ; ೬-೨-೯-೧ ; ೬-೩-೯-೪ ; ೬-೨-೧೧-೧-೪ ಇತ್ಯಾದಿ ಮಂತ್ರಗಳಲ್ಲಿ ಪಠಿತವಾಗಿದೆ. ಅಲ್ಲಿ ಈ ಶಬ್ದವು ಸೋಮಲತೆಯನ್ನು ತುಂಬಿಕೊಂಡು ಹೋಗುವ ಗಾಡಿ ಅಥವಾ ಸೋಮವನ್ನು ಇಡುವ ಗುಡಿಸಲು ಅಥವಾ ಸೋಮವನ್ನು ಇಡುವ ಪಾತ್ರೆ ಎಂಬ ಅರ್ಥಗಳನ್ನು ಸೂಚಿಸುವುದು. ಸೋಮವನ್ನು ಹವಿರ್ಧಾನವೆಂಬ ಎರಡು ಗಾಡಿಗಳಲ್ಲಿ ತುಂಬಿ, ಛದಿ ಎಂಬ ಒಂದೇ ಆಚ್ಛಾದನೆಯನ್ನು ಎರಡರ ಮೇಲೆ ಮುಚ್ಚಿ, ಅದನ್ನು ಪ್ರಾಚೀನವಂಶವೆಂಬ ಭಾಗದಿಂದ ಉತ್ತರವೇದಿಗೆ ತೆಗೆದುಕೊಂಡು ಹೋಗುವರು. ಛದಿಯು ದರ್ಭೆಗಳಿಂದ ಮಾಡಲ್ಪಟ್ಟಿರುವುದು. ಇದಕ್ಕೆ ಸಂಬಂಧಪಟ್ಟ ಯಜ್ಞಕ್ರಮವು ವಿಸ್ತಾರವಾಗಿರುವುದರಿಂದಲೂ ಅದರ ವಿವರಣೆಯು ಇಲ್ಲಿ ಅನಾವಶ್ಯಕವಾದುದರಿಂದಲೂ ಅವುಗಳನ್ನು ಇಲ್ಲಿ ವಿವರಿಸಿಲ್ಲ. ಐತರೇಯ ಬ್ರಾಹ್ಮಣದಲ್ಲಿ ( ೧-೨೯ ) ಈ ವಿಚಾರವಾದ ವಿವರಣೆಯನ್ನು ನೋಡಿ ತಿಳಿದುಕೊಳ್ಳಬಹುದು.

**ಉಕ್ಥ್ಯಂ ವಚಃ—** ಹವಿರ್ಧಾನವೆಂಬ ಹವಿಸ್ಸನ್ನು ಇಡುವ ಎರಡು ಪಾತ್ರೆಗಳ ಮೇಲೆ ಛದಿ ಎಂಬ ಆಚ್ಛಾದನೆಯನ್ನು ( covering. ಮುಚ್ಚುವುದು ) ಇರಿಸುವಾಗ ಹೇಳುವ ಶಸ್ತ್ರರೂಪವಾದ ಮಂತ್ರ. ಈ ಮಂತ್ರಕ್ಕಾಗಿ ಪ್ರಸಕ್ತವಾದ ಋಕ್ಕಿನ ಪೂರ್ವಾರ್ಧವಾದ **ಅಧಿ ದ್ವಯೋರದಧಾ ಉಕ್ಥ್ಯಂ೧ ವಚೋ ಯತಸ್ರುಚಾ ಮಿಥುನಾ ಯಾ ಸಪರ್ಯತಃ ।** ಎಂಬ ಮಂತ್ರವನ್ನು ಪಠಿಸುವರು. ಎರಡು ಹವಿರ್ಧಾನಗಳ ಮೇಲೆ ಮುಚ್ಚುವುದಕ್ಕೆ ಒಂದೇ ಛದಿಯನ್ನು ಉಪಯೋಗಿಸುವರು. ಮತ್ತು ಈ ಎರಡು ಹವಿರ್ಧಾನಗಳನ್ನು ಒಂದುಗೂಡಿಸುವುದಕ್ಕಾಗಿ ಆ ಛದಿಯನ್ನು ಉಪಯೋಗಿಸುವುದರಿಂದ ಎರಡು ಹವಿರ್ಧಾನಗಳಿಗೂ ಪ್ರತ್ಯೇಕವಾದ ಎರಡು ಮಂತ್ರ

ಗಳನ್ನು ಉಪಯೋಗಿಸದೆ ಒಂದೇ ಮಂತ್ರವನ್ನು ಹೇಳುವರು. ಆದುದರಿಂದ ಉಕ್ಥ್ಯಂ ವಚಃ ಶಸ್ತ್ರಮಂತ್ರರೂಪ ವಾದ ವಾಕ್ಯವು ಎಂದು ಏಕವಚನಪ್ರಯೋಗವಿರುವುದು. ಈ ಹವಿರ್ಧಾನಗಳನ್ನು ಒಟ್ಟುಗೂಡಿಸುವಾಗ **ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿರ್ವಿ ಶ್ಲೋಕ ಏತು ಪಥ್ಯೇವ ಸೂರೇಃ । ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾ ಆಯೇ ಧಾಮಾನಿ ದಿವ್ಯಾನಿ ತಸ್ಥುಃ ॥** (ಋ. ಸಂ. ೧೦-೧೩-೧) ಎಂಬ ಮಂತ್ರವನ್ನು ಪಠಿಸುವರು.

**ಯತಸ್ರುಚಾ**— ಸ್ರುಕ್ ಎಂಬ ಹೋಮ ಮಾಡುವ ಮರದ ಸೌಟನ್ನು ಕೈಯಲ್ಲಿ ಹಿಡಿದುಕೊಂಡಿರುವ ಎಂದರ್ಥವು. ಭಾಷ್ಯಕಾರರು—ಯತಾಃ ಸಂಬದ್ಧಾಃ ಸ್ರುಚೋ ಗ್ರಹಚಮಸಾದಿಲಕ್ಷಣಾನಿ ಪಾತ್ರಾಣಿ ಯಯೋಸ್ತೇ ಎಂದು ಹೇಳಿರುವರು.

**ಮಿಥುನಾ**— ಎರಡು. ಎಂದರೆ ಎರಡು ಹವಿರ್ಧಾನಗಳು.

**ಅಸಂಯತ್ತಃ**— ಈ ಶಬ್ದದ ಸರಿಯಾದ ಅರ್ಥವು—ಕೈಯಲ್ಲಿದ್ದ ಸ್ರುಕ್ ಮೊದಲಾದ ಪಾತ್ರೆಗಳನ್ನು ಕೆಳಗಿರಿಸಿ ಎಂದಾಗುವುದು. ಭಾಷ್ಯಕಾರರು **ಶತ್ರುಭಿಃ ಸಹ ಯುದ್ಧಾರ್ಥಮನಭಿಗತಃಸನ್** ಎಂದು ಹೇಳಿರುವರು.

**ವ್ರತೇ**—ಯಜ್ಞರೂಪವಾದ ಕರ್ಮದಲ್ಲಿ.

**ಕ್ಷೇತಿ—ನಿವಸತಿ ।** ಪ್ರವರ್ತಕನಾಗಿ ಇರುವನು, ಕರ್ಮಾನುಷ್ಠಾನಮಾಡುತ್ತಾ ಇರುವನು.

**ಪುಷ್ಯತಿ - ಪ್ರಜಯಾ ಪಶುಭಿಶ್ಚ ಪುಷ್ಟೋ ಭವತಿ ।** ಪ್ರಜೆಗಳು, ಪಶು ಸಂಪತ್ತು ಮೊದಲಾದುವು ಗಳಿಂದ ಯುಕ್ತನಾಗಿ ಅಭಿವೃದ್ಧಿಯನ್ನೈದುವನು.

**ಭದ್ರಾ ಶಕ್ತಿಃ—ಕಲ್ಯಾಣೀ ಶಕ್ತಿಃ, ಉತ್ಕೃಷ್ಟಂ ಬಲಂ ।** ಉತ್ಕೃಷ್ಟವಾದ ಅಥವಾ ಹೆಚ್ಚಾದ ಬಲವು.

ಈ ಋಕ್ಕಿಗೆ ವಿಶೇಷ ವಿನಿಯೋಗವಿರುವುದು— ಪ್ರವರ್ಗ್ಯವೆಂಬ ಯಾಗದಲ್ಲಿ **ಅಧಿ ದ್ವಯೋಃ** ಎಂಬ ಈ ಋಕ್ಕನ್ನು ಸ್ತೋತ್ರರೂಪವಾಗಿ ಪಠಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಸ್ಪೃಷ್ಟೋದಕಂ** ಎಂಬ ಖಂಡದಲ್ಲಿ **ಅಧಿದ್ವಯೋರದಧಾ ಉಕ್ಥ್ಯಂ ವಚಃ. ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೪-೬) ಮತ್ತು ಎರಡು ಹವಿರ್ಧಾನಗಳಮೇಲೆ ಛದಿಯೆಂಬ ಆಚ್ಛಾದನ ವನ್ನು ಇಡುವಾಗ ಈ ಋಕ್ಕಿನ ವಿನಿಯೋಗವಿರುವುದು. ಇದನ್ನು ಆಶ್ವಲಾಯನಶ್ರೌತ್ರಸೂತ್ರದಲ್ಲಿ **ಯಮೇ ಇವ ಯತಮಾನೇ ಯದೈತಮಧಿ ದ್ವಯೋರದಧಾ ಉಕ್ಥ್ಯಂ ವಚ ಇತ್ಯೈರ್ಧರ್ಚ ಆರಮೇತ್** ಎಂಬ ಸೂತ್ರವು ನಿರ್ದೇಶಿಸುವುದು. (ಆ. ೪-೯)

ವ್ಯಾಕರಣಪ್ರಕ್ರಿಯಾ

**ಯತಸ್ರುಚಾ**—ಯತಾಃ ಸ್ರುಚೋ ಯಯೋಃ ಸ್ತೇ ಸಂಬಂಧವಾಗಿರುವ ಗ್ರಹ ಚಮಸಾದಿಲಕ್ಷಣ ಪಾತ್ರಗಳು ಎಲ್ಲಿ ಇರುತ್ತವೆಯೋ ಅವುಗಳು ಯತಸ್ರುಚಗಳು. ಯಮ ಉಪರಮೆ, ಈ ಧಾತುವಿಗೆ ಕ್ತಪ್ರತ್ಯಯಮಾಡಿದರೆ ಯಮ್+ತ ಎಂದಿರುವಾಗ **ಅನುದಾತ್ತೋಪದೇಶವನತಿ** (ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕವಾದ ಧಾತುಮಕಾರಕ್ಕೆ ಝಲಾದಿಯಾದ ಕಿತ್‌ಪ್ರತ್ಯಯ ಪರದಲ್ಲಿರುವುದರಿಂದ ಲೋಪ ಬರುತ್ತದೆ. ಯತ ಶಬ್ದದಿಂದ

ಹಿಂದೆ ತೋರಿಸಿದಂತೆ ಬಹುವ್ರೀಹಿಸಮಾಸವಾಗಿದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಉದಾತ್ತ ಸ್ವರಿತದಿಂದ ಕೂಡಿರುವ ಪೂರ್ವಪದವು ಪ್ರಕೃತಿಭಾವವನ್ನು ಹೊಂದುತ್ತದೆ. ಪೂರ್ವಪದದಲ್ಲಿರುವ ಉದಾತ್ತಸ್ವರಿತಗಳಿಗೆ ಪ್ರಕೃತಿಭಾವ ಬರುವುದರ ಮೂಲಕ ಪೂರ್ವಪದಕ್ಕೆ ಪ್ರಕೃತಿಭಾವ ಬರುತ್ತದೆಂದು ತಾತ್ಪರ್ಯ. ಈ ಸೂತ್ರದಿಂದ ಇಲ್ಲಿ ಪೂರ್ವಪದಪ್ರಕೃತಿಸ್ವರವು ಬಂದಿದೆ. ಆಗ ಯತ ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತವಾದುದರಿಂದ ಉದಾತ್ತಾದನುದಾತ್ತಸ್ಯ ಸ್ವರಿತಃ ಎಂಬುದರಿಂದ ಸ್ರು ಎಂಬುದಲ್ಲಿರುವ ಅನುದಾತ್ತವು ಸ್ವರಿತವಾಗುತ್ತದೆ. ' ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ ' ಎಂಬುದರಿಂದ ಸ್ರುವಿನ ಪರದಲ್ಲಿರುವುದಕ್ಕೆ ಪ್ರಚಯ ಬರುತ್ತದೆ. ಯತಸ್ರುಚ ಶಬ್ದದ ಮೇಲೆ ದ್ವಿವಚನಪ್ರತ್ಯಯಮಾಡಿದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ಬರುತ್ತದೆ.

**ಸಪರ್ಯತಃ**—ಸಪರ ಪೂಜಾಯಾಂ. ಧಾತು. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧-೨೭) ಕಂಡ್ವಾದಿ ಧಾತುಗಳಿಗೆ ಸ್ವಾರ್ಥದಲ್ಲಿ ನಿತ್ಯವಾಗಿ ಯಕ್ ಪ್ರತ್ಯಯ ಬರುತ್ತದೆ. ಕಂಡ್ವಾದಿಯೆಂಬುದು ಆಕೃತಿಗಣ. ಕಂಡ್ವಾದಿಯಲ್ಲಿ ಸಪರಧಾತುವು ಪಠಿತವಾದುದರಿಂದ ಇದರ ಮೇಲೂ ಸ್ವಾರ್ಥದಲ್ಲಿ ಯಕ್‌ಪ್ರತ್ಯಯ ಬರುತ್ತದೆ. ಯಕ್ ಸನಾದಿಯಲ್ಲಿ ಪಠಿತವಾದುದರಿಂದ ಧಾತುಸಂಜ್ಞೆ ಬಂದಾಗ ಪ್ರಥಮಪುರುಷ ದ್ವಿವಚನದಲ್ಲಿ ರೂಪಸಿದ್ಧಿಯಾಗುತ್ತದೆ. ಇಲ್ಲಿ ಧಾತುಸ್ವರದಿಂದ ಯಕಾರೋದಾತ್ತವೂ ಪ್ರತ್ಯಯಸ್ವರದಿಂದ ತಕಾರೋದಾತ್ತವೂ ಆಗಬೇಕಾಗುತ್ತದೆ ಆದರೆ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅದುಪದೇಶದ ಪರದಲ್ಲಿರುವ ಲಸಾರ್ವಧಾತುಕವು ಅನುದಾತ್ತವಾಗುತ್ತದೆ ಎಂಬುದರಿಂದ ಅನುದಾತ್ತಸ್ವರವೇ ಸತಿಶಿಷ್ಟವಾದುದರಿಂದ ಪ್ರಬಲವಾಗುತ್ತದೆ. ಅದು ಧಾತುಸ್ವರದಿಂದ ಉದಾತ್ತವಾದ ಯಕಾರದ ಪರದಲ್ಲಿ ಬಂದಿರುವುದರಿಂದ **ಉದಾತ್ತಾದನುದಾತ್ತಸ್ಯ ಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತವಾಗುತ್ತದೆ.

**ಕ್ಷೇತಿ**— ಕ್ಷಿ ನಿವಾಸಗತ್ಯೋಃ ಧಾತು. ತುದಾದಿ. ಕ್ಷಿ+ತಿ ಎಂದಿರುವಾಗ **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣವು ಪ್ರಾಪ್ತವಾದರೆ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ ಬರುತ್ತದೆ. **ನಲುಮತಾಂಗಸ್ಯ** (ಪಾ. ಸೂ. ೧-೧-೬೩) ಎಂಬುದರಿಂದ ಲುಕಿನಿಂದ ಲುಪ್ತವಾದಲ್ಲಿ ಸ್ಥಾನಿವದ್ಭಾವವಿಲ್ಲದಿರುವುದರಿಂದ ಸಾರ್ವಧಾತುಕವನ್ನು ನಿಮಿತ್ತೀಕರಿಸಿ ಅಂಗಕ್ಕೆ ಗುಣ ಬರುತ್ತದೆ.

**ಸುನ್ವತೇ**—ಚತುರ್ಥೀ ಏಕವಚನದ ರೂಪ. ಷುಞ್ ಅಭಿಷವೇ ಧಾತು. ಇದರ ಮೇಲೆ ಶತೃಪ್ರತ್ಯಯ ಮಾಡಿದರೆ **ಸ್ವಾದಿಭ್ಯಃ ಶ್ನುಃ** (ಪಾ. ಸೂ. ೩-೧-೭೩) ಎಂಬುದರಿಂದ ವಿಕರಣಪ್ರತ್ಯಯಮಾಡಿದರೆ ಸು+ನು+ಅತ್ ಎಂದಾಗುತ್ತದೆ. ಶತೃ ಪ್ರತ್ಯಯ ಙಿತ್ತಾದುದರಿಂದ ವಿಕರಣಕ್ಕೆ ಗುಣ ಬರುವುದಿಲ್ಲ. ಯಣ್‌ಸಂಧಿ ಬಂದರೆ ಸುನ್ವತ್ ಶಬ್ದವಾಗುತ್ತದೆ. ಇಲ್ಲಿ ಷಷ್ಠ್ಯರ್ಥವಿದ್ದರೂ **ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ** (ಪಾ. ಸೂ. ೨-೩-೬೨ ವಾರ್ತಿಕ ೧) ಎಂಬುದರಿಂದ ಷಷ್ಠ್ಯರ್ಥದಲ್ಲಿ ಚತುರ್ಥೀವಿಭಕ್ತಿ ಬಂದಿದೆ. **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ನುಮ್ ರಹಿತವಾದ ಶತೃಪ್ರತ್ಯಯಾಂತದ ಪರದಲ್ಲಿರುವ ಅಜಾದಿ ಪ್ರತ್ಯಯವು ಉದಾತ್ತವಾಗುತ್ತದೆ. ಎಂಬುದರಿಂದ ಇಲ್ಲಿ ಙೇ ಎಂಬ ಚತುರ್ಥೀ ವಿಭಕ್ತಿಯು ಉದಾತ್ತವಾಗಿದೆ.

**ಮಿಥುನಾ ಯಾ**—**ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪ್ರಥಮಾ ದ್ವಿವಚನಕ್ಕೆ ಆ ಎಂಬ ಆದೇಶ ಬಂದಿದೆ. ॥ ೩ ॥

ಸಂಹಿತಾಪಾಠಃ

ಆದಂಗಿರಾಃ ಪ್ರಥಮಂ ದಧಿರೇ ವಯ ಇದ್ಧಾಗ್ನಯಃ ಶಮ್ಯಾ
ಯೇ ಸುಕೃತ್ಯಯಾ।
ಸರ್ವಂ ಪಣೇಃ ಸಮವಿಂದಂತ ಭೋಜನಮಶ್ವಾವಂತಂ ಗೋ-
ಮಂತಮಾ ಪಶುಂ ನರಃ ‖ ೪ ‖

‖ ಪದಪಾಠಃ ‖

ಆತ್ । ಅಂಗಿರಾಃ । ಪ್ರಥಮಂ । ದಧಿರೇ । ವಯಃ । ಇದ್ಧಽಅಗ್ನಯಃ । ಶಮ್ಯಾ ।
ಯೇ । ಸುಽಕೃತ್ಯಯಾ ।
ಸರ್ವಂ । ಪಣೇಃ । ಸಂ । ಅವಿಂದಂತ । ಭೋಜನಂ । ಅಶ್ವಽವಂತಂ । ಗೋಽ-
ಗೋಽಮಂತಂ । ಆ । ಪಶುಂ । ನರಃ ‖ ೪ ‖

ಸಾಯಣಭಾಷ್ಯಂ

ಯದಾ ಪಣಿಭಿರ್ಗಾವೋಽಪಹೃತಾಸ್ತದಾನೀಮಂಗಿರಾ ಅಂಗಿರಸಃ ಪ್ರಥಮಂ ಪೂರ್ವಮಗ್ರತೋ ವಯೋ ಹವಿರ್ಲಕ್ಷಣಮನ್ನಂ ದಧಿರೇ। ಇಂದ್ರಾರ್ಥಂ ಸಂಪಾದಿತವಂತಃ। ಆದನಂತರಂ ತಾದೃಶಾ ಯೇಽಂಗಿರಸ ಇದ್ಧಾಗ್ನಯಃ ಪ್ರಜ್ವಲಿತಾಗ್ನಿಯುಕ್ತಾಃ ಸಂತಃ ಸುಕೃತ್ಯಯಾ ಶೋಭನಕರಣೋಪೇತಯಾ ಶಮ್ಯಾ ಕರ್ಮಣಾ ಶೋಭನೇನ ಯಾಗೇನೇಂದ್ರಮಯಜನ್ನಿತಿ ಶೇಷಃ। ತೇ ನರೋ ಯಜ್ಞಸ್ಯ ನೇತಾ-ರೋಽಂಗಿರಸಃ ಪಣೇರೇತನ್ನಾಮ್ನೋಽಸುರಸ್ಯ ಸಂಬಂಧಿ ಸರ್ವಂ ಭೋಜನಂ ಧನಂ ಸಮವಿಂದಂತ। ಸಮಲಭಂತ। ಕೀದೃಶಂ। ಅಶ್ವಾವಂತಂ ಅಶ್ವೈರ್ಯುಕ್ತಂ ಗೋಮಂತಂ ಗೋಭಿರ್ಯುಕ್ತಂ। ಆಕಾರಃ ಸಮುಚ್ಚಯೇ। ಗವಾಶ್ವವ್ಯತಿರಿಕ್ತಮನ್ಯತ್ಪಶುಜಾತಂ ಚ ಸಮವಿಂದಂತ॥ ಅಂಗಿರಾಃ। ಸುಪಾಂ ಸುಲುಗಿತಿ ಜಸಃ ಸುಃ। ಶಮ್ಯಾ। ಶಮೀತಿ ಕರ್ಮನಾಮ। ಶಾಮ್ಯತ್ಯನಯಾ ಕ್ರಿಯಯಾ ದೋಷಜಾತಮಿತಿ ಶಮೀ। ಕರಣೇ ಘುಞ್। ನೋದಾತ್ತೋಪದೇಶಸ್ಯ ಮಾಂತಸ್ಯಾನಾಚಮೇಃ । ಪಾ. ೭-೩-೩೪ । ಇತಿ ವೃದ್ಧಿಪ್ರತಿ-

**ಷೇಧಃ । ಗೌರಾದಿತ್ವಾತ್ ಙೀಷ್ । ವ್ಯತ್ಯಯೇನಾದ್ಯುದಾತ್ತತ್ವಂ । ಸುಕೃತ್ಯಯಾ । ಶೋಭನಂ ಕೃತ್ಯಂ ಕರಣಂ ಯಸ್ಯಾಂ ಸಾ ತಥೋಕ್ತಾ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥ ೪ ॥**

॥ ಪ್ರತಿಪದಾರ್ಥ ॥

**ಅಂಗಿರಾಃ**—ಅಂಗಿರಸ್ಸುಗಳು । **ಪ್ರಥಮಂ**— ಮೊದಲು । **ವಯಃ**— ಹವಿಸ್ಸಿನರೂಪದ ಅನ್ನವನ್ನು । **ದಧಿರೇ**—(ಇಂದ್ರನಿಗಾಗಿ) ಸಂಪಾದಿಸಿದರು । **ಆತ್**—ಅನಂತರ । **ಯೇ**— ಯಾವ ಅಂಗಿರಸ್ಸುಗಳು । **ಇದ್ಧಾಗ್ನ-ಯಃ**—ಅಗ್ನಿಯನ್ನು ಹಚ್ಚಿಕೊಂಡು । **ಸುಕೃತ್ಯಯಾ**—ಶ್ರೇಷ್ಠವಾದ ಉಪಕರಣಗಳುಳ್ಳ । **ಶಮ್ಯಾ**— ಕರ್ಮದಿಂದ ( ಇಂದ್ರನನ್ನುದ್ದೇಶಿಸಿ ಯಜ್ಞಮಾಡಿದರೋ ) । **ನರಃ**—(ಆ ಯಜ್ಞದ ವ್ಯವಸ್ಥಾಪಕರಾದ) ಅಂಗಿರಸ್ಸುಗಳು । **ಪಣೇಃ**— ಪಣಿಯೆಂಬ ರಾಕ್ಷಸನಿಗೆ ಸೇರಿದ । **ಅಶ್ವಾವಂತಂ**—ಕುದುರೆಗಳೊಡನೆ ಕೂಡಿದುದೂ । **ಗೋಮಂತಂ**—ಗೋವುಗಳಿಂದ ಕೂಡಿದುದೂ ಆದ । **ಸರ್ವಂ ಭೋಜನಂ**—ಸಕಲ ಧನವನ್ನೂ (ಮತ್ತು) । **ಪಶುಂ ಆ**—ಇತರ ಪಶುರೂಪ ಪ್ರಾಣಿಗಳನ್ನು ಕೂಡ । **ಸಮವಿಂದಂತ**—ಹೊಂದಿದರು.

ಭಾವಾರ್ಥ

ಪಣಿಯಿಂದ ತೊಂದರೆಗೊಳಗಾದ ಅಂಗಿರಸ್ಸುಗಳು ಇಂದ್ರನಿಗಾಗಿ ಮೊದಲು ಹವಿಸ್ಸಿನರೂಪದ ಅನ್ನವನ್ನು ಸಂಪಾದಿಸಿದರು. ಅನಂತರ ಅಗ್ನಿಯನ್ನು ಹಚ್ಚಿಕೊಂಡು ಶ್ರೇಷ್ಠವಾದ ಕರ್ಮದಿಂದ ಯಜ್ಞಮಾಡಿದರು. ಯಜ್ಞದ ವ್ಯವಸ್ಥಾಪಕರಾದ ಅಂತಹ ಅಂಗಿರಸ್ಸುಗಳು ಇಂದ್ರನ ಅನುಗ್ರಹದಿಂದ ಪಣಿಯೆಂಬ ರಾಕ್ಷಸನಿಗೆ ಸೇರಿದ, ಕುದುರೆಗಳೊಡನೆ ಕೂಡಿದುದೂ, ಗೋವುಗಳಿಂದ ಕೂಡಿದುದೂ ಮತ್ತು ಇತರ ಪ್ರಾಣಿಗಳಿಂದ ಕೂಡಿದುದೂ ಆದ ಸಕಲ ಧನವನ್ನೂ ಹೊಂದಿದರು.

## English Translation

The Angirasas first prepared the sacrificial food for Indra and then with well-kindled fire worshipped him with well-conducted rites; they, the performers of the sacrifice got all the wealth of Pani, consisting of horses cows and other animals.

ವಿಶೇಷವಿಷಯಗಳು

**ಅಂಗಿರಾಃ**—ಅಂಗಿರಸರೆಂಬ ಋಷಿಗಳು, ಪ್ರಸಿದ್ಧರಾದ ಅಂಗಿರಸ್ ಎಂಬ ಋಷಿಯ ವಂಶೋತ್ಪನ್ನರು. ಇವರು ಯಜ್ಞಯಾಗಗಳಲ್ಲಿ ಪ್ರವೀಣರೆಂದು ಪ್ರಸಿದ್ಧಿಯು. ಇವರ ವಿಷಯವಾಗಿ ನಾವು ಹಿಂದೆಯೇ ಅನೇಕಾವರ್ತಿ ಬರೆದಿದೇವೆ. ಋಗ್ವೇದಸಂಹಿತಾ ಭಾಗ ೧ ಪುಟ 640 ನೋಡಿ.

**ಶಮ್ಯಾ—ಕರ್ಮಣಾ** । ಯಜ್ಞಾದಿಕರ್ಮಗಳಿಂದ. ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಶಮೀ ಎಂಬ ಶಬ್ದವು ಪಠಿತವಾಗಿರುವುದು ( ನಿ. ೩-೧ ).

**ಸುಕೃತ್ಯಯಾ— ಶೋಭನಕರಣೋಪೇತಯಾ** ಉತ್ತಮವಾದ ಸಾಧನಸಾಮಗ್ರಿಗಳಿಂದ ನೆರವೇರಿಸಲ್ಪಟ್ಟ ; well-conducted ; according to the rites.

**ಪಣೇಃ**—ಪಣಿ ಎಂಬ ಅಸುರನ. ಈ ಪಣಿ ಎಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟಿದ್ದನು. ಅದನ್ನು ಇಂದ್ರನು ಮರುದ್ದೇವತೆಗಳ ಸಹಾಯದಿಂದ ಬಿಡಿಸಿ ತಂದನೆಂದು ಪ್ರಸಿದ್ಧವು. ಪಣಿಯ ವಿಷಯವಾಗಿ ನಾವು ಹಿಂದೆಯೇ ವಿಸ್ತಾರವಾದ ವಿವರಣೆಯನ್ನು ಬರೆದಿದೇವೆ. ಋಗ್ವೇದಸಂಹಿತಾ ಭಾಗ ೩ ಪೇಜು 630 ನೋಡಿ.

**ಭೋಜನಂ**— ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಭೋಜನಂ ಎಂಬ ಶಬ್ದವು ಪಠಿತವಾಗಿರುವುದರಿಂದ ಭೋಜನಂ ಎಂದರೆ ಧನವನ್ನು ಎಂದರ್ಥವು (ನಿ. ೩-೯)

**ಅಶ್ವಾವಂತಂ**—ಕುದುರೆಗಳಿಂದ ಕೂಡಿದ (ಧನ)

**ಗೋಮಂತಂ**— ಗೋವುಗಳಿಂದ ಸಹಿತವಾದ.

**ಪಶುಂ**— ಅಶ್ವಗಳು, ಗೋವುಗಳು ಮೊದಲಾದವಲ್ಲದ ಇತರ ಪಶುಗಳು ಎಂದರೆ ಕುರಿ, ಆಡು, ಎಮ್ಮೆ ಇತ್ಯಾದಿ ಪಶುಗಳಿಂದ ಕೂಡಿದ.

**ಆ**— ಎಂದರೆ ಮತ್ತೂ ಈ ಶಬ್ದವು ಇಲ್ಲಿ ಸಮುಚ್ಚಯಾರ್ಥವನ್ನು ಸೂಚಿಸುವುದು.

**ನರಃ**—ಪ್ರಥಮಾಬಹುವಚನವು. **ತೇ ನರಃ** ಎಂದರೆ ಯಜ್ಞಮಾಡಿದ ಆ ಅಂಗಿರಾಋಷಿಗಳು

॥ ವ್ಯಾಕರಣಪ್ರಕ್ರಿಯಾ ॥

**ಅಂಗಿರಾಃ**—ಅಂಗಿರಸ್ ಶಬ್ದದ ಮೇಲೆ ಪ್ರಥಮಾ ಬಹುವಚನ ಜಸ್ ವಿಭಕ್ತಿಮಾಡಿದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಜಸಿಗೆ ಸು ಆದೇಶ ಬರುತ್ತದೆ. ಅಸಂತವಾದುದರಿಂದ **ಅತ್ವ-ಸಂತಸ್ಯ ಚಾಧಾತೋಃ** (ಪಾ. ಸೂ. ೬-೪-೧೪) ಎಂಬುದರಿಂದ ಉಪಧಾದೀರ್ಘ ಬರುತ್ತದೆ. **ಸ್ಕೋಃ ಸಂಯೋ-ಗಾದ್ಯೋಃ** (ಪಾ. ಸೂ. ೮-೨-೨೯) ಎಂಬುದರಿಂದ ಆದಿಸಕಾರಕ್ಕೆ ಲೋಪ ಬರುತ್ತದೆ.

**ಶಮ್ಯಾ**—ಶಮೀ ಎಂಬುದು ಕರ್ಮಕ್ಕೆ ಹೆಸರು. ಶಾಮ್ಯತ್ಯನಯಾ ಕ್ರಿಯಯಾ ದೋಷಜಾತಮಿತಿ ಶಮೀ. ಈ ಕರ್ಮದಿಂದ ದೋಷಸಮುದಾಯವು ನಾಶವಾಗುತ್ತದೆ ಆದುದರಿಂದ ಶಮೀ. ಶಮು ಉಪಶಮೇ. ಈ ಧಾತುವಿನ ಮೇಲೆ ಕರಣಾರ್ಥದಲ್ಲಿ ಘಞ್ ಪ್ರತ್ಯಯ ಬರುತ್ತದೆ. ಶಮ್+ಅ ಎಂದಿರುವಾಗ ಞಿತ್ ಪ್ರತ್ಯಯ ಪರದಲ್ಲಿರುವಾಗ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ವೃದ್ಧಿಯು ಪ್ರಾಪ್ತವಾಗುತ್ತದೆ. ಅದಕ್ಕೆ **ನೋದಾತ್ತೋಪದೇಶಸ್ಯ ಮಾಂತಸ್ಯಾನಾಚಮೇಃ** (ಪಾ. ಸೂ. ೭-೩-೩೪) ಚಮ್ ವ್ಯತಿರಿಕ್ತವಾದ ಅನುದಾತ್ತೋಪದೇಶವಾದ ಮಾಂತ ಧಾತುವಿಗೆ ವೃದ್ಧಿಯು ಬರುವುದಿಲ್ಲವೆಂಬುದರಿಂದ ನಿಷೇಧ ಬರುತ್ತದೆ. ಗೌರಾದಿಯಲ್ಲಿ ಪಾಠಮಾಡಿರುದರಿಂದ **ಷಿದ್ಗೌರಾದಿಭ್ಯಶ್ಚ** (ಪಾ. ಸೂ. ೪-೧-೪೧) ಎಂಬುದರಿಂದ ಙೀಷ್ ಬರುತ್ತದೆ.

**ಯಸ್ಯೇತಿಚ** ಎಂಬುದರಿಂದ ಅಕಾರಲೋಪ ಬರುತ್ತದೆ. **ಕರ್ಷಾತ್ವತೋ**—(ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** (೩-೧-೮೫) ಎಂಬುದರಿಂದ ವ್ಯತ್ಯಯದಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಸುಕೃತ್ಯಯಾ**—ಶೋಭನಂ ಕೃತ್ಯಂ ಕರಣಂ ಯಸ್ಯಾಂ ಸಾ ಸುಕೃತ್ಯಾ. ಯಾವ ಕ್ರಿಯೆಯಲ್ಲಿ ಒಳ್ಳೆಯ ಸಾಧನವಿದೆಯೋ ಅದು ಸುಕೃತ್ಯೆ. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಬಹುವ್ರೀಹಿಯಲ್ಲಿ ನಞ್ ಸು ಇವುಗಳ ಪರದಲ್ಲಿರುವ ಉತ್ತರಪದವು ಅಂತೋದಾತ್ತವಾಗುತ್ತದೆ ಎಂಬುದರಿಂದ ಉತ್ತರಪದಾಂತೋದಾತ್ತ ಬಂದರೆ ಸುಕೃತ್ಯಾ ಶಬ್ದವು ಅಂತೋದಾತ್ತವಾಗುತ್ತದೆ. ತೃತೀಯೈಕವಚನ ಟಾ ವಿಭಕ್ತಿಮಾಡಿದಾಗ **ಆಙಿಚಾಪಃ** (ಪಾ. ಸೂ. ೭-೩-೧೦೫) ಎಂಬುದರಿಂದ ಅಂಗಕ್ಕೆ ಏಕಾರವು ಅಂತಾದೇಶವಾಗಿ ಬಂದರೆ ಅಯಾದೇಶ ಬರುತ್ತದೆ. ಉದಾತ್ತದ ಪರದಲ್ಲಿರುವುದರಿಂದ ವಿಭಕ್ತಿ ಅನುದಾತ್ತಕ್ಕೆ ಸ್ವರಿತ ಬರುತ್ತದೆ. ॥ ೪ ॥

ಸಂಹಿತಾಪಾಠಃ

ಯಜ್ಞೈರಥರ್ವಾ ಪ್ರಥಮಃ ಪಥಸ್ತತೇ ತತಃ ಸೂರ್ಯೋ ವ್ರತಪಾ ವೇನ ಆಜನಿ ।
ಆ ಗಾ ಆಜದುಶನಾ ಕಾವ್ಯಃ ಸಚಾ ಯಮಸ್ಯ ಜಾತಮಮೃತಂ ಯಜಾಮಹೇ ॥ ೫ ॥

ಪದಪಾಠಃ

ಯಜ್ಞೈಃ । ಅಥರ್ವಾ । ಪ್ರಥಮಃ । ತತೇ । ತತಃ । ಸೂರ್ಯಃ । ವ್ರತಽಪಾಃ । ವೇನಃ । ಆ । ಅಜನಿ ।
ಆ । ಗಾಃ । ಆಜತ್ । ಉಶನಾ । ಕಾವ್ಯಃ । ಸಚಾ । ಯಮಸ್ಯ । ಜಾತಂ । ಅಮೃತಂ । ಯಜಾಮಹೇ ॥ ೫ ॥

॥ ಸಾಯಣಭಾಷ್ಯಂ ॥

**ಪಣಿಭಿರಪಹೃತಾಸು ಗೋಷ್ವಥರ್ವೈತತ್ಸಂಜ್ಞ ಋಷಿರ್ಯಜ್ಞೈರಿಂದ್ರದೇವತ್ಯೈರನುಷ್ಠಿತೈರ್ಯಾಗೈಃ ಪಥೋ ಗೋಸಂಬಂಧಿನೋ ಮಾರ್ಗಾನ್ ಪ್ರಥಮಸ್ತತೇ। ತನುತೇ । ಸರ್ವೇಭ್ಯ ಋಷಿಭ್ಯ ಪೂರ್ವಮೇವ ಕೃತವಾನಿತ್ಯರ್ಥಃ । ತತಸ್ತದನಂತರಂ ವ್ರತಪಾ ವ್ರತಾನಾಂ ಕರ್ಮಣಾಂ ಪಾಲಯಿತಾ ವೇನಃ ಕಾಂತಃ ಸೂರ್ಯಃ ಸೂರ್ಯರೂಪ ಇಂದ್ರ ಆಜನಿ । ಗವಾಂ ಪ್ರದರ್ಶನಾಯಾವಿರಭೂತ್ । ತತೋಽಥರ್ವಾ ತಾ ಗಾ ಆಜತ್ । ಆಭಿಮುಖ್ಯೇನ ಪ್ರಾಪ್ನೋತ್ । ತಾದೃಶಸ್ಯೇಂದ್ರಸ್ಯ ಕಾವ್ಯಃ ಕವೇಃ ಪುತ್ರ ಉಶನಾ ಭೃಗುಃ ಸಚಾಸುರನಿರಸನಾಯ ಸಹಾಯೋಽಭೂತ್ । ಯಮಸ್ಯಾಸುರಾಣಾಂ ನಿಯಮನಾರ್ಥಂ ಜಾತಂ ಪ್ರಾದು-ರ್ಭೂತಮಮೃತಂ ಮರಣರಹಿತಂ ತಮಿಂದ್ರಂ ಯಜಾಮಹೇ । ಹವಿರ್ಭಿಃ ಪೂಜಯಾಮಃ ॥ ಪಥಃ । ಶಸಿ ಭಸ್ಯ ಟೇರ್ಲೋಪ ಇತಿ ಟಿಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ತತೇ । ತನು ವಿಸ್ತಾರೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್। ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಅಜನಿ । ಜನೀ ಪ್ರಾದುರ್ಭಾವೇ । ದೀಪಜನಬುಧೇತ್ಯಾದಿನಾ । ಪಾ. ೩೧-೧-೬೧ । ಕರ್ತರಿ ಲುಙಃ ಚ್ಲೇಶ್ಚಿಣ್ । ಆಜತ್ । ಅಜ ಗತಿಕ್ಷೇಪಣಯೋಃ ॥**

ಪ್ರತಿಪದಾರ್ಥ

**ಅಥರ್ವಾ** (ಪಣಿಯಿಂದ ಗೋವುಗಳು ಅಪಹೃತವಾದಾಗ) ಅಥರ್ವನೆಂಬ ಋಷಿಯು । **ಯಜ್ಞೈಃ**— ಇಂದ್ರನನ್ನುದ್ದೇಶಿಸಿ ನೆರವೇರಿಸಿದ) ಯಜ್ಞಗಳಿಂದ । **ಪಥಃ**— (ಗೋವುಗಳು ಅಪಹೃತವಾದ)ಮಾರ್ಗಗಳನ್ನು । **ಪ್ರಥಮಃ**— ಎಲ್ಲರಿಗಿಂತಲೂ ಮೊದಲನೆಯವನಾಗಿ । **ತತೇ**— ಕಂಡುಕೊಂಡನು । **ತತಃ**— ಆ ಮೇಲೆ । **ವ್ರತಪಾಃ**— ವ್ರತಕರ್ಮಗಳ ಪಾಲಕನೂ । **ವೇನಃ**—ಕಾಂತಿಯುತನೂ ಆದ । **ಸೂರ್ಯಃ**—ಸೂರ್ಯರೂಪನಾದ ಇಂದ್ರನು । **ಆ ಅಜನಿ**— (ದಾರಿಯನ್ನು ತೋರಿಸಲು) ಆವಿರ್ಭೂತನಾದನು. । (ಅನಂತರ ಅಥರ್ವನು) **ಗಾಃ**— ಪಸುಗಳನ್ನು । **ಆ ಆಜತ್** ಪುನಃ ಹೊಂದಿದನು. (ಅಂತಹ ಇಂದ್ರನಿಗೆ) । **ಕಾವ್ಯಃ**— ಕವಿಪುತ್ರನಾದ । **ಉಶನಾ**—ಭೃಗುವು । **ಸಚಾ**—(ಅಸುರನಾಶಕ್ಕೆ)ಸಹಾಯಕನಾದನು. । **ಯಮಸ್ಯ**—(ರಾಕ್ಷಸರನ್ನು ತಡೆಗಟ್ಟಲು । **ಜಾತಂ**—ಉತ್ಪನ್ನನಾದ । **ಅಮೃತಂ**—ಮರಣರಹಿತನಾದ ಇಂದ್ರನನ್ನು । **ಯಜಾಮಹೇ**— (ನಾವು) ಹವಿಸ್ಸುಗಳಿಂದ ಪೂಜಿಸೋಣ. ।

॥ ಭಾವಾರ್ಥ ॥

ಪಣಿಯು ಗೋವುಗಳನ್ನು ಅಪಹರಿಸಿದಾಗ ಅಥರ್ವನೆಂಬ ಋಷಿಯು ಇಂದ್ರನನ್ನುದ್ದೇಶಿಸಿ ಯಜ್ಞಮಾಡಿದನು. ಆ ಯಜ್ಞದ ಸಹಾಯದಿಂದ ಗೋವುಗಳು ಅಪಹೃತವಾದ ಮಾರ್ಗಗಳನ್ನು ಎಲ್ಲರಿಗಿಂತಲೂ ಮೊದಲನೆಯವನಾಗಿ ಕಂಡುಕೊಂಡನು. ಆ ಮೇಲೆ ವ್ರತಗಳ ಪಾಲಕನೂ ಕಾಂತಿಯುತನೂ ಆದ ಇಂದ್ರನು ಸೂರ್ಯನರೂಪದಲ್ಲಿ ಆ ದಾರಿಯನ್ನು ತೋರಿಸಿಕೊಡಲು ಆವಿರ್ಭೂತನಾದನು. ಅಥರ್ವನು ಈ ಸಹಾಯದಿಂದ ಪಸುಗಳನ್ನು ಪುನಃ ಹೊಂದಿದನು. ಆ ಕಾಲದಲ್ಲಿ ಕವಿಪುತ್ರನಾದ ಭೃಗುವು ಇಂದ್ರನಿಗೆ ಅಸುರನಾಶಕ್ಕೆ ಸಹಾಯಕನಾದನು. ರಾಕ್ಷಸರನ್ನು ತಡೆಗಟ್ಟಲು ಉತ್ಪನ್ನನಾದವನೂ ಮರಣರಹಿತನೂ ಆದ ಅಂತಹ ಇಂದ್ರನನ್ನು ಯಜ್ಞಗಳಿಂದ ಪೂಜಿಸೋಣ.

## English Translation

Atharvan first discovered the path of the stolen cattles by sacrifices ; then the bright Sun ( Indra ) the protector of pious performances, was born ; Atharvan regained the cattle with the help of Usanas son of Kavi ; let us worship Indra who was born to destroy Asuras.

### ವಿಶೇಷವಿಷಯಗಳು

**ಅಮೃತಂ—ಮರಣರಹಿತಂ ।** ಮರಣ ರಹಿತನಾದ ಇಂದ್ರನನ್ನು

**ಅಥರ್ವಾ**—ಒಬ್ಬ ಪ್ರಸಿದ್ಧನಾದ ಋಷಿಯು. ಈ ಋಷಿಯ ಹೆಸರು ಅನೇಕ ಋಕ್ಕುಗಳಲ್ಲಿ ಪಠಿತವಾಗಿದ್ದರೂ ಇವನ ವಿಷಯವಾಗಿ ಹೆಚ್ಚು ಸಂಗತಿಗಳು ನಮಗೆ ತಿಳಿದಿಲ್ಲ.

**ವೇನಃ ಸೂರ್ಯಃ**—ಈ ಶಬ್ದಗಳಿಗೆ ಪ್ರಕಾಶಮಾನನಾದ ಸೂರ್ಯರೂಪದಿಂದ ಇಂದ್ರನು ಆವಿರ್ಭವಿಸಿದನೆಂದು ಭಾಷ್ಯಕಾರರು ಹೇಳಿರುವರು. ಅಥವಾ ಸೂರ್ಯನು ಉದಯಿಸಿ ಬೆಳಗಾದ ಮೇಲೆ ಅಥರ್ವಋಷಿಯು ಗೋವುಗಳ ಅಪಹೃತಮಾರ್ಗವನ್ನು ಕಂಡುಕೊಂಡನೆಂದು ಹೇಳುವುದರಿಂದ ಅರ್ಥವು ಚೆನ್ನಾಗಿ ಹೊಂದುವುದು.

**ವ್ರತಪಾಃ—ವ್ರತಾನಾಂ ಕರ್ಮಣಾಂ ಪಾಲಯಿತಾ ।** ಯಜ್ಞಾದಿಕರ್ಮಗಳ ಪಾಲಕನು.

**ಉಶನಾ ಕಾವ್ಯಃ—ಕವೇಃ ಪುತ್ರಃ ಉಶನಾಃ ಭೃಗುಃ ।** ಕವಿಯ ಪುತ್ರನಾದ ಉಶನಸ್ ಎಂಬುವನು. ಇವನಿಗೆ ಭೃಗುವೆಂದು ಹೆಸರು. ಇವನು ಒಬ್ಬ ಪ್ರಸಿದ್ಧನಾದ ಋಷಿಯು. ಕಾವ್ಯ ಎಂಬ ಈ ಋಷಿಯ ಹೆಸರು ಋಗ್ವೇದದಲ್ಲಿ—ಋ. ಸಂ. ೧-೫೧-೧೧ ; ೧-೮೩-೫ ; ೧-೧೨೧-೧೨ ; ೬-೨೦-೧೧; ೭-೨೩-೧೭ ; ಅಥರ್ವವೇದ. ೪-೨೯-೬ ; ತೈತ್ತಿರೀಯ ಸಂಹಿತಾ ೨-೫-೮-೫ ಇತ್ಯಾದಿ ಮಂತ್ರಗಳಲ್ಲಿ ಪಠಿತವಾಗಿರುವುದು.

**ಯಮಸ್ಯ ಜಾತಂ—ಅಸುರಾಣಾಂ ನಿಯಮನಾರ್ಥಂ ಜಾತಂ ।** ಅಸುರರನ್ನು ನಿಗ್ರಹಮಾಡುವುದಕ್ಕಾಗಿ ಹುಟ್ಟಿದ.

### ವ್ಯಾಕರಣಪ್ರಕ್ರಿಯಾ

**ಪಥಃ**—ಪಥಿನ್ ಶಬ್ದದ ಮೇಲೆ ದ್ವಿತೀಯಾ ಬಹುವಚನ ಶಸ್ ಪ್ರತ್ಯಯ ಬಂದಾಗ **ಭಸ್ಯ ಟೇರ್ಲೋಪಃ** (ಪಾ. ಸೂ. ೭-೧-೮೮) ಭಸಂಜ್ಞೆಯುಳ್ಳ ಪಥಿನ್ ಶಬ್ದದ ಟಿಗೆ ಲೋಪ ಬರುತ್ತದೆ ಎಂಬುದರಿಂದ ಇಲ್ಲಿ ಅಜಾದಿ ಪ್ರತ್ಯಯ ಪರದಲ್ಲಿರುವುದರಿಂದ ಭಸಂಜ್ಞೆಯಿರುವುದರಿಂದ ಟಿಗೆ ಲೋಪ ಬರುತ್ತದೆ. ಇನ್ ಎಂಬ ಟಿಗೆ ಲೋಪ ಬಂದರೆ ಪಥ್+ಅಸ್ ಎಂದಾಗುತ್ತದೆ. ರುತ್ವವಿಸರ್ಗಗಳು ಬಂದರೆ ರೂಪ ಸಿದ್ಧಿಯಾಗುತ್ತದೆ. ಇಲ್ಲಿ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ವಿಭಕ್ತಿಯು ಅನುದಾತ್ತವಾಗುತ್ತದೆ. ಪ್ರಾತಿಪದಿಕವು **ಫಿಷೋಂತ ಉದಾತ್ತಃ** (ಫಿ. ಸೂ. ೧) ಎಂಬುದರಿಂದ ಅಂತೋದಾತ್ತವಾಗುತ್ತದೆ. ಅನುದಾತ್ತವು ಪರದಲ್ಲಿರುವಾಗ ಉದಾತ್ತಕ್ಕೆ ಲೋಪ ಹೇಳಿದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತ ಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತತೆ**—ತನು ವಿಸ್ತಾರೆ ಧಾತು. ತನಾದಿ. ಸ್ವರಿತೇತ್. ತನ್+ತೆ ಎಂದಿರುವಾಗ ಉವಿಕರಣವು ಪ್ರಾಪ್ತ ವಾದರೆ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ ಬರುತ್ತದೆ. **ಅನುದಾತ್ತೋಪದೇಶವನತಿ** (ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕವಾದ ನಕಾರಕ್ಕೆ ಲೋಪ ಬಂದರೆ ತತೆ ಎಂದಾಗುತ್ತದೆ. **ತಿಙ ತಿಙಃ** ಎಂಬುದರಿಂದ ಅತಿಙಂತದ ಪರದಲ್ಲಿ ಬಂದುದರಿಂದ ಸರ್ವಾನುದಾತ್ತವಾಗುತ್ತದೆ.

**ಅಜನಿ**—ಜನೀ ಪ್ರಾದುರ್ಭಾವೆ. ಧಾತು. ಕರ್ತರಿ ಲುಙ್ ಪ್ರಥಮ ಪುರುಷೈಕವಚನರೂಪ. ಜನ್+ತ ಎಂದಿರುವಾಗ ಸಾಮಾನ್ಯವಾಗಿ ಚ್ಲಿ ಪ್ರಾಪ್ತವಾದಾಗ ಅದಕ್ಕೆ **ದೀಪಜನಬುಧಪೂರಿ** (ಪಾ. ಸೂ. ೩-೧-೬೧) ಇವುಗಳ ಪರದಲ್ಲಿರುವ ಚ್ಲಿಗೆ ಏಕವಚನ ತಶಬ್ದ ಪರದಲ್ಲಿರುವಾಗ ಚಿಣ್ ವಿಕಲ್ಪವಾಗಿ ಬರುತ್ತದೆ ಎಂಬುದರಿಂದ ಚಿಣಾದೇಶ ಬರುತ್ತದೆ. ಚಿಣ್ ಬಂದರೆ **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನ ಪರ ದಲ್ಲಿರುವ ತಶಬ್ದಕ್ಕೆ ಲುಕ್ ಬರುತ್ತದೆ ಎಂಬುದರಿಂದ ಏಕವಚನದ ತ ಪ್ರತ್ಯಯಕ್ಕೆ ಲುಕ್ ಬರುತ್ತದೆ. ಲುಙ್ ನಿಮಿತ್ತಕವಾದ ಅಟ್ ಧಾತುವಿಗೆ ಬಂದರೆ ಅಜನಿ ಎಂದಾಗುತ್ತದೆ.

**ಆಜತ್**—ಅಜ ಗತಿಕ್ಷೇಪಣಯೋಃ ಧಾತು. ಭ್ವಾದಿ. ಶಪ್ವಿಕರಣ. ಲಙ್ ಪ್ರಥಮಪುರುಷೈಕವಚನ. ತಿಪ್ಪಿನ ಇಕಾರಕ್ಕೆ **ಇತಶ್ಚ** ಎಂಬ ಸೂತ್ರದಿಂದ ಲೋಪ ಬರುತ್ತದೆ. ಅಜಾದಿಯಾದುದರಿಂದ ಧಾತುವಿಗೆ ಆಡಾಗಮ ಬರುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ಬರ್ಹಿರ್ವಾ ಯತ್ಸ್ವಪತ್ಯಾಯ ವೃಜ್ಯತೇಽರ್ಕೋ ವಾ ಶ್ಲೋಕ-
ಮಾಘೋಷತೇ ದಿವಿ ।
ಗ್ರಾವಾ ಯತ್ರ ವದತಿ ಕಾರುರುಕ್ಥ್ಯಸ್ತಸ್ಯೇದಿಂದ್ರೋ ಅಭಿಪಿ-
ತ್ವೇಷು ರಣ್ಯತಿ ॥ ೬ ॥

ಪದಪಾಠಃ

ಬರ್ಹಿಃ । ವಾ । ಯತ್ । ಸು ऽ ಅಪತ್ಯಾಯ । ವೃಜ್ಯತೇ । ಅರ್ಕಃ । ವಾ । ಶ್ಲೋ-
ಕಂ । ಆ ऽ ಘೋಷತೇ । ದಿವಿ ।
ಗ್ರಾವಾ । ಯತ್ರ । ವದತಿ । ಕಾರುಃ । ಉಕ್ಥ್ಯಃ । ತಸ್ಯ । ಇತ್ । ಇಂದ್ರಃ । ಅ-
ಭಿ ऽ ಪಿತ್ವೇಷು । ರಣ್ಯತಿ ॥ ೬ ॥

ಸಾಯಣಭಾಷ್ಯಂ

ಸ್ವಪತ್ಯಾಯ ಶೋಭನಾಪತನಹೇತುಭೂತಾಯ ಕರ್ಮಣೇ ಬರ್ಹಿರ್ವಾ ಯದ್ಯದಾ ವೃಜ್ಯತೇ ಛಿದ್ಯತೇ ಅಧ್ವರ್ಯುಣಾ ಯಾಗಾರ್ಥಮಾಹ್ರಿಯತೇ । ಅರ್ಕೋ ವಾ ಸ್ತೋತ್ರನಿಷ್ಪಾದಕೋ ಹೋತಾ ವಾ ಶ್ಲೋಕಂ ಸ್ತುತಿರೂಪಾಂ ವಾಚಂ ದಿವಿ ದ್ಯೋತಮಾನೇ ಯಜ್ಞೇ ಯದಾಘೋಷತೇ ಉಚ್ಚಾರಯತಿ । ಯತ್ರ ಯಸ್ಮಿನ್ಕಾಲೇ ಗ್ರಾವಾಭಿಷವಾರ್ಥಂ ಪ್ರವೃತ್ತ ಉಪಲೋ ವದತಿ ಶಬ್ದಂ ಕರೋತಿ । ತತ್ರ ದೃಷ್ಟಾಂತಃ । ಕಾರುರುಕ್ಥ್ಯಃ । ಲುಪ್ತೋಪಮಮೇತತ್ । ಉಕ್ಥ್ಯಸ್ಯ ಶಸ್ತ್ರಸ್ಯ ಶಂಸಿತಾ ಕಾರುಃ ಸ್ತೋತಾ ಯಥಾಭಿಮತಶಬ್ದಂ ಕರೋತಿ ತದ್ವತ್ । ತಸ್ಯ ಪೂರ್ವೋಕ್ತಸ್ಯ ಸರ್ವಸ್ಯಾಭಿಪಿತ್ವೇಷ್ವಭಿಪ್ರಾಪ್ತಿಷ್ವಿಂದ್ರೋ ರಣ್ಯತಿ । ರಮತೇ । ಯದ್ವಾ । ಪೂರ್ವೋಕ್ತಾನಾಂ ಬರ್ಹಿರಾದೀನಾಮಭಿಪ್ರಾಪ್ತಿಷು ಸತೀಷ್ವಿಂದ್ರೋ ರಣ್ಯತಿ । ಅಸ್ಮದೀಯೋ ಯಾಗೋ ಭವಿಷ್ಯತೀತಿ ಹರ್ಷಶಬ್ದಂ ಕರೋತಿ ॥ ವೃಜ್ಯತೇ । ವೃಜೀ ವರ್ಜನೇ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಯಕ ಏವ ಸ್ವರಃ ಶಿಷ್ಯತೇ । ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ । ಆಘೋಷತೇ । ಘುಷಿರ್ ವಿಶಬ್ದನೇ । ಭೌವಾದಿಕಃ । ಅತ್ರಾಪಿ ಯದಿತ್ಯಸ್ಯ ನಿಪಾ-ತಸ್ಯಾನುಷಂಗಾನ್ನಿಘಾತಾಭಾವಃ । ರಣ್ಯತಿ । ರಮು ಕ್ರೀಡಾಯಾಂ । ವ್ಯತ್ಯಯೇನ ಶ್ಯನ್ ಪರಸ್ಮೈಪದಂ ಚ । ಅಂತ್ಯವಿಕಾರಶ್ಛಾಂದಸಃ । ಯದ್ವಾ । ರಣ ಶಬ್ದಾರ್ಥಃ । ವ್ಯತ್ಯಯೇನ ಶ್ಯನ್ ॥

ಪ್ರತಿಪದಾರ್ಥ

ಸ್ವಪತ್ಯಾಯ—ಶ್ರೇಷ್ಠವಾದ ಕರ್ಮಾಭಿವೃದ್ಧಿಗಾಗಿ । ಯತ್—ಯಾವಾಗ । ಬರ್ಹಿಃ—ಪವಿತ್ರವಾದ ದರ್ಭವು । ವೃಜ್ಯತೇ ವಾ—ಕತ್ತರಿಸಲ್ಪಡುವುದೋ ಆ ಸಮಯದಲ್ಲಾಗಲಿ, । ಅರ್ಕಃ—ಸ್ತೋತ್ರ ಸಂಪಾದಕನಾದ ಹೋತೃವು । ಶ್ಲೋಕಂ—ಸ್ತುತಿರೂಪವಾದ ವಾಕ್ಯವನ್ನು । ದಿವಿ—ಪ್ರಕಾಶಮಾನವಾದ ಯಜ್ಞದಲ್ಲಿ । ಆ ಘೋಷತೇ ವಾ—ಉಚ್ಚರಿಸುವ ಕಾಲದಲ್ಲಾಗಲಿ । ಯತ್ರ—ಯಾವ ಯಜ್ಞಕಾಲದಲ್ಲಿ । ಗ್ರಾವಾ—(ಸೋಮರಸವನ್ನು ಹಿಂಡುವ) ಕಲ್ಲು । ಕಾರುರುಕ್ಥ್ಯಃ ಶಸ್ತ್ರರೂಪವಾದ ಮಂತ್ರವನ್ನು ಪಠಿಸುವ ಸ್ತೋತೃವು ಶಬ್ದಮಾಡುವಂತೆ । ವದತಿ (ವಾ)—(ಪ್ರಿಯವಾದ) ಶಬ್ದವಮಾಡುವ ಕಾಲದಲ್ಲಾಗಲೀ । ತಸ್ಯ ಇತ್—ಈ ಎಲ್ಲಾ ವಿಧವಾದ । ಅಭಿ

**ಪಿತ್ವೇಷು**—ಸಂದರ್ಭಗಳು ಒದಗಿದಾಗಲೂ । **ಇಂದ್ರಃ**—ಇಂದ್ರನು । **ರಣ್ಯತಿ**—ಸಂತೋಷಪಡುತ್ತಾನೆ ಅಥವಾ ಹರ್ಷಸೂಚಕವಾದ ಶಬ್ದವನ್ನು ಮಾಡುತ್ತಾನೆ ॥

ಭಾವಾರ್ಥ

ಶ್ರೇಷ್ಠವಾದ ಕರ್ಮಕ್ಕಾಗಿ ಪವಿತ್ರವಾದ ದರ್ಭಚ್ಛೇದನಕಾಲದಲ್ಲಾಗಲಿ, ಪ್ರಕಾಶಮಾನವಾದ ಯಜ್ಞದಲ್ಲಿ ಸ್ತೋತ್ರ ಸಂಪಾದಕನಾದ ಹೋತೃವು ಸ್ತೋತ್ರಮಾಡತಕ್ಕಕಾಲದಲ್ಲಾಗಲಿ ಮತ್ತು ಸೋಮರಸವನ್ನು ಹಿಂಡತಕ್ಕ ಕಲ್ಲು ಸ್ತೋತೃವಿನಂತೆ ಪ್ರಿಯವಾದ ಶಬ್ದಮಾಡುವಾಗಾಗಲಿ, ಈ ಎಲ್ಲಾ ಸಂದರ್ಭಗಳು ಒದಗಿದಾಗಲೂ ಸಹ ಇಂದ್ರನು ತನ್ನನ್ನು ಉದ್ದೇಶಿಸಿದ ಯಜ್ಞವು ಸಮಾಪಿಸಿತೆಂದು ಸಂತೋಷವನ್ನು ವ್ಯಕ್ತಪಡಿಸುತ್ತಾನೆ.

English Translation

Whether the sacred grass is cut for the sacrifice, in order to bring down the blessings, whether the priest recites the sacred hymn in the brilliant sacrifice, whether the stone used to press the soma plant makes a sound like the priest who repeats the hymn, on all these occasions Indra rejoices.

॥ ವಿಶೇಷವಿಷಯಗಳು ॥

**ಬರ್ಹಿಃ**—ಅಗ್ರಭಾಗವನ್ನು ಕತ್ತರಿಸಿದ ದರ್ಭೆ. ಯಜ್ಞಮಾಡುವಾಗ ದರ್ಭೆಯ ತುದಿಗಳನ್ನು ಕತ್ತರಿಸಿ ಭೂಮಿಯಮೇಲೆ ಮೆತ್ತಗಿರುವಂತೆ ಪದರಪದರಗಳಾಗಿ ಹರಡುವರು. ಇದರಮೇಲೆ ಬಂದು ಕುಳಿತುಕೊಳ್ಳಬೇಕೆಂದು ದೇವತೆಗಳನ್ನು ಪ್ರಾರ್ಥಿಸುವರು. ದರ್ಭೆಯ ತುದಿಗಳನ್ನು ಕತ್ತರಿಸುವಾಗ ಉಂಟಾಗುವ ಕರಕರವೆಂಬ ಶಬ್ದವು ಯಜ್ಞಾರ್ಥವಾಗಿ ಮಾಡುವುದರಿಂದ ಇಂದ್ರನಿಗೆ ಸಂತೋಷವನ್ನುಂಟುಮಾಡುವುದೆಂಬಭಿಪ್ರಾಯವು.

**ಅರ್ಕಃ**—ಋಕ್ಕನ್ನು ( ಮಂತ್ರವನ್ನು ) ಪಠಿಸುವ ಹೋತೃವು ಅಥವಾ ಋತ್ವಿಜನು. ಅರ್ಕೀ ಎಂಬ ಶಬ್ದಕ್ಕೆ ಬದಲಾಗಿ ಅರ್ಕಶಬ್ದವು ಪ್ರಯೋಗಿಸಲ್ಪಟ್ಟಿರುವುದು. ಅರ್ಕಶಬ್ದವು ಈ ಅರ್ಥದಲ್ಲಿ ಋ. ಸಂ. ೧-೧೬೭-೬ರಲ್ಲಿ ಉಪಯೋಗಿಸಲ್ಪಟ್ಟಿರುವುದು.

**ಶ್ಲೋಕಃ**—**ಶ್ಲೋಕಃ ಶೃಣೋತೇ :** ( ನಿ. ೯-೮ ) ಶ್ಲೋಕಃ ಎಂದರೆ ಸ್ತುತಿರೂಪವಾದ ವಾಕ್ಯವು, ( ನಿ. ೨-೨೩ ).

**ದಿವಿ**—ಈ ಶಬ್ದಕ್ಕೆ ಭಾಷ್ಯಕಾರರು ಪ್ರಕಾಶಮಾನವಾದ ಯಜ್ಞದಲ್ಲಿ ಎಂದರ್ಥ ವಿವರಣೆ ಮಾಡಿರುವರು.

**ಗ್ರಾವಾ**— ಸೋಮಲತೆಯನ್ನು ಜಜ್ಜಿ ಸೋಮರಸವನ್ನು ಹಿಂಡುವುದಕ್ಕಾಗಿ ಉಪಯೋಗಿಸುವ ಕಲ್ಲು. ಗ್ರಾವಾ ಯತ್ರ ವದತಿ ಎಂದರೆ ಸೋಮಲತೆಯನ್ನು ಜಜ್ಜುವಾಗ ಉಂಟಾಗುವ ಶಬ್ದವು ಇಂದ್ರನಿಗೆ ಪ್ರೀತಿಕರವಾದುದು ಎಂಬಭಿಪ್ರಾಯವು. ಸೋಮಲತೆಯನ್ನು ಕಲ್ಲಿನಿಂದ ಜಜ್ಜುವ ಶಬ್ದವನ್ನು ಗ್ರಾವಾ ವದತಿ ಎಂಬ ಶಬ್ದಗಳಿಂದ ಹೇಳುವ ರೂಢಿಯು ಇದ್ದಂತೆ ಕಾಣುವುದು. **ಯತ್ರ ಗ್ರಾವಾ ವದತಿ ತತ್ರ ಗಚ್ಛತಂ** (ಋ. ಸಂ. ೧-೧೩೫-೭) ಇತ್ಯಾದಿ ಉದಾಹರಣೆಗಳಿರುವವು.

**ಕಾರುಃ**—ಮಾಡುವವನು. ಎಂದರೆ ಸ್ತೋತ್ರಮಾಡುವವನು. ಕವಿ, ಈ ಶಬ್ದವು ಋಗ್ವೇದದಲ್ಲಿ ಋ. ಸಂ.-೧-೧೬೫-೧೪ ; ೭-೬೮-೯ ; ೯-೧೧೨-೩ ; ೧೦-೭೫-೧ ; ಎಂಬ ಋಕ್ಕುಗಳಲ್ಲಿ ಪಠಿತವಾಗಿದೆ. ಮತ್ತು ಈ ಶಬ್ದದ ರೂಪಾಂತರಗಳಾದ **ಕಾರವಃ ಕಾರವೇ, ಕಾರುಂ** ಮೊದಲಾದ ಶಬ್ದಗಳು ಅನೇಕ ಋಕ್ಕುಗಳಲ್ಲಿ ಇರುವವು.

**ಉಕ್ಥ್ಯಃ**— ಶಸ್ತ್ರಮಂತ್ರವನ್ನು ಪಠಿಸುವವನು, ಋತ್ವಿಕ್ಕು.

**ಅಭಿಸಿತ್ವೇಷು— ಪೂರ್ವೋಕ್ತಾನಾಂ ಬರ್ಹಿರಾದೀನಾಮಭಿಪ್ರಾಪ್ತಿಷು ।** ಹಿಂದೆ ಹೇಳಿದ ದರ್ಭ ವಿಚ್ಛೇದನ ಮೊದಲಾದ ಶಬ್ದಗಳು ಕೇಳಿಸುತ್ತಿರುವಾಗ

**ರಣ್ಯತಿ—ಅಸ್ಮದೀಯೋ ಯಾಗೋ ಭವಿಷ್ಯತೀತಿ ಹರ್ಷಶಬ್ದಂ ಕರೋತಿ ।** ಮೇಲೆ ಹೇಳಿದ ದರ್ಭ ವಿಚ್ಛೇದನಾದಿಶಬ್ದಗಳು ಯಜ್ಞಾನುಷ್ಠಾನ ಸೂಚಕಗಳಾದುದರಿಂದ ಅಂತಹ ಶಬ್ದಶ್ರವಣದಿಂದ ಇಂದ್ರನು ಸಂತೋಷ ಪಟ್ಟು ತನ್ನ ಮೆಚ್ಚುಗೆಯನ್ನು ಸೂಚಿಸಲು ಹರ್ಷಧ್ವನಿ ಮಾಡುವನು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ವೃಜ್ಯತೆ**—ವೃಜೀ ವರ್ಜನೆ ಧಾತು. ರುಧಾದಿ. ಕರ್ಮಣಿ ಲಟ್. ಕರ್ಮ ಲಕಾರ ಪರದಲ್ಲಿರುವಾಗ **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಧಾತುವಿಗೆ ಯಕ್ ಬರುತ್ತದೆ. **ಭಾವ ಕರ್ಮಣೋಃ** ಎಂಬುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಪ್ರತ್ಯಯಾಂತೋದಾತ್ತವು ಪ್ರಾಪ್ತವಾದರೆ **ತಾಸ್ಯನುದಾತ್ತೇತ್** (ಪಾ.ಸೂ. ೬-೧-೧೮೬) ಎಂಬುದರಿಂದ ಅದುಪದೇಶದ (ವೃಜ್ಯ) ಪರದಲ್ಲಿರುವುದರಿಂದ ಲಸಾರ್ವ ಧಾತುಕಕ್ಕೆ ಅನುದಾತ್ತಸ್ವರ ಬರುತ್ತದೆ. ಆಗ ಯಕ್ ಸ್ವರವೇ ಸತಿಶಿಷ್ಟವಾಗುವುದರಿಂದ (ಉದಾತ್ತ) ಉಳಿಯುತ್ತದೆ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತವು ಪ್ರಾಪ್ತವಾದರೆ **ನಿಪಾತೈರ್ಯದ್ಯದಿಹಂತ**—(ಪಾ. ಸೂ. ೮-೧-೩೦. ಇವುಗಳ ಯೋಗವಿರುವಾಗ ತಿಙಂತವು ಸರ್ವಾನುದಾತ್ತವಾಗುವುದಿಲ್ಲ ಎಂದು ನಿಷೇಧಿಸಿದುದರಿಂದ ಇಲ್ಲಿ ಪೂರ್ವದಲ್ಲಿ ಯತ್ ಸಂಬಂಧವಿರುವುದರಿಂದ ಸರ್ವಾನುದಾತ್ತ ಬಂದಿಲ್ಲ.

**ಆಘೋಷತೇ**—ಘುಷಿರ್ ವಿಶಬ್ದನೆ. ಧಾತು. ಭ್ವಾದಿ, ಆಙ್ ಉಪಸರ್ಗ. ಇರ್ ಇತ್ತಾಗುತ್ತದೆ. ಶಪ್ ವಿಕರಣಪ್ರತ್ಯಯ ಬಂದಾಗ ಲಘೂಪಧಗುಣ ಬರುತ್ತದೆ. ಇಲ್ಲಿಯೂ ಹಿಂದಿನಂತೆ ಅದುಪದೇಶದ ಪರದಲ್ಲಿರು ವುದರಿಂದ ಪ್ರತ್ಯಯಕ್ಕೆ ಅಂತೋದಾತ್ತಸ್ವರ ಬರುತ್ತದೆ. ಶಪ್ ಪಿತ್ತಾಗ್ದರಿಂದ ಅನುದಾತ್ತವಾಗುತ್ತದೆ. ಧಾತುಸ್ವರವು (ಉದಾತ್ತ) ಉಳಿಯುತ್ತದೆ. ಉದಾತ್ತದ ಪರದಲ್ಲಿರುವ ಶಪನುದಾತ್ತಕ್ಕೆ ಸ್ವರಿತ ಬರುತ್ತದೆ. ಸ್ವರಿತದ ಪರದಲ್ಲಿರುವ ಅನುದಾತ್ತವು ಪ್ರಚಯವಾಗುತ್ತದೆ. ಹಿಂದಿನಂತೆ ನಿಘಾತವೂ (ಸರ್ವಾನುದಾತ್ತವು) ಬರುವುದಿಲ್ಲ. ಹಿಂದಿನ ಯತ್ ಎಂಬುದನ್ನು ಅನುಷಂಗಮಾಡಿಕೊಳ್ಳುವುದರಿಂದ ಯತ್ಸಂಬಂಧ ಬರುವುದರಿಂದ ನಿಘಾತಪ್ರತಿಷೇಧ ಬರುತ್ತದೆ.

ರಣ್ಯತಿ—ರಮು ಕ್ರೀಡಾಯಾಂ ಧಾತು ಭ್ವಾದಿ. ಶಪ್ ವಿಕರಣವು ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಛಂದಸ್ಸಿನಲ್ಲಿ ಶ್ಯನ್ ವಿಕರಣ ಬರುತ್ತದೆ. ಅನುದಾತ್ತೇತ್ತಾದರೂ ಆದರಿಂದಲೇ ಪರಸ್ಮೈಪದಪ್ರತ್ಯಯವೂ ಬರುತ್ತದೆ. ಹಾಗಾದರೂ ರಮ್ಯತಿ ಎಂದು ರೂಪವಾಗಬೇಕಾಗುತ್ತದೆ. ಆಗ

ಧಾತುವಿನ ಅಂತ್ಯಕ್ಕೆ ಬಂದಿರುವ ವಿಕಾರವು ಅಂದರೆ ಮಕಾರಕ್ಕೆ ಣಕಾರಾದೇಶವೂ ಛಾಂದಸವೆಂದು ಹೇಳಬೇಕು. ಇದಕ್ಕೆ ಅನುಶಾಸನದ ಅಪೇಕ್ಷೆ ಇಲ್ಲ. ಅಥವಾ ರಣ ಶಬ್ದೇ ಧಾತು. ಇದೂ ಭ್ವಾದಿಯಾದುದರಿಂದ ಶಪ್ ಪ್ರಾಪ್ತವಾದರೆ ಹಿಂದಿನಂತೆ ವ್ಯತ್ಯಯದಿಂದ ಶ್ಯನ್ ವಿಕರಣವನ್ನು ಹೇಳಬೇಕು. ಇಲ್ಲಿ ಛಾಂದಸವಿಕಾರವನ್ನು ಕಲ್ಪನೆಮಾಡದಿರುವುದರಿಂದ ಲಾಘವವಿದೆ. ಪ್ರಥಮಪುರುಷೈಕವಚನದಲ್ಲಿ ರಣ್ಯತಿ ಎಂದು ರೂಪಸಿದ್ಧವಾಗುತ್ತದೆ. **ತಿಙ್ಙತಿಙಃ** ಎಂಬುದರಿಂದ ಅಭಿಸಿತ್ತ್ವೇಷು ಎಂಬ ಅತಿಙಂತ ಪರದಲ್ಲಿರುವುದರಿಂದ ಸರ್ವಾನುದಾತ್ತವಾಗುತ್ತದೆ. ॥ ೬ ॥



# ಎಂಭತ್ತನಾಲ್ಕನೆಯ ಸೂಕ್ತವು

---

ಅಸಾವೀತಿ ವಿಂಶತ್ಯೃಚಮೇಕಾದಶಂ ಸೂಕ್ತಂ । ಅತ್ರಾನುಕ್ರಮ್ಯತೇ । ಅಸಾವಿ ವಿಂಶತಿಃ **ಷಳನುಷ್ಟುಭ ಔಷ್ಣಿಹಪಾಂಕ್ತಗಾಯತ್ರತ್ರೈಷ್ಟುಭಾಸ್ತ್ರ್ಯೃಚಾಃ ಪ್ರಗಾಥ ಇತಿ । ಆದಿತಃ ಷಡನುಷ್ಟುಭಃ ಸಪ್ತಮ್ಯಾದ್ಯಾಸ್ತಿಸ್ರ ಉಷ್ಣಿಹಃ । ದಶಮ್ಯಾದ್ಯಾಸ್ತಿಸ್ರಃ ಪಂಕ್ತಯಃ । ತ್ರಯೋದಶ್ಯಾದ್ಯಾಸ್ತಿಸ್ರೋ ಗಾಯತ್ರ್ಯಃ । ಷೋಡಶಾದ್ಯಾಸ್ತಿಸ್ರಸ್ತ್ರಿಷ್ಟುಭಃ । ಏಕೋನವಿಂಶೀ ಬೃಹತೀ ವಿಂಶೀ ಸತೋಬೃಹತೀ । ಅನುವರ್ತನಾದ್ಗೋತಮ ಋಷಿಃ । ಅನಾದೇಶಪರಿಭಾಷಯೇಂದ್ರೋ ದೇವತಾ ॥ ಸೂಕ್ತವಿನಿಯೋಗೋ ಲಿಂಗಾದವಗಂತವ್ಯಃ ॥ ಅವಿಹೃತಷೋಡಶಿಶಸ್ತ್ರ ಆದ್ಯೌ ತೃಚೌ ಸ್ತೋತ್ರಿಯಾನುರೂಪೌ । ಸೂತ್ರಿತಂ ಚ । ಅಥ ಷೋಡಶ್ಯಸಾವಿ ಸೋಮ ಇಂದ್ರ ತ ಇತಿ ಸ್ತೋತ್ರಿಯಾನುರೂಪೌ । ಆ. ೬–೨ । ಇತಿ ॥ ಆಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇಽಚ್ಛಾವಾಕಸ್ಯೇಮಾವೇವ ತೃಚೌ ವೈಕಲ್ಪಿಕೌ ಸ್ತೋತ್ರಿಯಾನುರೂಪೌ । ಏಹ್ಯೂಷ್ವಿತಿ ಖಂಡೇ ಸೂತ್ರಿತಂ । ಅಸಾವಿ ಸೋಮ ಇಂದ್ರ ತ ಇಮಮಿಂದ್ರ ಸುತಂ ಪಿಬ । ಆ. ೭–೮ । ಇತಿ ॥**

ಅನುವಾದವು— **ಅಸಾವಿ ಸೋಮ** ಎಂಬ ಸೂಕ್ತವು ಹದಿಮೂರನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಇಪ್ಪತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— **ಅಸಾವಿ ವಿಂಶತಿಃ ಷಳನುಷ್ಟುಭ ಔಷ್ಣಿಹಪಾಙ್ಕ್ತಗಾಯತ್ರತ್ರೈಷ್ಟುಭಾಸ್ತ್ರ್ಯೃಚಾಃ ಪ್ರಗಾಥಃ** ಎಂದಿರುವುದು. ಎಂದರೆ ಈ ಸೂಕ್ತದ ಮೊದಲಿನ ಆರು ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು ; ಏಳರಿಂದ ಮೂರು ಋಕ್ಕುಗಳು ಉಷ್ಣಿಕ್ ಛಂದಸ್ಸಿನವು ; ಹತ್ತರಿಂದ ಮೂರು ಋಕ್ಕುಗಳು ಪಂಕ್ತಿಛಂದಸ್ಸಿನವು ; ಹದಿಮೂರರಿಂದ ಮೂರು ಋಕ್ಕುಗಳು ಗಾಯತ್ರೀಛಂದಸ್ಸಿನವು ; ಹದಿನಾರರಿಂದ ಮೂರು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು ; ಹತ್ತೊಂಭತ್ತನೆಯ ಋಕ್ಕು ಬೃಹತೀ ಛಂದಸ್ಕವು ; ಇಪ್ಪತ್ತನೆಯ ಋಕ್ಕು ಸತೋಬೃಹತೀಛಂದಸ್ಕವು. ಈ ಸೂಕ್ತಕ್ಕೆ ಗೋತಮನು ಋಷಿಯು. ಇಂದ್ರನು

ಹೇಳಿದೆ. ಸೂಕ್ತವಿನಿಯೋಗವು ಅರ್ಥಾನುಸಾರವಾಗಿರುವುದು. ಅವಿಹೃತಷೋಡಶಿಶಸ್ತ್ರಮಂತ್ರಪಠನದಲ್ಲಿ ಮೊದಲಿನ ಆರು ಋಕ್ಕುಗಳು (ಎರಡು ತೃಚಗಳು) ಸ್ತೋತ್ರಿಯಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ **ಅಥ ಷೋಡಶ್ಯಸಾವಿ ಸೋಮ ಇಂದ್ರ ತ ಇತಿ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ ವಿವೃತವಾಗಿರುವುದು. ಮತ್ತೂ ಅಭಿಪ್ಲವಷಡಹಯಾಗದಲ್ಲಿಯೂ ತೃತೀಯಸವನಕರ್ಮದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಉಕ್ಥಶಸ್ತ್ರಮಂತ್ರಪಠನದಲ್ಲಿ ಈ ಎರಡು ತೃಚಗಳನ್ನು ಎಂದರೆ ಮೊದಲಿನ ಆರು ಋಕ್ಕುಗಳನ್ನು ವಿಕಲ್ಪವಾಗಿ ಸ್ತೋತ್ರಿಯಮಂತ್ರವನ್ನಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ **ಏಹ್ಯೂಷು** ಎಂಬ ಖಂಡದಲ್ಲಿ **ಅಸಾವಿ ಸೋಮ ಇಂದ್ರ ತೆ ಇಮಮಿಂದ್ರ ಸುತಂ ಪಿಬ** ಎಂಬ ಸೂತ್ರವು ನಿರ್ದೇಶಿಸುವುದು.



॥ ಓಂ ॥

## ಸೂಕ್ತ—೮೪

॥ ಮಂಡಲ—೧ ॥ ಅನುವಾಕ—೧೩ ॥ ಸೂಕ್ತ—೮೪ ॥

॥ ಅಷ್ಟಕ— ೧ ॥ ಅಧ್ಯಾಯ— ೬ ॥ ವರ್ಗ— ೫, ೬, ೭. ೮,॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೨೦ ॥

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ಇಂದ್ರಃ ॥

॥ ಛಂದಃ—೧–೬. ಅನುಷ್ಟುಪ್ । ೭–೯ ಉಷ್ಣಿಕ್ । ೧೦.೧೨. ಪಂಕ್ತಿಃ । ೧೩-೧೫. ಗಾಯತ್ರೀ । ೧೬–೧೮. ತ್ರಿಷ್ಟುಪ್ । ೧೯. ಬೃಹತೀ । ೨೦. ಸತೋಬೃಹತೀ ॥

॥ ಸಂಹಿತಾಪಾಠಃ ॥

ಅಸಾ॑ವಿ॒ ಸೋಮ॑ ಇಂದ್ರ ತೇ॒ ಶವಿ॑ಷ್ಠ ಧೃಷ್ಣ॒ವಾ ಗ॑ಹಿ ।
ಆ ತ್ವಾ॑ ಪೃಣಕ್ತ್ವಿಂದ್ರಿ॒ಯಂ ರಜಃ॒ ಸೂರ್ಯೋ॒ ನ ರ॒ಶ್ಮಿಭಿಃ॑ ॥೧॥

ಪದಪಾಠಃ

ಅಸಾವಿ । ಸೋಮಃ । ಇಂದ್ರ । ತೇ । ಶವಿಷ್ಠ । ಧೃಷ್ಣೋ ಇತಿ । ಆ । ಗಹಿ ।
ಆ । ತ್ವಾ । ಪೃಣಕ್ತು । ಇಂದ್ರಿಯಂ । ರಜಃ । ಸೂರ್ಯಃ । ನ । ರಶ್ಮಿಽಭಿಃ ॥೧॥

ಸಾಯಣಭಾಷ್ಯಂ

ಹೇ ಇಂದ್ರ ತೇ ತ್ವದರ್ಥಂ ಸೋಮ ಅಸಾವಿ । ಅಭಿಷುತೋಽಭೂತ್ । ಹೇ ಶವಿಷ್ಠಾತಿಶಯೇನ ಬಲವನ್ ಅತ ಏವ ಧೃಷ್ಣೋ ಶತ್ರೂಣಾಂ ಧರ್ಷಯಿತರಿಂದ್ರ ಆ ಗಹಿ । ದೇವಯಜನದೇಶಮಾಗಚ್ಛ । ಆಗತಂ ತ್ವಾಮಿಂದ್ರಿಯಂ ಸೋಮಪಾನೇನೋತ್ಪನ್ನಂ ಪ್ರಭೂತಂ ಸಾಮರ್ಥ್ಯಮಾ ಪೃಣಕ್ತು ಆಪೂರಯತು । ರಜೋಽಂತರಿಕ್ಷಂ ರಶ್ಮಿಭಿಃ ಕಿರಣೈಃ ಸೂರ್ಯೋ ನ । ಯಥಾ ಸೂರ್ಯಃ ಪೂರಯತಿ ತದ್ವತ್ ॥ ಶವಿಷ್ಠ । ಶವಸ್ವಿಇಷ್ಠಾಬ್ದಾದಿಷ್ಠನಿ ವಿನ್ಮತೋರ್ಲುಕ್ । ಟೇರಿತಿ ಟಿಲೋಪಃ । ಪಾದಾದಿತ್ವಾನ್ನಿಘಾತಾಭಾವಃ । ಗಹಿ । ಗಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ತಸ್ಯಾಸಿದ್ಧವದತ್ರಾ ಭಾದಿತ್ಯಸಿದ್ಧವತ್ತ್ವಾದ್ಧೇರ್ಲುಗಭಾವಃ ॥ ೧ ॥

॥ ಪ್ರತಿಪದಾರ್ಥ ॥

**ಇಂದ್ರ**— ಎಲೈ ಇಂದ್ರನೇ, । **ತೇ**—ನಿನಗಾಗಿ । **ಸೋಮಃ**— ಸೋಮರಸವು । **ಅಸಾವಿ**— ಹಿಂಡಲ್ಪಟ್ಟಿದೆ । **ಶವಿಷ್ಠ**— ಅತ್ಯಂತಬಲಶಾಲಿಯೂ । **ಧೃಷ್ಣೋ**— (ಆದ್ದರಿಂದಲೇ) ಶತ್ರುವನ್ನು ಮರ್ದನ ಮಾಡುವವನೂ ಆದ ಇಂದ್ರನೇ, । **ಆಗಹಿ**— (ದೇವಯಜ್ಞಪ್ರದೇಶಕ್ಕೆ) ದಯಮಾಡು. । (ನಿನ್ನನ್ನು) **ಇಂದ್ರಿಯಂ**—(ಸೋಮರಸಪಾನದಿಂದ ಲಭಿಸಿದ) ಪ್ರಭೂತವಾದ ಬಲವು । **ರಜಃ**—ಅಂತರಿಕ್ಷವನ್ನು । **ರಶ್ಮಿಭಿಃ**—ಕಿರಣಗಳ ಮೂಲಕ । **ಸೂರ್ಯೋ ನ**—ಸೂರ್ಯನು ತುಂಬುವಂತೆ । **ಆ ಪೃಣಕ್ತು**—ಸಂಪೂರ್ಣವಾಗಿ ತುಂಬಿಕೊಳ್ಳಲಿ. ।

ಭಾವಾರ್ಥ

ಎಲೈ ಇಂದ್ರನೇ, ನಿನಗಾಗಿ ಸೋಮರಸವು ಹಿಂಡಿ ಸಿದ್ಧವಾಗಿದೆ. ಅತ್ಯಂತಬಲಶಾಲಿಯೂ, ಆದ್ದರಿಂದಲೇ ಶತ್ರುದಮನವನ್ನು ಮಾಡುವವನೂ ಆದ ಇಂದ್ರನೇ, ನೀನು ದೇವಯಜ್ಞಪ್ರದೇಶಕ್ಕೆ ದಯಮಾಡು. ಸೂರ್ಯನು ತನ್ನ ಕಿರಣಗಳ ಮೂಲಕ ಅಂತರಿಕ್ಷವನ್ನು ತುಂಬುವಂತೆ, ಸೋಮರಸಪಾನದಿಂದ ಲಭಿಸಿದ ಪ್ರಬಲವಾದ ಶಕ್ತಿಯು ನಿನ್ನ ದೇಹವನ್ನೆಲ್ಲಾ ತುಂಬಿಕೊಳ್ಳಲಿ.

English Translation

O Indra, the Soma has been expressed for you ; mightiest and brave Indra, come ( to our sacrifice ) ; may strength inspired by Soma-libations, fill you as the Sun fills the firmament with his rays.

ವಿಶೇಷವಿಷಯಗಳು

**ಶವಿಷ್ಠ**—ಶವಃ ಎಂದರೆ ಬಲವು (ನಿ. ೩-೯) ಶವಿಷ್ಠ ಎಂದರೆ ಅತಿಶಯವಾಗಿ, ಬಹು ಹೆಚ್ಚಾಗಿ ಬಲವುಳ್ಳ

**ಧೃಷ್ಣೋ**–**ಶತ್ರೂಣಾಂ ಧರ್ಷಯಿತಃ** । ಶತ್ರುಗಳ ಗರ್ವವನ್ನು ಅಡಗಿಸುವವನು, ಪರಾಕ್ರಮಶಾಲಿಯು

**ಇಂದ್ರಿಯಂ**— ವೀರ್ಯ, ಬಲ.

**ರಜಃ**— ಈ ಶಬ್ದಕ್ಕೆ (ರಜಸೀ) ದ್ಯಾವಾಪೃಥಿವಿಗಳೆಂದೂ ಅರ್ಥವಾಗಿರುವುದರಿಂದ (ನಿ. ೩--೩೦) ಭೂಮ್ಯಂತರಿಕ್ಷಗಳನ್ನು ಸೂರ್ಯನ ಕಿರಣಗಳು ವ್ಯಾಪಿಸುವಂತೆ ಎಂಬರ್ಥವನ್ನು ಬೇಕಾದರೂ ಹೇಳಬಹುದು.

**ನ**—ನ ಎಂಬ ಶಬ್ದವು ಇಲ್ಲಿ ಇವ ಎಂಬ ಉಪಮಾರ್ಥವನ್ನು ಸೂಚಿಸುವುದು.

ವ್ಯಾಕರಣಪ್ರಕ್ರಿಯಾ

**ಶವಿಷ್ಠ**—ಶವಸ್ವಿನ್ ಶಬ್ದದಮೇಲೆ ಅತಿಶಯಾರ್ಥದಲ್ಲಿ **ಅತಿಶಾಯನೇತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬ ಸೂತ್ರದಿಂದ ಇಷ್ಠನ್ ಪ್ರತ್ಯಯ ಬರುತ್ತದೆ. ಶವಃ ಅಂದರೆ ಬಲ. **ಅಸ್ಮಾಯಾಮೇಧಾ**–ಎಂಬುದರಿಂದ ವಿನಿಪ್ರತ್ಯಯ ಬಂದಾಗ ಶವಸ್ವಿನ್ ಎಂಬ ಶಬ್ದವಾಗಿದೆ. ಶವಸ್ವಿನ್+ಇಷ್ಠ ಎಂದಿರುವಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ವಿನ್‌ಮತುಪ್ ಪ್ರತ್ಯಯಗಳಿಗೆ ಇಷ್ಠನ್ ಈಯಸುನ್ ಪ್ರತ್ಯಯಗಳು ಪರದಲ್ಲಿರುವಾಗ ಲುಕ್ ಬರುತ್ತದೆ ಎಂಬುದರಿಂದ ಶವಸ್ವಿನ್ ಎಂಬಲ್ಲಿರುವ ವಿನ್ನಿಗೆ ಲುಕ್ ಬಂದರೆ ಶವಸ್+ಇಷ್ಠ ಎಂದಿರುತ್ತದೆ. **ಟೇಃ** (ಪಾ. ಸೂ. ೬-೪-೧೫೫) ಭಸಂಜ್ಞೆಯುಳ್ಳ ಅಂಗದ, ಟಿಗೆ ಇಷ್ಠನ್, ಇಮನಿಚ್, ಈಯಸುನ್ ಪರದಲ್ಲಿರುವಾಗ ಲೋಪ ಬರುತ್ತದೆ ಎಂಬುದರಿಂದ ಇಲ್ಲಿ ಇಷ್ಠನ್ ಪರದಲ್ಲಿರುವಾಗ ಶವಸ್ ಎಂಬಲ್ಲಿರುವ ಅಸ್ ಎಂಬ ಟಿಗೆ ಲೋಪ ಬರುತ್ತದೆ. ಶವಿಷ್ಠ ಎಂಬುದು ಪಾದದ ಆದಿಯಲ್ಲಿರುವುದರಿಂದ ಅಪಾದಾದೌ ಎಂದು ನಿಷೇಧಿಸಿರುವುದರಿಂದ ನಿಘಾತಸ್ವರವು ಬರುವುದಿಲ್ಲ.

**ಗಹಿ**—ಗಮ್ಲೃ ಗತೌ ಧಾತು, ಭ್ವಾದಿ. ಲೋಟ್ ಮಧ್ಯಮಪುರುಷೈಕವಚನದ ಸಿಪ್ಪಿಗೆ ಹಿ ಆದೇಶ ಬಂದರೆ ಗಮ್+ಹಿ ಎಂದಿರುತ್ತದೆ. ಭ್ವಾದಿಯಾದುದರಿಂದ ಶಪ್‌ವಿಕರಣವು ಪ್ರಾಪ್ತವಾದರೆ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ ಬರುತ್ತದೆ. ಲುಕ್ಕಾದುದರಿಂದ ಸ್ಥಾನಿವದ್ಭಾವ ಬರುವುದಿಲ್ಲ. ಆದುದರಿಂದ ಶಪ್ ನಿಮಿತ್ತಕವಾಗಿ ಗಮ್ ಧಾತುವಿಗೆ **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಛಾದೇಶವೂ ಬರುವುದಿಲ್ಲ. **ಅನುದಾತ್ತೋಪದೇಶವನತಿತ**– (ಪಾ ಸೂ. ೬-೪-೩೭) ಎಂಬುದರಿಂದ ಹಿ ಆದೇಶಕ್ಕೆ ಅಪಿತ್ವ ಹೇಳಿದುದರಿಂದ ಙಿತ್ತಾದುದರಿಂದ ಅದು ಪರದಲ್ಲಿರುವಾಗ ಗಮಿನ ಅನುನಾಸಿಕವಾದ ಮಕಾರಕ್ಕೆ ಲೋಪ ಬರುತ್ತದೆ. ಗ+ಹಿ ಎಂದಿರುವಾಗ **ಅತೋಹೇಃ** (ಪಾ. ಸೂ. ೬-೪-೧೦೫) ಹ್ರಸ್ವಾಕಾರದ ಪರದಲ್ಲಿರುವಾಗ ಹಿಗೆ ಲುಕ್ ಪ್ರಾಪ್ತವಾಗುತ್ತದೆ. **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೨) ಸಮಾನಾಶ್ರಯಿತವಾದ ಭಸಂಜ್ಞಾಧಿಕಾರದಲ್ಲಿ ಒಳಪಟ್ಟ ಕಾರ್ಯವನ್ನು ಮಾಡುವಾಗ ಹಿಂದೆಮಾಡಿದ ಭಸಂಜ್ಞಾಧಿಕಾರದಲ್ಲಿರುವ ಸೂತ್ರದ ಕಾರ್ಯವು ಅಸಿದ್ಧವಾಗುತ್ತದೆ. ಪಾಣಿನಿಗಳ ೬ ನೇ ಅಧ್ಯಾಯದ ನಾಲ್ಕನೇ ಪಾದದಲ್ಲಿ ಭಸಂಜ್ಞೆಯ ಕಾರ್ಯಗಳು ವಿಹಿತವಾಗುತ್ತವೆ. ಇಲ್ಲಿ ಅನುನಾಸಿಕ ಲೋಪವು ಭಾಧಿಕಾರದಲ್ಲಿ ವಿಹಿತವಾಗಿರುವುದು. ಹಿಲೋಪವೂ ಭಾಧಿಕಾರದಲ್ಲಿ

ವಿಹಿತವಾಗಿರುವುದರಿಂದ ಹಿಲೋಪಮಾಡುವಾಗ ಅನುನಾಸಿಕಲೋಪವು ಅಸಿದ್ಧವಾಗುತ್ತದೆ. ಆದುದರಿಂದ ಮಕಾರ ವಿದ್ದಂತೆಯಾಗುವುದರಿಂದ ಅಕಾರದ ಪರದಲ್ಲಿ ಬಾರದಿದ್ದುದರಿಂದ ಹಿ ಎಂಬುದಕ್ಕೆ ಲೋಪ ಬರುವುದಿಲ್ಲ. ॥ ೧ ॥



ಸಂಹಿತಾಪಾಠಃ

ಇಂದ್ರಮಿದ್ಧರೀ ವಹತೋಽಪ್ರತಿಧೃಷ್ಟಶವಸಂ।
ಋಷೀಣಾಂ ಚ ಸ್ತುತೀರುಪ ಯಜ್ಞಂ ಚ ಮಾನುಷಾಣಾಂ ॥ ೨ ॥

॥ ಪದಪಾಠಃ ॥

ಇಂದ್ರಂ । ಇತ್ । ಹರೀ ಇತಿ । ವಹತಃ । ಅಪ್ರತಿಧೃಷ್ಟಽಶವಸಂ ।
ಋಷೀಣಾಂ । ಚ । ಸ್ತುತೀಃ । ಉಪ । ಯಜ್ಞಂ । ಚ । ಮಾನುಷಾಣಾಂ ॥೨॥

॥ ಸಾಯಣಭಾಷ್ಯಂ ॥

ಅಪ್ರತಿಧೃಷ್ಟಶವಸಂ ಕೇನಾಪ್ಯಪ್ರತಿಧರ್ಷಿತಬಲಂ । ಅಹಿಂಸಿತಬಲಮಿತ್ಯರ್ಥಃ । ಇಂದ್ರಮಿದಿಂದ್ರಮೇವ ಋಷೀಣಾಂ ವಸಿಷ್ಠಾದೀನಾಂ ಮಾನುಷಾಣಾಮನ್ಯೇಷಾಂ ಮನುಷ್ಯಾಣಾಂ ಚ ಸ್ತುತೀರ್ಯಜ್ಞಂ ಚ ಹರೀ ಅಶ್ವಾವುಪ ವಹತಃ । ಸಮೀಪಂ ಪ್ರಾಪಯತಃ । ಯತ್ರ ಯತ್ರ ಸ್ತುವಂತಿ ಯತ್ರ ಯತ್ರ ಯಜಂತೇ ತತ್ರ ಸರ್ವತ್ರೇಂದ್ರಮಶ್ವೌ ಪ್ರಾಪಯತ ಇತ್ಯರ್ಥಃ ॥ ಮಾನುಷಾಣಾಂ । ಮನೋರ್ಜಾತಾವಿತಿ ಮನುಶಬ್ದಾದಞ್ ಷುಗಾಗಮಶ್ಚ ॥ ೨ ॥

॥ ಪ್ರತಿಪದಾರ್ಥ ॥

**ಅಪ್ರತಿಧೃಷ್ಟಶವಸಂ**— (ಯಾರಿಂದಲೂ) ತಡೆಯಲು ಸಾಧ್ಯವಿಲ್ಲದೇ ಇರುವ ಪರಾಕ್ರಮವುಳ್ಳ । **ಇಂದ್ರಮಿತ್**—ಇಂದ್ರನನ್ನೇ । **ಋಷೀಣಾಂ**— (ವಸಿಷ್ಠಾದಿ) ಋಷಿಗಳ । **ಚ**—ಮತ್ತು । **ಮಾನುಷಾಣಾಂ**— (ಇತರ) ಮಾನವರ । **ಸ್ತುತೀಃ**— ಸ್ತೋತ್ರಗಳಿಗೂ । **ಯಜ್ಞಂ ಚ**— ಯಜ್ಞಕ್ಕೂ ಕೂಡ । **ಹರೀ**—(ಅವನ) ಕುದುರೆಗಳು । **ಉಪ ವಹತಃ**—(ಅವನನ್ನು) ಹೊತ್ತುಕೊಂಡು ಬರುತ್ತವೆ.

ಭಾವಾರ್ಥ

ಎಲ್ಲೆಲ್ಲಿ ವಸಿಷ್ಠಾದಿ ಋಷಿಗಳೂ ಮತ್ತು ಇತರ ಮಾನವರೂ ಸ್ತೋತ್ರಮಾಡುತ್ತಾರೋ ಮತ್ತು ಎಲ್ಲೆಲ್ಲಿ ಯಜ್ಞ ಮಾಡುತ್ತಾರೋ ಅಲ್ಲಿಗೆಲ್ಲಾ ಇಂದ್ರನ ಕುದುರೆಗಳು ಅಪ್ರತಿಹತವಾದ ಪರಾಕ್ರಮವುಳ್ಳ ಇಂದ್ರನನ್ನು ಹೊತ್ತು ಕೊಂಡು ಬರುತ್ತವೆ.

English Translation

May his horses bear Indra of unresistable prowess to the praises and sacrifices of Rishis and men.

॥ ವಿಶೇಷವಿಷಯಗಳು ॥

**ಅಪ್ರತಿಧೃಷ್ಟಶವಸಂ — ಅಪ್ರತಿಹತಸಾಮರ್ಥ್ಯೋಪೇತಂ । ಕೇನಾಪ್ಯಹಿಂಸಿತಬಲಂ ।** ಯಾರಿಂದಲೂ ಸಹಿಸಲಸಾಧ್ಯವಾದ ಸಾಮರ್ಥ್ಯವುಳ್ಳ, ಅಪ್ರತಿಹತವಾದ ಶಕ್ತಿಯುಳ್ಳ ಇಂದ್ರನನ್ನು

ವ್ಯಾಕರಣಪ್ರಕ್ರಿಯಾ

**ಮಾನುಷಾಣಾಮ್—ಮನೋರ್ಜಾತಾವಞ್ಯತೌ ಷುಕ್ ಚ** (ಪಾ. ಸೂ. ೪-೧-೧೬೧) ಮನು ಶಬ್ದದ ಮೇಲೆ ಅಞ್, ಯತ್, ಎಂಬ ಎರಡು ಪ್ರತ್ಯಯಗಳು ಬರುತ್ತವೆ. ಅವುಗಳು ಪರದಲ್ಲಿರುವಾಗ ಪ್ರಕೃತಿಗೆ ಷುಕಾಗಮವೂ ಬರುತ್ತದೆ. ಪ್ರಕೃತಿಪ್ರತ್ಯಯ ಸಮುದಾಯದಿಂದ ಜಾತಿರೂಪಅರ್ಥವು ತೋರುತ್ತಿರಬೇಕು. ಆ ಮೇಲಿನ ಕಾರ್ಯಗಳು ಬರುತ್ತವೆ. ಇಲ್ಲಿ ಅಞ್‌ಪ್ರತ್ಯಯ ಬಂದಿದೆ. ಮನು+ಅ ಎಂದಿರುವಾಗ ಷುಕ್ ಕಿತ್ತಾದುದರಿಂದ ಮನು ಎಂಬುದಕ್ಕೆ ಅಂತಾದೇಶವಾಗಿ ಬರುತ್ತದೆ. ಅಞಿನಲ್ಲಿ ಞಕಾರ ಇತ್ತಾದುದರಿಂದ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಪ್ರಕೃತಿಯ ಆದಿಗೆ ವೃದ್ಧಿ ಬರುತ್ತದೆ. ಮಾನುಷವೆಂದಾದ ಮೇಲೆ ಷಷ್ಠೀಬಹುವಚನ ಆಮ್ ಪರದಲ್ಲಿರುವಾಗ **ಹ್ರಸ್ವನದ್ಯಾಪೋನುಟ್** ಎಂಬುದರಿಂದ ಆಮಿಗೆ ನುಡಾಗಮವು ಬರುತ್ತದೆ. **ನಾಮಿ** (ಪಾ. ಸೂ. ೬-೪-೩) ನಾಮ್ ಪರದಲ್ಲಿರುವಾಗ ಅಜಂತಾಂಗಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಬರುತ್ತದೆ. **ರಷಾಭ್ಯಾಂ** (ಪಾ. ಸೂ. ೮-೪-೧) ರೇಫಷಕಾರಗಳ ಪರದಲ್ಲಿರುವ ನಕಾರಕ್ಕೆ ಣತ್ವವು ಬರುತ್ತದೆ ಎಂಬುದರಿಂದ ಇಲ್ಲಿ ಷಕಾರದ ಪರದಲ್ಲಿ ಬಂದುದರಿಂದ ಣತ್ವಬಂದಿದೆ. ॥೨॥

॥ ಸಂಹಿತಾಪಾಠಃ ॥

ಆ ತಿಷ್ಠ ವೃತ್ರಹನ್ರಥಂ ಯುಕ್ತಾ ತೇ ಬ್ರಹ್ಮಣಾ ಹರೀ।
ಅರ್ವಾಚೀನಂ ಸು ತೇ ಮನೋ ಗ್ರಾವಾ ಕೃಣೋತು ವಗ್ನುನಾ॥

॥ ಪದಪಾಠಃ ॥

ಆ । ತಿಷ್ಠ । ವೃತ್ರಽಹನ್ । ರಥಂ । ಯುಕ್ತಾ । ತೇ । ಬ್ರಹ್ಮಣಾ । ಹರೀ ಇತಿ ।
ಅರ್ವಾಚೀನಂ । ಸು । ತೇ । ಮನಃ । ಗ್ರಾವಾ । ಕೃಣೋತು । ವಗ್ನುನಾ॥ ೩ ॥

ಸಾಯಣಭಾಷ್ಯಂ

**ಹೇ ವೃತ್ರಹನ್ ಶತ್ರೂಣಾಂ ಹಂತರಿಂದ್ರ ರಥಮಾ ತಿಷ್ಠ। ಆರೋಹ। ಯಸ್ಮಾತ್ತೇ ಹರೀ ತ್ವದೀಯಾವಶ್ವೌ ಬ್ರಹ್ಮಣಾ ಸ್ತೋತ್ರಲಕ್ಷಣೇನ ಮಂತ್ರೇಣ ಯುಕ್ತಾ ರಥೇಽಸ್ಮಾಭಿರ್ಯೋಜಿತೌ ತಸ್ಮಾತ್ತ್ವಂ ರಥಮಾತಿಷ್ಠ । ತೇ ಮನಸ್ತ್ವದೀಯಂ ಮನಶ್ಚ ಗ್ರಾವಾಭಿಷವಾರ್ಥಂ ಪ್ರವೃತ್ತಃ ಪಾಷಾಣೋ ವಗ್ನುನಾ ವಚನೀಯೇನಾಭಿಷವಶಬ್ದೇನಾರ್ವಾಚೀನಮಸ್ಮದಭಿಮುಖಂ ಸು ಕೃಣೋತು। ಸುಷ್ಠು ಕರೋತು॥ ಯುಕ್ತಾ। ಸುಪಾಂ ಸುಲುಗಿತ್ಯಾಕಾರಃ। ವಗ್ನುನಾ। ವಚೇರ್ಗಶ್ಚ । ಉ. ೩-೩೩ । ಇತಿ ನುಪ್ರತ್ಯಯೋ ಗಕಾರಶ್ಚಾಂತಾದೇಶಃ ॥ ೩ ॥**

ಪ್ರತಿಪದಾರ್ಥ

**ವೃತ್ರಹನ್**—ವೃತ್ರನಾಶಕನಾದ ಇಂದ್ರನೇ, । **ರಥಂ**—(ನಿನ್ನ) ರಥವನ್ನು । **ಆ ತಿಷ್ಠ**—ಹತ್ತಿಕೊ । **ತೇ**— ನಿನ್ನ । **ಹರೀ**— ಕುದುರೆಗಳು । **ಬ್ರಹ್ಮಣಾ**— ಸ್ತೋತ್ರರೂಪವಾದ ಮಂತ್ರದೊಡನೆ । **ಯುಕ್ತಾ**—(ರಥದಲ್ಲಿ ನಮ್ಮಿಂದ) ಕಟ್ಟಲ್ಪಟ್ಟವೆ. । **ತೇ**— ನಿನ್ನ । **ಮನಃ**—ಮನಸ್ಸನ್ನು । **ಗ್ರಾವಾ**—(ಸೋಮರಸವನ್ನು ಹಿಂಡತಕ್ಕ) ಕಲ್ಲು । **ವಗ್ನುನಾ**— ಇಂಪಾದ ಹಿಂಡುವ ಶಬ್ದದಿಂದ । **ಅರ್ವಾಚೀನಂ**— (ನಮ್ಮ)ಅಭಿಮುಖವಾಗಿ । **ಸುಕೃಣೋತು**—ಚೆನ್ನಾಗಿ (ತಿರುಗುವಂತೆ) ಮಾಡಲಿ. ।

॥ ಭಾವಾರ್ಥ ॥

ವೃತ್ರಹಂತಕನಾದ ಇಂದ್ರನೇ, ನಿನ್ನ ಕುದುರೆಗಳನ್ನು ನಿನ್ನ ರಥಕ್ಕೆ ಮಂತ್ರಪೂರ್ವಕವಾಗಿ ಕಟ್ಟಿದ್ದೇವೆ. ಆ ರಥವನ್ನು ಹತ್ತಿಕೊ. ಸೋಮರಸವನ್ನು ಹಿಂಡುವ ಕಲ್ಲು ಅದರ ರಸವನ್ನು ಹಿಂಡುವ ಇಂಪಾದ ಶಬ್ದದಿಂದ ನಿನ್ನ ಮನಸ್ಸು ನಮ್ಮ ಕಡೆ ಸಂಪೂರ್ಣವಾಗಿ ತಿರುಗುವಂತೆ ಮಾಡಲಿ.

English Translation

O Slayer of Vritra, ascend your chariot, for your horses have been harnessed by our prayer. May the Soma-pressing stone by its sound attract your mind towards us.

॥ ವಿಶೇಷವಿಷಯಗಳು ॥

**ಯುಕ್ತಾ ತೇ ಬ್ರಹ್ಮಣಾ ಹರೀ**— ನಾವು ಮಾಡುವ ಸ್ತೋತ್ರಗಳಿಂದ ನಿನ್ನ ಕುದುರೆಗಳು ರಥಕ್ಕೆ ಹೂಡಲ್ಪಟ್ಟಿರುವವು, ಎಂದರೆ ೮೨ ನೆಯ ಸೂಕ್ತದಲ್ಲಿ ೧, ೨, ೩, ೪ ನೇ ಋಕ್ಕುಗಳಲ್ಲಿ ನಾವು—**ಯೋಜಾನ್ವಿಂದ್ರತೇ ಹರೀ**—ನಿನ್ನ ಕುದುರೆಗಳನ್ನು ರಥಕ್ಕೆ ಹೂಡು ಎಂದು ಪ್ರಾರ್ಥಿಸಿರುವುದನ್ನು ಕೇಳಿ, ನೀನು ನಮ್ಮ ಯಜ್ಞಕ್ಕೆ ಬರುವುದಕ್ಕಾಗಿ ಕುದುರೆಗಳನ್ನು ರಥಕ್ಕೆ ಹೂಡಿರುವುದರಿಂದ ನಮ್ಮ ಸ್ತೋತ್ರದಿಂದ ಕುದುರೆಗಳು ರಥಕ್ಕೆ ಹೂಡಲ್ಪಟ್ಟಿರುವವು ಎಂದು ಇಲ್ಲಿ ಹೇಳಿರುವುದು.

**ಅರ್ವಾಚೀನಂ**— ಅಭಿಮುಖವಾಗಿ

**ಗ್ರಾವಾ ಕೃಣೋತು ವಗ್ನುನಾ**— ಯಜ್ಞದಲ್ಲಿ ನಿನಗಾಗಿ ಸೋಮರಸವನ್ನು ಸಿದ್ಧಪಡಿಸುವುದಕ್ಕಾಗಿ ಕಲ್ಲುಗಳಿಂದ ಸೋಮಲತೆಯನ್ನು ಜಜ್ಜುತ್ತಿರುವೆವು. ಆ ಶಬ್ದವು ನಿನಗೆ ಕೇಳಿ ನಿನ್ನ ಮನಸ್ಸನ್ನು ನಮ್ಮ ಕಡೆಗೆ ತಿರುಗಿಸಲೆಂದು ಋಷಿಯು ಪ್ರಾರ್ಥಿಸಿರುವನು.

ವ್ಯಾಕರಣಪ್ರಕ್ರಿಯಾ

**ಯುಕ್ತಾ**—ಯುಜಿರ್ ಯೋಗೇ. ಧಾತು. ಇದರ ಮೇಲೆ ಕರ್ಮಾರ್ಥದಲ್ಲಿ ಕ್ತಪ್ರತ್ಯಯ ಬಂದಿದೆ. ಯುಜ್+ತ ಎಂದಿರುವಾಗ **ಚೋಃಕುಃ** ಎಂಬುದರಿಂದ ಕುತ್ವವೂ **ಖರಿಚ** ಎಂಬುದರಿಂದ ಚರ್ತ್ವವೂ ಬಂದಿದೆ. ಕೃದಂತವಾದುದರಿಂದ ಪ್ರಾತಿಪದಿಕಸಂಜ್ಞೆಯು ಪ್ರಥಮಾದ್ವಿವಚನ ವಿವಕ್ಷೆಮಾಡಿದಾಗ ಸುಪಾಂ ಸುಲುಕ್ (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ಬಂದಿದೆ.

**ವಗ್ನುನಾ**—ವಚ ಪರಿಭಾಷಣೇ ಧಾತು. **ವಚೇರ್ಗಶ್ಚ** (ಉ. ಸೂ. ೩-೩೧೩) ವಚ ಧಾತುವಿಗೆ ನು ಪ್ರತ್ಯಯವು ಬರುತ್ತದೆ. ಚಕಾರಕ್ಕೆ ಗಕಾರವು ಅಂತಾದೇಶವಾಗಿ ಬರುತ್ತದೆ. ತೃತೀಯೈಕವಚನ ಪರದಲ್ಲಿರುವಾಗ **ಆಙೋನಾಸ್ತ್ರಿಯಾಂ** (ಪಾ. ಸೂ. ೭-೩-೧೨೦) ಎಂಬುದರಿಂದ ನಾ ಎಂಬ ಆದೇಶವು ಬರುತ್ತದೆ. ॥ ೩ ॥



ಸಂಹಿತಾಪಾಠಃ

ಇಮಮಿಂದ್ರ ಸುತಂ ಪಿಬ ಜ್ಯೇಷ್ಠಮಮರ್ತ್ಯಂ ಮದಂ।
ಶುಕ್ರಸ್ಯ ತ್ವಾಭ್ಯಕ್ಷರನ್ಧಾರಾ ಋತಸ್ಯ ಸಾದನೇ ॥೪॥

॥ ಪದಪಾಠಃ ॥

ಇಮಂ । ಇಂದ್ರ । ಸುತಂ । ಪಿಬ । ಜ್ಯೇಷ್ಠಂ । ಅಮರ್ತ್ಯಂ । ಮದಂ ।
ಶುಕ್ರಸ್ಯ । ತ್ವಾ । ಅಭಿ । ಅಕ್ಷರನ್ । ಧಾರಾಃ । ಋತಸ್ಯ । ಸದನೇ ॥೪॥

ಸಾಯಣಭಾಷ್ಯಂ

ಹೇ ಇಂದ್ರ ಸುತಮಭಿಷುತಮಿಮಂ ಸೋಮಂ ಪಿಬ । ಕೀದೃಶಂ। ಜ್ಯೇಷ್ಠಮತಿಶಯೇನ ಪ್ರಶಸ್ಯಂ ಮದಂ ಮದಕರಂ ಅಮರ್ತ್ಯಮಮಾರಕಂ । ಸೋಮಪಾನಜನ್ಯೋ ಮದೋ ಮದಾಂತರವನ್ಮಾರಕೋ ನ ಭವತೀತ್ಯರ್ಥಃ। ತಥಾ ಋತಸ್ಯ ಯಜ್ಞಸ್ಯ ಸಂಬಂಧಿನಿ ಸದನೇ ಗೃಹೇ ವರ್ತಮಾನಾಃ ಶುಕ್ರಸ್ಯ ದೀಪ್ತಸ್ಯಾಸ್ಯ ಸೋಮಸ್ಯ ಧಾರಾಸ್ತ್ವಾಮಭ್ಯಕ್ಷರನ್ । ಆಭಿಮುಖ್ಯೇನ ಸಂಚಲಂತಿ । ತ್ವಾಂ ಪ್ರಾಪ್ನುವಂತಿ । ಸ್ವಯಮೇವಾಗಚ್ಛಂತೀತ್ಯರ್ಥಃ॥ ಜ್ಯೇಷ್ಠಂ। ಪ್ರಶಸ್ಯಶಬ್ದಾದಿಷ್ಠನಿ ಜ್ಯ ಚ । ಪಾ. ೫-೩-೬೧ । ಇತಿ ಜ್ಯಾದೇಶಃ । ಅಕ್ಷರನ್ । ಕ್ಷರ ಸಂಚಲನೇ । ಛಾಂದಸೋ ಲಙ್ ॥೪॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ, । **ಸುತಂ**—ಹಿಂಡಿರುವುದೂ । **ಜ್ಯೇಷ್ಠಂ**—ಶ್ರೇಷ್ಠವಾದುದೂ । **ಮದಂ**—ಮದ (ಹರ್ಷ)ವನ್ನುಂಟುಮಾಡತಕ್ಕದ್ದೂ । **ಅಮರ್ತ್ಯಂ**—(ಇತರ ಮಾದಕಪದಾರ್ಥದಂತಲ್ಲದೇ)ಮಾದಕವಲ್ಲದ್ದೂ ಆದ । **ಇಮಂ**— ಈ ಸೋಮರಸವನ್ನು । **ಪಿಬ**— ಕುಡಿ. । **ಋತಸ್ಯ**—ಯಜ್ಞಸಂಬಂಧಿಯಾದ । **ಸದನೇ** ಗೃಹದಲ್ಲಿ (ಇರತಕ್ಕ) । **ಶುಕ್ರಸ್ಯ**—ಪ್ರಕಾಶಮಾನವಾದ ಸೋಮರಸದ । **ಧಾರಾಃ**—ಪ್ರವಾಹಗಳು । **ಅಭ್ಯಕ್ಷರನ್**— (ನಿನ್ನ) ಅಭಿಮುಖವಾಗಿ ಪ್ರವಹಿಸುತ್ತಿವೆ. ।

॥ ಭಾವಾರ್ಥ

ಎಲೈ ಇಂದ್ರನೇ, ಶ್ರೇಷ್ಠವಾದುದೂ, ಹರ್ಷವನ್ನುಂಟುಮಾಡತಕ್ಕದ್ದೂ ಆದರೆ ಇತರ ಮಾದಕಪದಾರ್ಥಗಳಂತಲ್ಲದೆ ಅಮಾರಕವಾದದ್ದೂ ಆದ ಸೋಮರಸವು ಹಿಂಡಿ ಸಿದ್ಧವಾಗಿದೆ. ಪ್ರಕಾಶಮಾನವಾದ ಈ ಸೋಮರಸದ ಪ್ರವಾಹಗಳು ನಿನ್ನಭಿಮುಖವಾಗಿ ಯಜ್ಞಗೃಹದಲ್ಲಿ ಪ್ರವಹಿಸುತ್ತಿವೆ. ಅವನ್ನು ಕುಡಿ.

English Translation

Indra, drink this excellent, immortal and exhilarating Soma-juice. In this house of sacrifice the streams of brilliant Soma are flowing towards you.

॥ ವಿಶೇಷವಿಷಯಗಳು ॥

**ಜ್ಯೇಷ್ಠಂ**— ಶ್ರೇಷ್ಠವಾದ, ಅತ್ಯುತ್ತಮವಾದ, excellent.

**ಅಮರ್ತ್ಯಂ**— ಮರಣರಹಿತವಾದ, ಯಾವವಿಧವಾದ ಬಾಧೆಯನ್ನೂ ಮಾಡದಿರುವ, immortal.

**ಮದಂ—ಮದಕರಂ ।** ಸಂತೋಷವನ್ನುಂಟುಮಾಡುವ, ಹರ್ಷಪ್ರದವಾದ ಬುದ್ಧಿಯನ್ನು ವಿಕಾಸಗೊಳಿಸುವ, exhilarating.

**ಶುಕ್ರಸ್ಯ**— ಶುಕ್ರವೆಂದರೆ ಉದಕವೆಂದೂ ಅರ್ಥವು. (ನಿ. ೨-೨೪) ಶುಕ್ರಶಬ್ದಕ್ಕೆ-ಶುಕ್ರಂ ಶೋಚತೇ-ರ್ಜ್ವಲತಿಕರ್ಮಣಃ ಎಂದು ಯಾಸ್ಕರ ನಿರ್ವಚನವಿರುವುದು. (ನಿ. ೮-೧೧)ಈ ಋಕ್ಕಿನಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿರುವ ನೀರು ಎಂದರೆ ಸೋಮರಸವು ಎಂದರ್ಥವು.

**ತ್ವಾಂ ಅಭ್ಯಕ್ಷರನ್— ಕ್ಷರ ಸಂಚಲನೇ ।** ನಿನ್ನ ಸಮೀಪಕ್ಕೆ ಹರಿದುಬರುತ್ತಿರುವುವು. ನಿನಗಾಗಿ ಈ ಸೋಮರಸವನ್ನು ಸಿದ್ಧಪಡಿಸುತ್ತಿರುವುದರಿಂದ ಹರಿದು ಬರುತ್ತಿರುವ ರಸವು ನಿನ್ನನ್ನೇ ಅಪೇಕ್ಷಿಸುವುದೆಂದಭಿಪ್ರಾಯವು.

**ಋತಸ್ಯ—ಯಜ್ಞಸ್ಯ ।** ಋತ ಶಬ್ದಕ್ಕೆ ಸತ್ಯವೆಂಬ ಅರ್ಥವಿದ್ದರೂ ಯಜ್ಞವೆಂಬ ಅರ್ಥವನ್ನು ಹೇಳುವ ರೂಢಿಯಿರುವುದು. ಋತವೆಂದರೆ ಸತ್ಯವಾದ ಕರ್ಮವು. ಎಂದರೆ ಯಜ್ಞವು. ಋತಸ್ಯ ಸಾದನೇ ಎಂದರೆ ಯಜ್ಞಾನುಷ್ಠಾನಮಾಡುವ ಯಜ್ಞಗೃಹದಲ್ಲಿ ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಜ್ಯೇಷ್ಠಮ್**—ಪ್ರಶಸ್ಯ ಶಬ್ದದಮೇಲೆ ಅತಿಶಯ ಎಂಬರ್ಥದಲ್ಲಿ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬ ಸೂತ್ರದಿಂದ ಇಷ್ಠನ್ ಪ್ರತ್ಯಯ ಬರುತ್ತದೆ. **ಪ್ರಶಸ್ಯಸ್ಯ ಶ್ರಃ** (ಪಾ. ಸೂ. ೫-೩-೬೦) ಅಜಾದೀ ಗುಣವಚನಾದೇವ ಎಂಬುದರಿಂದ ಅಜಾದಿಯೆಂಬುದು ಅನುವೃತ್ತವಾಗುತ್ತದೆ. ಅಜಾದಿಪ್ರತ್ಯಯ ಪರದಲ್ಲಿರುವಾಗ ಪ್ರಶಸ್ಯ ಶಬ್ದಕ್ಕೆ ಶ್ರ ಎಂಬ ಆದೇಶವು ಬರುತ್ತದೆ. **ಜ್ಯ ಚ** (ಪಾ. ಸೂ. ೫-೩-೬೧) ಇಷ್ಠನ್ ಈಯಸುನ್ ಪರದಲ್ಲಿರುವಾಗ ಪ್ರಶಸ್ಯ ಶಬ್ದಕ್ಕೆ ಜ್ಯ ಎಂಬ ಆದೇಶವು ಬರುತ್ತದೆ. ಜ್ಯ+ಇಷ್ಠ ಎಂದಿರುವಾಗ **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ ಪ್ರಾಪ್ತವಾದರೆ **ಪ್ರಕೃತ್ಯೈಕಾಚ್** (ಪಾ. ಸೂ. ೬-೪-೧೬೩) ಇಷ್ಠಾದಿಗಳು ಪರದಲ್ಲಿರುವಾಗ ಏಕಾಚಾದ ಶಬ್ದವು ಪ್ರಕೃತಿಭಾವವನ್ನು ಹೊಂದುತ್ತದೆ ಎಂಬುದರಿಂದ ಯಾವ ವಿಕಾರಗಳೂ ಬರುವುದಿಲ್ಲ. ಈ ಪ್ರಕೃತಿಭಾವವು ತದ್ಧಿತಪ್ರಕರಣದಲ್ಲಿರುವ ಎಲ್ಲಾ ಲೋಪಗಳಿಗೂ ಬಾಧಕವಾಗಿ ವಿಹಿತವಾಗಿದೆ ಎಂದು ಭಾಷ್ಯದಲ್ಲಿ ವಿವೃತವಾಗಿದೆ. ಗುಣಬಂದರೆ ಜ್ಯೇಷ್ಠ ಎಂದು ಸಿದ್ಧವಾಗುತ್ತದೆ.

**ಸುತಂ**—ಷುಞ್ ಅಭಿಷವೆ ಧಾತು. ಕರ್ಮಾರ್ಥದಲ್ಲಿ ಕ್ತಪ್ರತ್ಯಯ ಬಂದಿದೆ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪಿಬ**—ಪಾ ಪಾನೆ. ಧಾತು ಭ್ವಾದಿ. **ಪಾಘ್ರಾಧ್ಮಾ** (ಪಾ. ಸೂ. ೭-೩-೭೮) ಎಂಬುದರಿಂದ ಶಪ್ ಪರದಲ್ಲಿರುವಾಗ ಪಿಬ ಎಂಬ ಆದೇಶವು ಬಂದಿದೆ. ಪಿಬ ಎಂಬುದು ಅದಂತವಾದ ಆದೇಶ. ಆದುದರಿಂದ ಶಪ್ ಪರದಲ್ಲಿರುವಾಗ ಲಘೂಪಧಗುಣ ಬರಲಿ ಎಂಬ ಶಂಕೆಗೆ ಅವಕಾಶವಿಲ್ಲ. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪವು ಏಕಾದೇಶವಾಗಿ ಬರುತ್ತದೆ. ಅಕಾರದ ಪರದಲ್ಲಿರುವುದರಿಂದ ಮಧ್ಯಮಪುರುಷದ ಸಿಪ್ ಸ್ಥಾನಿಕ ಹಿಗೆ ಲೋಪ ಬರುತ್ತದೆ. ಅತಿಙಂತದ (ಸುತಂ) ಪರದಲ್ಲಿರುವುದರಿಂದ ನಿಘಾತ ಬಂದಿದೆ.

**ಅಕ್ಷರನ್**—ಕ್ಷರ ಸಂಚಲನೆ ಧಾತು. ಭ್ವಾದಿ. **ಛಂದಸಿ ಲುಙ್ ಲಙ್ ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್ ಬಂದಿದೆ. ಬಹುವಚನದ ಝಿ ಪ್ರತ್ಯಯಕ್ಕೆ ಅಂತಾದೇಶ ಬರುತ್ತದೆ. **ಇತಶ್ಚ** ಎಂಬುದರಿಂದ ಇಕಾರಲೋಪವಾದರೆ ಸಂಯೋಗಾಂತಲೋಪದಿಂದ ತಕಾರಲೋಪವಾಗುತ್ತದೆ. ಧಾತುವಿಗೆ ಅಡಾಗಮ ಬರುತ್ತದೆ. ಶಬಕಾರಕ್ಕೂ ಪ್ರತ್ಯಯಾಕಾರಕ್ಕೂ ಅತೋಗುಣೆ ಎಂಬ ಹಿಂದೆ ಹೇಳಿದ ಸೂತ್ರದಿಂದ ಪರರೂಪಬಂದರೆ ಉಕ್ತರೂಪಸಿದ್ಧಿಯಾಗುತ್ತದೆ. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತವಾಗುತ್ತದೆ.

**ತ್ವಾ—ತ್ವಾಮ್ । ದ್ವಿತೀಯಾಯಾ** (ಪಾ. ಸೂ. ೮-೧-೨೩) ದ್ವಿತೀಯಾಂತವಾದ ಯುಷ್ಮದಸ್ಮದ್ ಶಬ್ದ ಗಳಿಗೆ ತ್ವಾ ಮಾ ಎಂಬ ಆದೇಶಗಳು ಬರುತ್ತವೆ ಎಂಬುದರಿಂದ ಇಲ್ಲಿ ದ್ವಿತೀಯಾಂತ ಯುಷ್ಮಚ್ಛಬ್ದಕ್ಕೆ ತ್ವಾ ಎಂಬ ಆದೇಶಬಂದಿದೆ. ॥ ೪ ॥

---

॥ ಸಂಹಿತಾಪಾಠಃ ॥

ಇಂದ್ರಾಯ ನೂನಮರ್ಚತೋಕ್ಥಾನಿ ಚ ಬ್ರವೀತನ ।
ಸುತಾ ಅಮತ್ಸುರಿಂದವೋ ಜ್ಯೇಷ್ಠಂ ನಮಸ್ಯತಾ ಸಹಃ ॥ ೫ ॥

ಪದಪಾಠಃ

ಇಂದ್ರಾಯ । ನೂನಂ । ಅರ್ಚತ । ಉಕ್ಥಾನಿ । ಚ । ಬ್ರವೀತನ ।
ಸುತಾಃ । ಅಮತ್ಸುಃ । ಇಂದವಃ । ಜ್ಯೇಷ್ಠಂ । ನಮಸ್ಯತ । ಸಹಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜ ಇಂದ್ರಾಯ ನೂನಂ ಕ್ಷಿಪ್ರಮರ್ಚತ । ಪೂಜನಂ ಕುರುತ । ಏತದೇವ ಸ್ಪಷ್ಟೀಕ್ರಿಯತೇ । ಉಕ್ಥಾನ್ಯಪ್ರಗೀತಮಂತ್ರಸಾಧ್ಯಾನಿ ಸ್ತೋತ್ರಾಣಿ ಚ ಬ್ರವೀತನ। ಬ್ರೂತ। ಸುತಾ ಅಭಿಷುತಾ ಇಂದವಃ ಸೋಮಾಶ್ಚಾಮತ್ಸುಃ। ಆಗತಮೇನಮಿಂದ್ರಂ ಮತ್ತಂ ಕುರ್ವಂತು। ಅನಂತರಂ ಜ್ಯೇಷ್ಠಂ ಪ್ರಶಸ್ಯತಮಂ ಸಹಃ ಸಹಸ್ವಿನಂ ಬಲವಂತಂ ತಮಿಂದ್ರಂ ನಮಸ್ಯತ। ನಮಸ್ಕುರುತ॥ ಬ್ರವೀತನ। ಬ್ರವೀತೇರ್ಲೋಟಿ ತಪ್ತನಪ್ತನಥನಾಶ್ಚೇತಿ ತನಬಾದೇಶಃ। ಅಮತ್ಸುಃ। ಮದೀ ಹರ್ಷೇ ಛಾಂದಸಃ ಪ್ರಾರ್ಥನಾಯಾಂ ಲುಙ್। ಆಗಮಾನುಶಾಸನಸ್ಯಾನಿತ್ಯತ್ವಾದಿಡಭಾವಃ। ನಮಸ್ಯತ। ನಮೋವರಿವಶ್ಚಿತ್ರಙ ಇತಿ ಕ್ಯಚ್। ಸಹಃ ಲುಗಕಾರೇಕಾರರೇಫಾಶ್ಚ ವಕ್ತವ್ಯಾಃ। ಪಾ. ೪-೪-೧೨೮-೨। ಇತಿ ಮತ್ವರ್ಥೀಯಸ್ಯ ಲುಕ್ ॥ ೫ ॥

ಪ್ರತಿಪದಾರ್ಥ

ಇಂದ್ರಾಯ— ( ಎಲೈ ಋತ್ವಿಕ್ಕುಗಳೇ ) ಇಂದ್ರನಿಗೆ। **ನೂನಂ**—ಜಾಗ್ರತೆಯಾಗಿ। **ಅರ್ಚತ**—ಪೂಜೆಯನ್ನು ಅರ್ಪಿಸಿರಿ। **ಉಕ್ಥಾನಿ ಚ**—ಮಂತ್ರರೂಪವಾದ ಸ್ತೋತ್ರಗಳನ್ನೂ ಕೂಡ। **ಬ್ರವೀತನ**—ಪಠಿಸಿರಿ। **ಸುತಾಃ**—ಹಿಂಡಿದ। **ಇಂದವಃ**—ಸೋಮರಸಗಳು। **ಅಮತ್ಸುಃ**—(ಇಂದ್ರನನ್ನು) ಮತ್ತೂ ಹರ್ಷಯುಕ್ತನನ್ನಾಗಿ ಮಾಡಲಿ। **ಜ್ಯೇಷ್ಠಂ**—ಅತ್ಯಂತ ಶ್ರೇಷ್ಠನೂ। **ಸಹ**—ಬಲಶಾಲಿಯೂ ಆದ ಇಂದ್ರನನ್ನು। **ನಮಸ್ಯತ**—ವಂದಿಸಿರಿ॥

ಭಾವಾರ್ಥ

ಎಲೈ ಋತ್ವಿಕ್ಕುಗಳೇ, ಇಂದ್ರನಿಗೆ ಜಾಗ್ರತೆಯಾಗಿ ಪೂಜೆಯನ್ನರ್ಪಿಸಿರಿ. ಉಕ್ಥರೂಪವಾದ ಶಸ್ತ್ರ ಮಂತ್ರನನ್ನು ಪಠಿಸಿರಿ. ಹಿಂಡಿದ ಸೋಮರಸಗಳು ಇಂದ್ರನನ್ನು ಹರ್ಷಯುಕ್ತನನ್ನಾಗಿ ಮಾಡಲಿ. ಅತ್ಯಂತ ಶ್ರೇಷ್ಠನೂ ಮತ್ತು ಬಲಶಾಲಿಯೂ ಆದ ಇಂದ್ರನನ್ನು ವಂದಿಸಿರಿ.

English Translation

Offer worship quickly to Indra ; recite hymns in his honour ; let the distilled Soma drops exhilerate him ; adore his great strength·

॥ ವಿಶೇಷವಿಷಯಗಳು ॥

**ಸುತಾಃ ಇಂದವಃ**—ಹಿಂಡಿ ಸಿದ್ಧಪಡಿಸಲ್ಪಟ್ಟ ಸೋಮರಸಗಳು.

**ಅಮತ್ಸುಃ—ಮದೀ ಹರ್ಷೇ।** ಹರ್ಷವನ್ನುಂಟುಮಾಡಲಿ.

**ಜ್ಯೇಷ್ಠಂ ಸಹಃ**—ಅತಿಶಯವಾದ ಶಕ್ತಿಸಾಮರ್ಥ್ಯವು excellent or superior strength,

**ನಮಸ್ಯತ**—ವಂದನೆಮಾಡಿ, ಭಕ್ತಿಭಾವದಿಂದ ಗೌರವಿಸಿ.

॥ ವ್ಯಾಕರಣಪ್ರಕ್ರಿಯಾ ॥

**ಬ್ರವೀತನ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಅದಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಥ ಎಂಬ ಪ್ರತ್ಯಯವು ಬರುತ್ತದೆ. **ಲೋಟೋ ಲಙ್ವತ್** (ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ ಬರುತ್ತದೆ. ಲಙಿನಲ್ಲಿ ಥ ಎಂಬುದಕ್ಕೆ **ತಸ್ಥಸ್ಥಮಿಪಾಂ ತಾಂತಂತಾಮಃ** (ಪಾ. ಸೂ. ೩-೪-೧೦೧) ಎಂಬುದರಿಂದ ತ ಎಂಬ ಆದೇಶ ಬರುತ್ತದೆ. ಬ್ರೂ+ತ ಎಂದಿರುವಾಗ, **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ತಸ್ಯತಾತ್ ಎಂಬುದರಿಂದ ತಸ್ಯ ಎಂದು ಅನುವೃತ್ತವಾಗುತ್ತದೆ. ತ ಎಂದರೆ ಲೋಣ್ಮಧ್ಯಮಪುರುಷ ಬಹುವಚನ ಪ್ರತ್ಯಯ. ಇದಕ್ಕೆ ಛಂದಸ್ಸಿನಲ್ಲಿ ತಪ್, ತನಪ್, ತನ ಥನ ಆದೇಶಗಳು ಬರುತ್ತವೆ ಎಂಬುದರಿಂದ ಇಲ್ಲಿ ತನಪಾದೇಶ ಬಂದಿದೆ. ವ್ಯತ್ಯಯದಿಂದ ಪಿತ್ವವು ತನ ಎಂಬುದಕ್ಕೆ ಬರುತ್ತದೆ. **ಬ್ರುವಈಟ್** (ಪಾ. ಸೂ. ೭-೩-೧೩) ಎಂಬುದರಿಂದ ತನ ಎಂಬುದಕ್ಕೆ ಈಡಾಗಮ ಬರುತ್ತದೆ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ ಬಂದು ಅವಾದೇಶ ಬರುತ್ತದೆ.

**ಅಮತ್ಸುಃ**—ಮದೀ ಹರ್ಷೇ. ಧಾತು. ದಿವಾದಿ. **ಛಂದಸಿ ಲುಙ್** (ಪಾ. ಸೂ. ೩-೪-೬) ಎಂಬುದರಿಂದ ಪ್ರಾರ್ಥನಾರೂಪ ಅರ್ಥದಲ್ಲಿ ಲುಙ್ ಬರುತ್ತದೆ. ಮದಭರಿತನನ್ನಾಗಿ ಮಾಡಲಿ ಎಂದರ್ಥವಾಗುತ್ತದೆ. ಬಹುವಚನ ಝಿ ಪರದಲ್ಲಿರುವಾಗ ಚ್ಲಿ ವಿಕರಣ ಬರುತ್ತದೆ. ಅದಕ್ಕೆ ಸಿಚಾದೇಶ ಬರುತ್ತದೆ. **ಸಿಚಭ್ಯಸ್ತ ವಿದಿಭ್ಯಶ್ಚ** (ಪಾ. ಸೂ. ೩-೪-೧೦೯) ಎಂಬುದರಿಂದ ಸಿಚ್‌ಪ್ರತ್ಯಯದ ಪರದಲ್ಲಿರುವ ಲುಙ್ ಸಂಬಂಧಿ ಝಿ ಪ್ರತ್ಯಯಕ್ಕೆ ಜುಸಾದೇಶ ಬರುತ್ತದೆ. ಜುಸಿನಲ್ಲಿ ಉಸ್ ಉಳಿಯುತ್ತದೆ. ಧಾತುವಿಗೆ ಅಡಾಗಮ ಬರುತ್ತದೆ. ಅಮದ್+ಸ್+ಉಸ್ ಎಂದಿರುವಾಗ ಸಿಚಿಗೆ ವಲಾದಿಲಕ್ಷಣ ಇಡಾಗಮ ಪ್ರಾಪ್ತವಾಗುತ್ತದೆ. **ಆಗಮಶಾಸ್ತ್ರಮನಿತ್ಯಮ್** (ಪರಿಭಾಷಾ ೯೫) ಆಗಮವಿಧಾನಮಾಡುವ ಸೂತ್ರವು ಅನಿತ್ಯವೆಂಬುದರಿಂದ ಇಲ್ಲಿ ಇಡಾಗಮವಾದುದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬ ತದ್ವಿಧಾಯಕ ಸೂತ್ರವು ಅನಿತ್ಯವಾದುದರಿಂದ ಇಲ್ಲಿ ಅದನ್ನು ಆಶ್ರಯಿಸಿರುವುದರಿಂದ ಸಿಚಿಗೆ ಇಡಾಗಮ ಬರುವುದಿಲ್ಲ. **ಖರಿಚ** ಎಂಬುದರಿಂದ ಧಾತುವಿನ ದಕಾರಕ್ಕೆ ಚರ್ತ್ವ ಬಂದರೆ ಉಕ್ತರೂಪಸಿದ್ಧಿಯಾಗುತ್ತದೆ.

**ನಮಸ್ಯತ**—ನಾಮಧಾತು. **ನಮೋವರಿವಶ್ಚಿತ್ರಙಃ ಕ್ಯಚ್** (ಪಾ. ಸೂ. ೩-೧-೧೯) ಶಬ್ದವೈರ—ಸೂತ್ರದಿಂದ ಕರಣೆ ಎಂಬುದು ಅನುವೃತ್ತವಾಗುತ್ತದೆ. ಕರಣವೆಂದರೆ ಕ್ರಿಯಾ. ಇಲ್ಲಿ ಕ್ರಿಯಾವಿಶೇಷದಲ್ಲಿ ಅಂದರೆ ಪೂಜಾ, ಪರಿಚರ್ಯಾ, ಆಶ್ಚರ್ಯವೆಂಬ ಮೂರು ಅರ್ಥದಲ್ಲಿ ಕ್ರಮವಾಗಿ ನಮಸ್, ವರಿವಸ್, ಚಿತ್ರಙ್ ಶಬ್ದಗಳ ಮೇಲೆ ಕ್ಯಚ್‌ಪ್ರತ್ಯಯ ಬರುತ್ತದೆ. ಕ್ಯಚ್ ಸನಾದಿಯಲ್ಲಿ ಸೇರಿರುವುದರಿಂದ ಕ್ಯಜಂತವಾದ ನಮಸ್ಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಲೋಟ್ ಮಧ್ಯಮಪುರುಷ ಬಹುವಚನವಿವಕ್ಷೆಮಾಡಿದಾಗ ಹಿಂದಿನಂತೆ ಥ ಎಂಬುದಕ್ಕೆ ತ ಎಂಬಾದೇಶವು ಬಂದರೆ ಉಕ್ತರೂಪಸಿದ್ಧಿಯಾಗಿದೆ.

**ಸಹಃ**—ಬಲಾರ್ಥದಲ್ಲಿ ಸಹಸ್ ಶಬ್ದವಿರುತ್ತದೆ. ಇಲ್ಲಿ ಅದು ಉಳ್ಳವನು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. **ಮತ್ವರ್ಥೇ ಮಾಸತನ್ವೋಃ** (ಪಾ. ಸೂ. ೪-೪-೧೨೮) ಎಂಬ ಸೂತ್ರದಲ್ಲಿ **ಲುಗಕಾರೇಕಾರರೇಫಾಶ್ಚ ವಕ್ತವ್ಯಾಃ** (ವಾ. ೨) ಎಂಬ ವಾರ್ತಿಕವು ಪಠಿತವಾಗಿದೆ. ಮತ್ವರ್ಥದಲ್ಲಿ (ಅದು ಉಳ್ಳವನು) ವಿಹಿತವಾದ ಪ್ರತ್ಯಯಕ್ಕೆ ಲುಕ್ ಬರುತ್ತದೆ ಎಂದು ಅದರರ್ಥ. ಇಲ್ಲಿ ಅಸಂತವಾದುದರಿಂದ ಮತ್ವರ್ಥದಲ್ಲಿ ವಿನಿಪ್ರತ್ಯಯವು ಪ್ರಾಪ್ತವಾಗುತ್ತದೆ. ಈ ವಾರ್ತಿಕದಿಂದ ಮತ್ವರ್ಥ ತೋರುತ್ತಿರುವಾಗ ಲುಕ್ ಬಂದಿದೆ. **ಯಃ ಶಿಷ್ಯತೇ ಸಃ**

ಲುಪ್ಯಮಾನಾರ್ಥಾಭಿಧಾಯೀ ಎಂಬ ನ್ಯಾಯದಂತೆ ಇಲ್ಲಿ ಮತ್ವರ್ಥೀಯ ಪ್ರತ್ಯಯವು ಲುಪ್ತವಾದರೂ ಪ್ರಕೃತಿಯಿಂದ ಅರ್ಥವು ತೋರುವುದು. ॥ ೫ ॥

---

ಸಂಹಿತಾಪಾಠಃ

ನಕಿಷ್ಟ್ವದ್ರಥೀತರೋ ಹರೀ ಯದಿಂದ್ರ ಯಚ್ಛಸೇ।
ನಕಿಷ್ಟ್ವಾನು ಮಜ್ಮನಾ ನಕಿಃ ಸ್ವಶ್ವ ಆನಶೇ ॥ ೬ ॥

ಪದಪಾಠಃ

ನಕಿಃ । ತ್ವತ್ । ರಥಿಽತರಃ । ಹರೀ ಇತಿ । ಯತ್ । ಇಂದ್ರ । ಯಚ್ಛಸೇ ।
ನಕಿಃ । ತ್ವಾ । ಅನು । ಮಜ್ಮನಾ । ನಕಿಃ । ಸುಽಅಶ್ವಃ । ಆನಶೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯದ್ಯಸ್ಮಾತ್ತ್ವಂ ಹರೀ ಏತತ್ಸಂಜ್ಞಾವಶ್ವೌ ಯಚ್ಛಸೇ ರಥೇ ಯೋಜಯಸಿ ತಸ್ಮಾತ್ತ್ವತ್ತೋಽನ್ಯಃ ಕಶ್ಚಿದ್ರಥೀತರೋಽತಿಶಯೇನ ರಥವಾನ್ ನಕಿಃ । ನಾಸ್ತಿ । ಅನ್ಯೇಷಾಮೀದೃಗಶ್ವ-ಯುಕ್ತರಥಾಭಾವಾತ್ । ತ್ವಾ ತ್ವಾಮನುಲಕ್ಷ್ಯ ಮಜ್ಮನಾ । ಬಲನಾಮೈತತ್ । ಬಲೇನ ಸದೃಶೋಽಪಿ ನಕಿಃ । ನ ಹ್ಯಸ್ತಿ । ಸ್ವಶ್ವಃ ಶೋಭನಾಶ್ವೋಽನ್ಯಶ್ಚ ತ್ವಾಂ ನಕಿರಾನಶೇ । ನ ಪ್ರಾಪ । ಇಂದ್ರಸ್ಯ ಬಲಾಶ್ವ-ಯೋರಸಾಧಾರಣತ್ವಾದಿಂದ್ರಸದೃಶೋ ಬಲವಾನಶ್ವವಾನ್ ಲೋಕೇ ಕಶ್ಚಿದಪಿ ನಾಸ್ತೀತ್ಯರ್ಥಃ ॥ ನಕಿಷ್ಟ್ವತ್ ಯುಷ್ಮತ್ತತತಕ್ಷುಃಷ್ವಂತಃಪಾದಮಿತಿ ಷತ್ವಂ । ರಥೀತರಃ । ಅತಿಶಯೇನ ರಥೀ । ತರಪೀವ್ರ-ಥಿನಃ। ಪಾ.೮-೨-೮೭-೧। ಇತೀ ಕಾರಾಂತಾದೇಶಃ। ಅವಗ್ರಹಸಮಯೇ ಛಾಂದಸಂ ಹ್ರಸ್ವತ್ವಂ। ಯಚ್ಛಸೇ । ಯಮೋಽವ್ಯತ್ಯಯೇನಾತ್ಮನೇಪದಂ । ಸ್ವಶ್ವಃ । ಬಹುವ್ರೀಹಾವಾದ್ಯುದಾತ್ತಂ । ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಆನಶೇ । ಅಶ್ನೋತೇಶ್ಛೇತ್ಯಭ್ಯಾಸಾದುತ್ತರಸ್ಯ ನುಟ್ ॥ ೬ ॥

ಪ್ರತಿಪದಾರ್ಥ

ಇಂದ್ರ— ಎಲೈ ಇಂದ್ರನೇ, । ಯತ್— ಯಾವಾಗ । ಹರೀ— ಹರಿಗಳೆಂಬ ನಿನ್ನ ಕುದುರೆಗಳನ್ನು । ಯಚ್ಛಸೇ—(ರಥಕ್ಕೆ)ಕಟ್ಟುತ್ತೀಯೋ (ಆಗ) । ರಥೀತರಃ— ನಿನಗಿಂತಲೂ ಅಧಿಕನಾದ ಸಾರಥಿಯು । ನಕಿಃ

ಇಲ್ಲವೇ ಇಲ್ಲ. । **ತ್ವಾ**— ನಿನ್ನನ್ನು (ಲಕ್ಷ್ಯದಲ್ಲಿಟ್ಟು) । **ಮಜ್ಮನಾ**— ಬಲದಲ್ಲಿ ಸಮಾನನಾದವನೂ । **ನಕಿಃ**— ಯಾರೂ ಇಲ್ಲ. । **ಸ್ವಶ್ವಃ**— ಶ್ರೇಷ್ಠವಾದ ಕುದುರೆಯನ್ನಿಟ್ಟುಕೊಂಡಿರುವ ಇತರಾರೇ ಆಗಲಿ । **ನಕಿಃ ಆನಶೇ**— ನಿನ್ನನ್ನು ಹಿಂದೆಹಾಕಿ ಓಡಲಾಗಲಿಲ್ಲ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಹರಿಗಳೆಂಬ ನಿನ್ನ ಕುದುರೆಗಳನ್ನು ರಥಕ್ಕೆ ಕಟ್ಟಿದಾಗ ನಿನ್ನನ್ನು ಮೀರಿಸಿದ ಸಾರಥಿಯು ಯಾರೂ ಇಲ್ಲ. ನಿನಗೆ ಸದೃಶವಾದ ಬಲವುಳ್ಳವನೂ ಯಾರೂ ಇಲ್ಲ. ಎಷ್ಟೇ ಶ್ರೇಷ್ಠವಾದ ಕುದುರೆಯನ್ನಿಟ್ಟುಕೊಂಡಿದ್ದರೂ ಸಹ ನಿನ್ನನ್ನು ಹಿಂದೆ ಹಾಕಿ ರಥವನ್ನು ಓಡಿಸುವವರು ಯಾರೂ ಇಲ್ಲ.

English Translation

Indra, when you harnessed your horses there is no better charioteer than you ; no one is equal to you in strength ; no one although possessed of good horses has surpassed you.

ವಿಶೇಷವಿಷಯಗಳು

**ನಕಿಃ**—ಹಿಕಂ ನುಕಂ ಮೊದಲಾದ ಒಂಭತ್ತು ಶಬ್ದಗಳು ಸರ್ವಪದಸಮ್ನಾಯಾರ್ಥದಲ್ಲಿ ಪಠಿತವಾಗಿರುವುದರಿಂದ ನಕಿಃ ಎಂಬ ಶಬ್ದಕ್ಕೆ ಇಲ್ಲಿ ನಿಷೇಧಾರ್ಥವನ್ನು ಹೇಳಿರುವರು. ನಕಿಃ ಎಂದರೆ ಇಲ್ಲ ಎಂದರ್ಥವು.

**ರಥೀತರಃ**—ರಥಿಕರಲ್ಲಿ ಶ್ರೇಷ್ಠನಾದವನು.

**ಮಜ್ಮನಾ**—ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಮಜ್ಮನಾ ಎಂಬ ಶಬ್ದವು ಪಠಿತವಾಗಿರುವುದರಿಂದ ಈ ಶಬ್ಧಕ್ಕೆ ಬಲವು, ಶಕ್ತಿಯು ಎಂದರ್ಥವು.

**ಸ್ವಶ್ವಃ**—**ಶೋಭನಾಶ್ವಯುಕ್ತಃ** । ಉತ್ತಮವಾದ ಕುದುರೆಗಳನ್ನು ಹೊಂದಿರುವವನು.

**ನ ಆನಶೇ—ನ ಪ್ರಾಪ** । ಹೊಂದುವುದಿಲ್ಲ ಅಥವಾ ಇರುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ನಕಿಷ್ಟ್ವತ್**—ನಕಿಃ+ತ್ವತ್ ಎಂದು ಛೇದ. ನಕಿಸ್ ಎಂಬುದು ಸಕಾರಾಂತ ಅವ್ಯಯ. ನಕಿಸ್+ತ್ವತ್ ಎಂದಿರುವಾಗ, **ಯುಷ್ಮತ್ತತ್ತಕ್ಷುಷ್ವಂತಃ ಪಾದಮ್** (ಪಾ. ಸೂ. ೮-೩-೧೦೩) ಪಾದಮಧ್ಯದಲ್ಲಿರುವ ಸಕಾರಕ್ಕೆ ತಕಾರಾದಿಯಾದ ಯುಷ್ಮಚ್ಛಬ್ದದ ಆದೇಶಗಳು, ತತ್, ತತಕ್ಷು ಶಬ್ದಗಳು ಪರದಲ್ಲಿರುವಾಗ ಮೂರ್ಧನ್ಯಾದೇಶವು (ಷತ್ವ) ಬರುತ್ತದೆ ಎಂಬುದರಿಂದ ಸಕಾರಕ್ಕೆ ಷತ್ವ ಬರುತ್ತದೆ. ತ್ವಂ, ತ್ವತ್, ತ್ವಾ, ತೆ, ತವ ಎಂಬವುಗಳೇ ಯುಷ್ಮದಾದೇಶಗಳು. ಇಲ್ಲಿ ತ್ವತ್ ಎಂಬ ತಾದಿ ಆದೇಶವು ಪರದಲ್ಲಿದೆ. ಷತ್ವಬಂದಾಗ ಷಕಾರದ ಪರದಲ್ಲಿ ತಕಾರ ಬಂದುದರಿಂದ **ಷ್ಟುನಾಷ್ಟುಃ** (ಪಾ. ಸೂ. ೮-೪-೪೧) ಎಂಬುದರಿಂದ ಷ್ಟುತ್ವಸಂಧಿ ಬರುತ್ತದೆ.

**ರಥೀತರಃ**—ಅತಿಯೇನ ರಥೀ (ರಥವಾನ್) ರಥೀತರಃ **ದ್ವಿವಚನ ವಿಭಜ್ಯೋಪಪದೇ ತರಬೀಯಸುನೌ** (ಪಾ. ಸೂ. ೫-೩-೫೭) ಎಂಬುದರಿಂದ ಅತಿಶಯಾರ್ಥದಲ್ಲಿ ತರಪ್‌ಪ್ರತ್ಯಯ ಬರುತ್ತದೆ. ರಥಮಸ್ಯಾಸ್ತೀತಿ ರಥೀ. ರಥಶಬ್ದದ ಮೇಲೆ ಮತ್ವರ್ಥದಲ್ಲಿ **ಅತ ಇನಿಠನ್** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿಪ್ರತ್ಯಯ ಬಂದರೆ **ಯಸ್ಯೇತಿಚ** ಎಂಬುದರಿಂದ ಅಕಾರಲೋಪವಾದರೆ ರಥೀ ಎಂಬುದು ನಾಂತಶಬ್ದವಾಗುತ್ತದೆ. ಇದಕ್ಕೆ ಹಿಂದೆ ಹೇಳಿದಂತೆ ಅತಿಶಯಾರ್ಥದಲ್ಲಿ ತರಪ್‌ಪ್ರತ್ಯಯ ಬರುತ್ತದೆ. ರಥಿನ್+ತರ ಎಂದಿರುವಾಗ **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ಪ್ರಾತಿಪದಿಕದ ನಕಾರಕ್ಕೆ ಲೋಪ ಬರುತ್ತದೆ. **ಈದ್ರಥಿನಃ** (ಪಾ. ಸೂ. ೮-೨-೧೭—ವಾ. ೧) ರಥಿನ್ ಶಬ್ದಕ್ಕೆ ಘ ಪರದಲ್ಲಿರುವಾಗ ಈಕಾರಾಂತಾದೇಶವು ಬರುತ್ತದೆ. **ತರಪ್‌ತಮಪೌ ಘಃ** (ಪಾ. ಸೂ. ೧-೧-೨೨) ಎಂಬುದರಿಂದ ಎರಡು ಪ್ರತ್ಯಯಗಳಿಗೆ ಘ ಎಂದು ಸಂಜ್ಞೆ. ರಥಿ+ತರ ಎಂದಿರುವಾಗ ಘ ಪರದಲ್ಲಿರುವುದರಿಂದ ಈಕಾರವು ಅಂತಾದೇಶವಾಗಿ ಬರುತ್ತದೆ. ಇಲ್ಲಿ ನಲೋಪಕ್ಕೆ ಅಪವಾದವಾಗಿ ಈಕಾರವನ್ನು ಅಂತಾದೇಶವನ್ನಾಗಿ ಹೇಳಿದರೆ ಲಾಘವವಿದೆ. ಆದರೆ ಈತ್ವವು ಅಸಿದ್ಧ ಕಾಂಡದಲ್ಲಿ ವಿಹಿತವಾದುದರಿಂದ ನಕಾರಸ್ಥಾನದಲ್ಲಿ ವಿಧಿಸಿದರೆ ಪುನಃ ಸವರ್ಣದೀರ್ಘರೂಪವಾದ ಏಕಾದೇಶವು ಬರಲಾರದು. ಆದುದರಿಂದ ನಲೋಪಮಾಡಿದಮೇಲೆ ಇಕಾರಕ್ಕೇ ಈಕಾರವನ್ನು ಅಂತಾದೇಶವನ್ನಾಗಿ ಹೇಳಬೇಕು. ಇಲ್ಲಿ ಪದಕಾಲದಲ್ಲಿ ಹ್ರಸ್ವವು ಶ್ರುತವಾಗುತ್ತದೆ. ಅವಗ್ರಹದಲ್ಲಿ ಕೇವಲ ಛಾಂದಸವಾದ ಹ್ರಸ್ವತ್ವವನ್ನು ಸ್ವೀಕರಿಸಿರುತ್ತಾರೆ.

**ಯಚ್ಛಸೇ**—ಯಮ ಉಪರಮೇ ಧಾತು. ಪರಸ್ಮೈಪದಿ. ಭ್ವಾದಿ. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ವ್ಯತ್ಯಯದಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಶಪ್ ಪರದಲ್ಲಿರುವಾಗ **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಛ ಎಂಬುದು ಅಂತಾದೇಶ ಬಂದಿದೆ. ಅಥವಾ ದಾಣ್ ದಾನೇ ಧಾತು. ಇದಕ್ಕೆ **ಪಾಘ್ರಾ**—ಸೂತ್ರದಿಂದ ಯಚ್ಛ ಎಂಬ ಆದೇಶ ಬರುತ್ತದೆ ಇದೂ ಪರಸ್ಮೈಪದಿಯಾದುದರಿಂದ ವ್ಯತ್ಯಯದಿಂದಲೇ ಆತ್ಮನೇಪದ ಪ್ರತ್ಯಯವನ್ನು ಹೇಳಬೇಕು. ಲಟ್ ಮಧ್ಯಮಪುರುಷೈಕವಚನದಲ್ಲಿ ಉಕ್ತರೂಪ ಸಿದ್ಧಿಯಾಗುತ್ತದೆ.

**ಸ್ವಶ್ವಃ**—ಶೋಭನೌ ಅಶ್ವೌ ಯಸ್ಯ ಸಃ ಸ್ವಶ್ವಃ ಬಹುವ್ರೀಹಿಸಮಾಸ. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಸು ಎಂಬುದರ ಪರದಲ್ಲಿರುವ ಅಶ್ವಶಬ್ದಕ್ಕೆ ಅಂತೋದಾತ್ತವು ಪ್ರಾಪ್ತವಾದರೆ, **ಆದ್ಯುದಾತ್ತಂ ದ್ವ್ಯಚ್‌ಛಂದಸಿ** (ಪಾ. ಸೂ. ೬-೨ ೧೧೯) ಸುವಿನ ಪರದಲ್ಲಿರುವ ದ್ವ್ಯಚ್ಕವಾದ ಆದ್ಯುದಾತ್ತವಾದ ಪದವು ಛಂದಸ್ಸಿನಲ್ಲಿ ಆದ್ಯುದಾತ್ತವಾಗಿಯೇ ಉಳಿಯುವುದು ಎಂಬುದರಿಂದ ಇಲ್ಲಿ ಉತ್ತರಪದಾದ್ಯುದಾತ್ತ ಸ್ವರವೇ ಇರುತ್ತದೆ. **ಅಶೂಪ್ರುಷಿ** (ಫಿ. ಸೂ. ೧-೪೫) ಎಂಬುದರಿಂದ ಅಶ್ವಶಬ್ದವು ಕ್ವನ್ನಂತವಾದುದರಿಂದ ನಿತ್‌ಸ್ವರದಿಂದ ಆದ್ಯುದಾತ್ತವಾಗಿದೆ. ದ್ವ್ಯಚ್ಕವಾಗಿರುವುದರಿಂದಲೂ ಸು ಎಂಬುದರ ಪರದಲ್ಲಿ ಬಂದುದರಿಂದ ಆದ್ಯುದಾತ್ತವಾಗಿಯೇ ಶ್ರವಣವಾಗುತ್ತದೆ. ಈ ಸೂತ್ರವು ನಞ್‌ಸ್ವರಕ್ಕೆ ಅಪವಾದವಾಗುತ್ತದೆ.

ಆನಶೆ—ಅಶೂ ವ್ಯಾಪ್ತೌ ಧಾತು. ಸ್ವಾದಿ. ಅನುದಾತ್ತೇತ್. ಲಿಟ್ ಪ್ರಥಮಪುರುಷೈಕವಚನ ವಿವಕ್ಷಾ ದಲ್ಲಿದಾಗ ತಪ್ರತ್ಯಯ ಬರುತ್ತದೆ. **ಲಿಟಸ್ತಝಯೋರೇಶಿರೇಚ್** (ಪಾ. ೩-೪-೮೧) ಸೂತ್ರದಿಂದ ತ ಎಂಬುದಕ್ಕೆ

ಏಶ್ ಆದೇಶ ಬರುತ್ತದೆ. ಲಿಟ್ ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ ಬರುತ್ತದೆ. ಹಲಾದಿಶೇಷ ಬಂದರೆ ಅ+ಅಶ್+ಏ ಎಂದಾಗುತ್ತದೆ. **ಅತ ಆದೇಃ** (ಪಾ. ಸೂ. ೭-೪-೭೦) ಅಭ್ಯಾಸದ ಆದಿಯ ಅಕಾರಕ್ಕೆ ದೀರ್ಘ ಬರುತ್ತದೆ. ಅತೋಗುಣೆ ಎಂಬುದರಿಂದ ಪರರೂಪವು ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಈ ಸೂತ್ರವು ಆರಬ್ಧವಾಗಿದೆ. ಅಭ್ಯಾಸಕ್ಕೆ ದೀರ್ಘವು ಬಂದರೆ **ಅಶ್ನೋತೇಶ್ಚ** (ಪಾ. ಸೂ. ೭-೪-೭೨) ಅಭ್ಯಾಸದ ದೀರ್ಘವಾದ ಆಕಾರದ ಪರದಲ್ಲಿರುವ ಅಶೂಧಾತುವಿಗೆ ನುಡಾಗಮ ಬರುತ್ತದೆ. ಇದರಿಂದ ಧಾತುವಿನ ಆದಿಗೆ ನುಡಾಗಮ ಬಂದರೆ ಆನಶೇ ಎಂದಾಗುತ್ತದೆ. ॥ ೬ ॥



ಸಂಹಿತಾಪಾಠಃ

ಯ ಏಕ ಇದ್ವಿದಯತೇ ವಸು ಮರ್ತಾಯ ದಾಶುಷೇ ।
ಈಶಾನೋ ಅಪ್ರತಿಷ್ಕುತ ಇಂದ್ರೋ ಅಂಗ ॥ ೭ ॥

ಪದಪಾಠಃ

ಯಃ । ಏಕಃ । ಇತ್ । ವಿ ಽ ದಯತೇ । ವಸು । ಮರ್ತಾಯ । ದಾಶುಷೇ ।
ಈಶಾನಃ । ಅಪ್ರತಿ ಽ ಸ್ಕುತಃ । ಇಂದ್ರಃ । ಅಂಗ ॥ ೭ ॥

ಸಾಯಣಭಾಷ್ಯಂ

ಆಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಬ್ರಾಹ್ಮಣಾಚ್ಛಂಸಿನೋ ಯ ಏಕ ಇದ್ವಿದಯತ ಇತಿ ವೈಕಲ್ಪಿಕಃ ಸ್ತೋತ್ರಿಯಸ್ತೃಚಃ । ಏಹ್ಯೂಷ್ವಿತಿ ಖಂಡೇ ಸೂತ್ರಿತಂ । ಸಖಾಯ ಆಶಿಷಾಮಹಿ ಯ ಏಕ ಇದ್ವಿದಯತೇ । ಆ. ೭-೮ । ಇತಿ ॥ ಮಹಾವ್ರತೇಽಪಿ ನಿಷ್ಕೇವಲ್ಯ ಔಷ್ಣಿಹತೃಚಾಶೀತಾವಯಂ ತೃಚೋ ವಿನಿಯುಕ್ತಃ । ತಥೈವ ಪಂಚಮಾರಣ್ಯಕೇ ಸೂತ್ರ್ಯತೇ । ಯ ಏಕ ಇದ್ವಿದಯತ ಆ ಯಾಹ್ಯದ್ರಿಭಿಃ ಸುತಂ । ಐ. ಬ್ರಾ. ೫-೨-೫ । ಇತಿ ॥

ಯ ಇಂದ್ರ ಏಕ ಇತ್ ಏಕ ಏವ ದಾಶುಷೇ ಹವಿರ್ದತ್ತವತೇ ಮರ್ತಾಯ ಮನುಷ್ಯಾಯ ಯಜಮಾನಾಯ ವಸು ಧನಂ ವಿದಯತೇ ವಿಶೇಷೇಣ ದದಾತಿ । ಅಂಗೇತಿ ಕ್ಷಿಪ್ರನಾಮ । ಅಪ್ರತಿಷ್ಕುತಃ ಪರೈರಪ್ರತಿಶಬ್ದಿತಃ । ಪ್ರತಿಕೂಲಶಬ್ದರಹಿತ ಇತ್ಯರ್ಥಃ । ಏವಂಭೂತಃ ಸ ಇಂದ್ರಃ ಕ್ಷಿಪ್ರಮೀಶಾನಃ ಸರ್ವಸ್ಯ ಜಗತಃ ಸ್ವಾಮೀ ಭವತಿ ॥ ವಿದಯತೇ । ದಯ ದಾನಗತಿರಕ್ಷಣಹಿಂಸಾದಾನೇಷು । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ ಶಿಷ್ಯತೇ । ಯದ್ವೃತ್ತಯೋಗಾದನಿಘಾತಃ । ಅಪ್ರತಿಷ್ಕುತಃ । ಕು ಶಬ್ದೇ । ಪ್ರತಿಕೂಲಂ ಕೂಯತೇ ಶಬ್ದ್ಯತ ಇತಿ ಪ್ರತಿಸ್ಕುತಃ । ಪಾರಸ್ಕರಾದೇರಾಕೃತಿಗಣತ್ವಾತ್ಸುಟ್ । ಸುಷಾಮಾದಿತ್ವಾತ್ಷತ್ವಂ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥ ೭ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಏಕ ಇತ್**—ಒಬ್ಬನೇ । **ದಾಶುಷೇ**—(ಹವಿಸ್ಸನ್ನು) ಅರ್ಪಿಸುವ **ಮರ್ತಾಯ**—ಮಾನವನಿಗೆ । **ವಸು**—ಧನವನ್ನು । **ವಿದಯತೇ**—ವಿಶೇಷವಾಗಿ ಕೊಡುತ್ತಾನೋ । (**ಸಃ**—ಅಂತಹ) । **ಅಪ್ರತಿಷ್ಕುತಃ**—ವಿರೋಧವಚನವಿಲ್ಲದಿರುವ । **ಇಂದ್ರಃ**—ಇಂದ್ರನು । **ಅಂಗ**—ಜಾಗ್ರತೆ । **ಈಶಾನಃ**-(ಸಕಲ ಜಗತ್ತಿಗೂ) ಒಡೆಯನಾಗುತ್ತಾನೆ. ।

॥ ಭಾವಾರ್ಥ ॥

ಹವಿಸ್ಸನ್ನು ಅರ್ಪಿಸುವ ಮಾನವನಾದ ಯಜಮಾನನಿಗೆ ವಿಶೇಷವಾಗಿ ಧನವನ್ನು ಅನುಗ್ರಹಿಸುವವನು ಯಾರೆಂದರೆ ಅವನು ವಿರೋಧಿವಚನವಿಲ್ಲದಿರುವವನೂ ಮತ್ತು ಸಕಲ ಜಗತ್ತಿಗೂ ಸ್ವಾಮಿಯಾದವನೂ ಆದ ಇಂದ್ರನೊಬ್ಬನಲ್ಲದೆ ಇನ್ನಾರೂ ಆಗಲಾರರು. ಇದು ಖಂಡಿತ.

## English Translation

He who alone quickly bestows wealth upon the man who offers him oblations is the undisputed sovereign Indra.

ವಿಶೇಷವಿಷಯಗಳು

ಅಭಿಪ್ಲವಷಡಹವೆಂಬ ಯಾಗದಲ್ಲಿ ಬ್ರಾಹ್ಮಣಾಚ್ಛಂಸಿಯು ತೃತೀಯಸವನಕರ್ಮದಲ್ಲಿ **ಯ ಏಕ ಇದ್ವಿದಯತೇ** ಎಂದು ಮೊದಲಾಗುವ ಮೂರುಋಕ್ಕುಗಳನ್ನು ಸ್ತೋತ್ರಮಂತ್ರಗಳಿಗಾಗಿ ವಿಕಲ್ಪವಾಗಿ ಉಪಯೋಗಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ **ವಿಹ್ಯೂಷು** ಎಂಬ ಖಂಡದಲ್ಲಿ **ಸಖಾಯ ಆಶಿಷಾಮಹಿ ಯ ಏಕ ಇದ್ವಿದಯತೇ** ಎಂಬ ಸೂತ್ರದಿಂದ ವಿಸ್ತೃತವಾಗಿರುವುದು. (ಆ. ೭-೮) ಮಹಾವ್ರತದಲ್ಲಿಯೂ ಕೂಡ ನಿಷ್ಕೇವಲ್ಯ ಶಸ್ತ್ರಮಂತ್ರಪಠನಕಾಲದಲ್ಲಿ ಉಷ್ಣಿಕ್‌ಛಂದಸ್ಸಿನ ಮಂತ್ರಗಳಿಗಾಗಿ ಈ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಐತರೇಯ ಆರಣ್ಯಕದ ಪಂಚಮಾರಣ್ಯಕದಲ್ಲಿ **ಯ ಏಕ ಇದ್ವಿದಯತ** ಅಯಾಹ್ಯದ್ರಿಭಿಃ ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು. (ಐ. ಆ. ೫ ೩-೫).

**ಅಂಗ**— ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಕೊನೆಯ ಪಾದದಲ್ಲಿ **ಇಂದ್ರೋ-ಅಂಗ** ಎಂದು ಪಠಿತವಾಗಿರುವುದು. ಅಂಗಶಬ್ದಕ್ಕೆ ಯಾಸ್ಕರು **ಅಂಗೇತಿ ಕ್ಷಿಪ್ರನಾಮ। ಅಂಗಮುಂಗನಾದಂಚನಾದ್ವಾ—ಅಂಗಿತಂ। ತತ್ಕಾಲೇನ ಭವತಿ ಗತಮಿತ್ಯರ್ಥಃ। ಅಂಚನಾದ್ವಾ—ಅಂಚತಿರಪಿ ಹಿ ಗತ್ಯರ್ಥ ಏವ-ಥಾತ್ವನ್ಯತ್ವಮುಥ್ಕರ್ಷಕತ್ವಂ** ಎಂದು ಹೇಳಿರುವರು. ಅಂಗಶಬ್ದವೂ ಅಂಗನಾತ್ ಅಂಚನಾತ್ ಎಂಬ ಗತ್ಯರ್ಥವನ್ನು ಸೂಚಿಸುವ ಎರಡು ಶಬ್ದಗಳಲ್ಲಿ ಒಂದರಿಂದ ನಿಷ್ಪನ್ನವಾಗಿರುವುದು. ಎರಡು ಧಾತುಗಳಿಗೂ ಗತ್ಯರ್ಥವೇ ಇರುವುದರಿಂದ ಅಂಗಶಬ್ದಕ್ಕೆ ಗತ್ಯರ್ಥವನ್ನು ಹೇಳಬೇಕು. ಭಾಷ್ಯಕಾರರು ಈ ಶಬ್ದಕ್ಕೆ **ಕ್ಷಿಪ್ರೆ** – ಬೇಗ ಎಂದು ಅರ್ಥ ವಿವರಣೆ ಮಾಡಿರುವರು. ಪಾಶ್ಚಾತ್ಯಪಂಡಿತರು ಈ ಶಬ್ದಕ್ಕೆ ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ನಿರ್ದಿಷ್ಟವಾದ ಯಾವ ಅರ್ಥವೂ ಇಲ್ಲದಿರುವುದರಿಂದಲೂ ವಾಕ್ಯಾಂತದಲ್ಲಿ ಇಂದ್ರಶಬ್ದದೊಡನೆ ಪಠಿತವಾಗಿರುವುದರಿಂದಲೂ ಈ ಅಂಗಶಬ್ದವು ಆಶ್ಚರ್ಯವಾಚಕವೆಂದು ಭಾವಿಸುವರು.

**ಅಪ್ರತಿಷ್ಕುತಃ— ಪರೈರಪ್ರತಿಶಬ್ದಿತಃ ಪ್ರತಿಕೂಲಶಬ್ದರಹಿತಃ।** ಎದುರುಮಾತನಾಡುವವರಿಲ್ಲದವನು. ಇವನು ಹೇಳಿದ್ದಕ್ಕೆ ಪ್ರತಿಯೇ ಇಲ್ಲದ, undisputed, unopposed & c.

ವ್ಯಾಕರಣಪ್ರಕ್ರಿಯಾ

**ವಿವಯತೆ—** ವಿ ಉಪಸರ್ಗ. ದಯದಾನಗತಿರಕ್ಷಣಹಿಂಸಾದಾನೇಷು. ಧಾತು. ಭ್ವಾದಿ. ಆತ್ಮನೇಪದಿ. ಶಪ್ ವಿಕರಣಮಾಡಿದರೆ ದಯತೆ ಎಂದಾಗುತ್ತದೆ. ಶಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತದೆ. ಪ್ರತ್ಯಯಸ್ವರದಿಂದ ತ ಎಂಬುದು ಅಂತೋದಾತ್ತವಾದರೆ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರವೇ ಸತಿಶಿಷ್ಟವಾಗುವುದರಿಂದ **ಧಾತೋಃ** (ಪಾ. ಸೂ. ೬-೧-೧೬೨) ಎಂಬುದರಿಂದ ಅಂತೋದಾತ್ತವಾಗುವುದು. ದಕಾರೋತ್ತರಾಕಾರ ಉದಾತ್ತವಾದಾಗ ಉದಾತ್ತದ ಪರದಲ್ಲಿರುವ ಯಕಾರೋತ್ತರಾಕಾರವು ಸ್ವರಿತವಾಗುತ್ತದೆ. ಸ್ವರಿತದ ಮುಂದಿರುವ ಪ್ರತ್ಯಯಾನುದಾತ್ತವು ಪ್ರಚಯವಾಗುತ್ತದೆ. **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತವು ಪ್ರಾಪ್ತವಾದರೆ **ನಿಪಾತೈರ್ಯದ್ಯದಿ** (ಪಾ. ಸೂ. ೮-೧-೩೦) ಎಂಬುದರಿಂದ ಯಃ ಎಂದು ಪೂರ್ವದಲ್ಲಿ ಸಂಬಂಧವಿರುವುದರಿಂದ ನಿಘಾತಪ್ರತಿಷೇಧ ಬರುತ್ತದೆ.

**ಅಪ್ರತಿಷ್ಕುತಃ** – ನ ಪ್ರತಿಷ್ಕುತಃ ಅಪ್ರತಿಷ್ಕುತಃ. ಪ್ರತಿ ಉಪಸರ್ಗ. ಕು ಶಬ್ದೇ. ಅದಾದಿ. ಕರ್ಮಣಿ ಕ್ತಪ್ರತ್ಯಯ ಬಂದಿದೆ. ಕಿತ್ತಾದುದರಿಂದ ಧಾತುವಿಗೆ ಗುಣಬರುವುದಿಲ್ಲ. ಪ್ರತಿಕೂಲಂ ಕೂಯತೆ ಶಬ್ದ್ಯತೆ ಇತಿ ಪ್ರತಿಷ್ಕುತಃ ವಿರುದ್ಧವಾಗಿ ಶಬ್ದಮಾಡಲ್ಪಡುವುದು. ಪ್ರತಿಕೂಲಶಬ್ದದಿಂದ ಕೂಡಿರುವುದು. ಅದು ಆಗದಿರುವುದು ಎಂಬರ್ಥದಲ್ಲಿ ಅಪ್ರತಿಷ್ಕುತಃ ಎಂದಾಗಿದೆ. **ಪಾರಸ್ಕರಪ್ರಭೃತೀನಿ ಸಂಜ್ಞಾಯಾಂ** (ಪಾ. ಸೂ. ೬-೧-೧೫೭) ಒಂದು ಹೆಸರು ತೋರುವಾಗ ಈ ಗಣದಲ್ಲಿ ನಿರ್ದಿಷ್ಟವಾದ ಶಬ್ದಗಳು ಸುಟ್ ಸಹಿತವಾಗಿ ನಿಪಾತಿತಗಳಾಗುತ್ತವೆ. ಇದು ಆಕೃತಿಗಣ. ಅಂದರೆ ಇದರಂತೆ ಸಸುಟ್ಕಗಳಾಗಿ ಶಾಸ್ತ್ರಾಂತರದಿಂದ ಬಾರದೆ ಇದ್ದವುಗಳು ಈ ಗಣದಲ್ಲಿ ನಿರ್ದಿಷ್ಟವಾದವುಗಳೆಂದು ಊಹಿಸಬೇಕು. ಹಾಗೆಯೇ ಪ್ರತಿಷ್ಕುತವೆಂಬಲ್ಲಿ ಸುಟ್ ಶ್ರುತವಾಗಿದೆ. ಇದಕ್ಕೆ ಬೇರೆ ಯಾವ ಅನುಶಾಸನವೂ ಇಲ್ಲ. ಆದುದರಿಂದ ಪಾರಸ್ಕರಗಣದಲ್ಲಿ ಪಠಿತವಾಗಿದೆ ಎಂದು ತಿಳಿಯಬೇಕು. ಸುಡೆಂ

ಬುದು ಆದೇಶವೂ ಪ್ರತ್ಯಯಾವಯವೂ ಅಲ್ಲದಿರುವುದರಿಂದ **ಆದೇಶಪ್ರತ್ಯಯಯೋಃ** ಎಂಬ ಸೂತ್ರದಿಂದ ಷತ್ವವು ಬರುವುದಿಲ್ಲ. ಆದುದರಿಂದ **ಸುಷಾಮಾದಿಷು ಚ** (ಪಾ. ಸೂ. ೮-೩-೯೮) ಎಂಬುದರಿಂದ ಸುಷಾಮಾದಿಯಲ್ಲಿ ಪಾಠಮಾಡಿರುವುದರಿಂದ ಷತ್ವಬರುತ್ತದೆ. ನ ಪ್ರತಿಷ್ಕುತಃ ಅಪ್ರತಿಷ್ಕುತಃ ನಞ್ಸಮಾಸ. ನಞಿನ ನಕಾರಕ್ಕೆ **ನಲೋಪೋನಞಃ** (ಪಾ. ಸೂ. ೬-೩-೭೩) ಎಂಬುದರಿಂದ ಉತ್ತರಪದ ಪರದಲ್ಲಿರುವಾಗ ಲೋಪ ಬರುತ್ತದೆ. ಅ ಮಾತ್ರ ಉಳಿಯುತ್ತದೆ. **ಅವ್ಯಯೇ ನಞ ಕು ನಿಪಾತಾನಾಂ** ಎಂಬುದರಿಂದ ಅವ್ಯಯ ಪೂರ್ವಪದಪ್ರಕೃತಿ ಸ್ವರವು ಬರುತ್ತದೆ. ಅ ಎಂಬುದು ಉದಾತ್ತವಾಗುತ್ತದೆ. ಉದಾತ್ತದ ಪರದಲ್ಲಿರುವುದರಿಂದ ಪ್ರ ಎಂಬಲ್ಲಿರುವ ಅಕಾರವು ಸ್ವರಿತವಾಗುತ್ತದೆ. ಸ್ವರಿತದ ಪರದಲ್ಲಿರುವ ಉಳಿದ ಅನುದಾತ್ತಗಳು ಪ್ರಚಯಗಳಾಗುತ್ತದೆ ॥ ೭ ॥



॥ ಸಂಹಿತಾಪಾಠಃ ॥

ಕದಾ ಮರ್ತಮರಾಧಸಂ ಪದಾ ಕ್ಷುಂಪಮಿವ ಸ್ಫುರತ್।
ಕದಾ ನಃ ಶುಶ್ರವದ್ಗಿರ ಇಂದ್ರೋ ಅಂಗ ॥ ೮ ॥

ಪದಪಾಠಃ

ಕದಾ । ಮರ್ತಂ । ಅರಾಧಸಂ । ಪದಾ । ಕ್ಷುಂಪಂಽಇವ । ಸ್ಫುರತ್ ।
ಕದಾ । ನಃ । ಶುಶ್ರವತ್ । ಗಿರಃ । ಇಂದ್ರಃ । ಅಂಗ ॥ ೮ ॥

ಸಾಯಣಭಾಷ್ಯಂ

ಅರಾಧಸಂ ಹವಿರ್ಲಕ್ಷಣೇನ ರಾಧಸಾ ಧನೇನ ರಹಿತಂ । ಅಯಷ್ಟಾರಮಿತ್ಯರ್ಥಃ । ಏವಂ ವಿಧಂ ಮರ್ತಂ ಮನುಷ್ಯಮಿಂದ್ರಃ ಪದಾ ಪಾದೇನ ಕ್ಷುಂಪಮಿವಾಹಿಚ್ಛತ್ರಕಮಿವ ಕದಾ ಸ್ಫುರತ್ । ಸ್ಫುರಿಷ್ಯತಿ । ವಧಿಷ್ಯತಿ । ಯಥಾಹಿಚ್ಛತ್ರಂ ಮಂಡಲಾಕಾರೇಣ ಶಯಾನಂ ಕಶ್ಚಿದನಾಯಾಸೇನ ಹಂತಿ ಏವಮಿಂದ್ರೋಽಪಿ ಕದಾಽಸ್ಮಚ್ಛತ್ರೂನ್ ಹನಿಷ್ಯತೀತ್ಯರ್ಥಃ । ಸ್ಫುರತಿರ್ವಧಕರ್ಮಾ । ಸ್ಫುರತಿ ಸ್ಫುಲತೀತಿ ವಧಕರ್ಮಸು ಪಠಿತತ್ವಾತ್ । ನೋಽಸ್ಮಾಕಂ ಯಷ್ಟ್ಟೄಣಾಂ ಗಿರಃ ಸ್ತುತಿಲಕ್ಷಣಾ ವಾಚಃ ಇಂದ್ರಃ ಕದಾ

**ಕಸ್ಮಿನ್ಕಾಲೇಽಂಗ ಕ್ಷಿಪ್ರಂ ಶುಶ್ರವತ್ । ಶ್ರೋಷ್ಯತೀತಿ ವಿತರ್ಕ್ಯತೇ । ಅತ್ರ ನಿರುಕ್ತಂ । ಕ್ಷುಂಪಮಹಿಚ್ಛತ್ರಕಂ ಭವತಿ ಯತ್ ಕ್ಷುಭ್ಯತೇ । ಕದಾ ಮರ್ತಮನಾರಾಧಯಂತಂ ಪಾದೇನ ಕ್ಷುಂಪಮಿವಾವಸ್ಫುರಿಷ್ಯತಿ । ಕದಾ ನಃ ಶ್ರೋಷ್ಯತಿ ಗಿರ ಇಂದ್ರೋಽಂಗ । ಅಂಗೇತಿ ಕ್ಷಿಪ್ರನಾಮ । ನಿ. ೫-೧೭ । ಇತಿ ॥ ಪದಾ । ಪಾದಶಬ್ದಸ್ಯ ಪದ್ದನ್ನಿತ್ಯಾದಿನಾ ಪದಾದೇಶಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಕ್ಷುಂಪಮಿವ । ಕ್ಷುಭ ಸಂಚಲನೇ । ಅಸ್ಮಾತ್ಕರ್ಮಣಿ ಘಞ್ । ಬಹುಲವಚನಾದ್ಧಾತೋರ್ನುಮಾಗಮಃ । ವರ್ಣವ್ಯಾಪತ್ತ್ಯಾ ಭಕಾರಸ್ಯ ಪಕಾರಃ । ಸ್ಫುರತ್ । ಸ್ಫುರ ಸಂಚಲನೇ । ಛಂದಸಿ ಲುಙ್ಲಙ್ಲಿಟ ಇತಿ ಲೃಡರ್ಥೇ ಲಙ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಶುಶ್ರವತ್ । ಶ್ರು ಶ್ರವಣೇ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ**

ಪ್ರತಿಪದಾರ್ಥ

**ಅರಾಧಸಂ**—(ಹವಿಸ್ಸಿನ ರೂಪದ) ಧನರಹಿತನಾದ (ಯಜ್ಞ ಕರ್ತನಲ್ಲದ) । **ಮರ್ತಂ**—ಮಾನವನನ್ನು । **ಇಂದ್ರಃ**—ಇಂದ್ರನು । **ಪದಾ**—ಕಾಲಿನಿಂದ । **ಕದಾ**—ಯಾವಾಗ । **ಕ್ಷುಂಪಮಿವ**—ಸುರಳಿಸುತ್ತಿಕೊಂಡಿರುವ । ಹಾವನ್ನು (ಸುಲಭವಾಗಿ) ಕೊಲ್ಲುವಂತೆ । **ಸ್ಫುರತ್** ಅದುಮಿ ಕೊಲ್ಲುತ್ತಾನೆ ?। **ನಃ**—(ಯಜ್ಞಮಾಡತಕ್ಕ)ನಮ್ಮ । **ಗಿರಃ**—ಸ್ತುತಿರೂಪಗಳಾದ ವಾಕ್ಕುಗಳನ್ನು । **ಕದಾ**—ಯಾವಾಗ । **ಅಂಗ**—ಜಾಗ್ರತೆಯಾಗಿ । **ಶುಶ್ರವತ್**—ಕೇಳುತ್ತಾನೆ ? ।

ಭಾವಾರ್ಥ

ಸುರಳಿಸುತ್ತಿಕೊಂಡಿರುವ ಹಾವನ್ನು ಅನಾಯಾಸವಾಗಿ ಕೊಲ್ಲುವಂತೆ ಯಜ್ಞಮಾಡಿ ಹವಿಸ್ಸನ್ನರ್ಪಿಸದ ಮಾನವನನ್ನು ಇಂದ್ರನು ಯಾವಾಗ ಅದುಮಿ ಕೊಲ್ಲುತ್ತಾನೆ ? ಯಜ್ಞಕರ್ತರಾದ ನಮ್ಮ ಸ್ತುತಿರೂಪಗಳಾದ ವಾಕ್ಕುಗಳನ್ನು ಅವನು ಯಾವಾಗ ಕೇಳುತ್ತಾನೆ ?

## English Translation

When will Indra trample, with his foot unsacrificing mortal like a coiled up snake ? when will Indra hear our praises ?

ವಿಶೇಷವಿಷಯಗಳು

**ಅರಾಧಸಂ– ಹವಿರ್ಲಕ್ಷಣೇನ ರಾಧಸಾ ಧನೇನ ರಹಿತಂ ಅಯಷ್ಟಾರಮಿತ್ಯರ್ಥಃ ।** ಹವಿರ್ಲಕ್ಷಣೋಪೇತವಾದ ಧನದಿಂದ ರಹಿತನಾದವನು ಎಂದರೆ ಯಜ್ಞಮಾಡದಿರುವವನು. ಸ್ಕಂದಸ್ವಾಮಿಯು—**ರಾಧ ಇತಿ ಧನನಾಮ । ಅಧನಂ । ದಾರಿದ್ರ್ಯಾತ್ ಯಷ್ಟುಮಸಮರ್ಥಮಿತ್ಯರ್ಥಃ ।** ರಾಧವೆಂದರೆ ಧನವು, ಅರಾಧಸಂ ಎಂದರೆ ಧನವಿಲ್ಲದವನನ್ನು, ಅಥವಾ ಧನವಿಲ್ಲದೆ ದರಿದ್ರನಾಗಿರುವುದರಿಂದ ಯಜ್ಞಮಾಡಲಸಮರ್ಥನಾದವನನ್ನು ಎಂದು ಅರ್ಥವಿವರಣೆ ಮಾಡಿರುವರು. ಈ ವಿವರಣೆಯು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಭಾಷ್ಯಕಾರರ ವಿವರಣೆಯೇ ಸರಿಯಾಗಿರುವುದು.

**ಕ್ಷುಂಪಮಿವ**—**ಕ್ಷುಂಪಮಹಿಚ್ಛತ್ರಕಂ ಭವತಿ ।** (ನಿ. ೫-೧೬) ಮಂಡಲಾಕಾರವಾಗಿ ಸುತ್ತಿಕೊಂಡಿರುವ ಹಾವು.

**ಸ್ಫುರತ್**—**ಸ್ಫುರತಿರ್ವಧಕರ್ಮಾ । ಸ್ಫುರತಿ ಸ್ಫುಲತಿ** (ನಿ. ೨-೯) ಕೊಲ್ಲುವನು ಎಂದರ್ಥವು. ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿರುವರು—

**ಕದಾ ಮರ್ತಮನಾರಾಧಯಂತಂ ಪಾದೇನ ಕ್ಷುಂಪಮಿವಾವಸ್ಫುರಿಷ್ಯತಿ ಕದಾನ ಶೃಣೋತಿ ಚ ಗಿರ ಇಂದ್ರೋ ಅಂಗ । ಅಂಗೇತಿ ಕ್ಷಿಪ್ರನಾಮ । ಅಂಚಿತಮೇವಾಂಕಿತಂ ಭವತಿ ॥** (ನಿ. ೨-೧೬) ಎಂದರೆ— ನೆಲದ ಮೇಲೆ ಸುರಳಿಸುತ್ತಿಕೊಂಡು ಮಲಗಿರುವ ಹಾವನ್ನು ಕಾಲಿನಿಂದ ತುಳಿದು ಕೊಲ್ಲುವಂತೆ ಯಜ್ಞಾದಿಗಳಿಂದ ಇಂದ್ರನನ್ನು ಆರಾಧಿಸದಿರುವ ಮನುಷ್ಯನನ್ನು ಇಂದ್ರನು ಯಾವಾಗ ಕೊಲ್ಲುವನು ? ಮತ್ತು ನಮ್ಮ ಸ್ತೋತ್ರರೂಪವಾದವಾಕ್ಯಗಳನ್ನು ಯಾವಾಗ ಕೇಳುವನು ? ಅಂಗಶಬ್ದಕ್ಕೆ ಬೇಗನೆ ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಪದಾ**—ಪಾದಶಬ್ದಕ್ಕೆ ತೃತೀಯಾವಿಭಕ್ತಿ ಟಾ ಪರವಾಗಿರುವಾಗ **ಪದ್ದನ್ನೋಮಾಸ್‌ಹೃನ್ನಿಶಸನ್** ಎಂಬುದರಿಂದ ಪಾದಶಬ್ದಕ್ಕೆ ಪದಾದೇಶ. ಪದಾ ಎಂದು ರೂಪವಾಗುತ್ತದೆ. **ಊಡಿದಂಪದಾದಿ** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕ್ಷುಂಪಮಿವ**— ಕ್ಷುಭ ಸಂಚಲನೇ ಧಾತು. ಇದಕ್ಕೆ ಕರ್ಮಣಿಯಲ್ಲಿ ಘಞ್‌ಪ್ರತ್ಯಯ. ಘಞ್ ಪರವಾದಾಗ ಬಹುಲಗ್ರಹಣದಿಂದ ಧಾತುವಿಗೆ ನಿಮಿತ್ತವಿಲ್ಲದಿದ್ದರೂ ನುಮಾಗಮ ಬರುತ್ತದೆ. ವ್ಯತ್ಯಯದಿಂದ ಧಾತುವಿನ ಭಕಾರಕ್ಕೆ ಪಕಾರಾದೇಶ. ಕ್ಷುಂಪಂ ಎಂದು ರೂಪವಾಗುತ್ತದೆ.

**ಸ್ಫುರತ್**—ಸ್ಫುರ ಸಂಚಲನೇ ಧಾತು. ಲೃಟಿನ (ಭವಿಷ್ಯತ್) ಅರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. **ತುದಾದಿಭ್ಯಃ ಶಃ** ಎಂಬುದರಿಂದ ಬಂದಿರುವ ಶವಿಕರಣವು **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ತಾಗುವುದರಿಂದ ಧಾತುವಿಗೆ **ಕ್ಙಿತಿಚ** ಸೂತ್ರದಿಂದ ಗುಣನಿಷೇಧ ಬರುತ್ತದೆ. **ಇತಶ್ಚ** ಸೂತ್ರದಿಂದ ಪ್ರತ್ಯಯದ ಇಕಾರಕ್ಕೆ ಲೋಪ. ಸ್ಫುರತ್ ಎಂದು ರೂಪವಾಗುತ್ತದೆ. **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ಶುಶ್ರವತ್**—ಶ್ರು ಶ್ರವಣೇ ಧಾತು. ಲೇಟಿನಲ್ಲಿ ಪ್ರಥಮಪುರುಷ ಏಕವಚನದಲ್ಲಿ ತಿ ಪ್ರತ್ಯಯ. **ಇತಶ್ಚ ಲೋಪಃ ಪರಸ್ಮೈಪದೇಷು** ಎಂಬುದರಿಂದ ಇಕಾರಕ್ಕೆ ಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ವಿಕರಣ ಬರುತ್ತದೆ. **ಲೇಟೋಽಡಾಟೌ** ಸೂತ್ರದಿಂದ ಪ್ರತ್ಯಯಕ್ಕೆ ಅಡಾಗಮ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ಗುಣ. ಅವಾದೇಶ. ಶುಶ್ರವತ್ ಎಂದು ರೂಪವಾಗುತ್ತದೆ. ॥ ೮ ॥

---

ಸಂಹಿತಾಪಾಠಃ

ಯಶ್ಚಿದ್ಧಿ ತ್ವಾ ಬಹುಭ್ಯ ಆ ಸುತಾವಾ ಆವಿವಾಸತಿ।
ಉಗ್ರಂ ತತ್ಪತ್ಯತೇ ಶವ ಇಂದ್ರೋ ಅಂಗ ॥ ೯ ॥

॥ ಪದಪಾಠಃ ॥

ಯಃ । ಚಿತ್ । ಹಿ । ತ್ವಾ । ಬಹುಽಭ್ಯಃ । ಆ । ಸುತಽವಾನ್ । ಆಽವಿವಾಸತಿ।
ಉಗ್ರಂ । ತತ್ । ಪತ್ಯತೇ । ಶವಃ । ಇಂದ್ರಃ । ಅಂಗ ॥ ೯ ॥

ಸಾಯಣಭಾಷ್ಯ

ಬಹುಭ್ಯೋ ಮನುಷ್ಯೇಭ್ಯಃ ಸಕಾಶಾದ್ಯಶ್ಚಿದ್ಧಿ ಯ ಏವ ಖಲು ಯಜಮಾನಃ ಸುತಾವಾನ್ ಅಭಿಷುತಸೋಮಯುಕ್ತಃ ಸನ್ ಹೇ ಇಂದ್ರ ತ್ವಾ ತ್ವಾಮಾವಿವಾಸತಿ ಪರಿಚರತಿ। ವಿವಾಸತಿಃ ಪರಿಚರಣ-ಕರ್ಮಾ। ತತ್ತಸ್ಮೈ ಯಜಮಾನಾಯ ಯದುಗ್ರಮುದ್ಗೂರ್ಣಂ ಶವೋ ಬಲಮಿಂದ್ರೋಽಂಗ ಕ್ಷಿಪ್ರಂ ಪತ್ಯತೇ। ಪಾತಯತಿ। ಪ್ರಾಪಯತಿ॥ ತತ್। ಸುಪಾಂ ಸುಲುಗಿತಿ ಚತುರ್ಥ್ಯಾ ಲುಕ್ । ಪತ್ಯತೇ। ಪತ್ಲೃ ಗತೌ। ಅಸ್ಮಾದಂತರ್ಭಾವಿತಣ್ಯರ್ಥಾದ್ವ್ಯತ್ಯಯೇನ ಶ್ಯನ್ ॥ ೯ ॥

॥ ಪ್ರತಿಪದಾರ್ಥ ॥

ಬಹುಭ್ಯಃ— ಬಹುಸಂಖ್ಯಾತರಾದ ಮಾನವರ ಪೈಕಿ । ಯಶ್ಚಿದ್ಧಿ—ಯಾವ ಯಜಮಾನನು । **ಸುತ್ವಾವಾನ್**—ಸೋಮರಸವನ್ನು ಹಿಂಡಿ । **ತ್ವಾ**—ನಿನ್ನನ್ನು । **ಆವಿವಾಸತಿ**—ಉಪಚರಿಸುತ್ತಾನೋ । **ತತ್**—ಅವನಿಗೆ । **ಉಗ್ರಂ**—ದುರ್ದಮ್ಯವಾದ (ಭಯಂಕರವಾದ, ಬಹಳ ಹೆಚ್ಚಾದ) । **ಶವಃ**—ಬಲವನ್ನು । **ಇಂದ್ರಃ**—ಇಂದ್ರನು । **ಪತ್ಯತೇ**—ಹೊಂದಿಸುತ್ತಾನೆ. ।

ಭಾವಾರ್ಥ

ಅನೇಕ ಮಾನವರ ಪೈಕಿ ಯಾವ ಮಾನವನು ಯಜ್ಞದಲ್ಲಿ ಸೋಮರಸವನ್ನು ಹಿಂಡಿ ಇಂದ್ರನನ್ನು ಉಪಚರಿಸುತ್ತಾನೆಯೋ ಅಂತಹವನಿಗೆ ಇಂದ್ರನು ದುರ್ದಮ್ಯವಾದ (ಭಯಂಕರವಾದ) ಬಲವನ್ನುಂಟುಮಾಡುತ್ತಾನೆ.

English Translation

Indra grants formidable strength to him who worships him with prepared Soma-libations.

॥ ವಿಶೇಷವಿಷಯಗಳು ॥

**ಆವಿವಾಸತಿ**— **ಪರಿಚರತಿ । ವಿವಾಸತಿಃ ಪರಿಚರಣಕರ್ಮಾ ।** (ನಿ. ೩-೧೩) ಉಪಚರಿಸುತ್ತಾನೆ, ಸೇವೆ ಮಾಡುತ್ತಾನೆ.

**ಉಗ್ರಂ**— **ಉದ್ಗೂರ್ಣಂ ।** ಭಯಂಕರವಾದ ಎಂದರೆ ಅತಿ ಹೆಚ್ಚಾದ.

**ಪತ್ಯತೇ**— **ಪತ್ಲೃಗತ್ ಪಾತಯತಿ ಪ್ರಾಪಯತಿ ।** ಹೊಂದಿಸುತ್ತಾನೆ ಎಂದರೆ ಕೊಡುತ್ತಾನೆ.

ವ್ಯಾಕರಣಪ್ರಕ್ರಿಯಾ

**ತ್ವಾ**— ಯುಷ್ಮಚ್ಛಬ್ದಕ್ಕೆ ದ್ವಿತೀಯಾ ಏಕವಚನದಲ್ಲಿ **ತ್ವಾಮೌ ದ್ವಿತೀಯಾಯಾಃ** (೮-೧-೨೩) ಎಂಬುದರಿಂದ ವಿಭಕ್ತ್ಯಂತಕ್ಕೆ ತ್ವಾ ಎಂಬ ಅನುದಾತ್ತವಾದ ಆದೇಶ.

**ಸುತಾವಾನ್**— **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ಅಕಾರಪರದಲ್ಲಿರುವುದರಿಂದ ನಕಾರಕ್ಕೆ ರುತ್ವ. **ಆತೋಽಟಿ ನಿತ್ಯಂ** (ಪಾ. ಸೂ. ೮-೩-೩) ಸೂತ್ರದಿಂದ ರುವಿನ ಪೂರ್ವದ ಆಕಾರಕ್ಕೆ ಅನುನಾಸಿಕತ್ವವು ಬರುತ್ತದೆ.

**ಆವಿವಾಸತಿ**— ವಿವಾಸ ಉಪಸೇವಾಯಾಂ ಧಾತು. ಲಟ್ ಪ್ರಥಮಪುರುಷ ಏಕವಚನ ರೂಪ. ಯಃ ಎಂದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತ ಪರದಲ್ಲಿರುವ ಲಸಾರ್ವಧಾತುಕವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತ. ಧಾತುಸ್ವರ ಉಳಿಯುತ್ತದೆ.

**ತತ್**— ತದ್ ಶಬ್ದಕ್ಕೆ ಪಂಚಮೀ ಙಸಿ ಪರವಾದಾಗ **ಸುಪಾಂ ಸುಲುಕ್** ಸೂತ್ರದಿಂದ ವಿಭಕ್ತಿಗೆ ಲುಕ್ ಬರುತ್ತದೆ.

**ಪತ್ಯತೇ**— ಪತ್ಲೃ ಗತೌ ಧಾತು. ಧಾತ್ವರ್ಥದಲ್ಲಿ ಣಿಜರ್ಥವೂ ಸೇರಿರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿನ ಮೇಲೆ ಲಟ್ ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. **ಟಿತ ಆತ್ಮನೇಪದಾನಾಂ** ಸೂತ್ರದಿಂದ ಅದಕ್ಕೆ ಏತ್ವ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶ್ಯನ್ ವಿಕರಣ ಪತ್ಯತೇ ಎಂದು ರೂಪವಾಗುತ್ತದೆ. **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತವಾಗುತ್ತದೆ.

॥ ಸಂಹಿತಾಪಾಠಃ ॥

ಸ್ವಾದೋರಿತ್ಥಾ ವಿಷೂವತೋ ಮಧ್ವಃ ಪಿಬಂತಿ ಗೌರ್ಯಃ।
ಯಾ ಇಂದ್ರೇಣ ಸಯಾವರೀರ್ವೃಷ್ಣಾ ಮದಂತಿ ಶೋಭಸೇ
ವಸ್ವೀರನು ಸ್ವರಾಜ್ಯಂ ॥೧೦॥

॥ ಪದಪಾಠಃ ॥

ಸ್ವಾದೋಃ । ಇತ್ಥಾ । ವಿಷುऽವತಃ । ಮಧ್ವಃ । ಪಿಬಂತಿ । ಗೌರ್ಯಃ ।
ಯಾಃ । ಇಂದ್ರೇಣ । ಸಽಯಾವರೀಃ । ವೃಷ್ಣಾ । ಮದಂತಿ । ಶೋಭಸೇ ।
ವಸ್ವೀಃ । ಅನು । ಸ್ವಽರಾಜ್ಯಂ ॥ ೧೦ ॥

ಸಾಯಣಭಾಷ್ಯಂ

ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇ ಸವನೇಽಚ್ಛಾವಾಕಸ್ಯ ಸ್ವಾಸಾದೋರಿತ್ಥಾ ವಿಷೂವತ ಇತಿ ವೈಕಲ್ಪಿಕಃ ಸ್ತೋತ್ರಿಯಸ್ತೃಚಃ । ಹೋತ್ರಕಾಣಾಮಿತಿ ಖಂಡೇ ಸೂತ್ರಿತಂ । ಯಃ ಸತ್ರಾಹಾ ವಿಚರ್ಷಣಿಃ ಸ್ವಾದೋ ರಿತ್ಥಾ ವಿಷೂವತಃ । ಆ. ೭-೪ ॥ ಪೃಷ್ಠ್ಯಸ್ಯ ಪಂಚಮೇಽಹನಿ ನಿಷ್ಕೇವಲ್ಯೇಽಸ್ಯಯಂ ತೃಚೋಽನುರೂಪಃ । ಸ್ತೋಮೋ ವರ್ಧಮಾನ ಇತಿ ಖಂಡೇ ಸೂತ್ರಿತಂ । ಸ್ವಾದೋರಿತ್ಥಾ ವಿಷೂವತ ಉಪ ನೋ ಹರಿಭಿಃ ಸುತಂ ।ಆ. ೭-೧೨ । ಇತಿ ॥

ಸ್ವಾದೋಃ ಸ್ವಾದುಭೂತಸ್ಯ ರಸಯುಕ್ತಸ್ಯೇತ್ಥಾ ವಿಷೂವತ ಇತ್ಥಮನೇನ ಪ್ರಕಾರೇಣ ಸರ್ವಯಜ್ಞೇಷು ವ್ಯಾಪ್ತಿಯುಕ್ತಸ್ಯ ಮಧ್ವೋ ಮಧುರರಸಸ್ಯ ಸೋಮಸ್ಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ಏವಂವಿಧಂ ಸೋಮಂ ಗೌರ್ಯೋ ಗೌರವರ್ಣಾ ಗಾವಃ ಪಿಬಂತಿ । ಯಾ ಗಾವಃ ಶೋಭಸೇ ಶೋಭಾರ್ಥಂ ವೃಷ್ಣಾ ಕಾಮಾಭಿವರ್ಷಕೇಣೇಂದ್ರೇಣ ಸಯಾವರೀಃ ಸಹ ಯಾಂತ್ಯೋ ಗಚ್ಛಂತ್ಯಃ ಸತ್ಯೋ ಮದಂತಿ ಹೃಷ್ಟಾ ಭವಂತಿ । ತಾ ಇಂದ್ರಪೀತಸ್ಯ ಸೋಮಸ್ಯ ಶೇಷಂ,ಪಿಬಂತೀತ್ಯರ್ಥಃ । ವಸ್ವೀಃ ಪಯಃಪ್ರದಾನೇನ ನಿವಾಸಕಾರಿಣ್ಯಸ್ತಾ ಗಾವಃ ಸ್ವರಾಜ್ಯಂ ಸ್ವಸ್ಯ ಸ್ವಕೀಯಸ್ಯೇಂದ್ರಸ್ಯ ಯದ್ರಾಜ್ಯಂ ರಾಜತ್ವಂ ತದನುಲಕ್ಷ್ಯಾವಸ್ಥಿತಾ ಇತಿ ಶೇಷಃ ।' ವಿಷೂವತಃ । ವಿಷ್ಲೃ ವ್ಯಾಪ್ತೌ । ಅಸ್ಮಾದೌಣಾದಿಕಃ ಕುಪ್ರತ್ಯಯಃ । ತತೋ ಮತುಪ್ । ಹ್ರಸ್ವನುಡ್ಭ್ಯಾಂ ಮತುಬಿತಿ

ಮತುಪ ಉದಾತ್ತತ್ವಂ। ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘಃ। ವ್ಯತ್ಯಯೇನ ಮತೋರ್ವತ್ವಂ ।ಮಧ್ವಃ। ಜಸಾದಿಷು ಛಂದಸಿ ವಾವಚನಮಿತಿ ಘೇರ್ಙಿತೀತಿ ಗುಣಾಭಾವೇ ಯಣಾದೇಶಃ। ಗೌರ್ಯಃ। ಷಿದ್ಗೌರಾದಿಭ್ಯಶ್ಚೇತಿ ಙೀಷ್। ಜಸಿ ಯಣಾದೇಶ ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ। ಸಯಾವರೀಃ ಯಾ ಪ್ರಾಪಣೇ। ಆತೋ ಮನಿನ್ನಿತಿ ವನಿಪ್। ವನೋರಚೇತಿ ಙೀಬ್ರೇಫೌ। ಮದಂತಿ। ಮದೀ ಹರ್ಷೇ। ಶ್ಯನಿ ಪ್ರಾಪ್ತೇ ವ್ಯತ್ಯಯೇನ ಶಪ್। ವಸ್ವೀಃ ವಸ ನಿವಾಸೇ। ಶೃಸ್ವೃಸ್ನಿಹೀತ್ಯಾದಿನಾ ವಸೇರುಪ್ರತ್ಯಯಃ। ಧಾನ್ಯೇ ನಿದಿತ್ಯನುವೃತ್ತೇರಾದ್ಯುದಾತ್ತತ್ವಂ। ವೋತೋ ಗುಣವಚನಾದಿತ್ಯತ್ರ ಗುಣವಚನಾನ್ಙೀಬಾದ್ಯುದಾತ್ತಾರ್ಥಂ । ಕಾ. ೪-೧-೪೪-೧। ಇತಿ ವಚನಾದ್ವಸುಶಬ್ದಾನ್ಙೀಪಿ ಯಣಾದೇಶಃ। ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ। ಸ್ವಸ್ಯ ರಾಜ್ಯಂ ಸ್ವರಾಜ್ಯಂ। ಅಕರ್ಮಧಾರಯೇ ರಾಜ್ಯಂ । ಪಾ. ೬-೨-೧೩೦। ಇತ್ಯುತ್ತರಪದಾದ್ಯುದಾತ್ತತ್ವಂ ॥ ೬ ॥

ಪ್ರತಿಪದಾರ್ಥ

**ಸ್ವಾದೋಃ**—(ಸಿಹಿ) ರಸಭರಿತವಾಗಿಯೂ। **ಇತ್ಥಾ**—ಈ ರೀತಿ । **ವಿಷೂವತಃ**—(ಎಲ್ಲಾ ಯಜ್ಞವಲ್ಲಿಯೂ (ವ್ಯಾಪಿಸಿರುವ, ಸಿದ್ಧಪಡಿಸುವ)। **ಮಧ್ವಃ**—ಮಧುರವಾದ ಸೋಮರಸವನ್ನು । **ಗೌರ್ಯಃ**—ಶ್ವೇತವರ್ಣದ ಗೋವುಗಳು। **ಪಿಬಂತಿ**—ಕುಡಿಯುತ್ತವೆ.। **ಯಾಃ**—ಯಾವ ಅದೇ ಗೋವುಗಳು । **ಶೋಭಸೇ**—(ತಮ್ಮ) ಕಾಂತಿಗಾಗಿ । **ವೃಷ್ಣಾ**—(ಇಷ್ಟಾರ್ಥಗಳನ್ನು) ಸುರಿಸತಕ್ಕ । **ಇಂದ್ರೇಣ ಸಯಾವರೀಃ**—ಇಂದ್ರನೊಡನೆ (ಹಿಂಬಾಲಿಸಿ) ಹೋಗುತ್ತ । **ಮದಂತಿ**—ತೃಪ್ತಿಯನ್ನು ಹೊಂದುತ್ತವೆ. (ಅವನು ಕುಡಿದ ಶೇಷವನ್ನು ಕುಡಿದು ತೃಪ್ತಿಹೊಂದುತ್ತವೆ.) । **ವಸ್ವೀಃ**—(ಹಾಲು ಕೊಡುವುದರಿಂದ) ತಮ್ಮ ಕೊಟ್ಟಿಗೆಗಳಲ್ಲಿ ವಾಸಮಾಡುತ್ತ **ಸ್ವರಾಜ್ಯಂ ಅನು**—(ತಮ್ಮವನಾದ ಇಂದ್ರನ) ಪ್ರಭುತ್ವವನ್ನು (ಗಮನಿಸುತ್ತಾ ನಿಂತಿವೆ.)।

॥ ಭಾವಾರ್ಥ ॥

ರಸಭರಿತವಾಗಿಯೂ, ಒಂದೇರೀತಿ ಎಲ್ಲಾ ಯಜ್ಞಗಳಲ್ಲಿಯೂ ವ್ಯಾಪಿಸಿರುವ (ಸಿದ್ಧಪಡಿಸುವ) ಮಧುರವಾದ ಸೋಮರಸವನ್ನು ಶ್ವೇತವರ್ಣದ ಗೋವುಗಳು ಕುಡಿಯುತ್ತವೆ. ತಮಗೆ ಕಾಂತಿ ಬರುವುದಕ್ಕಾಗಿ ಅವುಗಳ ಇಷ್ಟಾರ್ಥಗಳನ್ನು ನೆರವೇರಿಸುವ ಇಂದ್ರನನ್ನೇ ಹಿಂಬಾಲಿಸಿ ಅವನು ಕುಡಿದುಳಿದ ಸೋಮರಸವನ್ನು ಕುಡಿದು ತೃಪ್ತಿಯನ್ನು ಹೊಂದುತ್ತವೆ. ಮತ್ತು ಹಾಲು ಕೊಡುತ್ತಾ ತಮ್ಮ ಕೊಟ್ಟಿಗೆಗಳಲ್ಲಿ ವಾಸಮಾಡಿಕೊಂಡು ತಮ್ಮ ಯಜಮಾನನಾದ ಇಂದ್ರನ ಪ್ರಭುತ್ವವನ್ನು ಗಮನಿಸುತ್ತಾ ನಿಂತಿವೆ.

## English Translation

The white cows drink of the sweet Soma-juice prepared in every sacrifice; the cows that go with bountiful Indra appear beautiful and are beneficient in accordance with his sovereignty

॥ ವಿಶೇಷವಿಷಯಗಳು ॥

ಇಪ್ಪತ್ತುನಾಲ್ಕುದಿನ ಮಾಡುವ ಯಾಗದ ಕೊನೆಯದಿನ ಮಾಧ್ಯಂದಿನಸವನದಲ್ಲಿ ಅಚ್ಛಾವಾಕನೆಂಬ ಋತ್ವಿಜನು **ಸಾದೋರಿತ್ಥಾ ವಿಷೂವತಃ** ಎಂಬ ತೃಚವನ್ನು (ಮೂರು ಋಕ್ಕುಗಳನ್ನು) ವೈಕಲ್ಪಿಕವಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ **ಹೋತ್ರಕಾಣಾಂ** ಎಂಬ ಖಂಡದಲ್ಲಿ **ಯಃ ಸತ್ರಾಹಾ ವಿಚರ್ಷಣಿಃ ಸ್ವಾದೋರಿತ್ಥಾ ವಿಷೂವತಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ.೭-೪) ಮತ್ತು ಪೃಷ್ಠ್ಯಯಾಗದ ಐದನೆಯ ದಿವಸದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕ್ಕಾಗಿ ಈ ತೃಚದ (ಮೂರು ಋಕ್ಕುಗಳ) ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಸ್ತೋಮೇ ವರ್ಧಮಾನೇ** ಎಂಬ ಖಂಡದ **ಸ್ವಾದೋರಿತ್ಥಾ ವಿಷೂವತ ಉಪ ನೋ ಹರಿಭಿಃ ಸುತಂ** ಎಂಬ ಸೂತ್ರದಲ್ಲಿ ವಿವೃತವಾಗಿರುವುದು. ( ಆ.-೭-೧೨)

**ವಿಷೂವತಃ—ವಿಷ್ಲೃ ವ್ಯಾಪ್ತೌ । ಸರ್ವಯಜ್ಞೇಷು ವ್ಯಾಪ್ತಿಯುಕ್ತಸ್ಯ ।** ಎಲ್ಲಾ ಯಜ್ಞಗಳಲ್ಲಿಯೂ ವ್ಯಾಪಿಸಿರುವ ಎಂದರೆ ಎಲ್ಲಾ ಯಜ್ಞಗಳಲ್ಲಿಯೂ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸಿದ್ಧಪಡಿಸುವ

**ಮಧ್ವಃ**—ಸಿಹಿಯಾದ ಸೋಮರಸದ ಭಾಗವನ್ನು. ಇಲ್ಲಿ ಸೋಮಸ್ಯ ಎಂಬ ಶಬ್ದವಿಲ್ಲದಿದ್ದರೂ ಮಧ್ವಃ ಎಂಬ ಶಬ್ದಕ್ಕೇ ರುಚಿಕರವಾದ ಸೋಮರಸದ ಎಂಬರ್ಥವನ್ನು ಹೇಳಬೇಕು. ಸೋಮರಸವೆಂಬರ್ಥವನ್ನು ಸೂಚಿಸುವುದಕ್ಕೆ ಮಧುಶಬ್ದವನ್ನು ಮಾತ್ರ ಉಪಯೋಗಿಸುವುದು ಋಗ್ವೇದದಲ್ಲಿ ರೂಢಿಯಾಗಿರುವುದು.

**ಗೌರ್ಯಃ—ಗೌರವರ್ಣಾ ಗಾವಃ ।** ಬೆಳ್ಳಗಿರುವ ಹಸುಗಳು. ಅಥವಾ ಶುಭ್ರವರ್ಣದ ಗೋವುಗಳು.

**ಸಯೋವರೀಃ—ಸಹಗಚ್ಛಂತ್ಯಃ ।** ಇಂದ್ರನೊಡನೆ ಹೋಗುವ, ಇಂದ್ರನೊಡನಿರುವ.

**ವೃಷ್ಣಾ—ಕಾಮಾಭಿವರ್ಷಕೇಣ ।** ಅಭೀಷ್ಟಾರ್ಥಗಳನ್ನು ಸುರಿಸುವ ಇಂದ್ರನಿಂದ.

**ವಸ್ವೀಃ—ವಸ ನಿವಾಸೇ ।** ವಾಸಮಾಡುತ್ತಿರುವ ಎಂದರೆ ಕೊಟ್ಟಿಗೆಗಳಲ್ಲಿ ಇರುವ ಗೋವುಗಳು. **ಪಯಃಪ್ರದಾನೇನ ನಿವಾಸಕಾರಿಣ್ಯಃ** —ಹಾಲನ್ನು ಕೊಡುವುದರಿಂದ ವಾಸಮಾಡುವುದಕ್ಕೆ ಅನುಕೂಲವನ್ನು ಉಂಟುಮಾಡುವುವು. ಆದುದರಿಂದ ಗೋವುಗಳಿಗೆ ವಸ್ವೀಃ ಎಂದು ಹೆಸರು.

**ಸ್ವರಾಜ್ಯಂ**— ಇಲ್ಲಿ ಸ್ವರಾಜ್ಯವೆಂದರೆ ಏನೆಂಬುದನ್ನು ಭಾಷ್ಯಕಾರರು ಸ್ಪಷ್ಟವಾಗಿ ವಿವರಿಸಿಲ್ಲ. ಹಾಲನ್ನು ಕೊಡುವ ಹಸುಗಳು ನಿವಾಸಸ್ಥಾನಕ್ಕೆ ಅನುಕೂಲವನ್ನುಂಟುಮಾಡುವುವು—These cows, by giving milk are the means of providing habitation—ಎಂದು ಅರ್ಥವಿವರಣೆ ಮಾಡಿರುವರು. ಇಂದ್ರನ ಆಧಿಪತ್ಯದಲ್ಲಿ ಹಾಲನ್ನು ಕೊಡುವ ಗೋವುಗಳು ಯಥೇಚ್ಛವಾಗಿರುವುದರಿಂದ ಜನಗಳಿಗೆ ವಾಸಮಾಡಲು ಅನುಕೂಲವಾಗಿರುವುದು. ಇಂತಹ ಸಂಪತ್ಸಮೃದ್ಧಿಯಾದ ಸ್ವರಾಜ್ಯವು ಇಂದ್ರನ ಪೋಷಣೆಯಲ್ಲಿರುವುದು ಎಂಬ ಅಭಿಪ್ರಾಯವಿರಬಹುದು. ಈ ಋಕ್ಕಿನ ಮತ್ತು ಮುಂದಿನ ಎರಡು ಋಕ್ಕುಗಳ ಕೊನೆಯಲ್ಲಿ **ವಸ್ವೀರನು ಸ್ವರಾಜ್ಯಂ** ಎಂಬ ಶಬ್ದಗಳು ಪುನಃ ಪುನಃ ಪಠಿತವಾಗಿವೆ. ಈ ಶಬ್ದಗಳ ಪ್ರಯೋಗದಲ್ಲಿ ಋಷಿಯ ಆಶಯ (ಅಭಿಪ್ರಾಯ) ವೇನೆಂಬುದು ಸ್ಪಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ವಿಷೂವತಃ** ವಿಷ್ಲೃ ವ್ಯಾಪ್ತೌ ಧಾತು. ಇದಕ್ಕೆ ಉಣಾದಿ ಕುಪ್ರತ್ಯಯ. ಕಿತ್ತಾದುದರಿಂದ ಲಘೂಪಧ ಗುಣ ಬರುವುದಿಲ್ಲ. ವಿಷುಶಬ್ದವಾಗುತ್ತದೆ. ವಿಷುಃ ಅಸ್ಯ ಅಸ್ತಿ ಇತಿ ವಿಷೂವತ್. **ತದಸ್ಯಾಸ್ತ್ಯಸ್ಮಿನ್** ಸೂತ್ರದಿಂದ ಮತುಪ್. ವ್ಯತ್ಯಯದಿಂದ ನಿಮಿತ್ತವಿಲ್ಲದಿದ್ದರೂ ಮತುಪಿನ ಮಕಾರಕ್ಕೆ ವಕಾರಾದೇಶ. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಹ್ರಸ್ವದ ಪರದಲ್ಲಿರುವುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ಮತುಪಿನ ಪೂರ್ವಕ್ಕೆ ದೀರ್ಘ ಬರುತ್ತದೆ. ಷಷ್ಠೀ ಏಕವಚನದಲ್ಲಿ **ವಿಷೂವತಃ** ಎಂದು ರೂಪವಾಗುತ್ತದೆ.

**ಮಧ್ವಃ**—ಮಧು+ಙಸ್ ಎಂದು ಷಷ್ಠೀ ಏಕವಚನ ಪರದಲ್ಲಿರುವಾಗ **ಜಸಾದಿಷು ಛಂದಸಿ ವಾ ವಚನಮ್** ಎಂಬ ವಚನದಿಂದ **ಘೇರ್ಙಿತಿ** ಸೂತ್ರದಿಂದ ಗುಣ ಬಾರದಿರುವುದರಿಂದ **ಇಕೋ ಯಣಚಿ** ಸೂತ್ರದಿಂದ ಯಣಾದೇಶ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗಗಳು ಬಂದಾಗ ಮಧ್ವಃ ಎಂದು ರೂಪವಾಗುತ್ತದೆ. **ಕ್ರಿಯಾಗ್ರಹಣಂ ಕರ್ತವ್ಯಂ** ಎಂದು ಭಾಷ್ಯದಲ್ಲಿ ಹೇಳಿರುವುದರಿಂದ ದಾ ಧಾತು ಇಲ್ಲದಿದ್ದರೂ ಇಲ್ಲಿ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬರುತ್ತದೆ.

**ಪಿಬಂತಿ**—ಪಾ ಪಾನೇ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ **ಪಾಘ್ರಾಧ್ಮಾಸ್ಥಾ** ಸೂತ್ರದಿಂದ ಪಿಬಾದೇಶ. ಝಿಗೆ ಅಂತಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ.

**ಗೌರ್ಯಃ**—**ಷಿದ್ಗೌರಾದಿಭ್ಯಶ್ಚ** (ಪಾ.ಸೂ. ೪-೧-೪೧) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಷ್ ಪ್ರತ್ಯಯ **ಯಸ್ಯೇತಿ ಚ** ಸೂತ್ರದಿಂದ ಅಕಾರಲೋಪ. ಗೌರೀ+ಜಸ್ ಎಂದಿರುವಾಗ **ದೀರ್ಘಾಜ್ಜಸಿ ಚ** ಎಂಬುದರಿಂದ ಪೂರ್ವಸವರ್ಣದೀರ್ಘವು ನಿಷಿದ್ಧವಾಗುವುದರಿಂದ ಯಣಾದೇಶ. ಆಗ ಉದಾತ್ತವಾದ ಈಕಾರಕ್ಕೆ ಯಣಾದೇಶ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** ಎಂಬುದರಿಂದ ಪರದಲ್ಲಿರುವ ಅನುದಾತ್ತವಾದ ವಿಭಕ್ತಿಯ ಅಕಾರವು ಸ್ವರಿತವಾಗುತ್ತದೆ.

**ಸಯಾವರೀಃ**—ಯಾ ಪ್ರಾಪಣೇ ಧಾತು. **ಆತೋ ಮನಿನ್** (ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ. ಸ್ತ್ರೀತ್ವದಲ್ಲಿ **ವನೋರ ಚ** ಎಂಬುದರಿಂದ ಙೀಪ್ ಪ್ರತ್ಯಯ. ನಕಾರಕ್ಕೆ ರೇಫಾದೇಶ. ಸಹ ಯಾಂತ್ಯಃ ಸಯಾವರ್ಯಃ. ಜಸಿನಲ್ಲಿ **ಸುಪಾಂ ಸುಲುಕ್** ಸೂತ್ರದಿಂದ ಪೂರ್ವಸವರ್ಣದೀರ್ಘ. ವನಿಪ್ ಪಿತ್ತಾದುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮದಂತಿ**—ಮದೀ ಹರ್ಷೇ ಧಾತು ದಿವಾದಿ. ಲಟ್ ಪ್ರಥಮಪುರುಷ ಬಹುವಚನ ಪರವಾದಾಗ **ವ್ಯತ್ಯಯೋ ಬಹುಲಂ** ಎಂಬುದರಿಂದ ಶ್ಯನಿಗೆ ಶಪ್ ಬರುತ್ತದೆ. ಯಾಃ ಎಂದು ಹಿಂದೆ ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಶೋಭಸೇ**—ಶುಭ ದೀಪ್ತೌ ಧಾತು. ತುಮುನರ್ಥದಲ್ಲಿ **ತುಮರ್ಥೇ ಸೇಸೇನಸೇ—**(ಪಾ. ೩-೪-೯) ಎಂಬುದರಿಂದ ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ವಸ್ವೀಃ**—ವಸ ನಿವಾಸೇ ಧಾತು. **ಶೃಸ್ವೃಸ್ನಿಹಿ** (ಉ. ಸೂ. ೧–೧೦) ಎಂಬುದರಿಂದ ಉ ಪ್ರತ್ಯಯ. **ಧಾನ್ಯೇನಿತ್** ಎಂಬುದರಿಂದ ನಿತ್ ಎಂದು ಅನುವೃತ್ತವಾಗುತ್ತದೆ. ಅದುದರಿಂದ ವಸುಶಬ್ದವು ಆದ್ಯುದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ **ವೋತೋ ಗುಣವಚನಾತ್** ಎಂಬಲ್ಲಿ (ಗುಣವಚನದ ಮೇಲೆ ಜೀಪ್ ಆದ್ಯುದಾತ್ತವಾಗಲು ಹೇಳಬೇಕು) **ಗುಣವಚನಾತ್ ಜೀಪ್ ಆದ್ಯುದಾತ್ತಾರ್ಥಮ್** (ಕಾ. ೪–೧–೪೪–೧) ಎಂಬ ವಚನದಿಂದ ಜೀಪ್ ಬಂದು ಆದ್ಯುದಾತ್ತವಾಗುತ್ತದೆ. ವಸ್ವೀ+ಜಸ್ ಎಂದಿರುವಾಗ **ವಾಛಂದಸಿ** ಎಂಬುದರಿಂದ ಪೂರ್ವಸವರ್ಣ ಬರುತ್ತದೆ.

**ಸ್ವರಾಜ್ಯಮ್**—ಸ್ವಸ್ಯ ರಾಜ್ಯಂ ಸ್ವರಾಜ್ಯಂ. **ಅಕರ್ಮಧಾರಯೇ ರಾಜ್ಯಂ** (ಪಾ. ಸೂ. ೬-೨-೧೩೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

ತಾ ಅಸ್ಯ ಪೃಶನಾಯುವಃ ಸೋಮಂ ಶ್ರೀಣಂತಿ ಪೃಶ್ನಯಃ।
ಪ್ರಿಯಾ ಇಂದ್ರಸ್ಯ ಧೇನವೋ ವಜ್ರಂ ಹಿನ್ವಂತಿ ಸಾಯಕಂ
ವಸ್ವೀರನು ಸ್ವರಾಜ್ಯಂ. ॥ ೧೧ ॥

॥ ಪದಪಾಠಃ ॥

ತಾಃ । ಅಸ್ಯ । ಪೃಶನಽಯುವಃ । ಸೋಮಂ । ಶ್ರೀಣಂತಿ । ಪೃಶ್ನಯಃ ।
ಪ್ರಿಯಾಃ । ಇಂದ್ರಸ್ಯ । ಧೇನವಃ । ವಜ್ರಂ । ಹಿನ್ವಂತಿ । ಸಾಯಕಂ । ವಸ್ವೀಃ ।
ಅನು । ಸ್ವಽರಾಜ್ಯಂ ॥ ೧೧ ॥

॥ ಸಾಯಣಭಾಷ್ಯಂ ॥

ತಾಃ ಪೂರ್ವೋಕ್ತಾ ಅಸ್ಯೇಂದ್ರಸ್ಯ ಪೃಶನಾಯುವಃ ಸ್ಪರ್ಶನಕಾಮಾಃ ಪೃಶ್ನಯೋ ನಾನಾವರ್ಣಾ ಗಾವ ಇಂದ್ರೇಣ ಪಾತವ್ಯಂ ಸೋಮಂ ಪಯಸಾ ಶ್ರೀಣಂತಿ । ಮಿಶ್ರೀಕುರ್ವಂತಿ । ಇಂದ್ರಸ್ಯ ಪ್ರಿಯಾಃ ಪ್ರೀತಿಹೇತುಭೂತಾಸ್ತಾ ಧೇನವಃ ಸಾಯಕಂ ಶತ್ರೂಣಾಮಂತಕಾರಕಂ ವಜ್ರಮಾಯುಧಂ ಹಿನ್ವಂತಿ ಶತ್ರುಷು ಪ್ರೇರಯಂತಿ । ಇಂದ್ರೋ ಯಥಾ ಶತ್ರುಷು ವಜ್ರಂ ಪ್ರೇರಯತಿ ತಥೇಂದ್ರಸ್ಯ ಮದಮುತ್ಪಾದಯಂತೀತ್ಯರ್ಥಃ । ಅನ್ಯತ್ಪೂರ್ವವತ್ ॥ ಹಿನ್ವಂತಿ । ಹಿವಿಃ ಪ್ರೀಣನಾರ್ಥಃ । ಇದಿತ್ವಾನ್ನುಮ್ । ಸಾಯಕಂ ಷೋ ಅಂತಕರ್ಮಣಿ । ಣ್ವುಲ್ಯಾತ್ಸ್ಯೋ ಯುಗಾಗಮಃ ॥ ೧೧ ॥

॥ ಪ್ರತಿಪದಾರ್ಥ ॥

**ಅಸ್ಯ**—ಇಂದ್ರನ । **ಪೃಶನಾಯುವಃ**—ಸ್ಪರ್ಶಕ್ಕೆ ಆಸೆಪಡುವುವೂ । **ಪೃಶ್ನಯಃ**— ನಾನಾ ಬಣ್ಣವುಳ್ಳವೂ ಆದ । **ತಾಃ**— ಆ ಗೋವುಗಳು । **ಸೋಮಂ**— ( ಇಂದ್ರನು ಕುಡಿಯತಕ್ಕ) ಸೋಮರಸವನ್ನು । **ಶ್ರೀಣಂತಿ** — ( ತಮ್ಮ ಹಾಲಿನೊಡನೆ ) ಮಿಶ್ರಮಾಡುತ್ತವೆ । **ಇಂದ್ರಸ್ಯ**—ಇಂದ್ರನಿಗೆ । **ಪ್ರಿಯಾಃ**—ಪ್ರೀತಿಪಾತ್ರವಾದ । **ಧೇನವಃ**—ಆ ಗೋವುಗಳು । **ಸಾಯಕಂ**—ಶತ್ರುಗಳನ್ನು ನಾಶಮಾಡುವ । **ವಜ್ರಂ**—ವಜ್ರಾಯುಧವನ್ನು । **ಹಿನ್ವಂತಿ**—(ಶತ್ರುಗಳ ಅಭಿಮುಖವಾಗಿ ಹೋಗುವಂತೆ) ಪ್ರೇರಿಸುತ್ತವೆ । **ವಸ್ವೀಃ**—ತಮ್ಮ ಕೊಟ್ಟಿಗೆಗಳಲ್ಲಿ ವಾಸಮಾಡಿಕೊಂಡು । **ಸ್ವರಾಜ್ಯಂ ಅನು**—(ಇಂದ್ರನ) ಪ್ರಭುತ್ವವನ್ನು ಗಮನಿಸುತ್ತಿವೆ ॥

ಭಾವಾರ್ಥ

ನಾನಾ ಬಣ್ಣವುಳ್ಳ ಆ ಗೋವುಗಳು ಇಂದ್ರನ ಹಿತಕರವಾದ ಸ್ಪರ್ಶಕ್ಕೆ ಆಸೆಪಟ್ಟು ಅವನು ಕುಡಿಯತಕ್ಕ ಸೋಮರಸವನ್ನು ತಮ್ಮ ಹಾಲಿನೊಡನೆ ಮಿಶ್ರಮಾಡುತ್ತವೆ. ಇಂದ್ರನಿಗೆ ಪ್ರೀತಿಪಾತ್ರಗಳಾದ ಆ ಗೋವುಗಳು ಶತ್ರುನಾಶಕಗಳಾದ ವಜ್ರಾಯುಧವನ್ನು ಶತ್ರುಗಳ ಅಭಿಮುಖವಾಗಿ ಹೋಗುವಂತೆ ಅವನನ್ನು ಪ್ರೇರಿಸುತ್ತವೆ. ತಮ್ಮ ಕೊಟ್ಟಿಗೆಗಳಲ್ಲಿ ವಾಸಮಾಡಿಕೊಂಡು ಇಂದ್ರನ ಪ್ರಭುತ್ವವನ್ನು ಗಮನಿಸುತ್ತಿವೆ.

English Translation

Those cows of Indra, many-coloured and affectionate mix the Soma juice with their milk; Indra's beloved cows direct his destructive thunderbolt against his enemies, and are benificient in accordance with his sovereignty.

॥ ವಿಶೇಷವಿಷಯಗಳು ॥

ಪೃಶನಾಯುವಃ--ಸ್ಪರ್ಶನಕಾಮಾಃ । ಇಂದ್ರಸ್ಯ ಸ್ಪರ್ಶನಮಿಚ್ಛಂತ್ಯಃ ಇಂದ್ರಸ್ಯ, ಪ್ರಿಯಾ ಇತ್ಯರ್ಥಃ । ಇಂದ್ರನ ಸ್ಪರ್ಶವನ್ನಪೇಕ್ಷಿಸುವುದರಿಂದ ಇಂದ್ರನಿಗೆ ಪ್ರೀತಿಕರವಾದ.

**ಶ್ರೀಣಂತಿ—ಮಿಶ್ರೀಕುರ್ವಂತಿ ।** ಬೆರಸುವವು.

**ಪೃಶ್ನಯಃ**—ನಾನಾವರ್ಣಗಳುಳ್ಳ

**ಹಿನ್ವಂತಿ—ಶತ್ರುಷು ಪ್ರೇರಯಂತಿ ।** ಶತ್ರುಗಳನ್ನು ಸಂಹಾರಮಾಡುವುದಕ್ಕಾಗಿ ಪ್ರೇರಿಸುವವು.

**ಸಾಯಕಂ**—ಶತ್ರುನಾಶಕವಾದ ಇಂದ್ರನ ವಜ್ರಾಯುಧವು.

ವ್ಯಾಕರಣಪ್ರಕ್ರಿಯಾ

**ಪೃಶನಾಯುವಃ**—ಪೃಶನಮಾತ್ಮನಃ ಇಚ್ಛತಿ ಎಂಬರ್ಥದಲ್ಲಿ **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಪೃಶನ ಶಬ್ದದ ಮೇಲೆ ಕ್ಯಚ್ ಪೃಶನಾಯತಿ ಇತಿ ಪೃಶನಾಯುಃ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತ. ಪ್ರಥಮಾಬಹುವಚನದಲ್ಲಿ **ಜಸಿಚ** ಎಂಬುದರಿಂದ ಗುಣ. ಅವಾದೇಶ. ಪೃಶನಾಯುವಃ ಎಂದು ರೂಪವಾಗುತ್ತದೆ.

**ಶ್ರೀಣಂತಿ**—ಶ್ರೀಞ್ ಪಾಕೇ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಬಂದಿರುವ ಶ್ನಾವಿಕರಣದ ಆಕಾರಕ್ಕೆ **ಶ್ನಾಭ್ಯಸ್ತಯೋರಾತಃ** ಎಂಬುದರಿಂದ **ಲೋಪ. ಅತಿ** ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಹಿನ್ವಂತಿ**—ಹಿವಿ ಪ್ರೀಣನೇ. ಧಾತು. ಭ್ವಾದಿ. **ಇದಿತೋ ನುಮ್‌ಧಾತೋಃ** ಎಂಬುದರಿಂದ ನುಮಾಗಮ ಬರುತ್ತದೆ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಹಿನ್ವಂತಿ ಎಂದು ರೂಪವಾಗುತ್ತದೆ. **ತಿಙಂತ** ನಿಘಾತಸ್ವರ ಬರುತ್ತದೆ.

**ಸಾಯಕಮ್**—ಷೋ ಅಂತಕರ್ಮಣಿ ಧಾತು. ದಿವಾದಿ. ಣ್ವುಲ್‌ಪ್ರತ್ಯಯ ಪರದಲ್ಲಿರುವಾಗ **ಆದೇಚ ಉಪದೇಶೇಽಶಿತಿ** ಎಂಬುದರಿಂದ ಧಾತುವಿಗೆ ಆತ್ವ. **ಆತೋ ಯುಕ್ ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಆಕಾರಕ್ಕೆ ಯುಕಾಗಮ. ಕಿತ್ತಾದುದರಿಂದ ಅಂತ್ಯಾವಯವವಾಗಿ ಬರುತ್ತದೆ. **ಯುವೋರನಾಕೌ** ಎಂಬುದರಿಂದ ಪ್ರತ್ಯಯಕ್ಕೆ ಅಕಾದೇಶ. ಸಾಯಕ ಎಂದು ಶಬ್ದವಾಗುತ್ತದೆ. **ಅತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ॥ ೧೧ ॥



ಸಂಹಿತಾಪಾಠಃ

ತಾ ಅಸ್ಯ ನಮಸಾ ಸಹಃ ಸಪರ್ಯಂತಿ ಪ್ರಚೇತಸಃ।
ವ್ರತಾನ್ಯಸ್ಯ ಸಶ್ಚಿರೇ ಪುರೂಣಿ ಪೂರ್ವಚಿತ್ತಯೇ ವಸ್ವೀರನು
ಸ್ವರಾಜ್ಯಂ ॥ ೧೨ ॥

॥ ಪದಪಾಠಃ ॥

ತಾಃ । ಅಸ್ಯ । ನಮಸಾ । ಸಹಃ । ಸಪರ್ಯಂತಿ । ಪ್ರಽಚೇತಸಃ ।
ವ್ರತಾನಿ । ಅಸ್ಯ । ಸಶ್ಚಿರೇ । ಪುರೂಣಿ । ಪೂರ್ವಽಚಿತ್ತಯೇ । ವಸ್ವೀಃ । ಅನು ।
ಸ್ವಽರಾಜ್ಯಂ ॥ ೧೨ ॥

॥ ಸಾಯಣಭಾಷ್ಯಂ ॥

ಪ್ರಚೇತಸಃ ಪ್ರಕೃಷ್ಟಜ್ಞಾನಾಸ್ತಾ ಗಾವೋಽಸ್ಯೇಂದ್ರಸ್ಯ ಸಹೋ ಬಲಂ ನಮಸಾ ಸ್ವಕೀಯೇನ ಪಯೋರೂಪೇಣಾನ್ನೇನ ಸಪರ್ಯಂತಿ । ಪರಿಚರಂತಿ । ಪುರೂಣಿ ಬಹೂನ್ಯಸ್ಯೇಂದ್ರಸ್ಯ ವ್ರತಾನಿ। ಶತ್ರುವಧಾದಿರೂಪಾಣಿ ವೀರ್ಯಕರ್ಮಾಣಿ ಸಶ್ಚಿರೇ । ಸೇವಿರೇ । ಜ್ಞಾಯಂತ ಇತ್ಯರ್ಥಃ । ಕಿಮರ್ಥಂ । ಪೂರ್ವಚಿತ್ತಯೇ ಯುಯುತ್ಸೂನಾಂ ಶತ್ರೂಣಾಂ ಪೂರ್ವಮೇವ ಪ್ರಜ್ಞಾಪನಾಯ । ಅನೇನ ಯುಧ್ಯಮಾನಾ ವೃತ್ರಾದಯಃ ಸರ್ವೇ ಮರಣಂ ಪ್ರಾಪ್ತಾಃ ಕಿಮರ್ಥಂ ಭವದ್ಭಿಃ ಪ್ರಾಣಾಸ್ತ್ಯಜ್ಯಂತ ಇತಿ ತೇಷಾಂ ಬೋಧನಾಯೇತ್ಯರ್ಥಃ । ಅನ್ಯತ್ ಪೂರ್ವವತ್ ॥ ಸಶ್ಚಿರೇ । ಸಶ್ಚ ಗತೌ । ವ್ಯತ್ಯಯೇನಾತ್ಮನೇಪದಂ । ಪೂರ್ವಚಿತ್ತಯೇ । ಚಿತೀ ಸಂಜ್ಞಾನೇ । ಭಾವೇ ಕ್ತಿನ್ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ ॥ ೧೨ ॥

ಪ್ರತಿಪದಾರ್ಥ

**ಪ್ರಚೇತಸಃ**—ಪ್ರಕೃಷ್ಟವಾದ ಜ್ಞಾನವುಳ್ಳ । **ತಾಃ**—ಆ ಗೋವುಗಳು । **ಅಸ್ಯ**—ಈ ಇಂದ್ರನ । **ಸಹಃ**—ಬಲವನ್ನು । **ನಮಸಾ**—(ತಮ್ಮ ಪಯೋರೂಪವಾದ) ಅನ್ನದಿಂದ । **ಸಪರ್ಯಂತಿ**—ಸತ್ಕರಿಸುತ್ತವೆ । **ಪೂರ್ವಚಿತ್ತಯೇ**—(ಮುಂದೆ ಪತರಾಗತಕ್ಕ ಶತ್ರುಗಳ) ತಿಳುವಳಿಕೆಗಾಗಿ । **ಪುರಾಣಿ**—ಬಹು ಸಂಖ್ಯಾಕವಾದ । **ಅಸ್ಯ**—ಇಂದ್ರನ । **ವ್ರತಾನಿ**—ವೀರ್ಯಕರ್ಮಗಳನ್ನು । **ಸಶ್ಚಿರೇ**—ತಿಳಿದುಕೊಂಡು ಪ್ರಶಂಸಿಸುತ್ತವೆ । **ವಸ್ವೀಃ** ( ಕೊಟ್ಟಿಗೆಗಳಲ್ಲಿ ) ವಾಸಮಾಡಿಕೊಂಡು । **ಸ್ವರಾಜ್ಯಂ ಅನು**—( ಇಂದ್ರನ ) ಪ್ರಭುತ್ವವನ್ನು ಗಮನಿಸುತ್ತವೆ ॥

ಭಾವಾರ್ಥ

ಗೋವುಗಳು ಪ್ರಕೃಷ್ಟವಾದ ಜ್ಞಾನವುಳ್ಳವುಗಳಾಗಿ ಇಂದ್ರನ ಬಲವನ್ನು ತಮ್ಮ ಪಯಸ್ಸಿನ ಅರ್ಪಣೆಯಿಂದ ಸತ್ಕರಿಸಿ ವೃದ್ಧಿಪಡಿಸುತ್ತವೆ. ಇಂದ್ರನೊಡನೆ ಯುದ್ಧಮಾಡಲಪೇಕ್ಷಿಸಿ ಮುಂದೆ ಹತರಾಗಬಹುದಾದ ಶತ್ರುಗಳ ತಿಳಿವಳಿಕೆಗಾಗಿ ಬಹುಸಂಖ್ಯಾಕವಾದ ಇಂದ್ರನ ವೀರ್ಯಕರ್ಮಗಳನ್ನರಿತು ಪ್ರಶಂಸಿಸುತ್ತವೆ. ಕೊಟ್ಟಿಗೆಗಳಲ್ಲಿ ವಾಸಮಾಡಿಕೊಂಡು ಅವನ ಸಾರ್ವಭೌಮತ್ವವನ್ನು ಆದರದಿಂದ ಗಮನಿಸುತ್ತವೆ.

## English Translation

Those intelligent cows worship his prowess with the adoration of their milk ; they proclaimed his many exploits as an example to later enemies and are benificient in accordance with his sovereignty.

॥ ವಿಶೇಷವಿಷಯಗಳು ॥

**ನಮಸಾ ಸಪರ್ಯಂತಿ— ಸ್ವಕೀಯೇನ ಪಯೋರೂಪೇಣಾನ್ನೇನ ಪರಿಚರಂತಿ** । ತಮ್ಮ ಹಾಲುಗಳಿಂದ ಇಂದ್ರನನ್ನು ಸೇವಿಸುವವು.

**ವ್ರತಾನ್ಯಸ್ಯ**—ವ್ರತಾನಿ ಎಂದರೆ ಸಾಹಸಕರ್ಮಗಳು ; ಇಂದ್ರನು ಮಾಡಿದ ನಾನಾವಿಧ ಕೆಲಸಗಳು.

**ಸಶ್ಚಿರೇ—ಸಶ್ಚ ಗತೌ । ಜ್ಞಾಯಂತೇ ।** ತಿಳಿಯಲ್ಪಡುತ್ತವೆ ಎಂದರೆ ಎಲ್ಲರಿಗೂ ತಿಳಿಯುವಂತೆ ಮಾಡಲ್ಪಡುತ್ತವೆ.

**ಪೂರ್ವಚಿತ್ತಯೇ—ಚಿತೀ ಸಂಜ್ಞಾನೇ ।** ಯುದ್ಧಾಪೇಕ್ಷಿಗಳಾದ ಶತೃಗಳಿಗೆ ಮೊದಲೇ ಸೂಚನೆ ಕೊಡುವುದಕ್ಕಾಗಿ.

ವ್ಯಾಕರಣಪ್ರಕ್ರಿಯಾ

**ಸಪರ್ಯಂತಿ** - ಸಪರ ಪೂಜಾಯಾಂ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ **ಕಂಡ್ವಾದಿಭ್ಯೋಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಯಕ್. ಯಕ್ ಸ್ವರ ಬರುತ್ತದೆ.

**ಸಶ್ಚಿರೇ** — ಸಶ್ಚ ಗತೌ ಧಾತು. **ವ್ಯತ್ಯಯೋಬಹುಲಂ** ಎಂಬುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಲಿಟನಲ್ಲಿ **ಲಿಟಸ್ತಝಯೋರೇಶಿರೇಚ್** ಎಂಬುದರಿಂದ ಇರೇಚ್ ಪ್ರತ್ಯಯ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪೂರ್ವಚಿತ್ತಯೇ**—ಚಿತೀ ಸಂಜ್ಞಾನೇ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರವು ಪ್ರಾಪ್ತವಾದರೆ ಮರುದ್ವೃಧಾದಿಯಲ್ಲಿ ಸೇರಿರುವುದರಿಂದ ಪೂರ್ವಪದಾಂತೋದಾತ್ತಸ್ವರವು ಬರುತ್ತದೆ. ಚತುರ್ಥೀ ಏಕವಚನದಲ್ಲಿ **ಘೇರ್ಙಿತಿ** ಎಂಬುದರಿಂದ ಗುಣ ಅಯಾದೇಶ ಬಂದರೆ ಪೂರ್ವಚಿತ್ತಯೇ ಎಂದು ರೂಪವಾಗುತ್ತದೆ. ॥ ೧೨ ॥

|| ಸಾಯಣಭಾಷ್ಯಂ ||

ಇಂದ್ರೋ ದಧೀಚೋ ಅಸ್ಥಭಿರ್ವೃತ್ರಾಣ್ಯಪ್ರತಿಷ್ಕುತಃ ।
ಜಘಾನ ನವತೀರ್ನವ ॥೧೩॥

ಪದಪಾಠಃ

ಇಂದ್ರಃ । ದಧೀಚಃ । ಅಸ್ಥಽಭಿಃ । ವೃತ್ರಾಣಿ । ಅಪ್ರತಿಽಸ್ಕುತಃ ।
ಜಘಾನ । ನವತೀಃ । ನವ ॥೧೩॥

ಸಾಯಣಭಾಷ್ಯಂ

ಚಾತುರ್ವಿಂಶಿಕೇಽಹನಿ ಪ್ರಾತಃಸವನೇ ಬ್ರಾಹ್ಮಣಾಚ್ಛಂಸಿನಃ ಶಸ್ತ್ರ ಇಂದ್ರೋ ದಧೀಚ ಇತಿ ಷಳಹಸ್ತೋತ್ರಿಯಸಂಜ್ಞಕಸ್ತೃಚಃ । ಸೂತ್ರಿತಂ ಚ । ಆದಹ ಸ್ವಧಾಮನ್ವಿತ್ಯೇಕಾ ದ್ವೇ ಚೇಂದ್ರೋ ದಧೀಚೋ ಅಸ್ಥಭಿಃ । ಆ. ೭-೨ । ಇತಿ ॥

ಅತ್ರ ಶಾಟ್ಯಾಯನಿನ ಇತಿಹಾಸಮಾಚಕ್ಷತೇ । ಆಥರ್ವಣಸ್ಯ ದಧೀಚೋ ಜೀವತೋ ದರ್ಶನೇನಾಸುರಾಃ ಪರಾಬಭೂವುಃ । ಅಥ ತಸ್ಮಿನ್ ಸ್ವರ್ಗತೇಽಸುರೈಃ ಪೂರ್ಣಾ ಪೃಥಿವ್ಯಭವತ್ । ಅಥೇಂದ್ರಸ್ತೈರಸುರೈಃ ಸಹ ಯೋದ್ಧುಮಶಕ್ನುವಂಸ್ತಮೃಷಿಮನ್ವಿಚ್ಛನ್ ಸ್ವರ್ಗಂ ಗತ ಇತಿ ಶುಶ್ರಾವ । ಅಥ ಪಪ್ರಚ್ಛ ತತ್ರತ್ಯಾನ್ ನೇಹ ಕಿಮಸ್ಯ ಕಿಂಚಿತ್ಪರಿಶಿಷ್ಟಮಂಗಮಸ್ತೀತಿ । ತಸ್ಮಾ ಅವೋಚನ್ ಅಸ್ತ್ಯೇತದಾಶ್ವಂ ಶೀರ್ಷಂ ಯೇನ ಶಿರಸಾಶ್ವಿಭ್ಯಾಂ ಮಧುವಿದ್ಯಾಂ ಪ್ರಾಬ್ರವೀತ್ । ತತ್ತು ನ ವಿದ್ಮ ಯತ್ರಾಭವದಿತಿ । ಪುನರಿಂದ್ರೋಽಬ್ರವೀತ್ । ತದನ್ವಿಚ್ಛತೇತಿ । ತದ್ಧಾನ್ವೈಷಿಷುಃ । ತಚ್ಛರ್ಯಣಾವತ್ಯನುವಿದ್ಯಾಜಹ್ರುಃ । ಶರ್ಯಣಾವದ್ಧ ವೈ ನಾಮ ಕುರುಕ್ಷೇತ್ರಸ್ಯ ಜಘನಾರ್ಧೇ ಸರಃ ಸ್ಯಂದತೇ । ತಸ್ಯ ಶಿರಸೋಽಸ್ಥಿಭಿರಿಂದ್ರೋಽಸುರಾಞ್ಜಘಾನೇತಿ ॥ ಅಪ್ರತಿಷ್ಕುತಃ ಪರೈರಪ್ರತಿಶಬ್ದಿತಃ ಪ್ರತಿಕೂಲಶಬ್ದರಹಿತ ಇಂದ್ರ ಆಥರ್ವಣಸ್ಯ ದಧೀಚ ಏತತ್ಸಂಜ್ಞಕಸ್ಯ ಋಷೇರಸ್ಥಭಿರಶ್ವಶಿರಃಸಂಬಂಧಿಭಿರಸ್ಥಿಭಿರ್ನವತೀರ್ನವ ನವಸಂಖ್ಯಾಕಾ ನವತೀರ್ದಶೋತ್ತರಾಷ್ಟಶತಸಂಖ್ಯಾಕಾಃ । ತಥಾ ಹಿ । ಲೋಕತ್ರಯವರ್ತಿನೋ ದೇವಾಞ್ಜೇತುಮಾದಾವಾಸುರೀ ಮಾಯಾ ತ್ರಿಧಾ ಸಂಪದ್ಯತೇ । ತ್ರಿವಿಧಾತೀತಾನಾಗತವರ್ತಮಾನಕಾಲಭೇದೇನ ತತ್ಕಾಲವರ್ತಿನೋ ದೇವಾಞ್ಜೇತುಂ ಪುನರಪಿ ಪ್ರತ್ಯೇಕಂ ತ್ರಿಗುಣಿತಾ ಭವತಿ । ಏವಂ ನವ ಸಂಪದ್ಯತೇ । ಪುನರಪ್ಯುತ್ಸಾಹಾದಿಶಕ್ತಿತ್ರಯರೂಪೇಣ ತ್ರೈಗುಣ್ಯೇ ಸತಿ ಸಪ್ತವಿಂಶತಿಃ ಸಂಪದ್ಯತೇ । ಪುನಃ ಸಾತ್ತ್ವಿಕಾದಿಗುಣತ್ರಯಭೇದೇನ ತ್ರೈಗುಣ್ಯೇ ಸತ್ಯೇಕೋತ್ತರಾಶೀತಿಃ ಸಂಪದ್ಯತೇ । ಏವಂ ಚತುರ್ಭಿಸ್ತ್ರಿಕೈರ್ಗುಣಿತಾಯಾ ಮಾಯಾಯಾ ದಶಸು ದಿಕ್ಷು ಪ್ರತ್ಯೇಕಮವಸ್ಥಾನೇ ಸತಿ ನವ ನವತಯಃ ಸಂಪದ್ಯಂತೇ । ಏವಂವಿಧಮಾಯಾರೂಪಾಣಿ ವೃತ್ರಾಣ್ಯಾವರ-

**ಕಾಣ್ಯಸುರಜಾತಾನಿ ಜಘಾನ । ಹತವಾನ್ ॥ ದಧೀಚಃ । ದಧ್ಯಂಚತೀತಿ ದಧ್ಯಙ್ । ಅಂಚತೇರ್ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಷಷ್ಠ್ಯೇಕವಚನೇಽಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಉದಾತ್ತನಿವೃತ್ತಿಸ್ವರೇಣ ವಿಭಕ್ತ್ಯುದಾತ್ತತ್ವೇ ಪ್ರಾಪ್ತೇ ತದಪವಾದತಯಾ ಚಾವಿತಿ ಪೂರ್ವಪದಸ್ಯಾಂತೋದಾತ್ತತ್ವಂ ಪ್ರಾಪ್ತಂ । ಅಂಚೇಶ್ಛಂದಸ್ಯಸರ್ವನಾಮಸ್ಥಾನಂ । ಪಾ. ೬-೧-೧೭೦ । ಇತಿ ಪುನರ್ವಿಭಕ್ತ್ಯುದಾತ್ತತ್ವವಿಧಾನೇನ ತದ್ಬಾಧ್ಯತೇ । ಅಸ್ಥಭಿಃ । ಛಂದಸ್ಯಪಿ ದೃಶ್ಯತೇ । ಪಾ. ೭-೧-೭೬ । ಇತ್ಯನಜಾದಾವಪ್ಯಸ್ಥಿಶಬ್ದಸ್ಯಾನಜಾದೇಶಃ ಸ ಚೋದಾತ್ತಃ**

॥ ಪ್ರತಿಪದಾರ್ಥ ॥

**ಅಪ್ರತಿಷ್ಕುತಃ**—ವಿರೋಧವಾದ ಶಬ್ದವಿಲ್ಲದಿರುವ । **ಇಂದ್ರಃ**—ಇಂದ್ರನು । **ದಧೀಚಃ**—ದಧೀಚಿ ಋಷಿಯ । **ಅಸ್ಥಭಿಃ**—ಮೂಳೆಗಳಿಂದ । **ನವತೀರ್ನವ**—(ಮಾಯಾಶಕ್ತಿಯಿಂದ) ಎಂಟನೂರಹತ್ತು ಪ್ರಕಾರವಾಗಿ ಹರಡಿರುವುದೂ। **ವೃತ್ರಾಣಿ**—(ಲೋಕತ್ರಯವನ್ನೂ) ಆವರಿಸಿರುವುದೂ ಆದ ಶತ್ರುಪ್ರಭಾವವನ್ನು। **ಜಘಾನ**—ನಾಶಮಾಡಿದನು.

ಭಾವಾರ್ಥ

ಅಪ್ರತಿಹತವಾದ ಶಕ್ತಿಯಿಂದ ಕೂಡಿಕೊಂಡು ಪ್ರತಿಶಬ್ದವಿಲ್ಲದಿರುವ ಇಂದ್ರನು ದಧೀಚಿಋಷಿಯ ಮೂಳೆಗಳಿಂದ ಎಂಟನೂರಹತ್ತು ವಿಧವಾಗಿ ಹರಡಿರುವುದೂ ಲೋಕತ್ರಯವನ್ನೂ ಆವರಿಸಿರುವುದೂ ಆದ ಮಾಯಾರೂಪದ ಶತ್ರುಪ್ರಭಾವವನ್ನು ನಾಶಮಾಡಿದನು.

English Translation

Indra with the bones of Dadhyanch, slew, ninety times nine, Vritra

ವಿಶೇಷವಿಷಯಗಳು

**ದಧೀಚಃ**—ದಧ್ಯಂಚ್ ಅಥವಾ ದಧೀಚಿ ಎಂಬ ಋಷಿಯು ಪುರಾಣಾದಿಗಳಲ್ಲಿ ಪ್ರಸಿದ್ಧನಾದವನು. ಭಾಷ್ಯಕಾರರು ಇಲ್ಲಿ ಒಂದು ಉಪಾಖ್ಯಾನವನ್ನು ಹೇಳಿರುವರು.—ಅಥರ್ವನೆಂಬುವನ ಪುತ್ರನಾದ ದಧ್ಯಂಚ್ ಎಂಬ ಋಷಿಯು ಜೀವಿಸಿದ್ದಾಗ ಅವನ ದರ್ಶನದಿಂದ ಅಸುರರು ಭೀತರಾಗಿ ಓಡಿಹೋಗಿದ್ದರು. ಅವನು ಮೃತನಾಗಿ ಸ್ವರ್ಗಕ್ಕೆ ಹೋದ ಬಳಿಕ ಅಸುರರು ನಿರ್ಭಯವಾಗಿ ಭೂಮಿಯೆಲ್ಲವನ್ನೂ ವ್ಯಾಪಿಸಿದರು. ಬಳಿಕ ಇಂದ್ರನು ಈ ಅಸುರರೊಡನೆ ಯುದ್ಧಮಾಡಲಶಕ್ತನಾಗಿ ಆ ಋಷಿಯನ್ನು ಹುಡುಕಿದನು. ಋಷಿಯು ಸ್ವರ್ಗಸ್ಥನಾದನೆಂದು ತಿಳಿಯಬಂದಿತು. ಆಗ ಇಂದ್ರನು ಸಮೀಪದಲ್ಲಿದ್ದವರನ್ನು ಕುರಿತು ಆ ಋಷಿಯ ಅಂಗಗಳಲ್ಲಿ ಯಾವುದಾದರೂ ಅವಶೇಷವಿದೆಯೇ ಎಂದು ಕೇಳಲು ಆಗ ಅವರು—ದಧೀಚಿಋಷಿಯು ಒಂದಾನೊಂದು ಕಾಲದಲ್ಲಿ ಅಶ್ವಿನೀದೇವತೆಗಳಿಗೆ ಮಧುವಿದ್ಯೆಯನ್ನು ಕಲಿಸಿದ ಕುದುರೆಯ ತಲೆಬುರುಡೆಯು ಮಾತ್ರ ಇರುವುದೆಂದೂ, ಅದೂ ಸಹ ಎಲ್ಲಿರುವುದೋ ಗೊತ್ತಿಲ್ಲವೆಂದೂ ಹೇಳಿದರು. ಆಗ ಇಂದ್ರನು ಅದನ್ನು ಹುಡುಕುವಂತೆ ಅವರಿಗೆ ಹೇಳಲು, ಅವರು ಅದು ಕುರುಕ್ಷೇತ್ರದ ಸಮೀಪದಲ್ಲಿರುವ ಶರ್ಯಣಾವತ್ ಎಂಬ ಸರೋವರದಲ್ಲಿ ಬಿದ್ದಿರುವುದನ್ನು ಹುಡುಕಿ ತೆಗೆದುಕೊಂಡುಬಂದರು.

ಇಂದ್ರನು ಆ ತಲೆಬುರುಡೆಯ ಮೂಳೆಗಳಿಂದ ಅಸುರರನ್ನು ಜಯಿಸಿದನು ಎಂದರೆ, ಒಂಬತ್ತು ಸಲ ತೊಂಭತ್ತು ಎಂದರೆ ಎಂಟನೂರು ಹತ್ತಾವರ್ತಿ ಅಸುರರ ಮಾಯಾಜಾಲವನ್ನು ವಿಫಲಗೊಳಿಸಿದನು. ಇಲ್ಲಿ ಒಂಭತ್ತುಸಲ ತೊಂಭತ್ತು ಎಂಬ ಸಂಖ್ಯೆಯನ್ನು ವಿವರಿಸುವಾಗ ಭಾಷ್ಯಕಾರರು—ಮೂರು ಲೋಕಗಳಲ್ಲಿರುವ ದೇವತೆಗಳನ್ನು ಜಯಿಸಲು ಮೊದಲು ಅಸುರರಿಗೆ ಮೂರುವಿಧವಾದ ಮಾಯಾಭೇದಗಳಿದ್ದವು. ಅವುಗಳಲ್ಲಿ ಒಂದೊಂದೂ ವರ್ತಮಾನ ಭೂತ ಭವಿಷ್ಯತ್ ಎಂದು ಮೂರುವಿಧವಾಗಿದ್ದುದರಿಂದ ಒಟ್ಟು ಒಂಭತ್ತು ವಿಧಗಳಾದುವು. ಮತ್ತೆ ಆ ಒಂಭತ್ತು ಮಾಯೆಗಳು ಉತ್ಸಾಹಾದಿಶಕ್ತಿತ್ರಯಗಳಿಂದ ಕೂಡಿ ೯×೩=೨೭ ಆದುವು. ಮತ್ತೆ ಅವು ಸಾತ್ವಿಕಾದಿ ಗುಣತ್ರಯಗಳಿಂದ ಕೂಡಿ ೨೭×೩=೮೧ ಆದುವು. ಈ ಎಂಭತ್ತೊಂದು ಮಾಯೆಗಳು ದಶದಿಕ್ಕುಗಳಲ್ಲಿ ಆಚರಿಸಲ್ಪಡುವುದರಿಂದ ಒಟ್ಟು ೮೧×೧೦=೮೧೦ ಅಥವಾ ಒಂಭತ್ತು ಸಲ ತೊಂಭತ್ತು ೯×೯೦=೮೧೦ ಆದುವು. ಈ ವಿಧವಾದ ವೃತ್ರರೂಪವಾದ ಅಸುರರ ಮಾಯಾಜಾಲಗಳನ್ನು ಇಂದ್ರನು ನಿರರ್ಥಕಗೊಳಿಸಿದನು ಎಂದು ವಿವರಿಸಿರುವರು.

ಸ್ಕಂದಸ್ವಾಮಿಯು ಬೇರೊಂದು ಇತಿಹಾಸವನ್ನು ಹೇಳಿರುವರು—ಪೂರ್ವದಲ್ಲಿ ಕಾಲಕಂಜರೆಂಬ ಅಸುರರಿದ್ದರು. ಅವರು ಪ್ರಬಲರಾಗಿ ದೇವತೆಗಳನ್ನು ಕೊಲ್ಲುತ್ತಾ ತುಂಬಾ ತೊಂದರೆ ಕೊಡುತ್ತಿದ್ದರು. ಆಗ ದೇವತೆಗಳು ಬ್ರಹ್ಮನ ಸಮೀಪಕ್ಕೆ ಹೋಗಿ ಈ ಅಸುರರನ್ನು ಸಂಹಾರಮಾಡಲು ಉಪಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸಲು ಬ್ರಹ್ಮನು—ಎಲೈ ದೇವತೆಗಳಿರಾ, ದಧ್ಯಙ್ ಎಂಬ ಋಷಿಯು ಇರುವನು. ನೀವು ಅವನ ಸಮೀಪಕ್ಕೆ ಹೋಗಿರಿ. ಅವನು ಅಸುರರ ಸಂಹಾರ ವಿಷಯದಲ್ಲಿ ತಕ್ಕ ಉಪಾಯವನ್ನು ತಿಳಿಸುವನು ಎಂದನು. ದೇವತೆಗಳು ಬ್ರಹ್ಮನ ಮಾತಿನಂತೆ ದಧೀಚಿ ಋಷಿಯ ಸಮೀಪಕ್ಕೆ ಹೋಗಿ ಬ್ರಹ್ಮನು ತಮ್ಮನ್ನು ಕಳುಹಿಸಿರುವನೆಂದು ಅರಿಕೆಮಾಡಿದರು. ಆ ಋಷಿಯು ಯೋಗದೃಷ್ಟಿಯಿಂದ ಇವರು ಬಂದ ಕಾರ್ಯವನ್ನು ತಿಳಿದು ಯೋಗಸಮಾಧಿಯಿಂದ ತನ್ನ ಪ್ರಾಣಗಳನ್ನು ವಿಸರ್ಜಿಸಿದನು. ಆಗ ಆ ಋಷಿಯ ಮೂಳೆಗಳಿಂದ ಇಂದ್ರನು ಅಸುರರನ್ನು ಸಂಹಾರಮಾಡಿದನು. ಈ ವಿಷಯವೇ ಈ ಋಕ್ಕಿನಲ್ಲಿ ವಿವರಿಸಲ್ಪಟ್ಟಿರುವುದೆಂದು ಸ್ಕಂದಸ್ವಾಮಿಯು ಹೇಳಿರುವರು.

ಈ ಋಷಿಯ ಹೆಸರು ಋಗ್ವೇದ ಸಂಹಿತೆಯಲ್ಲಿ ೧-೮೦-೧೬ ; ೧-೮೪-೧೩ ; ೧-೮೪-೧೪ ; ೧-೧೧೬-೧೨ ; ೧-೧೧೭-೨೨ ; ೧-೧೧೯-೯ ಮೊದಲಾದ ಋಕ್ಕುಗಳಲ್ಲಿಯೂ ತೈತ್ತಿರೀಯ, ಸಂಹಿತಾ. ೫-೧-೪-೪ ; ೫-೬-೬-೩ ಕಾಠಕ ಸಂಹಿತಾ ೧೯-೪ ; ಶತಪಥ ಬ್ರಾಹ್ಮಣ ೪-೧-೫-೧೮ ; ೬-೪-೨-೩ ; ೧೪-೧-೧-೧೮ ; ೧೪-೧-೧-೨೦ ; ೧೪-೧-೧-೨೫ ; ೧೪-೧-೪-೧೩ ; ಬೃಹದಾರಣ್ಯಕೋಪನಿಷತ್ ೨-೫-೨೨ ; ೪-೫-೨೮ ಮೊದಲಾದ ಸ್ಥಳಗಳಲ್ಲಿ ಪಠಿತವಾಗಿದೆ.

ವ್ಯಾಕರಣಪ್ರಕ್ರಿಯಾ

ದಧೀಚಃ—ದಧಿ ಅಂಚತಿ ಇತಿ ದಧ್ಯಙ್. **ಅಂಚು ಗತಿಪೂಜನಯೋಃ** ಧಾತು, **ಋತ್ವಿಕ್‌ದಧೃಕ್** (ಪಾ. ಸೂ. ೩-೨-೫೯) ಸೂತ್ರದಿಂದ ಸುಬಂತವು ಉಪಪದವಾಗಿರುವಾಗ ಕ್ವಿನ್ ಪ್ರತ್ಯಯ. ಕಿತ್ತಾದುದರಿಂದ **ಅನಿದಿತಾಂ ಹಲಉ** ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಷಷ್ಠೀ ಏಕವಚನದ ಙಸ್ ಪರದಲ್ಲಿರುವಾಗ **ಅಚಃ** ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. **ಚೌ** ಎಂಬುದರಿಂದ ಲುಪ್ತಾಕಾರ ಅಂಚು ಧಾತು ಪರದಲ್ಲಿರುವುದರಿಂದ ಪೂರ್ವಪದಕ್ಕೆ ದೀರ್ಘ. ಇಲ್ಲಿ ನಿತ್‌ಪ್ರತ್ಯಯಾಂತವಾದುದರಿಂದ ಧಾತುವಿನ ಅಕಾರವು ಕೃದುತ್ತರಪದಪ್ರಕೃತಿಸ್ವರದಿಂದ ಉದಾತ್ತವಾಗಿರುವಾಗ ಅದರ ಲೋಪಕ್ಕೆ ವಿಭಕ್ತಿಯು ನಿಮಿತ್ತವಾದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರವು ಪ್ರಾಪ್ತವಾದರೆ ಅದಕ್ಕೆ ಅದು

ವಾದವಾಗಿ **ಚೌ** (ಪಾ. ಸೂ. ೬-೧-೨೨೨) ಎಂಬುದರಿಂದ ಪೂರ್ವಪದಕ್ಕೆ ಅಂತೋದಾತ್ತಸ್ವರ ಪ್ರಾಪ್ತವಾಗುತ್ತದೆ. ಅದನ್ನು ಬಾಧಿಸಿ ಅಸರ್ವನಾಮಸ್ಥಾನವಿಭಕ್ತಿಯು ಪರದಲ್ಲಿರುವುದರಿಂದ **ಅಂಚೇಶ್ಛಂದಸ್ಯಸರ್ವನಾಮಸ್ಥಾನಮ್** (ಪಾ. ಸೂ. ೬-೧-೧೭೦) ಎಂಬುದರಿಂದ ತಿರುಗಿ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಆಗ ಅಂತೋದಾತ್ತವಾದ ಪದವಾಗುತ್ತದೆ.

**ಅಸ್ಥಭಿಃ**—ಅಸ್ಥಿ ಶಬ್ದಕ್ಕೆ ಅಜಾದಿವಿಭಕ್ತಿ ಪರವಾದಾಗ ಅನಜಾದೇಶ ಹೇಳಿದರೂ ಭಿಸ್ ಪರವಾದಾಗ ಹಲಾದಿಯಲ್ಲಿಯೂ **ಛಂದಸ್ಯಪಿ ದೃಶ್ಯತೇ** (ಪಾ. ಸೂ. ೭-೧-೭೬) ಎಂಬುದರಿಂದ ಇದಕ್ಕೆ ಅನಜಾದೇಶ ಬರುತ್ತದೆ. ಇದೂ ಉದಾತ್ತವಾಗುತ್ತದೆ. ಙಿತ್ತಾದುದರಿಂದ ಅಂತಾದೇಶವಾಗುತ್ತದೆ. **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ ಬರುತ್ತದೆ. ಅಸ್ಥಭಿಃ ಎಂದು ಮಧ್ಯೋದಾತ್ತವಾದ ಶಬ್ದವಾಗುತ್ತದೆ.

**ಅಪ್ರತಿಷ್ಕುತಃ**—(೧-೬-೮೪-೭) ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಜಘಾನ**—ಹನ ಹಿಂಸಾಗತ್ಯೋಃ ಧಾತು. ಅದಾದಿ. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಣಲಾದೇಶ **ಅಭ್ಯಾಸಾಚ್ಚ** ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಹಕಾರಕ್ಕೆ ಕುತ್ವದಿಂದ ಘಕಾರಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ॥೧೩॥



ಸಂಹಿತಾಪಾಠಃ

ಇಚ್ಛನ್ನಶ್ವಸ್ಯ ಯಚ್ಛಿರಃ ಪರ್ವತೇಷ್ವಪಶ್ರಿತಂ ।
ತದ್ವಿದಚ್ಛರ್ಯಣಾವತಿ ॥ ೧೪ ॥

ಪದಪಾಠಃ

ಇಚ್ಛನ್ । ಅಶ್ವಸ್ಯ । ಯತ್ । ಶಿರಃ । ಪರ್ವತೇಷು । ಅಪಽಶ್ರಿತಂ ।
ತತ್ । ವಿದತ್ । ಶರ್ಯಣಾಽವತಿ ॥ ೧೪ ॥

ಸಾಯಣಭಾಷ್ಯಂ

**ಪರ್ವತೇಷು ಪರ್ವವತ್ಸು ಗಿರಿಷ್ವಪಶ್ರಿತಮಪಗತ್ಯ ಸ್ಥಿತಮಶ್ವಸ್ಯಾಶ್ವಸಂಬಂಧಿ ದಧೀಚೋ ಯಚ್ಛಿರ ಇಚ್ಛನ್ನಿಂದ್ರೋ ವರ್ತತೇ ಶರ್ಯಣಾವತ್ಯೇತತ್ಸಂಜ್ಞೇ ಸರಸಿ ತಚ್ಛಿರೋ ವಿದತ್। ಅಜ್ಞಾಸೀತ್। ಜ್ಞಾತ್ವಾ ತದಾಹೃತ್ಯ ತದೀಯೈರಸ್ಥಿಭಿರ್ವೃತ್ರಾಣಿ ಜಘಾನೇತಿಪೂರ್ವಸ್ಯಾಮೃಚಿ ಸಂಬಂಧಃ॥ ಇಚ್ಛನ್। ಇಷು ಇಚ್ಛಾಯಾಂ। ತುದಾದಿತ್ವಾಚ್ಛಪ್ರತ್ಯಯಃ। ವಿದತ್। ವೇತ್ತೇರ್ಲುಙಿ ವ್ಯತ್ಯಯೇನ ಚ್ಲೇರಙಾದೇಶಃ। ಶರ್ಯಣಾವತಿ। ಶರ್ಯಣಾ ನಾಮ ದೇಶಾಃ। ತೇಷಾಮದೂರಭವಂ ಸರಃ ಶರ್ಯಣಾವತ್। ಮಧ್ವಾದಿಷು ಶರ್ಯಣಶಬ್ದಸ್ಯ ಪಾಠಾನ್ಮಧ್ವಾದಿಭ್ಯಶ್ಚ। ಪಾ. ೪-೨-೮೬। ಇತಿ ಚಾತುರ್ಥಿಕೋ ಮತುಪ್। ಸಂಜ್ಞಾಯಾಮಿತಿ ಮತುಪೋ ವತ್ವಂ। ಮತೌ ಬಹ್ವಚೋಽನಜಿರಾದೀನಾಂ। ಪಾ. ೬-೩-೧೧೯। ಇತಿ ದೀರ್ಘಃ ॥ ೧೪ ॥**

ಪ್ರತಿಪದಾರ್ಥ

**ಪರ್ವತೇಷು**—ಏಣುಪಂಕ್ತಿಗಳುಳ್ಳ ಪರ್ವತಗಳಲ್ಲಿ। **ಅಪಶ್ರಿತಂ**— ಮರೆಸಿಕೊಂಡಿದ್ದ । **ಅಶ್ವಸ್ಯ**-ಕುದುರೆಯ (ತತ್ಸಂಬಂಧಿಯಾದ ದಧೀಚಿ ಋಷಿಯ) । **ಯಚ್ಛಿರಃ**—ಯಾವ ತಲೆಯನ್ನು । **ಇಚ್ಛನ್**—ಅಪೇಕ್ಷಿಸುತ್ತಿದ್ದನೋ । **ತತ್**—ಅದನ್ನು । **ಶರ್ಯಣಾವತಿ**—ಶರ್ಯಣಾವತ್ತವೆಂಬ ಸರಸ್ಸಿನಲ್ಲಿ। **ವಿದತ್**—ಕಂಡುಕೊಂಡನು. ।

॥ ಭಾವಾರ್ಥ ॥

ವೃತ್ರನ ವಧೆಗೆ ಸಹಾಯಕವಾಗಿ ಇಂದ್ರನು ದಧೀಚಿಋಷಿಯ ಕುದುರೆಯ ಸಂಬಂಧಿಯಾದ ತಲೆಯನ್ನು ಇಚ್ಛಿಸಿದನು. ಅದು ಪರ್ವತದ ಮರೆಯಲ್ಲಿ ಮರೆಸಿಕೊಂಡಿದ್ದಿತು. ಅದನ್ನು ಶರ್ಯಣಾವತ್ತೆಂಬ ಸರಸ್ಸಿನಲ್ಲಿ ಕಂಡು ಅದನ್ನು ತಂದು ಅದರಿಂದ ವೃತ್ರಾಸುರವಧವನ್ನು ಮಾಡಿದನು.

## English Translation

Wishing for the horse's head hidden in the mountains, he found it in the lake called Saryanavat.

ವಿಶೇಷವಿಷಯಗಳು

**ಅಶ್ವಸ್ಯ ಶಿರಃ**—ಕುದುರೆಯ ತಲೆ; ದಧೀಚಿಋಷಿಯ ತಲೆಯು ಕುದುರೆಯ ತಲೆಯಹಾಗಿದ್ದಿತ್ತೆಂದೂ ಅದು ಅಶ್ವಿನೀದೇವತೆಗಳಿಂದ ಅವನಿಗೆ ಕೊಡಲ್ಪಟ್ಟದ್ದಿತೆಂದೂ ಪ್ರತೀತಿ ಇರುವುದು. ದಧೀಚಿಋಷಿಯು ಮೃತನಾದ ಮೇಲೆ ಕುದುರೆಯ ತಲೆಯಂತಿದ್ದ ಅವನ ಶಿರಸ್ಸನ್ನು ಇಂದ್ರನು ಹುಡುಕಿದನು. ಅದು ಒಂದು ಪರ್ವತದ ಮರೆಯಲ್ಲಿ ಶರ್ಯಣಾವತಿಯೆಂಬ ಒಂದು ಸರೋವರದಲ್ಲಿ ಸಿಕ್ಕಿತೆಂದು ಈ ಋಕ್ಕಿನಲ್ಲಿ ವಿವರಿಸಲಾಗಿರುವುದು.

ದಧೀಚಿಋಷಿಗೆ ಕುದುರೆಯ ಶಿರಸ್ಸು ಹೇಗೆ ಬಂದಿತೆಂಬ ವಿಚಾರದಲ್ಲಿ ಸ್ಕಂದಸ್ವಾಮಿಯು ಒಂದು ಪ್ರಾಚೀನೇತಿಹಾಸವನ್ನು ಹೇಳಿರುವರು—ಅಥರ್ವಣ ಪುತ್ರನಾದ ದಧೀಚಿಋಷಿಗೆ ಇಂದ್ರನು ಮಧುವೆಂಬ ಪರಬ್ರಹ್ಮದ ಸ್ವರೂಪ

ವನ್ನು ಉಪದೇಶಮಾಡಿ ಇದನ್ನು ಯಾರಿಗೂ ಹೇಳಕೂಡದೆಂದೂ ಹಾಗೆ ಒಂದು ವೇಳೆ ಹೇಳಿದರೆ ನಿನ್ನ ತಲೆಯು ಬಿದ್ದುಹೋಗುವುದೆಂದೂ ಹೇಳಿದ್ದನು. ಕೆಲವು ಕಾಲದ ಮೇಲೆ ಅಶ್ವಿನೀದೇವತೆಗಳು ಆ ದಧೀಚಿಋಷಿಯ ಸಮೀಪಕ್ಕೆ ಬಂದು, ಇಂದ್ರನು ನಿನಗೆ ತಿಳಿಸಿದ ಬ್ರಹ್ಮಸ್ವರೂಪವನ್ನು ವಿವರಿಸೆನಲು, ದಧೀಚಿಯು ಅವನನ್ನು ಕುರಿತು ಈ ವಿಷಯವನ್ನು ನಾನು ನಿಮಗೆ ತಿಳಿಸಿದಲ್ಲಿ ನನ್ನ ತಲೆಯು ಬಿದ್ದುಹೋಗುವುದೆಂದು ಇಂದ್ರನು ಹೇಳಿರುವನು. ಆ ಭಯ ದಿಂದ ನಾನು ಹೇಳುವುದಿಲ್ಲವೆನಲು, ಅಶ್ವಿನೀದೇವತೆಗಳು ಅದಕ್ಕಾಗಿ ಚಿಂತಿಸಬೇಡ, ನಿನ್ನ ತಲೆಯು ಬಿದ್ದುಹೋದರೆ ನಮ್ಮ ತಲೆಯನ್ನು ನಿನಗೆ ಕೊಡುವುವೆಂದರು. ದಧೀಚಿಯು ಅದಕ್ಕೆ ಸಮ್ಮತಿಸಿ ಹೇಳಿದನು. ಅದರಿಂದ ದಧೀಚಿ ಋಷಿಯ ಶಿರಸ್ಸು ಬಿದ್ದುಹೋಗಲು ಅಶ್ವಿನೀದೇವತೆಗಳು ಒಂದು ಕುದುರೆಯ ಶಿರಸ್ಸನ್ನು ಕತ್ತರಿಸಿ ತಂದು ದಧೀಚಿ ಋಷಿಯ ಶರೀರಕ್ಕೆ ಸೇರಿಸಿದರು. ಅದರಿಂದ ದಧೀಚಿಋಷಿಯ ಶಿರಸ್ಸು ಕುದುರೆಯ ಶಿರಸ್ಸಿನಂತಿರುವುದು ಎಂದು ವರ್ಣಿತವಾಗಿದೆ. ಈ ವಿಷಯವನ್ನು ಕಕ್ಷೀವಾನ್ ಎಂಬ ಋಷಿಯು ಋ. ಸಂ. ೧-೧೧೭-೨೨ ಋಕ್ಕಿನಲ್ಲಿ ವರ್ಣಿಸಿರುವನು.

**ಅಪಶ್ರಿತಂ—ಅಪಗತ್ಯ ಸ್ಥಿತಂ ।** ಕಾಣದಂತೆ ಮರೆಯಾಗಿದ್ದ

**ಶರ್ಯಣಾವತಿ**—ಸಪ್ತಮ್ಯೇಕವಚನ. ಶರ್ಯಣಾವತ್ ಎಂಬ ಸರೋವರದಲ್ಲಿ ; ಈ ಶಬ್ದವು ಋಗ್ವೇದದಲ್ಲಿ ೧-೮೪-೧೪ ; ೭-೬-೩೯ ; ೭-೭-೨೮ ; ೭-೬೪-೧೧ ; ೯-೬೫-೨೨ ; ೯-೧೧೩-೧ ; ೧೦-೩೫-೨ ಇತ್ಯಾದಿ ಋಕ್ಕುಗಳಲ್ಲಿ ಪಠಿತವಾಗಿರುವುದು. ಈ ಸ್ಥಳಗಳಲ್ಲೆಲ್ಲಾ ಭಾಷ್ಯಕಾರರು ಇದನ್ನು ಸರೋವರವೆಂದೇ ಹೇಳಿರುವರು. ಈಗಿನ Delhi ಎಂಬ ಪ್ರದೇಶದಲ್ಲಿ ಕುರುಕ್ಷೇತ್ರವೆಂಬ ಪ್ರದೇಶದಲ್ಲಿ ಈ ಸರೋವರವಿತ್ತೆಂದು ತಿಳಿದುಬರುವುದು. ಪಾಶ್ಚಾತ್ಯರು ಈ ಶಬ್ದಕ್ಕೆ ವಿಧವಿಧವಾಗಿ ಅರ್ಥವನ್ನು ಕಲ್ಪಿಸುವರು. **ಶರ್ಯಣ** ಎಂಬುದು ಒಂದು ಸ್ಥಳದ ಹೆಸರೆಂದೂ ಅಲ್ಲಿಗ್ದ ಸರೋವರಕ್ಕೆ **ಶರ್ಯಣಾವನ್** ಎಂದು ಹೆಸರು ಬಂದಿರಬಹುದೆಂದೂ ಅವರ ಅಭಿಪ್ರಾಯವು. ಮತ್ತೆ ಕೆಲವರು ಶರ್ಯಣ ಎಂದರೆ ಜೊಂಡು ಹುಲ್ಲೆಂದೂ, ಅಂತಹ ಜೊಂಡು ಹುಲ್ಲು ಬೆಳೆದಿರುವ ನೀರಿನ ಜಲಾಶಯಕ್ಕೆ **ಶರ್ಯಣಾವನ್** ಎಂದು ಹೆಸರಿರಬಹುದೆಂದೂ ಊಹಿಸುತ್ತಾರೆ. ಮತ್ತೆ ಕೆಲವರು ಕಾಶ್ಮೀರದೇಶದಲ್ಲಿ ಪರ್ವತಗಳ ಮಧ್ಯದಲ್ಲಿರುವ ಅನೇಕ ಸರೋವರಗಳಲ್ಲಿ ಇದು ಒಂದಾಗಿರಬಹುದೆಂದು ಅಭಿಪ್ರಾಯಪಡುವರು.

॥ ವ್ಯಾಕರಣಪ್ರಕ್ರಿಯಾ ॥

**ಇಚ್ಛನ್**--ಇಷು ಇಚ್ಛಾಯಾಂ ಧಾತು. ತುದಾದಿ. ಲಡರ್ಥದಲ್ಲಿ ಶತೃಪ್ರತ್ಯಯ. **ತುದಾದಿಭ್ಯಃ ಶಃ** ಎಂಬುದರಿಂದ ಶವಿಕರಣ. **ಇಷುಗಮಿಯಮಾಂ ಛಃ** ಎಂಬುದರಿಂದ ಛಾದೇಶ. ಇಚ್ಛತ್ ಶಬ್ದವಾಗುತ್ತದೆ ವಿಕರಣಸ್ವರ ಬರುತ್ತದೆ. ಪ್ರಥಮಾ ಸು ಪರವಾದಾಗ ನುಮಾಗಮ. ಸುಲೋಪ. ಅಂತ್ಯತಕಾರಲೋಪ.

**ಅಪಶ್ರಿತಮ್**—ಶ್ರಿಞ್ ಸೇವಾಯಾಂ ಧಾತು. ಕ್ತಿನ್‌ಪ್ರತ್ಯಯ. **ತಾದೌ ಚ ನಿತಿ ಕೃತ್ಯತೌ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ವಿವೇತ್** – ವಿದ ಜ್ಞಾನೇ ಧಾತು. ಲುಙ್ ಪ್ರಥಮಪುರುಷ ಏಕವಚನ ಪರದಲ್ಲಿರುವಾಗ ವ್ಯತ್ಯಯದಿಂದ ಚ್ಲಿಗೆ ಅಜಾದೇಶ ಬರುತ್ತದೆ. ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಬಹುಲಂ ಛಂದಸ್ಯಮಾಙ್ ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ.

**ಶರ್ಯಣಾವತಿ**—ಶರ್ಯಣಾ ಎಂಬುದು ಒಂದು ದೇಶದ ಹೆಸರು. ಶರ್ಯಣಾನಾಂ ಅದೂರಭವಂ ಸರಃ ಶರ್ಯಣಾವತ್. ಮಧ್ವಾದಿಗಣದಲ್ಲಿ ಶರ್ಯಣಶಬ್ದವನ್ನು ಪಾಠಮಾಡಿರುವುದರಿಂದ **ಮಧ್ವಾದಿಭ್ಯಶ್ಚ** (ಪಾ. ಸೂ. ೪-೨-೮೬) ಎಂಬುದರಿಂದ ಚಾತುರರ್ಥಿಕದಲ್ಲಿ ಅಣಿಗೆ ಅಪವಾದವಾಗಿ ಮತುಪ್ ಪ್ರತ್ಯಯ ಬರುತ್ತದೆ. ಸಂಜ್ಞಾ ತೋರುವುದರಿಂದ **ಸಂಜ್ಞಾಯಾಂ** ಎಂಬುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಶರ್ಯಣಾವತ್ ಎಂದಿರುವಾಗ **ಮತೌ ಬಹ್ವಚೋಽನಜಿರಾದೀನಾಮ್** (ಪಾ. ಸೂ. ೬-೩-೧೧೯) ಎಂಬುದರಿಂದ ಮತುಪ್ ಪರದಲ್ಲಿರುವಾಗ ಪೂರ್ವಕ್ಕೆ ದೀರ್ಘ. ಶರ್ಯಣಾವತ್ ಶಬ್ದದ ಸಪ್ತಮೀ ಏಕವಚನದಲ್ಲಿ ಶರ್ಯಣಾವತಿ ಎಂದು ರೂಪವಾಗುತ್ತದೆ. ॥ ೧೪ ॥



॥ ಸಂಹಿತಾಪಾಠಃ ॥

ಅತ್ರಾಹ ಗೋರಮನ್ವತ ನಾಮ ತ್ವಷ್ಟುರಪೀಚ್ಯಂ ।
ಇತ್ಥಾ ಚಂದ್ರಮಸೋ ಗೃಹೇ ॥ ೧೫ ॥

॥ ಪದಪಾಠಃ ॥

ಅತ್ರ । ಅಹ । ಗೋಃ । ಅಮನ್ವತ । ನಾಮ । ತ್ವಷ್ಟುಃ । ಅಪೀಚ್ಯಂ ।
ಇತ್ಥಾ । ಚಂದ್ರಮಸಃ । ಗೃಹೇ ॥ ೧೫ ॥

ಸಾಯಣಭಾಷ್ಯಂ

ಅತಿಮೂರ್ತಿನಾಮ್ನ್ಯೇಕಾಹೇ ಕರ್ತವ್ಯೇ ಪೂರ್ವಮೇವೈಕಂ ಮಾಸಂ ಸೌರ್ಯಾಚಾಂದ್ರಮಸೀಭ್ಯಾಮಿಷ್ಟಿಭ್ಯಾಂ ಯಷ್ಟವ್ಯಂ। ತತ್ರ ಪೂರ್ವಪಕ್ಷೇ ಚಾಂದ್ರಮಸೀಷ್ಟಿಃ। ಅತ್ರಾಹ ಗೋರಿತಿ ತಸ್ಯಾಂ

ಪ್ರಧಾನಸ್ಯಾನುವಾಕ್ಯಾ । ಅತಿಮೂರ್ತಿನೇತಿ ಖಂಡೇ ಸೂತ್ರಿತಂ । ಅತ್ರಾಹ ಗೋರಮನ್ವತ ನವೋನವೋ ಭವತಿ ಜಾಯಮಾನಃ । ಆ. ೯–೮ । ಇತಿ ॥

ಅತ್ರಾಹಾಸ್ಮಿನ್ನೇವ ಗೋರ್ಗಂತುಶ್ಚಂದ್ರಮಸೋ ಗೃಹೇ ಮಂಡಲೇ ತ್ವಷ್ಟುರ್ದೀಪ್ತಸ್ಯಾದಿತ್ಯಸ್ಯ ಸಂಬಂಧ್ಯಪೀಚ್ಯಂ ರಾತ್ರಾವಂತರ್ಹಿತಂ ಸ್ವಕೀಯಂ ಯನ್ನಾಮ ತೇಜಸ್ತದಾದಿತ್ಯಸ್ಯ ರಶ್ಮಯ ಇತ್ಥೇತ್ಥಮನೇನ ಪ್ರಕಾರೇಣಾಮನ್ವತ । ಅಜಾನನ್ । ಉದಕಮಯೇ ಸ್ವಚ್ಛೇ ಚಂದ್ರಬಿಂಬೇ ಸೂರ್ಯಕಿರಣಾಃ ಪ್ರತಿಫಲಂತಿ । ತತ್ರ ಪ್ರತಿಫಲಿತಾಃ ಕಿರಣಾಃ ಸೂರ್ಯೇ ಯಾದೃಶೀಂ ಸಂಜ್ಞಾಂ ಲಭಂತೇ ತಾದೃಶೀಂ ಚಂದ್ರೇಽಪಿ ವರ್ತಮಾನಾ ಲಭಂತ ಇತ್ಯರ್ಥಃ । ಏತದುಕ್ತಂ ಭವತಿ । ಯದ್ರಾತ್ರಾವಂತರ್ಹಿತಂ ಸೌರಂ ತೇಜಸ್ತಚ್ಚಂದ್ರಮಂಡಲಂ ಪ್ರವಿಶ್ಯಾಹನೀವ ನೈಶಂ ತಮೋ ನಿವಾರ್ಯ ಸರ್ವಂ ಪ್ರಕಾಶಯತಿ । ಈದೃಗ್ಭೂತತೇಜಸಾ ಯುಕ್ತಃ ಸೂರ್ಯಶ್ಚೇಂದ್ರ ಏವ ದ್ವಾದಶಸ್ವಾದಿತ್ಯೇಷ್ವಿಂದ್ರಸ್ಯಾಪಿ ಪರಿಗಣಿತತ್ವಾತ್ । ಅತೋಽಹೋರಾತ್ರಯೋಃ ಪ್ರಕಾಶಕ ಇಂದ್ರ ಏವೇತೀಂದ್ರಸ್ತುತೇಃ ಪ್ರತೀಯಮಾನತ್ವಾದಿಂದ್ರೋದೇವತ್ಯೇತಮುಪಪನ್ನಂ ಭವತಿ । ಈದೃಗ್ಭೂತಸ್ಯ ತೇಜಸ ಆಶ್ರಯತ್ವೇನ ಚಂದ್ರಮಸಃ ಪ್ರಾಧಾನ್ಯವಿವಕ್ಷಯಾ ಚಾಂದ್ರಮಸ್ಯಾಮಿಷ್ಟೌ ವಿನಿಯೋಗೋಽಪ್ಯುಪಪದ್ಯತೇ । ಅತ್ರ ನಿರುಕ್ತಂ । ಅಥಾಪ್ಯಸ್ಯೈಕೋ ರಶ್ಮಿಶ್ಚಂದ್ರಮಸಂ ಪ್ರತಿದೀಪ್ಯತೇ । ತದೇತೇನೋಪೇಕ್ಷಿತವ್ಯಮಾದಿತ್ಯತೋಽಸ್ಯ ದೀಪ್ತಿರ್ಭವತೀತಿ । ಸುಷುಮ್ಣಃ ಸೂರ್ಯರಶ್ಮಿಶ್ಚಂದ್ರಮಾ ಗಂಧರ್ವ ಇತ್ಯಪಿ ನಿಗಮೋ ಭವತಿ । ಸೋಽಪಿ ಗೌರುಚ್ಯತೇ । ಅತ್ರಾಹ ಗೋರಮನ್ವತೇತಿ । ನಿ. ೨–೬ । ಅತ್ರ ಹ ಗೋಃ ಸಮಮಂಸತಾದಿತ್ಯರಶ್ಮಯಃ ಸ್ವಂ ನಾಮಾಪೀಚ್ಯಮಪಚಿತಮಪಗತಮಪಿಹಿತಮಂತರ್ಹಿತಂ ವಾ । ನಿ. ೪–೨೫ । ಇತಿ ॥ ಅಮನ್ವತ । ಮನು ಅವಬೋಧನೇ । ಅಪೀಚ್ಯಂ । ಅಪಪೂರ್ವಾಚ್ಚಿನೋತೇರಘ್ನ್ಯಾದಯಶ್ಚ । ಉ. ೪–೧೧೧ । ಇತಿ ನಿಪಾತನಾದ್ಯತ್ । ಅತ ಏವಾಭಿಮತರೂಪಸಿದ್ಧಿಃ । ಯದ್ವಾ । ಅಪಿಪೂರ್ವಾದಂಚತೇರೃತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಅಪಿಗತೇ ನಿಗತೇ ಭವಮಪೀಚ್ಯಂ । ಭವೇ ಛಂದಸೀತಿ ಯತ್ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ತಿತ್ಸ್ವರಿತಃ । ಅಪೀಚ್ಯೋಽಪ್ರಕಾಶ ಇತಿ ಭಟ್ಟಭಾಸ್ಕರಮಿಶ್ರಃ । ಇತ್ಥಾ । ಇದಂಶಬ್ದಾತ್ಥಾ ಹೇತೌ ಚ. ಛಂದಸೀತಿ ಪ್ರಕಾರವಚನೇ ಥಾಪ್ರತ್ಯಯಃ । ಯದಿ ತತ್ರೇದಂಶಬ್ದೋ ನಾನುವರ್ತತೇ ತದಾನೀಮಿದಮಸ್ಥಮುಃ । ಪಾ. ೫–೩–೨೪ । ಇತಿ ಥಮುಪ್ರತ್ಯಯಃ । ಅವ್ಯಯಾದಾಪ್ಸುಪಃ । ಪಾ. ೨–೪–೮೨ । ಇತಿ ಸುಬ್ಲುಕಂ ಬಾಧಿತ್ವಾ ಸುಪಾಂ ಸುಲುಗಿತಿ ಡಾದೇಶಃ । ಚಂದ್ರಮಸಃ । ಚಂದ್ರಮಾಹ್ಲಾದನಂ ಮಿಮೀತೇ ನಿರ್ಮಿಮೀತ ಇತಿ ಚಂದ್ರಮಾಃ । ಚಂದ್ರೇ ಮಾಙೋ ಡಿತ್ । ಉ. ೪–೨೨೭ । ಇತ್ಯಸಿಪ್ರತ್ಯಯಃ ದಾಸೀಭಾರಾದಿಷು ಪಠಿತತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಪೂರ್ವಪದಂ ಚ ಸ್ಫಾಯಿತಂಚೀತ್ಯಾದಿನಾ ರಕ್ಪ್ರತ್ಯಯಾಂತಮಂತೋದಾತ್ತಂ ॥

ಪ್ರತಿಪದಾರ್ಥ

**ಅತ್ರಾಹ**—ಇಲ್ಲೇನೆ । **ಗೋಃ**—ಸಂಚರಿಸುತ್ತಿರುವ । **ಚಂದ್ರಮಸಃ**—ಚಂದ್ರನ । **ಗೃಹೇ**—ಮಂಡಲದಲ್ಲಿ । **ತ್ವಷ್ಟುಃ**—ಪ್ರಕಾಶಕನಾದ ಆದಿತ್ಯನ । **ಅಪೀಚ್ಯಂ**—(ರಾತ್ರಿಕಾಲದಲ್ಲಿ) ಮರೆಯಾಗಿರುವ । **ನಾಮ**—ತೇಜಸ್ಸನ್ನು । **ಇತ್ಥಾ**—ಈ ವಿಧದಲ್ಲಿ । **ಅಮನ್ವತ**—ತಿಳಿದರು ॥

ಭಾವಾರ್ಥ

ರಾತ್ರಿಕಾಲದಲ್ಲಿ ಮರೆಯಾಗಿರುವ ಪ್ರಕಾಶಕನಾದ ಆದಿತ್ಯನ ತೇಜಸ್ಸನ್ನು ಇಲ್ಲೇ ಸಂಚರಿಸುತ್ತಿರುವ ಚಂದ್ರಬಿಂಬದಲ್ಲಿ ಕಂಡುಕೊಂಡರು.

English Translation

Thus did the solar rays perceive in this mansion of the travelling moon, the hidden light of the Sun.

॥ ವಿಶೇಷವಿಷಯಗಳು ॥

ಅತಿಮೂರ್ತಿ ಎಂಬ ಒಂದು ದಿನದಲ್ಲಿ ಮಾಡುವ ಯಾಗದಲ್ಲಿ ಒಂದು ತಿಂಗಳ ಮುಂಚೆ ಸೌರ್ಯಾಚಾಂದ್ರಮಸೀಷ್ಟಿಗಳನ್ನು ಮಾಡಬೇಕು. ಆಗ ಮೊದಲು ಚಾಂದ್ರಮಸೀಷ್ಟಿಯನ್ನು ಮಾಡುವಾಗ **ಅತ್ರಾಹ ಗೋರಮನ್ವತ** ಎಂಬ ಋಕ್ಕನ್ನು **ಪುರೋಽನುವಾಕ್ಯಾಮಂತ್ರವನ್ನಾಗಿ** ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಅತಿಮೂರ್ತಿನಾ** ಎಂಬ ಖಂಡದಲ್ಲಿ **ಅತ್ರಾಹ ಗೋರಮನ್ವತ ನವೋನವೋ ಭವತಿ ಜಾಯಮಾನಃ** ಎಂಬ ಸೂತ್ರದಿಂದ ವಿವೃತವಾಗಿರುವುದು. ( ಆ. ೯-೮ ).

ಅತ್ರ **ಅಹ**—ಇಲ್ಲಿಯೇ, ಈ ಪ್ರದೇಶದಲ್ಲಿಯೇ.

**ಗೋಃ—ಗಂತುಃ** । ಚಲಿಸುತ್ತಿರುವ

**ತ್ವಷ್ಟುಃ**— ಪ್ರಕಾಶಿಸುತ್ತಿರುವ ಆದಿತ್ಯನ; ದ್ವಾದಶಾದಿತ್ಯರುಗಳ ಹೆಸರುಗಳಲ್ಲಿ ತ್ವಷ್ಟೃವೂ ಒಂದಾಗಿರುವುದು.

**ಅಪೀಚ್ಯಂ— ಅಪಿಗತೇ ನಿಗತೇ ಭವಮಪೀಚ್ಯಂ। ಅಪೀಚ್ಯೋಽಪ್ರಕಾಶ ಇತಿ ಭಟ್ಟಭಾಸ್ಕರಮಿಶ್ರಃ** । ಪ್ರಕಾಶರಹಿತವಾದ ತೇಜಸ್ಸು. ಸೂರ್ಯನ ಕಿರಣಗಳು ಚಂದ್ರಮಂಡಲದ ಮೇಲೆ ಬಿದ್ದು ಪ್ರತಿಫಲಿತವಾಗುವವು. ಆಗ ಆ ಕಿರಣಗಳು ನೇರವಾದ ಸೂರ್ಯನ ಕಿರಣಗಳಂತೆ ಅತಿ ಪ್ರಕಾಶಮಾನವಾಗಿರದೆ ಸಾಧಾರಣ ಪ್ರಕಾಶದಿಂದ ಕೂಡಿರುವವು. ಯಾಸ್ಕರ ನಿರ್ವಚನವು-

> **ಅತ್ರ ಹ ಗೋಃ ಸಮಮಂಸತಾದಿತ್ಯರಶ್ಮಯಃ ಸ್ವಂ ನಾಮಾಪೀಚ್ಯಮಪಚಿತಮಪಗತಮಪಿಹಿತಮಂತರ್ಹಿತಂ ವಾಮುತ್ರ ಚಂದ್ರಮಸೋ ಗೃಹೇ** ॥ (ನಿ. ೪-೨೫).

ಇಲ್ಲಿ **ಅಪೀಚ್ಯಂ** ಎಂಬ ಶಬ್ದಕ್ಕೆ ಯಾಸ್ಕರು **ಅಪಚಿತಂ, ಅಪಗತಂ ಅಪಹಿತಂ ಅಂತರ್ಹಿತಂ ವಾ** ॥ ಎಂದು ಅರ್ಥ ವಿವರಣೆ ಮಾಡಿರುವರು. ಸೂರ್ಯನ ರಶ್ಮಿಗಳು ಸೂರ್ಯಮಂಡಲದಿಂದ ಹೊರಹೊರಟು ಚಂದ್ರಮಂಡಲದಲ್ಲಿ ಪ್ರವೇಶಿಸಿ ಅದರಲ್ಲಿ ಅಂತರ್ಹಿತವಾಗಿರುವವು. ಎಂದರೆ ಒಳಭಾಗದಲ್ಲಿ ಸೇರಿರುವುದರಿಂದ ಕಣ್ಣಿಗೆ ಕಾಣಿಸುವುದಿಲ್ಲ. ಆದರೂ ಆ ರಶ್ಮಿಗಳ ಪ್ರಕಾಶವು ಅತಿಪ್ರಕಾಶಯುಕ್ತವಿಲ್ಲದೆ ಸಾಧಾರಣ ಬೆಳಕಿನಿಂದ ನಮ್ಮ ಕಣ್ಣಿಗೆ ಕಾಣಿಸುವವು. **ಅಪೀಚ್ಯಂ** ಎಂದರೆ **ಅಂತರ್ಹಿತಂ**—ಒಳಗೆ ಸೇರಿರುವ ಎಂದರ್ಥವು.

**ಇತ್ಥಾ**—ಈ ಪ್ರಕಾರವಾಗಿ ಎಂದರೆ ಸೂರ್ಯನ ಕಿರಣಗಳು ಚಂದ್ರ ಮಂಡಲದ ಮೇಲೆ ಬಿದ್ದು ಪ್ರತಿಬಿಂಬಿತವಾಗಿರುವುದನ್ನು ಎಂದಭಿಪ್ರಾಯವು. ರಾತ್ರೆಯಲ್ಲಿ ಸೂರ್ಯನು ಕಾಣಿಸುವುದಿಲ್ಲ. ಆಗ ಆ ಸೂರ್ಯ ಸಂಬಂಧವಾದ ತೇಜಸ್ಸು ಉದಕಮಯವಾದ ಚಂದ್ರಬಿಂಬದ ಮೇಲೆ ಬಿದ್ದು ರಾತ್ರಿಕಾಲದಲ್ಲಿ ಹಗಲಿನಂತೆ ಕತ್ತಲೆಯನ್ನು ಹೋಗಲಾಡಿಸಿ ಬೆಳಕನ್ನುಂಟುಮಾಡುವುದು. ಆದುದರಿಂದ ಈ ವಿಧವಾದ ಬೆಳಕಿನಿಂದ ಕೂಡಿದ ಚಂದ್ರನೇ ಸೂರ್ಯನಾಗಿರುವನು ( ಚಂದ್ರನ ಬೆಳಕು ಸೂರ್ಯನಿಂದ ಬಂದಿರುವುದರಿಂದ ) ಎಂದು ಜನರು ತಿಳಿಯುವರು. ದ್ವಾದಶಾದಿತ್ಯರಲ್ಲಿ ಇಂದ್ರನೂ ಒಬ್ಬನೆಂದು ಪರಿಗಣಿಸಲ್ಪಟ್ಟು ಇಂದ್ರನೇ ಅಹೋ ರಾತ್ರಿಗಳಲ್ಲಿಯೂ ಪ್ರಕಾಶವನ್ನುಂಟುಮಾಡುವುದರಿಂದ ಈ ಋಕ್ಕು ಇಂದ್ರದೇವತಾಕವೆಂದು ತಿಳಿಯಬೇಕೆಂದು ಭಾಷ್ಯಕಾರರು ಹೇಳಿರುವರು. ಈ ಋಕ್ಕಿನಲ್ಲಿ ಚಂದ್ರನ ತೇಜಸ್ಸಿಗೇ ಪ್ರಾಧಾನ್ಯವಿರುವುದರಿಂದ ಚಾಂದ್ರಮಾಸ್ಯೇಷ್ಟಿಯಲ್ಲಿ ಈ ಋಕ್ಕಿನ ವಿನಿಯೋಗವಿರುವುದು.

ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ಹೇಳಿರುವರು.

> **ಅಥಾಪ್ಯಸ್ಯೈಕೋ ರಶ್ಮಿಶ್ಚಂದ್ರಮಸಂ ಪ್ರತಿ ದೀಪ್ಯತೇ ತದೇತೇನೋಪೇಕ್ಷಿತವ್ಯಂ। ಆದಿತ್ಯೋಽಸ್ಯ ದೀಪ್ತಿರ್ಭವತಿ। ಸುಷುಮ್ನಃ ಸೂರ್ಯರಶ್ಮಿಶ್ಚಂದ್ರಮಾ ಗಂಧರ್ವಃ ಇತ್ಯಪಿ ನಿಗಮೋ ಭವತಿ॥** ( ನಿ. ೨-೬ ).

ಎಂದರೆ ಸೂರ್ಯನ ರಶ್ಮಿಗಳಲ್ಲಿ ಸುಷುಮ್ನವೆಂಬ ಒಂದು ರಶ್ಮಿಯು ಚಂದ್ರಮಂಡಲದ ಮೇಲೆ ಬಿದ್ದು ಅದನ್ನು ಪ್ರಕಾಶಗೊಳಿಸುವುದು. ಇದನ್ನು ಮಂತ್ರದೃಷ್ಟಿಯಿಂದ ನೋಡಿ ತಿಳಿದುಕೊಳ್ಳಬೇಕು. ಸೂರ್ಯನ ರಶ್ಮಿಯಿಂದ ಚಂದ್ರನು ಬೆಳಗುವುದರಿಂದ ಚಂದ್ರನಲ್ಲಿರುವ ಬೆಳಕು ಸೂರ್ಯನಿಂದಲೇ ಉಂಟಾಗುವುದೆಂದು ತಿಳಿಯಬೇಕು. **ಆದಿತ್ಯೋಽಪಿ ಗೌರುಚ್ಯತೆ** (ನಿ.೨ –೬) ಎಂದು ಹೇಳಿರುವುದರಿಂದ ಇಲ್ಲಿ **ಗೋಃ** ಎಂದರೆ ಆದಿತ್ಯನಿಗೆ ಹೆಸರು. ಮತ್ತು **ಸರ್ವೇಽಪಿ ರಶ್ಮಯೋ ಗಾವ ಉಚ್ಯಂತೆ** (ನಿ. ೨-೭) ಗಾವಃ ಎಂದರೆ ಸೂರ್ಯರಶ್ಮಿಗಳಿಗೂ ಹೆಸರು.

॥ ವ್ಯಾಕರಣಪ್ರಕ್ರಿಯಾ ॥

**ಅಮನ್ವತ**— ಮನು ಅವಬೋಧನೇ ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ **ಆತ್ಮನೇಪದೇಷ್ವನತಃ** ಎಂಬುದರಿಂದ ಅತಾದೇಶ ಬರುವುದರಿಂದ ಅಮನ್ವತ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಅಪೀಚ್ಯಮ್**—**ಚಿಞ್** ಚಯನೇ ಧಾತು. ಅಪಿಪೂರ್ವವಾಗಿರುವಾಗ **ಅಘ್ನ್ಯಾದಯಶ್ಚ** (ಉ. ಸೂ. ೪-೫೫೧) ಎಂಬುದರಿಂದ ನಿಪಾತಮಾಡಿರುವುದರಿಂದ ಯತ್ ಪ್ರತ್ಯಯ ಬರುತ್ತದೆ. ನಿಪಾತದಿಂದಲೇ ಇಷ್ಟರೂಪ ಸಿದ್ಧಿಯಾಗುತ್ತದೆ. ಅಥವಾ ಅಪಿಪೂರ್ವಕವಾದ ಅಂಚುಧಾತುವಿಗೆ **ಋತ್ವಿಕ್‌ದಧೃಕ್** ಎಂಬುದರಿಂದ ಕ್ವಿನ್ ಪ್ರತ್ಯಯ. ಅನಿದಿತಾಂಹಲಉಪ ಎಂಬುದರಿಂದ ನಲೋಪ- **ಅಪಿಗತೇ ನಿಗತೇ ಭವಂ ಅಪೀಚ್ಯಮ್ ಭವೇ ಛಂದಸಿ** ಎಂಬುದರಿಂದ ಯತ್‌ಪ್ರತ್ಯಯ. **ಅಚಃ** ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ ಬಂದಮೇಲೆ **ಚೌ** ಎಂಬುದರಿಂದ ಪೂರ್ವಪದಕ್ಕೆ ದೀರ್ಘ. **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. **ಅಪೀಚ್ಯೋಽಪ್ರಕಾಶಃ** (ಅಪೀಚ್ಯ ಎಂದರೆ ಪ್ರಕಾಶಿಸದಿರುವುದು) ಎಂದು ಭಟ್ಟಭಾಸ್ಕರ ಮಿಶ್ರರು ಹೇಳಿರುತ್ತಾರೆ.

ಇತ್ಥಾ—ಇದಂ ಶಬ್ದದ ಮೇಲೆ ಪ್ರಕಾರರೂಪಾರ್ಥವು ತೋರುತ್ತಿರುವಾಗ **ಥಾ ಹೇತೌ ಚ ಛಂದಸಿ** (೫-೩-೨೬) ಎಂಬುದರಿಂದ ಥಾ ಪ್ರತ್ಯಯ. ಆ ಸೂತ್ರದಲ್ಲಿ ಇದಂ ಶಬ್ದವು ಅನುವೃತ್ತವಾಗುವುದಿಲ್ಲ ಎಂದು ಪಕ್ಷಾಂತರವಿದೆ. ಆಗ **ಇದಮುಸ್ಥಮುಃ** (ಪಾ. ೫-೩-೨೪) ಎಂಬುದರಿಂದ ಥಮುಪ್ರತ್ಯಯ. **ಸ್ವರಾದಿ ನಿಪಾತಮವ್ಯಯಂ** ಎಂದು ಈ ಪ್ರತ್ಯಯಾಂತವಾದ ಶಬ್ದಕ್ಕೆ ಅವ್ಯಯಸಂಜ್ಞಾ ಬರುತ್ತದೆ. ಆಗ ವ್ಯತ್ಯಯದಿಂದ **ಅವ್ಯಯಾದಾಪ್ ಸುಪಃ** (ಪಾ. ಸೂ. ೨-೪-೮೨) ಎಂಬುದರಿಂದ ಬರುವ ಸುಬ್ಲುಕನ್ನು ಬಾಧಿಸಿ **ಸುಪಾಂಸುಲುಕ್** ಸೂತ್ರದಿಂದ ವಿಭಕ್ತಿಗೆ ಡಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಚಂದ್ರಮಸಃ—ಚಂದ್ರಮಾಹ್ಲಾದನಂ ಮಿಮೀತೇ ನಿರ್ಮಿಮೀತೇ ಇತಿ ಚಂದ್ರಮಾಃ **ಚಂದ್ರೇ ಮೋಡಿತ್** (ಉ. ಸೂ. ೪-೬೬೭) ಎಂಬುದರಿಂದ ಚಂದ್ರಶಬ್ದವು ಉಪಪದವಾಗಿರುವಾಗ ಮಾಙ್ ಧಾತುವಿಗೆ ಅಸಿ ಪ್ರತ್ಯಯ ಬರುತ್ತದೆ. ಚಂದ್ರಮಸ್ ಶಬ್ದವಾಗುತ್ತದೆ. ಷಷ್ಠ್ಯೇಕವಚನಾಂತರೂಪ. ಕೃದುತ್ತರಪದಪ್ರಕೃತಿಸ್ವರವು ಪ್ರಾಪ್ತವಾದರೆ ದಾಸೀಭಾರಾದಿಯಲ್ಲಿ ಪಠಿತವಾಗಿರುವುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ ಪೂರ್ವದಲ್ಲಿರುವ ಚಂದ್ರಪದವಾದರೋ **ಸ್ಫಾಯಿತಂಚ** (ಉ. ಸೂ. ೨-೧೭೦) ಸೂತ್ರದಿಂದ ವಿಧಿಸಲ್ಪಡುವ ರಕ್ ಪ್ರತ್ಯಯಾಂತವಾದುದರಿಂದ ಅಂತೋದಾತ್ತವಾಗುತ್ತದೆ. ॥ ೧೫ ॥

---

ಸಂಹಿತಾಪಾಠಃ

ಕೋ ಅದ್ಯ ಯುಂಕ್ತೇ ಧುರಿ ಗಾ ಋತಸ್ಯ ಶಿಮೀವತೋ ಭಾಮಿನೋ ದುರ್ಹೃಣಾಯೂನ್ ।
ಆಸನ್ನಿಷೂನ್ಹೃತ್ಸ್ವಸೋ ಮಯೋಭೂನ್ಯ ಏಷಾಂ ಭೃತ್ಯಾಮೃಣಧತ್ಸ ಜೀವಾತ್ ॥ ೧೬ ॥

॥ ಪದಪಾಠಃ ॥

ಕಃ । ಅದ್ಯ । ಯುಂಕ್ತೇ । ಧುರಿ । ಗಾಃ । ಋತಸ್ಯ । ಶಿಮೀಽವತಃ । ಭಾಮಿನಃ ।
ದುಃಽಹೃಣಾಯೂನ್ ।
ಆಸನ್ಽಇಷೂನ್ । ಹೃತ್ಸುಽಅಸಃ । ಮಯಃಽಭೂನ್ । ಯಃ । ಏಷಾಂ ।
ಭೃತ್ಯಾಂ । ಋಣಧತ್ । ಸಃ । ಜೀವಾತ್ ॥ ೧೬ ॥

ಸಾಯಣಭಾಷ್ಯಂ

ಸರ್ವಪೃಷ್ಠಾಯಾಮಿಷ್ಟೌ ಕಾಯಸ್ಯ ಹವಿಷಃ ಕೋ ಅದ್ಯೇತಿ ದ್ವೇ ಋಚೌ ಯಾಜ್ಯಾನುವಾಕ್ಯೇ। ಸೂತ್ರಿತಂ ಚ । ಕಾಯಂ ದಶಮಂ ಕೋ ಅದ್ಯ ಯುಂಕ್ತೇ ಧುರಿ ಗಾ ಋತಸ್ಯೇತಿ ದ್ವೇ ಇತಿ ॥

ಅದ್ಯಾಸ್ಮಿನ್ಕರ್ಮಣಿ ಋತಸ್ಯ ಗಚ್ಛತ ಇಂದ್ರಸಂಬಂಧಿನೋ ರಥಸ್ಯ ಧುರ್ಯಶ್ವವಹನಪ್ರದೇಶೇ ಗಾ ಗಾತಿಮತೋಽಶ್ವಾನ್ ಕೋ ಯುಂಕ್ತೇ। ಕೋ ನಾಮ ನಿಯೋಕ್ತುಂ ಶಕ್ನೋತಿ। ನ ಕೋಽಪೀತ್ಯರ್ಥಃ। ಕೀದೃಶಾನಶ್ವಾನ್ । ಶಿಮೀವತೋ ವೀರ್ಯಕರ್ಮೋಪೇತಾನ್ ಭಾಮಿನಸ್ತೇಜಸಾ ಯುಕ್ತಾನ್ ದುರ್ಹೃಣಾಯೂನ್ ಪರೈರ್ದುಃಸಹೇನ ಕ್ರೋಧೇನ ಯುಕ್ತಾನ್। ಹೃಣೀಯತಿಃ ಕ್ರುಧ್ಯತಿಕರ್ಮಾ। ಆಸನ್ನಿಷೂನ್ ಯೇಷಾಮಾಸನ್ಯಾಸ್ಯೇ ಮುಖಪ್ರದೇಶೇ ಶತ್ರೂಣಾಂ ಪ್ರಹರಣಾರ್ಥಮಿಷವೋ ಬಾಣಾ ಬದ್ಧಾಸ್ತಾನ್ ಹೃತ್ಸ್ವಸಃ । ಹೃತ್ಸು ಶತ್ರೂಣಾಂ ಹೃದಯೇಷ್ವಸ್ಯಂತಿ ಸ್ವಕೀಯಂ ಪಾದಂ ಕ್ಷಿಪಂತೀತಿ ಹೃತ್ಸ್ವಸಃ । ಮಯೋಭೂನ್ ಮಯಸಃ ಸುಖಸ್ಯ ಭಾವಯಿತೄನ್ । ಸ್ವಕೀಯಾನಾಂ ಸುಖಪ್ರದಾನಿತ್ಯರ್ಥಃ । ಯೋ ಯಜಮಾನ ಏಷಾಮೀದೃಶಾನಾಮಶ್ವಾನಾಂ ಭೃತ್ಯಾಂ ಭರಣಕ್ರಿಯಾಂ ರಥವಾಹನಕ್ರಿಯಾಮೃಣಧತ್ ಸಮರ್ಧಯತಿ । ಸ್ತೌತೀತಿ ಯಾವತ್ । ಸ ಯಜಮಾನೋ ಜೀವಾತ್ । ಜೀವನವಾನ್ಭವೇತ್ ॥ ಯದ್ವಾ । ಕ ಇತಿ ಪ್ರಜಾಪತಿರುಚ್ಯತೇ । ಕೋ ಹ ವೈ ನಾಮ ಪ್ರಜಾಪತಿರಿತಿ ಶ್ರುತೇಃ । ಋತಸ್ಯ । ಯಜ್ಞಸ್ಯ ಧುರಿ ನಿರ್ವಾಹೇ ಗಾ ವೇದರೂಪಾನ್ವಾಗ್ವಿಶೇಷಾನದ್ಯೇದಾನೀಂ ಯುಂಕ್ತೇ । ಸಂಯೋಜಯತಿ । ಕೀದೃಶಾನ್ । ಶಿಮೀವತಃ ಪ್ರತಿಪಾದ್ಯೈಃ ಕರ್ಮಭಿರ್ಯುಕ್ತಾನ್ ಭಾಮಿನ ಉಜ್ಜ್ವಲಾನ್ ದುರ್ಹೃಣಾಯೂನ್ । ಹೃಣೀಯತಿರ್ಹಾನಿಕರ್ಮಾ । ಹಾತುಮಶಕ್ಯಾನ್ ವೇದಾಧ್ಯಯನಸ್ಯ ನಿತ್ಯತ್ವಾತ್ । ಆಸನ್ನಿಷೂನ್ ಆಸನ್ಯಾಸ್ಯ ಇಷುರೇಷಣಂ ಗಮನಮುಚ್ಚಾರಣಂ ಯೇಷಾಂ ತಾನ್ ಹೃತ್ಸ್ವಸೋ ಹೃತ್ಸು ಹೃದಯೇಷು ದೀಪ್ಯಮಾನಾನ್ । ಪ್ರಕಾಶಮಾನಾನಿತ್ಯರ್ಥಃ । ಮಯೋಭೂನ್ ಮಯಸೋಽಧ್ಯಯನಪ್ರಭವಸ್ಯ ಸುಖಸಾಧನಸ್ಯಾದೃಷ್ಟಸ್ಯ ಭಾವಯಿತೄನ್। ಯೋ ಯಜಮಾನ ಏಷಾಂ ವಚಸಾಂ ಭೃತ್ಯಾಂ ಭರಣಕ್ರಿಯಾಮೃಣಧತ್ ಋದ್ಧಿಮತೀಂ ಕರೋತಿ ಸ ಜೀವಾತ್ । ಸ ಏವ ಜೀವತಿ । ಅನ್ಯೇ ಜೀವನ್ಮೃತಾ ಇತ್ಯರ್ಥಃ ॥ ದುರ್ಹೃಣಾಯೂನ್ । ಹೃಣೀಙ್ ಲಜ್ಜಾಯಾಂ । ಕಂಡ್ವಾದಿತ್ವಾದ್ಯಕ್ । ಬಹುಲವಚನಾದಸ್ಮಾದುಣ್ಪ್ರ-

ತ್ಯಯಃ। ಅತೋ ಲೋಪೇ ಸತಿ ವರ್ಣವ್ಯಾಪತ್ತ್ಯಾ ೠಕಾರಃ। ಮೃಗಯ್ವಾದಿರ್ವಾ ದ್ರಷ್ಟವ್ಯಃ। ಆಸನ್ನಿಷೂನ್। ಪದ್ದನ್ನಿತ್ಯಾದಿನಾಸ್ಯಶಬ್ದಸ್ಯಾಸನ್ನಾದೇಶಃ। ಇಷ ಗತಾವಿತ್ಯಸ್ಮಾದಿಷೇಃ ಕಿಚ್ಚ। ಉ. ೧-೧೪। ಇತ್ಯುಪ್ರತ್ಯಯಃ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ। ಹೃತ್ಸ್ವಸಃ। ಅಸು ಕ್ಷೇಪಣೇ। ಅಸ ಗತಿದೀಪ್ತ್ಯಾದಾನೇಷು। ಕ್ವಿಪ್ಚೇತಿ ಕ್ವಿಪ್। ತತ್ಪುರುಷೇ ಕೃತಿ ಬಹುಲಮಿತ್ಯಲುಕ್। ಕೃದುತ್ತರಪದಪ್ರಕೃತಿಸ್ವರತ್ವಂ। ಮಯೋಭೂನ್। ವ್ಯತ್ಯಯೇನ ಹ್ರಸ್ವತ್ವಂ। ಯದ್ವಾ। ಮಿತದ್ರ್ವಾದಿಭ್ಯ ಉಪಸಂಖ್ಯಾನಂ। ಪಾ. ೩.೨.೧೮೦-೧। ಇತಿ ಡುಪ್ರತ್ಯಯಃ। ಭೃತ್ಯಾಂ। ಭೃಞ್ ಭರಣೇ। ಸಂಜ್ಞಾಯಾಂ ಸಮಜನಿಷದ। ಪಾ. ೩.೩-೯೯। ಇತಿ ಕ್ಯಪ್। ಉದಾತ್ತ ಇತ್ಯನುವೃತ್ತೇಃ ಪ್ರತ್ಯಯಸ್ಯೋದಾತ್ತತ್ವಂ। ಋಣಧತ್। ಋಧು ವೃದ್ಧೌ। ಲೇಟಿ ವ್ಯತ್ಯಯೇನ ಶ್ನಮ್। ಲೇಟೋಽಡಾಟಾವಿತ್ಯಡಾಗಮಃ। ಇತಶ್ಚ ಲೋಪ ಇತೀಕಾರಲೋಪಃ। ಜೀವಾತ್। ಜೀವ ಪ್ರಾಣಧಾರಣೇ। ಪೂರ್ವವಲ್ಲೇಟ್ಯಾಡಾಗಮಃ॥

ಪ್ರತಿಪದಾರ್ಥ

**ಅದ್ಯ**—ಈ ಯಜ್ಞಕರ್ಮದಲ್ಲಿ। **ಋತಸ್ಯ**—(ಇಂದ್ರನ) ರಥದ। **ಧುರಿ**—ಮುಂಭಾಗದಲ್ಲಿ (ನೊಗಕ್ಕೆ)। **ಶಿಮೀವತಃ**—ವೀರ್ಯಕರ್ಮಗಳಿಂದ ಕೂಡಿದುವೂ। **ಭಾಮಿನಃ**—ತೇಜೋಯುತವಾದುವೂ। **ದುರ್ಹೃಣಾಯೂನ್**-(ಶತ್ರುಗಳಿಂದ) ಸಹಿಸಲಸಾಧ್ಯವಾದ ಕೋಪವುಳ್ಳವೂ। **ಆಸನ್ನಿಷೂನ್**—ಮುಖಗಳಲ್ಲಿ ಬಾಣಗಳನ್ನಿಟ್ಟುಕೊಂಡಿರುವುವೂ। **ಹೃತ್ಸ್ವಸಃ**—(ಶತ್ರುಗಳ) ಎದೆಗಳ ಮೇಲೆ ಕಾಲಿನಿಂದ ಅದುಮಿ ಮೆಟ್ಟತಕ್ಕವೂ। **ಮಯೋಭೂನ್**—(ಮಿತ್ರರಿಗೆ) ಸುಖಸಂಪಾದಕವಾದವೂ ಆದ। **ಗಾಃ**—ಸಂಚರಿಸುವ (ಸ್ವಭಾವವುಳ್ಳ) ಅಶ್ವಗಳನ್ನು। **ಕಃ**—ಯಾವನು (ತಾನೇ)। **ಯುಂಕ್ತೇ**—ಕಟ್ಟುತ್ತಾನೆ.। **ಯಃ**—ಯಾವ ಯಜಮಾನನು। **ಏಷಾಂ**—ಈ ಅಶ್ವಗಳ। **ಭೃತ್ಯಾಂ**—(ಇಂದ್ರನ ರಥವನ್ನು) ನಿರ್ವಹಿಸುವ ಕರ್ಮವನ್ನು। **ಋಣಧತ್**—ಹೊಗಳುತ್ತಾನೆಯೋ। **ಸಃ**—ಆ ಯಜಮಾನನು। **ಜೀವಾತ್**—(ದೀರ್ಘವಾದ) ಆಯಸ್ಸನ್ನು ಪಡೆಯುತ್ತಾನೆ.।

ಅಥವಾ

**ಕಃ**—ಪ್ರಜಾಪತಿಯು। **ಋತಸ್ಯ**—ಯಜ್ಞದ। **ಧುರಿ**—ನಿರ್ವಹಣದಕಾರ್ಯಗಲ್ಲಿ। **ಶಿಮೀವತಃ**-ಪ್ರತಿಪಾದ್ಯವಾದ ಕರ್ಮಗಳಿಂದ ಕೂಡಿದುವೂ। **ಭಾಮಿನಃ**—ಪ್ರಕಾಶಮಾನವಾದುವೂ। **ದುರ್ಹೃಣಾಯೂನ್**—ತ್ಯಾಜ್ಯವಲ್ಲದೇ ನಿಯತವಾಗಿರುವುವೂ। **ಆಸನ್ನಿಷೂನ್**—ಮುಖದಿಂದ ಉಚ್ಚರಿಸಲ್ಪಡುವುವೂ। **ಹೃತ್ಸ್ವಸಃ**—ಹೃದಯದಲ್ಲಿ ಕಾಂತಿಯನ್ನು ಬೀರುವುವೂ। **ಮಯೋಭೂನ್**—ಸುಖಸಾಧನವಾದ ಅದೃಷ್ಟವನ್ನು ಉಂಟುಮಾಡುವುವೂ ಆದ। **ಗಾಃ**—ವೇದರೂಪಗಳಾದ ವಾಕ್ಕುಗಳನ್ನು। **ಅದ್ಯ**—ಈ ಯಜ್ಞಕಾಲದಲ್ಲಿ। **ಯುಂಕ್ತೇ**—ಸೇರಿಸುತ್ತಾನೆ.। **ಯಃ**—ಯಾವ ಯಜಮಾನನು। **ಏಷಾಂ**—ಈ ವೇದವಾಕ್ಕುಗಳ। **ಭೃತ್ಯಾಂ**—ಸಂದೇಶಕೃತ್ಯಗಳನ್ನು। **ಋಣಧತ್**—ಪರಿಪಾಲಿಸುತ್ತಾನೆಯೋ। **ಸಃ**—ಆ ಯಜಮಾನನು (ಅವನೇ)। **ಜೀವಾತ್**-ದೀರ್ಘಾಯುವಾಗಿ ಜೀವಿಸುತ್ತಾನೆ.।

ಭಾವಾರ್ಥ

ಈ ಯಜ್ಞಕರ್ಮದಲ್ಲಿ ಇಂದ್ರನ ರಥದ ನೊಗಕ್ಕೆ, ವೀರ್ಯಕೃತ್ಯಗಳಿಂದ ಕೂಡಿದುವೂ, ತೇಜೋಯುತವಾದುವೂ, ಶತ್ರುಗಳಿಂದ ಸಹಿಸಲಸಾಧ್ಯವಾದ ಕೋಪವುಳ್ಳವೂ, ಮುಖಗಳಲ್ಲಿ ಬಾಣಗಳನ್ನಿಟ್ಟುಕೊಂಡಿರುವುವೂ, ಶತ್ರುಗಳ ಎದೆಗಳ ಮೇಲೆ ಕಾಲನ್ನಿಟ್ಟು ಮೆಟ್ಟತಕ್ಕವೂ, ಮಿತ್ರರಿಗೆ ಸುಖಸಂಪಾದಕವೂ, ಆದ ಅಶ್ವಗಳನ್ನು ಯಾವನು ಕಟ್ಟುತ್ತಾನೆ ? ಯಾವ ಯಜ್ಞಕರ್ತನು ಈ ಅಶ್ವಗಳ ಅಸಾಧಾರಣವಾದ ಇಂದ್ರನ ರಥವಾಹನಕ್ರಿಯೆಗಳನ್ನು ಹೊಗಳುತ್ತಾನೆಯೋ ಅವನು ದೀರ್ಘಾಯುವಾಗಿ ಜೀವಿಸುತ್ತಾನೆ.

English Translation

Who yokes to-day to the pole of the chariot (of Indra) his vigorous and radient horses, whose fury is unbearable, who have arrows in their mouths, who trample on the hearts of enemies and who give happiness to friends ? The sacrificer who praises the performance of these horses obtains long life.

॥ ವಿಶೇಷವಿಷಯಗಳು ॥

**ಸರ್ವಪೃಷ್ಠ**ವೆಂಬ ಇಷ್ಟಿಯಲ್ಲಿ **ಕೋ ಅದ್ಯ ಯುಂಕ್ತೇ** ಎಂಬ ಎರಡು ಋಕ್ಕುಗಳನ್ನು ಯಾಜ್ಯಾನುವಾಕ್ಯ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ **ಕಾಯಂ ದಶಮಂ ಕೋ ಅದ್ಯ ಯುಂಕ್ತೇ ಧುರಿ ಗಾ ಋತಸ್ಯೇತಿ ದ್ವೇ ಇತಿ** ಎಂಬ ವಾಕ್ಯದಿಂದ ನಿರ್ದೇಶಿಸಲ್ಪಟ್ಟಿರುವುದು.

**ಋತಸ್ಯ**—**ಋ ಗತೌ । ಗಚ್ಛತ ಇಂದ್ರಸಂಬಂಧಿನೋ ರಥಸ್ಯ ।** ಚಲಿಸುತ್ತಿರುವ ಇಂದ್ರನ ರಥದ

**ಧುರಿ**—ಕುದುರೆಯನ್ನು ಕಟ್ಟುವ ರಥದ ಭಾಗದಲ್ಲಿ ಎಂದರೆ ನೊಗದಲ್ಲಿ ಅಥವಾ ನೊಗಕ್ಕೆ

**ಗಾಃ**—ಇಲ್ಲಿ ಗಾಃ ಎಂದರೆ ಕುದುರೆಗಳನ್ನು ಎಂದರ್ಥವನ್ನು ಹೇಳಬೇಕು. ಈ ವಿಧವಾದ ಅರ್ಥವನ್ನು—

**ಏತೌ ಮೇ ಗಾವೌ ಪ್ರಮರಸ್ಯ ಯುಕ್ತೌ ಮೋಷು ಪ್ರ ಸೇಧೀರ್ಮುಹುರಿನ್ಮಮಂಧಿ ।**
(ಋ. ಸಂ. ೧೦-೨೭-೨೦)

ಎಂಬ ಋಕ್ಕು ಸಮರ್ಥಿಸುವುದು.

**ಶಿಮೀವತಃ**—**ವೀರ್ಯಕರ್ಮೋಪೇತಾನ್ ।** ಸಾಹಸಕರ್ಮಗಳನ್ನು ಮಾಡುವ. ಶಿಮೀ ಎಂದರೆ ಕರ್ಮ (ನಿ. ೩-೧)

**ಭಾಮಿನಃ**—**ಭಾ ದೀಪ್ತೌ ।** ಪ್ರಕಾಶಮಾನವಾದ ಎಂದರೆ ಧಷ್ಟಪುಷ್ಟಗಳಾಗಿ ನೋಡುವುದಕ್ಕೆ ಸುಂದರವಾಗಿ ಕಾಣುತ್ತಿರುವ.

**ದುರ್ಹೃಣಾಯೂನ್**—**ಹೃಣೀಯತಿಃ ಕ್ರುಧ್ಯತಿಕರ್ಮಾ** । ರೇಳತಿ ಹೇಳತಿ ಮೊದಲಾದ ಕ್ರೋಧ ಕರ್ಮವನ್ನು ಸೂಚಿಸುವ ಹತ್ತು ಧಾತುಗಳ ಮಧ್ಯದಲ್ಲಿ ಹೃಣೀಯತೇ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) **ದುರ್ಹೃಣಾಯೂನ್** ಎಂದರೆ ಶತ್ರುಗಳ ಮೇಲೆ ಕ್ರೋಧದಿಂದ ಕೂಡಿರುವ ಎಂದರ್ಥವು.

**ಆಸನ್ನಿಷೂನ್**—**ಅಸ್ಯೇ ಮುಖಪ್ರದೇಶೇ ಶತ್ರೂಣಾಂ ಪ್ರಹರಣಾರ್ಥಮಿಷವೋ ಬಾಣಾ ಬದ್ಧಾಸ್ತಾನ್** । ಶತ್ರುಗಳನ್ನು ಕೊಲ್ಲುವುದಕ್ಕಾಗಿ ಮುಖಭಾಗದಲ್ಲಿ ಬಾಣಗಳನ್ನು ಕಟ್ಟಿರುವ ಕುದುರೆಗಳನ್ನು. ಈ ಶಬ್ದದ ಅರ್ಥವು ಸ್ಪಷ್ಟವಾಗಿಲ್ಲ.

**ಹೃತ್ಸ್ವಸಃ**—**ಹೃತ್ಸು ಶತ್ರೂಣಾಂ ಹೃದಯೇಷ್ವಸಂತಿ ಸ್ವಕೀಯಂ ಪಾದಂ ಕ್ಷಿಪಂತೀತಿ ಹೃತ್ಸ್ವಸಃ ತಾನ್** । ಶತ್ರುಗಳ ಎದೆಯಮೇಲೆ ತಮ್ಮ ಪಾದಗಳನ್ನಿಡತಕ್ಕ ಎಂದರೆ ಯುದ್ಧದಲ್ಲಿ ಶತ್ರುಗಳನ್ನು ತುಳಿದುಕೊಲ್ಲತಕ್ಕ.

**ಮಯೋಭೂನ್**—ಮಯಃ ಎಂದರೆ ಸುಖವು (ನಿ. ೩-೧೩) ತಮ್ಮ ಜನರಿಗೆ ಸುಖವನ್ನುಂಟುಮಾಡುವ ಸ್ವಕೀಯಜನರ ವಿಷಯದಲ್ಲಿ ಕ್ರೋಧಾದಿಗಳಿಲ್ಲದೆ ಸೌಮ್ಯಸ್ವಭಾವದಿಂದ ಪ್ರವರ್ತಿಸುವ.

**ಭೃತ್ಯಾಂ**—**ಭೃ ಞ್ ಭರಣೇ** । **ಭರಣಕ್ರಿಯಾಂ ರಥವಾಹನಕ್ರಿಯಾಂ** । ರಥವನ್ನು ಎಳೆಯುವ ಕೆಲಸವನ್ನು.

**ಋಣಧತ್**—**ಋಧು ವೃದ್ಧೌ** । ಸಮರ್ಥನೆ ಮಾಡುವನೋ ಅಥವಾ ಪ್ರಶಂಸೆಮಾಡುವನೋ.

ಈ ಋಕ್ಕಿನಲ್ಲಿರುವ ಅನೇಕ ಶಬ್ದಗಳು ಕ್ಲಿಷ್ಟವಾಗಿರುವುವು. ಅರ್ಥವು ಸರಿಯಾಗಿ ಹೊಂದುವುದಿಲ್ಲ. ಈ ಋಕ್ಕಿಗೆ ಭಾಷ್ಯಕಾರರು ಎರಡು ವಿಧವಾದ ಅರ್ಥವನ್ನು ಹೇಳಿರುವರು. ಕಃ ಎಂಬ ಶಬ್ದಕ್ಕೆ ಸಾಮಾನ್ಯವಾದ ಯಾವ ಪುರುಷನು ಎಂಬ ಅರ್ಥವನ್ನೂ, ಕಃ=ಪ್ರಜಾಪತಿ ಎಂಬ ಅರ್ಥವನ್ನೂ ಅನುಸರಿಸಿ ಅದಕ್ಕನುಸಾರವಾಗಿ ಬೇರೆ ಬೇರೆ ಅರ್ಥ ವಿವರಣೆಮಾಡಿರುವರು.

### ವ್ಯಾಕರಣಪ್ರಕ್ರಿಯಾ

**ಯುಂಕ್ತೇ**—ಯುಜಿರ್ ಯೋಗೇ ಧಾತು. ರುಧಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ಯುಂಕ್ತೇ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ದುರ್ಹೃಣಾಯೂನ್**—ಹೃಣೀಙ್ ಲಜ್ಜಾಯಾಂ. ಧಾತು. ಕಂಡ್ವಾದಿಯಲ್ಲಿ ಸೇರಿರುವುದರಿಂದ **ಕಂಡ್ವಾದಿಭ್ಯೋಯಕ್** ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಬರುತ್ತದೆ. ಉಣಾದಿಯಲ್ಲಿ ಬಹುಲವಚನವಿರುವುದರಿಂದ ಇದಕ್ಕೂ ಉಣ್ ಪ್ರತ್ಯಯ ಬರುತ್ತದೆ. **ಅತೋಲೋಪಃ** ಎಂಬುದರಿಂದ ಯಕಿನ ಅಕಾರಕ್ಕೆ ಲೋಪ ವರ್ಣ ವ್ಯತ್ಯಯದಿಂದ ಈಕಾರಕ್ಕೆ ಆಕಾರಾದೇಶ. ಅಥವಾ ಮೃಗಯ್ವಾದಿಯಲ್ಲಿ ಸೇರಿರುವುದರಿಂದ **ಮೃಗಯ್ವಾದಯಶ್ಚ** (ಉ. ಸೂ. ೧-೩೭) ಎಂಬುದರಿಂದ ಆಕಾರ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಆಸನ್ನಿಷೂನ್**—**ಪದ್ದನ್ನೋಮಾಸ್** (ಪಾ. ಸೂ ೬-೧-೬೩) ಎಂಬುದರಿಂದ ಆಸ್ಯ ಶಬ್ದಕ್ಕೆ ಆಸನಾದೇಶ. ಇಷ ಗತೌ ಧಾತು. ಇದಕ್ಕೆ **ಇಷೇಃ ಕಿಚ್ಚ** (ಉ. ಸೂ. ೧-೧೩) ಎಂಬುನರಿಂದ ಉ ಪ್ರತ್ಯಯ. ಕಿತ್ವವಿಧಾನದಿಂದ ಲಘೂಪಧಗುಣ ಬರುವುದಿಲ್ಲ. ಆಸನಿ ಇಷವಃ ಯೇಷಾಂ. ಬಹುವ್ರೀಹಿ ಸಮಾಸದಲ್ಲಿ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಹೃತ್ಸ್ವಸಃ**— ಅಸು ಕ್ಷೇಪಣೇ ಅಥವಾ, ಅಸ ಗತಿದೀಪ್ತ್ಯಾದಾನೇಷು ಧಾತು. ಇದಕ್ಕೆ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಹೃತ್ಸು- ಅಸಃ ಎಂದು ಸಮಾಸವಾದಾಗ **ತತ್ಪುರುಷೇ ಕೃತಿ ಬಹುಲಂ** ಎಂಬುದರಿಂದ ವಿಭಕ್ತಿಗೆ ಅಲುಕ್. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಮಯೋಭೂನ್**—**ವ್ಯತ್ಯಯೋ ಬಹುಲಂ** ಎಂಬುದರಿಂದ ವ್ಯತ್ಯಯದಿಂದ ಭೂಎಂಬುದಕ್ಕೆ ಹ್ರಸ್ವ ಬರುತ್ತದೆ. ಅಥವಾ **ಮಿತದ್ರ್ವಾದಿಭ್ಯ ಉಪಸಂಖ್ಯಾನಮ್** (ಪಾ. ಸೂ. ೩-೨-೧೮೦-೧) ಎಂಬುದರಿಂದ ಆ ಗಣದಲ್ಲಿ ಸೇರಿರುವುದರಿಂದ ಡುಪ್ರತ್ಯಯ ಬಂದಾಗ ಟಿಲೋಪದಿಂದ ಉಕ್ತರೂಪವಾಗುತ್ತದೆ. ಇಲ್ಲಿಯೂ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಭೃತ್ಯಾಮ್**—ಭೃಞ್ ಭರಣೇ ಧಾತು. **ಸಂಜ್ಞಾಯಾಂ ಸಮಜನಿಷದ**—(ಪಾ. ಸೂ. ೩-೩-೯೯) ಎಂಬುದರಿಂದ ಸಂಜ್ಞಾ ತೋರುವಾಗ ಕ್ಯಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿ ತುಕ್** ಎಂಬುದರಿಂದ ಧಾತುವಿನ ಹ್ರಸ್ವಕ್ಕೆ (ಋಕಾರಕ್ಕೆ) ತುಕಾಗಮ. ಕ್ಯಪ್ ವಿಧಾಯಕ ಸೂತ್ರದಲ್ಲಿ ಉದಾತ್ತಃ ಎಂದು ಅನುವೃತ್ತವಾಗುವುದರಿಂದ ಪಿತ್ ಸ್ವರವು ಬಾಧಿತವಾಗಿ ಪ್ರತ್ಯಯಕ್ಕೆ ಉದಾತ್ತಸ್ವರ ಬರುತ್ತದೆ.

**ಋಣಧತ್**— ಋಧು ವೃದ್ಧೌ ಧಾತು. ಲೇಟಿನಲ್ಲಿ ಪ್ರಥಮಪುರುಷಏಕವಚನದಲ್ಲಿ ತಿ ಪ್ರತ್ಯಯ. **ಇತಶ್ಚ ಲೋಪಃ** ಸೂತ್ರದಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** ಎಂಬುದರಿಂದ ಅಡಾಗಮ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರಕ್ಕೆ ಬರುತ್ತದೆ. ಋಣಧತ್ ಎಂದು ರೂಪವಾಗುತ್ತದೆ. ಯಃ ಎಂದು ಹಿಂದೆ ಸಂಬಂಧವಿರುವುದರಿಂದ ನಿಘಾತಸ್ವರ ಪ್ರತಿಷಿದ್ಧವಾಗಿ ವಿಕರಣಸ್ವರ ಉಳಿಯುತ್ತದೆ.

**ಜೀವಾತ್**—ಜೀವ ಪ್ರಾಣಧಾರಣೇ ಧಾತು. ಹಿಂದಿನಂತೆಯೇ ಲೇಟಿನಲ್ಲಿ ರೂಪವಾಗುತ್ತದೆ. ಇಲ್ಲಿ ಆಡಾಗಮಮಾತ್ರ ವಿಶೇಷ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೬ ॥



ಸಂಹಿತಾಪಾಠಃ

ಕ ಈಷತೇ ತುಜ್ಯತೇ ಕೋ ಬಿಭಾಯ ಕೋ ಮಂಸತೇ ಸಂತ-
ಮಿಂದ್ರಂ ಕೋ ಅಂತಿ।
ಕಸ್ತೋಕಾಯ ಕ ಇಭಾಯೋತ ರಾಯೇಽಧಿ ಬ್ರವತ್ತನ್ವೇ೩
ಕೋ ಜನಾಯ ॥ ೧೭ ॥

॥ ಪದಪಾಠಃ ॥

ಕಃ । ಈಷತೇ । ತುಜ್ಯತೇ । ಕಃ । ಬಿಭಾಯ । ಕಃ । ಮಂಸತೇ । ಸಂತಂ ।
ಇಂದ್ರಂ । ಕಃ । ಅಂತಿ ।
ಕಃ । ತೋಕಾಯ । ಕಃ । ಇಭಾಯ । ಉತ । ರಾಯೇ । ಅಧಿ । ಬ್ರವತ್ ।
ತನ್ವೇ । ಕಃ । ಜನಾಯ ॥ ೧೭ ॥

ಸಾಯಣಭಾಷ್ಯ

ಅನುಗ್ರಹೀತರೀಂದ್ರ ಆಗತೇ ಸತಿ ಕ ಈಷತೇ। ಶತ್ರೋರ್ಭೀತಃ ಸನ್ ಕೋ ನಿರ್ಗಚ್ಛತಿ। ನ ಕೋಽಪೀತ್ಯರ್ಥಃ। ಕಸ್ತುಜ್ಯತೇ। ಕೋ ಹಿಂಸ್ಯತೇ। ಶತ್ರುಭಿರ್ಹಿಂಸ್ಯೋಽಪಿ ಕಶ್ಚಿನ್ನಾಸ್ತೀತ್ಯರ್ಥಃ। ಕೋ ಯಜಮಾನೋ ಬಿಭಾಯ। ಬಿಭೇತಿ। ಇಂದ್ರೇ ರಕ್ಷಕೇ ಸತಿ ಭಯಮಪಿ ನೋತ್ಪದ್ಯತೇ ದೂರೇ ತಸ್ಯ ಶತ್ರುಕೃತಾ ಹಿಂಸಾ। ಅತ್ಯಂತಿಕೇ ಸಮೀಪೇ ಸಂತಮಸ್ಮಾಕಂ ರಕ್ಷಕತ್ವೇನ ವರ್ತಮಾನಮಿಂದ್ರಂ ಕಃ ಪುರುಷೋ ಮಂಸತೇ। ಜಾನಾತಿ। ವಯಮೇವ ಜಾನೀಮೋ ನಾನ್ಯ ಇತ್ಯರ್ಥಃ। ಏಕಃ ಕಃ ಪೂರಕಃ। ಯುದ್ಧೇ ಸಹಾಯಾರ್ಥಮಿಂದ್ರ ಆಗತೇ ಸತಿ ಕೋ ಯಜಮಾನಸ್ತೋಕಾಯ ಪುತ್ರಾಯಾಧಿಬ್ರವತ್। ಹೇ ಇಂದ್ರಾಸ್ಮದೀಯಂ ಪುತ್ರಂ ರಕ್ಷೇತ್ಯೇವಂರೂಪಮಧಿವಚನಂ ಪಕ್ಷಪಾತೇನ ವಚನಂ ಬ್ರಾಹ್ಮಣಾಯಾಧಿಬ್ರೂಯಾದಿತಿ ಯಥಾ ಏವಂರೂಪಮಧಿವಚನಂ ಕೋ ಯಜಮಾನಃ ಕುರ್ಯಾತ್। ಸ್ವಯಮೇವೇಂದ್ರೋ ರಕ್ಷತೀತಿ ಭಾವಃ। ಇಭಾಯ ಗಜಾಯ ಕೋಽಧಿ ಬ್ರವತ್। ಉತಾಪಿ ಚ ರಾಯೇ ಶತ್ರುಭಿರಪಹ್ರಿಯಮಾಣಾಯ ಧನಾಯ ಕೋಽಧಿ ಬ್ರವತ್।

**ಅಪಹ್ರಿಯಮಾಣಮಸ್ಮದೀಯಂ ಧನಂ ರಕ್ಷೇತ್ಯಧಿವಚನಮಪಿ ಕೋ ಯಜಮಾನಃ ಕುರ್ಯಾತ್ । ನ ಕೋऽಪೀತ್ಯರ್ಥಃ । ಅಪಿ ಚ ತನ್ವೇ ಸ್ವಕೀಯಾಯ ಶರೀರಾಯ ಜನಾಯ ಪರಿಜನಾಯ ಚ ಕೋऽಧಿ ಬ್ರವತ್ । ಸ್ವಶರೀರರಕ್ಷಾರ್ಥಂ ಪರಿಜನರಕ್ಷಾರ್ಥಂ ಚೇಂದ್ರಸ್ಯಾಧಿವಚನಂ ನಾಪೇಕ್ಷಿತಂ । ಸ್ತುತ್ಯಾ ಪ್ರೀತ ಇಂದ್ರಃ ಸ್ವಯಮೇವ ರಕ್ಷತೀತ್ಯರ್ಥಃ ॥ ಯದಾ ತು ಕಶಬ್ದಾಭಿಧೇಯಸ್ಯ ಪ್ರಜಾಪತೇಃ ಸಂಬಂಧಿನಿ ಕರ್ಮಣಿ ವಿನಿಯೋಗಃ ತದಾನೀಂ ಪರಮೈಶ್ವರ್ಯಯೋಗಾದಿಂದ್ರಶಬ್ದೇನ ಪ್ರಜಾಪತಿರೇವಾಭಿಧೀಯತೇ । ಯಥೈಂದ್ರ್ಯಾ ಗಾರ್ಹಪತ್ಯಮುಪತಿಷ್ಠತ ಇತಿ ವಿನಿಯೋಗಾನುಸಾರೇಣ ಕದಾ ಚನೇತ್ಯಸ್ಯಾಮೃಚಿ ವಿದ್ಯಮಾನ ಇಂದ್ರೋ ಗಾರ್ಹಪತ್ಯಪರತಯಾ ನೀಯತೇ ತದ್ವತ್ ॥ ಈಷತೇ । ಈಷ ಗತಿಹಿಂಸಾದರ್ಶನೇಷು । ಭೌವಾದಿಕ ಆತ್ಮನೇಪದೀ । ತುಜ್ಯತೇ । ತುಜ ಹಿಂಸಾಯಾಂ । ಕರ್ಮಣಿ ಯಕ್ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಯಕ ಏವ ಸ್ವರಃ ಶಿಷ್ಯತೇ । ಅತಿಜ ಇತಿ ಪರ್ಯುದಾಸಾನ್ನಿಘಾತಾಭಾವಃ । ಮಂಸತೇ । ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ಅಂತಿ । ಅಂತಿಕಸ್ಯ ಕಾದಿಲೋಪೋ ಬಹುಲಮಿತಿ ಕಲೋಪಃ । ಬ್ರವತ್ । ಬ್ರವೀತೇರ್ಲೇಟ್ಯಡಾಗಮಃ । ತನ್ವೇ । ತನುಶಬ್ದಾಚ್ಚತುರ್ಥ್ಯೇಕವಚನೇ ಜಸಾದಿಷು ಛಂದಸಿ ವಾ ವಚನಮಿತಿ ಘೇರ್ಙಿತೀತಿ ಗುಣಾಭಾವೇ ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತಿ ವಿಭಕ್ತೇಃ ಸ್ವರಿತತ್ವಂ**

ಪ್ರತಿಪದಾರ್ಥ

(ರಕ್ಷಕನಾದ ಇಂದ್ರನು ಸಮೀಪದಲ್ಲಿರುವಾಗ) **ಕಃ**—ಯಾವ ಯಜಮಾನನು (ತಾನೇ) । **ಈಷತೇ**—(ಶತ್ರುವಿನಿಂದ ಭೀತನಾಗಿ) ದೂರವಾಗಿ ಓಡುತ್ತಾನೆ । **ಕಃ**—ಯಾವನು । **ತುಜ್ಯತೇ**—(ಶತ್ರುವಿನಿಂದ) ಹಿಂಸಿತನಾಗುತ್ತಾನೆ । **ಕಃ**—ಯಾವನು । **ಬಿಭಾಯ**—ಭೀತನಾಗುತ್ತಾನೆ. । **ಅಂತಿ**—ನಮ್ಮ ಸಮೀಪದಲ್ಲಿ । **ಸಂತಂ**-(ರಕ್ಷಕನಾಗಿ) ಇರುವ । **ಇಂದ್ರಂ**—ಇಂದ್ರನನ್ನು । **ಕಃ**—(ನಾವಲ್ಲದೇ ಇತರ) ಯಾವನು ತಾನೇ । **ಮಂಸತೇ**—ತಿಳಿದುಕೊಳುತ್ತಾನೆ. । **ಕಃ**—ಯಾವ ಯಜಮಾನನು ತಾನೇ । **ತೋಕಾಯ**—ಪುತ್ರಸಂತಾನಕ್ಕಾಗಿ । **ಅಧಿಬ್ರವತ್**—(ಇಂದ್ರನನ್ನು) ಪೀಡಿಸಬೇಕಾಗಿದೆ. (ಒತ್ತಾಯಪಡಿಸಬೇಕಾಗಿಯೇ ಇಲ್ಲ. ಅವನೇ ಅನುಗ್ರಹಿಸುತ್ತಾನೆ.) । **ಇಭಾಯ**—ಆನೆಗಾಗಿ । **ಕಃ**—ಯಾವನು (ನಿರ್ಬಂಧವಮಾಡಬೇಕಾಗಿದೆ) । **ಉತ**—ಮತ್ತು । **ರಾಯೇ**—(ಶತ್ರುಗಳಿಂದ ಅಪಹೃತವಾದ) ಧನಕ್ಕಾಗಿ (ಯಾವನು ಒತ್ತಾಯಪಡಿಸಬೇಕಾಗಿದೆ.) । **ತನ್ವೇ**—ತನ್ನ ಶರೀರ ರಕ್ಷಣೆಗಾಗಿಯೂ । **ಜನಾಯ**—ಪರಿಜನಕ್ಕಾಗಿಯೂ । **ಕಃ**—ಯಾವನು ತಾನೇ (ಇಂದ್ರನನ್ನು ನಿರ್ಬಂಧಿಸಬೇಕಾಗಿದೆ.)

ಭಾವಾರ್ಥ

ರಕ್ಷಕನಾದ ಇಂದ್ರನು ಸಮೀಪದಲ್ಲಿರುವಾಗ ಯಾವ ಯಜಮಾನನು ತಾನೇ ಶತ್ರುವಿನಿಂದ ಭೀತನಾಗಿ ದೂರ ಸರಿಯುತ್ತಾನೆ ? ಯಾವನು ಶತ್ರುವಿನಿಂದ ಹಿಂಸಿತನಾಗುತ್ತಾನೆ ? ನಮ್ಮ ಸಮೀಪದಲ್ಲಿ ರಕ್ಷಣೆಗಾಗಿ ನಿಂತಿರುವ ಇಂದ್ರನನ್ನು ನಾವಲ್ಲದೇ ಇತರನಾವನು ತಿಳಿಯಬಲ್ಲನು ? ಯಾವ ಯಜಮಾನನು ತಾನೇ, ಪುತ್ರಸಂತಾನಕ್ಕಾಗಲಿ, ಆನೆಗಾಗಲಿ, ಶತ್ರುಗಳಿಂದ ಅಪಹೃತವಾದ ಧನಕ್ಕಾಗಲೀ, ತನ್ನ ಆತ್ಮರಕ್ಷಣೆಗಾಗಲಿ ಅಥವಾ ಪರಿಜನರಿಗಾಗಲೀ ಇಂದ್ರನನ್ನು ಒತ್ತಾಯಪಡಿಸಿ ಪೀಡಿಸಬೇಕಾಗಿದೆ. ಈ ಒತ್ತಾಯವಿಲ್ಲದೇ ಇಂದ್ರನು ತಾನೇ ಎಲ್ಲವನ್ನೂ ಅನುಗ್ರಹಿಸುತ್ತಾನೆ

## English Translation

When Indra is at hand who flees through fear of enemies ? who is harmed ? who is terrified ? who is aware that Indra is present though he is near ? what need is there that any one should importune Indra for his son, his elephant, his property, his person, or his people ?

### ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಕಃ ಎಂಬ ಶಬ್ದಕ್ಕೆ ಪ್ರಜಾಪತಿಯೆಂದು ಅರ್ಥಮಾಡಿ ಅದರಂತೆ ಭಾಷ್ಯಕಾರರು ಅರ್ಥಾಂತರವನ್ನು ಹೇಳಿರುವರು.

**ಈಷತೇ—ಈಷ ಗತಿಹಿಂಸಾದರ್ಶನೇಷು । ಭೌವಾದಿಕ ಆತ್ಮನೇಪದೀ ।** ಹೋಗುತ್ತಾನೆ ಎಂದರೆ ಶತ್ರುಗಳ ಭಯದಿಂದ ಓಡಿಹೋಗುತ್ತಾನೆ. ಇಂದ್ರನು ನಮ್ಮ ಸಮೀಪದಲ್ಲಿದ್ದು ನಮ್ಮನ್ನು ರಕ್ಷಿಸುತ್ತಿರುವುದರಿಂದ ಯಾವ ಮನುಷ್ಯನೂ ಶತ್ರುವಿಗೆ ಹೆದರಿ ಓಡಿಹೋಗಬೇಕಾಗಿಲ್ಲ ಎಂದಭಿಪ್ರಾಯವು.

**ಮಂಸತೇ ಸಂತಮಿಂದ್ರಂ ಕೋ ಅಂತಿ—**ಇಂದ್ರನು ರಕ್ಷಣಾರ್ಥವಾಗಿ ನಮ್ಮ ಸಮೀಪದಲ್ಲಿದ್ದರೂ ಸಹ ಆ ವಿಷಯವನ್ನು ಯಾರು ತಾನೇ ತಿಳಿಯಬಲ್ಲರು ? ಇಂದ್ರನು ಸಮೀಪದಲ್ಲಿರುವುದು ಯಾರಿಗೂ ಗೊತ್ತಾಗುವುದಿಲ್ಲ. ಆದರೂ ಇಂದ್ರನು ಸಮೀಪವರ್ತಿಯಾಗಿ ಇದ್ದೇ ಇರುವನೆಂದಭಿಪ್ರಾಯವು.

**ಇಭಾಯ—ಗಜಾಯ ।** ಭಾಷ್ಯಕಾರರು ಈ ಶಬ್ದಕ್ಕೆ ಗಜ ಅಥವಾ ಆನೆಯೆಂದು ಅರ್ಥಮಾಡಿರುವರು ಋಗ್ವೇದದಲ್ಲಿ ಆನೆಯ ವಿಷಯವಾಗಿ ವಿಶೇಷವಾಗಿ ಎಲ್ಲಿಯೂ ಹೇಳಿಲ್ಲ. ಇದಲ್ಲದೆ ಸಾಧಾರಣ ಜನರ ಬಳಿಯಲ್ಲಿ ಆನೆ ಇರುವುದು ಅಸಂಭವವು. ಆದುದರಿಂದ ಈ ಶಬ್ದಕ್ಕೆ ಭಯರಹಿತ ಎಂಬ ಅರ್ಥವನ್ನು ಹೇಳುವುದು ಯುಕ್ತವೆಂದು ಪಾಶ್ಚಾತ್ಯಪಂಡಿತರು ಅಭಿಪ್ರಾಯಪಡುವರು. ಭಾಷ್ಯಕಾರರು ಸಹ ಈ ಅರ್ಥವನ್ನು ಅನೇಕಕಡೆ ಹೇಳಿರುವರು.

**ಅಧಿ ಬ್ರವತ್—ಅಧಿವಚನಂ ಕುರ್ಯಾತ್ ಜ್ಞಾಪಯೇತೀಂದ್ರಮಿತ್ಯರ್ಥಃ ।** ಪುತ್ರಾದಿಗಳನ್ನು ರಕ್ಷಿಸಬೇಕೆಂದು ಇಂದ್ರನನ್ನು ಜ್ಞಾಪಕಮಾಡಬೇಕಾದ ಆವಶ್ಯಕತೆ ಇಲ್ಲ. ಅವನೇ ಎಲ್ಲವನ್ನು ತಿಳಿದು ರಕ್ಷಿಸುವನೆಂದರ್ಥವು.

### ವ್ಯಾಕರಣಪ್ರಕ್ರಿಯಾ

**ಈಷತೇ**—ಈಷ ಗತಿಹಿಂಸಾದರ್ಶನೇಷು ಧಾತು. ಭ್ವಾದಿ. ಆತ್ಮನೇಪದೀ. ಲಟ್ ಪ್ರಥಮಪುರುಷ ಏಕವಚನದಲ್ಲಿ **ಟಿತಆತ್ಮ—** ಸೂತ್ರದಿಂದ ಏತ್ವ. ಶಪ್ ವಿಕರಣ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ತುಜ್ಯತೇ—**ತುಜ ಹಿಂಸಾಯಾಂ ಧಾತು. ಕರ್ಮಣಿಯಲ್ಲಿ ಲಟ್ ಪ್ರಥಮಪುರುಷಏಕವಚನದಲ್ಲಿ ಹಿಂದಿನಂತೆಯೇ ಏತ್ವ. **ಸಾರ್ವಧಾತುಕೇ ಯಕ್** ಎಂಬುದರಿಂದ ವಿಕರಣಸ್ಥಾನದಲ್ಲಿ ಯಕ್. ಕಿತ್ತಾದುದರಿಂದ

ಲಘೂಪಧಗುಣ ಬರುವುದಿಲ್ಲ. **ಅತಿಜಃ** ಎಂದು ಪರ್ಯುದಾಸಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ತೇ) **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತ ವಾಗುವುದರಿಂದ ಯಕಿನ ಉದಾತ್ತಸ್ವರವು ಉಳಿಯುತ್ತದೆ.

**ಬಿಭಾಯ**—ಞಿಭೀ ಭಯೇ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಣಲಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವಜಶ್ತ್ವ. ಧಾತುವಿನ ಈಕಾರಕ್ಕೆ ವೃದ್ಧಿ ಆಯಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಮಂಸತೇ**—ಮನ ಜ್ಞಾನೇ ಧಾತು. ಲೇಟನಲ್ಲಿ ಪ್ರಥಮಪುರುಷಏಕವಚನಪ್ರತ್ಯಯ **ಲೇಟೋ-ಅಡಾಟೌ** ಸೂತ್ರದಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್ ಧಾತುವಿನ ನಕಾರಕ್ಕೆ **ನಶ್ಚಾಪದಾಂತಸ್ಯಝಲಿ** ಎಂಬುದರಿಂಗ ಅನುಸ್ವಾರ. ನಿಘಾತಸ್ವರ ಬರುತ್ತದೆ.

**ಅಂತಿ**—ಅಂತಿಕ ಶಬ್ದದಲ್ಲಿ, **ಕಾದಿಲೋಪೋ ಬಹುಲಂ** ಎಂಬುದರಿಂದ ಕಕಾರಲೋಪ.

**ಬ್ರವತ್**—ಬ್ರೂಙ್ ವ್ಯಕ್ತಾಯಾಂ ವಾಚಿ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ಹಿಂದಿ ನಂತೆಯೇ ಅಡಾಗಮ ಇಕಾರಲೋಪ. ಧಾತುವಿಗೆ ಸಾರ್ವಧಾತುನಿಮಿತ್ತವಾಗಿ ಗುಣ. ಅವಾದೇಶ. ತಿಙಂತ ನಿಘಾತಸ್ವರ ಬರುತ್ತದೆ.

**ತನ್ವೇ**—ತನು ಶಬ್ದಕ್ಕೆ ಚತುರ್ಥೀಏಕವಚನ (ಙೇ) ಪರದಲ್ಲಿರುವಾಗ **ಜಸಾದಿಷು ಛಂದಸಿ ವಾ ವಚನಮ್** ಎಂಬುದರಿಂದ **ಘೇರ್ಙಿತಿ** ಸೂತ್ರದಿಂದ ಗುಣ ಬರುವುದಿಲ್ಲ. ಆಗ **ಇಕೋಯಣಚಿ** ಸೂತ್ರದಿಂದ ಯಣಾದೇಶ. ಉದಾತ್ತಕ್ಕೆ ಯಣಾದೇಶ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ** ಎಂಬುದರಿಂದ ಅನುದಾತ್ತವಾದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೭ ॥



॥ ಸಂಹಿತಾಪಾಠಃ ॥

ಕೋ ಅ॒ಗ್ನಿಮೀ॑ಟ್ಟೇ ಹ॒ವಿಷಾ॑ ಘೃ॒ತೇನ॑ ಸ್ರು॒ಚಾ ಯ॑ಜಾತಾ
ಋ॒ತುಭಿ॑ರ್ಧ್ರು॒ವೇಭಿಃ॑ ।
ಕಸ್ಮೈ॑ ದೇ॒ವಾ ಆ ವ॑ಹಾನಾ॒ಶು ಹೋಮ॒ ಕೋ ಮಂ॑ಸತೇ ವೀ॒-
ತಿಹೋ॑ತ್ರಃ ಸು॒ದೇವಃ॑ ॥ ೧೮ ॥

॥ ಪದಪಾಠಃ ॥

ಕಃ । ಅಗ್ನಿಂ । ಈಟ್ಟೇ । ಹವಿಷಾ । ಘೃತೇನ । ಸ್ರುಚಾ । ಯಜಾತೈ । ಋತುऽ-
ಭಿಃ । ಧ್ರುವೇಭಿಃ ।

ಕಸ್ಮೈ । ದೇವಾಃ । ಆ । ವಹಾನ್ । ಆಶು । ಹೋಮ । ಕಃ । ಮಂಸತೇ । ವೀತಿऽ
ಹೋತ್ರಃ । ಸುऽದೇವಃ ॥ ೧೮ ॥

ಸಾಯಣಭಾಷ್ಯಂ

ಕೋ ಯಜಮಾನೋऽಗ್ನಿಮೀಟ್ಟೇ । ಇಂದ್ರಾರ್ಥಂ ಹವಿರ್ನಿರುಪ್ಯಾಗ್ನಿಂ ಸ್ತೌತಿ । ಇಂದ್ರಾಯ ಹವಿರ್ನಿರ್ವಾಪೋऽಪಿ ಸಮ್ಯಕ್ಕರ್ತುಂ ನ ಶಕ್ಯತೇ । ಇಂದ್ರಸ್ಯ ದುರ್ವಿಜ್ಞಾನತ್ವಾತ್ । ಕೋ ವೇಂದ್ರಯಾಗಾರ್ಥಮಗ್ನಿಂ ಸ್ರುಚಾ ಜುಹ್ವಾ ಧ್ರುವೇಭಿರ್ಧ್ರುವೈರ್ನಿತ್ಯೈರೃತುಭಿರ್ವಸಂತಾದಿಕಾಲೈರುಪಲಕ್ಷಿತೇನ ಘೃತೇನ ಹವಿಷಾ ಯಜಾತೈ । ಯಜೇತ್ । ಯದ್ವಾ । ಋತವಃ ಪ್ರಯಾಜದೇವತಾಃ । ಋತವೋ ವೈ ಪ್ರಯಾಜಾ ಇತಿ ಶ್ರುತೇಃ । ತಾಭಿರ್ಧ್ರುವೈಃ ಪ್ರಕೃತೌ ವಿಕೃತೌ ಚಾನುಷ್ಠೇಯತಯಾ ನಿಶ್ಚಲೈರೃತುಭಿಃ ಸಹಾಗ್ನಿಮಾಜ್ಯಭಾಗದೇವತಾಂ ಘೃತೇನ ಹವಿಷಾ ಕೋ ಯಜೇತ್ । ನ ಕೋऽಪೀತ್ಯರ್ಥಃ । ಕಸ್ಮೈ ಯಜಮಾನಾಯ ಹೋಮ ಹ್ವಾತವ್ಯಂ ಪ್ರಶಸ್ಯಂ ಧನಮಾಶು ಶೀಘ್ರಂ ದೇವಾ ಆ ವಹಾನ್ । ಆವಹಂತಿ । ಪ್ರಯಚ್ಛಂತಿ । ನ ಕಸ್ಮಾ ಅಪೀತ್ಯರ್ಥಃ । ಇಂದ್ರ ಏವ ಧನಸ್ಯ ದಾತಾ ನಾನ್ಯೇ ದೇವಾ ಇತೀಂದ್ರಸ್ತೂಯತೇ । ವೀತಿಹೋತ್ರಃ ಪ್ರಾಪ್ತಯಜ್ಞಃ ಸುದೇವಃ ಶೋಭನದೇವತಾಕಃ ಕೋ ಯಜಮಾನೋ ಮಂಸತೇ । ಇಂದ್ರಂ ಸಮ್ಯಗ್ಜಾನಾತಿ । ನ ಕೋऽಪೀತ್ಯರ್ಥಃ । ಬಹುವಿಧೇನ ಸ್ತೋತ್ರೇಣ ಚಿರಕಾಲೋಪಾಸನೇನ ಚೇಂದ್ರಃ ಪ್ರತ್ಯಕ್ಷೋ ಭವತಿ ನಾನ್ಯೇನ ಪ್ರಕಾರೇಣೇತಿ ತಾತ್ಪರ್ಯಾರ್ಥಃ ॥ ಈಟ್ಟೇ । ಈಡ ಸ್ತುತೌ । ಅದಾದಿತ್ವಾಚ್ಛಪೋ ಲುಕ್ । ಸ್ರುಚಾ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಯಜಾತೈ । ಯಜತೇರ್ಲೇಟ್ಯಾಡಾಗಮಃ । ವೈತೋऽನ್ಯತ್ರೇತ್ಯೈಕಾರಃ । ವಹಾನ್ । ವಹತೇರ್ಲೇಟ್ಯಾಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಸಂಯೋಗಾಂತಸ್ಯೇತಿ ತಕಾರಲೋಪಃ । ಹೋಮ । ಹ್ವಯತೇಃ ಕೃತಾತ್ವಸ್ಯಾತೋ ಮನಿನ್ನಿತಿ ಮನಿನ್ । ಹ್ವ ಇತ್ಯನುವೃತ್ತೌ ಬಹುಲಂ ಛಂದಸೀತಿ ಸಂಪ್ರಸಾರಣಂ । ಯದ್ವಾ । ನಾಮನ್ಸೀಮನ್ನಿತ್ಯಾದೌ । ಉ. ೪–೧೫೦ । ಹೋಮಞ್ಯಾಭ್ಯೋ ಮನಿನ್ಪ್ರತ್ಯಯಾಂತೋ ನಿಪಾತ್ಯತೇ । ಮನ ಜ್ಞಾನೇ । ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ವೀತಿಹೋತ್ರಃ । ವೀ ಗತ್ಯಾದಿಷು । ಅಸ್ಮಾತ್ಕರ್ಮಣಿ ಮಂತ್ರೇ ವೃಷೇತ್ಯಾದಿನಾ ಕ್ತಿನ್ ಸ ಚೋದಾತ್ತಃ । ಹೋತ್ರಂ ಹೋಮ । ಹುಯಾಮಾಶ್ರುಭಸಿಭ್ಯಸ್ತ್ರನ್ । ಉ. ೪–೧೬೭ । ಇತಿ ತ್ರನ್ಪ್ರತ್ಯಯಃ । ವೀತಿಃ ಪ್ರಾಪ್ತೋ ಹೋಮೋ ಯೇನ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸುದೇವಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಕಃ**—ಯಾವ ಯಜಮಾನನು । **ಅಗ್ನಿಂ**—ಅಗ್ನಿಯನ್ನು । **ಈಟ್ಟೇ**—(ಇಂದ್ರನಿಗಾಗಿ ಹೊತ್ತಿಸಿ ಸಮರ್ಪಕವಾಗಿ) ಸ್ತುತಿಸುತ್ತಾನೆ. । (**ಕೋವಾ**—ಯಾವನು ತಾನೇ) । **ಸ್ರುಚಾ** ಸೌಟನಿಂದ । **ಧ್ರುವೇಭಿಃ**—ಶಾಶ್ವತಗಳಾದ । **ಋತುಭಿಃ**—ವಸಂತಾದಿಋತುಗಳಿಂದ ಉಪಲಕ್ಷಿತವಾದುದೂ । **ಘೃತೇನ**—ಘೃತರೂಪವಾದನ್ನೂ ಆದ । **ಹವಿಷಾ**— ಹವಿಸ್ಸಿನಿಂದ । **ಯಜಾತೈ**—ಪೂಜಿಸಬಲ್ಲನು ? **ಕಸ್ಮೈ**—ಯಾವ ಯಜಮಾನನಿಗೆ । **ಹೋಮ**—ಪ್ರಾರ್ಥಿತವಾದ ಧನವನ್ನು । **ಆಶು**—ಜಾಗ್ರತೆಯಾಗಿ । **ದೇವಾಃ**—(ಇಂದ್ರನಲ್ಲದೆ ಇತರ ಯಾವ) ದೇವತೆಗಳು । **ಆ ವಹಾನ್**—ತಂದೊದಗಿಸುವರು ? । **ವೀತಿಹೋತ್ರಃ**—ಯಜ್ಞಮಾಡಿದವನೂ । **ಸುದೇವಃ**-ಮಂಗಳಕರರಾದ ದೇವತೆಗಳ ಅನುಗ್ರಹವುಳ್ಳವನೂ ಆದ । **ಕಃ**—ಯಾವ ಯಜಮಾನನು । **ಮಂಸತೇ**—(ಇಂದ್ರನನ್ನು ಸಂಪೂರ್ಣವಾಗಿ) ತಿಳಿಯುತ್ತಾನೆ. ।

**ಅಥವಾ**

**ಕಃ**—ಯಾವ ಯಜಮಾನನು । **ಅಗ್ನಿಂ**—ಅಗ್ನಿಯನ್ನು । **ಈಟ್ಟೇ**—(ಇಂದ್ರನಿಗಾಗಿ ಹೊತ್ತಿಸಿ ಸಮರ್ಪಕವಾಗಿ) ಸ್ತುತಿಸುತ್ತಾನೆ. । (**ಕೋವಾ**—ಯಾವನು ತಾನೆ) । **ಸ್ರುಚಾ**—ಸೌಟನಿಂದ । **ಧ್ರುವೇಭಿಃ**—ನಿಶ್ಚಲರಾದ । **ಋತುಭಿಃ**—ಋತುದೇವತೆಗಳೊಡನೆ । **ಘೃತೇನ**—ಘೃತರೂಪದ । **ಹವಿಷಾ**—ಹವಿಸ್ಸಿನಿಂದ । **ಯಜಾತೈ**—ಪೂಜಿಸಬಲ್ಲನು ? । **ಕಸ್ಮೈ**—ಯಾವ ಯಜಮಾನನಿಗೆ । **ಹೋಮ**—ಪ್ರಾರ್ಥಿತವಾದ ಧನವನ್ನು । **ಆಶು**—ಜಾಗ್ರತೆಯಾಗಿ । **ದೇವಾಃ**—(ಇಂದ್ರನಲ್ಲದೇ ಇತರಯಾವ) ದೇವತೆಗಳು । **ಆ ವಹಾನ್**—ತಂದೊದಗಿಸುವರು ? । **ವೀತಿಹೋತ್ರಃ**—ಯಜ್ಞಮಾಡಿದವನೂ । **ಸುದೇವಃ**— ಮಂಗಳಕರರಾದ ದೇವತೆಗಳ ಅನುಗ್ರಹವುಳ್ಳವನೂ ಆದ । **ಕಃ**— ಯಾವ ಯಜಮಾನನು । **ಮಂಸತೇ**—(ಇಂದ್ರನನ್ನು ಸಂಪೂರ್ಣವಾಗಿ)ತಿಳಿಯುತ್ತಾನೆ ।

॥ ಭಾವಾರ್ಥ ॥

ಯಾವ ಯಜಮಾನನು ಇಂದ್ರನಿಗಾಗಿ ಅಗ್ನಿಯನ್ನು ಹತ್ತಿಸಿ ಸಮರ್ಪಕವಾಗಿ ಸ್ತುತಿಸಬಲ್ಲನು ? ಯಾವನು ತಾನೇ ವಸಂತಾದಿ ಶಾಶ್ವತವಾದ ಋತುಗಳಿಂದ ಉಪಲಕ್ಷಿತವಾದುದೂ ಮತ್ತು ಘೃತರೂಪವಾದುದೂ, ಆದ ಹವಿಸ್ಸಿನಿಂದ ಸೌಟುಗಳ ಮೂಲಕ ಪೂಜಿಸಬಲ್ಲನು ? ಇಂದ್ರನಲ್ಲದೇ ಇತರ ಯಾವ ದೇವತೆಗಳು ತಾನೇ ಯಜ್ಞಕರ್ತನಾದ ಯಾವನಿಗಾಗಲೀ ಪ್ರಾರ್ಥಿತವಾದ ಧನವನ್ನು ತಂದೊದಗಿಸಬಲ್ಲರು. ? ಯಜ್ಞ ಮಾಡಿದವನೂ ಮಂಗಳಕರರಾದ ಇತರ ದೇವತೆಗಳ ಅನುಗ್ರಹವಿರತಕ್ಕ ಯಾವ ಯಜಮಾನನು ತಾನೇ ಇಂದ್ರನನ್ನು ಸಂಪೂರ್ಣವಾಗಿ ತಿಳಿಯಬಲ್ಲನು ? ಅಂದರೆ ಇಂದ್ರನೇ ಸಕಲ ದೇವತೆಗಳಿಗಿಂತಲೂ ಶ್ರೇಷ್ಠನು. ಅವನನ್ನು ಸಾಕ್ಷಾತ್ಕರಿಸಬೇಕಾದರೆ ಅತ್ಯುತ್ತಮವಾದ ಉಪಾಸನೆಯಿಲ್ಲದೇ ಸಾಧ್ಯವಿಲ್ಲವೆಂದರ್ಥವು.

English Translation

Who priases Agni or sacrificial fire lighted for Indra or worships him with the oblation of clarified butter, presented in the ladle according to the seasons ? to whom the gods quickly bring the wealth that has been calle1

for ? what sacrificer, engaged in offering oblations and favoured by the gods, thoroughly knows Indra ?

ವಿಶೇಷವಿಷಯಗಳು

**ಸ್ರುಚಾ**— ಘೃತಾದಿಗಳನ್ನು ಹೋಮ ಮಾಡುವ ಮರದ ಸೌಟು ; ladle

**ಋತುಭಿಃ**—ಸಂವತ್ಸರದ ವಿಭಾಗಗಳು, ವಸಂತಾದಿ ಋತುಗಳು ಅಥವಾ ಹೋಮಾಭಿಮಾನಿದೇವತೆಗಳು. **ಋತವೋ ವೈ ಪ್ರಯಾಜಾಃ** ಎಂದರೆ ಋತುಗಳು ಅಥವಾ ಋತ್ವಭಿಮಾನಿದೇವತೆಗಳು. ಮುಖ್ಯ ಹೋಮಗಳಿಗೆ ಅಧಿಪತಿಗಳು ಎಂದು ಶ್ರುತಿವಾಕ್ಯವಿರುವುದು.

**ಧ್ರುವೇಭಿಃ**—ಪ್ರಕೃತಿ ವಿಕೃತಿಗಳೆಂಬ ಎರಡು ವಿಧವಾದ ಯಾಗಗಳು.

**ವೀತಿಹೋತ್ರಃ—ವೀ ಗತ್ಯಾದಿಷು । ಹೋತ್ರಂ ಹೋಮಃ ವೀತಿಃ ಪ್ರಾಪ್ತೋ ಹೋಮೋ ಯೇನ ।** ಹೋಮ ಮಾಡಿದ ಅಥವಾ ಯಜ್ಞಮಾಡಿದ

**ಸುದೇವಃ—ಶೋಭನದೇವತಾಕಃ ।** ಶ್ರೇಷ್ಠವಾದ ದೇವತೆಯನ್ನು ಆರಾಧಿಸುವ ಯಜಮಾನನು.

॥ ವ್ಯಾಕರಣಪ್ರಕ್ರಿಯಾ ॥

**ಈಟ್ಟೆ**—ಈಡ ಸ್ತುತೌ ಧಾತು. ಅದಾದಿ. ಲಟ್ ಪ್ರಥಮಪುರುಷಏಕವಚನದ ತ ಪ್ರತ್ಯಯಕ್ಕೆ **ಟಿತ ಆತ್ಮನೇ** ಸೂತ್ರದಿಂದ ಏತ್ವ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಷ್ಟುತ್ವದಿಂದ ಪ್ರತ್ಯಯ ತಕಾರಕ್ಕೆ ಟಕಾರಾದೇಶ. ಈಟ್ಟೆ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಸ್ರುಚಾ**—ಸ್ರುಚ್ ಶಬ್ದದ ತೃತೀಯಾ ಏಕವಚನದರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚಿನ ಪರದಲ್ಲಿರುವುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯಜಾತೈ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಲೇಟ್ ಪ್ರಥಮಪುರುಷ ಏಕವಚನ ದಲ್ಲಿ **ಲೇಟೋಽಡಾಟೌ** ಎಂಬುದರಿಂದ ಆಡಾಗಮ. **ವೈತೋಽನ್ಯತ್ರ** (ಪಾ. ಸೂ. ೩-೪-೯೬) ಎಂಬುದರಿಂದ ಅದಕ್ಕೆ ಐಕಾರಾಂತಾದೇಶ. ನಿಘಾತಸ್ವರ ಬರುತ್ತದೆ.

**ವಹಾನ್**—ವಹ ಪ್ರಾಪಣೇ ಧಾತು. ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯಕ್ಕೆ **ಝೋಽಂತಃ** ಎಂಬುದರಿಂದ ಅಂತಾದೇಶ. **ಲೇಟೋಽಡಾಟೌ** ಸೂತ್ರದಿಂದ ಅದಕ್ಕೆ ಆಡಾಗಮ. **ಇತಶ್ಚ ಲೋಪಃ ಪರಸ್ಮೈಪದೇಷು** ಎಂಬುದರಿಂದ ಕೊನೆಯ ಇಕಾರಕ್ಕೆ ಲೋಪ. ಆಗ **ಸಂಯೋಗಾಂತಸ್ಯ ಲೋಪಃ** ಎಂಬುದ ರಿಂದ ಕೊನೆಯ ತಕಾರಕ್ಕೆ ಲೋಪ. ವಹಾನ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಹೋಮ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. **ಆತೋ ಮನಿನ್** (ಪಾ. ಸೂ. ೩-೨-೭೪) ಎಂಬುದರಿಂದ ಇದಕ್ಕೆ **ಆತೋ ಲೋಪ ಇಟಿ ಚ** ಸೂತ್ರದಿಂದ ಆತ್ವ ಬಂದ ಮೇಲೆ ಮನಿನ್ ಪ್ರತ್ಯಯ. ಹ್ವಾ+ಮನ್ ಎಂದಿರುವಾಗ **ಹ್ವಃ** ಎಂದು ಅನುವೃತ್ತವಾಗುವಾಗ **ಬಹುಲಂ ಛಂದಸಿ** ಎಂಬುದರಿಂದ ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. ಉಕಾರಕ್ಕೆ ಆರ್ಧಧಾತುಕನಿಮಿತ್ತವಾಗಿ ಗುಣ. ಹೋಮನ್ ಶಬ್ದವಾಗುತ್ತದೆ. ಅಥವಾ **ನಾಮನ್‌ಸೀಮನ್** (ಉ. ಸೂ. ೪-೫೦) ಎಂಬಲ್ಲಿ ಹೋಮನ್ ಶಬ್ದವು ಮನಿನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿತ್ ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಸೂತ್ರದಿಂದ ಆದ್ಯುದಾತ್ತವಾಗುತ್ತದೆ.

**ಮಂಸತೇ**—ಮನ ಜ್ಞಾನೇ ಧಾತು. ಲೇಟನಲ್ಲಿ ಏಕವಚನಕ್ಕೆ **ಲೇಟೋಽಡಾಟೌ** ಸೂತ್ರದಿಂದ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ನಶ್ಚಾಪದಾಂತಸ್ಯ ಝುಲಿ** ಸೂತ್ರದಿಂದ ನಕಾರಕ್ಕೆ ಅನುಸ್ವಾರ. **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ವೀತಿಹೋತ್ರಃ**—ವೀ ಧಾತುವು ಗತ್ಯಾದ್ಯರ್ಥದಲ್ಲಿ ಉಕ್ತವಾಗಿದೆ. ಇದಕ್ಕೆ **ಮಂತ್ರೇ ವೃಷೇಷಪಚ** (ಪಾ. ಸೂ. ೩-೩-೯೬) ಎಂಬುದರಿಂದ ಕರ್ಮಣಿಯಲ್ಲಿ ಉದಾತ್ತವಾದ ಕ್ತಿನ್‌ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಹೋತ್ರಂ ಹೋಮಃ **ಹುಯಾಮಾಶ್ರುಭಸಿಭ್ಯಸ್ತ್ರನ್** (ಉ. ಸೂ. ೪-೬೦೭) ಎಂಬುದರಿಂದ ಹುಧಾತುವಿಗೆ ತ್ರನ್‌ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. ವೀತಿಃ ಪ್ರಾಪ್ತಃ ಹೋತ್ರಂ ಹೋಮಃ ಯೇನ ಸಃ ವೀತಿಹೋತ್ರಃ (ಹೊಂದಲ್ಪಟ್ಟ ಹೋಮವುಳ್ಳವನು) **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಸಮಾಸದಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸುದೇವಃ** — ಶೋಭನೋ ದೇವೋ ಯಸ್ಯ ಸಃ ಸುದೇವಃ **ನಞ್‌ಸುಭ್ಯಾಂ** (ಪಾ. ಸೂ. ೬-೭-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ॥ ೧೮ ॥



॥ ಸಂಹಿತಾಪಾಠಃ ॥

ತ್ವಮಂಗ ಪ್ರ ಶಂಸಿಷೋ ದೇವಃ ಶವಿಷ್ಠ ಮರ್ತ್ಯಂ।
ನ ತ್ವದನ್ಯೋ ಮಘವನ್ನಸ್ತಿ ಮರ್ಡಿತೇಂದ್ರ ಬ್ರವೀಮಿ ತೇ ವಚಃ ॥

॥ ಪದಪಾಠಃ ॥

ತ್ವಂ । ಅಂಗ । ಪ್ರ । ಶಂಸಿಷಃ । ದೇವಃ । ಶವಿಷ್ಠ । ಮರ್ತ್ಯಂ ।

ನ । ತ್ವತ್ । ಅನ್ಯಃ । ಮಘಽವನ್ । ಅಸ್ತಿ । ಮರ್ಡಿತಾ । ಇಂದ್ರ । ಬ್ರವೀಮಿ ।

ತೇ । ವಚಃ ॥ ೧೯ ॥

ಸಾಯಣಭಾಷ್ಯಂ

ಅಂಗೇತ್ಯಭಿಮುಖೀಕರಣೇ । ಅಂಗ ಶವಿಷ್ಠ ಹೇ ಬಲವತ್ತಮೇಂದ್ರದೇವೋ ದ್ಯೋತಮಾನಸ್ತ್ವಂ ಮರ್ತ್ಯಂ ಮರಣಧರ್ಮಾಣಂ ತ್ವಾಂ ಸ್ತುತವಂತಂ ಪುರುಷಂ ಪ್ರ ಶಂಸಿಷಃ । ಸಮ್ಯಗನೇನ ಸ್ತುತಮಿತಿ ಪ್ರಶಂಸ । ಹೇ ಮಘವನ್ ಧನವನ್ನಿಂದ್ರ ತ್ವದನ್ಯಸ್ತ್ವತ್ತೋಽನ್ಯಃ ಕಶ್ಚಿನ್ಮರ್ಡಿತಾ ಸುಖಯಿತಾ ನಾಸ್ತಿ । ಅತಃ ಕಾರಣಾತ್ತೇ ತುಭ್ಯಮಿದಂ ಸ್ತುತಿಲಕ್ಷಣಂ ವಚೋ ಬ್ರವೀಮಿ । ಉಚ್ಚಾರಯಾಮಿ ॥ ಶಂಸಿಷಃ । ಶಂಸು ಸ್ತುತೌ । ಲೇಟಿ ಸಿಪ್ಯಡಾಗಮಃ । ಸಿಬ್ಬಹುಲಂ ಲೇಟೀತಿ ವಿಕರಣಶ್ಚ ಸಿಪ್ । ತಸ್ಯಾರ್ಧಧಾತುಕತ್ವಾದಿಡಾಗಮಃ । ಶವಿಷ್ಠ । ಅತಿಶಯೇನ ಶವಸ್ವೀ ಶವಿಷ್ಠಃ । ಇಷ್ಠನಿ ವಿನ್ಮತೋರ್ಲುಕ್ । ಟೇರಿತಿ ಟಿಲೋಪಃ । ಮರ್ಡಿತಾ । ಮೃಡ ಸುಖನೇ । ತೃಚಿ ಇಡಾಗಮಃ ॥

ಪ್ರತಿಪದಾರ್ಥ

**ಅಂಗ ಶವಿಷ್ಠ**—ಅತ್ಯಂತ ಬಲಶಾಲಿಯಾದ ಎಲೈ ಇಂದ್ರನೇ । **ದೇವಃ**—ಪ್ರಕಾಶಮಾನನಾದ । **ತ್ವಂ**—ನೀನು । **ಮರ್ತ್ಯಂ**—( ನಿನ್ನನ್ನು ಸ್ತುತಿಸುವ ) ಮಾನವನನ್ನು । **ಪ್ರಶಂಸಿಷಃ**—( ನಿನ್ನ ತೃಪ್ತಿಸೂಚಕವಾದ ) ಪ್ರಶಂಸೆಯಿಂದ ಅನುಗ್ರಹಿಸು । **ಮಘವನ್**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ತ್ವದನ್ಯಃ**—ನಿನ್ನನ್ನು ಬಿಟ್ಟು ಇತರ ಯಾವನೂ । **ಮರ್ಡಿತಾ**—ಸುಖದಾತನಾಗಿ । **ನ ಅಸ್ತಿ**—ಇಲ್ಲವು (ಆದ್ದರಿಂದ) । **ತೇ**—ನಿನಗೆ । **ವಚಃ**—( ಈ ಸ್ತೋತ್ರರೂಪವಾದ ) ವಾಕ್ಕನ್ನು । **ಬ್ರವೀಮಿ**—ಪಠಿಸುತ್ತೇನೆ ॥

ಭಾವಾರ್ಥ

ಅತ್ಯಂತ ಬಲಶಾಲಿಯಾದ ಎಲೈ ಇಂದ್ರನೇ, ಪ್ರಕಾಶಮಾನನಾದ ನೀನು ನಿನ್ನನ್ನು ಸ್ತುತಿಸುವ ಮಾನವನನ್ನು ನಿನ್ನ ತೃಪ್ತಿಸೂಚಕವಾದ ಪ್ರಶಂಸೆಯಿಂದ ಅನುಗ್ರಹಿಸು. ಧನವಂತನಾದ ಇಂದ್ರನೇ, ನೀನಲ್ಲದೇ ನಮಗೆ ಸುಖದಾತನು ಇನ್ನಾರೂ ಇಲ್ಲವು. ಆದ್ದರಿಂದ ನಿನಗೆ ಅಭಿಮುಖವಾಗಿ ಈ ಸ್ತೋತ್ರರೂಪವಾದ ವಾಕ್ಕನ್ನು ಪಠಿಸುತ್ತೇನೆ.

English Translation

O powerful Indra, be present and be favourable to the mortal who adores you; there is no other giver of felicity, O Maghavan, than you; therefore I recite your praise.

ವಿಶೇಷವಿಷಯಗಳು

**ಅಂಗ—ಅಭಿಮುಖೀಕರಣೇ ।** ಇಂದ್ರನು ತನ್ನ ಎದುರಿಗೆ ನಿಂತಿರುವಂತೆ ಎಂದರೆ ಅಭಿಮುಖವಾಗಿರುವಂತೆ ಭಾವಿಸಿ ಸ್ತೋತ್ರಮಾಡುವಾಗ ಅಂಗಶಬ್ದದ ಪ್ರಯೋಗವಿರುವುದೆಂದು ಭಾಷ್ಯಕಾರರ ಅಭಿಪ್ರಾಯವು.

**ಶವಿಷ್ಠ—**ಶವಃ ಎಂದರೆ ಬಲವು. (ನಿ. ೩-೯) ಶವಿಷ್ಠ ಎಂದರೆ ಅತ್ಯಂತ ಬಲಶಾಲಿಯು. **ಅತಿಶಯೇನ ಶವಸ್ವೀ ಶವಿಷ್ಠಃ ।**

**ಮರ್ಡಿತಾ—ಮೃಡ ಸುಖನೇ ।** ಸುಖವನ್ನುಂಟುಮಾಡುವವನು.

**ಬ್ರವೀಮಿ ತೇ ವಚಃ—**ನಿನ್ನನ್ನು ಸ್ತುತಿರೂಪವಾದ ವಾಕ್ಯಗಳಿಂದ ಪ್ರಶಂಸೆಮಾಡುತ್ತೇನೆ.

ವ್ಯಾಕರಣಪ್ರಕ್ರಿಯಾ

**ಶಂಸಿಷಃ—**ಶಂಸು ಸ್ತುತೌ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್‌ಪ್ರತ್ಯಯ. **ಇತಶ್ಚ-ಲೋಪಃ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** ಸೂತ್ರದಿಂದ ಪುನಃ ಅಡಾಗಮ. **ಸಿಬ್ಬಹುಲಂ ಲೇಟಿ** ಎಂಬುದರಿಂದ ವಿಕರಣಕ್ಕೆ ಸಿಪ್. ಅದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಆರ್ಧ-ಧಾತುಕಸ್ಯೇಡ್ವಲಾದೇಃ** ಎಂಬುದರಿಂದ **ಇಡಾಗಮ. ಆದೇಶಪ್ರತ್ಯಯಯೋಃ** ಸೂತ್ರದಿಂದ ಷತ್ವ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗಗಳು ಬಂದಾಗ ಶಂಸಿಷಃ ಎಂದು ರೂಪವಾಗುತ್ತದೆ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಶವಿಷ್ಠ—**ಅತಿಶಯೇನ ಶವಸ್ವೀ ಶವಿಷ್ಠಃ । **ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ಶವಸ್ವಿನ್ ಶಬ್ದಕ್ಕೆ ಇಷ್ಠನ್ ಪ್ರತ್ಯಯ. **ವಿನ್‌ಮತೋರ್ಲುಕ್** (ಪಾ. ೬-೩-೬೫) ಎಂಬುದರಿಂದ ಇಷ್ಠನ್ ಪರವಾದಾಗ ವಿನ್‌ಪ್ರತ್ಯಯಕ್ಕೆ ಲುಕ್. **ಟೇಃ** (ಪಾ. ಸೂ. ೬-೪-೧೫೫) ಎಂಬುದರಿಂದ ಶವಸ್ ಶಬ್ದದ ಟಿಗೆ (ಅಸ್) ಲೋಪ. ಶವಿಷ್ಠ ಶಬ್ದವಾಗುತ್ತದೆ. ಸಂಬುದ್ಧಿಯಲ್ಲಿ **ಏಙ್‌ಹ್ರಸ್ವಾತ್ ಸಂಬುದ್ಧೇಃ** ಎಂಬುದರಿಂದ ಸುಲೋಪ. **ಆಮಂ-ತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಸ್ತಿ—**ಅಸ ಭುವಿ ಧಾತು. ಲಟ್ ಪ್ರಥಮಪುರುಷಏಕವಚನದರೂಪ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮರ್ಡಿತಾ—**ಮೃಡ ಸುಖನೇ ಧಾತು. ಕರ್ತ್ರರ್ಥದಲ್ಲಿ ತೃಚ್ ಪ್ರತ್ಯಯ. **ಆರ್ಧಧಾತುಕಸ್ಯೇಟ್** ಸೂತ್ರದಿಂದ ಅದಕ್ಕೆ ಇಡಾಗಮ. ಆರ್ಧಧಾತುಕ ನಿಬಂಧನವಾಗಿ ಧಾತುವಿಗೆ (ಲಘೂಪಧೆಗೆ) ಗುಣ. ಮರ್ಡಿತೃ ಶಬ್ದವಾಗುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಸು ಪರವಾದಾಗ **ಋದುಶನಸ್ಪು** ಸೂತ್ರದಿಂದ ಅನಙಾದೇಶ. **ಅಪ್‌ತೃನ್** ಸೂತ್ರದಿಂದ ಉಪಧಾದೀರ್ಘ. **ಹಲ್‌ಙ್ಯಾಭ್ಯೋ** ಸೂತ್ರದಿಂದ ಸುಲೋಪ. **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ ಮರ್ಡಿತಾ ಎಂದು ರೂಪವಾಗುತ್ತದೆ.

ಬ್ರವೀಮಿ—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಅದಾದಿ. ಉತ್ತಮಪುರುಷ ಏಕವಚನದ ಮಿಪಿಗೆ ಬ್ರುವಈಟ್ (ಪಾ. ಸೂ. ೭-೩-೯೩) ಎಂಬುದರಿಂದ ಈಟಾಗಮ. ಸಾರ್ವಧಾತುಕನಿಬಂಧನವಾಗಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ.

**ವಚಃ**—ವಚ ಪರಿಭಾಷಣೇ ಧಾತು. **ಸರ್ವಧಾತುಭ್ಯೋಽಸುನ್** ಎಂಬುದರಿಂದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೧೯ ॥



॥ ಸಂಹಿತಾಪಾಠಃ ॥

ಮಾ ತೇ ರಾಧಾಂಸಿ ಮಾ ತ ಊತಯೋ ವಸೋಽಸ್ಮಾನ್ಕದಾ

ಚನಾ ದಭನ್ ।

ವಿಶ್ವಾ ಚ ನ ಉಪಮಿಮೀಹಿ ಮಾನುಷ ವಸೂನಿ ಚರ್ಷಣಿಭ್ಯ

ಆ ॥ ೨೦ ॥

॥ ಪದಪಾಠಃ ॥

ಮಾ । ತೇ । ರಾಧಾಂಸಿ । ಮಾ । ತೇ । ಊತಯಃ । ವಸೋ ಇತಿ । ಅಸ್ಮಾನ್ ।

ಕದಾ । ಚನ । ದಭನ್ ।

ವಿಶ್ವಾ । ಚ । ನಃ । ಉಪಽಮಿಮೀಹಿ । ಮಾನುಷ । ವಸೂನಿ । ಚರ್ಷಣಿಽಭ್ಯಃ ।

ಆ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ವಸೋ ನಿವಾಸಯಿತರಿಂದ್ರ ತೇ ತವ ಸಂಬಂಧೀನಿ ರಾಧ್ನೋತ್ಯೇಭಿರಿತಿ ರಾಧಾಂಸಿ ಭೂತಾನ್ಯಸ್ಮಾನ್ಕದಾ ಚನ ಕದಾಚಿದಪಿ ಮಾ ದಭನ್ । ಮಾ ವಿನಾಶಯಂತು । ತಥೋತಯೋ ಗಂತಾರಃ । ಯದ್ವಾ । ಧೂತಯ ಇತ್ಯತ್ರ ವರ್ಣಲೋಪಃ । ಧೂತಯಃ ಕಂಪಯಿತಾರಸ್ತೇ ತ್ವದೀಯಾ ಮರುತಶ್ಚ ಮಾ ದಭನ್ । ಹೇ ಮಾನುಷ ಮನುಷ್ಯಹಿತೇಂದ್ರ ಚರ್ಷಣಿಭ್ಯೋ ಮಂತ್ರದ್ರಷ್ಟೃಭ್ಯೋ ನೋಽಸ್ಮಭ್ಯಂ ವಿಶ್ವಾ ವಿಶ್ವಾನಿ ಸರ್ವಾಣಿ ವಸೂನಿ ಧನಾನಿ ಚ ಆ ಉಪಮಿಮೀಹಿ । ಸರ್ವತ ಆಹೃತ್ಯಾಸ್ಮತ್ಸಮೀಪೇ ಕುರು। ಸರ್ವತ್ರ ವರ್ತಮಾನಂ ಧನಮಸ್ಮಭ್ಯಂ ಪ್ರಯಚ್ಛೇತ್ಯರ್ಥಃ ॥ ಕದಾ । ಕಿಂಶಬ್ದಾತ್ಸರ್ವೈಕಾನ್ಯಕಿಂಯತ್ತದಃ ಕಾಲೇ ದೇತಿ ದಾಪ್ರತ್ಯಯಃ । ಕಿಮಃ ಕ ಇತಿ ಕಾದೇಶಃ । ವ್ಯತ್ಯಯೇನಾದ್ಯುದಾತ್ತತ್ವಂ । ದಭನ್ । ದನ್ಭು ದಂಭೇ । ಲೋಡರ್ಥೇ ಛಾಂದಸೇ ಲಙ್ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ನ ಮಾಙ್ಯೋಗ ಇತ್ಯಡಭಾವಃ । ಮಿಮೀಹಿ । ಮಾಙ್ ಮಾನೇ ಶಬ್ದೇ ಚ । ವ್ಯತ್ಯಯೇನ ಪರಸ್ಮೈಪದಂ । ಜುಹೋತ್ಯಾದಿತ್ವಾತ್ ಶ್ಲುಃ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ಹೇರ್ಙಿತ್ತ್ವಾತ್ ಘುಮಾಸ್ಥೇತೀತ್ವಂ ॥

ಪ್ರತಿಪದಾರ್ಥ

**ವಸೋ**—ವಾಸಸ್ಥಾನದಾತನಾದ ಇಂದ್ರನೇ । **ತೇ**—ನಿನ್ನ (ನಿನ್ನಿಂದ ಅನುಗೃಹೀತವಾದ) । **ರಾಧಾಂಸಿ**–ಸಂಪತ್ತುಗಳೂ (ಮತ್ತು) । **ತೇ** – ನಿನ್ನ । **ಊತಯಃ**—ರಕ್ಷಣಾದಿ ಉಪಕಾರಗಳೂ । **ಅಸ್ಮಾನ್**—ನಮ್ಮನ್ನು । **ಕದಾ ಚನ** - ಯಾವಾಗಲೂ । **ಮಾ ದಭನ್**—ನಾಶವಾಗದಿರಲಿ । **ಮಾನುಷ**—ಮಾನವರ ಹಿತಕಾರಿಯಾದ ಇಂದ್ರನೇ । **ಚರ್ಷಣೀಭ್ಯಃ**—ಮಂತ್ರದ್ರಷ್ಟೃಗಳಾದ । **ನಃ**—ನಮಗೆ । **ವಿಶ್ವಾ ಚ ವಸೂನಿ**—ಸಮಸ್ತವಾದ ಧನಗಳನ್ನೂ ಕೂಡ । **ಆ ಉಪಮಿಮೀಹಿ**—ತಂದೊದಗಿಸು. ।

ಭಾವಾರ್ಥ

ಎಲೈ ಇಂದ್ರನೇ, ನೀನು ನಮ್ಮೆಲ್ಲರಿಗೂ ವಾಸಸ್ಥಾನದಾತನು. ನಿನ್ನಿಂದ ಅನುಗೃಹೀತಗಳಾದ ಸಂಪತ್ತುಗಳೂ ಮತ್ತು ನಿನ್ನ ರಕ್ಷಣಾದಿಉಪಕಾರಗಳೂ ನಮ್ಮನ್ನು ಯಾವಾಗಲೂ ನಾಶವಾಗದಿರಲಿ ಮಾನವರ ಹಿತಕಾರಿಯಾದ ಇಂದ್ರನೆ, ಮಂತ್ರದ್ರಷ್ಟೃಗಳಾದ ನಮಗೆ ಸಮಸ್ತವಾದ ಧನಗಳನ್ನೂ ತಂದೊದಗಿಸು.

English Translation

O Indra, let not your gifts of riches fail us, let not your protection fail us at any time ; lover of mankind, measure out ( bring to us who praise you ) all sorts of riches.

॥ ವಿಶೇಷವಿಷಯಗಳು ॥

**ಮಾ**—ಈ ಶಬ್ದವು ನಿಷೇಧಾರ್ಥವಾಚಕವು. ಇದರ ಅರ್ಥವು ಬೇಡ, ಮಾಡಬೇಡ ಎಂದಿರುವುದು. ಈ ಶಬ್ದದ ಪ್ರಯೋಗವು ಋಗ್ವೇದದಲ್ಲಿ ವಿಶೇಷವಾಗಿರುದು.

**ವಸೋ—ನಿವಾಸಯಿತರಿಂದ್ರ ।** ವಾಸಸ್ಥಾನಗಳನ್ನು ಕೊಡುವವನು ; granter of dwellings.

**ಕದಾ ಚನ**—ಯಾವಾಗಲೂ, ಎಂದಿಗೂ.

**ದಭನ್—ದನ್ಭು ಹಿಂಸಾಯಾಂ ।** ನಾಶವಾಗು, ಕ್ಷೀಣಿಸು. **ಮಾ ದಭನ್** ಎಂದರೆ ಎಂದೆಂದಿಗೂ ಕ್ಷೀಣಿಸದಂತೆ ಆಗಲಿ.

**ಆ ಉಪಮಿಮೀಹಿ— ಮಾಙ್ ಮಾನೇ ಶಬ್ದೇ ಚ ।** ಅಳತೆನಾಡು, ಎಂದರೆ ಹಂಚು. ಎಲ್ಲಾಕಡೆ ಯಿಂದಲೂ ತಂದು ನಮಗೆ ಕೊಡು ಎಂದಭಿಪ್ರಾಯವು.

**ಮಾನುಷ—ಮನುಷ್ಯಹಿತೇಂದ್ರ ।** ಮನುಷ್ಯರಿಗೆ ಹಿತವನ್ನುಂಟುಮಾಡುವ ಇಂದ್ರನು.

**ಊತಯಃ**—ರಕ್ಷಣೆಗಳು. ಭಾಷ್ಯಕಾರರು ಈ ಶಬ್ದಕ್ಕೆ—ಊತಯಃ ಎಂಬಲ್ಲಿ ವರ್ಣಲೋಪವಾಗಿರುವು ದೆಂದು ಹೇಳಿ ಧೂತಯಃ ಎಂಬ ಪದವನ್ನು ಇಟ್ಟುಕೊಂಡು ಅದಕ್ಕೆ—**ಧೂತಯಃ ಕಂಪಯಿತಾರಸ್ತೇ ತ್ವದೀಯಾ ಮರುತಶ್ಚ ಮಾ ದಭನ್ ।** ಕಂಪನಮಾಡುವ ಎಂದರೆ ವೇಗವಾಗಿ ಬೀಸುವ ನಿನ್ನ ಸಂಬಂಧವಾದ ಮರುತ್ತುಗಳು (ಗಾಳಿ) ನಮಗೆ ತೊಂದರೆಯನ್ನು ಮಾಡದಿರಲಿ ಎಂದು ಅರ್ಥವಿವರಣೆ ಮಾಡಿರುವರು. ಇದು ಅಷ್ಟು ಸಮಂಜಸ ವಾಗಿ ಕಾಣುವುದಿಲ್ಲ.

### ವ್ಯಾಕರಣಪ್ರಕ್ರಿಯಾ

**ರಾಧಾಂಸಿ**—ರಾಧ್ನೋತಿ ಏಭಿರಿತಿ ರಾಧಾಂಸಿ. ಅಸುನ್ ಪ್ರತ್ಯಯ ಹಿಂದೆ ಹೇಳಿದಂತೆ ರಾಧ (ಸಂಸಿದ್ಧೌ) ಧಾತುವಿಗೆ ಬಂದಾಗ ರಾಧಸ್ ಶಬ್ದವಾಗುತ್ತದೆ. ನಪುಂಸಕದಲ್ಲಿ ಜಸಿಗೆ ಬಂದ ಶಿ ಪರವಾದಾಗ **ನಪುಂಸಕಸ್ಯ ಝಲಚಃ** ಎಂಬುದರಿಂದ ನುಮಾಗಮ. **ನಶ್ಚಾಪದಾಂತಸ್ಯ ಝಲಿ** ಸೂತ್ರದಿಂದ ಅದಕ್ಕೆ ಅನು ಸ್ವಾರ. ಆದ್ಯುದಾತ್ತಸ್ವರ ಬರುತ್ತದೆ.

**ಕದಾ**—ಕಿಮ್ ಶಬ್ದ. **ಸರ್ವೈಕಾನ್ಯಕಿಂಯತ್ತದಃ ಕಾಲೇದಾ** (ಪಾ. ಸೂ. ೫-೩-೧೫) ಎಂಬುದರಿಂದ ದಾಪ್ರತ್ಯಯ. ಪ್ರಾಗ್ದಿಶೀಯದಲ್ಲಿ ಸೇರಿರುವುದರಿಂದ **ಪ್ರಾಗ್ದಿಶೋ ವಿಭಕ್ತಿಃ** ಎಂಬುದರಿಂದ ಇದಕ್ಕೆ ವಿಭಕ್ತಿ ಸಂಜ್ಞಾ ಬರುತ್ತದೆ. ಆಗ **ಕಿಮಃ ಕಃ** ಎಂಬುದರಿಂದ ಕಾದೇಶ. ಕದಾ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವು ಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಭನ್**—ದಂಭು ದಂಭೇ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲೋಡರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಅಂತಾದೇಶ. **ಇತಶ್ಚ** ಸೂತ್ರದಿಂದ ಅಂತ್ಯಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಅನಿದಿತಾಂ** ಸೂತ್ರದಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. **ನಮಾಙ್ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತ ಸ್ವರ ಬರುತ್ತದೆ.

ವಿಶ್ವಾ—ನಪುಂಸಕದಲ್ಲಿ ದ್ವಿತೀಯಾಬಹುವಚನದ ಶಸಿಗೆ **ಜಶ್ಶಸೋಃ ಶಿಃ** ಎಂಬುದರಿಂದ ಶಿ ಆದೇಶ. **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ.

**ಉಪಮಿಮೀಹಿ**—ಮಾಙ್ ಮಾನೇ ಶಬ್ದೇ ಚ. ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದಪ್ರತ್ಯಯ ಬರುತ್ತದೆ. **ಜುಹೋತ್ಯಾದಿಭ್ಯಃ ಶ್ಲುಃ** ಸೂತ್ರದಿಂದ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ **ಸೇರ್ಹ್ಯಪಿಚ್ಚ** ಎಂಬುದರಿಂದ ಲೋಟಿನ ಸಿಪಿಗೆ ಹಿ ಆದೇಶ. **ಭೃಞಾಮಿತ್** (ಪಾ. ಸೂ. ೭-೭೬) ಎಂಬುದರಿಂದ ಅಭ್ಯಾಸಾಕಾರಕ್ಕೆ ಇತ್ವ. **ಸಾರ್ವಧಾತುಕಮಪಿತ್** ಸೂತ್ರದಿಂದ ಹಿ ಆದೇಶವು ಙಿತ್ತಾಗುವುದರಿಂದ **ಘುಮಾಸ್ಥಾ**—(ಪಾ. ಸೂ. ೬-೪-೬೬) ಎಂಬುದರಿಂದ ಆಕಾರಕ್ಕೆ ಈಕಾರಾದೇಶ. ಮಿಮೀಹಿ ಎಂದು ರೂಪವಾಗುತ್ತದೆ **ಚವಾಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. **ತಿಙಿಚೋದಾತ್ತವತಿ** ಎಂಬುದರಿಂದ ಗತಿಗೆ ನಿಘಾತಸ್ವರ ಬರುತ್ತದೆ.

**ಮಾನುಷ**—**ಮನೋರ್ಜಾತಾವಞ್ಯತೌ ಷುಕ್ ಚ** ಎಂಬುದರಿಂದ ಮನುಶಬ್ದಕ್ಕೆ ಅಞ್‌ಪ್ರತ್ಯಯ. ತತ್ಸನ್ನಿಯೋಗದಿಂದ ಷುಕಾಗಮ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. ಮಾನುಷಶಬ್ದವಾಗುತ್ತದೆ. ಸಂಬುದ್ಧಿಯಲ್ಲಿ **ಏಙ್ಹ್ರಸ್ವಾತ್ ಸಂಬುದ್ಧೇಃ** ಎಂಬುದರಿಂದ ಸುಲೋಪ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೨೦ ॥

# ಎಂಭತ್ತೈದನೆಯ ಸೂಕ್ತವು

---

**ಚತುರ್ದಶೇಽನುವಾಕೇ ನವ ಸೂಕ್ತಾನಿ । ತತ್ರ ಪ್ರ ಯ ಇತಿ ದ್ವಾದಶರ್ಚಂ ಪ್ರಥಮಂ ಸೂಕ್ತಂ ಗೋತಮಸ್ಯಾರ್ಷಂ । ಪಂಚಮೀದ್ವಾದಶ್ಯೌ ತ್ರಿಷ್ಟುಭೌ । ಶಿಷ್ಟಾ ಜಗತ್ಯಃ । ಮರುತೋ ದೇವತಾ । ತಥಾ ಚಾನುಕ್ರಾಂತಂ । ಪ್ರ ಯೇ ದ್ವಾದಶ ಮಾರುತಂ ಹ ಪಂಚಮ್ಯಂತ್ಯೇ ತ್ರಿಷ್ಟುಭಾವಿತಿ । ಹಶಬ್ದಪ್ರಯೋಗಾದಿದಮಾದೀನಿ ಚತ್ವಾರಿ ಸೂಕ್ತಾನಿ ಮರುದ್ದೇವತ್ಯಾನಿ ॥ ಅಭಿಪ್ಲವಷಡಹಸ್ಯ ಚತುರ್ಥೇಽಹನ್ಯಾಗ್ನಿಮಾರುತ ಏತತ್ಸೂಕ್ತಂ ಮಾರುತನಿವಿದ್ಧಾನೀಯಂ । ಸೂತ್ರಿತಂ ಚ । ಪ್ರ ಯೇ ಶುಂಭಂತೇ ಜನಸ್ಯ ಗೋಪಾ ಇತ್ಯಾಗ್ನಿಮಾರುತಂ ॥ ಆ. ೭-೭ । ಇತಿ ॥**

ಅನುವಾದವು—ಈ ಸೂಕ್ತದಿಂದ ಹದಿನಾಲ್ಕನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಒಂಭತ್ತು ಸೂಕ್ತಗಳಿರುವುವು. (೮೫-೯೩) ಅವುಗಳಲ್ಲಿ **ಪ್ರ ಯೇ ಶುಂಭಂತೇ** ಎಂಬ ಮೊದಲನೆಯ ಸೂಕ್ತದಲ್ಲಿ ಹನ್ನೆರಡು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೋತಮನು ಋಷಿಯು. ಮರುದ್ದೇವತೆಗಳು, ಐದನೆಯ ಮತ್ತು ಹನ್ನೆರಡನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—**ಪ್ರ ಯೇ ದ್ವಾದಶ ಮಾರುತಂ ಹ ಪಂಚಮ್ಯಂತೇ ತ್ರಿಷ್ಟುಭಾವಿತಿ** ಎಂದು ಹೇಳಿರುವುದು. ಈ ವಾಕ್ಯದಲ್ಲಿರುವ ಹ ಶಬ್ದ ಪ್ರಯೋಗವು ಈ ಸೂಕ್ತದಿಂದ ಮೊದಲಾಗುವ ಮುಂದಿನ ನಾಲ್ಕುಸೂಕ್ತಗಳು ಮರು

ಷ್ಟೀವತಾಕವೆಂದು ಸೂಚಿಸುವುದು. **ಅಭಿಪ್ಲವಷಡಹವೆಂಬ** ಯಾಗದ ನಾಲ್ಕನೆಯ ದಿವಸ ಆಗ್ನಿಮಾರುತಶಸ್ತ್ರಮಂತ್ರಪಠನಕಾಲದಲ್ಲಿ ಮಾರುತನಿವಿದ್ಧಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದಲ್ಲಿ **ಪ್ರ ಯೇ ಶುಂಭಂತೇ ಜನಸ್ಯ ಗೋಪಾ ಇತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೭-೭)



॥ ಓಂ ॥

## ಸೂಕ್ತ—೮೫

॥ ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೮೫ ॥

॥ ಅಷ್ಟಕ— ೧ ॥ ಅಧ್ಯಾಯ— ೬ ॥ ವರ್ಗ— ೯, ೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ– ೧೨ ॥

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ಮರುತಃ ॥

॥ ಛಂದಃ— ೧-೪, ೬-೧೧, ಜಗತೀ, । ೫-೧೨, ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ಯೇ ಶುಂಭಂತೇ ಜನಯೋ ನ ಸಪ್ತಯೋ ಯಾಮನ್ರು-
ದ್ರಸ್ಯ ಸೂನವಃ ಸುದಂಸಸಃ ।
ರೋದಸೀ ಹಿ ಮರುತಶ್ಚಕ್ರಿರೇ ವೃಧೇ ಮದಂತಿ ವೀರಾ ವಿದಥೇ-
ಷು ಘೃಷ್ವಯಃ ॥೧॥

॥ ಪದಪಾಠಃ ॥

ಪ್ರ । ಯೇ । ಶುಂಭಂತೇ । ಜನಯಃ । ನ । ಸಪ್ತಯಃ । ಯಾಮನ್ । ರುದ್ರಸ್ಯ ।
ಸೂನವಃ । ಸುऽದಂಸಸಃ ।

ರೋದಸೀ ಇತಿ । ಹಿ । ಮರುತಃ । ಚಕ್ರಿರೇ । ವೃಧೇ । ಮದಂತಿ । ವೀರಾಃ । ವಿ-
ದಥೇಷು । ಘೃಷ್ವಯಃ ॥ ೧ ॥

ಸಾಯಣಭಾಷ್ಯಂ

ಹೇ ಮರುತೋ ಯಾಮನ್ ಯಾಮನಿ ಗಮನೇ ನಿಮಿತ್ತಭೂತೇ ಸತಿ ಪ್ರ ಶುಂಭಂತೇ ಪ್ರಕರ್ಷೇಣ ಸ್ವಕೀಯಾನ್ಯಂಗಾನ್ಯಲಂಕುರ್ವಂತಿ ಜನಯೋ ನ ಜಾಯಾ ಇವ । ಯಥಾ ಯೋಷಿತಃ ಸ್ವಕೀಯಾನ್ಯಂಗಾ-ನ್ಯಲಂಕುರ್ವಂತಿ ತದ್ವತ್ । ಕೀದೃಶಾ ಮರುತಃ । ಸಪ್ತಯಃ ಸರ್ಪಣಶೀಲಾಃ ರುದ್ರಸ್ಯ ಸೂನವಃ । ರೋದಯತಿ ಸರ್ವಮಂತಕಾಲ ಇತಿ ರುದ್ರಃ ಪರಮೇಶ್ವರಃ । ತಸ್ಯ ಪುತ್ರಾಃ । ಸುದಂಸಸಃ ಶೋಭನ-ಕರ್ಮಾಣಃ । ಏತದೇವೋಪಪಾದಯತಿ । ಹಿ ಯಸ್ಮಾನ್ಮರುತೋ ರೋದಸೀ ದ್ಯಾವಾಪೃಥಿವ್ಯೌ ವೃಧೇ ವೃಷ್ಟಿಪ್ರದಾನಾದಿನಾ ವರ್ಧನಾಯ ಚಕ್ರಿರೇ ಕೃತವಂತಃ । ಅತಃ ಸುದಂಸಸ ಇತ್ಯರ್ಥಃ । ವೀರಾ ವಿಶೇಷೇಣ ಶತ್ರುಕ್ಷೇಪಣಶೀಲಾಃ ಘೃಷ್ವಯೋ ಘರ್ಷಣಶೀಲಾಃ । ಮಹೀರುಹಶಿಲೋಚ್ಚಯಾದೇರ್ಭಂಜಕಾ ಇತ್ಯರ್ಥಃ । ಏವಂಭೂತಾಸ್ತೇ ಮರುತೋ ವಿದಥೇಷು । ವಿದಂತ್ಯೇಷು ಯಷ್ಟವ್ಯತಯಾ ದೇವಾನಿತಿ ವಿದಥಾ ಯಜ್ಞಾಃ । ತೇಷು ಮದಂತಿ । ಸೋಮಪಾನೇನ ಹೃಷ್ಯಂತಿ ॥ ಶುಂಭಂತೇ । ಶುಭ ಶುಂಭ ದೀಪ್ತೌ । ಭೌವಾದಿಕಃ । ಜನಯಃ । ಜಾಯಂತ ಆಸ್ವಪತ್ಯಾನೀತಿ ಜನಯೋ ಜಾಯಾಃ । ಇನ್ಸರ್ವಧಾತುಭ್ಯ ಇತೀ-ನ್ಪ್ರತ್ಯಯಃ । ಯಾಮನ್ । ಯಾ ಪ್ರಾಪಣೇ । ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾದಾತೋ ಮನಿನ್ನಿತಿ ಭಾವೇ ಮನಿನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಸುದಂಸಸಃ । ದಂಸ ಇತಿ ಕರ್ಮನಾಮ । ಶೋಭನಂ ದಂಸೋ ಯೇಷಾಂ । ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾ-ದ್ಯುದಾತ್ತತ್ವಂ । ಚಕ್ರಿರೇ । ಹಿ ಚೇತಿ ನಿಘಾತಪ್ರತಿಷೇಧಃ । ವೃಧೇ । ವೃಧು ವೃದ್ಧೌ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ಮದಂತಿ । ಮದೀ ಹರ್ಷೇ । ಶ್ಯನಿ ಪ್ರಾಪ್ತೇ ವ್ಯತ್ಯಯೇನ ಶಪ್ । ಪಾದಾದಿತ್ವಾನ್ನಿಘಾತಾಭಾವಃ । ವಿದಥೇಷು ವಿದ ಜ್ಞಾನೇ ರುವಿದಿಭ್ಯಾಂ ಕಿದಿತ್ಯಥ-ಪ್ರತ್ಯಯಃ । ಘೃಷ್ವಯಃ । ಘೃಷು ಸಂಘರ್ಷೇ । ಕೃವಿಘೃಷ್ವೀತ್ಯಾದಿನಾ ವಿನ್ಪ್ರತ್ಯಯಾಂತೋ ನಿಪಾತ್ಯತೇ ॥

॥ ಪ್ರತಿಪದಾರ್ಥ ॥

**ಸಪ್ತಯಃ**—ನುಸುಳಿಹೋಗತಕ್ಕವ್ರೂ । **ರುದ್ರಸ್ಯ ಸೂನವಃ**—ರುದ್ರಪುತ್ರರೂ, । **ಹಿ**—ಯಾವ ಕಾರಣ ದಿಂದ । **ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ವೃಧೇ**—(ವೃಷ್ಟಿಪ್ರದಾನಾದಿಗಳಿಂದ) ವೃದ್ಧಿಯಾಗುವಂತೆ ।

**ಚಕ್ರಿರೇ**—ಮಾಡಿದರೊ (ಅಗ್ನರಿಂದ) । **ಸುದಂಸಸಃ**—ಮಂಗಳಕರಗಳಾದ ಕೃತಿಗಳುಳ್ಳವರೂ । **ವೀರಾಃ**—ಪರಾಕ್ರಮಶಾಲಿಗಳೂ । **ಘೃಷ್ಣಯಃ**—(ಪರ್ವತಶಿಲೆಗಳನ್ನು) ಪುಡಿಮಾಡುವವರೂ ಆದ । **ಯೇ ಮರುತಃ**—ಯಾವ ಮರುತ್ತುಗಳು । **ಯಾಮನ್**— ತಮ್ಮ ಸಂಚಾರ ಕಾಲದಲ್ಲಿ । **ಜನಯೋ ನ**—(ಸುಂದರ) ಸ್ತ್ರೀಯರಂತೆ । **ಪ್ರ ಶುಂಭಂತೇ**—(ತಮ್ಮ ದೇಹಗಳನ್ನು) ಚೆನ್ನಾಗಿ ಅಲಂಕಾರ ಮಾಡಿಕೊಳ್ಳುತ್ತಾರೊ (ಅಂತಹ ಮರುತ್ತುಗಳು) **ವಿದಥೇಷು**—ಯಜ್ಞಗಳಲ್ಲಿ । **ಮದಂತಿ**—(ಸೋಮರಸಪಾನದಿಂದ) ಸಂತೃಪ್ತರಾಗುತ್ತಾರೆ. ।

ಭಾವಾರ್ಥ

ಸರಿದುಹೋಗತಕ್ಕವೂ, ರುದ್ರಪುತ್ರರೂ, ದ್ಯಾವಾಪೃಥಿವಿಗಳೆರಡನ್ನೂ ವೃಷ್ಟಿಪ್ರದಾನಾದಿಗಳಿಂದ ವೃದ್ಧಿಯಾಗುವಂತೆ ಮಾಡುವುದರಿಂದ ಮಂಗಳಕರಗಳಾದ ಕೃತಿಗಳುಳ್ಳವರೂ, ಪರಾಕ್ರಮಶಾಲಿಗಳೂ ಮತ್ತು ಪರ್ವತಶಿಲೆಗಳನ್ನು ಪುಡಿಮಾಡುವವರೂ ಆದ ಮರುತ್ತುಗಳು ತಮ್ಮ ಸಂಚಾರಕಾಲದಲ್ಲಿ ಸ್ತ್ರೀಯರು ತಮ್ಮ ದೇಹಗಳನ್ನು ಅಲಂಕರಿಸಿಕೊಳ್ಳುವಂತೆ ಅಲಂಕರಿಸಿಕೊಳ್ಳುತ್ತಾರೆ. ಮತ್ತು ಯಜ್ಞಗಳಲ್ಲಿ ಸೋಮರಸಪಾನದಿಂದ ಸಂತೃಪ್ತರಾಗುತ್ತಾರೆ

English Translation

The Maruts who are going forth decorate themselves like females ; they are the brave sons of Rudra and the doers of good work by which they promote the welware of earth and heaven; they are heroes who crush the solid rocks and they delight in sacrifices

॥ ವಿಶೇಷವಿಷಯಗಳು ॥

**ಮರುತಃ** ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು ಈ ರೀತಿ ಇರುವುದು—

**ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ ॥**

ಮಿತಂ ಎಂದರೆ ಸುಶ್ಲಿಷ್ಟವೆಂದರ್ಥವು. ಸುಶ್ಲಿಷ್ಟವಾಗಿ ಶಬ್ದಮಾಡುವುದರಿಂದ ಎಂದರೆ ಶಬ್ದಮಾಡುತ್ತಾ ಬೀಸುವುದರಿಂದ ಅಥವಾ ಚೆನ್ನಾಗಿ ಪ್ರಕಾಶಿಸುವುದರಿಂದ ಅಥವಾ ಬಹಳವಾಗಿ ಶಬ್ದಮಾಡುವುದರಿಂದ ಇವರಿಗೆ **ಮರುತಃ** ಎಂದು ಹೆಸರು. ಇಲ್ಲಿ ಕೆಲವರು ಮರುತೋ ಮಿತರಾವಿಣೋ ವಾ ಎಂಬ ಸ್ಥಳದಲ್ಲಿ **ಮರುತಃ ಅಮಿತರಾವಿಣಃ** ಎಂದು ಪದಚ್ಛೇದಮಾಡಬೇಕೆಂದೂ ಹಾಗೆ ಮಾಡಿದರೆ ಅಮಿತ ಎಂದರೆ ಬಹಳವಾಗಿ, ರಾವಿಣಃ—ಶಬ್ದಮಾಡುವುದರಿಂದ ಎಂದರ್ಥಮಾಡುವರು. ಅದರಂತೆಯೇ **ಅಮಿತರೋಚಿನಃ** ಎಂದೂ ಪದಚ್ಛೇದಮಾಡಿ ಬಹಳ ಪ್ರಕಾಶವುಳ್ಳವರು ಎಂಬರ್ಥವನ್ನು ಹೇಳಬಹುದು.

ಮರುದ್ದೇವತೆಗಳು ಅನೇಕ ಸಂದರ್ಭಗಳಲ್ಲಿ ಇಂದ್ರನೊಡನೆ ಸೇರಿ ಸ್ತುತಿಸಲ್ಪಡುವರು. **ಮರುದ್ಭಿರಿಂದ್ರ ಸಖ್ಯಂ ತೇ ಅಸ್ತು** (ಋ. ಸಂ. ೮-೯೬-೭) ಎಂದು ಇಂದ್ರನ ಸ್ತುತಿಯಿರುವುದರಿಂದ ಇಂದ್ರನಂತೆ ಇವರಿಗೂ ಶ್ರೇಷ್ಠತೆ ಇದೆ. ಋಗ್ವೇದದಲ್ಲಿ ಮೂವತ್ತುಮೂರು ಸೂಕ್ತಗಳು ಸಂಪೂರ್ಣವಾಗಿ ಮರುದ್ದೇವತಾಕವಾಗಿವೆ.

ಇದಲ್ಲದೆ ಇಂದ್ರನೊಡನೆ ಸೇರಿ ಸ್ತುತಿಸಲ್ಪಡುವ ಏಳು ಸೂಕ್ತಗಳೂ, ಪೂಷಾ ಮತ್ತು ಅಗ್ನಿಯೊಡನೆ ಸ್ತುತಿಸಲ್ಪಡುವ ಒಂದೊಂದು ಸೂಕ್ತಗಳೂ ಇವೆ. ಈ ಮರುದ್ದೇವತೆಗಳು ಅನೇಕರಿರುವರು. ಕೆಲವು ಸ್ಥಳಗಳಲ್ಲಿ **ತ್ರಿಸಪ್ತೈಃ** ( ಋ. ಸಂ. ೧-೧೩೩-೬ ) ಎಂದರೆ ಸಪ್ತಸಂಖ್ಯಾಕವಾದ ಮೂರು ವರ್ಗ ಅಥವಾ ಗುಂಪುಗಳೆಂದೂ, ಮತ್ತೆ ಕೆಲವು ಸ್ಥಳಗಳಲ್ಲಿ **ತ್ರಿ ಷಷ್ಟಿಸ್ತ್ವಾ ಮರುತೋ** ( ಋ. ಸಂ. ೮-೯೬-೮ ) ಮೂರು ಅರವತ್ತು ಎಂದರೆ ನೂರ ಎಂಭತ್ತು ಮರುದ್ದೇವತೆಗಳಿರುವರೆಂದೂ ಹೇಳಿದೆ. ಇವರು ರುದ್ರರ ಪುತ್ರರೆಂದೂ ಆದುದರಿಂದ ಇವರಿಗೆ ರುದ್ರಿಯಾಃ ಎಂಬ ಹೆಸರಿನಿಂದ ಕರೆಯಲ್ಪಡುವರೆಂದೂ ಪ್ರಸಿದ್ಧಿಯು. ಈ ಮರುದ್ದೇವತೆಗಳಿಗೆ ಪೃಶ್ನಿಯು ( ಸ್ವರ್ಗಲೋಕದ ಹಸುವು ) ತಾಯಿಯೆಂದೂ ಆದುದರಿಂದ ಇವರು ಪೃಶ್ನಿಮಾತರಃ—ಎಂದರೆ ಪೃಶ್ನಿಯೇ ತಾಯಿಯಾಗಿವುಳ್ಳವರು ಎಂಬ ಅರ್ಥವಿರುವುದರಿಂದ ಪೃಶ್ನಿಮಾತರಃ ಎಂಬ ಹೆಸರಿನಿಂದಲೂ ಕರೆಯಲ್ಪಡುವರು. ಇಲ್ಲಿ ಪೃಶ್ನಿಯೆಂದರೆ ಮೇಘಗಳಾಗಿರಬಹುದು. ಮೇಘಗಳು ಮಳೆಯನ್ನು ಸುರಿಸುವಾಗ ಸಾಧಾರಣವಾಗಿ ಗಾಳಿಯು ವೇಗವಾಗಿಯೂ ಶಬ್ದಸಹಿತವಾಗಿಯೂ ಬೀಸುತ್ತಿರುವುದರಿಂದ ಈ ದೇವತೆಗಳಿಗೆ ಈ ಹೆಸರು ಬಂದಿರಬಹುದು. ಅಗ್ನಿಯಿಂದಲೂ ಮಿಂಚಿನಿಂದಲೂ ಇವರು ಉತ್ಪನ್ನರಾದವರೆಂದೂ ಮತ್ತು ವಾಯುವಿನಿಂದಲೂ, ಸ್ವರ್ಗದಿಂದಲೂ ಉತ್ಪನ್ನರಾದವರೆಂದೂ, ಸ್ವತಃ ಉತ್ಪನ್ನರೆಂದೂ ಅಲ್ಲಲ್ಲಿ ಹೇಳಿದೆ. ರೋದಸೀ ಎಂಬ ದೇವತೆಯು ಇವರ ಪತ್ನಿಯೆಂದೂ ಇಂದ್ರಾಣೀ ಮತ್ತು ಸರಸ್ವತಿಯರಿಗೂ ಇವರಿಗೂ ವಿಶೇಷ ಸಂಬಂಧವಿದೆಯೆಂದೂ ಅಲ್ಲಲ್ಲಿ ಸೂಚಿತವಾಗಿರುವುದು

ಮರುದ್ದೇವತೆಗಳ ಸ್ಥಾನವು ಸ್ವರ್ಗಾಂತರಿಕ್ಷಭೂಮಿಗಳೆಂಬ ಮೂರು ಲೋಕಗಳು. ಸಿಡಿಲು ಮಿಂಚಿನೊಡನೆ ಸುರಿಯುವ ಮಳೆಯಲ್ಲಿ ಇವರ ಸಂಬಂಧವು ವಿಶೇಷವಾಗಿರುವುದರಿಂದ ಇವರು ಬಹಳ ಪ್ರಕಾಶವಾನರಾದವರೆಂದು ಕರೆಯುವುದು ರೂಢಿಯಾಗಿದೆ. ಮಿಂಚೇ ಇವರ ಆಯುಧವಾಗಿರುವುದು. ಶಿರಸ್ಸು, ಪಾದಗಳು, ಹೃದಯ ಮೊದಲಾದ ಅವಯವಗಳಲ್ಲಿ ಸುವರ್ಣಾಭರಣಗಳನ್ನು ಧರಿಸಿರುವಂತೆಯೂ ಕೈಯಲ್ಲಿ ಚಿನ್ನದ ಕೊಡಲಿಯನ್ನು ಹಿಡಿದಿರುವಂತೆಯೂ ಇರುವ ವರ್ಣನೆಗಳನೇಕವಿವೆ. ಪೃಷತೀ ಅಥವಾ ಚಿಕ್ಕೆಗಳಿಂದ ಕೂಡಿದ ಜಿಂಕೆಯನ್ನು ( spotted deer ) ಕಟ್ಟಿದ ರಥದಲ್ಲಿ ಕುಳಿತು ಸಂಚರಿಸುವ ವರ್ಣನೆಯೂ ಇದೆ.

ಈ ಮರುದ್ದೇವತೆಗಳು ದೊಡ್ಡವರು, ಶ್ರೇಷ್ಠರು, ತರುಣರು, ದುಷ್ಟಮೃಗಗಳಂತೆ ಕ್ರೂರರಾದವರು. ಆದರೆ ಮಕ್ಕಳಂತೆ ಆಟಪಾಟಗಳಲ್ಲಿ ಆಸಕ್ತರಾದವರು. ಅವರು ಸಂಚರಿಸುವ ರಭಸವು ಸಿಡಿಲಿನಂತೆ ಮಹಾ ಭಯಂಕರವಾಗಿರುವುದು. ಅವರು ತಮ್ಮ ಜತೆಯಲ್ಲಿಯೇ ವೃಷ್ಟಿಯನ್ನು ಎಂದರೆ ಮಳೆಯನ್ನು ತರುವರು. ಮರುದ್ವೃಧೇ ಎಂಬ ಪ್ರಸಿದ್ಧವಾದ ನದಿಯು ಇವರ ಸಾಹಸಕ್ಕೆ ಹೆಗ್ಗುರುತಾಗಿರುವುದು. ಇವರು ಉಂಟುಮಾಡುವ ವೃಷ್ಟಿಯು ಜೇನುತುಪ್ಪ, ಹಾಲು, ತುಪ್ಪ ಎಂದು ವಿಧವಿಧವಾದ ಹೆಸರುಗಳಿಂದ ಕರೆಯಲ್ಪಡುವುದು. ಇವರು ತಮ್ಮ ಜತೆಯಲ್ಲಿ ವೃಷ್ಟಿಯನ್ನು ತರುವುದಲ್ಲದೆ ಕತ್ತಲೆಯನ್ನು ಹೋಗಲಾಡಿಸುವರೆಂದು ಪ್ರಸಿದ್ಧಿಯು. ಇವರ ಗಾನವು ಇಂದ್ರನಿಗೆ ವೃತ್ರಾಸುರನ ಸಂಹಾರಕಾಲದಲ್ಲಿ ಶಕ್ತಿಯನ್ನು ಕೊಡುವುದು ಕೆಲವು ವೇಳೆ ಇವರು ಸೋಮಪಾನಮಾಡುವರೆಂದೂ, ಗಾನಮಾಡುವರೆಂದೂ ಯಜ್ಞಗಳನ್ನು ಸಹ ಮಾಡುವರೆಂದೂ ವಿಧವಿಧವಾದ ಅನೇಕ ವರ್ಣನೆಗಳಿವೆ.

ಮರುದ್ದೇವತೆಗಳ ಮುಖ್ಯ ಪರಾಕ್ರಮವೆಂದರೆ ವೃತ್ರಾಸುರರನ್ನು ಸಂಹಾರಮಾಡುವಾಗ ಇಂದ್ರನಿಗೆ ಸಹಾಯ ಮಾಡುವುದೇ ಆಗಿದೆ. ಕೆಲವು ಕಡೆ ಇವರನ್ನು ಇಂದ್ರನ ಪುತ್ರರು ಅಥವಾ ಸಹೋದರರೆಂದು ಸಂಬೋಧಿಸಿದ್ದರೂ ಇಂದ್ರನಿಗೆ ಮುಖ್ಯವಾದ ಕೆಲವು ಸಂದರ್ಭದಲ್ಲಿ ಸಹಾಯಮಾಡದೆ ಕೈಬಿಟ್ಟರೆಂದೂ ಅದಕ್ಕಾಗಿ ಇಂದ್ರನು ಇವರ

ಮೇಲೆ ಪ್ರತೀಕಾರಕ್ರಮವನ್ನು ಕೈಗೊಂಡು ಸಂಹಾರಮಾಡಲುದ್ಯುಕ್ತನಾದನೆಂದೂ, ಅಗಸ್ತ್ಯಋಷಿಯು ಬಹಳ ಪ್ರಯತ್ನದಿಂದ ಇಂದ್ರನನ್ನು ಸಮಾಧಾನ ಮಾಡಬೇಕಾಯಿತೆಂದೂ ವರ್ಣಿಸಿರುವ ಒಂದೆರಡು ಸೂಕ್ತಗಳಿವೆ. (ಋ.ಸಂ. ೧-೧೬೫ ; ೧-೧೭೦)

ಮರುತ್ತುಗಳೊಡನೆ ರುದ್ರನು ಇರುವ ಸಂಬಂಧದಲ್ಲಿ ಈ ಮರುದ್ದೇವತೆಗಳು ತಮ್ಮ ಆಯುಧವನ್ನು (ಕೊಡಲಿ, ಭರ್ಜಿ) ಉಪಯೋಗಿಸಿರುವ ವರ್ಣನೆ ಇದೆ. ( ಋ. ಸಂ. ೨-೫೬-೯ ; ೨-೫೬-೧೨ ; ೨-೫೭-೪ ; ೧-೧೭೧-೧ ; ೧-೧೭೨-೨ ; ೧-೧೬೪-೮ ; ೧-೬೪-೯ )

ಯಜ್ಞಾನುಷ್ಠಾನಕರ್ಮಗಳ ವಿಷಯದಲ್ಲಿ ಅದರಲ್ಲಿಯೂ ಸೋಮಯಾಗದಲ್ಲಿ ಮರುದ್ದೇವತೆಗಳಿಗೂ ವಾಯುದೇವತೆಗೂ ಅನೇಕ ವ್ಯತ್ಯಾಸಗಳಿವೆ. ವಾಯುವನ್ನು ಪ್ರಾತಸ್ಸವನದಲ್ಲಿಯೂ ಮರುದ್ದೇವತೆಗಳನ್ನು ಮಾಧ್ಯಂದಿನ ಮತ್ತು ತೃತೀಯಸವನಗಳಲ್ಲಿಯೂ ಆಹ್ವಾನಮಾಡುವುದು ರೂಢಿಯಾಗಿದೆ. ಚಾತುರ್ಮಾಸ್ಯವೆಂಬ ಯಾಗದಲ್ಲಿ ಮರುದ್ದೇವತೆಗಳ ಪಾತ್ರವು ವಿಶೇಷವಾಗಿರುವುದು.

ಮರುದ್ದೇವತೆಗಳ ಸ್ವರೂಪವನ್ನು ಸಂಕ್ಷೇಪವಾಗಿ ವಿಚಾರಮಾಡುವೆವು. ವಾಯುವಿಗೂ ಮರುತ್ತುಗಳಿಗೂ ಇರುವ ವ್ಯತ್ಯಾಸವೇನೆಂದರೆ—ವಾಯುವು ಸಾಧಾರಣವಾಗಿ ಬೀಸುವ ಗಾಳಿಯು ; ಮರುತ್ತುಗಳು ವರ್ಷಾಕಾಲದಲ್ಲಿ ಗುಡುಗು, ಸಿಡಿಲು, ಮಿಂಚುಗಳಿಂದ ಕೂಡಿ ಮಳೆಯು ಸುರಿಯುವಕಾಲದಲ್ಲಿ ಮಹಾ ಆರ್ಭಟದೊಡನೆ ವೇಗವಾಗಿಯೂ, ಭಯಂಕರವಾಗಿಯೂ ಬೀಸುವ ಗಾಳಿಯು. ಆದುದರಿಂದಲೇ ಮರುದ್ದೇವತೆಗಳು ಪ್ರಕಾಶಮಾನರೆಂದೂ, ಶಬ್ದ ಮಾಡುವವರೆಂದೂ, ಕ್ರೂರರಾದವರೆಂದೂ, ಬಹಳ ಶಕ್ತಿ ಸಾಮರ್ಥ್ಯಗಳುಳ್ಳವರೆಂದೂ, ಅಂತರಿಕ್ಷದ ( ಸ್ವರ್ಗದ) ಪುತ್ರರೆಂದೂ, ಅಂತರಿಕ್ಷದಲ್ಲಿ ಸದಾ ಬೀಸುತ್ತಿರುವುದರಿಂದ ಯಾವಾಗಲೂ ಕ್ರೀಡೆಗಳಲ್ಲಿ (ಆಟಗಳಲ್ಲಿ) ಆಸಕ್ತರಾದವರೆಂದೂ ವಿಧವಿಧವಾದ ವರ್ಣನೆಗಳು ಕಂಡುಬರುವವು.

**ಜನಯಃ—ಜಾಯಂತ ಆಸ್ವಪತ್ಯಾನೀತಿ ಜನಯೋ ಜಾಯಾಃ ।** ಪುತ್ರಾದಿಸಂತತಿಯನ್ನು ಉತ್ಪತ್ತಿ ಮಾಡುವುದರಿಂದ ಜನಯಃ ಎಂದರೆ ಜಾಯಾಃ ಸ್ತ್ರೀಯರು, ಯುವತಿಯರು.

**ಶುಂಭಂತೇ—ಶುಭ ಶುಂಭ ದೀಪ್ತೌ ।** ಅಲಂಕರಿಸಿಕೊಳ್ಳುತ್ತಾರೆ.

**ಸಪ್ತಯಃ—ಸರ್ಪಣಶೀಲಾಃ ।** ಚಲಿಸುವ, ವೇಗವಾಗಿ ಬೀಸುವ ಸ್ವಭಾವವುಳ್ಳ.

**ಯಾಮನ್—ಯಾಮನಿ ಗಮನೇ ನಿಮಿತ್ತಭೂತೇ ಸತಿ ।** ಹೊರಡುವಾಗ ಸಂಚರಿಸುವಾಗ, ಬೀಸುವಾಗ

**ರುದ್ರಸ್ಯ ಸೂನವಃ**—ಮರುದ್ದೇವತೆಗಳನ್ನು ರುದ್ರಪುತ್ರರೆಂದು ಹೇಳುವ ರೂಢಿಯಿರುವುದು. **ಸತ್ಯಂ ತ್ವೇಷಾ ಅಮವಂತೋ ಧನ್ವನ್ ಚಿದಾ ರುದ್ರಿಯಾಸಃ ।** (ಋ. ಸಂ. ೧-೩೮-೭) ಮೊದಲಾದ ಋಕ್ಕುಗಳಲ್ಲಿ ರುದ್ರಿಯಾಸಃ ಎಂದರೆ ಮರುತ್ತುಗಳು ರುದ್ರಪುತ್ರರೆಂದು ವಿಶದವಾಗಿ ಹೇಳಿರುವುದು. ಅಥವಾ ಭಾಷ್ಯಕಾರನು ಇಲ್ಲಿ ಹೇಳುವಂತೆ ರುದ್ರಸ್ಯ ಸೂನವಃ । **ರೋದಯತಿ ಸರ್ವಮಂತಕಾಲ ಇತಿ ರುದ್ರಃ ಪರಮೇಶ್ವರಃ । ತಸ**

**ಪುತ್ರಾಃ** । ಸರ್ವರನ್ನೂ ಪ್ರಳಯಕಾಲದಲ್ಲಿ ದುಃಖದಿಂದ ರೋದಿಸುವಂತೆ ಮಾಡುವವನಾದುದರಿಂದ ಪರಮೇಶ್ವರನಿಗೆ ರುದ್ರನೆಂದು ಹೆಸರು. ಅವನ ಪುತ್ರರು ಮರುದ್ದೇವತೆಗಳು ಎಂಬರ್ಥವನ್ನೂ ಹೇಳಬಹುದು.

**ಸುದಂಸಸಃ**—**ದಂಸಃ** ಎಂದರೆ ಕರ್ಮವು (ನಿ. ೩-೧) ಸುದಂಸಸಃ ಎಂದರೆ ಒಳ್ಳೆಯ ಕೆಲಸಗಳನ್ನು ಮಾಡುವವರು.

**ರೋದಸೀ**—ಸ್ವಧೇ, ಪುರಂಧ್ರೀ ಮೊದಲಾದ ಇಪ್ಪತ್ತುನಾಲ್ಕು ದ್ಯಾವಾಪೃಥಿವೀನಾಮಗಳ ಮಧ್ಯದಲ್ಲಿ ರೋದಸೀ ಎಂಬ ಶಬ್ದವು ಪಠಿತವಾಗಿರುವುದರಿಂದ ರೋದಸೀ ಎಂದರೆ ದ್ಯಾವಾಪೃಥಿವಿಗಳು.

**ವೃಧೇ**—**ವೃಧು ವೃದ್ಧೌ । ವರ್ಧನಾಯ ।** ಅಭಿವೃದ್ಧಿಗಾಗಿ ; ಅಭಿವೃದ್ಧಿಯಾಗುವಂತೆ ಮಾಡಿದರು.

**ವಿದಥೇಷು**—**ವಿದಂತ್ಯೇಷು ಯಷ್ಟವ್ಯತಯಾ ದೇವಾನಿತಿ ವಿದಥಾಃ ಯಜ್ಞಾಃ** । ದೇವತೆಗಳ ಮಹಿಮೆಯನ್ನು ತಿಳಿದು ಆರಾಧಿಸುವ ಕರ್ಮಕ್ಕೆ ಯಜ್ಞನೆಂದು ಹೆಸರು. ವಿದಥೇಷು ಎಂದರೆ ಯಜ್ಞಕರ್ಮಗಳಲ್ಲಿ

**ಘೃಷ್ವಯಃ**—**ಘೃಷು ಸಂಘರ್ಷೇ । ಘರ್ಷಣಶೀಲಾಃ ।** ಮಹೀರುಹಶಿಲೋಚ್ಚಯಾದೇರ್ಭಂಜಕಾ ಇತ್ಯರ್ಥಃ । ವೇಗವಾಗಿ ಬೀಸುವುದರಿಂದ ವೃಕ್ಷಪಾಷಾಣಾದಿಗಳನ್ನು ಧ್ವಂಸಮಾಡುವ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಶುಂಭಂತೇ**—ಶುಭ ಶುಂಭ ದೀಪ್ತೌ ಧಾತು. ಭ್ವಾದಿ. ಲಟ್‌ಪ್ರಥಮಪುರುಷ ಬಹುವಚನದ ರೂಪ. ಯೇ ಎಂದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಲಸಾರ್ವಧಾತುಕವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತ. ಧಾತು ಸ್ವರ ಉಳಿಯುತ್ತದೆ.

**ಜನಯಃ**—ಜನೀ ಪ್ರಾದುರ್ಭಾವೇ ಧಾತು. ಜಾಯಂತೇ ಆಸು ಅಪತ್ಯಾನಿ ಇತಿ ಜನಯಃ ಜಾಯಾಃ **ಇನ್‌ಸರ್ವಧಾತುಭ್ಯಃ** (ಉ. ಸೂ. ೪-೫೫೭) ಎಂಬುದರಿಂದ ಇನ್‌ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಪ್ರಥಮಾಬಹುವಚನದಲ್ಲಿ **ಜಸಿ ಚ** ಎಂಬುದರಿಂದ ಗುಣ. ಅಯಾದೇಶ. ಜನಯಃ ಎಂದು ರೂಪವಾಗುತ್ತದೆ.

**ಯಾಮನ್**—ಯಾ ಪ್ರಾಪಣೇ ಧಾತು. **ಕೃತ್ಯಲ್ಯುಟೋಬಹುಲಂ** ಎಂಬಲ್ಲಿ ಬಹುಲವಚನದಿಂದ **ಆತೋಮನಿನ್‌ಕ್ವನಿಬ್ವನಿಪಶ್ಚ** ಎಂಬುದರಿಂದ ಭಾವಾರ್ಥದಲ್ಲಿ ಮನಿನ್‌ಪ್ರತ್ಯಯ ಬರುತ್ತದೆ. ಯಾಮನ್ ಶಬ್ದ ವಾಗುತ್ತದೆ. ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್** ಸೂತ್ರದಿಂದ ವಿಭಕ್ತಿಗೆ ಲುಕ್. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸುದಂಸಸಃ**—ದಂಸಃ ಎಂಬುದು ಕರ್ಮದ ಹೆಸರು. ಶೋಭನಂ ದಂಸೋ ಯೇಷಾಂ ತೇ ಸುದಂಸಸಃ ಬಹುವ್ರೀಹಿಯಲ್ಲಿ **ಸೋರ್ಮನಸೀ ಅಲೋಮೋಷಸೀ** (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯು ದಾತ್ತಸ್ವರ ಬರುತ್ತದೆ.

**ಚಕ್ರಿರೇ**—ಡುಕೃಞ್ ಕರಣೇ ಧಾತು. ಲಿಟ್‌ಪ್ರಥಮಪುರುಷ ಬಹುವಚನದಲ್ಲಿ **ಲಿಟಸ್ತಝಯೋರೇಶಿರೇಚ್** ಸೂತ್ರದಿಂದ ಇರೇಚ್ ಆದೇಶ. ಯಣಾದೇಶ. **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ಹಿಂದೆ ಹಿಯೋಗವಿರುವುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಇರೇಚ್ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವೃಧೇ**—ವೃಧು ವೃದ್ಧೌ ಧಾತು. **ಸಂಪದಾದಿಭ್ಯಃ ಕ್ವಿಪ್** ಎಂಬ ವಚನದಿಂದ ಅಲ್ಲಿ ಸೇರಿರುವುದರಿಂದ ಇದಕ್ಕೆ ಕ್ವಿಪ್. ವೃಧ್ ಶಬ್ದವಾಗುತ್ತದೆ. **ಚತುರ್ಥೀಏಕವಚನಾಂತರೂಪ.** ಸುಪರವಾದಾಗ ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಮದಂತಿ—ಮದೀ ಹರ್ಷೇ ಧಾತು. ದಿವಾದಿ. ಲಟ್‌ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ **ವ್ಯತ್ಯಯೋಬಹುಲಂ** ಎಂಬುದರಿಂದ ಶ್ಯನಿಗೆ ಶಪ್ ವಿಕರಣ. ಮದಂತಿ ಎಂಬುದು ಪಾದಾದಿಯಲ್ಲಿ ಇರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ವಿದಥೇಷು**—ವಿದ ಜ್ಞಾನೇ ಧಾತು. **ರುವಿದಿಭ್ಯಾಂ ಕಿತ್** (ಉ. ಸೂ. ೩-೫೪) ಎಂಬುದರಿಂದ ಅಥ ಪ್ರತ್ಯಯ. ಕಿತ್ವಾತಿದೇಶದಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ದಕಾರೋತ್ತರಾಕಾರ ಉದಾತ್ತವಾಗುತ್ತದೆ. ಸಪ್ತಮೀ ಬಹುವಚನಾಂತರೂಪ.

**ಘೃಷ್ವಯಃ**—ಘೃಷು ಸಂಘರ್ಷೇ. ಧಾತು. **ಕೃವಿಘೃಷ್ವಿ** (ಉ. ಸೂ. ೪-೪೬) ಎಂಬುದರಿಂದ ವಿನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ. ॥ ೧ ॥

---

॥ ಸಂಹಿತಾಪಾಠಃ ॥

ತ ಉಕ್ಷಿತಾಸೋ ಮಹಿಮಾನಮಾಶತ ದಿವಿ ರುದ್ರಾಸೋ ಅಧಿ
ಚಕ್ರಿರೇ ಸದಃ ।
ಅರ್ಚಂತೋ ಅರ್ಕಂ ಜನಯಂತ ಇಂದ್ರಿಯಮಧಿ ಶ್ರಿಯೋ
ದಧಿರೇ ಪೃಶ್ನಿಮಾತರಃ ॥ ೨ ॥

ಪದಪಾಠಃ

ತೇ । ಉಕ್ಷಿತಾಸಃ । ಮಹಿಮಾನಂ । ಆಶತ । ದಿವಿ । ರುದ್ರಾಸಃ । ಅಧಿ । ಚಕ್ರಿರೇ । ಸದಃ ।

ಅರ್ಚಂತಃ । ಅರ್ಕಂ । ಜನಯಂತಃ । ಇಂದ್ರಿಯಂ । ಅಧಿ । ಶ್ರಿಯಃ । ದಧಿರೇ । ಪೃಶ್ನಿಽಮಾತರಃ ॥ ೨ ॥

॥ ಸಾಯಣಭಾಷ್ಯಂ ॥

ಯೇ ಪೂರ್ವೋಕ್ತಗುಣವಿಶಿಷ್ಟಾಸ್ತೇ ಮರುತ ಉಕ್ಷಿತಾಸೋ ದೇವೈರಭಿಷಿಕ್ತಾಃ ಸಂತೋ ಮಹಿಮಾನಂ ಮಹತ್ತ್ವಮಾಶತ । ಆಪ್ನುವನ್ । ರುದ್ರಾಸೋ ರುದ್ರಸ್ಯ ಪುತ್ರಾಃ । ಉಪಚಾರಾಜ್ಜನ್ಯೇ ಜನಕಶಬ್ದಃ । ತೇ ರುದ್ರಪುತ್ರಾ ಮರುತೋ ದಿವಿ ದ್ಯೋತಮಾನೇ ನಭಸಿ ಸದಃ ಸದನಂ ಸ್ಥಾನಮಧಿ ಚಕ್ರಿರೇ । ಅಧಿಕಂ ಸರ್ವೋತ್ಕೃಷ್ಟಂ ಕೃತವಂತಃ । ಅರ್ಕಮರ್ಚನೀಯಮಿಂದ್ರಮರ್ಚಂತಃ ಪೂಜಯಂತ ಇಂದ್ರಿಯಮಿಂದ್ರಸ್ಯ ಲಿಂಗಂ ವೀರ್ಯಂ ಜನಯಂತಃ । ಪ್ರಹರ ಭಗವೋ ಜಹಿ ವೀರಯಸ್ವ । ಐ. ಬ್ರಾ. ೩-೨೦ । ಇತ್ಯೇವಂರೂಪೇಣ ವಾಕ್ಯೇನೋತ್ಪಾದಯಂತಃ । ಪೃಶ್ನಿಮಾತರಃ ಪೃಶ್ನೇರ್ನಾನಾರೂಪಾಯಾ ಭೂಮೇಃ ಪುತ್ರಾ ಮರುತಃ ಶ್ರಿಯ ಐಶ್ವರ್ಯಾಣ್ಯಧಿ ದಧಿರೇ । ಆಧಿಕ್ಯೇನಾಧಾರಯನ್ ॥ ಉಕ್ಷಿತಾಸಃ । ಉಕ್ಷ ಸೇಚನೇ । ಕರ್ಮಣಿ ನಿಷ್ಠಾ । ಆಜ್ಜಸೇರಸುಕ್ । ಮಹಿಮಾನಂ । ಮಹಚ್ಛಬ್ದಾತ್ ಪೃಥ್ವಾದಿಲಕ್ಷಣ ಇಮನಿಚ್ । ಟೇರಿತಿ ಟಿಲೋಪಃ । ಆಶತ । ಅಶೂ ವ್ಯಾಪ್ತೌ । ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಇಂದ್ರಿಯಂ। ಇಂದ್ರಿಯಮಿಂದ್ರಲಿಂಗಮಿಂದ್ರದೃಷ್ಟಂ। ಪಾ.೫-೨-೯೩। ಇತಿ ಘಚ್‌ಪ್ರತ್ಯಯಾಂತೋ ನಿಪಾತ್ಯತೇ । ಪೃಶ್ನಿಮಾತರಃ । ಪ್ರಾಶ್ನುತೇ ಸರ್ವಾಣಿ ರೂಪಾಣೀತಿ ಪೃಶ್ನಿರ್ಭೂಮಿಃ । ಶ್ರೂಯತೇ ಚ । ಇಯಂ ವೈ ಪೃಶ್ನಿಃ । ತೈ. ಬ್ರಾ. ೧-೪-೧-೫ । ಘೃಣಿಃ ಪೃಶ್ನಿರಿತ್ಯಾದೌ ನಿಪಾತನಾದಭಿಮತರೂಪಸಿದ್ಧಿಃ । ಪೃಶ್ನಿರ್ಮಾತಾ ಯೇಷಾಂ ತೇ ತಥೋಕ್ತಾಃ । ।ಋತಶ್ಛಂದಸಿ । ಪಾ. ೫-೪-೧೫೮ । ಇತಿ ಸಮಾಸಾಂತಸ್ಯ ಕಪಃ ಪ್ರತಿಷೇಧಃ ॥

ಪ್ರತಿಪದಾರ್ಥ

**ತೇ**—(ಹಿಂದೆ ವರ್ಣಿತಗಳಾದ) ಆ ಮರುತ್ತುಗಳು । **ಉಕ್ಷಿತಾಸಃ**—(ದೇವತೆಗಳಿಂದ) ಅಭಿಷಿಕ್ತರಾಗಿ । **ಮಹಿಮಾನಂ**—ಮಹಿಮೆಯನ್ನು । **ಆಶತ**—ಹೊಂದಿದರು । **ರುದ್ರಾಸಃ**—ರುದ್ರಪುತ್ರರಾದ ಮರುತ್ತುಗಳು । **ದಿವಿ**—ಪ್ರಕಾಶಮಾನವಾದ ಅಂತರಿಕ್ಷದಲ್ಲಿ । **ಸದಃ**—( ತಮ್ಮ ) ಸ್ಥಾನವನ್ನು । **ಅಧಿ ಚಕ್ರಿರೇ**—ಉತ್ಕೃಷ್ಟವಾಗಿ ನೆಲೆಗೊಳಿಸಿದರು । **ಅರ್ಕಂ**—ಪೂಜ್ಯನಾದ ಇಂದ್ರನನ್ನು । **ಅರ್ಚಂತಃ**—ಪೂಜಿಸುತ್ತಾ । **ಇಂದ್ರಿಯಂ**—ಇಂದ್ರನ ಪರಾಕ್ರಮವನ್ನು । **ಜನಯಂತಃ**—ಪ್ರೇರಿಸುವವರಾಗಿ । **ಪೃಶ್ನಿಮಾತರಃ**—ನಾನಾ ರೂಪಗಳನ್ನು ಹೊಂದಿರುವ

ಭೂಮಿಯೇ ತಾಯಿಯಾಗಿ ಉಳ್ಳ ಮರುತ್ತುಗಳು । **ಶ್ರಿಯಃ**— ಐಶ್ವರ್ಯಗಳನ್ನು । **ಅಧಿ ದಧಿರೇ**—ಅಧಿಕವಾಗಿ ಹೊಂದಿದರು.

॥ ಭಾವಾರ್ಥ ॥

ಮರುತ್ತುಗಳು ದೇವತೆಗಳಿಂದ ಅಭಿಷಿಕ್ತರಾಗಿ ಮಹತ್ವವನ್ನು ಹೊಂದಿದರು. ರುದ್ರಪುತ್ರರಾದ ಮರುತ್ತುಗಳು ಪ್ರಕಾಶಮಾನವಾದ ಅಂತರಿಕ್ಷದಲ್ಲಿ ತಮ್ಮ ಸ್ಥಾನವನ್ನು ಉತ್ಕೃಷ್ಟವಾಗಿ ನೆಲೆಗೊಳಿಸಿದರು. ಪೃಶ್ನಿಪುತ್ರರಾದ ಮರುತ್ತುಗಳು ಪೂಜ್ಯನಾದ ಇಂದ್ರನನ್ನು ಪೂಜಿಸುತ್ತ ಇಂದ್ರನ ಪರಾಕ್ರಮವನ್ನು ಪ್ರೇರಿಸುವವರಾಗಿ ಅಧಿಕವಾದ ಐಶ್ವರ್ಯಗಳನ್ನು ಹೊಂದಿದರು.

## English Translation

They (Maruts) inaugurated by the Gods have attained majesty ; the Sons of Rudra have established their dwelling above the sky ; glorifying him (Indra) who merits to be glorified they have inspired him with vigour ; the Sons of Prisni (earth) have acquired glory.

॥ ವಿಶೇಷವಿಷಯಗಳು ॥

**ಉಕ್ಷಿತಾಸಃ—ಉಕ್ಷ ಸೇಚನೆ ದೆವೈರಭಿಷಿಕ್ತಾಃ ।** ದೇವತೆಗಳಿಂದ ಪಟ್ಟಾಭಿಷಿಕ್ತರಾದವರು.

**ರುದ್ರಾಸಃ—ರುದ್ರಪುತ್ರಾಃ ।** ಇಲ್ಲಿ ರುದ್ರಾಸಃ ಎಂದು ರುದ್ರರ ಹೆಸರನ್ನೇ ಹೇಳಿದ್ದರೂ **ಉಪಚಾರಾಜ್ಜನ್ಯೇ ಜನಕಶಬ್ದಃ** ಗೌರವವನ್ನು ಸೂಚಿಸುವುದಕ್ಕಾಗಿ ಪುತ್ರರನ್ನು ತಂದೆಯ ಹೆಸರಿನಿಂದಲೇ ಸಂಬೋಧನೆ ಮಾಡಿರುವರು.

**ಅಧಿ ಚಕ್ರಿರೇ ಸದಃ**—ಮರುದ್ದೇವತೆಗಳ ವಾಸಸ್ಥಾನವು ಅಂತರಿಕ್ಷದಲ್ಲಿ ಬಹು ಮೇಲುಭಾಗದಲ್ಲಿರುವುದು ಎಂದಭಿಪ್ರಾಯವು.

**ಅರ್ಚಂತೋ ಅರ್ಕಂ ಇಂದ್ರಿಯಂ**—ಇಂದ್ರನ ಸಂಬಂಧವಾದ ಸ್ತೋತ್ರವನ್ನು ಮಾಡುವವರಾಗಿ ಎಂದರೆ ಇಂದ್ರನನ್ನು ಸ್ತುತಿಸುತ್ತಾ ಇರುವವರಾಗಿ.

**ಪೃಶ್ನಿಮಾತರಃ**—ಪೃಶ್ನಿ ಎಂದರೆ ಭೂಮಿ, ಗೋವು. ಪೃಶ್ನಿಮಾತರಃ ಎಂದರೆ ಭೂಮಿಯ ಪುತ್ರರು ಅಥವಾ ಗೋವಿನ ಪುತ್ರರು. ಈ ಶಬ್ದಕ್ಕೆ ಭಾಷ್ಯಕಾರರು ನಾನಾವಿಧವರ್ಣಯುಕ್ತವಾದ ಭೂಮಿಯ ಪುತ್ರರು ಎಂದರ್ಥ ಮಾಡಿರುವರು. ಮತ್ತು ಉದಾಹರಣೆಗಾಗಿ—

**ಪೃಶ್ನೇಃ ಪುತ್ರಾ ಉಪಮಾಸೋ ರಭಿಷ್ಠಾಃ ಸ್ವಯಾ ಮತ್ಯಾ ಮರುತಃ ಸಂ ಮಿಮಿಕ್ಷುಃ ॥**

(ಋ. ಸಂ. ೫-೫೯-೫)

ಎಂಬ ಋಕ್ಕನ್ನು ಕೊಟ್ಟು ಆ ಋಕ್ಕನ್ನು ವ್ಯಾಖ್ಯಾನ ಮಾಡುವಾಗ ಪೃಶ್ನೇಃ ಪುತ್ರಾಃ ಎಂಬ ಶಬ್ದಗಳಿಗೆ **ಗೋರೂಪಾಯಾ ಅಂತರಿಕ್ಷಸ್ಯ ವಾ ಪುತ್ರಸ್ಥಾನೀಯಾಃ**—ಎಂದರೆ ಗೋರೂಪವಾದ ಭೂಮಿಯ ಅಥವಾ ಅಂತರಿಕ್ಷದ ಪುತ್ರರೆಂದು ಅರ್ಥವಿವರಣೆಮಾಡಿರುವರು. ಸ್ಕಂದಸ್ವಾಮಿಯು—**ಪೃಶ್ನಿರಿತಿ ದ್ಯುನಾಮ । ದ್ಯೌರ್ಮಾತಾ ಯೇಷಾಂ ಮರುತಾಂ ತೇ ಪೃಶ್ನಿಮಾತರಃ । ದಿವಃ ಪುತ್ರಾ ಇತ್ಯರ್ಥಃ ॥** ಪೃಶ್ನಿಯೆಂದರೆ ಸ್ವರ್ಗವು, ಅಂತರಿಕ್ಷದ ಪುತ್ರರು ಎಂದು ಹೇಳಿರುವರು. ಅಂತರಿಕ್ಷದಲ್ಲಿಯೇ ಮರುತ್ತುಗಳ ಸಂಚಾರವಿರುವುದರಿಂದ ಅದರಿಂದ ಹುಟ್ಟಿದವರು ಎಂದು ಹೇಳುವುದು ಯುಕ್ತವಾಗಿದೆ. ಯಾಸ್ಕರು ಈ ಶಬ್ದಕ್ಕೆ ಈ ರೀತಿ ಅರ್ಥವಿವರಣೆ ಮಾಡಿರುವರು—

**ಸ್ವಃ । ಪೃಶ್ನಿಃ । ನಾಕಃ । ಗೌಃ । ವಿಷ್ಟಪ್ । ನಭ ಇತಿ ಷಟ್**
**ಸಾಧಾರಣಾನಿ ॥ ಸಾಧಾರಣಾನ್ಯುತ್ತರಾಣಿ ದಿವಶ್ಚಾದಿತ್ಯಸ್ಯ ॥**
(ನಿ. ೨-೧೩)

ಎಂದರೆ **ಸ್ವಃ ಪೃಶ್ನಿಃ ನಾಕಃ ಗೌಃ ವಿಷ್ಟಪ್ ನಭಃ** ಎಂಬ ಆರು ಶಬ್ದಗಳೂ ಸ್ವರ್ಗಃ (ದಿವಃ) ಮತ್ತು ಆದಿತ್ಯರನ್ನು ಸೂಚಿಸುವ ಸಾಧಾರಣ ಶಬ್ದಗಳು. ಮತ್ತು—

**ಪೃಶ್ನಿರಾದಿತ್ಯೋ ಭವತಿ । ಪ್ರಾಶ್ನುತ ಏನಂ ವರ್ಣ ಇತಿ ನೈರುಕ್ತಾಃ**
**ಸಂಸ್ಪ್ರಷ್ಟಾ ರಸಾನ್ । ಸಂಸ್ಪ್ರಷ್ಟಾ ಭಾಸಂ ಜ್ಯೋತಿಷಾಂ ॥**
**ಸಂಸ್ಪೃಷ್ಟೋ ಭಾಸೇತಿ ವಾ ॥**
**ಅಥ ದ್ಯೌಃ ಸಂಸ್ಪೃಷ್ಟಾ ಜ್ಯೋತಿಭಿಃ ಪುಣ್ಯಕೃದ್ಭಿಶ್ಚ ॥**
(ನಿ. ೨-೧೪)

ಪೃಶ್ನಿಯೆಂದರೆ ಆದಿತ್ಯನು. ಉತ್ಕೃಷ್ಟವಾದ ಕಾಂತಿಯು ಇವನನ್ನು ಸುತ್ತಲೂ ವ್ಯಾಪಿಸಿರುವುದರಿಂದ ಪೃಶ್ನಿಯೆಂದರೆ ಆದಿತ್ಯನೆಂದು ನೈರುಕ್ತರು (ನಿರುಕ್ತಕಾರರು) ಹೇಳುವರು. **ಸಂಸ್ಪ್ರಷ್ಟಾ ರಸಾನ್** ಎಂದರೆ **ಸಹಿ ನಿತ್ಯಕಾಲಮೇವ ರಸಾನಾಂ ಸಂಸ್ಪ್ರಷ್ಟಾ ಭವತಿ । ಅಥಾಸ್ಯಕರ್ಮ ರಸಾದಾನಂ ।** ರಸವೆಂದರೆ ಉದಕವನ್ನು ಮಳೆಯ ರೂಪದಲ್ಲಿ ಕೊಡುವುದಕ್ಕೆ ಕಾರಣಭೂತನಾದುದರಿಂದ ಆದಿತ್ಯನಿಗೆ ಪೃಶ್ನಿಯೆಂದು ಹೆಸರು. ಅಥವಾ **ಸಂಸ್ಪ್ರಷ್ಟಾ ಭಾಸಂ ಜ್ಯೋತಿಷಾಂ**—ಗ್ರಹನಕ್ಷತ್ರಚಂದ್ರಾದಿಗಳ ಪ್ರಕಾಶವು **ಸೂರ್ಯನ ಪ್ರಕಾಶಾಧಿಕ್ಯದಿಂದ** ಮಲಿನವಾಗುವುದು ಅಥವಾ **ಸಂಸ್ಪೃಷ್ಟೋ ಭಾಸೇತಿ ವಾ**— ತನ್ನ ಕಾಂತಿಯಿಂದ ಎಲ್ಲೆಲ್ಲಿಯೂ ವ್ಯಾಪಿಸುವವನು ಆದುದರಿಂದ ಪೃಶ್ನಿಯೆಂದರೆ ಆದಿತ್ಯನು.

ಇನ್ನು ಪೃಶ್ನಿಯೆಂದರೆ ದ್ಯೌ ಎಂದರ್ಥವು. ಏಕೆಂದರೆ **ಸಂಸ್ಪೃಷ್ಟಾಃ ಜ್ಯೋತಿರ್ಭಿಃ ಪುಣ್ಯಕೃದ್ಭಿಶ್ಚ**—ಪ್ರಕಾಶದಿಂದಲೂ, ಪುಣ್ಯವಂತರಿಂದಲೂ ಹೊಂದಲ್ಪಡುವುದರಿಂದ ಪೃಶ್ನಿಯೆಂದರೆ ದ್ಯೌಃ (ಸ್ವರ್ಗವು) ಎಂದರ್ಥವು.

ಇದು ಯಾಸ್ಕರ ವಿವರಣೆಯು, ಆದುದರಿಂದ ಪೃಶ್ನಿಯೆಂದರೆ ದ್ಯೌಃ—ಸ್ವರ್ಗ, ಅಂತರಿಕ್ಷ ಎಂಬರ್ಥವನ್ನೇ ಸ್ವೀಕರಿಸಿ ಪೃಶ್ನಿಮಾತರಃ ಎಂಬ ಶಬ್ದಕ್ಕೆ ದಿವಸ್ಪುತ್ರಾಃ—ಅಂತರಿಕ್ಷದಲ್ಲಿ ಉತ್ಪನ್ನರಾದವರು ಎಂದು ಹೇಳುವುದೇ ಯುಕ್ತವಾಗಿರುವುದು.

**ಯದ್ಯೂಯಂ ಪೃಶ್ನಿಮಾತರೋ ಮರ್ತಾಸಃ ಸ್ಯಾತನ ॥**
(ಋ. ಸಂ. ೧-೩೮-೪)

ಎಂಬ ಋಕ್ಕಿನ ಅರ್ಥವಿವರಣೆಮಾಡುವಾಗ **ಪೃಶ್ನಿಮಾತರಃ** ಎಂಬ ಶಬ್ದಕ್ಕೆ **ಪೃಶ್ನಿನಾಮಕಧೇನುಪುತ್ರಾ ಮರುತಃ** ಎಂದು ಅರ್ಥ ಮಾಡಿರುವರು. ಮರುದ್ದೇವತೆಗಳನ್ನು ಸ್ತೋತ್ರಮಾಡುವ ಅನೇಕ ಸಂದರ್ಭಗಳಲ್ಲಿ ಪೃಶ್ನಿಮಾತರಃ ಎಂಬ ಶಬ್ದದ ಪ್ರಯೋಗವು ವಿಶೇಷವಾಗಿ ಕಂಡುಬರುವುದು. ಆದುದರಿಂದ ಈ ಶಬ್ದಕ್ಕೆ ಒಂದು ನಿರ್ದಿಷ್ಟವಾದ ಅರ್ಥವು ರೂಢಿಯಲ್ಲಿತ್ತೆಂದು ಧಾರಾಳವಾಗಿ ಹೇಳಬಹುದು. ಋಗ್ವೇದದಲ್ಲಿ ಈ ಶಬ್ದ ಪ್ರಯೋಗವಿರುವ ಋಕ್ಕುಗಳನ್ನು ಕೆಳಗೆ ಕೊಟ್ಟಿರುವೆವು.

**ಯದ್ಯೂಯಂ ಪೃಶ್ನಿಮಾತರೋ ಮರ್ತಾಸಃ ಸ್ಯಾತನ ॥**
(ಋ. ಸಂ. ೧-೩೮-೪)

**ಅರ್ಚಂತೋ ಅರ್ಕಂ ಜನಯಂತ ಇಂದ್ರಿಯಮಧಿ ಶ್ರಿಯೋ ದಧಿರೇ ಪೃಶ್ನಿಮಾತರಃ ॥**
(ಋ. ಸಂ. ೧-೮೫-೨)

**ಪೃಷದಶ್ವಾ ಮರುತಃ ಪೃಶ್ನಿಮಾತರಃ ಶುಭಂಯಾವಾನೋ ವಿದಥೇಷು ಜಗ್ಮಯಃ ॥**
(ಋ. ಸಂ. ೧-೮೯-೭)

**ಸುಜಾತಾಸೋ ಜನುಷಾ ಪೃಶ್ನಿಮಾತರೋ ದಿವೋ ಮರ್ಯಾ ಆ ನೋ ಅಚ್ಛಾ ಜಿಗಾತನ**
(ಋ. ಸಂ. ೫-೫೯-೬)

**ಉದೀರಯಂತ ವಾಯುಭಿರ್ವಾಶ್ರಾಸಃ ಪೃಶ್ನಿಮಾತರಃ ॥**
(ಋ. ಸಂ. ೮-೭-೩)

**ಉದು ಸ್ವಾನೇಭಿರೀರತ ಉದ್ರಥೈರುದು ವಾಯುಭಿಃ । ಉತ್ಸ್ತೋಮೈಃ ಪೃಶ್ನಿಮಾತರಃ ॥**
(ಋ. ಸಂ. ೮-೭-೧೭)

**ಅಭೀಮೃತಸ್ಯ ವಿಷ್ಟಪಂ ದುಹತೇ ಪೃಶ್ನಿಮಾತರಃ ॥**
(ಋ. ಸಂ. ೯-೩೪-೫)

**ಸ್ವಶ್ವಾಃ ಸ್ಥ ಸುರಥಾಃ ಪೃಶ್ನಿಮಾತರಃ ಸ್ವಾಯುಧಾ ಮರುತೋ ಯಾಥನಾ ಶುಭಂ ॥**
(ಋ. ಸಂ. ೫-೫೭-೨)

**ಕೋಪಯಥ ಪೃಥಿವೀಂ ಪೃಶ್ನಿಮಾತರಃ ಶುಭೇ ಯದುಗ್ರಾಃ ಪೃಷತೀರಯುಗ್ಧ್ವಂ ॥**
(ಋ. ಸಂ. ೫-೫೭-೩)

**ಪೃಶ್ನಿಮಾತರಃ** ಎಂಬ ಶಬ್ದಪ್ರಯೋಗವಿರುವ ಋಕ್ಕುಗಳನ್ನೆಲ್ಲಾ ಮೇಲೆ ಕೊಟ್ಟಿರುತ್ತೆ. ಈ ಋಕ್ಕುಗಳಲ್ಲಿ ಪೃಶ್ನಿಮಾತರಃ ಎಂಬ ಶಬ್ದಕ್ಕೆ ಮರುತ್ತುಗಳೆಂದೇ ಅರ್ಥವಿವರಣೆ ಇರುವುದರಿಂದ ಈ ಶಬ್ದವು ಈ ದೇವತೆಗಳ ವಿಷಯದಲ್ಲಿ ಮಾತ್ರ ಒಂದು ನಿರ್ದಿಷ್ಟವಾದ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದೆಂದು ಧಾರಾಳವಾಗಿ ಹೇಳಬಹುದು.

ವ್ಯಾಕರಣಪ್ರಕ್ರಿಯಾ

**ಉಕ್ಷಿತಾಸಃ**—ಉಕ್ಷ ಸೇಚನೇ ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. ಉಕ್ಷಿತಶಬ್ದವು ಪ್ರತ್ಯಯಸ್ವರದಿಂದ ಅಂತೋದಾತ್ತ. ಜಸ್‌ಪರದಲ್ಲಿರುವಾಗ **ಆಜ್ಜಸೇರಸುಕ್** ಎಂಬುದರಿಂದ ಜಸಿಗೆ ಅಸುಕಾಗಮ ರುತ್ವವಿಸರ್ಗಗಳಿಂದ ಉಕ್ಷಿತಾಸಃ ಎಂದು ರೂಪವಾಗುತ್ತದೆ.

**ಮಹಿಮಾನಮ್**—ಪೃಥ್ವಾದಿಯಲ್ಲಿ ಮಹಶಬ್ದವು ಸೇರಿರುವುದರಿಂದ **ಪೃಥ್ವಾದಿಭ್ಯ ಇಮನಿಜ್ವಾ** (೫-೧-೧೨೨) ಎಂಬುದರಿಂದ ಇಮನಿಚ್ ಪ್ರತ್ಯಯ. **ಟೇಃ** ಎಂಬುದರಿಂದ ಮಹಶಬ್ದದ ಟಿಗೆ (ಅ) ಲೋಪ. ಮಹಿಮನ್ ಶಬ್ದವಾಗುತ್ತದೆ. ದ್ವಿತೀಯಾಏಕವಚನದಲ್ಲಿ **ಸರ್ವನಾಮಸ್ಥಾನೇಚಾಸಂಬುದ್ಧೌ** ಎಂಬುದರಿಂದ ನಾಂತದ ಉಪಧೆಗೆ ದೀರ್ಘ. ಮಹಿಮನ್‌ಶಬ್ದವು **ಚಿತಃ** ಎಂಬುದರಿಂದ ಚಿತ್‌ಪ್ರತ್ಯಯಾಂತವಾದುದರಿಂದ ಅಂತೋದಾತ್ತವಾಗುತ್ತದೆ.

**ಆಶತ**—ಅಶೂ ವ್ಯಾಪ್ತೌ ಧಾತು. ಲಙ್‌ಪ್ರಥಮಪುರುಷಬಹುವಚನಕ್ಕೆ ಅನಕಾರದ ಪರದಲ್ಲಿರುವುದರಿಂದ ಅತಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ದಿವಿ**—ಸಪ್ತಮೀಏಕವಚನಾಂತರೂಪ. **ಊಡಿದಂಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರುದ್ರಾಸಃ**—ಹಿಂದಿನಂತೇ ಜಸಿನಲ್ಲಿ **ಆಜ್ಜಸೇರಸುಕ್** ಎಂಬುದರಿಂದ ಅಸುಕಾಗಮ.

**ಅರ್ಚಂತಃ**—ಅರ್ಚ ಪೂಜಾಯಾಂ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಧಾತುಸ್ವರ ಉಳಿಯುತ್ತದೆ ಪ್ರಥಮಾಬಹುವಚನದಲ್ಲಿ ಉಗಿತ್ತಾದುದರಿಂದ ನುಮಾಗಮ ಬರುತ್ತದೆ.

**ಇಂದ್ರಿಯಮ್**—**ಇಂದ್ರಿಯಮಿಂದ್ರಲಿಂಗಮಿಂದ್ರದೃಷ್ಟ**—(ಪಾ.ಸೂ.೫-೨-೯೩) ಎಂಬುದರಿಂದ ಘಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಆಯನೇಯೀ**—ಸೂತ್ರದಿಂದ ಘಕ್ಕೆ ಇಯಾದೇಶ.

**ದಧಿರೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್‌ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪೃಶ್ನಿಮಾತರಃ**—ಪ್ರಾಶ್ನುತೇ ಸರ್ವಾಣಿ ರೂಪಾಣಿ ಇತಿ ಪೃಶ್ನಿಃ ಭೂಮಿಃ (ಎಲ್ಲಾ ರೂಪವನ್ನು ಹೊಂದುವುದು) **ಇಯಂ ವೈ ಪೃಶ್ನಿಃ** (ತೈ. ಬ್ರಾ. ೧-೪-೧-೫) ಎಂದು ಶ್ರುತವಾಗಿದೆ. **ಘೃಣೇಃ ಪೃಶ್ನಿಃ** ಎಂಬಲ್ಲಿ ನಿಪಾತಿತನಾದುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ. ಪೃಶ್ನಿಃ ಮಾತಾ ಯೇಷಾಂ ತೇ ಪೃಶ್ನಿಮಾತರಃ **ಋತಶ್ಛಂದಸಿ** (ಪಾ. ಸೂ. ೫-೪-೧೫೮) ಎಂಬುದರಿಂದ ಸಮಾಸಾಂತವಾದ ಬಹುವ್ರೀಹಿಯಲ್ಲಿ ಬರುವ ಕಪಿಗೆ ನಿಷೇಧ. ಅಪ್‌ತೃನ್‌ ಸೂತ್ರದಲ್ಲಿ ನಿಯಮಮಾಡಿರುವುದರಿಂದ ಉಪಧಾದೀರ್ಘ ಬರುವುದಿಲ್ಲ.

**ಜನಯಂತಃ**—ಜನೀ ಪ್ರಾದುರ್ಭಾವೇ ಧಾತು. ಣಿಜಂತದಮೇಲೆ ಶತೃಪ್ರತ್ಯಯ. ಶಪ್ ವಿಕರಣ. ಶಪನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ ಅಯಾದೇಶ. ಶಪ್ ಪಿತ್ತಾದುದರಿಂದ ಅನುದಾತ್ತ. ಲಸಾರ್ವಧಾತುಕವು (ಶತೃ) **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತ. ಣಿಚ್ ಸ್ವರದಿಂದ ನಕಾರೋತ್ತರಾಕಾರವು ಉದಾತ್ತವಾಗುತ್ತದೆ. ಜಸಿನಲ್ಲಿ ಉಗಿತ್ತಾದುದರಿಂದ ನುಮಾಗಮ ಬರುತ್ತದೆ. ॥ ೨ ॥

---

ಸಂಹಿತಾಪಾಠಃ

ಗೋಮಾತರೋ ಯಚ್ಛುಭಯಂತೇ ಅಂಜಿಭಿಸ್ತನೂಷು ಶುಭ್ರಾ
ದಧಿರೇ ವಿರುಕ್ಮತಃ।
ಬಾಧಂತೇ ವಿಶ್ವಮಭಿಮಾತಿನಮಪ ವರ್ತ್ಮಾನ್ಯೇಷಾಮನು ರೀಯ-
ತೇ ಘೃತಂ ॥ ೩ ॥

। ಪದಪಾಠಃ ॥

ಗೋಽಮಾತರಃ । ಯತ್ । ಶುಭಯಂತೇ । ಅಂಜಿಽಭಿಃ । ತನೂಷು । ಶುಭ್ರಾಃ ।
ದಧಿರೇ । ವಿರುಕ್ಮತಃ ।
ಬಾಧಂತೇ । ವಿಶ್ವಂ । ಅಭಿಽಮಾತಿನಂ । ಅಪ । ವರ್ತ್ಮಾನಿ । ಏಷಾಂ । ಅನು ।
ರೀಯತೇ । ಘೃತಂ ॥ ೩ ॥

ಸಾಯಣಭಾಷ್ಯ

ಗೋಮಾತರೋ ಗೋರೂಪಾ ಭೂಮಿರ್ಮಾತಾ ಯೇಷಾಂ ತೇ ಮರುತ ಅಂಜಿಭೀ ರೂಪಾಭಿವ್ಯಂಜಕೈರಾಭರಣೈರ್ಯದ್ಯದಾ ಶುಭಯಂತೇ ಸ್ವಕೀಯಾನ್ಯಂಗಾನಿ ಶೋಭಾಯುಕ್ತಾನಿ ಕುರ್ವಂತಿ ತದಾನೀಂ ಶುಭ್ರಾ ದೀಪ್ತಾ ಮರುತಸ್ತನೂಷು ಸ್ವಕೀಯೇಷು ಶರೀರೇಷು ವಿರುಕ್ಮತೋ ವಿಶೇಷೇಣ

ರೋಚಮಾನಾನಲಂಕಾರಾನ್ದಧಿರೇ । ಧಾರಯಂತಿ । ಅಪಿ ಚ ವಿಶ್ವಂ ಸರ್ವಮಭಿಮಾತಿನಂ ಶತ್ರುಮಪ ಬಾಧಂತೇ । ಹಿಂಸಂತಿ । ಏಷಾಂ ಮರುತಾಂ ವರ್ತ್ಮಾನಿ ಮಾರ್ಗಾನನುಸೃತ್ಯ ಘೃತಂ ಕ್ಷರಣಶೀಲಮುದಕಂ ರೀಯತೇ । ಸ್ರವತಿ । ಯತ್ರ ಮರುತೋ ಗಚ್ಛಂತಿ ವೃಷ್ಟ್ಯುದಕಮಪಿ ತದನುಸಾರೇಣ ತತ್ರ ಗಚ್ಛತೀತ್ಯರ್ಥಃ ॥ ಶುಭಯಂತೇ ।. ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾಲ್ಲಘೂಪಧಗುಣಾಭಾವಃ । ಅಂಜಿಭಿಃ । ಅಞ್ಜೂ ವ್ಯಕ್ತಿಮ್ರಕ್ಷಣಗತಿಷು । ಖನಿಕಷಿಕಸ್ಯಂಜ್ಯಸಿವಸಿಪ್ಸನಿಸ್ತನಿವನಿಸನಿಗ್ರಂಥಿಚರಿಭ್ಯಶ್ಚ । ಉ. ೪-೧೩೯ । ಇತೀಪ್ರತ್ಯಯಃ । ಶುಭ್ರಾಃ । ಶುಭ ದೀಪ್ತೌ । ಸ್ಫಾಯಿತಂಚೀತ್ಯಾದಿನಾ ರಕ್ । ವಿರುಕ್ಮತಃ । ವಿಶಿಷ್ಟಾ ರುಕ್ ವಿರುಕ್ । ತದ್ವಂತೋ ವಿರುಕ್ಮಂತಃ । ಮತುಪ್ಯಯಸ್ಮಯಾದಿಷ್ವೇನ ಪದತ್ವಾತ್ಕುತ್ವಂ । ಭತ್ವಾತ್ ಜಶ್ತ್ವಾಭಾವಃ । ರೀಯತೇ ರೀಙ್। ಸ್ರವಣೇ । ದೈವಾದಿಕಃ ॥೩॥

॥ ಪ್ರತಿಪದಾರ್ಥ ॥

**ಗೋಮಾತರಃ**—ಗೋರೂಪವುಳ್ಳ ಪೃಥ್ವಿಯೇ ತಾಯಿಯಾಗಿ ಉಳ್ಳ ಮರುತ್ತುಗಳು । **ಅಂಜಿಭಿಃ**—ಸೌಂದರ್ಯವನ್ನು ವ್ಯಕ್ತಪಡಿಸತಕ್ಕ ಆಭರಣಗಳಿಂದ । **ಯತ್**—ಯಾವಾಗ । **ಶುಭಯಂತೇ**—(ತಮ್ಮ ಶರೀರಗಳನ್ನು) ಸಿಂಗರಿಸಿಕೊಳ್ಳುತ್ತಾರೋ (ಆಗ) । **ಶುಭ್ರಾಃ** — ಪ್ರಕಾಶಮಾನಗಳಾದ ಮರುತ್ತುಗಳು । **ತನೂಷು**—ತಮ್ಮ ಶರೀರಗಳಲ್ಲಿ । **ವಿರುಕ್ಮತಃ**—ಕಂಗೊಳಿಸುವ ಅಲಂಕಾರಗಳನ್ನು । **ದಧಿರೇ**—ಹೊಂದಿರುತ್ತಾರೆ । **ವಿಶ್ವಂ**—ಸಮಸ್ತವಾದ । **ಅಭಿಮಾತಿನಂ**—ಶತ್ರುವನ್ನೂ । **ಅಪಬಾಧಂತೇ**— ಹಿಂಸಿಸುತ್ತಾರೆ । **ಏಷಾಂ**—ಈ ಮರುತ್ತುಗಳ । **ವರ್ತ್ಮಾನಿ**—ದಾರಿಯಲ್ಲಿ (ದಾರಿಯನ್ನನುಸರಿಸಿ) । **ಘೃತಂ**—ಹರಿಯುವ ಸ್ವಭಾವವುಳ್ಳ ನೀರು । **ರೀಯತೇ**— ಪ್ರವಹಿಸುತ್ತದೆ.

ಭಾವಾರ್ಥ

ಗೋರೂಪವುಳ್ಳ ಪೃಥ್ವಿಯ ಪುತ್ರರಾದ ಮರುತ್ತುಗಳು ತಮ್ಮ ಸೌಂದರ್ಯವನ್ನು ವ್ಯಕ್ತಪಡಿಸತಕ್ಕ ಆಭರಣಗಳಿಂದ ಯಾವಾಗ ತಮ್ಮ ಶರೀರಗಳನ್ನು ಸಿಂಗರಿಸಿಕೊಳ್ಳುತ್ತಾರೋ ಆಗ ಅವರು ಪ್ರಕಾಶಮಾನರಾಗಿ ತಮ್ಮ ಶರೀರಗಳಲ್ಲಿ ಕಂಗೊಳಿಸುವ ಅಲಂಕಾರಗಳನ್ನು ಹೊಂದಿರುತ್ತಾರೆ. ಮತ್ತು ಅವರ ಸಕಲ ಶತ್ರುಗಳನ್ನೂ ಹಿಂಸಿಸುತ್ತಾರೆ. ನೀರಿನ ಪ್ರವಾಹವು ಈ ಮರುತ್ತುಗಳ ಮಾರ್ಗವನ್ನೇ ಅನುಸರಿಸುತ್ತದೆ.

English Translation

When the sons of the earth (Maruts) decorate themselves with ornaments they shine resplendent in their persons with brilliant decorations!; they drive away every adversary from their path and the waters follow their path.

॥ ವಿಶೇಷವಿಷಯಗಳು ॥

**ಗೋಮಾತರಃ**—ಗೌಃ ಎಂದರೆ ಭೂಮಿಯು. (ನಿ. ೧-೧) ಭೂಮಿಯೇ ತಾಯಿಯಾಗಿವುಳ್ಳವರು ಎಂದರೆ ಭೂಮಿಯ ಪುತ್ರರು ಅಥವಾ ಪೃಶ್ನಿಯೆಂದು ದೇವಲೋಕದ ಧೇನುವಿನ ಪುತ್ರರು. ಮರುತ್ತುಗಳಿಗೆ **ಪೃಶ್ನಿಮಾತರಃ** ಎಂದೂ ಹೆಸರಿರುವುದು.

**ಅಂಜಿಭಿಃ—ಅಂಜೂ ವ್ಯಕ್ತಿಮ್ರಕ್ಷಣಗತಿಷು ರೂಪಾಭಿವ್ಯಂಜಕೈರಾಭರಣೈಃ ।** ಅಂಜನ (ಕಪ್ಪು) ಮೊದಲಾದ ರೂಪಾತಿಶಯವನ್ನು ಹೆಚ್ಚಿಸುವುದಕ್ಕಾಗಿ ಉಪಯೋಗಿಸುವ ಅಲಂಕಾರಾದಿಗಳಿಂದ.

**ಶುಭ್ರಾಃ—ಶುಭ ದೀಪ್ತೌ ।** ಪ್ರಕಾಶಮಾನರಾದ, ಸೌಂದರ್ಯಾತಿಶಯದಿಂದ ಚೆನ್ನಾಗಿ ಬೆಳಗುತ್ತಿರುವ.

**ವಿರುಕ್ಮತಃ—ವಿಶೇಷೇಣ ರೋಚಮಾನಾನಲಂಕಾರಾನ್।** ಬಹಳವಾಗಿ ಪ್ರಕಾಶಿಸುತ್ತಿರುವ ಅಲಂಕಾರಾದ್ಯಾಭರಣಗಳನ್ನೂ.

**ಅಪ ಬಾಧಂತೆ ವಿಶ್ವಮಭಿಮಾತಿನಂ**—ತಾವು ಚಲಿಸತಕ್ಕ ಮಾರ್ಗದಲ್ಲಿ ಅಡ್ಡವಾಗಿ ಬರುವ ಶತ್ರುಗಳನ್ನು (ವೃಕ್ಷಾದಿಗಳನ್ನು) ಧ್ವಂಸಗೊಳಿಸುವ. ಗಾಳಿಯು ವೇಗವಾಗಿ ಬೀಸುವಾಗ ಎದುರಿಗೆ ಸಿಕ್ಕುವ ವೃಕ್ಷಾದಿಗಳನ್ನು ಉರುಳಿಸುವುದು ಎಂದಭಿಪ್ರಾಯವು.

**ವಿಷಾಂ ಅನು ರೀಯತೇ ಘೃತಂ**—ಘೃತವೆಂದರೆ ಉದಕವು. (ನಿ. ೨-೨೪) ಮರುತ್ತುಗಳು ಬೀಸಿದ ಕೂಡಲೆ ಅದರ ಹಿಂದೆಯೇ ನೀರು ಸುರಿಯುವುದು ಎಂದರೆ ಮಳೆಬರುವುದು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಶುಭಯಂತೇ—ತತ್ಕರೋತಿ ತದಾಚಷ್ಟೆ** ಎಂಬುದರಿಂದ ಣಿಚ್. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಣಿಚ್‌ನಿಮಿತ್ತಕವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝುಕ್ಕೆ ಅಂತಾದೇಶ. ಏತ್ವ. **ಕರ್ತರಿಶಪ್** ಎಂಬುದರಿಂದ ಶಪ್. ಶಪ್ ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್‌ಸ್ವರದಿಂದ ಭಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಅಂಜಿಭಿಃ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. **ಖನಿಕಷಿಕಸ್ಯಂಜ್ಯಸಿವಸಿ ಧ್ವನಿಸ್ತನಿ ವನಿ ಸನಿ ಗ್ರಂಥಿ ಚರಿಭ್ಯಶ್ಚ** (ಉ. ಸೂ. ೪-೧೪೭) ಎಂಬುದರಿಂದ ಇಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತ. ತೃತೀಯಾಬಹುವಚನಾಂತರೂಪ.

**ಶುಭ್ರಾಃ**--ಶುಭ ದೀಪ್ತೌ ಧಾತು. **ಸ್ಫಾಯಿತಂಚಿವಂಚಿಶಕಿ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣಬರುವುದಿಲ್ಲ ಅಂತೋದಾತ್ತವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ವಿರುಕ್ಮತಃ** - ವಿಶಿಷ್ಟಾ ರುಕ್ ವಿರುಕ್. ವಿರುಕ್ ಏಷಾಂ ಅಸ್ತಿ ಇತಿ ವಿರುಕ್ಮಂತಃ. ರುಚ್ ದೀಪ್ತೌ ಧಾತು. ಕ್ವಿಪ್ ಪ್ರತ್ಯಯ. **ತದಸ್ಯಾಸ್ತ್ಯಸ್ಮಿ**—ಸೂತ್ರದಿಂದ ಮತುಪ್. **ಅಯಸ್ಮಯಾದೀನಿ ಛಂದಸಿ** ಎಂಬಲ್ಲಿ ಇದು ಸೇರಿರುವುದರಿಂದ ಪದಸಂಜ್ಞಾ ಇರುವುದರಿಂದ **ಚೋಃ ಕುಃ** ಎಂಬುದರಿಂದ ಚಕಾರಕ್ಕೆ ಕುತ್ವದಿಂದ ಕಕಾರಾದೇಶ. ಭಸಂಜ್ಞಾ ಇರುವುದರಿಂದ ಅದಕ್ಕೆ ಜಶ್ತ್ವ ಬರುವುದಿಲ್ಲ. ಮತುಪ್ ಪಿತ್ತಾದುದರಿಂದ ಅನುದಾತ್ತ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ರೇಫೋತ್ತರ ಉಕಾರ ಉದಾತ್ತವಾಗುತ್ತದೆ.

**ಬಾಧಂತೇ**—ಬಾಧೃ ಲೋಡನೇ ಧಾತು. ಭ್ವಾದಿ. ಲಟ್ಪ್ರಥಮಪುರುಷ ಬಹುವಚನರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ರೀಯತೇ**—ರೀಙ್ ಸ್ರವಣೇ ಧಾತು. ದಿವಾದಿ. ಲಟ್ ಪ್ರಥಮಪುರುಷಏಕವಚನಕ್ಕೆ **ಟಿತ ಆತ್ಮನೇಪದಾನಾಂ** ಸೂತ್ರದಿಂದ ಏತ್ವ. **ದಿವಾದಿಭ್ಯಃ ಶ್ಯನ್** ಸೂತ್ರದಿಂದ ಶ್ಯನ್ವಿಕರಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೩ ‖



॥ ಸಂಹಿತಾಪಾಠಃ ।

ವಿ ಯೇ ಭ್ರಾಜಂತೇ ಸುಮಖಾಸ ಋಷ್ಟಿಭಿಃ ಪ್ರಚ್ಯಾವಯಂ-
ತೋ ಅಚ್ಯುತಾ ಚಿದೋಜಸಾ ।
ಮನೋಜುವೋ ಯನ್ಮರುತೋ ರಥೇಷ್ವಾ ವೃಷವ್ರಾತಾಸಃ ಪೃ-
ಷತೀರಯುಗ್ಧ್ವಂ ‖ ೪ ‖

॥ ಪದಪಾಠಃ ॥

ವಿ । ಯೇ । ಭ್ರಾಜಂತೇ । ಸುಽಮಖಾಸಃ । ಋಷ್ಟಿಽಭಿಃ । ಪ್ರಽಚ್ಯವಯಂತಃ ।
ಅಚ್ಯುತಾ । ಚಿತ್ । ಓಜಸಾ ।
ಮನಃಽಜುವಃ । ಯತ್ । ಮರುತಃ । ರಥೇಷು । ಆ । ವೃಷಽವ್ರಾತಾಸಃ ।
ಪೃಷತೀಃ । ಅಯುಗ್ಧ್ವಂ ‖ ೪ ‖

### ಸಾಯಣಭಾಷ್ಯಂ

ಸುಮಖಾಸಃ ಶೋಭನಯಜ್ಞಾ ಯೇ ಮರುತ ಋಷ್ಟಿಭಿರಾಯುಧೈರ್ವಿ ಭ್ರಾಜಂತೇ ವಿಶೇಷೇಣ ದೀಪ್ಯಂತೇ ತೇ ಮರುತೋಽಚ್ಯುತಾ ಚಿತ್ ಚ್ಯಾವಯಿತುಮಶಕ್ಯಾನಿ ದೃಢಾನಿ ಪರ್ವತಾದೀನ್ಯಪ್ಯೋಜಸಾ ಸ್ವಕೀಯೇನ ಬಲೇನ ಪ್ರಚ್ಯಾವಯಂತಃ ಪ್ರಕರ್ಷೇಣ ಚ್ಯಾವಯಿತಾರಃ ಪ್ರೇರಯಿತಾರೋ ಭವಂತಿ। ಉತ್ತರಾರ್ಧಃ ಪ್ರತ್ಯಕ್ಷಕೃತಃ। ಹೇ ಮರುತೋ ಮನೋಜುವೋ ಮನೋವದ್ವೇಗಗತಯೋ ವೃಷವ್ರಾತಾಸೋ ವೃಷ್ಟ್ಯುದಕಸೇಚನಸಮರ್ಥಸಪ್ತಸಂಘಾತ್ಮಕಾ ಯೂಯಂ ರಥೇಷ್ವಾತ್ಮೀಯೇಷು ಪೃಷತೀಃ। ಪೃಷತ್ಯ ಇತಿ ಮರುದ್ವಾಹನಾನಾಂ ಸಂಜ್ಞಾ ಪೃಷತ್ಯೋ ಮರುತಾಮಿತ್ಯುಕ್ತತ್ವಾತ್। ಪೃಷದ್ಭಿಃ ಶ್ವೇತಬಿಂದುಭಿರ್ಯುಕ್ತಾ ಮೃಗೀರ್ಯದ್ಯದಾಯುಗ್ಧ್ವಂ ಆಭಿಮುಖ್ಯೇನ ನಿಯುಕ್ತಾ ಅಕೃಢ್ವಂ। ತದಾನೀಂ ಪರ್ವತಾದಿಕಂ ಪ್ರಚ್ಯವತ ಇತ್ಯರ್ಥಃ॥ ಸುಮಖಾಸಃ। ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ನಞ್ಸುಭ್ಯಾಮಿತ್ಯಸ್ಯ ಪ್ರವೃತ್ತ್ಯಭಾವೇ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ। ಅಚ್ಯುತಾ। ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ। ಮನೋಜುವಃ। ಜು ಇತಿ ಸೌತ್ರೋ ಧಾತುರ್ಗತ್ಯರ್ಥಃ। ಕ್ವಿಬ್ವಚೀತ್ಯಾದಿನಾ ಕ್ವಿಬ್ದೀರ್ಘೌ। ಅಯುಗ್ಧ್ವಂ। ಯುಜಿರ್ ಯೋಗೇ। ಲುಙಃ ಧಿ ಚ। ಪಾ. ೮-೨-೨೫। ಇತಿ ಸಕಾರಲೋಪಃ॥

### ಪ್ರತಿಪದಾರ್ಥ

**ಸುಮಖಾಸಃ**— ಶ್ರೇಷ್ಠವಾದ ಯಜ್ಞವುಳ್ಳ। **ಯೇ**— ಯಾವ ಮರುತ್ತುಗಳು। **ಋಷ್ಟಿಭಿಃ**— ಆಯುಧಗಳೊಡನೆ। **ವಿಭ್ರಾಜಂತೇ**— ವಿಶೇಷವಾಗಿ ಪ್ರಕಾಶಿಸುತ್ತಾರೋ। (ಅವರು) **ಅಚ್ಯುತಾ ಚಿತ್**— ಅಲ್ಲಾಡಿಸಲಸಾಧ್ಯವಾದ ಪರ್ವತಾದಿಗಳನ್ನೂ ಕೂಡ,। **ಓಜಸಾ**— ತಮ್ಮ ಬಲದಿಂದ। **ಪ್ರಚ್ಯಾವಯಂತಃ**— ಅಲ್ಲಾಡಿಸುತ್ತಾರೆ. । **ಮರುತಃ**— ಎಲೈ ಮರುತ್ತುಗಳೇ। **ಮನೋಜುವಃ**— ಮನೋವೇಗವುಳ್ಳವರಾಗಿಯೂ। **ವೃಷವ್ರಾತಾಸಃ**— ಮಳೆಯನ್ನು ಸುರಿಸುವುದೇ ಮೊದಲಾದ ಕರ್ತವ್ಯತತ್ಪರರಾಗಿಯೂ ಇದ್ದು। **ರಥೇಷು**— ನಿಮ್ಮ ರಥಗಳಲ್ಲಿ। **ಪೃಷತೀಃ**— ಬಿಂದುಗಳಿಂದ ಕೂಡಿದ ಜಿಂಕೆಗಳನ್ನು। **ಯತ್**— ಯಾವಾಗ। **ಅ ಅಯುಗ್ಧ್ವಂ**— (ರಥಕ್ಕೆ) ಅಭಿಮುಖವಾಗಿ ಕಟ್ಟುತ್ತೀರೋ (ಆಗ ಪರ್ವತಾದಿಗಳೂ ಸಹ ಚಲಿಸುತ್ತವೆ.)।

### ಭಾವಾರ್ಥ

ಶ್ರೇಷ್ಠವಾದ ಯಜ್ಞಯುಕ್ತರಾದ ಯಾವ ಮರುತ್ತುಗಳು ತಮ್ಮ ಆಯುಧಗಳೊಡನೆ ವಿಶೇಷವಾಗಿ ಪ್ರಕಾಶಿಸುತ್ತಾರೆಯೋ, ಆ ಮರುತ್ತುಗಳು ಅಲ್ಲಾಡಿಸಲಸಾಧ್ಯವಾದ ಪರ್ವತಾದಿಗಳನ್ನೂ ಸಹ ತಮ್ಮ ಬಲದಿಂದ ಕಂಪಿಸುವಂತೆ ಮಾಡುತ್ತಾರೆ. ಎಲೈ ಮರುತ್ತುಗಳೇ, ಮನೋವೇಗವುಳ್ಳವರಾಗಿಯೂ ಮಳೆಯನ್ನು ಸುರಿಸುವುದೇ ಮೊದಲಾದ ಕರ್ತವ್ಯತತ್ಪರರಾಗಿಯೂ ಇದ್ದು ನೀವು ನಿಮ್ಮ ರಥಗಳಲ್ಲಿ ಬಿಂದುಗಳಿಂದ ಕೂಡಿದ ಜಿಂಕೆಗಳನ್ನು ಯಾವಾಗ ಕಟ್ಟುತ್ತೀರೋ ಆಗ ಪರ್ವತಾದಿಗಳನ್ನೆಲ್ಲಾ ಚಲಿಸುವಂತೆ ಮಾಡುತ್ತೀರಿ.

## English Translation

They ( Maruts ) who are well worshipped shine with various weapons ; through their might, they are shakers of even unshakable (mountains & c. ) Maruts, entrusted with the duty of sending rain, yoke the spotted deer to your cars.

### ವಿಶೇಷವಿಷಯಗಳು

**ಸುಮಖಾಸಃ—ಶೋಭನಯಜ್ಞಾಃ ।** ಉತ್ತಮವಾದ ಯಜ್ಞಗಳಲ್ಲಿ ಆರಾಧಿಸಲ್ಪಡುವವರು.

**ಋಷ್ಟಿಭಿಃ--ಆಯುಧೈಃ ।** ಆಯುಧಗಳಿಂದ, ಭರ್ಜಿಗಳಿಂದ.

**ಪ್ರಚ್ಯಾವಯಂತಃ—ಪ್ರಕರ್ಷೇಣ ಚ್ಯಾವಯಿತಾರಃ ಪ್ರೇರಯಿತಾರೋ ಭವಂತಿ ।** ತಮ್ಮ ಶಕ್ತಿಯಿಂದ ಪ್ರೇರಿಸುವವರು, ಅಲ್ಲಾಡಿಸುವವರು

**ಅಚ್ಯುತಾಃ**—ಅಲ್ಲಾಡಿಸುವುದಕ್ಕೆ ಅಶಕ್ಯವಾದ ಪರ್ವತಾದಿಗಳನ್ನು.

**ಓಜಸಾ**—ತಮ್ಮ ಶಕ್ತಿಸಾಮರ್ಥ್ಯಗಳಿಂದ.

**ಮನೋಜುವಃ—ಜು ಇತಿ ಸೌತ್ರೋ ಧಾತುರ್ಗತ್ಯರ್ಥಃ ।** ಮನೋವೇಗವುಳ್ಳವರು. ನಾವು ಯಾವರೀತಿ ಮನಸ್ಸಿನಲ್ಲಿ ಅತ್ಯಂತ ದೂರದಲ್ಲಿರುವ ವಸ್ತುವನ್ನು ಕ್ಷಣಮಾತ್ರದಲ್ಲಿ ಆಲೋಚಿಸುತ್ತೇವೆಯೋ ಅದರಂತೆ ಅತಿಶಯವಾದ ವೇಗವುಳ್ಳವರು ಎಂದಭಿಪ್ರಾಯವು.

**ವೃಷವ್ರಾತಾಸಃ**—ಮಳೆಹುಯ್ಯುವ ಕೆಲಸದಲ್ಲಿ ಸಮರ್ಥರಾದ.

**ಪೃಷತೀಃ**—ಮರುದ್ದೇವತೆಗಳ ವಾಹನಗಳಿಗೆ ಪೃಷತೀಃ ಎಂದು ಹೆಸರು. ಪೃಷತೀಃ ಎಂದರೆ ಬಿಳೀಚುಕ್ಕೆಗಳುಳ್ಳ ಜಿಂಕೆಗಳು. ಬೇರೆ ಬೇರೆ ದೇವತೆಗಳಿಗೆ ಬೇರೆ ಬೇರೆ ವಾಹನಗಳಿರುವುವು. ಈ ವಿಷಯದಲ್ಲಿ ಯಾಸ್ಕರು—

> **ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋ ಮರುತಾಂ । ಅರುಣ್ಯೋ ಗಾವಃ ಉಷಸಃ । ಶ್ಯಾವಾ ಸವಿತುಃ। ವಿಶ್ವರೂಪಾ ಬೃಹಸ್ಪತೇಃ। ನಿಯುತೋ ವಾಯೋಃ ॥**
>
> (ನಿ. ೨-೨೮)

ಎಂದು ಹೇಳಿರುವರು.

### ವ್ಯಾಕರಣಪ್ರಕ್ರಿಯಾ

**ಭ್ರಾಜಂತೇ**—ಭ್ರಾಜೃ ದೀಪ್ತೌ ಧಾತು. ಭ್ವಾದಿ. ಯೇ ಎಂದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಪ್ರತಿಷೇಧ. ಧಾತುಸ್ವರ ಉಳಿಯುತ್ತದೆ.

**ಸುಮುಖಾಸಃ**—ಶೋಭನಾಃ ಮುಖಾಃ ಯೇಷಾಂ ತೇ ಸುಮುಖಾಸಃ. **ನಞ್ಸುಭ್ಯಾಂ** ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರವು ವಾಸ್ತವವಾಗಿ ಬಹುವ್ರೀಹಿಯಲ್ಲಿ ಬರಬೇಕಾಗುತ್ತದೆ. ಆದರೆ **ಷಷ್ಠೀಯುಕ್ತಃ ಛಂದಸಿ ವಾ** ಎಂಬ ಸೂತ್ರದ ಯೋಗವಿಭಾಗದಿಂದ ಸಿದ್ಧವಾದ **ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ ಇಲ್ಲಿ ಪೂರ್ವೋಕ್ತಸ್ವರವು ಬಾರದೆ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಸಾಮಾನ್ಯವಾಗಿ ಬರುವ ಪೂರ್ವಪದಪ್ರಕೃತಿಸ್ವರವೇ ಬರುತ್ತದೆ. ಪ್ರಥಮಾಬಹುವಚನದಲ್ಲಿ ಜಸಿಗೆ **ಆಜ್ಜಸೇರಸುಕ್** ಎಂಬುದರಿಂದ ಅಸುಕಾಗಮ ಬರುತ್ತದೆ.

**ಪ್ರಚ್ಯಾವಯಂತಃ**—ಚ್ಯುಙ್ ಗತೌ ಧಾತು. ಪ್ರೇರಣಾ ತೋರುವಾಗ ಣಿಚ್. ಣಿಜಂತದಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ವಿಕರಣ. ಶಪ್‌ನಿಮಿತ್ತಕವಾಗಿ ಣಿಚಿಗೆ ಗುಣ ಅಯಾದೇಶ. ಣಿಚ್‌ನಿಮಿತ್ತ ವಾಗಿ ಧಾತುವಿಗೆ ವೃದ್ಧಿ ಆವಾದೇಶ. ಣಿಚ್‌ಸ್ವರ ಬರುತ್ತದೆ.

**ಅಚ್ಯುತಾ**—ಶಸಿಗೆ ನಪುಂಸಕದಲ್ಲಿ ಆದೇಶವಾಗಿ ಬಂದ ಶಿಗೆ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಲೋಪ.

**ಮನೋಜುವಃ**—ಜು ಎಂಬುದು ಸೌತ್ರವಾದ ಧಾತು ಗತ್ಯರ್ಥದಲ್ಲಿ ಇದೆ. **ಕ್ವಿಬ್ವಚಿಪ್ರ**—(ಪಾ. ಸೂ. ೩-೨-೧೭೮ ವಾ. ೨) ಎಂಬುದರಿಂದ ಕ್ವಿಪ್‌ಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿಗೆ ದೀರ್ಘ. ಮನೋಜೂ ಶಬ್ದವಾಗುತ್ತದೆ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ ಪ್ರಥಮಾಬಹುವಚನದಲ್ಲಿ **ಅಚಿಶ್ನುಧಾತು**— ಸೂತ್ರದಿಂದ ಉವಙಾದೇಶ.

**ವೃಷವ್ರಾತಾಸಃ**— ಜಸಿಗೆ **ಆಜ್ಜಸೇರಸುಕ್** ಎಂಬುದರಿಂದ ಅಸುಕಾಗಮ ಬರುತ್ತದೆ.

**ಅಯುಗ್ಧ್ವಮ್** — ಯುಜಿರ್ ಯೋಗೇ ಧಾತು. ಲುಙ್ ಮಧ್ಯಮಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ. **ಚ್ಲೇಃಸಿಚ್** ಎಂಬುದರಿಂದ ಸಿಚಾದೇಶ. ಅದಕ್ಕೆ ಧಕಾರಾದಿಪ್ರತ್ಯಯ ಪರದಲ್ಲಿರುವುದರಿಂದ **ಧಿಚ** (ಪಾ. ಸೂ. ೮-೨-೨೫) ಎಂಬುದರಿಂದ ಲೋಪ **ಚೋಃಕುಃ** ಎಂಬುದರಿಂದ ಧಾತುವಿನ ಜಕಾರಕ್ಕೆ ಕುತ್ವ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದ ವಾಗುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಪ್ರ ಯದ್ರಥೇಷು ಪೃಷತೀರಯುಗ್ಧ್ವಂ ವಾಜೇ ಅದ್ರಿಂ ಮರುತೋ ರಂಹಯಂತಃ ।
ಉತಾರುಷಸ್ಯ ವಿ ಷ್ಯಂತಿ ಧಾರಾಶ್ಚರ್ಮೇವೋದಭಿರ್ವ್ಯುಂದಂತಿ ಭೂಮ ॥ ೫ ॥

॥ ಪದಪಾಠಃ ॥

ಪ್ರ । ಯತ್ । ರಥೇಷು । ಪೃಷತೀಃ । ಅಯುಗ್ಧ್ವಂ । ವಾಜೇ । ಅದ್ರಿಂ । ಮರುತಃ । ರಂಹಯಂತಃ ।
ಉತ । ಅರುಷಸ್ಯ । ವಿ । ಸ್ಯಂತಿ । ಧಾರಾಃ । ಚರ್ಮಽಇವ । ಉದಽಭಿಃ । ವಿ । ಉಂದಂತಿ । ಭೂಮ ॥ ೫ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಪೃಷತೀರ್ಯದ್ಯದಾ ರಥೇಷು ಪ್ರಾಯುಗ್ಧ್ವಂ ಪ್ರಾಯೂಯುಜತ । ಕಿಂ ಕುರ್ವಂತಃ । ವಾಜೇಽನ್ನೇ ನಿಮಿತ್ತಭೂತೇ ಸತ್ಯದ್ರಿಂ ಮೇಘಂ ರಂಹಯಂತೋ ವರ್ಷಣಾರ್ಥಂ ಪ್ರೇರಯಂತಃ । ಉತ ತದಾನೀಮರುಷಸ್ಯಾರೋಚಮಾನಸ್ಯ ಸೂರ್ಯಸ್ಯ ವೈದ್ಯುತಾಗ್ನೇರ್ವಾ ಸಕಾಶಾದ್ವೃಷ್ಟ್ಯುದಕಧಾರಾ ಭವಂತೋ ವಿ ಷ್ಯಂತಿ । ವಿಮುಂಚಂತಿ । ವಿಮುಕ್ತಾಸ್ತಾಶ್ಚ ಧಾರಾ ಉದಭಿರುದಕೈಶ್ಚರ್ಮೇವ ಪರಿಮಿತಮಲ್ಪಂ ಚರ್ಮ ಯಥಾಪ್ರಯತ್ನೇನ ಕ್ಲೇದ್ಯತೇ ಏವಂ ಭೂಮ ಸರ್ವಾಂ ಭೂಮಿಂ ವ್ಯುಂದಂತಿ । ವಿಶೇಷೇಣಾರ್ದ್ರಾಂ ಕುರ್ವಂತಿ ॥ ರಂಹಯಂತಃ । ರಹಿ ಗತೌ । ವಿ ಷ್ಯಂತಿ । ಷೋ ಅಂತಕರ್ಮಣಿ । ದೈವಾದಿಕಃ । ಓತಃ ಶ್ಯನಿ । ಪಾ. ೭-೩-೭೧ । ಇತ್ಯೋಕಾರಲೋಪಃ । ಉಪಸರ್ಗಾತ್ಸುನೋತೀತಿ ಷತ್ವಂ । ಉದಭಿಃ । ಪದನ್ನಿತ್ಯಾದಿನೋದಕಶಬ್ದಸ್ಯೋದನ್ನಾದೇಶಃ । ವ್ಯುಂದಂತಿ । ಉಂದೀ ಕ್ಲೇದನೇ । ಭೂಮ । ಸುಪಾಂ ಸುಲುಗಿತಿ ಭೂಮಿಶಬ್ದಾದುತ್ತರಸ್ಯಾಮೋ ಡಾದೇಶಃ । ಛಾಂದಸಂ ಹ್ರಸ್ವತ್ವಂ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ । **ವಾಜೇ**—ಅನ್ನಾರ್ಥವಾಗಿ । **ಅದ್ರಿಂ**—ಮೇಘವನ್ನು । **ರಂಹಯಂತಃ**—(ಮಳೆಯನ್ನು ಸುರಿಸುವುದಕ್ಕಾಗಿ) ಪ್ರೇರಿಸುತ್ತ । **ಪೃಷತೀಃ**—ಜಿಂಕೆಗಳನ್ನು । **ರಥೇಷು**—(ನಿಮ್ಮ) ರಥಗಳಲ್ಲಿ । **ಯತ್**—ಯಾವಾಗ । **ಪ್ರಅಯುಗ್ಧ್ವಂ**- ಚೆನ್ನಾಗಿ ಕಟ್ಟುತ್ತೀರೋ । **ಉತ**—ಆಗ । **ಅರುಷಸ್ಯ**—ಕಾಂತಿಯುತನಾದ ಸೂರ್ಯನ ಅಥವಾ ಮಿಂಚಿನ ರೂಪದ ಅಗ್ನಿಯ (ಸಕಾಶದಿಂದ ವೃಷ್ಟಿಧಾರೆಗಳು) । **ವಿಷ್ಯಂತಿ**—ಬೀಳುತ್ತವೆ. । **ಧಾರಾಃ**—ಆ ವೃಷ್ಟಿಧಾರೆಗಳು । **ಉದಭಿಃ**—ನೀರುಗಳಿಂದ । **ಚರ್ಮೇವ**—ಸಣ್ಣ ಚರ್ಮವನ್ನು (ಶ್ರಮವಿಲ್ಲದೇ) ನೆನೆಸುವಂತೆ । **ಭೂಮ**—ಸಕಲ ಭೂಪ್ರದೇಶವನ್ನೂ । **ವ್ಯುಂದಂತಿ**—ಒದ್ದೆಯಾಗುವಂತೆ ಮಾಡುತ್ತವೆ. ।

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಅನ್ನಾರ್ಥವಾಗಿ ಮಳೆಯನ್ನು ಸುರಿಸಲು ನೀವು ಮೇಘವನ್ನು ಪ್ರೇರಿಸುತ್ತ ಯಾವಾಗ ನಿಮ್ಮ ಜಿಂಕೆಗಳನ್ನು ರಥಕ್ಕೆ ಕಟ್ಟುತ್ತೀರೋ ಆಗ ಕಾಂತಿಯುತನಾದ ಸೂರ್ಯನ ಹತ್ತಿರದಿಂದ ಧಾರಾರೂಪವಾದ ಮಳೆಯು ಬೀಳುತ್ತದೆ. ಆ ವೃಷ್ಟಿಧಾರೆಯು ಸಣ್ಣಚರ್ಮವನ್ನು ಕೊಂಚನೀರಿನಿಂದ ಶ್ರಮವಿಲ್ಲದೇ ನೆನೆಸುವಂತೆ ಸಕಲ ಭೂಪ್ರದೇಶವನ್ನೂ ಒದ್ದೆಯಾಗುವಂತೆ ಮಾಡುತ್ತದೆ.

## English Translation

O Maruts, when for the sake of providing food, you have yoked the spotted deer to your chariots the drops ( of water ) fall from the radian ( Sun ) and drench the earth with waters like a hide.

ವಿಶೇಷವಿಷಯಗಳು

**ಪೃಷತೀಃ**—ಬಿಳಿಚುಕ್ಕೆಗಳುಳ್ಳ ಜಿಂಕೆಗಳು. ಇವು ಮರುದ್ದೇವತೆಗಳ ವಾಹನಗಳು. spotted deer or antelop:s ಈ ಶಬ್ದದ ಅರ್ಥವಿವರಣೆಯನ್ನು ಹಿಂದಿನ ಋಕ್ಕಿನಲ್ಲಿ ಕೊಟ್ಟಿರುತ್ತೆ.

**ವಾಜೇ—ಅನ್ನೇ ನಿಮಿತ್ತಭೂತೇ** । ಅನ್ನ ಅಥವಾ ಆಹಾರಪ್ರಾಪ್ತಿಗಾಗಿ ಮಳೆ ಹುಯ್ಯುವಂತೆ ಮಾಡುವುದಕ್ಕೆ.

**ಅದ್ರಿಂ—ಮೇಘಂ** । ಅದ್ರಿಃ ಗ್ರಾವಾ ಮೊದಲಾದ ಮೂವತ್ತು ಮೇಘನಾಮಗಳ ಮಧ್ಯದಲ್ಲಿ ಅದ್ರಿ ಶಬ್ದವು ಪಠಿತವಾಗಿರುವುದರಿಂದ ಅದ್ರಿಂ ಎಂದರೆ ಮೇಘವನ್ನು ಎಂದರ್ಥವು. (ನಿ. ೧-೧೦) ಅದ್ರಿಶಬ್ದಕ್ಕೆ ಮಿಂಚೆಂದೂ (ನಿ. ೫-೪) ಪರ್ವತವೆಂದೂ (ನಿ. ೩-೫) ಬೇರೆ ಅರ್ಥಗಳಿರುವುವು.

**ರಂಹಯಂತಃ—ವರ್ಷಣಾರ್ಥಂ ಪ್ರೇರಯಂತಃ** । ಮಳೆಯನ್ನು ಹುಯ್ಯುವಂತೆ ಪ್ರೇರಿಸುವ.

**ಅರುಷಸ್ಯ**—**ಆರೋಚಮಾನಸ್ಯ ಸೂರ್ಯಸ್ಯ ವೈದ್ಯುತಾಗ್ನೇರ್ವಾ ಸಕಾಶಾದ್ವೃಷ್ಟ್ಯುದಕಧಾರಾ ಭವಂತೋ ವಿಷ್ಯಂತಿ ।** ಪ್ರಕಾಶಮಾನನಾದ ಸೂರ್ಯನ ಅಥವಾ ಮಿಂಚಿನ (ಅಗ್ನಿಯ) ಬಳಿಯಿಂದ ಮಳೆಯ ನೀರು ಸುಯ್ಯುವುದೆಂದರ್ಥವು. ಗುಡುಗು, ಮಿಂಚು, ಇವುಗಳ ಆರ್ಭಟದಿಂದ ಮಳೆಯು ಸುಯ್ಯುತ್ತಿರುವಾಗ ಗಾಳಿಯು ಜೋರಾಗಿ ಬೀಸುತ್ತಿರುವುದರಿಂದ ಇಲ್ಲಿ ಋಷಿಯು ಮರುತ್ತುಗಳು (ಗಾಳಿಯು) ವೇಗವಾಗಿ ಚಲಿಸುತ್ತಾ ಮಿಂಚಿನ ಬಳಿಯಿಂದ ಉದಕವನ್ನು ಭೂಮಿಯಮೇಲೆ ಬೀಳುವಂತೆ ಮೇಘಗಳನ್ನು ಪ್ರೇರಿಸುವವು ಎಂದು ವರ್ಣನೆಮಾಡಿರುವನು.

ಮರುದ್ದೇವತೆಗಳು ಎಲ್ಲೆಲ್ಲಿ ಸಂಚಾರಮಾಡಿ ವೃಷ್ಟಿಯನ್ನು ಸುರಿಯುವಂತೆ ಮಾಡುತ್ತಾರೋ ಅಲ್ಲೆಲ್ಲಾ ಅಗ್ನಿ (ವಿದ್ಯುತ್) ಉತ್ಪತ್ತಿಯಾಗುವುದೆಂದು ಪ್ರಸಿದ್ಧವು. ಈ ವಿಷಯವು ಅನೇಕ ಋಕ್ಕುಗಳಲ್ಲಿ ಉಕ್ತವಾಗಿರುವುದು-

**ಅಧ ಕ್ಷರಂತಿ ಸಿಂಧವೋ ನ ಸೃಷ್ಟಾಃ ಪ್ರ ನೀಚೀರಗ್ನೇ ಅರುಷೀರಜಾನನ್**
(ಋ. ಸಂ. ೧-೭೨-೧೦)

**ಈಶಾನಕೃತೋ ಧುನಯೋ ರಿಶಾದಸೋ ವಾತಾನ್ ವಿದ್ಯುತಸ್ತವಿಷೀಭಿರಕ್ರತ ।**
**ದುಹಂತ್ಯೂಧರ್ದಿವ್ಯಾನಿ ಧೂತಯೋ ಭೂಮಿಂ ಪಿನ್ವಂತಿ ಪಯಸಾ ಪರಿಜ್ರಯಃ ॥**
(ಋ. ಸಂ. ೧-೬೪-೫)

**ಅಗ್ನಿಭ್ರಾಜಸೋ ವಿದ್ಯುತೋ ಗಭಸ್ತ್ಯೋಃ ಶಿಪ್ರಾಃ ಶೀರ್ಷಸು ವಿತತಾ ಹಿರಣ್ಯಯೀಃ ।**
(ಋ. ಸಂ. ೫.೫೪-೧೧)

ಇತ್ಯಾದಿ ಅನೇಕಋಕ್ಕುಗಳಲ್ಲಿ ಈ ವಿಷಯವು ಸ್ಪಷ್ಟವಾಗಿ ಸಮರ್ಥಿಸಲ್ಪಟ್ಟಿರುವುದು.

**ಸ್ಯಂತಿ—ಷೋ ಅಂತಕರ್ಮಣಿ । ವಿಷ್ಯಂತಿ ವಿಮುಂಚಂತಿ ।** ಸುರಿಸುವವು, ಮಳೆಯನ್ನು ಸುಯ್ಯುವವು.

**ಚರ್ಮಇವ ಉದಭಿಃ**—ಚರ್ಮವು, ಉದಕದಿಂದ ಹೇಗೆ ನೆನೆಯಿಸಲ್ಪಡುವುದೋ ಹಾಗೆ.

**ಉಂದಂತಿ ಭೂಮ**—ಭೂಮಿಯನ್ನು ನೆನೆಯಿಸುವವು.

ವ್ಯಾಕರಣಪ್ರಕ್ರಿಯಾ

**ಅಯುಗ್ಧ್ವಮ್**—ಪ್ರಕ್ರಿಯಾ ಹಿಂದಿನ ಮಂತ್ರದಲ್ಲಿ ಉಕ್ತವಾಗಿದೆ. ಇಲ್ಲಿಯೂ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಮರುತಃ—ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ರಂಹಯಂತಃ**—ರಹಿ ಗತೌ ಧಾತು. **ಇದಿತೋನುಮ್‌ಧಾತೋಃ** ಎಂಬುದರಿಂದ ನುಮಾಗಮ. ಪ್ರೇರಣಾ ತೋರುವುದರಿಂದ ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ಇದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ. ಅಯಾದೇಶ. ರಹಯತ್ ಶಬ್ದವಾಗುತ್ತದೆ. ಣಿಚ್‌ಸ್ವರದಿಂದ ಹಕಾರೋತ್ತರ ಅಕಾರವು ಉದಾತ್ತವಾಗುತ್ತದೆ. ಪ್ರಥಮಾಬಹುವಚನದಲ್ಲಿ ಉಗಿತ್ತಾದುದರಿಂದ ನುಮಾಗಮ ಬರುತ್ತದೆ.

ವಿ ಷ್ಯಂತಿ– ಷೋ ಅಂತಕರ್ಮಣಿ ಧಾತು. ದಿವಾದಿ. **ಧಾತ್ವಾದೇಃ ಷಃ ಸಃ** ಎಂಬುದರಿಂದ ಸತ್ವ ಲಟ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ. **ದಿವಾದಿಭ್ಯಃ ಶ್ಯನ್** ಎಂಬುದರಿಂದ ಶ್ಯನ್ ವಿಕರಣ. ಇದು ಪರವಾದಾಗ **ಓತಃ ಶ್ಯನಿ** (ಪಾ. ಸೂ. ೭-೩-೭೧) ಎಂಬುದರಿಂದ ಧಾತುವಿನ ಓಕಾರಕ್ಕೆ ಲೋಪ. **ಅತೋಗುಣೇ** ಸೂತ್ರದಿಂದ ಪರರೂಪ. ಸ್ಯಂತಿ ಎಂದು ರೂಪವಾಗುತ್ತದೆ. ವಿ ಉಪಸರ್ಗ ಸಂಬಂಧ ಬಂದಾಗ **ಉಪಸರ್ಗಾತ್ ಸುನೋತಿ**—(ಪಾ. ಸೂ. ೮-೩-೬೫) ಎಂಬುದರಿಂದ ಧಾತುಸಕಾರಕ್ಕೆ ಷತ್ವ. ತಿಙಂತನಿಘಾತಸ್ವರ ಬರುತ್ತದೆ.

**ಉದಭಿಃ**—ಉದಕ+ಭಿಸ್ ಎಂದಿರುವಾಗ **ಪದ್ದನ್ನೋಮಾಸ್ ಹೃತ್**—(ಪಾ. ಸೂ. ೬-೧-೬೩) ಎಂಬುದರಿಂದ ಪ್ರಕೃತಿಗೆ ಉದನ್ ಎಂಬ ಆದೇಶ ಬರುತ್ತದೆ. ಪದಸಂಜ್ಞಾ ಇರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ ಬರುತ್ತದೆ. ಅದು ಅಸಿದ್ಧವಾದುದರಿಂದ ಏತ್ವಾದಿಗಳು ಬರುವುದಿಲ್ಲ.

**ವ್ಯುಂದಂತಿ**—ಉಂದೀ ಕ್ಲೇದನೇ ಧಾತು. ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಭೂಮ**—ಭೂಮಿ+ಅಮ್ ಎಂದಿರುವಾಗ **ಸುಪಾಂ ಸುಲುಕ್** ಸೂತ್ರದಿಂದ ಅಮಿಗೆ ಡಾದೇಶ ಬರುತ್ತದೆ. ಡಿತ್ವಸಾಮರ್ಥ್ಯದಿಂದ ಪ್ರಕೃತಿಯ ಟಿಗೆ (ಇ) ಲೋಪ ಬರುತ್ತದೆ. ಛಾಂದಸವಾಗಿ ಹ್ರಸ್ವ ಬರುತ್ತದೆ. ॥ ೫ ॥



ಸಂಹಿತಾಪಾಠಃ

ಆ ವೋ ವಹಂತು ಸಪ್ತಯೋ ರಘುಷ್ಯದೋ ರಘುಪತ್ವಾನಃ
ಪ್ರ ಜಿಗಾತ ಬಾಹುಭಿಃ ।
ಸೀದತಾ ಬರ್ಹಿರುರು ವಃ ಸದಸ್ಕೃತಂ ಮಾದಯಧ್ವಂ ಮರು-
ತೋ ಮಧ್ವೋ ಅಂಧಸಃ ॥ ೬ ॥

॥ ಪದಪಾಠಃ ॥

ಆ । ವಃ । ವಹಂತು । ಸಪ್ತಯಃ । ರಘುಽಸ್ಯದಃ । ರಘುಽಪತ್ವಾನಃ । ಪ್ರ ।
ಜಿಗಾತ । ಬಾಹುಽಭಿಃ ।
ಸೀದತ । ಆ । ಬರ್ಹಿಃ । ಉರು । ವಃ । ಸದಃ । ಕೃತಂ । ಮಾದಯಧ್ವಂ । ಮ-
ರುತಃ । ಮಧ್ವಃ । ಅಂಧಸಃ ॥ ೬ ॥

॥ ಸಂಹಿತಾಪಾಠಃ ॥

ತೃತೀಯಸವನ ಆ ವೋ ವಹಂತ್ವಿತಿ ಪೋತುಃ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಆ ವೋ ವಹಂತು ಸಪ್ತಯೋ ರಘುಷ್ಯದೋಽಮೇವ ನಃ ಸುಹವಾ ಆ ಹಿ ಗಂತನ । ಆ. ೫-೫ । ಇತಿ ॥

ಹೇ ಮರುತೋ ವೋ ಯುಷ್ಮಾನ್ ಸಪ್ತಯಃ ಸರ್ಪಣಶೀಲಾ ಅಶ್ವಾ ಆ ವಹಂತು । ಅಸ್ಮದ್ಯಜ್ಞಂ ಪ್ರಾಪಯಂತು । ಕೀದೃಶಾಃ ಸಪ್ತಯಃ । ರಘುಷ್ಯದೋ ಲಘು ಶೀಘ್ರಂ ಸ್ಯಂದಮಾನಾಃ । ವೇಗೇನ ಗಚ್ಛಂತ ಇತ್ಯರ್ಥಃ । ರಘುಪತ್ವಾನೋ ಲಘು ಶೀಘ್ರಂ ಪತಂತೋ ಗಚ್ಛಂತೋ ಯೂಯಂ ಬಾಹುಭಿಃ ಸ್ವಕೀಯೈರ್ಹಸ್ತೈರಸ್ಮಭ್ಯಂ ದಾತವ್ಯಂ ಧನಮಾಹೃತ್ಯ ಪ್ರ ಜಿಗಾತ । ಪ್ರಕರ್ಷೇಣ ಗಚ್ಛತ । ಹೇ ಮರುತೋ ವೋ ಯುಷ್ಮಾಕಂ ಸದಃ ಸದನಂ ವೇದಿಲಕ್ಷಣಂ ಸ್ಥಾನಮುರು ವಿಸ್ತೀರ್ಣಂ ಕೃತಂ । ತತ್ರ ಯದಾಸ್ತೀರ್ಣಂ ಬರ್ಹಿಸ್ತದಾ ಸೀದತ । ತಸ್ಮಿನ್ಬರ್ಹಿಷ್ಯುಪವಿಶತ । ಉಪವಿಶ್ಯ ಚ ಮಧ್ವೋ ಮಧುರಸ್ಯಾಂಧಸಃ ಸೋಮ-ಲಕ್ಷಣಸ್ಯಾನ್ನಸ್ಯ ಪಾನೇನ ಮಾದಯಧ್ವಂ । ತೃಪ್ತಾ ಭವತ ॥ ರಘುಷ್ಯದಃ । ರಘು ಸ್ಯಂದಂತ ಇತಿ ರಘುಷ್ಯದಃ । ಸ್ಯಂದೂ ಪ್ರಸ್ರವಣೇ । ಕ್ವಿಪ್ಚೇತಿ ಕ್ವಿಪ್ । ಅನಿದಿತಾಮಿತಿ ನಲೋಪಃ । ಕೃದುತ್ತರಪದ-ಪ್ರಕೃತಿಸ್ವರತ್ವಂ । ರಘುಪತ್ವಾನಃ । ಪತ್ಲೃ ಗತೌ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ಜಿಗಾತ । ಗಾ ಸ್ತುತೌ । ಜುಹೋತ್ಯಾದಿಕಃ । ಜಿಗಾತೀತಿ ಗತಿಕರ್ಮಸು ಪಾಠಾದತ್ರ ಗತ್ಯರ್ಥಃ । ಲೋಣ್ಮಧ್ಯಮ-ಬಹುವಚನಸ್ಯ ತಪ್ತನಪ್ತನಥನಾಶ್ಚೇತಿ ತಬಾದೇಶಃ । ತಸ್ಯ ಪಿತ್ತ್ವೇನ ಙಿತ್ತ್ವಾಭಾವಾದೀ ಹಲ್ಯಘೋರಿ-ತೀತ್ವಾಭಾವಃ । ಸದಃ । ಅತಃ ಕೃಕಮೀತಿ । ಪಾ. ೮-೩-೪೬ । ವಿಸರ್ಜನೀಯಸ್ಯ ಸತ್ವಂ । ಮಾದಯಧ್ವಂ ಮುದ ತೃಪ್ತಿಯೋಗೇ । ಚುರಾದಿರಾತ್ಮನೇಪದೀ ॥

ಪ್ರತಿಪದಾರ್ಥ

**ವಃ**—(ಎಲೈ ಮರುತ್ತುಗಳೇ) ನಿಮ್ಮನ್ನು । **ರಘುಷ್ಯದಃ**— ಸುಲಭವಾಗಿ ಸರಿದುಹೋಗತಕ್ಕವೂ । **ರಘುಪತ್ವಾನಃ**—ವೇಗವಾಗಿ ನೆಗೆಯತಕ್ಕವೂ ಆದ । **ಸಪ್ತಯಃ**—ಕುದುರೆಗಳು । **ಆ ವಹಂತು**—(ನಮ್ಮ ಯಜ್ಞ ಭೂಮಿಗೆ) ಕರೆತರಲಿ. । (ನೀವು) **ಬಾಹುಭಿಃ**—ನಿಮ್ಮ ಕೈಗಳಿಂದ (ನಮಗೆ ಅನುಗ್ರಹಿಸಬೇಕಾದ ಧನವನ್ನು

ತುಂಬಿಕೊಂಡು) । **ಪ್ರಜಿಗಾತ**—ಒಡನೆ ಬನ್ನಿರಿ. । **ಮರುತಃ**—ಎಲೈ ಮರುತ್ತುಗಳೇ, । **ವಃ**—ನಿಮಗೆ । **ಸದಃ**-ವೇದಿರೂಪವಾದ ಸ್ಥಾನವು । **ಉರು**—ವಿಸ್ತಾರವಾಗಿ । **ಕೃತಂ**—ಮಾಡಿ (ಸಿದ್ಧವಾಗಿ)ದೆ. । **ಬರ್ಹಿಃ**—ದರ್ಭಾಸನದ ಮೇಲೆ । **ಆ ಸೀದತ**—ಕುಳಿತುಕೊಳ್ಳಿ. । **ಮಧ್ವಃ**—ಮಧುರವಾದ । **ಅಂಧಸಃ**—(ಸೋಮರಸ ರೂಪವಾದ) ಅನ್ನದ (ಪಾನದಿಂದ) । **ಮಾದಯಧ್ವಂ**—ಸಂತೃಪ್ತಿಯನ್ನು ಪಡೆಯಿರಿ. ।

ಭಾವಾರ್ಥ

ಎಲೈ ಮರುತ್ತುಗಳೇ, ಸುಲಭವಾಗಿ ಸರಿದುಹೋಗತಕ್ಕವೂ ವೇಗವಾಗಿ ನೆಗೆಯತಕ್ಕವೂ ಆದ ಕುದುರೆಗಳು ನಿಮ್ಮನ್ನು ನಮ್ಮ ಯಜ್ಞಭೂಮಿಗೆ ಕರೆತರಲಿ. ನಿಮ್ಮ ಕೈಗಳ ತುಂಬ ನಮಗೆ ಅನುಗ್ರಹಿಸಬೇಕಾದ ಧನವನ್ನು ತುಂಬಿಕೊಂಡು ಒಡನೆಯೇ ಬನ್ನಿರಿ. ನಿಮಗೆ ವೇದಿರೂಪವಾದ ಸ್ಥಾನವು ವಿಸ್ತಾರವಾಗಿ ಸಿದ್ಧಮಾಡಿದೆ. ಬಂದು ದರ್ಭಾಸನದ ಮೇಲೆ ಕುಳಿತುಕೊಂಡು ಮಧುರವಾದ ಸೋಮರಸಪಾನದಿಂದ ಸಂತೃಪ್ತಿಯನ್ನು ಪಡೆಯಿರಿ.

English Translation

Let your swift-going horses bear you hither ; and moving swiftly come with your hands (filled with good things) ; sit, Maruts upon the broad seat made of clipped sacred grass and be delighted with the sweet sacrificial food.

ವಿಶೇಷವಿಷಯಗಳು

ತೃತೀಯಸವನದಲ್ಲಿ ಪೋತೃವೆಂಬ ಋತ್ವಿಜನು ಆ ವೋ ವಹಂತು ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಆ ವೋ ವಹಂತು ಸಪ್ತಯೋ ರಘುಷ್ಯದೋऽಮೇವ್ನಃ ಸುಹವಾ ಆ ಹಿ ಗಂತನ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೫)

**ಸಪ್ತಯಃ— ಸರ್ಪಣಶೀಲಾ ಅಶ್ವಾಃ** । ವೇಗವಾಗಿ ಚಲಿಸುವ ಕುದುರೆಗಳು. ಇಲ್ಲಿ ಮರುದ್ದೇವತೆಗಳ ವಾಹನವಾದ ಪೃಷತೀಃ ಎಂಬ ಜಿಂಕೆಗಳೆಂದು ತಿಳಿಯಬೇಕು.

**ರಘುಷ್ಯದಃ**—ರಘು ಎಂದರೆ ಲಘು. ವರ್ಣವ್ಯತ್ಯಯದಿಂದ ಲಕಾರಕ್ಕೆ ರಕಾರದ ಪ್ರಯೋಗವಿರುವುದು. **ಲಘು ಶೀಘ್ರಂ ಸ್ಯಂದಮಾನಾಃ ವೇಗೇನ ಗಚ್ಛಂತ ಇತ್ಯರ್ಥಃ** । ವೇಗವಾಗಿ ಚಲಿಸುವ (ಕುದುರೆಗಳು)

**ರಘುಪತ್ವಾನಃ**—ಈ ಶಬ್ದಕ್ಕೂ ರಘುಷ್ಯದಃ ಎಂಬ ಶಬ್ದದ ಅರ್ಥವೇ ಇರುವುದು. ಆದರೆ ಈ ಶಬ್ದವು ಮರುದ್ದೇವತೆಗಳನ್ನು ಸೂಚಿಸುವುದು. ಲಘು ಶೀಘ್ರಂ ಪತಂತೋ ಗಚ್ಛಂತೋ ಯೂಯಂ । ವೇಗವಾಗಿ ಸಂಚರಿಸತಕ್ಕ ಮರುದ್ದೇವತೆಗಳಾದ ನೀವು ಎಂದರ್ಥವು.

ಜಿಗಾತ—**ಗಾ ಸ್ತುತೌ । ಜೌಹೋತ್ಯಾದಿಕಃ । ಜಿಗಾತೀತಿ ಗತಿಕರ್ಮಸು ಪಾಠಾದತ್ರ ಗತ್ಯರ್ಥಃ** । ಬನ್ನಿ ಅಥವಾ ಹೋಗಿ ಎಂದರ್ಥವು.

**ಉರು**—ವಿಸ್ತಾರವಾದ, ದೊಡ್ಡದಾದ.

**ಮಧ್ವಃ**—ಸಿಹಿಯಾದ, ರುಚಿಕರವಾದ.

**ಅಂಧಸಃ**—**ಸೋಮಲಕ್ಷಣಸ್ಯಾನ್ನಸ್ಯ** । ಸೋಮಪಾನರೂಪವಾದ ಹವಿಸ್ಸಿನ ಅಥವಾ ಹವಿರ್ಲಕ್ಷಣೋಪೇತವಾದ ಅನ್ನದ

॥ ವ್ಯಾಕರಣಪ್ರಕ್ರಿಯಾ ॥

**ವಹಂತು**—ವಹ ಪ್ರಾಪಣೇ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝಿರುಃ ಎಂಬುದರಿಂದ ಉತ್ವ. ಝಂತಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ರಘುಷ್ಯದಃ**—ರಘು ಸ್ಯಂದಂತೇ ಇತಿ ರಘುಷ್ಯದಃ ಸ್ಯಂದೂ ಪ್ರಸ್ರವಣೇ ಧಾತು. **ಕ್ವಿಪ್ ಚ** (ಪಾ. ಸೂ. ೩-೨ ೭೬) ಎಂಬುದರಿಂದ ಕ್ವಿಪ್. ಕಿತ್ತಾದುದರಿಂದ **ಅನಿದಿತಾಂ ಹಲಃ** ಸೂತ್ರದಿಂದ ಉಪಧಾನಕಾರಲೋಪ. ಕಾಪಿಲಕಾದಿಯಲ್ಲಿ ಸೇರಿರುವುದರಿಂದ ರಘು ಎಂಬಲ್ಲಿ ಲತ್ವವಿಕಲ್ಪ. ರಘುಷ್ಯದ್ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ

**ರಘುಪತ್ವಾನಃ**—ರಘು ಪತಂತಃ ರಘುಪತ್ವಾನಃ ಪತ್ಲೃ ಗತೌ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವನಿಪ್‌ಪ್ರತ್ಯಯ. ರಘುಪತ್ವನ್ ಶಬ್ದವಾಗುತ್ತದೆ. ವನಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಹಿಂದಿನಂತೆಯೇ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಜಸ್‌ಪರವಾದಾಗ **ಸರ್ವನಾಮಸ್ಥಾನೇ ಚಾಽಸಂಬುದ್ಧೌ** ಎಂಬುದರಿಂದ ಉಪಧಾದೀರ್ಘ ಬರುತ್ತದೆ.

**ಜಿಗಾತ**—ಗಾ ಸ್ತುತೌ ಧಾತು. ಜುಹೋತ್ಯಾದಿ. **ಜಿಗಾತಿ** (ನಿರು. ೨-೧೪-೧೧೩) ಎಂದು ಗತಿಕರ್ಮಕ ಧಾತುಗಳ ಮಧ್ಯದಲ್ಲಿ ಪಠಿತವಾದುದರಿಂದ ಇಲ್ಲಿ ಗತ್ಯರ್ಥದಲ್ಲಿ ಬರುತ್ತದೆ. ಲೋಟ್‌ಮಧ್ಯಮಪುರುಷಬಹುವಚನಕ್ಕೆ **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ತಬಾದೇಶ. ಅದು ಪಿತ್ತಾದುದರಿಂದ ಙಿತ್ವಾತಿದೇಶ ಬರುವುದಿಲ್ಲ. ಆದುದರಿಂದ **ಶ್ಲೌ** ಎಂಬುದರಿಂದ ದ್ವಿತ್ವಾದಿಕಾರ್ಯಗಳು ಬಂದಾಗ **ಈ ಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ಆಕಾರಕ್ಕೆ ಈತ್ವ ಬರುವುದಿಲ್ಲ. **ಬಹುಲಂ ಛಂದಸಿ** (ಪಾ. ಸೂ. ೭-೪-೭೮) ಎಂಬುದರಿಂದ ಅಭ್ಯಾಸಕ್ಕೆ ಇತ್ವ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಸೀದತ**—ಷದ್‌ಲೃ ವಿಶರಣಗತ್ಯವಸಾದನೇಷು ಧಾತು. ಲೋಣ್ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ **ತಸ್‌ಥಸ್**—ಸೂತ್ರದಿಂದ ತಾದೇಶ. **ಪಾಘ್ರಾಧ್ಮಾ**— ಎಂಬುದರಿಂದ ಧಾತುವಿಗೆ ಸೀದಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸದಃ**—ಸದಃ+ಕೃತನ್ ಎಂದಿರುವಾಗ ಕೃಞ್‌ಧಾತು ಪರದಲ್ಲಿರುವುದರಿಂದ **ಅತಃಕೃಕಮಿ**—(ಪಾ. ಸೂ. ೮-೩-೪೬) ಎಂಬುದರಿಂದ ವಿಸರ್ಗಕ್ಕೆ ಸತ್ವ ಬರುತ್ತದೆ.

**ಮಾದಯಧ್ವಮ್**—ಮದ ತೃಪ್ತಿಯೋಗೇ ಧಾತು. ಚುರಾದಿ. ಆತ್ಮನೇಪದೀ. **ಸತ್ಯಾಪಪಾಶ**-ಸೂತ್ರದಿಂದ ಸ್ವಾರ್ಥದಲ್ಲಿ ಣಿಚ್. **ಅತ ಉಪಧಾಯಾಃ** ಎಂಬುದರಿಂದ ಧಾತುವಿನ ಉಪಧೆಗೆ ದೀರ್ಘ. ಲೋಟ್ ಮಧ್ಯಮಪುರುಷಬಹುವಚನದಲ್ಲಿ ಧ್ವಮ್ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್‌ಸ್ವರದಿಂದ ದಕಾರೋತ್ತರಾಕಾರ ಉದಾತ್ತವಾಗುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ತೇಽವರ್ಧಂತ ಸ್ವತವಸೋ ಮಹಿತ್ವನಾ ನಾಕಂ ತಸ್ಥುರುರು
ಚಕ್ರಿರೇ ಸದಃ।
ವಿಷ್ಣುರ್ಯದ್ಧಾವದ್ವೃಷಣಂ ಮದಚ್ಯುತಂ ವಯೋ ನ ಸೀದನ್ನ-
ಧಿ ಬರ್ಹಿಷಿ ಪ್ರಿಯೇ ॥ ೭ ॥

ಪದಪಾಠಃ

ತೇ । ಅವರ್ಧಂತ । ಸ್ವಽತವಸಃ । ಮಹಿಽತ್ವನಾ । ಆ । ನಾಕಂ । ತಸ್ಥುಃ । ಉ-
ರು । ಚಕ್ರಿರೇ । ಸದಃ ।
ವಿಷ್ಣುಃ । ಯತ್ । ಹ । ಆವತ್ । ವೃಷಣಂ । ಮದಽಚ್ಯುತಂ । ವಯಃ । ನ ।
ಸೀದನ್ । ಅಧಿ । ಬರ್ಹಿಷಿ । ಪ್ರಿಯೇ ॥ ೭ ॥

ಸಾಯಣಭಾಷ್ಯಂ

**ತೇ ಮರುತೋಽವರ್ಧಂತ । ವೃದ್ಧಿಂ ಗತಾಃ । ಕೀದೃಶಾಃ । ಸ್ವತವಸಃ ಸ್ವಾಶ್ರಯಬಲಾಃ । ನಾನ್ಯಸ್ಯ ಕಸ್ಯಚಿದ್ಬಲಮಪೇಕ್ಷಂತೇ । ವೃದ್ಧಿಂ ಪ್ರಾಪ್ಯ ಚ ಮಹಿತ್ವನಾ ಮಹಿಮ್ನಾ ಮಹತ್ತ್ವೇನ ನಾಕಂ ಸ್ವರ್ಗಮಾತಸ್ಥುಃ ಆಸ್ಥಿತವಂತಃ । ಸದಃ ಸದನಂ ನಭೋಲಕ್ಷಣಂ ಸ್ಥಾನಂ ಚ ಸ್ವಕೀಯನಿವಾಸಾಯೋರು ವಿಸ್ತೀರ್ಣಂ ಚಕ್ರಿರೇ । ಯದ್ಯೇಭ್ಯೋ ಮರುದ್ಭ್ಯೋ ಯದರ್ಥಂ ವೃಷಣಂ ಕಾಮಾಭಿವರ್ಷಕಂ ಮದಚ್ಯುತಂ ಮದಸ್ಯ ಹರ್ಷಸ್ಯಾಸೇಕ್ತಾರಂ ಯಜ್ಞಂ ವಿಷ್ಣುರ್ಹಾವತ್ ವಿಷ್ಣುರೇವಾಗತ್ಯ ರಕ್ಷತಿ ತೇ ಮರುತೋ ವಯೋ ನ ಪಕ್ಷಿಣೋ ಯಥಾ ಶೀಘ್ರಮಾಗಚ್ಛಂತಿ ಏವಂ ಶೀಘ್ರಮಾಗತ್ಯ ಬರ್ಹಿಷ್ಯಧ್ಯಸ್ಮದೀಯೇ ಯಜ್ಞೇ ಪ್ರಿಯೇ ಪ್ರೀತಿಕರೇ ಸೀದನ್ । ಸೀದಂತು । ಉಪವಿಶಂತು ॥ ತೇಽವರ್ಧಂತ । ಸ್ವರಿತೋ ವಾನುದಾತ್ತೇ ಪದಾದೌ । ಪಾ. ೮-೨-೬ । ಇತ್ಯೇಕಾದೇಶಸ್ಯ ಸ್ವರಿತತ್ವಂ । ಮಹಿತ್ವನಾ । ಭಾವಪ್ರತ್ಯಯಾದುತ್ತರಸ್ಯಾಚೋ ವ್ಯತ್ಯಯೇನ ನಾಭಾವ ಉದಾತ್ತತ್ವಂ ಚ । ಯದ್ವಾ । ಸುಪಾಂ ಸುಲುಗಿತ್ಯಾಜಾದೇಶೋ ನಕಾರೋಪಜನಶ್ಚ । ತಸ್ಥುಃ । ನಾಕಮಾತಸ್ಥುಶ್ಚ ಸದಶ್ಚ ವಿಸ್ತೀರ್ಣಂ ಚಕ್ರಿರ ಇತಿ ಚಾರ್ಥಪ್ರತೀತೇಶ್ಚಾದಿಲೋಪೇ ವಿಭಾಷೇತಿ ಪ್ರಥಮಾಯಾಸ್ತಿಙ್ವಿಭಕ್ತೇರ್ನಿಘಾತಪ್ರತಿಷೇಧಃ । ಯತ್ । ಸುಪಾಂ ಸುಲುಗಿತಿ ಚತುರ್ಥ್ಯಾ ಲುಕ್ । ಆವತ್ । ಛಾಂದಸೋ ವರ್ತಮಾನೇ ಲಙ್ । ವೃಷಣಂ । ವಾ ಷಪೂರ್ವಸ್ಯ ನಿಗಮ ಇತ್ಯುಪಧಾದೀರ್ಘಾಭಾವಃ । ಮದಚ್ಯುತಂ । ಮದಂ ಚ್ಯೋತತೀತಿ ಮದಚ್ಯುತ್ । ಚ್ಯುತಿರ್ ಆಸೇಚನೇ । ಕ್ವಿಪ್ಚೇತಿ ಕ್ವಿಪ್ । ಸೀದನ್ । ಲಿಙರ್ಥೇ ಲೇಟ್ಯಡಾಗಮಃ ॥**

ಪ್ರತಿಪದಾರ್ಥ

**ತೇ**—ಆ ಮರುತ್ತುಗಳು । **ಸ್ವತವಸಃ**—(ಇತರ ಆಶ್ರಯವಿಲ್ಲದೇ) ತಮ್ಮದೇ ಬಲವುಳ್ಳವರಾಗಿ (ತಮ್ಮ ಸ್ವಬಲದ ಆಶ್ರಯದಿಂದಲೇ) । **ಅವರ್ಧಂತ**—ವೃದ್ಧಿಯನ್ನು ಹೊಂದಿದರು । **ಮಹಿತ್ವನಾ**—(ತಮ್ಮ) ಮಹಿಮೆಯಿಂದ । **ನಾಕಂ**—ಸ್ವರ್ಗವನ್ನು । **ಆ ತಸ್ಥುಃ**—ಸೇರಿದರು । **ಸದಃ**—(ಅಂತರಿಕ್ಷರೂಪವಾದ) ತಮ್ಮ ವಾಸಸ್ಥಾನವನ್ನು । **ಉರು**—ವಿಸ್ತಾರವಾಗಿ । **ಚಕ್ರಿರೇ**—ಮಾಡಿಕೊಂಡರು । **ಯತ್**—ಯಾವ ಮರುತ್ತುಗಳಿಗೋಸ್ಕರ । **ವೃಷಣಂ**—(ಇಷ್ಟಾರ್ಥಗಳನ್ನು) ಸುರಿಸತಕ್ಕದ್ದೂ । **ಮದಚ್ಯುತಂ**—ಹರ್ಷದಾಯಕವಾದದ್ದೂ ಆದ ಯಜ್ಞವನ್ನು । **ವಿಷ್ಣುಃ**—ವಿಷ್ಣುವು । **ಹ ಆವತ್**—ಗಮನವಿಟ್ಟು ಕಾಪಾಡುತ್ತಾನೋ (ಆ ಮರುತ್ತುಗಳು) । **ವಯೋ ನ**—ಪಕ್ಷಿಗಳಂತೆ ವೇಗವಾಗಿ (ಬಂದು) । **ಪ್ರಿಯೇ**—ಪ್ರಿಯವಾದದ್ದೂ । **ಬರ್ಹಿಷಿ ಅಧಿ**—ಶ್ರೇಷ್ಠವಾದದ್ದೂ ಆದ ದರ್ಭಾಸನದಮೇಲೆ । **ಸೀದನ್**—ಕುಳಿತುಕೊಳ್ಳಲಿ ॥

ಭಾವಾರ್ಥ

ಆ ಮರುತ್ತುಗಳು ಇತರ ಆಶ್ರಯವಿಲ್ಲದೇ ತಮ್ಮ ಸ್ವಬಲದ ಆಶ್ರಯದಿಂದಲೇ ವೃದ್ಧಿಯನ್ನು ಹೊಂದಿದರು. ತಮ್ಮದೇ ಆದ ಮಹಿಮೆಯಿಂದ ಸ್ವರ್ಗವನ್ನು ಸೇರಿ ತಮ್ಮ ವಾಸಸ್ಥಾನವನ್ನು ವಿಸ್ತಾರಪಡಿಸಿಕೊಂಡರು. ವಿಷ್ಣುವು, ಇಷ್ಟಾರ್ಥಪ್ರದವಾದದ್ದೂ ಹರ್ಷದಾಯಕವಾದದ್ದೂ ಆದ ಯಜ್ಞವನ್ನು ಯಾವ ಮರುತ್ತುಗಳಿಗಾಗಿ ಗಮನವಿಟ್ಟು ಕಾಪಾಡುತ್ತಾನೋ ಆ ಮರುತ್ತುಗಳು ಪಕ್ಷಿಗಳಂತೆ ವೇಗವಾಗಿ ಬಂದು ಪ್ರಿಯವಾದದ್ದೂ, ಶ್ರೇಷ್ಠವಾದದ್ದೂ ಆದ ದರ್ಭಾಸನದಮೇಲೆ ಕುಳಿತುಕೊಳ್ಳಲಿ.

## English Translation

Having confidance in their own strength they have increased in power; they have attained heaven by their greatness, and have made for themselves a spacious dwelling; may they (Maruts) for whom 'Vishnu' gave his aid in the sacrifice that bestows all desires and confers delight, come quickly like birds, and sit down upon their beloved Kusa grass.

॥ ವಿಶೇಷವಿಷಯಗಳು ॥

**ಸ್ವತವಸಃ**— ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ತವಃ ಎಂಬ ಶಬ್ದವು ಪಠಿತವಾಗಿರುವುದರಿಂದ ತವಸ್ ಎಂದರೆ ಬಲವು. **ಸ್ವತವಸಃ** ಎಂದರೆ— **ಸ್ವಾಶ್ರಯಬಲಾಃ ನಾನ್ಯಸ್ಯ ಕಸ್ಯಚಿದ್ಬಲಮಪೇಕ್ಷಂತೇ ।** ಇನ್ನೊಬ್ಬರ ಸಹಾಯವನ್ನಪೇಕ್ಷಿಸದೆ ತಮ್ಮ ಶಕ್ತಿಸಾಮರ್ಥ್ಯಗಳಲ್ಲಿಯೇ ದೃಢವಾದ ನಂಬಿಕೆಯುಳ್ಳವರು ಎಂದರ್ಥವು.

**ವಿಷ್ಣುಃ ಯತ್ ಹ ಆವತ್ ವೃಷಣಂ ಮದಚ್ಯುತಂ**— ಇಷ್ಟಾರ್ಥಗಳನ್ನು ಕೊಡುವುದೂ, ಸಂತೋಷವನ್ನುಂಟುಮಾಡುವುದೂ ಆದ ಯಾವ ಯಜ್ಞದಲ್ಲಿ ವಿಷ್ಣುವು ಬಂದು ಅದನ್ನು ರಕ್ಷಿಸಿದನೋ ಅಂತಹ ಯಜ್ಞದಲ್ಲಿ ಎಂದರ್ಥವು ಈ ವಿಷಯದಲ್ಲಿ ಒಂದು ಉಪಾಖ್ಯಾನವಿರುವುದು—

**ಯದಾ ವಿಷ್ಣುನಾ ಸಹ ಮರುತ ಇಂದ್ರಸ್ಯ ವೃತ್ರಹನನೇ ಸಾಹಾಯ್ಯಂ ಚಕ್ರುಸ್ತತಃ ಪ್ರಭೃತಿ ತೇ ಮಹತ್ತ್ವಮಾಪುಃ ಸ್ವಬಲವಂತಶ್ಚ ಬಭೂವುಃ ಶ್ರೇಷ್ಠಾ ದೇವಾಶ್ಚ ಭೂತ್ವಾ ಸ್ವರ್ಗಮಧಿಷ್ಠಿತವಂತಃ । ತತಃ ಪ್ರಭೃತಿ ಚ ಯಜಮಾನಾಸ್ತೇಷಾಮರ್ಥೇ ಯಜ್ಞಂ ಕುರ್ವಂತಿ ತೇ ಚ ಯಜಮಾನಾನಾಂ ಯಜ್ಞಂ ಪಕ್ಷಿವಚ್ಛೀಘ್ರಮಾಗತ್ಯ ಬರ್ಹಿಷಿ ನಿಷೀದಂತೀತಿ ॥**

ಮರುದ್ದೇವತೆಗಳು ವಿಷ್ಣುವಿನೊಡನೆ ಬಂದು ವೃತ್ರಸಂಹಾರಕಾರ್ಯದಲ್ಲಿ ಇಂದ್ರನಿಗೆ ಸಹಾಯಮಾಡಿದರು. ಆಗಿನಿಂದ ಈ ಮರುದ್ದೇವತೆಗಳ ಮಹಿಮೆಯು ಹೆಚ್ಚಾಯಿತು. ಇವರ ಬಲವೂ ಅಭಿವೃದ್ಧಿಗೊಂಡು ದೇವತೆಗಳಲ್ಲಿ ಶ್ರೇಷ್ಠರೆನಿಸಿ ಸ್ವರ್ಗದಲ್ಲಿ ತಮ್ಮ ವಾಸಸ್ಥಾನವನ್ನು ಮಾಡಿಕೊಂಡರು. ಇದರಿಂದ ಯಜ್ಞಮಾಡತಕ್ಕ ಯಜಮಾನರು ಈ ಮರುದ್ದೇವತೆಗಳ ಪ್ರೀತ್ಯರ್ಥವಾಗಿ ಯಜ್ಞಗಳನ್ನು ಮಾಡುವರು. ಈ ದೇವತೆಗಳೂ ಯಜಮಾನರನ್ನು ಅನುಗ್ರಹಿಸುವುದಕ್ಕಾಗಿ ಅವರು ಮಾಡುವ ಯಜ್ಞಾದಿಗಳಲ್ಲಿ ಸಿದ್ಧಪಡಿಸಿರುವ ದರ್ಭಾಸನದಮೇಲೆ ಪಕ್ಷಿಗಳಂತೆ ಬೇಗನೆ ಬಂದು ಕುಳಿತುಕೊಳ್ಳುವರು ಎಂದು. ಇಲ್ಲಿ ಮರುದ್ದೇವತೆಗಳು ಇಂದ್ರನ ಸ್ನೇಹಿತರು. **ಮರುದ್ಭಿರಿಂದ್ರಸಖ್ಯಂ ತೇ ಅಸ್ತು** ಮೊದಲಾದ ವಾಕ್ಯಗಳು ಈ ವಿಷಯವನ್ನು ಸಮರ್ಥಿಸುವುವು. ವಿಷ್ಣುವು ಇಂತಹ ಮರುದ್ದೇವತೆಗಳ ಮಿತ್ರನಾದ ಇಂದ್ರನಿಗೆ ಸಹಾಯಮಾಡಿದನೆಂದು—

**ಸಖೇ ವಿಷ್ಣೋ ವಿತರಂ ವಿಕ್ರಮಸ್ವ ದ್ಯೌರ್ದೇಹಿ ಲೋಕಂ ವಜ್ರಾಯ ವಿಷ್ಕಭೇ ।**
**ಹನಾವ ವೃತ್ರಂ ರಿಣಚಾವ ಸಿಂಧೂನಿಂದ್ರಸ್ಯ ಯಂತು ಪ್ರಸವೇ ವಿಸೃಷ್ಟಾಃ ॥**

(ಋ. ಸಂ. ೮-೧೦೦-೧೨)

**ದಿವೋ ನ ತುಭ್ಯಮನ್ವಿಂದ್ರ ಸತ್ರಾಸುರ್ಯಂ ದೇವೇಭಿರ್ಧಾಯಿ ವಿಶ್ವಂ ।**
**ಅಹಿಂ ಯದ್ವೃತ್ರಮಪೋ ವವ್ರಿವಾಂಸಂ ಹನ್ನೃಜೀಷಿನ್ ವಿಷ್ಣುನಾ ಸಚಾನಃ ॥**
( ಋ. ಸಂ. ೬-೨೦-೨ )

**ತಮಸ್ಯ ವಿಷ್ಣುರ್ಮಹಿಮಾನಮೋಜಸಾಂಶುಂ ದಧನ್ವಾನ್ಮಧುನೋ ವಿ ರಪ್ಶತೇ ।**
**ದೇವೇಭಿರಿಂದ್ರೋ ಮಘವಾ ಸಯಾವಭಿರ್ವೃತ್ರಂ ಜಘನ್ವಾ ಅಭವದ್ವರೇಣ್ಯಃ ॥**
(ಋ. ಸಂ. ೧೦-೧೧೩-೨)

ಇತ್ಯಾದಿ ಋಕ್ಕುಗಳಲ್ಲಿ ವಿಷ್ಣುವು ಇಂದ್ರನಿಗೆ ಸಹಾಯಮಾಡಿರುವ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ. ಇದಲ್ಲದೆ ಋ. ಸಂ. ೮-೨೭-೮ ; ೮-೮೩-೭ ; ೧೦-೯೨-೧೧ ; ೯-೩೩-೩ ; ೯-೩೪-೨ ; ೯-೫೬-೪ ; ೯-೬೩-೩ ; ೯-೬೫-೨೦ ; ೭-೩೭-೯ ; ೮-೧೨-೧೬ ; ೫-೮೭-೧ ; ೫-೮೭-೮ ಎಂಬ ಋಕ್ಕುಗಳಲ್ಲಿ ವಿಷ್ಣುವು ಮರುದ್ದೇವತೆಗಳು ಅಥವಾ ಇತರ ದೇವತೆಗಳೊಡನೆ ಸೋಮಪಾನಾರ್ಥವಾಗಿ ಪ್ರಾರ್ಥಿಸಲ್ಪಟ್ಟಿರುವನು.

**ವಿಷ್ಣುಃ**—ವಿಷ್ಣುವಿನ ವಿಷಯವಾಗಿ ನಾವು ಹಿಂದೆಯೇ ಬರೆದಿದ್ದೇವೆ. ಋ. ಸಂ. ಭಾಗ ೩. 119, 124, 125. ನೇ ಪೇಜುಗಳನ್ನು ನೋಡಿ. ಈ ಋಕ್ಕಿನಲ್ಲಿರುವ ವಿಷ್ಣುಶಬ್ದಕ್ಕೆ ಸ್ಕಂದಸ್ವಾಮಿಯು ಯಜ್ಞ ವೆಂದು ಅರ್ಥವಿವರಣೆ ಮಾಡಿರುವರು. ವಿಷ್ಣುರ್ವೈ ಯಜ್ಞಃ ಎಂದು ಶ್ರುತಿವಾಕ್ಯವಿರುವುದು.

**ವಯೋ ನ**—ಪಕ್ಷಿಯಂತೆ ಎಂದರೆ ಪಕ್ಷಿಯು ಬೇಗನೆ ಹಾರಿಬರುವಂತೆ ಶೀಘ್ರವಾಗಿ ಬರಬೇಕೆಂದು ಋಷಿಯು ಪ್ರಾರ್ಥಿಸಿರುವನು

**ಬರ್ಹಿಷಿ ಪ್ರಿಯೇ**— ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಮಾಡಿ ಅವರು ಬಂದು ಕುಳಿತುಕೊಳ್ಳುವು ದಕ್ಕಾಗಿ ಒಂದೆಡೆಯಲ್ಲಿ ಅಗ್ರಭಾಗವನ್ನು ಕತ್ತರಿಸಿದ ಕುಶವೆಂಬ ದರ್ಭೆಗಳನ್ನು ಪದರಪದರವಾಗಿ ಮೆತ್ತಗಿರು ವಂತೆ ಹಾಸಿ ಆಸನಾರ್ಥವಾಗಿ ಸಿದ್ಧಪಡಿಸುವರು. ಈ ದರ್ಭಾಸನದ ಮೇಲೆ ದೇವತೆಗಳು ಬಂದು ಕುಳಿತು ಕೊಳ್ಳಬೇಕೆಂದು ಋಷಿಗಳು ಅನೇಕ ಋಕ್ಕುಗಳಲ್ಲಿ ಸ್ತೋತ್ರಮಾಡಿರುವರು. ಇಲ್ಲಿ ಪ್ರಿಯೇ ಎಂಬ ಶಬ್ದವು ಇಂತಹ ದರ್ಭಾಸನವು ದೇವತೆಗಳಿಗೆ ಪ್ರೀತಿಪಾತ್ರವಾದುದೆಂದು ತಿಳಿಸುವುದು.

### ವ್ಯಾಕರಣಪ್ರಕ್ರಿಯಾ

**ತೇ ವರ್ಧಂತೆ**—ತೇ+ಅವರ್ಧಂತ ಎಂದಿರುವಾಗ **ಏಙಃ ಪದಾಂತಾದತಿ** ಎಂಬುದರಿಂದ ಪೂರ್ವರೂಪ ಏಕಾದೇಶವಾಗಿ ಬರುತ್ತದೆ. ಆಗ **ಸ್ವರಿತೋ ವಾऽನುದಾತ್ತೇ ಪದಾದೌ** (ಪಾ. ಸೂ. ೮-೨-೬) ಪದಾದಿಯಲ್ಲಿರುವ ಅನುದಾತ್ತವು ಉದಾತ್ತದೊಡನೆ ಏಕಾದೇಶವಾದಾಗ ಸ್ವರಿತವು ವಿಕಲ್ಪವಾಗಿ ಆಗುತ್ತದೆ ಎಂಬುದರಿಂದ ಇಲ್ಲಿ ಉದಾತ್ತದೊಡನೆ ಏಕಾದೇಶ ಬಂದುದರಿಂದ ಸ್ವರಿತವಾಗುತ್ತದೆ ವೃಧು ವೃದ್ಧೌ ಧಾತು ಲಙ್ ಪ್ರಥಮಪುರುಷ ಬಹುವಚನಾಂತರೂಪ.

**ಸ್ವತವಸಃ**—ಸ್ವಕೀಯಂ ತವಃ ಯೇಷಾಂ ತೇ ಸ್ವತವಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮಹಿತ್ವನಾ** — ಭಾವಾರ್ಥದಲ್ಲಿ ತ್ವ ಪ್ರತ್ಯಯ. ಭಾವಪ್ರತ್ಯಯದ ಮುಂದಿರುವ ಅಜ್‌ನ ಆಕಾರಕ್ಕೆ ವ್ಯತ್ಯಯದಿಂದ ನಾಭಾವ ಬರುತ್ತದೆ. ಉದಾತ್ತಸ್ವರವೂ ವ್ಯತ್ಯಯದಿಂದಲೇ ಬರುತ್ತದೆ. ಅಥವಾ **ಸುಪಾಂ ಸುಲುಕ್** ಎಂಬುದರಿಂದ ವಿಭಕ್ತಿಗೆ ಆಜಾದೇಶ. ನಕಾರಾಗಮ. ಮಹಿತ್ವನಾ ಎಂಬುದು **ಚಿತಃ** ಎಂಬುದರಿಂದ ಅಂತೋ ದಾತ್ತನಾಗುತ್ತದೆ.

ತಸ್ಥುಃ—ಷ್ಠಾ ಗತಿನಿವೃತ್ತೌ ಧಾತು. ಲಿಟ್ ಪ್ರಥಮಪುರುಷ ಬಹುವಚನದಲ್ಲಿ **ಪರಸ್ಮೈಪದಾನಾಂ-** ಸೂತ್ರದಿಂದ ಉಸಾದೇಶ. ದ್ವಿತ್ವ ಬಂದಾಗ **ಶರ್ಪೂರ್ವಾಃ ಖಯಃ** ಎಂಬುದರಿಂದ ಅಭ್ಯಾಸದಲ್ಲಿ ಥಕಾರ ಉಳಿದಾಗ ಅದಕ್ಕೆ **ಅಭ್ಯಾಸೇ ಚರ್ಚ** ಎಂಬುದರಿಂದ ತಕಾರಾದೇಶ. **ಆತೋಲೋಪ ಇಟಿ ಚ** ಎಂಬುದರಿಂದ ಆಕಾರಲೋಪ. ಇಲ್ಲಿ ನಾಕಮಾತಸ್ಥುಃ ಸನಶ್ಚ ವಿಸ್ತೀರ್ಣಂ ಚಕ್ರಿರೇ ಎಂದು ಅನ್ವಯವಿರುವುದರಿಂದ ಚಾರ್ಥತೋರುವುದರಿಂದ **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಎಂಬುದರಿಂದ ಮೊದಲು ಇರುವ ತಿಙ್ವಿಭಕ್ತಿಗೆ ನಿಘಾತಪ್ರತಿಷೇಧ ಬರುತ್ತದೆ. ಆಗ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯತ್**—ಚತುರ್ಥೀಬಹುವಚನ ಪರವಾದಾಗ **ಸುಪಾಂ ಸುಲುಕ್** ಸೂತ್ರದಿಂದ ಅದಕ್ಕೆ ಲುಕ್.

**ಆವತ್**—ವರ್ತಮಾನಾರ್ಥದಲ್ಲಿ ಅವ ರಕ್ಷಣೇ. ಈ ಧಾತುವಿಗೆ **ಛಂದಸಿ ಲುಙ್ಲಙ್ಲಿಟಃ** ಎಂಬುದರಿಂದ ಲಙ್ ಪ್ರಥಮಪುರುಷಏಕವಚನದ ತಿಪಿಗೆ **ಇತಶ್ಚ** ಎಂಬುದರಿಂದ ಅಂತ್ಯಲೋಪ. **ಆಡಜಾದೀನಾಂ** ಎಂಬುದರಿಂದ ಆಡಾಗಮ. **ಆಟಶ್ಚ** ಸೂತ್ರದಿಂದ ವೃದ್ಧಿ. ಹ ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ವೃಷಣಮ್**—ವೃಷನ್ ಎಂಬುದು ಕನಿನ್ಪ್ರತ್ಯಯಾಂತವಾದ ಆದ್ಯುದಾತ್ತ ನಾಂತಶಬ್ದ. ದ್ವಿತೀಯಾ ಏಕವಚನಪರವಾದಾಗ **ವಾ ಷಪೂರ್ವಸ್ಯನಿಗಮೇ** (ಪಾ. ಸೂ. ೬-೪-೯) ಎಂಬುದರಿಂದ ಸಂಹಿತಾದಲ್ಲಿ ಉಪಧಾ ದೀರ್ಘ ಬರುವುದಿಲ್ಲ. **ಅಟ್ಕುಪ್ವಾಙ್** ಸೂತ್ರದಿಂದ ನಕಾರಕ್ಕೆ ಣತ್ವ.

**ಮುದಚ್ಯುತಮ್**—ಮುದಂ ಚ್ಯೋತತಿ ಇತಿ ಮುದಚ್ಯುತ್. ಚ್ಯುತಿರ್ ಆಸೇಚನೇ ಧಾತು. **ಕ್ವಿಪ್ ಚ** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಸೀದನ್**—ಷದ್ಲೃ ವಿಶರಣಗತ್ಯವಸಾದನೇಷು ಧಾತು. ಲೇಟ್ ಪ್ರಥಮಪುರುಷ ಬಹುವಚನದಲ್ಲಿ **ಪಾಘ್ರಾಧ್ಮಾ**—ಸೂತ್ರದಿಂದ ಧಾತುವಿಗೆ ಸೀದಾದೇಶ ಬರುತ್ತದೆ. **ಇತಶ್ಚ ಲೋಪಃ ಪರಸ್ಮೈಪದೇಷು**—ಎಂಬುದರಿಂದ ಪ್ರತ್ಯಯದ ಇಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ. ॥ ೭ ॥



ಸಂಹಿತಾಪಾಠಃ

ಶೂರಾಇವೇದ್ಯುಯುಧಯೋ ನ ಜಗ್ಮಯಃ ಶ್ರವಸ್ಯವೋ ನ ಪೃತನಾಸು ಯೇತಿರೇ ।
ಭಯಂತೇ ವಿಶ್ವಾ ಭುವನಾ ಮರುದ್ಭ್ಯೋ ರಾಜಾನ ಇವ ತ್ವೇಷಸಂದೃಶೋ ನರಃ ॥ ೮ ॥

ಪದಪಾಠಃ

ಶೂರಾಃ ಽ ಇವ । ಇತ್ । ಯುಯುಧಯಃ । ನ । ಜಗ್ಮಯಃ । ಶ್ರವಸ್ಯವಃ । ನ । ಪೃತನಾಸು । ಯೇತಿರೇ ।
ಭಯಂತೇ । ವಿಶ್ವಾ । ಭುವನಾ । ಮರುತ್ ಽ ಭ್ಯಃ । ರಾಜಾನಃ ಽ ಇವ । ತ್ವೇಷ ಽ- ಸಂದೃಶಃ । ನರಃ ॥ ೮ ॥

ಸಾಯಣಭಾಷ್ಯಂ

ಇದಿತ್ಯೇತತ್ಸಮುಚ್ಚಯೇ । ಶೂರಾ ಇವೇತ್ ಶೌರ್ಯೋಪೇತಾ ಯುಯುತ್ಸವಃ ಪುರುಷಾ ಇವ ಚ ಯುಯುಧಯಃ ಶತ್ರುಭಿರ್ಯುಧ್ಯಮಾನಾಃ ಪುರುಷಾ ಇವ ಚ ಜಗ್ಮಯಃ ಶೀಘ್ರಂ ಗಚ್ಛಂತೋ ಮರುತಃ ಶ್ರವಸ್ಯವೋ ನ ಶ್ರವೋಽನ್ನಮಾತ್ಮನ ಇಚ್ಛಂತಃ ಪುರುಷಾ ಇವ ಪೃತನಾಸು ಸಂಗ್ರಾಮೇಷು ಯೇತಿರೇ । ಪ್ರಯತಂತೇ । ಪುತ್ರಾದಿಭಿರ್ಯುದ್ಧೇ ವ್ಯಾಪ್ರಿಯಂತೇ । ತಾದೃಶೇಭ್ಯೋ ಮರುದ್ಭ್ಯೋ ವಿಶ್ವಾ ಭುವನಾ ಸರ್ವಾಣಿ ಭೂತಜಾತಾನಿ ಭಯಂತೇ । ಬಿಭ್ಯತಿ । ಯೇ ನರೋ ವೃಷ್ಟ್ಯಾದೇರ್ನೇತಾರೋ ಮರುತೋ ರಾಜಾನ ಇವ ರಾಜಮಾನಾ ನೃಪತಯ ಇವ ತ್ವೇಷಸಂದೃಶೋ ದೀಪ್ತಸಂದರ್ಶನಾ ಉಗ್ರ-ರೂಪತಯಾ ದ್ರಷ್ಟುಮಶಕ್ಯಾ ಭವಂತಿ । ತೇಭ್ಯ ಇತ್ಯರ್ಥಃ ॥ ಯುಯುಧಯಃ । ಯುಧ ಸಂಪ್ರಹಾರೇ । ಆದೃಗಮಹನಜನ ಇತ್ಯತ್ರೋತ್ಸರ್ಗಶ್ಛಂದಸಿ । ಪಾ. ೩-೨-೧೭೧-೨ । ಇತಿ ವಚನಾತ್ಕಿನ್ಪ್ರತ್ಯಯಃ । ಲಿಡ್ವದ್ಭಾವಾದ್ದ್ವಿರ್ಭಾವಾದಿ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯುದಾತ್ತತ್ವಂ । ಜಗ್ಮಯಃ । ತೇನೈವ ಸೂತ್ರೇಣ ಕಿನ್ಪ್ರತ್ಯಯಃ । ಗಮಹನೇತ್ಯಾದಿನೋಪಧಾಲೋಪಃ । ಸ್ಥಾನಿವದ್ಭಾವಾದ್ದ್ವಿರ್ಭಾವಾದಿ । ಶ್ರವಸ್ಯವಃ । ಶ್ರವ ಇಚ್ಛತಿ ಶ್ರವಸ್ಯತಿ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಯೇತಿರೇ । ಯತೀ ಪ್ರಯತ್ನೇ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಿಟ್ । ಭಯಂತೇ । ಞಿಭೀ ಭಯೇ । ಬಹುಲಂ ಛಂದಸೀತಿ

ಶಪಃ ಶ್ಲೋರಭಾವಃ । ತ್ವೇಷಸಂದೃಶಃ । ತ್ವಿಷ ದೀಪ್ತೌ । ಪಚಾದ್ಯಚ್ । ದೃಶಿರ್ ಪ್ರೇಕ್ಷಣೇ । ಸಂಪೂರ್ವಾದಸ್ಮಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಶೂರಾ ಇವೇತ್**— ವೀರರಂತೆಯೂ । **ಯುಯುಧಯಃ ನ**— ಯೋಧರಂತೆಯೂ ಇರುವ ಮರುತ್ತುಗಳು । **ಶ್ರವಸ್ಯವೋ ನ** — ಅನ್ನವನ್ನು ಅಪೇಕ್ಷಿಸುವ ಜನರಂತೆ । **ಜಗ್ಮಯಃ**— ವೇಗವಾದ ಗಮನವುಳ್ಳವರಾಗಿ । **ಪೃತನಾಸು**— ಯುದ್ಧಗಳಲ್ಲಿ । **ಯೇತಿರೇ** — ಉದ್ಯುಕ್ತರಾಗುತ್ತಾರೆ । **ನರಃ** — ವೃಷ್ಟ್ಯಾದಿಗಳಿಗೆ ಮಾರ್ಗದರ್ಶಕರಾಗಿಯೂ । **ರಾಜಾನ ಇವ**— ಪ್ರಕಾಶಮಾನರಾದ ದೊರೆಗಳಂತೆ । **ತ್ವೇಷಸಂದೃಶಃ** — ಉಗ್ರವಾದ ತೇಜಸ್ಸುಳ್ಳವರಾಗಿಯೂ (ಇರುವ ಯಾವ ಮರುತ್ತುಗಳುಂಟೋ) । **ಮರುದ್ಭ್ಯಃ**— (ಅಂತಹ) ಮರುತ್ತುಗಳಿಗೆ (ಗಳಿಂದ) । **ವಿಶ್ವಾ ಭುವನಾ**— ಪ್ರಪಂಚದ ಸಕಲ ಪ್ರಾಣಿಗಳೂ । **ಭಯಂತೇ**— ಭಯಪಡುತ್ತವೆ.

॥ ಭಾವಾರ್ಥ ॥

ವೀರರಂತೆಯೂ ಯೋಧರಂತೆಯೂ ಇರುವ ಮರುತ್ತುಗಳು ಅನ್ನಾಪೇಕ್ಷಿಗಳಾದ ಜನರಂತೆ ವೇಗವಾದ ಗಮನವುಳ್ಳವರಾಗಿ ಯುದ್ಧಗಳಲ್ಲಿ ಉದ್ಯುಕ್ತರಾಗುತ್ತಾರೆ. ವೃಷ್ಟ್ಯಾದಿಗಳಿಗೆ ಮಾರ್ಗದರ್ಶಕರಾಗಿಯೂ, ಪ್ರಕಾಶಮಾನರಾದ ದೊರೆಗಳಂತೆ ಇತರರಿಗೆ ಭೀತಿಯನ್ನುಂಟುಮಾಡುವ ಉಗ್ರವಾದ ತೇಜಸ್ಸುಳ್ಳವರಾಗಿಯೂ ಇರುವ ಮರುತ್ತುಗಳಿಗೆ ಪ್ರಪಂಚದ ಸಕಲ ಪ್ರಾಣಿಗಳೂ ಭಯಪಟ್ಟು ನಡಗುತ್ತವೆ.

English Translation

Like heroes, like warriors, like men eager for food, the swift-moving (Maruts) have engaged in battles ; all beings fear the Maruts who are the leaders (of the rain) and who are of awful appearance like kings

ವಿಶೇಷವಿಷಯಗಳು

**ಯುಯುಧಯಃ— ಯುಧ ಸಂಪ್ರಹಾರೇ । ಯುಯುತ್ಸವಃ ಪುರುಷಾಃ ।** ಯುದ್ಧಾಪೇಕ್ಷಿಗಳಾದ ಪುರುಷರು, ಯುದ್ಧಭಟರು, ಸೈನಿಕರು, warriors, combatants etc.,

**ಶ್ರವಸ್ಯವಃ**— ಶ್ರವಃ ಎಂದರೆ ಅನ್ನವು (ನಿ. ೧೦-೨) **ಶ್ರವ ಇಚ್ಛತಿ ಶ್ರವಸ್ಯತಿ ।** ಅನ್ನವನ್ನು ಅಪೇಕ್ಷಿಸುವ.

**ಪೃತನಾಸು— ಸಂಗ್ರಾಮೇಷು ।** ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ ಪೃತನಾ ಎಂಬ ಶಬ್ದವು ಪಠಿತವಾಗಿರುವುದರಿಂದ ಪೃತನಾಸು ಎಂದರೆ ಯುದ್ಧಗಳಲ್ಲಿ ಎಂದರ್ಥವು. ಈ ಶಬ್ದವು ಯಾವಾಗಲೂ ಬಹುವಚನದಲ್ಲಿಯೇ ಉಪಯೋಗಿಸಲ್ಪಡುವುದು.

ರಾಜಾನ ಇವ— ರಾಜರನ್ನು ಕಂಡರೆ ಜನರು ಭಯಪಡುವಂತೆ

ತ್ವೇಷಸಂದೃಶಃ— **ತ್ವಿಷ ದೀಪ್ತೌ । ದೀಪ್ತಸಂದರ್ಶನಾ ಉಗ್ರರೂಪತಯಾ ದ್ರಷ್ಟುಮಶಕ್ಯಾ ಭವಂತಿ ।** ಪ್ರಕಾಶಮಾನರಾದ ಎಂದರೆ ಕ್ರೂರವಾದ ರೂಪವುಳ್ಳವರಾದುದರಿಂದ ನೋಡುವುದಕ್ಕೆ ಭಯಂಕರವಾಗಿ

ಕಾಣಿಸುತ್ತಿರುವರು. ಮರುದ್ದೇವತೆಗಳು ಬಹಳ ರಭಸದಿಂದ ಚಲಿಸುವಾಗ (ಬೀಸುವಾಗ) ಉಗ್ರರೂಪವುಳ್ಳವರಾದ್ದ ರಿಂದ ಜನರು ಇವರನ್ನು ನೋಡಿ ಭಯಪಡುವರೆಂದಭಿಪ್ರಾಯವು.

**ನರಃ—ವೃಷ್ಟ್ಯಾದೇರ್ನೇತಾರಃ ।** ಮಳೆ ಹುಯ್ಯುವಕಾರ್ಯಗಳಲ್ಲಿ ಅಗ್ರಗಣ್ಯರಾದವರು ಎಂದರೆ ಮರುದ್ದೇವತೆಗಳ ಸಹಾಯವಿಲ್ಲದೆ ಮಳೆಯು ಹುಯ್ಯುವುದು ಅಸಂಭವವು.

॥ ವ್ಯಾಕರಣಪ್ರಕ್ರಿಯಾ ॥

**ಯುಯುಧಯಃ**—ಯುಧ ಸಂಪ್ರಹಾರೆ ಧಾತು. **ಆದೃಗಮಹನಜನಃ ಕಿಕಿನೌ ಲಿಟ್ ಚ**—ಎಂಬಲ್ಲಿ **ಉತ್ಸರ್ಗಶ್ಛಂದಸಿ** (ಪಾ. ಸೂ. ೩-೨-೧೭೧-೨) ಎಂಬುದರಿಂದ ಇದಕ್ಕೂ ಕಿನ್‌ಪ್ರತ್ಯಯ ಬರುತ್ತದೆ. ಅದಕ್ಕೆ ಲಿಡ್ವದ್ಭಾವ ಹೇಳಿರುವುದರಿಂದ ಧಾತುವಿಗೆ ದ್ವಿತ್ವ. ಕಿತ್ತಾದುದರಿಂದ ಆರ್ಧಧಾತುಕನಿಬಂಧನವಾಗಿ ಧಾತುವಿಗೆ ಗುಣ ಬರುವುದಿಲ್ಲ. ಯುಯುಧಿ ಶಬ್ದವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಪ್ರಥಮಾಬಹುವಚನದಲ್ಲಿ **ಜಸಿ ಚ** ಎಂಬುದರಿಂದ ಗುಣ. ಆಯಾದೇಶ.

**ಜಗ್ಮಯಃ** ಗಮ್ಲೃ ಗತೌ ಧಾತು. ಹಿಂದಿನಸೂತ್ರದಿಂದ ಕಿನ್‌ಪ್ರತ್ಯಯ. ದ್ವಿತ್ವ. ಅಭ್ಯಾಸಕೆ ಹಲಾದಿಶೇಷ. **ಕುಹೋಶ್ಚುಃ**--ಎಂಬುದರಿಂದ ಚುತ್ವ. **ಗಮಹನಜನ** (ಪಾ. ಸೂ. ೬-೪-೯೮) ಎಂಬುದರಿಂದ ಉಪಧಾಲೋಪ. ಅಂತರಂಗವಾದುದರಿಂದ ಮೊದಲು ಉಪಧಾಲೋಪ ಬಂದಾಗ ಸ್ಥಾನಿವದ್ಭಾವದಿಂದ ದ್ವಿರ್ಭಾ ವಾದಿಗಳನ್ನು ಹೇಳಬೇಕು. ಜಗ್ಮಿ ಶಬ್ದವಾಗುತ್ತದೆ. ಹಿಂದಿನಂತೆಯೇ ಆದ್ಯುದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಶ್ರವಸ್ಯವಃ**—ಶ್ರವಃ ಆತ್ಮನಃ ಇಚ್ಛತಿ ಶ್ರವಸ್ಯತಿ. **ಸುಪ ಆತ್ಮನಃ ಕ್ಯಚ್**—ಎಂಬುದರಿಂದ ಕ್ಯಚ್ ಪ್ರತ್ಯಯ. **ಶ್ರವಸ್ಯತೀತಿ ಶ್ರವಸ್ಯುಃ ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉಪ್ರತ್ಯಯ. **ಅತೋಲೋಪಃ** ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಶ್ರವಸ್ಯು ಶಬ್ದವು ಅಂತೋದಾತ್ತವಾಗುತ್ತದೆ. ಜಸಿನಲ್ಲಿ **ಹ್ರಸ್ವಸ್ಯಗುಣಃ**—ಎಂಬುದರಿಂದ ಗುಣ. ಅವಾದೇಶ.

**ಯೇತಿರೆ** — ಯತೀ ಪ್ರಯತ್ನೇ ಧಾತು ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ**— ಎಂಬುದರಿಂದ ಲಿಟ್. ಬಹುವಚನಕ್ಕೆ ಇರೇಚ್ ಆದೇಶ. ದ್ವಿತ್ವ ಬಂದಾಗ ಅಸಂಯುಕ್ತಹಲ್‌ಮಧ್ಯದಲ್ಲಿ ಅಕಾರ ಇರುವುದರಿಂದ **ಅತಏಕಹಲ್‌ಮಧ್ಯೇ** (ಪಾ. ಸೂ. ೬-೪-೧೨೦) ಸೂತ್ರದಿಂದ ಏತ್ವ, ಅಭ್ಯಾಸಲೋಪ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭಯಂತೇ**—ಞಿಭೀ ಭಯೇ ಧಾತು. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ವಿಕರಣ ಬರು ವುದಿಲ್ಲ. ಆಗ ಶಪ್ ಉಳಿಯುತ್ತದೆ. ಬಹುವಚನದಲ್ಲಿ ಶಪ್ ನಿಮಿತ್ತವಾಗಿ ಧಾತುವಿನ ಇಕಾರಕ್ಕೆ ಗುಣ. ಅಚ್ ಪರದಲ್ಲಿರುವುದರಿಂದ ಅಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು (ಅಂತೆ) **ತಾಸ್ಯನುದಾತ್ತೇತ್**— ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರದಿಂದ ಆದ್ಯುದಾತ್ತ ವಾಗುತ್ತದೆ.

**ವಿಶ್ವಾ ಭುವನಾ—ಶೇಶ್ಛಂದಸಿ ಬಹುಲಂ** ಎಂಬುದರಿಂದ ನಪುಂಸಕದಲ್ಲಿ ಆದೇಶವಾಗಿ ಬಂದ ಶಿಗೆ ಲೋಪ.

**ತ್ವೇಷಸಂದೃಶಃ**—ತ್ವಿಷ ದೀಪ್ತೌ ಧಾತು. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯ—** ಎಂಬುದರಿಂದ ಅಚ್ ಪ್ರತ್ಯಯ. ಪ್ರತ್ಯಯಪರವಾದಾಗ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧ ಗುಣ. ತ್ವೇಷ ಎಂದು ರೂಪವಾಗುತ್ತದೆ. ದೃಶಿರ್ ಪ್ರೇಕ್ಷಣೇ ಧಾತು. ಸಮ್ ಉಪಸರ್ಗ ಪೂರ್ವದಲ್ಲಿರುವಾಗ **ಸಂಪದಾದಿಭ್ಯಃ ಕ್ವಿಪ್** ಎಂಬ ವಚನದಿಂದ ಭಾವಾರ್ಥದಲ್ಲಿ ಕ್ವಿಪ್. ಬಹುವ್ರೀಹಿಯಲ್ಲಿ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ತ್ವಷ್ಟಾ ಯದ್ವಜ್ರಂ ಸುಕೃತಂ ಹಿರಣ್ಯಯಂ ಸಹಸ್ರಭೃಷ್ಟಿಂ ಸ್ವಪಾ ಅವರ್ತಯತ್ ।
ಧತ್ತ ಇಂದ್ರೋ ನರ್ಯಪಾಂಸಿ ಕರ್ತವೇಽಹನ್ವೃತ್ರಂ ನಿರಪಾಮೌಬ್ಜದರ್ಣವಂ ॥ ೯ ॥

॥ ಪದಪಾಠಃ ॥

ತ್ವಷ್ಟಾ । ಯತ್ । ವಜ್ರಂ । ಸುಽಕೃತಂ । ಹಿರಣ್ಯಯಂ । ಸಹಸ್ರಽಭೃಷ್ಟಿಂ । ಸುಽಅಪಾಃ । ಅವರ್ತಯತ್ ।
ಧತ್ತೇ । ಇಂದ್ರಃ । ನರಿ । ಅಪಾಂಸಿ । ಕರ್ತವೇ । ಅಹನ್ । ವೃತ್ರಂ । ನಿಃ । ಅಪಾಂ । ಔಬ್ಜತ್ । ಅರ್ಣವಂ ॥ ೯ ॥

ಸಾಯಣಭಾಷ್ಯ

ಸ್ವಪಾಃ ಶೋಭನಕರ್ಮಾ ತ್ವಷ್ಟಾ ವಿಶ್ವನಿರ್ಮಾತಾ ಯದ್ವಜ್ರಮವರ್ತಯತ್ ಇಂದ್ರಂ ಪ್ರತ್ಯಗಮಯತ್ । ದತ್ತವಾನಿತ್ಯರ್ಥಃ । ಕೀದೃಶಂ । ಸುಕೃತಂ ಸಮ್ಯಙ್ನಿಷ್ಪಾದಿತಂ ಹಿರಣ್ಯಯಂ ಸುವರ್ಣಮಯಂ ಸಹಸ್ರಭೃಷ್ಟಿಮನೇಕಾಭಿರ್ಧಾರಾಭಿರ್ಯುಕ್ತಂ । ತದ್ವಜ್ರಮಿಂದ್ರೋ ಧತ್ತೇ । ಧಾರಯತಿ । ಕಿಮರ್ಥಂ । ನರಿ । ಅತ್ರ ನೃಸಂಬಂಧಾನ್ನೃಶಬ್ದೇನ ಸಂಗ್ರಾಮೋಽಭಿಧೀಯತೇ । ಸಂಗ್ರಾಮೇಽಪಾಂಸಿ ಶತ್ರುಹನನಾದಿಲಕ್ಷಣಾನಿ ಕರ್ಮಾಣಿ ಕರ್ತವೇ ಕರ್ತುಂ। ಏವಂ ವಜ್ರಂ ಧೃತ್ವಾ ತೇನ ವಜ್ರೇಣ ವೃತ್ರಂ ವೃಷ್ಟ್ಯುದಕಸ್ಯಾವರಕಮರ್ಣವಮರ್ಣಸೋದಕೇನ ಯುಕ್ತಂ ಮೇಘಮಹನ್ । ಅವಧೀತ್ । ಅಪಾಂ ತೇನ ನಿರುದ್ಧಾ ಆಪಶ್ಚ ಸ ನಿರೌಬ್ಜತ್ । ನಿಃಶೇಷೇಣಾಧೋಮುಖಮಪಾತಯತ್ । ಪ್ರವೃಷ್ಟಾ ಅಕರೋದಿತ್ಯರ್ಥಃ ॥ ಸುಕೃತಂ । ಸುಪೂರ್ವಾತ್ಕರೋತೇಃ ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಹಿರಣ್ಯಯಂ । ಹಿರಣ್ಯಶಬ್ದಾದುತ್ತರಸ್ಯ ಮಯಟೋ ಮಕಾರಸ್ಯ ಲೋಪ ಋತ್ವ್ಯವಾಸ್ತ್ವ್ಯವಾ ಸ್ತ್ವೇತ್ಯಾದೌ ನಿಪಾತ್ಯತೇ। ಸ್ವಪಾಃ। ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾತ್ತತ್ವಂ। ಕರ್ತವೇ । ತುಮರ್ಥೇ ಸೇಸೇನಿತಿ ಕರೋತೇಸ್ತವೇನ್ಪ್ರತ್ಯಯಃ । ಅಪಾಂ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಔಬ್ಜತ್ । ಉಬ್ಜ ಆರ್ಜವೇ । ಅರ್ಣವಂ । ಅರ್ಣಸೋ ಲೋಪಶ್ಚ । ಕಾ. ೫-೨-೧೦೯-೩ । ಇತಿ ಮತ್ವರ್ಥೀಯೋ ವಃ ಸಲೋಪಶ್ಚ ॥

॥ ಪ್ರತಿಪದಾರ್ಥ ॥

**ಸ್ವಪಾಃ**—ಶ್ರೇಷ್ಠವಾದ ಕರ್ಮಗಳುಳ್ಳ । **ತ್ವಷ್ಟಾ**—ದೇವಶಿಲ್ಪಿಯು । **ಸುಕೃತಂ**—ಉತ್ತಮವಾದ ನಿರ್ಮಾಣವುಳ್ಳದ್ದೂ । **ಹಿರಣ್ಯಯಂ**—ಸುವರ್ಣಮಯವಾದದ್ದೂ । **ಸಹಸ್ರಭೃಷ್ಟಿಂ**—ಅನೇಕ ಅಲಗುಗಳುಳ್ಳದ್ದೂ ಆದ । **ಯದ್ವಜ್ರಂ**—ಯಾವ ವಜ್ರಾಯುಧವನ್ನು । **ಅವರ್ತಯತ್**—(ಇಂದ್ರನಿಗೆ) ಕೊಟ್ಟನೋ (ಆ ವಜ್ರಾಯುಧವನ್ನು) । **ಇಂದ್ರಃ**—ಇಂದ್ರನು । **ನರಿ**—ಸಂಗ್ರಾಮದಲ್ಲಿ । **ಅಪಾಂಸಿ**—(ಶತ್ರುನಾಶವೇ ಮೊದಲಾದ) ಕೆಲಸಗಳನ್ನು । **ಕರ್ತವೇ**—ಮಾಡುವುದಕ್ಕಾಗಿ । **ಧತ್ತೇ**—ಹಿಡಿಯುತ್ತಾನೆ. (ಇದರಿಂದ) । **ವೃತ್ರಂ**—ವೃಷ್ಟ್ಯುದಕಗಳನ್ನು ಆವರಿಸುವ । **ಅರ್ಣವಂ**—ಉದಕದಿಂದ ಕೂಡಿದ ಮೇಘವನ್ನು । **ಅಹನ್**—ಸೀಳಿದನು **ಅಪಾಂ**—ನೀರುಗಳನ್ನು । **ನಿಃ ಔಬ್ಜತ್**—ಸಂಪೂರ್ಣವಾಗಿ ಸುರಿಸಿದನು.

ಭಾವಾರ್ಥ

ಶೋಭನಕರ್ಮಗಳುಳ್ಳ ದೇವಶಿಲ್ಪಿಯು ಉತ್ತಮವಾದ ನಿರ್ಮಾಣವುಳ್ಳದ್ದೂ, ಸುವರ್ಣಮಯವಾದದ್ದೂ ಮತ್ತು ಅನೇಕ ಅಲಗುಗಳುಳ್ಳದ್ದೂ ಆದ ಯಾವ ವಜ್ರಾಯುಧವನ್ನು ಇಂದ್ರನಿಗೆ ಕೊಟ್ಟನೋ ಆ ವಜ್ರಾಯುಧವನ್ನು ಇಂದ್ರನು ಯುದ್ಧದಲ್ಲಿ ಶತ್ರುನಾಶಾದಿಕಾರ್ಯಗಳನ್ನು ನೆರವೇರಿಸಲು ಹಿಡಿಯುತ್ತಾನೆ. ಮತ್ತು ಅದರಿಂದ ವೃಷ್ಟ್ಯುದಕಾದಿಗಳನ್ನು ಆವರಿಸುವ ಮೇಘವನ್ನು ಸೀಳಿದನು. ಧಾರಾರೂಪದಲ್ಲಿ ನೀರನ್ನು ಸುರಿಸಿದನು

## English Translation

Indra weilds the well-made, golden and thousand edged thunderbolt, which the skillful Twashtri has framed for him that he may achieve great exploits in war. He has slain Vritra and sent down a flood of waters.

॥ ವಿಶೇಷವಿಷಯಗಳು ॥

**ತ್ವಷ್ಟಾ**—ದೇವಶಿಲ್ಪಿಯು. ತ್ವಷ್ಟೃವಿನ ವಿಚಾರದಲ್ಲಿ ಋ. ಸಂ. ಭಾಗ ೩. ಪೇಜು 25 ರಲ್ಲಿ ನಾವು ಬರೆದಿರುವುದನ್ನು ನೋಡಿ.

**ಸಹಸ್ರಭೃಷ್ಟಿಂ—ಅನೇಕಾಭಿರ್ಧಾರಾಭಿರ್ಯುಕ್ತಂ** । ಸಾವಿರಾರು ಅಲಗುಗಳಿಂದ ಕೂಡಿದ.

**ಸ್ವಪಾಃ—ಶೋಭನಕರ್ಮಾ** । ಒಳ್ಳೆಯ ಕೆಲಸಗಳನ್ನು ಮಾಡುವ, ಕೆಲಸಗಳಲ್ಲಿ ಕುಶಲನಾದ.

**ನರಿ**—ಮನುಷ್ಯರ ವಿಷಯದಲ್ಲಿ, ಎಂದರೆ ಮನುಷ್ಯರ ಅಥವಾ ಶತ್ರುಗಳ ಮೇಲೆ ಉಪಯೋಗಿಸುವ ಸಂದರ್ಭದಲ್ಲಿ ; ಯುದ್ಧದಲ್ಲಿ.

**ಕರ್ತವೇ**—ಸಾಹಸಕೃತ್ಯಗಳನ್ನು ಮಾಡುವುದಕ್ಕಾಗಿ, ಶತ್ರುಗಳೊಡನೆ ಯುದ್ಧಮಾಡುವುದಕ್ಕಾಗಿ.

**ನಿಃ ಔಬ್ಜತ್—ಉಬ್ಜ ಆರ್ಜವೇ । ನಿಶ್ಶೇಷೇಣಾಧೋಮುಖಮಪಾತಯತ್** । ಚೆನ್ನಾಗಿ ಕೆಳಕ್ಕೆ ಸುರಿಯುವಂತೆ ಮಾಡಿದನು.

ವ್ಯಾಕರಣಪ್ರಕ್ರಿಯಾ

**ಸುಕೃತಮ್**—ಸು ಪೂರ್ವವಾಗಿರುವಾಗ, ಡುಕೃಞ್ ಕರಣೇ ಧಾತು. ಇದಕ್ಕೆ ಕರ್ಮಣಿಯಲ್ಲಿ ನಿಷ್ಠಾ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಸಂಜ್ಞೆಯುಳ್ಳ ಸುವಿಗೆ ಪ್ರಕೃತಿಸ್ವರ ಬರುತ್ತದೆ.

**ಹಿರಣ್ಯಯಮ್**—ಹಿರಣ್ಯಸ್ಯ ವಿಕಾರಃ ಎಂಬರ್ಥದಲ್ಲಿ ಮಯಟ್ ಪ್ರತ್ಯಯ. ಹಿರಣ್ಯ+ಮಯ ಎಂದಿರುವಾಗ **ಋತ್ವ್ಯವಾಸ್ತ್ವ್ಯವಾಸ್ತ್ವ** (ಪಾ. ೬-೪-೧೭೫) ಎಂಬುದರಿಂದ ಮಯಟಿನ ಮಕಾರಕ್ಕೆ **ಲೋಪವು** ನಿಪಾತಿತವಾಗಿದೆ.

**ಸ್ವಪಾಃ—ಸೋರ್ಮನಸೀ ಅಲೋಮೋಷಸೀ** (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಅವರ್ತಯತ್**—ವೃತು ವರ್ತನೇ ಧಾತು. ಣಿಜಂತದಮೇಲೆ ಲಙ್ ಪ್ರಥಮಪುರುಷೈಕವಚನದಲ್ಲಿ ಉಕ್ತರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಧರ್ತ್ರೆ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನದರೂಪ. ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕರ್ತವೇ**—ಡುಕೃಞ್ ಕರಣೇ ಧಾತು. ತುಮರ್ಥದಲ್ಲಿ **ತುಮರ್ಥೇ ಸೇಸೇನಸೇ** (ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಆ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಕರ್ತವೇ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಹನ್**—ಹನ ಹಿಂಸಾಗತ್ಯೋಃ ಧಾತು. ಲಙ್ ಪ್ರಥಮಪುರುಷಏಕವಚನದಲ್ಲಿ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಬ್ಲುಕ್ ಆದಾಗ **ಹಲ್ಙ್ಯಾಭ್ಯೋ**- ಸೂತ್ರದಿಂದ ಪ್ರತ್ಯಯಕ್ಕೆ ಲುಕ್ ಬಂದರೆ ಉಕ್ತರೂಸಿದ್ಧಿಯಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಪಾಮ್—ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್**—ಎಂಬಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಂ** ಎಂದು ವಚನವಿರುವುದರಿಂದ ಕರ್ಮಕ್ಕೂ ಸಂಪ್ರದಾನಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬಂದಿದೆ. ಷಷ್ಠೀ ಬಹುವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಔಬ್ಜತ್**—ಉಬ್ಜ ಆರ್ಜವೇ ಧಾತು. ಲಙ್ ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರ್ಣವಮ್**—ಅರ್ಣಾಂಸಿ ಅಸ್ಮಿನ್ ಸಂತಿ ಇತಿ ಅರ್ಣವಃ ಮತ್ವರ್ಥದಲ್ಲಿ **ಅರ್ಣಸೋ ಲೋಪಶ್ಚ** (ಕಾ. ೫-೨-೧೦೯-೨) ಎಂಬುದರಿಂದ ವ ಪ್ರತ್ಯಯ. ತತ್ಸಂನಿಯೋಗದಿಂದ ಅರ್ಣಸಿನ ಸಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತ. ॥ ೯ ॥

---

ಸಂಹಿತಾಪಾಠಃ

ಊರ್ಧ್ವಂ ನುನುದ್ರೇಽವತಂ ತ ಓಜಸಾ ದಾದೃಹಾಣಂ ಚಿದ್ಬಿ-

ಭಿದುರ್ವಿ ಪರ್ವತಂ ।

ಧಮಂತೋ ವಾಣಂ ಮರುತಃ ಸುದಾನವೋ ಮದೇ ಸೋಮ-
ಸ್ಯ ರಣ್ಯಾನಿ ಚಕ್ರಿರೇ ॥ ೧೦ ॥

॥ ಪದಪಾಠಃ ॥

ಊರ್ಧ್ವಂ । ನುನುದ್ರೇ । ಅವತಂ । ತೇ । ಓಜಸಾ । ದದೃಹಾಣಂ । ಚಿತ್ ।
ಬಿಭಿದುಃ । ವಿ । ಪರ್ವತಂ ।

ಧಮಂತಃ । ವಾಣಂ । ಮರುತಃ । ಸುऽದಾನವಃ । ಮದೇ । ಸೋಮಸ್ಯ । ರಣ್ಯಾನಿ ।
ಚಕ್ರಿರೇ ॥ ೧೦ ॥

॥ ಸಾಯಣಭಾಷ್ಯಂ ॥

ಅತ್ರೇಯಮಾಖ್ಯಾಯಿಕಾ । ಗೋತಮ ಋಷಿಃ ಪಿಪಾಸಯಾ ಪೀಡಿತಃ ಸನ್ ಮರುತ ಉದಕಂ ಯಯಾಚೇ । ತದನಂತರಂ ಮರುತೋಽದೂರಸ್ಥಂ ಕೂಪಮುದ್ಧೃತ್ಯ ಯತ್ರ ಸ ಗೋತಮ ಋಷಿಸ್ತಿಷ್ಠತಿ ತಾಂ ದಿಶಂ ನೀತ್ವಾ ಋಷಿಸಮೀಪೇ ಕೂಪಮವಸ್ಥಾಪ್ಯ ತತ್ಪಾರ್ಶ್ವ ಆಹಾವಂ ಚ ಕೃತ್ವಾ ತಸ್ಮಿನ್ನಾಹಾವೇ ಕೂಪಮುತ್ಸಿಚ್ಯ ತಮೃಷಿಂ ತೇನೋದಕೇನ ತರ್ಪಯಾಂ ಚಕ್ರುಃ । ಅಯಮರ್ಥೋಽನಯೋತ್ತರಯಾ ಚ ಪ್ರತಿಪಾದ್ಯತೇ ॥ ತೇ ಮರುತೋಽವತಂ । ಅವಸ್ತಾತ್ತತೋ ಭವತೀತ್ಯವತಃ ಕೂಪಃ । ಕೂಪನಾಮಸು ಚಾವತೋಽವಟ ಇತಿ ಪಠಿತಂ । ತಮೂರ್ಧ್ವಮುಪರಿ ಯಥಾ ಭವತಿ ತಥೌಜಸಾ ಸ್ವಕೀಯೇನ ಬಲೇನ ನುನುದ್ರೇ । ಪ್ರೇರಿತವಂತಃ । ಉತ್ಪಾಟಿತವಂತ ಇತ್ಯರ್ಥಃ । ಏವಂ ಕೂಪಮುತ್ಪಾಟ್ಯ ಋಷೇರಾಶ್ರಮಂ ಪ್ರತಿ ನಯಂತೋ ಮರುತೋ ಮಾರ್ಗಮಧ್ಯೇ ದದೃಹಾಣಂ ಪ್ರವೃದ್ಧಂ ಗತಿನಿರೋಧಕಂ ಪರ್ವತಂ ಚಿತ್ ಪರ್ವವಂತಂ ಶಿಲೋಚ್ಚಯಮಪಿ ವಿ ಬಿಭಿದುಃ । ವಿಶೇಷೇಣ ಬಭಂಜುಃ । ಸುದಾನವಃ ಶೋಭನದಾನಾಸ್ತೇ ಮರುತೋ ವಾಣಂ ಶತಸಂಖ್ಯಾಭಿಸ್ತಂತ್ರೀಭಿರ್ಯುಕ್ತಂ ವೀಣಾವಿಶೇಷಂ ಧಮಂತೋ ವಾದಯಂತಃ ಸೋಮಸ್ಯ ಮದೇ ಸೋಮಪಾನೇನ ಹರ್ಷೇ ಸತಿ ರಣ್ಯಾನಿ ಸ್ತುತ್ಯಾನಿ ರಮಣೀಯಾನಿ ಧನಾನಿ ಚಕ್ರಿರೇ । ಸ್ತೋತೃಭ್ಯಃ ಕುರ್ವಂತಿ ॥ ನುನುದ್ರೇ । ಣುದ ಪ್ರೇರಣೇ । ಲಿಟಿರಯೋ ರ ಇತಿ ರೇಆದೇಶಃ । ದದೃಹಾಣಂ । ದೃಹ ದೃಹಿ ವೃದ್ಧೌ । ಲಿಟಃ ಕಾನಚ್ । ಧಮಂತಃ । ಧ್ಮಾ ಶಬ್ದಾಗ್ನಿಸಂಯೋಗಯೋಃ । ಪಾಘ್ರೇ-ತ್ಯಾದಿನಾ ಧಮಾದೇಶಃ । ವಾಣಂ । ಅಣ ರಣ ವಣ ಶಬ್ದಾರ್ಥಾಃ । ಕರ್ಮಣಿ ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವಂ । ರಣ್ಯಾನಿ । ರಣತೇರ್ಭಾವೇ ವಶಿರಣ್ಯೋರುಪಸಂಖ್ಯಾನಂ । ಪಾ ೩-೩-೫೮-೩ । ಇತ್ಯಪ್ । ತತೋ ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ತೇ**—ಆ ಮರುತ್ತುಗಳು । **ಅವತಂ**—ಬಾವಿಯನ್ನು । **ಊರ್ಧ್ವಂ**—ಮೇಲುಗಡೆ (ನೀರು) ಇರುವಂತೆ **ನುನುದ್ರೇ**—ಅಗೆದರು। **ದದೃಹಾಣಂ**—(ತಮ್ಮ) ಗಮನಕ್ಕೆ ಪ್ರತಿಬಂಧಕವಾದ। **ಪರ್ವತಂಚಿತ್**—ಬಂಡೆಗಳಿಂದ ಕೂಡಿದ ಪರ್ವತವನ್ನೂ ಕೂಡ । **ವಿಬಿಭಿದುಃ**—ಚೆನ್ನಾಗಿ ಸೀಳಿದರು । **ಸುದಾನವಃ**—ಶ್ರೇಷ್ಠವಾದ ದಾತೃಗಳಾದ । **ಮರುತಃ**—ಆ ಮರುತ್ತುಗಳು । **ವಾಣಂ**—ನೂರಾರು ತಂತಿಗಳುಳ್ಳ ತಮ್ಮ ವೀಣಾ ವಾದ್ಯವನ್ನು । **ಧಮಂತಃ**—ಬಾರಿಸುತ್ತ । **ಸೋಮಸ್ಯ**—ಸೋಮರಸದ ( ಪಾನದಿಂದ ) । **ಮದೇ**—ತೃಪ್ತಿಯುಂಟಾದಾಗ । **ರಣ್ಯಾನಿ**—ಶ್ಲಾಘ್ಯಗಳಾದ ಧನಗಳನ್ನು । **ಚಕ್ರಿರೇ**—(ಭಕ್ತರಿಗೆ) ಕೊಟ್ಟಿದ್ದಾರೆ ॥

ಭಾವಾರ್ಥ

ಆ ಮರುತ್ತುಗಳು ಗೋತಮಋಷಿಗಾಗಿ ಮೇಲುಗಡೆಯೇ ನೀರಿರುವಂತೆ ಬಾವಿಯನ್ನು ಅಗೆದರು. ಬಂಡೆಗಳಿಂದ ಕೂಡಿ ತಮ್ಮ ಗಮನಕ್ಕೆ ಪ್ರತಿಬಂಧಕಗಳಾದ ಪರ್ವತ ಪ್ರದೇಶಗಳನ್ನು ಸೀಳಿದರು. ಶ್ರೇಷ್ಠವಾದ ದಾತೃಗಳಾದ ಆ ಮರುತ್ತುಗಳು ನೂರಾರು ತಂತಿಗಳುಳ್ಳ ತಮ್ಮ ವೀಣಾವಾದ್ಯವನ್ನು ಬಾರಿಸುತ್ತ ಸೋಮರಸದ ಪಾನದಿಂದ ತಮಗೆ ತೃಪ್ತಿಯುಂಟಾದಾಗ ಭಕ್ತರಿಗೆ ಶ್ಲಾಘ್ಯವಾಗಿಯೂ ರಮ್ಯವಾಗಿಯೂ ಇರತಕ್ಕ ಧನವನ್ನು ಕೊಟ್ಟಿದ್ದಾರೆ.

English Translation

By their power they bore the well and clove asunder the mountain that obstructed their path ; the liberal Maruts blowing upon their pipe have con. ferred desirable gifts upon the sacrificer, when exhilarated by the Soma-juice-

॥ ವಿಶೇಷವಿಷಯಗಳು ॥

ಭಾಷ್ಯಕಾರರು ಇಲ್ಲಿ ಒಂದು ಉಪಾಖ್ಯಾನವನ್ನು ಹೇಳಿರುವರು—ಗೋತಮಋಷಿಯು ಒಂದಾನೊಂದುಕಾಲದಲ್ಲಿ ತನಗೆ ತುಂಬಾ ಬಾಯಾರಿಕೆಯಾದಾಗ ಪಾನಾರ್ಥವಾಗಿ ಮರುದ್ದೇವತೆಗಳನ್ನು ಉದಕವನ್ನು ಕೊಡುವಂತೆ ಪ್ರಾರ್ಥಿಸಿದನು. ಆಗ ಮರುದ್ದೇವತೆಗಳು ಅನತಿದೂರದಲ್ಲಿದ್ದ ಒಂದು ನೀರಿನ ಭಾವಿಯನ್ನು ಕಿತ್ತು ತಂದು ಗೋತಮಋಷಿಯ ಆಶ್ರಮದಲ್ಲಿ ಸ್ಥಾಪಿಸಿ ಆ ಋಷಿಯನ್ನು ಉದಕದಿಂದ ತೃಪ್ತಿಪಡಿಸಿದರು ಎಂದು, ಈ ಅಭಿಪ್ರಾಯವೇ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಪ್ರತಿಪಾದಿತವಾಗಿರುವುದು.

**ಅವತಂ—ಅವಸ್ತಾತ್ತತೋ ಭವತೀತ್ಯವತಃ ಕೂಪಃ** । ಕೂಪಃ ಕಾತುಃ ಮೊದಲಾದ ಹದಿನಾಲ್ಕು ಕೂಪನಾಮಗಳ ಮಧ್ಯದಲ್ಲಿ ಅವತಃ ಎಂಬ ಶಬ್ದವು ಪಠಿತವಾಗಿರುವುದರಿಂದ ಅವತಂ ಎಂದರೆ ಭಾವಿಯನ್ನು ಎಂದರ್ಥವು. ಪ್ರಾಯಶಃ ಇಲ್ಲಿ ಮೇಘವು ನಿರ್ದೇಶಿಸಲ್ಪಟ್ಟಿರಬಹುದು.

**ನುನುದ್ರೇ—ಣುದ ಪ್ರೇರಣೇ** । ಪ್ರೇರಿಸಿದರು, ಎತ್ತಿಹಾಕಿದರು.

ವವೃಹಾಣಂ-- **ಪ್ರವೃದ್ಧಂ ಗತಿನಿರೋಧಕಂ ।** ದಾರಿಯಲ್ಲಿ ಅಡ್ಡಲಾಗಿ ಹೋಗುವುದಕ್ಕೆ ಅಡಚಣೆ ಯಾಗಿರುವ.

**ಧಮಂತೋ ವಾಣಂ — ಶತಸಂಖ್ಯಾಭಿಸ್ತಂತ್ರೀಭಿರ್ಯುಕ್ತಂ ವೀಣಾವಿಶೇಷಂ ವಾದಯಂತಃ ।** ಸಾವಿರತಂತಿಗಳಿಂದ ಕೂಡಿದ ವೀಣೆಯನ್ನು ಬಾರಿಸುತ್ತಾ ಎಂದರೆ ಗಾಳಿಯು ರಭಸವಾಗಿ ಬೀಸುವಾಗ ವಾದ್ಯಧ್ವನಿ ಯಂತೆ ನಾನಾವಿಧಶಬ್ದಗಳನ್ನು ಮಾಡುತ್ತಿರುವುದು ಎಂದಭಿಪ್ರಾಯವು.

**ರಣ್ವಾನಿ ಚಕ್ರಿರೇ—ರಮಣೀಯಾನಿ ಧನಾನಿ ಸ್ತೋತೃಭ್ಯಃ ಕುರ್ವಂತಿ ।** ಉತ್ತಮವಾದ ಧನಗಳನ್ನು ಸ್ತೋತ್ರಮಾಡುವವರಿಗೆ ಕೊಡುವರು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ನುನುದ್ರೇ**—ಣುದ ಪ್ರೇರಣೇ ಧಾತು. ಲಿಟ ಪ್ರಥಮಪುರುಷ ಬಹುವಚನದಲ್ಲಿ **ಲಿಟಸ್ತಝಯೋ-ರೇಶಿರೇಚ್**—ಎಂಬುದರಿಂದ ಇರೇಚ್ ಆದೇಶ. ಅದಕ್ಕೆ ಛಂದಸಿನಲ್ಲಿ **ಇರಯೋರೇ** (ಪಾ. ಸೂ. ೬-೪-೭೬) ಎಂಬುದರಿಂದ ರೇ ಆದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ನುನುದ್ರೇ ಎಂದು ರೂಪವಾಗುತ್ತದೆ.

**ವವೃಹಾಣಮ್**—ವೃಹ ವೃಹಿ ವೃದ್ಧೌ ಧಾತು. **ಲಿಟಃ ಕಾನಜ್ವಾ** ಎಂಬುದರಿಂದ ಕಾನಚ್. ಧಾತು ವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಉರತ್** ಎಂಬುದರಿಂದ ಅತ್ವ. ರಪರವಾಗಿ ಬಂದಾಗ ಪುನಃ ಹಲಾದಿ ಶೇಷದಿಂದ ವಕಾರ ಉಳಿಯುತ್ತದೆ. ಕಿತ್ತಾದುದರಿಂದ ಪ್ರತ್ಯಯವನ್ನು ನಿಮಿತ್ತೀಕರಿಸಿ ಲಘೂಪಧಗುಣ ಬರು ವುದಿಲ್ಲ. **ಅಟ್‌ಕುಪ್ವಾಜ್**—ಸೂತ್ರದಿಂದ ನಕಾರಕ್ಕೆ ಣತ್ವ. ದ್ವಿತೀಯಾಏಕವಚನದಲ್ಲಿ ವವೃಹಾಣಮ್ ಎಂದು ರೂಪವಾಗುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಬಿಭಿದುಃ**—ಭಿದಿರ್ ವಿದಾರಣೇ ಧಾತು. ಲಿಟ್ ಪ್ರಥಮಪುರುಷ ಬಹುವಚನರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಧಮಂತಃ**—ಧ್ಮಾ ಶಬ್ದಾಗ್ನಿಸಂಯೋಗಯೋಃ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಪಾಘ್ರಾಧ್ಮಾಸ್ಥಾ-** (ಪಾ. ಸೂ. ೭-೩-೭೮) ಎಂಬುದರಿಂದ ಧಮ ಎಂಬ ಆದೇಶವು ಧಾತುವಿಗೆ ಬರುತ್ತದೆ. ಶಪ್‌ವಿಕರಣ. ಧಮತ್ ಶಬ್ದವಾಗುತ್ತದೆ. ಪ್ರಥಮಾಬಹುವಚನ ಜಸ್ ಪರವಾದಾಗ **ಉಗಿದಚಾಂ**—ಸೂತ್ರದಿಂದ ನುಮಾಗಮ. **ನಶ್ಚಾಪದಾಂತಸ್ಯ**—ಎಂಬುದರಿಂದ ಅದಕ್ಕೆ ಅನುಸ್ವಾರ. **ಅನುಸ್ವಾರಸ್ಯಯಯಿ**—ಸೂತ್ರದಿಂದ ಪರಸವರ್ಣದಿಂದ ನಕಾರಾದೇಶ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು (ಅತ್) ಅನುದಾತ್ತವಾಗುತ್ತದೆ. ಧಾತು ಸ್ವರದಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ವಾಣಂಮ್**—ಅಣ, ರಣ, **ವಣ** ಶಬ್ದಾರ್ಥಾಃ. ಕರ್ಮಣಿಯಲ್ಲಿ ಘಞ್‌ಪ್ರತ್ಯಯ. **ಅತಉಪಧಾಯಾಃ** ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಆದ್ಯುದಾತ್ತಸ್ವರಪ್ರಾಪ್ತವಾದರೆ **ಕರ್ಷಾತ್ವತಃ** (ಪಾ. ಸೂ. ೬-೧-೧೫೯) ಎಂಬ ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ.

**ರಣ್ಯಾನಿ**—ಧಾತುವು ಹಿಂದೆ ಉಕ್ತವಾಗಿದೆ. ಭಾವಾರ್ಥದಲ್ಲಿ **ವಶಿರಣ್ಯೋರುಪಸಂಖ್ಯಾನಮ್** (ಪಾ. ಸೂ. ೩-೩-೫೮-೩) ಎಂಬುದರಿಂದ ಅಪ್‌ಪ್ರತ್ಯಯ. ರಣಾ ಎಂದು ರೂಪವಾಗುತ್ತದೆ. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಅದರ ಮೇಲೆ ಯತ್‌ಪ್ರತ್ಯಯ. **ಯಸ್ಯೇತಿಚ** ಸೂತ್ರದಿಂದ ಅಕಾರ ಲೋಪ. ರಣ್ಯ ಎಂದು ರೂಪವಾಗುತ್ತದೆ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರವು ಸ್ವರಿತವನ್ನು ಬಾಧಿಸಿ ಬರುತ್ತದೆ. ದ್ವಿತೀಯಾಬಹುವಚನಾಂತರೂಪ.

**ಚಕ್ರಿರೇ**—ಡುಕೃಞ್ ಕರಣೇ. ಧಾತು. ಲಿಟ್‌ಪ್ರಥಮಪುರುಷಬಹುವಚನರೂಪ. ತಿಙಂತನಿಘಾತ ಸ್ವರ ಬರುತ್ತದೆ. ॥ ೧೦ ॥



ಸಂಹಿತಾಪಾಠಃ

ಜಿಹ್ಮಂ ನುನುದ್ರೇಽವತಂ ತಯಾ ದಿಶಾಸಿಂಚನ್ನುತ್ಸಂ ಗೋತ-
ಮಾಯ ತೃಷ್ಣಜೇ।
ಆ ಗಚ್ಛಂತೀಮವಸಾ ಚಿತ್ರಭಾನವಃ ಕಾಮಂ ವಿಪ್ರಸ್ಯ ತರ್ಪ-
ಯಂತ ಧಾಮಭಿಃ ॥ ೧೧ ॥

ಪದಪಾಠಃ

ಜಿಹ್ಮಂ । ನುನುದ್ರೇ । ಅವತಂ । ತಯಾ । ದಿಶಾ । ಅಸಿಂಚನ್। ಉತ್ಸಂ। ಗೋತ-
ಮಾಯ । ತೃಷ್ಣಽಜೇ ।
ಆ । ಗಚ್ಛಂತಿ । ಈಂ । ಅವಸಾ । ಚಿತ್ರಽಭಾನವಃ । ಕಾಮಂ । ವಿಪ್ರಸ್ಯ। ತರ್ಪ-
ಯಂತ । ಧಾಮಽಭಿಃ ॥ ೧೧ ॥

ಸಾಯಣಭಾಷ್ಯಂ

ಮರುತೋಽವತಮುದ್ಧೃತಂ ಕೂಪಂ ಯಸ್ಯಾಂ ದಿಶಿ ಋಷಿರ್ವಸತಿ ತಯಾ ದಿಶಾ ಜಿಹ್ಮಂ ವಕ್ರಂ ತಿರ್ಯಂಚಂ ನುನುದ್ರೇ । ಪ್ರೇರಿತವಂತಃ । ಏವಂ ಕೂಪಂ ನೀತ್ವಾ ಋಷ್ಯಾಶ್ರಮೇಽವಸ್ಥಾಪ್ಯ ತೃಷ್ಣಜೇ ತೃಷಿತಾಯ ಗೋತಮಾಯ ಋಷಯೇ ತದರ್ಥಮುತ್ಸಂ ಜಲಪ್ರವಾಹಂ ಕೂಪಾದುದ್ಧೃತ್ಯಾಸಿಂಚನ್ । ಆಹಾವೇಽವಾನಯನ್ । ಏವಂ ಕೃತ್ವೇಮೇನಂ ಸ್ತೋತಾರಮೃಷಿಂ ಚಿತ್ರಭಾನವೋ ವಿಚಿತ್ರದೀಪ್ತಯಸ್ತೇ ಮರುತೋಽವಸೇದೃಶೇನ ರಕ್ಷಣೇನ ಸಹಾ ಗಚ್ಛಂತಿ । ತತ್ಸಮೀಪಂ ಪ್ರಾಪ್ನುವಂತಿ । ಪ್ರಾಪ್ಯ ಚ ವಿಪ್ರಸ್ಯ ಮೇಧಾವಿನೋ ಗೋತಮಸ್ಯ ಕಾಮಮಭಿಲಾಷಂ ಧಾಮಭಿರಾಯುಷೋ ಧಾರಕೈರುದಕೈಸ್ತರ್ಪಯಂತ । ಅತರ್ಪಯನ್ ॥ ತಯಾ । ನ ಗೋಶ್ವನ್ಸಾವವರ್ಣೇತಿ ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತಸ್ಯ ಪ್ರತಿಷೇಧಃ । ದಿಶಾ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ತೃಷ್ಣಜೇ ಞಿತೃಷಾ ಪಿಪಾಸಾಯಾಂ । ಸ್ವಪಿತೃಷೋರ್ನಜಿಙ್ । ಪಾ ೩-೨-೧೭೨ । ಪ್ರತ್ಯಯಾದ್ಯುದಾತ್ತತ್ವಂ । ಪದಕಾರಸ್ಯ ಶಾಕಲ್ಯಸ್ಯ ತ್ವಯಮಭಿಪ್ರಾಯಃ । ಅನ್ಯೇಷ್ವಪಿ ದೃಶ್ಯತ ಇತಿ ದೃಶಿಗ್ರಹಣಾತ್ಕೇವಲಾದಪಿ ಜನೇರ್ಡಪ್ರತ್ಯಯಃ । ತೃಷ್ಣಾ ಜಾತಾ ಯಸ್ಯ ಸ ತಥೋಕ್ತಃ । ಙ್ಯಾಪೋಃ ಸಂಜ್ಞಾಚ್ಛಂದಸೋರ್ಬಹುಲಮಿತಿ ಹ್ರಸ್ವತ್ವಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಧಾಮಭಿಃ । ದಧಾತೇರಾತೋ ಮನಿನ್ನಿತಿ ಮನಿನ್ ॥

ಪ್ರತಿಪದಾರ್ಥ

**ಜಿಹ್ಮಂ**—ಕುಟಿಲವಾದ । **ಅವತಂ**—(ತಾವು) ಅಗೆದ ಬಾವಿಯನ್ನು । (**ಮರುತಃ**—ಮರುತ್ತುಗಳು) । **ತಯಾ ದಿಶಾ**—(ಗೋತಮಋಷಿಯು ವಾಸಮಾಡುತ್ತಿದ್ದ) ಆ ದಿಕ್ಕಿನಿಂದ । **ನುನುದ್ರೇ**—ಸರಿಯುವಂತೆ ಮಾಡಿದರು. । (ಅನಂತರ ಋಷ್ಯಾಶ್ರಮದಲ್ಲಿಡಿಸಿ) **ತೃಷ್ಣಜೇ**—ಬಾಯಾರಿದ । **ಗೋತಮಾಯ**—ಗೋತಮಋಷಿಗೋಸ್ಕರ । **ಉತ್ಸಂ**—ಜಲಪ್ರವಾಹವನ್ನು । **ಅಸಿಂಚನ್**—ಹರಿಸಿದರು. । **ಚಿತ್ರಭಾನವಃ**—ನಾನಾವಿಧವಾದ ಪ್ರಕಾಶವುಳ್ಳ ಮರುತ್ತುಗಳು । **ಈಮ್**—(ಭಕ್ತನಾದ) ಈ ಋಷಿಯನ್ನು । **ಅವಸಾ**—(ಇಂತಹ) ರಕ್ಷಣೆಯಿಂದ । **ಆಗಚ್ಛಂತಿ**—ಸಮೀಪಿಸುತ್ತಾರೆ. । **ವಿಪ್ರಸ್ಯ**—ಮೇಧಾವಿಯಾದ ಗೋತಮನ । **ಕಾಮಂ**—ಇಷ್ಟಾರ್ಥವನ್ನು । **ಧಾಮಭಿಃ**—ಆಯುರ್ಧಾರಕಗಳಾದ ಉದಕಗಳಿಂದ । **ತರ್ಪಯಂತ**—ತೃಪ್ತಿಪಡಿಸಿದರು. ।

ಭಾವಾರ್ಥ

ಮರುತ್ತುಗಳು ತಾವು ಕುಟಿಲವಾಗಿ ಅಗೆದ ಬಾವಿಯನ್ನು ಗೋತಮಋಷಿಯು ವಾಸಮಾಡುತ್ತಿದ್ದ ದಿಕ್ಕಿನಲ್ಲಿ ಸರಿಯುವಂತೆ ಮಾಡಿದರು. ಅನಂತರ ಅದನ್ನು ಋಷ್ಯಾಶ್ರಮದಲ್ಲಿಡಿಸಿ ಬಾಯಾರಿದ ಗೋತಮಋಷಿಗೋಸ್ಕರ ಜಲಪ್ರವಾಹವನ್ನು ಹರಿಸಿದರು. ನಾನಾ ವಿಧವಾದ ಪ್ರಕಾಶವುಳ್ಳ ಮರುತ್ತುಗಳು ಭಕ್ತನಾದ ಗೋತಮನನ್ನು ತಮ್ಮ ಇಂತಹ ರಕ್ಷಣೆಯಿಂದ ಸಮೀಪಿಸಿ ಮೇಧಾವಿಯಾದ ಅವನ ಇಷ್ಟಾರ್ಥವನ್ನು ಆಯುರ್ಧಾರಕಗಳಾದ ಉದಕಗಳಿಂದ ತೃಪ್ತಿಪಡಿಸಿದರು.

## English Translation

They brought the crooked well to the place ( where Gotama was ) and sprinkled the water upon the thirsty Gotama ; the variously radiant Maruts come to his succour, gratifying the desire of the Sage with life-sustaining waters.

ವಿಶೇಷವಿಷಯಗಳು

**ಜಿಹ್ಮಂ—ವಕ್ರಂ ।** ವಕ್ರವಾಗಿರುವ, ನೆಟ್ಟಗಿಲ್ಲದ-

**ಉತ್ಸಂ**—ಜಲಪ್ರವಾಹವನ್ನು ।

**ತೃಷ್ಣಜೇ—ತೃಷಿತಾಯ ಗೋತಮಾಯ ।** ಬಾಯಾರಿದ.

**ಚಿತ್ರಭಾನವಃ**—ನಾನಾವಿಧವಾದ ಕಾಂತಿಗಳುಳ್ಳ.

**ಧಾಮಭಿಃ—ಧಾರಕೈರುದಕೈಃ ।** ಧಾರಾಕಾರವಾಗಿ ಸುರಿಯುತ್ತಿರುವ ಉದಕಗಳಿಂದ.

॥ ವ್ಯಾಕರಣಪ್ರಕ್ರಿಯಾ ॥

**ತಯಾ**—ತದ್ ಶಬ್ದ. ಸ್ತ್ರೀಲಿಂಗ ತೃತೀಯಾಏಕವಚನದಲ್ಲಿ ತಯಾ ಎಂದು ರೂಪವಾಗುತ್ತದೆ. **ಸಾವೇಕಾಚಸ್ತೃತೀಯಾದಿಃ** ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರವು ಪ್ರಾಪ್ತವಾದರೆ **ನಗೋಶ್ವನ್ಸಾವವರ್ಣ**—(ಪಾ. ಸೂ. ೬-೧-೧೮೨) ಎಂಬುದರಿಂದ ಅದಕ್ಕೆ ನಿಷೇಧ ಬರುತ್ತದೆ.

**ದಿಶಾ**—ದಿಶ್ ಶಬ್ದ. ನಿತ್ಯಸ್ತ್ರೀಲಿಂಗ. ತೃತೀಯಾಏಕವಚನಾಂತರೂಪ. ಸುಪರವಾದಾಗ ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಸಿಂಚನ್**—ಷಿಚ ಕ್ಷರಣೇ ಧಾತು. ತುದಾದಿ. ಲಙ್ಪ್ರಥಮಪುರುಷಬಹುವಚನದಲ್ಲಿ **ಝೋಂತಃ** ಸೂತ್ರದಿಂದ ಅಂತಾದೇಶ. ಅಂತ್ಯಇಕಾರಲೋಪ. **ಶೇಮುಚಾದೀನಾಂ** (ಪಾ. ಸೂ. ೭-೧-೫೯) ಎಂಬುದರಿಂದ ನುಮಾಗಮ. ಶವಿಕರಣ. ಸಂಯೋಗಾಂತಲೋಪ. ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತನಾಗುತ್ತದೆ.

**ತೃಷ್ಣಜೇ**— ಞಿತೃಷಾ ಪಿಪಾಸಾಯಾಂ ಧಾತು. ಇದಕ್ಕೆ **ಸ್ವಪಿ ತೃಷೋರ್ನಜಿಙ್** (ಪಾ. ಸೂ. ೩-೨-೧೭೨) ಎಂಬುದರಿಂದ ನಜಿಙ್ಪ್ರತ್ಯಯ. **ರಷಾಭ್ಯಾಂನೋಣಃ**—ಸೂತ್ರದಿಂದ ಪ್ರತ್ಯಯನಕಾರಕ್ಕೆ ಣತ್ವ. ತೃಷಿನ ಉಪಧೆಗೆ ಪ್ರತ್ಯಯ ಙಿತ್ತಾದುದರಿಂದ ಗುಣ ಬರುವುದಿಲ್ಲ. ತೃಷ್ಣಜ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಷ್ಣ ಎಂಬಲ್ಲಿರುವ ಅಕಾರ ಉದಾತ್ತವಾಗುತ್ತದೆ. ಚತುರ್ಥೀಏಕವಚನದಲ್ಲಿ ತೃಷ್ಣಜೇ ಎಂದು ರೂಪವಾಗು

ತ್ತದೆ. ಈ ಪದದ ಪ್ರಕ್ರಿಯೆಯಲ್ಲಿ ಪದಕಾರರಾದ ಶಾಕಲ್ಯರಿಗೆ ಬೇರೆ ಅಭಿಪ್ರಾಯವಿದೆ. **ಅನ್ಯೇಷ್ವಪಿ ದೃಶ್ಯತೇ** ಎಂಬ ಸೂತ್ರದಲ್ಲಿ ಅಪಿಗ್ರಹಣದಿಂದ ನಿರುಪಪದವಾದ (ಕೇವಲ) ಜನ್‌ಧಾತುವಿಗೆ ಡ ಪ್ರತ್ಯಯ ಬರುತ್ತದೆ. ಡಿತ್ತ್ವಸಾಮರ್ಥ್ಯದಿಂದ ಜನಿನ ಟಿಗೆ (ಅನ್) ಲೋಪ ಬರುತ್ತದೆ. ತೃಷ್ಣಾ ಜಾತಾ ಯಸ್ಯ ಸಃ ತೃಷ್ಣಜಃ **ಙ್ಯಾಪೋಃ ಸಂಜ್ಞಾಛಂದಸೋರ್ಬಹುಲಂ** ಎಂಬುದರಿಂದ ಸಮಾಸದಲ್ಲಿ ಆಬಂತಕ್ಕೆ ಹ್ರಸ್ವ. ಬಹುವ್ರೀಹಿಸಮಾಸವಾದುದರಿಂದ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಗಚ್ಛಂತಿ** — ಗಮ್ಲೃ ಗತೌ ಧಾತು. ಲಟ್ ಪ್ರಥಮಪುರುಷಬಹುವಚನದಲ್ಲಿ ಅಂತಾದೇಶ. ಶಪ್ ವಿಕರಣ. **ಇಷುಗಮಿಯಮಾಂ ಛಃ** ಎಂಬುದರಿಂದ ಛಾದೇಶ ತಿಙಂತನಿಘಾತಸ್ವರ ಬರುತ್ತದೆ.

**ಚಿತ್ರಭಾನವಃ**—ಚಿತ್ರಾಃ ಭಾನವೋ ಯಸ್ಯ ಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ತರ್ಪಯಂತ**—ತೃಪ ತೃಪ್ತೌ ಧಾತು. ಲಙ್ ಪ್ರಥಮಪುರುಷ ಬಹುವಚನರೂಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಧಾಮಭಿಃ** — ಡುಧಾಞ್ ಧಾರಣಪೋಷಣಯೋಃ ಧಾತು. **ಆತೋಮನಿನ್ ಕ್ವನಿಪ್ ವನಿಪಶ್ಚ** ಎಂಬುದರಿಂದ ಮನಿನ್ ಪ್ರತ್ಯಯ. ಧಾಮನ್ ಶಬ್ದವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ತೃತೀಯಾಬಹುವಚನದಲ್ಲಿ **ನಲೋಪಃ ಪ್ರಾತಿ**—ಸೂತ್ರದಿಂದ ನಲೋಪ. ॥ ೧೧ ॥



ಸಂಹಿತಾಪಾಠಃ

ಯಾ ವಃ ಶರ್ಮ ಶಶಮಾನಾಯ ಸಂತಿ ತ್ರಿಧಾತೂನಿ ದಾಶುಷೇ
ಯಚ್ಛತಾಧಿ ।
ಅಸ್ಮಭ್ಯಂ ತಾನಿ ಮರುತೋ ವಿ ಯಂತ ರಯಿಂ ನೋ ಧತ್ತ
ವೃಷಣಃ ಸುವೀರಂ ॥ ೧೨ ॥

ಪದಪಾಠಃ

ಯಾ । ವಃ । ಶರ್ಮ । ಶಶಮಾನಾಯ । ಸಂತಿ । ತ್ರಿಽಧಾತೂನಿ । ದಾಶುಷೇ ।
ಯಚ್ಛತ । ಅಧಿ ।
ಅಸ್ಮಭ್ಯಂ । ತಾನಿ । ಮರುತಃ । ವಿ । ಯಂತ । ರಯಿಂ । ನಃ । ಧತ್ತ । ವೃಷಣಃ ।
ಸುಽವೀರಂ ॥ ೧೨ ॥

ಸಾಯಣಭಾಷ್ಯಂ

ಮಾರುತೇ ಪಶೌ ಯಾ ವಃ ಶರ್ಮೇತಿ ಹವಿಷೋ ಯಾಜ್ಯಾ । ಪ್ರದಾನಾನಾಮಿತಿ ಖಂಡೇ ಸೂತ್ರಿತಂ । ಅರಾ ಇವೇದಚರಮಾ ಅಹೇವ ಯಾ ವಃ ಶರ್ಮ ಶಶಮಾನಾಯ ಸಂತಿ । ಅ. ೩-೭ । ಇತಿ ॥

ಹೇ ಮರುತೋ ವೋ ಯುಷ್ಮಾಕಂ ಸಂಬಂಧೀನಿ ಯಾ ಯಾನಿ ಶರ್ಮ ಶರ್ಮಾಣಿ ಸುಖಾನಿ ಗೃಹಾಣಿ ವಾ । ಕೀದೃಶಾನಿ । ತ್ರಿಧಾತೂನಿ ಪೃಥಿವ್ಯಾದಿಷು ತ್ರಿಷು ಸ್ಥಾನೇಷ್ವವಸ್ಥಿತಾನಿ ಶಶಮಾನಾಯ ಯುಷ್ಮಾನ್ಸ್ತುತಿಭಿರ್ಭಜಮಾನಾಯ ದಾತುಂ ಸಂಪಾದಿತಾನಿ । ಪೂರ್ವೋಕ್ತಲಕ್ಷಣಾನಿ ಶರ್ಮಾಣಿ ಯಾನಿ ಸಂತಿ ಯಾನಿ ಚ ದಾಶುಷೇ ಹವಿರ್ದತ್ತವತೇ ಯಜಮಾನಾಯಾಧಿ ಯಚ್ಛತ ಅಧಿಕಂ ಪ್ರಯಚ್ಛಥ ಹೇ ಮರುತಸ್ತಾನಿ ಸರ್ವಾಣಿ ಶರ್ಮಾಣ್ಯಸ್ಮಭ್ಯಂ ವಿ ಯಂತ । ವಿಶೇಷೇಣ ಪ್ರಯಚ್ಛತ । ಕಿಂಚ ಹೇ ವೃಷಣಃ ಕಾಮಾನಾಂ ವರ್ಷಿತಾರೋ ಮರುತೋ ನೋಽಸ್ಮಭ್ಯಂ ಸುವೀರಂ ಶೋಭನೈರ್ವೀರೈಃ ಪುತ್ರಾದಿಭಿರ್ಯುಕ್ತಂ ರಯಿಂ ಧನಂ ಧತ್ತ । ದತ್ತ ॥ ಯಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಶರ್ಮ । ಸುಪಾಂ ಸುಲುಗಿತಿ ಜಸೋ ಲುಕ್ । ಶಶಮಾನಾಯ । ಶಶ ಪ್ಲುತಗತೌ । ತಾಚ್ಛೀಲಿಕಶ್ಚಾನಶ್ । ಯಚ್ಛತ । ಛಾಂದಸೇ ಲಙಃ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಯಂತ । ಯಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ತಪ್ತನಪ್ತನಥನಾಶ್ಚೇತಿ ತಸ್ಯ ತಬಾದೇಶಃ । ಅತಸ್ತಸ್ಯ ಪಿತ್ತ್ವೇನ ಙಿತ್ತ್ವಾಭಾವಾದನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪೋ ನ ಭವತಿ । ವೃಷಣಃ । ವಾ ಷಪೂರ್ವಸ್ಯ ನಿಗಮ ಇತ್ಯುಪಧಾದೀರ್ಘಾಭಾವಃ । ಸುವೀರಂ । ಬಹುವ್ರೀಹೌ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ವಃ—(ಎಲೈ ಮರುತ್ತುಗಳಿರಾ) ನಿಮಗೆ ಸೇರಿದವೂ (ನಿಮ್ಮಿಂದ ಅನುಗೃಹೀತವಾಗುವುವೂ) । ತ್ರಿಧಾತೂನಿ—ಪೃಥಿವ್ಯಾದಿ ಮೂರು ಲೋಕಗಳಲ್ಲೂ ಇರತಕ್ಕವೂ । **ಶಶಮಾನಾಯ**—(ನಿಮ್ಮನ್ನು) ಸ್ತೋತ್ರಮಾಡುವ ಭಕ್ತನಿಗಾಗಿ (ಸಂಪಾದಿತವಾದುವೂ) ಆದ । **ಯಾ**—ಯಾವ । **ಶರ್ಮ**—ಸುಖಗಳಾಗಲಿ ಅಥವಾ ಗೃಹಗಳಾಗಲಿ ।

**ಸಂತಿ**—ಇರುವುವೋ । (ಮತ್ತು) **ದಾಶುಷೇ**—ಹವಿರ್ದಾತನಾದ ಯಜಮಾನನಿಗೆ । **ಅಧಿ ಯಚ್ಛತ**—(ಯಾವ ಸುಖಗಳನ್ನಾಗಲಿ ಅಥವಾ ಗೃಹಗಳನ್ನಾಗಲಿ) ಕೊಡುತ್ತೀರೊ । **ಮರುತಃ**—ಎಲೈ ಮರುತ್ತುಗಳೇ । **ತಾನಿ**—ಆ ಸಕಲ ಸುಖಗಳನ್ನೂ ಅಥವಾ ಗೃಹಗಳನ್ನೂ । **ಅಸ್ಮಭ್ಯಂ**—ನಮಗೆ । **ವಿ ಯಂತ**—ಅಧಿಕವಾಗಿ ಕೊಡಿರಿ. । **ವೃಷಣಃ**—ಇಷ್ಟಾರ್ಥಗಳನ್ನು ಸುರಿಸತಕ್ಕ ಮರುತ್ತುಗಳೇ । **ನಃ**—ನಮಗೆ । **ಸುವೀರಂ**—ಶ್ರೇಷ್ಠನಾದುವೂ ವೀರರಾದವರೂ ಆದ ಪುತ್ರಾದಿಗಳಿಂದುಳ್ಳ । **ರಯಿಂ**—(ಮಕ್ಕಳೇ ಮೊದಲಾದ ರೀತಿಯಿಂದ ಕೂಡಿ ಇರುವ) ಧನವನ್ನು । **ದತ್ತ**—ಕೊಡಿರಿ. ।

### ಭಾವಾರ್ಥ

ಎಲೈ ಮರುತ್ತುಗಳೇ, ನಿಮಗೆ ಸೇರಿದುವೂ, ನಿಮ್ಮಿಂದ ಅನುಗೃಹೀತವಾಗುವುವೂ, ಪೃಥಿವ್ಯಾದಿಮೂರು ಲೋಕಗಳಲ್ಲಿ ಇರತಕ್ಕವೂ, ನಿಮ್ಮನ್ನು ಸ್ತೋತ್ರಮಾಡುವ ಭಕ್ತನಿಗಾಗಿ ಸಂಪಾದಿತವೂ ಆದ ಯಾವ ಸುಖಗಳನ್ನಾಗಲಿ, ಅಥವಾ ಗೃಹಗಳನ್ನಾಗಲಿ ಯಜಮಾನನಿಗೆ ಕೊಡುತ್ತೀರೋ, ಆ ಸಕಲಸುಖಗಳನ್ನೂ ಅಥವಾ ಗೃಹಗಳನ್ನೂ ನಮಗೂ ಅಧಿಕವಾಗಿ ಕೊಡಿರಿ. ಇಷ್ಟಾರ್ಥಗಳನ್ನು ಸುರಿಸತಕ್ಕ ಮರುತ್ತುಗಳೇ, ನಮಗೆ ಶ್ರೇಷ್ಠನಾದುವೂ ವೀರರಾದವರೂ ಆದ ಪುತ್ರಾದಿಗಳಿಂದ ಕೂಡಿದ್ದ ಧನವನ್ನು ಕೊಡಿರಿ.

### English Translation

Whatever blessings and happiness there are in the three worlds which are in your power to grant, give them to the offerer of oblations who adresses you with praise ; O Maruts, bestowers of all good, grant us those, blessings, and riches accompanied by brave sons and followers.

### ‖ ವಿಶೇಷವಿಷಯಗಳು ‖

**ಶಶಮಾನಾಯ—ಶಶ ಪ್ಲುತಗತೌ । ಶಶತಿರರ್ಚತಿಕರ್ಮಾಯಂ । ಸ್ತುತಿಕರಣಶೀಲಾಯ** ಸ್ತೋತ್ರಮಾಡುವ ಯಜಮಾನನಿಗೆ.

**ಶರ್ಮ**—ಸುಖ ಅಥವಾ ಗೃಹ.

**ತ್ರಿಧಾತೂನಿ—ಪೃಥಿವ್ಯಾದಿಷು ತ್ರಿಷು ಸ್ಥಾನೇಷ್ವವಸ್ಥಿತಾನಿ ।** ಪೃಥಿವ್ಯಾದಿಮೂರುಲೋಕಗಳಲ್ಲಿರುವ, [illegible]ಸ್ವಾಮಿಯು ಈ ಶಬ್ದಕ್ಕೆ—**ತ್ರಿಧಾತೂನಿ । ಧೀಯಂತೇ ಪ್ರಾಣಿನಾಂ ದೇಹೇಷ್ವಿತಿ ಧಾತವಃ ಅನ್ನರಸಾಃ** ಪ್ರಾಣಿಗಳ ದೇಹದಲ್ಲಿರುವ ಅನ್ನರಸಾದಿಗಳೆಂದು ಅರ್ಥ ಮಾಡಿರುವರು.

**ದಾಶುಷೇ—ಹವಿರ್ದತ್ತವತೇ ಯಜಮಾನಾಯ ।** ಹವಿಸ್ಸನ್ನರ್ಪಿಸುವ ಯಜಮಾನನಿಗೆ.

**ವಿ ಯಂತ—ವಿಶೇಷೇಣ ಪ್ರಯಚ್ಛತ ।** ವಿಶೇಷವಾಗಿ ಕೊಡಿ.

**ವೃಷಣಃ—ಕಾಮಾನಾಂ ವರ್ಷಿತಾರಃ ।** ಇಷ್ಟಾರ್ಥಗಳನ್ನು ಕೊಡುವ ಮರುದ್ದೇವತೆಗಳು.

ವ್ಯಾಕರಣಪ್ರಕ್ರಿಯಾ

**ಯಾ**—ನಪುಂಸಕದಲ್ಲಿ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ.

**ಶರ್ಮ**—ಶರ್ಮ ಶಬ್ದ ನಿತ್ಯನಪುಂಸಕಲಿಂಗ. ಇದಕ್ಕೆ ಜಸ್ ಪರವಾದಾಗ **ಸುಪಾಂಸುಲುಕ್**—ಸೂತ್ರದಿಂದ ಜಸಿಗೆ ಲುಕ್ ಬರುತ್ತದೆ.

**ಶಶಮಾನಾಯ**—ಶಶ ಪ್ಲುತಗತೌ. ಧಾತು. **ತಾಚ್ಛೀಲ್ಯವಯೋ**—(ಪಾ.ಸೂ. ೩-೨-೧೨೯) ಎಂಬುದರಿಂದ ತಾಚ್ಛೀಲ್ಯಾರ್ಥದಲ್ಲಿ ಚಾನಶ್. **ಆನೇ ಮುಕ್** ಎಂಬುದರಿಂದ ಪ್ರತ್ಯಯಪರವಾದಾಗ ಮುಕಾಗಮ. ಪ್ರತ್ಯಯಚಿತ್ತಾದುದರಿಂದ **ಚಿತಃ** ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನದಲ್ಲಿ ಶಶಮಾನಾಯ ಎಂದು ರೂಪವಾಗುತ್ತದೆ.

**ಯಚ್ಛತ**—ದಾಣ್ ದಾನೇ ಧಾತು. ಲೋಡರ್ಥದಲ್ಲಿ **ಛಂದಸಿ ಲುಜ್‌ಲಜ್‌ಲಿಟಃ**— ಎಂಬುದರಿಂದ ಲಜ್. **ಪಾಘ್ರಾಧ್ಮಾಸ್ಥಾ**—ಸೂತ್ರದಿಂದ ಧಾತುವಿಗೆ ಯಚ್ಛಾದೇಶ. ಮಧ್ಯಮಪುರುಷ ಬಹುವಚನಕ್ಕೆ **ತಸ್‌ಥಸ್‌ಥ**–ಸೂತ್ರದಿಂದ ತಾದೇಶ. **ಬಹುಲಂ ಛಂದಸ್ಯಮಾಜ್‌ಯೋಗೇಽಪಿ** ಸೂತ್ರದಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಂತ**—ಯಮ ಉಪರಮೇ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ಅದಕ್ಕೆ ತಬಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ತಬಾದೇಶವು ಪಿತ್ತಾದುದರಿಂದ ಙಿದ್ವದ್ಭಾವ ಬರುವುದಿಲ್ಲ. ಆದುದರಿಂದ **ಅನುದಾತ್ತೋಪದೇಶವನತಿ** (ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಲೋಪ ಬರುವುದಿಲ್ಲ. **ನಶ್ಚಾಪದಾಂತಸ್ಯ ಝಲಿ** ಎಂಬುದರಿಂದ ಮಕಾರಕ್ಕೆ ಅನುಸ್ವಾರ. ಯಯ್ ಪರದಲ್ಲಿರುವುದರಿಂದ ಪರಸವರ್ಣ. ತಿಙಂತ ನಿಘಾತಸ್ವರ ಬರುತ್ತದೆ.

**ಧತ್ತ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷ ಬಹುವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ವೃಷಣ**—ವೃಷನ್ ಶಬ್ದವು ಕನಿನ್ ಪ್ರತ್ಯಯಾಂತವಾಗಿ ಆದ್ಯುದಾತ್ತನಾಗಿರುತ್ತದೆ. ಸಂಬೋಧನಾ ಬಹುವಚನ ಪರವಾದಾಗ **ಸರ್ವನಾಮಸ್ಥಾನೇ** ಸೂತ್ರದಿಂದ ಉಪಧಾದೀರ್ಘ ಪ್ರಾಪ್ತವಾದರೆ **ವಾ ಷಪೂರ್ವಸ್ಯ ನಿಗಮೇ** (ಪಾ. ಸೂ. ೬-೪-೯) ಎಂಬುದರಿಂದ ಛಂದಸ್ಸಿನಲ್ಲಿ ಉಪಧಾದೀರ್ಘವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸುವೀರಮ್**—ಶೋಭನಾಃ ವೀರಾಃ ಯಸ್ಯ ಸುವೀರಃ ತತ್. ಪೂರ್ವಪದ ಪ್ರಕೃತಿಸ್ವರವು ಬಾಧಿತವಾಗಿ **ನಞ್‌ಸುಭ್ಯಾಂ** ಎಂಬುದರಿಂದ ಉತ್ತರಪದಾಂತೋದಾತ್ತಸ್ವರವು ಪ್ರಾಪ್ತವಾದರೆ ಅದನ್ನು ಬಾಧಿಸಿ **ವೀರವೀರ್ಯೌ ಚ** (ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ. ॥ ೧೨ ॥

# ಎಂಭತ್ತಾರನೆಯ ಸೂಕ್ತವು

---

**ಮರುತೋ ಯಸ್ಯೇತಿ ದಶರ್ಚಂ ದ್ವಿತೀಯಂ ಸೂಕ್ತಂ ಗೋತಮಸ್ಯಾರ್ಷಂ ಗಾಯತ್ರಂ ಮರುದ್ದೇವತಾಕಂ। ಅನುಕ್ರಮ್ಯತೇ ಚ। ಮರುತೋ ದಶ ಗಾಯತ್ರಮಿತಿ॥ ವ್ಯೂಳ್ಹೇ ತೃತೀಯೇ ಛಂದೋಮ ಆಗ್ನಿಮಾರುತೇ ಶಸ್ತ್ರ ಏತತ್ಸೂಕ್ತಂ। ತೃತೀಯಸ್ಯಾಗನ್ಮ ಮಹೇತಿ ಖಂಡೇ ಸೂತ್ರಿತಂ। ಮರುತೋ ಯಸ್ಯ ಹಿ ಪ್ರಾಗ್ನಯೇ ವಾಚಮಿತ್ಯಾಗ್ನಿಮಾರುತಂ। ಆ. ೮-೧೧। ಇತಿ॥ ಐಂದ್ರಾಮಾರುತ್ಯಾಂ ಪ್ರಧಾನಸ್ಯ ಹವಿಷೋ ಮರುತೋ ಯಸ್ಯೇತ್ಯೇಷಾನುವಾಕ್ಯಾ। ಸೂತ್ರಿತಂ ಚ। ಐಂದ್ರಾಮಾರುತೀಂ ಭೇದಕಾಮಾ ಮರುತೋ ಯಸ್ಯ ಹಿ ಕ್ಷಯೇ। ಆ. ೨-೧೧। ಇತಿ॥ ಏಷೈವ ವರುಣಪ್ರಘಾಸೇಷು ಮಾರುತಾ ಆಮಿಕ್ಷಾಯಾ ಅನುವಾಕ್ಯಾ। ಸೂತ್ರಿತಂ ಚ। ಮರುತೋ ಯಸ್ಯ ಹಿ ಕ್ಷಯೇಽರಾ ಇವೇದಚರಮಾ ಅಹೇವ। ಆ. ೨-೧೭। ಇತಿ॥ ತಥಾ ಪ್ರಾತಃಸವನೇ ಪೋತುರೇಷಾ ಪ್ರಸ್ಥಿತಯಾಜ್ಯಾ। ಸೂತ್ರಿತಂ ಚ। ಮರುತೋ ಯಸ್ಯಹಿ ಕ್ಷಯೇಽಗ್ನೇ ಪತ್ನೀರಿಹಾ ವಹ। ಆ ೫-೫। ಇತಿ॥**

ಅನುವಾದವು—**ಮರುತೋ ಯಸ್ಯ** ಎಂಬ ಸೂಕ್ತವು ಪ್ರಥಮಮಂಡಲದ ಹದಿನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೋತಮನು ಋಷಿಯು. ಗಾಯತ್ರೀ ಛಂದಸ್ಸು, ಮರುದ್ದೇವತೆಗಳು. ಅನುಕ್ರಮಣಿಕೆಯಲ್ಲಿ—ಮರುತೋ ದಶ ಗಾಯತ್ರಮಿತಿ ಎಂದು ಹೇಳಿರುವುದು. ವ್ಯೂಳ್ಹಯಾಗದಲ್ಲಿ ತೃತೀಯಛಂದೋಮಾಮಂತ್ರಗಳಿಗಾಗಿ ಆಗ್ನಿಮಾರುತಶಸ್ತ್ರಮಂತ್ರಪಠನಮಾಡುವಾಗ ಈ ಸೂಕ್ತದ ವಿನಿಯೋಗವಿರುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ತೃತೀಯಸ್ಯಾಗನ್ಮ ಮಹೇತಿ** ಎಂಬ ಖಂಡದಲ್ಲಿ **ಮರುತೋ ಯಸ್ಯ ಹಿ ಪ್ರಾಗ್ನಯೇ ವಾಚಮಿತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧೧) ಮತ್ತು ಐಂದ್ರಮಾರುತೀ ಎಂಬ ಪ್ರಧಾನಹೋಮದಲ್ಲಿ ಹವಿರ್ನಿರ್ವಾಪಣ ಮಾಡುವಾಗ **ಮರುತೋ ಯಸ್ಯ** ಎಂಬ ಈ ಋಕ್ಕನ್ನು ಪುರೋನುವಾಕ್ಯವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಐಂದ್ರಾಮಾರುತೀಂ ಭೇದಕಾಮಾ ಮರುತೋ ಯಸ್ಯ ಹಿ ಕ್ಷಯೇ** ಎಂಬ ಸೂತ್ರವು ನಿರ್ದೇಶಿಸುವುದು. (ಆ. ೨-೧೧) ಮತ್ತು ವರುಣಪ್ರಘಾಸದಲ್ಲಿಯೂ ಮರುತ್ಸಂಬಂಧವಾದ ಆಮಿಕ್ಷಾನಿರ್ವಪನದಲ್ಲಿ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಮರುತೋ ಯಸ್ಯ ಹಿ ಕ್ಷಯೇಽರಾ ಇವೇದಚರಮಾ ಅಹೇವ** ಎಂಬ ಸೂತ್ರದಲ್ಲಿ ವಿವೃತವಾಗಿರುವುದು. (ಆ. ೨-೧೭) ಮತ್ತು ಪ್ರಾತಸ್ಸವನದಲ್ಲಿಯೂ ಪೋತೃವು ಈ ಋಕ್ಕನ್ನು ಪ್ರಸ್ಥಿತಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಮರುತೋ ಯಸ್ಯ ಹಿ ಕ್ಷಯೇಽಗ್ನೇಪತ್ನೀರಿಹಾ ವಹ** ಎಂಬ ಸೂತ್ರದಲ್ಲಿ ಹೇಳಿರುವುದು (ಆ. ೫-೫)



॥ ಓಂ ॥

## ಸೂಕ್ತ—೮೬

॥ ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೮೬ ॥

॥ ಅಷ್ಟಕ— ೧ ॥ ಅಧ್ಯಾಯ— ೬ ॥ ವರ್ಗ— ೧೧, ೧೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೦ ॥

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ಮರುತಃ ॥

॥ ಛಂದಃ— ಗಾಯತ್ರೀ ॥

ಸಂಹಿತಾಪಾಠಃ

ಮರುತೋ ಯಸ್ಯ ಹಿ ಕ್ಷಯೇ ಪಾಥಾ ದಿವೋ ವಿಮಹಸಃ ।
ಸ ಸುಗೋಪಾತಮೋ ಜನಃ ॥ ೧ ॥

॥ ಪದಪಾಠಃ ॥

ಮರುತಃ । ಯಸ್ಯ । ಹಿ । ಕ್ಷಯೇ । ಪಾಥ । ದಿವಃ । ವಿಽಮಹಸಃ ।
ಸಃ । ಸುಽಗೋಪಾತಮಃ । ಜನಃ ॥ ೧ ॥

ಸಾಯಣಭಾಷ್ಯಂ

ಹೇ ವಿಮಹಸೋ ವಿಶಿಷ್ಟಪ್ರಕಾಶಾ ಮರುತೋ ದಿವೋಽಂತರಿಕ್ಷಲೋಕಾದಾಗತ್ಯ ಯಸ್ಯ ಹಿ ಯಸ್ಯ ಖಲು ಯಜಮಾನಸ್ಯ ಕ್ಷಯೇ ಯಜ್ಞಗೃಹೇ ಪಾಥ ಸೋಮಂ ಪಿಬಥ ಸ ಜನೋ ಜಾತೋ ಯಜಮಾನಃ ಸುಗೋಪಾತಮಃ ಶೋಭನೈಃ ಪಾಲಕೈರತ್ಯಂತಂ ಯುಕ್ತೋ ಭವತಿ ॥ ಪಾಥ । ಪಾ ಪಾನೇ । ಲಟಿ ಬಹುಲಂ ಛಂದಸೀತಿ ಶಪೋ ಲುಕ್। ಯದ್ವೃತ್ತಯೋಗಾದನಿಘಾತಃ। ವಿಮಹಸಃ। ವಿಶಿಷ್ಟಂ ಮಹಸ್ತೇಜೋ ಯೇಷಾಂ ತೇ ತಥೋಕ್ತಾಃ। ಸುಗೋಪಾತಮಃ। ಶೋಭನೋ ಗೋಪಾ ರಕ್ಷಕೋ ಯಸ್ಯ ಸ ಸುಗೋಪಾಃ ಸುಗೋಪಾತಮಃ। ತಮಪಃ ಪಿತ್ತ್ವಾದನುದಾತ್ತತ್ವೇ ಸತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಮೇವ ಶಿಷ್ಯತೇ ॥

ಪ್ರತಿಪದಾರ್ಥ

**ವಿ ಮಹಸಃ**—ವಿಶೇಷವಾದ ಪ್ರಕಾಶದಿಂದ ಕೂಡಿದ । **ಮರುತಃ**—ಎಲೈ ಮರುತ್ತುಗಳೇ । **ದಿವಃ**—ಅಂತರಿಕ್ಷದಿಂದ (ಬಂದು) । **ಯಸ್ಯ ಹಿ**—ಯಾವುದೇ ಆದ ಯಜಮಾನನ । **ಕ್ಷಯೇ**—(ಯಜ್ಞ) ಗೃಹದಲ್ಲಿ । **ಪಾಥ**—(ಸೋಮರಸವನ್ನು) ಕುಡಿಯುತ್ತೀರೋ । **ಸ ಜನಃ**—ಆ ಯಜ್ಞಕರ್ತನಾದ ಮನುಜನು । **ಸುಗೋಪಾತಮಃ**—ಶ್ರೇಷ್ಠವಾದ ರಕ್ಷಣೆಗಳಿಂದ ಕೂಡಿಕೊಂಡಿರುತ್ತಾನೆ. ।

ಭಾವಾರ್ಥ

ಅತ್ಯಂತ ಪ್ರಕಾಶದಿಂದ ಕೂಡಿದ ಎಲೈ ಮರುತ್ತುಗಳೇ, ನೀವು ಅಂತರಿಕ್ಷಲೋಕದಿಂದ ದಯಮಾಡಿಸಿ ಯಾವ ಯಜಮಾನನ ಯಜ್ಞಗೃಹದಲ್ಲಿ ಸೋಮರಸವನ್ನು ಪಾನಮಾಡುತ್ತೀರೋ ಆ ಮನುಷ್ಯನಿಗೆ ಶ್ರೇಷ್ಠವಾದ ರಕ್ಷಣೆಗಳಿರುತ್ತವೆ.

English Translation

O resplendent Maruts, that man in house you drink the Soma-libation is provided with most able protectors.

ವಿಶೇಷವಿಷಯ

**ವಿಮಹಸಃ**—**ವಿಶಿಷ್ಟಪ್ರಕಾಶಾಃ** । ಅತ್ಯಂತ ಪ್ರಕಾಶಮಾನರಾದ ।

**ಕ್ಷಯೇ**—**ಯಜ್ಞಗೃಹೇ** । ಯಜ್ಞಮಾಡುವ ಗೃಹದಲ್ಲಿ.

**ಪಾಥ**—ಸೋಮರಸವನ್ನು ಕುಡಿಯುತ್ತೀರೊ.

**ಸುಗೋಪಾತಮಃ**—**ಶೋಭನೋ ಗೋಪಾ ರಕ್ಷಕೋ ಯಸ್ಯ ಸ ಸುಗೋಪಾಃ । ಅತಿಶಯೇನ ಸುಗೋಪಾಃ ಸುಗೋಪಾತಮಃ** । ಶ್ರೇಷ್ಠರಾದ ರಕ್ಷಕರನ್ನು ಹೊಂದಿರುವವನು.

ವ್ಯಾಕರಣಪ್ರಕ್ರಿಯಾ

**ಪಾಥ**—ಪಾ ಪಾನೇ ಧಾತು. ಲಟ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಶಪ್ ವಿಕರಣಕ್ಕೆ ಲುಕ್. ಶಿತ್‌ಪ್ರತ್ಯಯ ಪರದಲ್ಲಿಲ್ಲದಿರುವುದರಿಂದ **ಪಾಘ್ರಾಧ್ಮಾ**—ಸೂತ್ರದಿಂದ ಪಿಬಾದೇಶ ಬರುವುದಿಲ್ಲ. ಯಸ್ಯ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ**—ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಮಂತ್ರದಲ್ಲಿ ದ್ವ್ಯಚ್ಕವಾದುದರಿಂದ ದೀರ್ಘ ಬರುತ್ತದೆ

**ದಿವಃ**—**ಊಡಿದಂ ಪದಾದಿ**—ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಮಹಸಃ**—ವಿಶಿಷ್ಟಂ ಮಹಃ (ತೇಜಃ) ಯೇಷಾಂ ತೇ ವಿಮಹಸಃ ಸಂಬೋಧನಾ ಬಹುವಚನದಲ್ಲಿಯೂ ವಿಮಹಸಃ ಎಂದು ರೂಪವಾಗುತ್ತದೆ. **ಆಮಂತ್ರಿತಸ್ಯ ಚ**—ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸುಗೋಪಾತಮಃ**—ಶೋಭನೋ ಗೋಪಾ ರಕ್ಷಕೋ ಯಸ್ಯ ಸಃ ಸುಗೋಪಾಃ (ಸಮರ್ಥನಾದ ರಕ್ಷಣೆ ಯುಳ್ಳವನು) ಅತಿಶಯೇನ ಸುಗೋಪಾಃ ಸುಗೋಪಾತಮಃ **ಅತಿಶಾಯನೇ ತಮಬಿಷ್ಠನೌ** ಸೂತ್ರದಿಂದ ತಮಪ್ ಪ್ರತ್ಯಯ. ಅದು ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತದೆ. ಆವಾಗ ಸುಗೋಪಾಃ ಎಂಬ ಬಹುವ್ರೀಹಿಸಮಾಸದಲ್ಲಿ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರ ಪದಾಂತೋದಾತ್ತಸ್ವರವೇ ಉಳಿಯುತ್ತದೆ. ಪಕಾರೋತ್ತರಾಕಾರ ಉದಾತ್ತನಾಗುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ಯ॒ಜ್ಞೈರ್ವಾ॑ ಯಜ್ಞವಾಹಸೋ॒ ವಿಪ್ರ॑ಸ್ಯ ವಾ ಮತೀ॒ನಾಂ ।
ಮರು॑ತಃ ಶೃಣು॒ತಾ ಹವಂ॑ ॥ ೨ ॥

॥ ಪದಪಾಠಃ ॥

ಯ॒ಜ್ಞೈಃ । ವಾ॒ । ಯ॒ಜ್ಞ॒ಽವಾ॒ಹ॒ಸಃ॒ । ವಿಪ್ರ॑ಸ್ಯ । ವಾ॒ । ಮ॒ತೀ॒ನಾಂ ।
ಮರು॑ತಃ । ಶೃ॒ಣು॒ತ॒ । ಹವಂ॑ ॥ ೨ ॥

ಸಾಯಣಭಾಷ್ಯಂ

ಹೇ ಯಜ್ಞವಾಹಸೋ ಯಜ್ಞಸ್ಯ ವೋಢಾರೋ ಮರುತೋ ಯೂಯಂ ಯಜ್ಞೈರ್ವಾ । ವಾಶಬ್ದಃ ಸಮುಚ್ಚಯೇ । ಯಜ್ಞೈಶ್ಚ ಯಜಮಾನಸ್ಯ ಮತೀನಾಂ ಸ್ತುತೀನಾಂ ಸಂಬಂಧಿನೋ ವಿಪ್ರಸ್ಯ ವಾ ಯಜಮಾನಸ್ಯ ಮೇಧಾವಿನಶ್ಚ ಹವಮಾಹ್ವಾನಂ ಶೃಣುತ । ಯಜ್ಞವತೋ ಯಜಮಾನಸ್ಯ ಯಾಗರಹಿತಸ್ಯ ಸ್ತೋತುಶ್ಚಾಹ್ವಾನಮವಶ್ಯಂ ಭವದ್ಭಿಃ ಶ್ರೋತವ್ಯಂ ಯತೋ ಭವಂತೋ ಯಜ್ಞಸ್ಯ ವೋಢಾರಃ

ಸ್ತುತಿಪ್ರಿಯಾಶ್ಚೇತಿ ಭಾವಃ ॥ ಯಜ್ಞವಾಹಸಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ವಚನಾದ್ವಹಿಹಾಧಾಞ್ಭ್ಯಶ್ಛಂದಸೀತಿ ಕಾರಕಪೂರ್ವಾದ್ವಹತೇರಸುನ್ । ಣಿದಿತ್ಯನುವೃತ್ತೇರುಪಧಾವೃದ್ಧಿಃ ಮತೀನಾಂ ಮನ ಜ್ಞಾನೇ । ಅಸ್ಮಾತ್ಕರಣೇ ಕ್ತಿನ್ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ಶೃಣುತ ಶ್ರುವಃ ಶೃಚೇತಿ ಶ್ನುಃ । ಸತಿ ಶಿಷ್ಟಸ್ಯ ಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ವಚನಾತ್ತಿಙ ಏವ ಸ್ವರ ಶಿಷ್ಯತೇ । ಮರುತ ಇತ್ಯಸ್ಯಾಮಂತ್ರಿತಸ್ಯಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವೇನ ಪದಾದಪರತ್ವಾನ್ನಿಘಾತಾಭಾವಃ । ಹವಂ ।.ಭಾವೇಽನುಪಸರ್ಗಸ್ಯೇತಿ ಹ್ವಯತೇರಪ್ ಸಂಪ್ರಸಾರಣಂ ಚ ।

ಪ್ರತಿಪದಾರ್ಥ

**ಯಜ್ಞವಾಹಸಃ** — ಯಜ್ಞವಾಹಕರಾದ । **ಮರುತಃ**— ಎಲೈ ಮರುತ್ತುಗಳೇ, (ನೀವು) **ಯಜ್ಞೈರ್ವಾ**—ಯಜ್ಞಗಳಿಂದ ಕೂಡಿದ (ಯಜಮಾನನದಾಗಲಿ) ಅಥವಾ । **ಮತೀನಾಂ**—ಸ್ತೋತ್ರಗಳ (ಪಾಠ ಕನೂ) । **ವಿಪ್ರಸ್ಯ ವಾ**—(ಯಜ್ಞಕರ್ತನಲ್ಲದಿದ್ದರೂ ಸಹ) ಮೇಧಾವಿಯೂ ಆದ ಭಕ್ತನ । **ಹವಂ**—ಆಹ್ವಾನ ವನ್ನು । ಶೃಣುತ—ಕೇಳಿರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನೀವು ಯಜ್ಞವಾಹಕರೂ ಮತ್ತು ಸ್ತೋತ್ರಪ್ರಿಯರೂ ಆದ್ದರಿಂದ ನಿಮ್ಮ ಭಕ್ತನ ಎಂದರೆ ಯಜ್ಞಮಾಡತಕ್ಕ ಯಜಮಾನನ ಅಥವಾ ಯಜ್ಞಕರ್ತನಲ್ಲದ ಸ್ತೋತ್ರಪಾಠಕರ, ಇಬ್ಬರ ಆಹ್ವಾನ ವನ್ನೂ ಒಂದೇ ವಿಧವಾದ ಪ್ರೀತಿಯಿಂದ ಆಲಿಸಿಕೇಳಿ.

## English Translation

O Maruts, bearers of oblations, hear the invocations of the praises of the worshipper with or without sacrifices.

॥ ವಿಶೇಷವಿಷಯಗಳು ॥

**ಯಜ್ಞವಾಹಸಃ**—ಯಜ್ಞನಿರ್ವಾಹಕರು, ಯಜ್ಞದಲ್ಲಿ ಭಾಗವಹಿಸುವ ಋತ್ವಿಗ್ಜನರು.

**ಮತೀನಾಂ—ಸ್ತುತೀನಾಂ** । ಸ್ತೋತ್ರಸಂಬಂಧವಾದ, ಸ್ತೋತ್ರಗಳಿಂದ ಆಹ್ವಾನಿಸಲ್ಪಡುವ.

**ಯಜ್ಞೈರ್ವಾ**—ಯಜ್ಞಮಾಡುವ ಯಜಮಾನನು ಯಜ್ಞದಲ್ಲಿ ಮಾಡುವ ಆಹ್ವಾನವನ್ನಾಗಲಿ ಅಥವಾ ಯಜ್ಞವಿಲ್ಲದೆ ಹಾಗೆಯೇ ಮಾಡುವ ಆಹ್ವಾನವನ್ನಾಗಲೀ ಗಮನಿಸಿ ಕೇಳಬೇಕೆಂಬ ಅರ್ಥವನ್ನು ವಾ ಎಂಬ ಶಬ್ದವು ಸೂಚಿಸುವುದು.

॥ ವ್ಯಾಕರಣಪ್ರಕ್ರಿಯಾ

**ಯಜ್ಞವಾಹಸಃ**—**ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂಚ** (ಉ. ಸೂ. ೪-೬೬೬) ಎಂಬ ವಚನವಿರುವುದರಿಂದ ಯಜ್ಞ ಎಂಬ ಕಾರಕವು ಉಪಪದವಾಗಿರುವಾಗ **ವಹಿ ಹಾ ಧಾಞ್ಭ್ಯಶ್ಛಂದಸಿ**

(ಉ. ಸೂ. ೪-೬೬೦) ಎಂಬುದರಿಂದ ವಹ ಧಾತುವಿಗೆ ಅಸುನ್ ಪ್ರತ್ಯಯ. **ವಸೇರ್ಣಿತ್** (ಉ. ಸೂ. ೪-೬೫೭) ಎಂಬುದರಿಂದ ಣಿತ್ ಎಂದು ಅನುವೃತ್ತವಾಗುವುದರಿಂದ ಅಸುನಿಗೆ ಣಿದ್ವದ್ಭಾವ ಬರುತ್ತದೆ. ಆಗ **ಅತ ಉಪಧಾಯಾಃ** ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ ಬರುತ್ತದೆ. ಯಜ್ಞವಾಹಸ್ ಶಬ್ದವಾಗುತ್ತದೆ. ಸಂಬೋಧನಾ ಬಹುವಚನಾಂತದಲ್ಲಿ ಯಜ್ಞವಾಹಸಃ ಎಂದು ರೂಪವಾಗುತ್ತದೆ. **ಆಮಂತ್ರಿತಸ್ಯ ಚ** ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ಮತೀನಾಂ**-- ಮನ ಜ್ಞಾನೇ ಧಾತು. **ಸ್ತ್ರಿಯಾಂ ಕ್ತಿನ್**--ಸೂತ್ರದಿಂದ ಕರಣಾರ್ಥದಲ್ಲಿ ಕ್ತಿನ್‌ಪ್ರತ್ಯಯ ಮನ್+ತಿ ಎಂದಿರುವಾಗ **ಅನುದಾತ್ತೋಪದೇಶವನತಿ**—ಸೂತ್ರದಿಂದ ಧಾತುವಿನ ಅನುನಾಸಿಕವಾದ ನಕಾರಕ್ಕೆ ಲೋಪ. ಷಷ್ಠೀಬಹುವಚನದಲ್ಲಿ **ಹ್ರಸ್ವನದ್ಯಾಪೋನುಟ್** ಎಂಬ ಸೂತ್ರದಿಂದ ಆಮಿಗೆ ನುಟಾಗಮ. **ನಾಮಿ** ಎಂಬುದರಿಂದ ಅಂಗಕ್ಕೆ ದೀರ್ಘ. ಮತೀನಾಮ್ ಎಂದು ರೂಪವಾಗುತ್ತದೆ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಶೃಣುತ**—ಶ್ರು ಶ್ರವಣೇ. ಧಾತು. ಲೋಟ್ ಮಧ್ಯಮಪುರುಷಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ **ತಸ್‌ಥಸ್‌ಥ**—ಸೂತ್ರದಿಂದ ತಾದೇಶ. **ಶ್ರುವಃ ಶೃ ಚ** (ಪಾ. ಸೂ. ೩-೧-೭೪) ಶ್ರುಧಾತುವಿಗೆ ಶ್ನುವಿಕರಣವೂ ಪ್ರಕೃತಿಗೆ ಶೃ ಆದೇಶವೂ ಬರುತ್ತದೆ ಎಂಬುದರಿಂದ ಶ್ರುಧಾತುವಿಗೆ ಶೃ ಆದೇಶ. ಶಪಿಗೆ ಶ್ನುವಿಕರಣ. **ಸಾರ್ವಧಾತುಕಮಪಿತ್**—ಎಂಬುದರಿಂದ ಙಿತ್ತಾಗುವುದರಿಂದ ಉಕಾರಕ್ಕೆ ಗುಣ ಬರುವುದಿಲ್ಲ. **ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯಃ** ಎಂಬ ಪರಿಭಾಷೆಯಿಂದ ವಿಕರಣಸ್ವರವನ್ನು ಬಾಧಿಸಿ ತಿಙಿನ ಸ್ವರವೇ ಉಳಿಯುತ್ತದೆ. ಅಂತೋದಾತ್ತವಾದ ಪದವಾಗುತ್ತದೆ. ಯದ್ಯಪಿ ಅತಿಙಂತವಾದುದು ಪೂರ್ವಪದವಾಗಿದೆ. ಆದುದರಿಂದ ನಿಘಾತಸ್ವರ ಬರಬೇಕಾಗುತ್ತದೆ. ಆದರೆ ಅದಕ್ಕೆ ಆಮಂತ್ರಿತಸಂಜ್ಞೆ ಇರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್** ಎಂಬುದರಿಂದ ಅವಿದ್ಯಮಾನವದ್ಭಾವ (ಇದ್ದರೂ ಇಲ್ಲದಂತಿರುವುದು) ವಿರುವುದರಿಂದ ಪದದ ಪರದಲ್ಲಿ ಬಂದಂತಾಗಲಿಲ್ಲ. ಆದುದರಿಂದ ನಿಘಾತಸ್ವರ ಬರುವುದಿಲ್ಲ.

**ಹವಮ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಇದಕ್ಕೆ **ಭಾವೇಽನುಪಸರ್ಗಸ್ಯ** (ಪಾ. ಸೂ. ೩-೩-೭೫) ಎಂಬುದರಿಂದ ಭಾವಾರ್ಥದಲ್ಲಿ ಅಪ್‌ಪ್ರತ್ಯಯ ಮತ್ತು ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ** ಎಂಬುದರಿಂದ ಧಾತುವಿನ ಏಕಾರಕ್ಕೆ ಪೂರ್ವರೂಪ. ಹು+ಅ ಎಂದಿರುವಾಗ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. ಅವಾದೇಶ. ಅಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರ ಉಳಿಯುತ್ತದೆ. ॥ ೨ ॥

॥ ಸಂಹಿತಾಪಾಠಃ ॥

ಉತ ವಾ ಯಸ್ಯ ವಾಜಿನೋಽನು ವಿಪ್ರಮತಕ್ಷತ ।
ಸ ಗಂತಾ ಗೋಮತಿ ವ್ರಜೇ ॥ ೩ ॥

॥ ಪದಪಾಠಃ ॥

ಉತ । ವಾ । ಯಸ್ಯ । ವಾಜಿನಃ । ಅನು । ವಿಪ್ರಂ । ಅತಕ್ಷತ ।
ಸಃ । ಗಂತಾ । ಗೋಽಮತಿ । ವ್ರಜೇ ॥ ೩ ॥

॥ ಸಾಯಣಭಾಷ್ಯಂ ॥

ಉತ ವಾಪಿ ಚ ಯಸ್ಯ ಯಜಮಾನಸ್ಯ ವಾಜಿನೋ ಹವಿರ್ಲಕ್ಷಣಾನ್ನೋಪೇತಾ ಋತ್ವಿಜೋ ವಿಪ್ರಂ ಮೇಧಾವಿನಂ ಮರುದ್ಗಣಮನ್ವತಕ್ಷತ ಹವಿಷ್ಪ್ರದಾನಾದಿನಾ ತೀಕ್ಷ್ಣೀಕುರ್ವಂತಿ ಸ ಯಜಮಾನೋ ಗೋಮತಿ ಬಹುಭಿರ್ಗೋಭಿರ್ಯುಕ್ತೇ ವ್ರಜೇ ಗೋಷ್ಠೇ ಗಂತಾ ಗಮನಶೀಲೋ ಭವತಿ ॥ ಅತಕ್ಷತ । ತಕ್ಷೂ ತ್ವಕ್ಷೂ ತನೂಕರಣೇ । ಛಾಂದಸೋ ಲಙ್ । ವ್ಯತ್ಯಯೇನ ಮಧ್ಯಮಃ । ಗಂತಾ । ಗಮೇಸ್ತಾಚ್ಛೀಲಿಕಸ್ತೃನ್ ॥

ಪ್ರತಿಪದಾರ್ಥ

**ಉತ ವಾ**—ಅದೂ ಅಲ್ಲದೇ । **ಯಸ್ಯ**—ಯಾವ ಯಜಮಾನನಿಗಾಗಿ । **ವಾಜಿನಃ**—ಹವಿಸ್ಸಿನರೂಪದ ಅನ್ನದಿಂದ ಕೂಡಿದ ಋತ್ವಿಕ್ಕುಗಳು । **ವಿಪ್ರಂ**—ಮೇಧಾವಿಯಾದ ಮರುದ್ಗಣವನ್ನು । **ಅನು ಅತಕ್ಷತ**—(ಹವಿರ್ದಾನಾದಿಗಳಿಂದ) ಚುರುಕಾಗುವಂತೆ ಮಾಡುತ್ತಾರೋ, । **ಸಃ**— ಆ ಯಜಮಾನನು । **ಗೋಮತಿ**—(ಪ್ರಭೂತವಾದ) ಗೋವುಗಳಿಂದ ಕೂಡಿದ । **ವ್ರಜೇ**—ಕೊಟ್ಟಿಗೆಯಲ್ಲಿ । **ಗಂತಾ**—ಸಂಚರಿಸುವವನಾಗುತ್ತಾನೆ. ।

॥ ಭಾವಾರ್ಥ ॥

ಯಾವ ಯಜಮಾನನಿಗಾಗಿ ಋತ್ವಿಕ್ಕುಗಳು ಹವಿಸ್ಸಿನ ರೂಪದ ಅನ್ನಗಳನ್ನು ಅರ್ಪಿಸಿ ಪ್ರಾಜ್ಞರಾದ ಮರುತ್ತುಗಳನ್ನು ಚುರುಕಾಗುವಂತೆ ಮಾಡುತ್ತಾರೋ, ಆ ಯಜಮಾನನು ಗೋರೂಪವಾದ ಸಂಪತ್ತನ್ನು ಸಮೃದ್ಧವಾಗಿ ಹೊಂದಿ ಯಾವಾಗಲೂ ಗೋವಿನ ಕೊಟ್ಟಿಗೆಯಲ್ಲಿಯೇ ಸಂಚರಿಸುವವನಾಗುತ್ತಾನೆ.

## English Translation

And may he for whom the priests with oblations have sharpened ( the hunger of the Maruts ) walk among pastures crowded with cattle.

### ವಿಶೇಷವಿಷಯಗಳು

**ವಿಪ್ರಂ**—ಬುದ್ಧಿವಂತರಾದ ಮರುದ್ಗಣವನ್ನು, ಮರುತ್ಸಮೂಹವನ್ನು. ಇಲ್ಲಿ ವಿಪ್ರಂ ಎಂದು ಏಕವಚನ ಪ್ರಯೋಗವಿರುವುದರಿಂದ ಮರುದ್ದೇವತೆಗಳ ಸಮೂಹವೆಂಬ ಅರ್ಥವನ್ನು ಹೇಳಬೇಕು.

**ಅತಕ್ಷತ— ಹವಿಷ್ಪ್ರದಾನಾದಿನಾ ತೀಕ್ಷ್ಣೀಕುರ್ವಂತಿ । ತಕ್ಷೂ ತ್ವಕ್ಷೂ ತನೂಕರಣೇ ।** ಹವಿಷ್ಪ್ರದಾನಾದಿಗಳಿಂದ ಮರುದ್ದೇವತೆಗಳ ಕ್ಷುತ್ತನ್ನು ಚುರುಕುಗೊಳಿಸಿ ಯಜಮಾನನು ಅರ್ಪಿಸುವ ಹವಿಸ್ಸು ಸೋಮ ಮೊದಲಾದ ದ್ರವ್ಯಗಳಲ್ಲಿ ಆಸಕ್ತಿಯುಂಟಾಗುವಂತೆ ಮಾಡುವರು ಎಂದಭಿಪ್ರಾಯವು.

**ಸ ಗಂತಾ ಗೋಮತಿ ವ್ರಜೇ**—ಗೋವುಗಳಿಂದ ಕೂಡಿರತಕ್ಕ ಕೊಟ್ಟಿಗೆಯಲ್ಲಿ ಹೋಗುವನು ಎಂದರೆ ಅನೇಕ ಗೋವುಗಳನ್ನು ಪಡೆದು ಸುಖಿಸುವನು. ಮರುದ್ದೇವತೆಗಳ ಅನುಗ್ರಹದಿಂದ ಅನೇಕ ಗೋವುಗಳು ಲಭಿಸುವವು ಎಂದಭಿಪ್ರಾಯವು.

### ವ್ಯಾಕರಣಪ್ರಕ್ರಿಯಾ

**ವಾಜಿನಃ** — ವಾಜಮಸ್ಯಾಸ್ತೀತಿ ವಾಜೀ. **ಅತ ಇನಿಠನೌ**— ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ವಾಜಿನ್ ಶಬ್ದವಾಗುತ್ತದೆ. ಬಹುವಚನಾಂತರೂಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಅತಕ್ಷತ**—ತಕ್ಷೂ ತ್ವಕ್ಷೂ ತನೂಕರಣೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ಲಙ್ಲಿಟಃ** ಎಂಬುದರಿಂದ ಲಙ್. **ವ್ಯತ್ಯಯೋ ಬಹುಲಂ**—ಎಂಬುದರಿಂದ ಪ್ರಥಮಪುರುಷ ಬಹುವಚನಕ್ಕೆ ಮಧ್ಯಮಪುರುಷ ಬಹುವಚನ ಪ್ರತ್ಯಯ ಬರುತ್ತದೆ. ಶಪ್ ವಿಕರಣ. ಯಸ್ಯ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಗಂತಾ**—ಗಮ್ಲೃ ಗತೌ ಧಾತು. ತಾಚ್ಛೀಲ್ಯಾರ್ಥದಲ್ಲಿ ತೃನ್ ಪ್ರತ್ಯಯ. ಮಕಾರಕ್ಕೆ ಅನುಸ್ವಾರ ಪರಸವರ್ಣ ಬರುತ್ತದೆ. ಗನ್ತೃ ಶಬ್ದವಾಗುತ್ತದೆ. ಪ್ರಥಮಾ ಸುವಿನಲ್ಲಿ **ಋದುಶನಸ್**—ಸೂತ್ರದಿಂದ ಅನಙಾದೇಶ. **ಅಪ್ತೃನ್ತೃಚ್**—ಸೂತ್ರದಿಂದ ಉಪಧಾದೀರ್ಘ. **ಹಲ್ಙ್ಯಾಭ್ಯೋ**—ಸೂತ್ರದಿಂದ ಸುಲೋಪ. **ನಲೋಪಃ ಪ್ರಾತಿ** — ಎಂಬುದರಿಂದ ನಲೋಪ. ನಿತ್ ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ. ॥ ೩ ॥

॥ ಸಂಹಿತಾಪಾಠಃ ॥

ಅಸ್ಯ ವೀರಸ್ಯ ಬರ್ಹಿಷಿ ಸುತಃ ಸೋಮೋ ದಿವಿಷ್ಟಿಷು।
ಉಕ್ಥಂ ಮದಶ್ಚ ಶಸ್ಯತೇ ॥ ೪ ॥

ಪದಪಾಠಃ

ಅಸ್ಯ । ವೀರಸ್ಯ । ಬರ್ಹಿಷಿ । ಸುತಃ । ಸೋಮಃ । ದಿವಿಷ್ಟಿಷು ।
ಉಕ್ಥಂ । ಮದಃ । ಚ । ಶಸ್ಯತೇ ॥ ೪ ॥

ಸಾಯಣಭಾಷ್ಯಂ

ದಿವಿಷ್ಟಿಷು ಯಜನೀಯದಿವಸೇಷು ಬರ್ಹಿಷಿ ಯಜ್ಞೇ ವೀರಸ್ಯ ಶತ್ರುಕ್ಷೇಪಣಕುಶಲಸ್ಯಾಸ್ಯ ಮರುದ್ಗಣಸ್ಯ ಯಾಗಾಯ ಸೋಮಃ ಸುತಃ। ಋತ್ವಿಗ್ಭಿರಭಿಷುತೋ ಭವತಿ। ಉಕ್ಥಂ ಮರುದ್ದೇವತಾಕಂ ಶಸ್ತ್ರಂ ಮದಶ್ಚ ಮದಿಧಾತುನಾ ಯುಕ್ತಾ ಮರುತೋ ದೇವಾಃ ಸೋಮಸ್ಯ ಮತ್ಸನ್ನಿತ್ಯಾದಿಕಾ ಮಾರುತೀ ನಿವಿಚ್ಚಾಸ್ಯ ಮರುದ್ಗಣಸ್ಯ ಹರ್ಷಾಯ ಶಸ್ಯತೇ। ಹೋತ್ರಾ ಪಠ್ಯತೇ॥ ಅಸ್ಯ। ಊಡಿದಮಿತಿ ವಿಭಕ್ತೇರುದಾತ್ತತ್ವಂ। ದಿವಿಷ್ಟಿಷು। ಇಷ್ಟಯ ಏಷಣಾನಿ ಗಮನಾನಿ। ದಿವೋ ದ್ಯೋತಮಾನಸ್ಯ ಸೂರ್ಯಸ್ಯೇಷ್ಟಯೋ ಯೇಷು ದಿವಸೇಷು ತೇ ತಥೋಕ್ತಾಃ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ। ವ್ಯತ್ಯಯೇನೋತ್ವಾಭಾವಃ॥

॥ ಪ್ರತಿಪದಾರ್ಥ ॥

**ದಿವಿಷ್ಟಿಷು**—ಯಜ್ಞದಿವಸಗಳಲ್ಲಿ। **ಬರ್ಹಿಷಿ**—ಯಜ್ಞದಲ್ಲಿ। **ವೀರಸ್ಯ**—ಪರಾಕ್ರಮಶಾಲಿಯಾದ। **ಅಸ್ಯ**—ಈ ಮರುದ್ಗಣಕ್ಕಾಗಿ। **ಸೋಮಃ**—ಸೋಮರಸವು। **ಸುತಃ**—ಹಿಂಡಿದೆ.। **ಉಕ್ಥಂ**—(ಮರುದ್ದೇವತೆಗಳನ್ನು ಉದ್ದೇಶಿಸಿದ) ಶಸ್ತ್ರರೂಪವಾದ ಸ್ತೋತ್ರವು। **ಶಸ್ಯತೇ**—ಪಠಿತವಾಗುತ್ತದೆ.। **ಮದಶ್ಚ** (ಅವರ)ಹರ್ಷವೂ ಕೂಡ ಉಲ್ಬಣವಾಗುತ್ತದೆ.।

ಭಾವಾರ್ಥ

ಪರಾಕ್ರಮಶಾಲಿಯಾದ ಮರುದ್ಗಣಕ್ಕಾಗಿ ಯಜ್ಞದಿನಗಳಲ್ಲಿ ಪ್ರತಿಯಜ್ಞವಲ್ಲೂ ಸಹ ಸೋಮರಸವು ಹಿಂಡಲ್ಪಡುವುದು. ಮರುದ್ದೇವತೆಗಳನ್ನು ಉದ್ದೇಶಿಸಿದ ಸ್ತೋತ್ರವು ಪಠಿತವಾಗುತ್ತದೆ. ಅವರ ಹರ್ಷವೂ ಕೂಡ ಉಲ್ಬಣವಾಗುತ್ತದೆ.

## English Translation

The libation is poured out for the heroic band of Maruts at the sacrifice on the oppointed days and the hymn repeated causes joy to the Maruts.

### ವಿಶೇಷವಿಷಯಗಳು

**ವೀರಸ್ಯ—ಶತ್ರುಕ್ಷೇಪಣಕುಶಲಸ್ಯಾಸ್ಯ ಮರುದ್ಗಣಸ್ಯ ।** ಶತ್ರುಗಳನ್ನು ಜಯಿಸುವ ಸಾಮರ್ಥ್ಯವುಳ್ಳ ಮರುದ್ಗಣಕ್ಕೆ.

**ದಿವಿಷ್ಟಿಷು—ಇಷ್ಟಯಃ ಏಷಣಾನಿ ಗಮನಾನಿ । ದಿವೋ ದ್ಯೋತಮಾನಸ್ಯ ಸೂರ್ಯಸ್ಯೇಷ್ಟಯೋ ಯೇಷು ದಿವಸೇಷು ತೇ । ಯಜನೀಯ ದಿವಸೇಷು** ಯಜ್ಞಮಾಡುವ ದಿವಸಗಳಲ್ಲಿ.

**ಉಕ್ಥಂ**—ಮರುದ್ದೇವತಾಕವಾದ ಸ್ತೋತ್ರವು.

**ಶಸ್ಯತೇ—ಹೋತ್ರಾ ಪಠ್ಯತೇ ।** ಹೋತೃವೆಂಬ ಋತ್ವಿಜನಿಂದ ಪಠಿಸಲ್ಪಡುವುದು.

### ವ್ಯಾಕರಣಪ್ರಕ್ರಿಯಾ

**ಅಸ್ಯ**—ಇದಮ್ ಶಬ್ದ. ಷಷ್ಠೀಏಕವಚನದಲ್ಲಿ ಙಸ್ ಪ್ರತ್ಯಯ. **ತ್ಯದಾದೀನಾಮಃ** ಎಂಬುದರಿಂದ ಅತ್ವ. **ಅತೋ ಗುಣೇ** ಎಂಬುದರಿಂದ ಪರರೂಪ. ಅದಂತವಾದುದರಿಂದ ವಿಭಕ್ತಿಗೆ ಸ್ಯ ಆದೇಶ. ಹಲಾದಿ ವಿಭಕ್ತಿ ಪರದಲ್ಲಿ ಬಂದುದರಿಂದ **ಹಲಿ ಲೋಪಃ** (ಪಾ.ಸೂ. ೭-೨-೧೧೩) ಎಂಬುದರಿಂದ ಇದ್ ಎಂಬುದಕ್ಕೆ ಲೋಪ ಅಸ್ಯ ಎಂದು ರೂಪವಾಗುತ್ತದೆ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ದಿವಿಷ್ಟಿಷು**—ಇಷ್ಟಯಃ ಏಷಣಾನಿ ಗಮನಾನಿ. ಇಷ ಗತೌ ಧಾತು. ದಿವಾದಿ. ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯ. ಷ್ಟುತ್ವದಿಂದ ಪ್ರತ್ಯಯಕ್ಕೆ ಟಕಾರಾದೇಶ. ದಿವಃ ದ್ಯೋತಮಾನಸ್ಯ ಸೂರ್ಯಸ್ಯ ಇಷ್ಟಯೋ ಯೇಷು ದಿವಸೇಷು ತೇ ದಿವಿಷ್ಟಯಃ (ಹಗಲು ಎಂದರ್ಥ.) **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಸಮಾಸವಾದಾಗ ಸುಬ್ಲುಕ್ ಆಗುವುದರಿಂದ ದಿವ್ ಎಂಬುದಕ್ಕೆ ಪದಾಂತತ್ವ ಬರುವುದರಿಂದ **ದಿವ ಉತ್** ಸೂತ್ರದಿಂದ ಉತ್ವ ಬರಬೇಕಾಗುತ್ತದೆ. ಆದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಇಲ್ಲಿ ಬರುವುದಿಲ್ಲ. ಸಪ್ತಮೀ ಬಹುವಚನಾಂತ ರೂಪ.

**ಶಸ್ಯತೇ**—ಶಂಸು ಸ್ತುತೌ ಧಾತು. ಕರ್ಮಣಿಯಲ್ಲಿ ಲಟ್ ಪ್ರಥಮಪುರುಷ ಏಕವಚನದರೂಪ. ಯಕ್ ಕಿತ್ತಾದುದರಿಂದ **ಅನಿದಿತಾಂ ಹಲ**—ಎಂಬ ಸೂತ್ರದಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ತಿಙಂತ ನಿಘಾತಸ್ವರಬರುತ್ತದೆ. ॥ ೪ ॥



ಸಂಹಿತಾಪಾಠಃ

ಅಸ್ಯ ಶ್ರೋಷನ್ತ್ವಾ ಭುವೋ ವಿಶ್ವಾ ಯಶ್ಚರ್ಷಣೀರಭಿ ।
ಸೂರಂ ಚಿತ್ಸಸ್ರುಷೀರಿಷಃ ॥ ೫ ॥

॥ ಪದಪಾಠಃ ॥

ಅಸ್ಯ । ಶ್ರೋಷಂತು । ಆ । ಭುವಃ । ವಿಶ್ವಾಃ । ಯಃ । ಚರ್ಷಣೀಃ । ಅಭಿ ।
ಸೂರಂ । ಚಿತ್ । ಸಸ್ರುಷೀಃ । ಇಷಃ ॥ ೫ ॥

ಸಾಯಣಭಾಷ್ಯಂ

ಅಸ್ಯ ಯಜಮಾನಸ್ಯ ಸ್ತುತಿಂ ಮರುತ ಆ ಅಭಿಮುಖ್ಯೇನ ಶ್ರೋಷಂತು । ಶೃಣ್ವಂತು । ಯೋ ಮರುದ್ಗಣೋ ವಿಶ್ವಾಶ್ಚರ್ಷಣೀಃ ಸರ್ವಾನ್ ಶತ್ರುಭೂತಾನ್ಮನುಷ್ಯಾನಭಿ ಭುವಃ ಅಭಿಭವತಿ । ತಾದೃಗ್ಗಣಾಕಾರಾ ಮರುತಃ ಶೃಣ್ವಂತ್ವಿತ್ಯರ್ಥಃ । ಸೂರಂ ಚಿತ್ ಸ್ತುತೇಃ ಪ್ರೇರಯಿತಾರಂ ಯಜಮಾನಮಪೀಷೋ ಮರುದ್ಭಿಃ ಪ್ರತ್ತಾನ್ಯನ್ನಾನಿ ಸಸ್ರುಷೀಃ ಪ್ರಾಪ್ತಾನಿ ಭವಂತು ॥ ಶ್ರೋಷಂತು । ಶ್ರು ಶ್ರವಣೇ । ಲೋಟಿ ಸಿಬ್ಬಹುಲಂ ಲೇಟೀತಿ ಬಹುಲವಚನಾತ್ಸಿಪ್ । ಭುವಃ । ಭವತೇರ್ಲೇಟಿ ತಿಪಸ್ತಿಜಾಂ ತಿಜಗೋ ಭವಂತೀತಿ ಸಿಪ್ । ಲೇಟೋಽಡಾಟಾವಿತ್ಯಡಾಗಮಃ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ । ಸೂರಂ । ಷೂ ಪ್ರೇರಣೇ । ಸುಸೂಧಾಗೃಧಿಭ್ಯಃ ಕ್ರನ್ನಿತಿ ಕ್ರನ್ಪ್ರತ್ಯಯಃ । ಸಸ್ರುಷೀಃ । ಸ್ರು ಗತೌ । ಅಸ್ಮಾಲ್ಲಿಟಃ ಕ್ವಸುಃ । ಉಗಿತಶ್ಚೇತಿ ಙೀಪ್ । ಭಸಂಜ್ಞಾಯಾಂ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಮರುದ್ಗಣವು । **ವಿಶ್ವಾಃ ಚರ್ಷಣೀಃ**—ಮಾನವರಲ್ಲಿ ಶತ್ರುರೂಪರಾದ ಸಕಲರನ್ನೂ । **ಅಭಿಭುವಃ**—ಸೋಲಿಸಿ ದಮನಮಾಡುತ್ತದೆಯೋ, (ಆ ಮರುತ್ತುಗಳ ಗಣವು) । **ಅಸ್ಯ**—ಈ ಯಜಮಾನನ (ಸ್ತೋತ್ರವನ್ನು) । **ಆ ಶ್ರೋಷಂತು**—ಚೆನ್ನಾಗಿ ಕೇಳಲಿ. । **ಸೂರಂ ಚಿತ್**—ಸ್ತೋತ್ರಪಾಠಕನಾದ ಯಜಮಾನನನ್ನೂ ಸಹ । **ಇಷಃ**—(ಮರುತ್ತುಗಳಿಂದ ದತ್ತವಾದ) ಅನ್ನಗಳು । **ಸಸ್ರುಷೀಃ**—ಸೇರಿಕೊಳ್ಳಲಿ. ।

॥ ಭಾವಾರ್ಥ ॥

ಮಾನವರಲ್ಲಿ ಶತ್ರುರೂಪರಾದ ಸಕಲರನ್ನೂ ಸೋಲಿಸಿ ದಮನಮಾಡತಕ್ಕ ಮರುದ್ಗಣವು ಯಜಮಾನನ

ಸ್ತೋತ್ರವನ್ನು ಚೆನ್ನಾಗಿ ಕೇಳಲಿ. ಆ ಮರುತ್ತುಗಳಿಂದ ದತ್ತವಾದ ಅನ್ನಗಳೂ ಸಹ ಯಜಮಾನನನ್ನೂ ಸಮೃದ್ಧನನ್ನಾಗಿ ಮಾಡಲಿ.

## English Translation

May the Maruts, victorious over all men, hear the praises of this (their worshipper ) and may abundant food be obtained by him who praises them.

### ವಿಶೇಷವಿಷಯಗಳು

**ಅಭಿ ಭುವಃ**—ಯಜಮಾನನ ಶತ್ರುಗಳನ್ನು ಸೋಲಿಸುವ.

**ಸೂರಂ—ಸ್ತುತೇಃ ಪ್ರೇರಯಿತಾರಂ ।** ಸ್ತೋತ್ರಮಾಡುವ ಯಜಮಾನನನ್ನು.

**ವಿಶ್ವಾಃ ಚರ್ಷಣೀಃ**—ಸಮಸ್ತಮನುಷ್ಯರನ್ನೂ ಎಂದರೆ ಶತ್ರುಭೂತರಾದ ಸಮಸ್ತ ಮನುಷ್ಯರನ್ನು.

**ಸಸ್ರುಷೀಃ—ಸ್ರು ಗತೌ । ಪ್ರಾಪ್ತಾನಿ ಭವಂತು ।** ಸೇರಲಿ, ಬಂದು ತುಂಬಿಕೊಳ್ಳಲಿ.

### ॥ ವ್ಯಾಕರಣಪ್ರಕ್ರಿಯಾ ॥

**ಶ್ರೋಷಂತು**—ಶ್ರು ಶ್ರವಣೇ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ. ಉತ್ವ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಸೂತ್ರದಲ್ಲಿ ಬಹುಲಗ್ರಹಣವಿರುವುದರಿಂದ ಲೋಟಿನಲ್ಲಿಯೂ ಸಿಪ್ ಬರುತ್ತದೆ. ಧಾತುವಿಗೆ ಗುಣ. ಪ್ರತ್ಯಯಸಕಾರಕ್ಕೆ **ಆದೇಶಪ್ರತ್ಯಯಯೋಃ** ಎಂಬುದರಿಂದ ಷತ್ವ. ಶ್ರೋಷಂತು ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭುವಃ**—ಭೂ ಸತ್ತಾಯಾಂ ಧಾತು. ಲೇಟ್ ಪ್ರಥಮಪುರುಷದಲ್ಲಿ ತಿಪ್ ಬಂದಾಗ **ತಿಙಾಂ ತಿಙೋ ಭವಂತಿ** ಎಂಬ ವಚನದಿಂದ ಸಿಪ್ ಆದೇಶ ಬರುತ್ತದೆ. **ಲೇಟೋ ಡಾಟೌ** ಎಂಬುದರಿಂದ ಅದಕ್ಕೆ ಅಡಾಗಮ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಕೇವಲ ತಿಙ್ ಪರವಾಗುದರಿಂದ **ಭೂಸುವೋಸ್ತಿಙಿ** (ಪಾ. ಸೂ. ೭-೩-೮೮) ಎಂಬುದರಿಂದ ಗುಣ ಪ್ರತಿಷೇಧ ಬರುತ್ತದೆ. **ಇತಶ್ಚಲೋಪಃ ಪರಸ್ಮೈಪದೇಷು** ಎಂಬುದರಿಂದ ಪ್ರತ್ಯಯದ ಇಕಾರಕ್ಕೆ ಲೋಪಬಂದಾಗ ರುತ್ವವಿಸರ್ಗ ಬಂದು, ಧಾತುವಿನ ಉಕಾರಕ್ಕೆ ಉವಙಾದೇಶ ಬಂದರೆ, ಭುವಃ ಎಂದು ರೂಪವಾಗುತ್ತದೆ.

**ಸೂರಮ್**—ಷೂ ಪ್ರೇರಣೇ ಧಾತು. **ಸುಸೂಧಾಗೃಧಿಭ್ಯಃ ಕ್ರನ್** (ಉ. ಸೂ. ೨-೧೮೩) ಎಂಬುದರಿಂದ ಕ್ರನ್ ಪ್ರತ್ಯಯ. **ಧಾತ್ವಾದೇಃ ಷಃ ಸಃ**—ಸೂತ್ರದಿಂದ ಆದಿಗೆ ಸತ್ವ. ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಸಸ್ರುಷೀಃ**—ಸ್ರು ಗತೌ ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ **ಕ್ವಸುಶ್ಚ** ಎಂಬುದರಿಂದ ಕ್ವಸು ಪ್ರತ್ಯಯ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಸಸ್ರುವಸ್ ಶಬ್ದವಾಗುತ್ತದೆ. ಸ್ತ್ರೀತ್ವವಿವಕ್ಷಾ

ಮಾಡಿದಾಗ ಉಗಿತಶ್ಚ ಎಂಬುದರಿಂದ ಙೀಪ್. ಅಜಾದಿಪ್ರತ್ಯಯ ಬಂದುದರಿಂದ ಭಸಂಜ್ಞಾ ಬರುವುದರಿಂದ **ವಸೋಃ ಸಂಪ್ರಸಾರಣಮ್** ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. (ಉಕಾರಾದೇಶ) **ಸಂಪ್ರಸಾರಣಾಚ್ಚ** ಎಂಬ ಸೂತ್ರದಿಂದ ಪರದ ಅಕಾರಕ್ಕೆ ಪೂರ್ವರೂಪ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಪರದ ಸಕಾರಕ್ಕೆ ಷತ್ವ. ಸಪ್ರುಷೀಃ ಎಂದು ರೂಪವಾಗುತ್ತದೆ. ಪ್ರಥಮಾಬಹುವಚನದ ಜಸ್ ಪರವಾದಾಗ **ವಾ ಛಂದಸಿ** (ಪಾ. ಸೂ. ೬-೧-೧೦೬) ಎಂಬುದರಿಂದ ಪೂರ್ವಸವರ್ಣದೀರ್ಘ. ಸಪ್ರುಷೀಃ ಎಂದು ರೂಪವಾಗುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಪೂರ್ವೀಭಿರ್ಹಿ ದದಾಶಿಮ ಶರದ್ಭಿರ್ಮರುತೋ ವಯಂ ।
ಅವೋಭಿಶ್ಚರ್ಷಣೀನಾಂ ॥ ೬ ॥

ಪದಪಾಠಃ

ಪೂರ್ವೀಭಿಃ । ಹಿ । ದದಾಶಿಮ । ಶರತ್ಽಭಿಃ । ಮರುತಃ । ವಯಂ ।
ಅವಃಽಭಿಃ । ಚರ್ಷಣೀನಾಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಪೂರ್ವೀಭಿರ್ಬಹ್ವೀಭಿಃ ಶರದ್ಭಿಃ ಸಂವತ್ಸರೈಶ್ಚರ್ಷಣೀನಾಂ ಸರ್ವಸ್ಯ ದ್ರಷ್ಟೄಣಾಂ ಸರ್ವಜ್ಞಾನಾಂ ಭವತಾಂ ಸಂಬಂಧಿಭಿರವೋಭೀ ರಕ್ಷಣೈರ್ಯುಕ್ತಾಃ ಸಂತೋ ವಯಂ ದದಾಶಿಮ । ಯುಷ್ಮಭ್ಯಂ ಹವೀಂಷಿ ದತ್ತವಂತಃ । ಹಿ ಯಸ್ಮಾದರ್ಥೇ । ಯಸ್ಮಾದೇವಂ ತಸ್ಮಾದಿದಾನೀಮಸ್ಮದೀಯಹವಿಃಸ್ವೀಕರಣಾಯಾಗಚ್ಛತೇತ್ಯರ್ಥಃ ॥ ಪೂರ್ವೀಭಿಃ । ಪುರುಶಬ್ದಾದ್ವೋತೋ ಗುಣವಚನಾದಿತಿ ಙೀಷ್ । ಯಣಾದೇಶೇ ಹಲಿ ಚೇತಿ ದೀರ್ಘತ್ವಂ । ದದಾಶಿಮ । ದಾಶೃ ದಾನೇ । ಲಿಟೀಡಾಗಮಃ । ಹಿ ಚೇತಿ ನಿಘಾತಪ್ರತಿಷೇಧಃ । ಚರ್ಷಣೀನಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ ॥೬

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುತ್ತುಗಳೇ, । **ಪೂರ್ವೀಭಿಃ ಶರದ್ಭಿಃ**—ಅನೇಕ ವರ್ಷಗಳಿಂದ । **ಚರ್ಷಣೀನಾಂ**—ಸರ್ವಜ್ಞರಾದ ನಿಮ್ಮ । **ಅವೇಭಿಃ**—ರಕ್ಷಣೆಗಳಿಂದ (ಕೂಡಿದವರಾಗಿ) । **ವಯಂ**—ನಾವು । **ದದಾಶಿಮ**—(ನಿಮಗೆ ಹವಿಸ್ಸುಗಳನ್ನು) ಅರ್ಪಿಸಿದ್ದೇವೆ. । **ಹಿ**—ಆ ಕಾರಣದಿಂದಲೇ (ಈಗಲೂ ನಮ್ಮ ಹವಿಸ್ಸಿನ ಸ್ವೀಕಾರಕ್ಕಾಗಿ ದಯಮಾಡಿರಿ.) ।

ಭಾವಾರ್ಥ

ಎಲೈ ಮರುತ್ತುಗಳೇ, ನಾವು ಅನೇಕ ವರ್ಷಗಳಿಂದ ಸರ್ವಜ್ಞರಾದ ನಿಮ್ಮ ರಕ್ಷಣೆಗಳನ್ನು ಪಡೆದು ನಿಮಗೆ ಹವಿಸ್ಸುಗಳನ್ನು ಅರ್ಪಿಸುತ್ತಿದ್ದೇವೆ. ಈಗಲೂ ಸಹ ನಮ್ಮ ಹವಿಸ್ಸಿನ ಸ್ವೀಕಾರಕ್ಕಾಗಿ ದಯಮಾಡಿ.

## English Translation

O Maruts, enjoying the protection of you who behold all things we have offered you oblations for many years.

॥ ವಿಶೇಷವಿಷಯಗಳು ॥

**ಪೂರ್ವೀಭಿಃ**—ಪುರು ಎಂದರೆ ಬಹು. **ಬಹ್ವೀಭಿಃ** ಅನೇಕವಾದ, ಬಹಳವಾದ, ಎಂದರ್ಥವು.

**ಶರದ್ಭಿಃ**—ಈ ಶಬ್ದಕ್ಕೆ ಶರದೃತುಗಳಿಂದ ಎಂದು ಅರ್ಥವಿದ್ದರೂ ಶರದೃತುವು ಒಂದು ಸಂವತ್ಸರದಲ್ಲಿ ಒಂದಾವರ್ತಿ ಮಾತ್ರ ಇರುವುದರಿಂದ ಈ ಶಬ್ದವನ್ನು ಸಂವತ್ಸರಾರ್ಥವನ್ನು ಸೂಚಿಸುವುದಕ್ಕಾಗಿ ಪ್ರಯೋಗಿಸುವುದು ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಬಳಿಕೆಯಲ್ಲಿದೆ. ಆದುದರಿಂದ ಶರದ್ಭಿಃ ಎಂದರೆ ಸಂವತ್ಸರಗಳಿಂದ ಎಂಬ ಅರ್ಥವನ್ನು ಇಲ್ಲಿ ಹೇಳಬೇಕು. ಈ ಶಬ್ದವು ಈ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವ ಒಂದೆರಡು ಋಕ್ಕುಗಳನ್ನು ಉದಾಹರಣೆಗಾಗಿ ಕೆಳಗೆ ಕೊಟ್ಟಿದೆ—

**ತಚ್ಚಕ್ಷುರ್ದೇವಹಿತಂ ಶುಕ್ರಮುಚ್ಚರತ್ ।**
**ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಂ ॥**
(ಋ. ಸಂ. ೭-೬೬-೧೬)

**ಶತಂ ಜೀವ ಶರದೋ ವರ್ಧಮಾನಃ ಶತಂ ಹೇಮಂತಾಞ್ಛತಮು ವಸಂತಾನ್ ।**
**ಶತಮಿಂದ್ರಾಗ್ನೀ ಸವಿತಾ ಬೃಹಸ್ಪತಿಃ ಶತಾಯುಷಾ ಹವಿಷೇಮಂ ಪುನರ್ದುಃ ॥**
(ಋ. ಸಂ. ೧೦-೧೬೧-೪)

ಇತ್ಯಾದಿ. ಎರಡನೆಯ ಉದಾಹರಣೆಯಲ್ಲಿ ವಸಂತಋತುವನ್ನು ಸಹ ಉಪಯೋಗಿಸಲಾಗಿದೆ. ಸಾಧಾರಣವಾಗಿ ಸಂವತ್ಸರವನ್ನು ಸೂಚಿಸುವುದಕ್ಕಾಗಿ ಶರದೃತುವನ್ನೇ ಉಪಯೋಗಿಸುವುದು ರೂಢಿಯಾಗಿದೆ.

**ದದಾಶಿಮ**—**ದಾಶೃ ದಾನೇ** । **ಹವೀಂಷಿ ದತ್ತವಂತಃ** । ಹವಿಸ್ಸನ್ನರ್ಪಿಸಿದ್ದೇವೆ.

**ಚರ್ಷಣೀನಾಂ ಸರ್ವಸ್ಯ ದ್ರಷ್ಟ್ರೄಣಾಂ ಸರ್ವಜ್ಞಾನಾಂ ಭವತಾಂ** । ಸಮಸ್ತವನ್ನೂ ನೋಡುವ ಅಥವಾ ಸಮಸ್ತವನ್ನೂ ತಿಳಿದಿರುವ, ಸರ್ವಜ್ಞರಾದ.

ವ್ಯಾಕರಣಪ್ರಕ್ರಿಯಾ

**ಪೂರ್ವೀಭಿಃ**—ಪುರು ಶಬ್ದ. ಇದಕ್ಕೆ ಸ್ತ್ರೀತ್ವದಲ್ಲಿ **ವೋತೋಗುಣವಚನಾತ್** (ಪಾ. ಸೂ. ೪-೧-೪೪) ಎಂಬುದರಿಂದ ಙೀಷ್ ಪ್ರತ್ಯಯ. **ಇಕೋ ಯಣಚಿ**—ಸೂತ್ರದಿಂದ ಯಣಾದೇಶ ಬಂದಾಗ **ಹಲಿ ಚ** (ಪಾ. ಸೂ. ೮-೨-೭೭) ಎಂಬುದರಿಂದ ರೇಫದ ಪೂರ್ವಕ್ಕೆ ದೀರ್ಘ ಬರುತ್ತದೆ. ತೃತೀಯಾಏಕವಚನಾಂತದ ರೂಪ. ಪ್ರತ್ಯಯ ಸ್ವರದಿಂದ ಈಕಾರ ಉದಾತ್ತವಾಗುತ್ತದೆ.

**ದದಾಶಿಮ**— ದಾಶೃ ದಾನೇ ಧಾತು. ಲಿಟ್ ಉತ್ತಮಪುರುಷಬಹುವಚನದಲ್ಲಿ ಮಸ್ ಪ್ರತ್ಯಯ **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. ಧಾತುವಿಗೆ ಲಿಣ್ನಿಮಿತ್ತವಾಗಿ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ. ಹ್ರಸ್ವ. ದದಾಶಿಮ ಎಂದು ರೂಪವಾಗುತ್ತದೆ. ಹಿಂದೆ ಹಿ ಎಂಬ ನಿಪಾತವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತ ಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾದ ಪದವಾಗುತ್ತದೆ.

**ಅವೋಭಿಃ**—ಅವ ರಕ್ಷಣೇ ಧಾತು. ಸರ್ವಧಾತುನಿಬಂಧನವಾದ **ಅಸುನ್** ಪ್ರತ್ಯಯ. ಅವಸ್ ಶಬ್ದ ವಾಗುತ್ತದೆ. ತೃತೀಯಾಬಹುವಚನದಲ್ಲಿ ಸಕಾರಕ್ಕೆ ರುತ್ವ. ಉತ್ವ. ಗುಣ ನಿತ್ ಪ್ರ.ತ್ಯಯಾಂತವಾದುದ ರಿಂದ ಆದ್ಯುದಾತ್ತವಾಗುತ್ತದೆ.

**ಚರ್ಷಣೀನಾಂ**——ಷಷ್ಠೀ ಬಹುವಚನದಲ್ಲಿ ಆಮಿಗೆ ನುಡಾಗಮ. **ನಾಮಿ** ಎಂಬ ಸೂತ್ರದಿಂದ ಅಂಗಕ್ಕೆ ದೀರ್ಘ. **ನಾಮನ್ಯತರಸ್ಯಾಂ** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ (ವಿಭಕ್ತಿಗೆ) ಉದಾತ್ತರಸ್ವರಬರುತ್ತದೆ. ॥ ೬ ॥



ಸಂಹಿತಪಾಠ

ಸುಭಗಃ ಸ ಪ್ರಯಜ್ಯವೋ ಮರುತೋ ಅಸ್ತು ಮರ್ತ್ಯಃ ।
ಯಸ್ಯ ಪ್ರಯಾಂಸಿ ಪರ್ಷಥ ॥ ೭ ॥

ಪದಪಾಠಃ

ಸುऽಭಗಃ । ಸಃ । ಪ್ರऽಯಜ್ಯವಃ । ಮರುತಃ । ಅಸ್ತು । ಮರ್ತ್ಯಃ ।
ಯಸ್ಯ । ಪ್ರಯಾಂಸಿ । ಪರ್ಷಥ ॥ ೭ ॥

॥ ಸಾಯಣಭಾಷ್ಯಂ ॥

ಹೇ ಪ್ರಯಜ್ಯವಃ ಪ್ರಕರ್ಷೇಣ ಯಷ್ಟವ್ಯಾ ಮರುತಃ ಸ ಮರ್ತ್ಯೋ ಮನುಷ್ಯೋ ಯಜಮಾನಃ ಸುಭಗೋऽಸ್ತು । ಶೋಭನಧನೋ ಭವತು । ಯಸ್ಯ ಯಜಮಾನಸ್ಯ ಪ್ರಯಾಂಸಿ ಹವಿರ್ಲಕ್ಷಣಾನ್ಯನ್ನಾನಿ ಪರ್ಷಥ ಆತ್ಮನಿ ಸಿಂಚಥ । ಸ್ವೀಕುರುಥೇತ್ಯರ್ಥಃ ॥ ಸುಭಗಃ ಭಗ ಇತಿ ಧನನಾಮ । ಶೋಭನೋ ಭಗೋ ಯಸ್ಯ । ಕ್ರತ್ವಾದಯಶ್ಚೇತ್ಯುತ್ತರಪದಾದ್ಯುದಾತ್ತತ್ವಂ । ಪರ್ಷಥ । ಪೃಷು ವೃಷು ಮೃಷು ಸೇಚನೇ । ಭೌವಾದಿಕಃ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ ॥

ಪ್ರತಿಪದಾರ್ಥ

**ಪ್ರಯಜ್ಯವಃ**— ಶ್ರೇಷ್ಠವಾದ ಯಜ್ಞಗಳಿಗೆ ಅರ್ಹರಾದ । **ಮರುತಃ**—ಎಲೈ ಮರುತ್ತುಗಳೇ, । **ಯಸ್ಯ,** ಯಾವ ಯಜಮಾನನ । **ಪ್ರಯಾಂಸಿ**— ಹವಿಸ್ಸಿನರೂಪದ ಅನ್ನಗಳನ್ನು । **ಪರ್ಷಥ**—ಪಾನಾರ್ಥವಾಗಿ ಸ್ವೀಕರಿಸುತ್ತೀರೋ । **ಸಃ**—ಆ ಮಾನವನಾದ ಯಜಮಾನನು । **ಸುಭಗಃ**—ಶ್ರೇಷ್ಠವಾದ ಧನವುಳ್ಳವನಾಗಿ । **ಅಸ್ತು**—ಆಗಲಿ. ।

ಭಾವಾರ್ಥ

ಎಲೈ ಮರುತ್ತುಗಳೇ, ನೀವು ಶ್ರೇಷ್ಠವಾದ ಯಜ್ಞಗಳಿಗೆ ಅರ್ಹರಾಗಿದ್ದೀರಿ. ಯಾವ ಯಜಮಾನನ ಹವಿಸ್ಸಿನ ರೂಪದ ಅನ್ನಗಳನ್ನು ಪಾನಾರ್ಥವಾಗಿ ಸ್ವೀಕರಿಸುತ್ತಿರೋ ಆ ಮಾನವನಾದ ಯಜಮಾನನು ಶ್ರೇಷ್ಠವಾದ ಸಂಪತ್ತುಗಳಿಂದ ಕೂಡಿರಲಿ.—

English Translation

O Maruts, who are to be especially worshipped, may the man whose offering you accept be ever prosperous.

॥ ವಿಶೇಷವಿಷಯಗಳು ॥

**ಪ್ರಯಜ್ಯವಃ**— **ಪ್ರಕರ್ಷೇಣ ಯಷ್ಟವ್ಯಾಃ** । ಚೆನ್ನಾಗಿ ಯಜ್ಞಗಳಿಂದ ಆರಾಧಿಸಲ್ಪಡುವ, ಯಜ್ಞಾರ್ಹರಾದ.

**ಪ್ರಯಾಂಸಿ**—ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಪ್ರಯಃ ಎಂಬ ಶಬ್ದವು ಪಠಿತವಾಗಿರುವುದರಿಂದ ಪ್ರಯಾಂಸಿ ಎಂದರೆ ಹವಿರ್ಲಕ್ಷಣೋಪೇತವಾದ ಅನ್ನಗಳನ್ನು ಎಂದರ್ಥವು. (ನಿ. ೨-೯)

**ಪರ್ಷಥ—ಪೃಷು, ವೃಷು ಮೃಷು ಸಿಂಚನೇ । ಸಿಂಚಥ । ಪ್ರಾಪ್ನುಥ ।** ಸ್ವೀಕರಿಸಿ ಎಂದರ್ಥವು.

**ಸುಭಗಃ**—ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಭಗಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೯) ಸುಭಗಃ ಎಂದರೆ ಉತ್ತಮವಾದ ಧನವುಳ್ಳವನು.

ವ್ಯಾಕರಣಪ್ರಕ್ರಿಯಾ

**ಸುಭಗಃ**—ಶೋಭನೋ ಭಗೋ (ಧನಂ) ಯಸ್ಯ ಸುಭಗಃ **ನಞ್ಸುಭ್ಯಾಂ** ಎಂಬುದರಿಂದ ಬರುವ ಸ್ವರವು ಬಾಧಿತವಾಗಿ **ಕೃತ್ಯಾದಯಶ್ಚ** (ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಪ್ರಯಜ್ಯವಃ—ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಸ್ತು**—ಅಸ ಭುವಿ ಧಾತು. ಅದಾದಿ. ಲೋಟ್ ಪ್ರಥಮಪುರುಷ ಬಹುವಚನದಲ್ಲಿ **ಏರುಃ** ಎಂಬುದರಿಂದ ಉತ್ವ. ತಿಙಂತನಿಘಾತಸ್ವರ ಬರುತ್ತದೆ.

**ಪರ್ಷಥ—ಪೃಷು** ವೃಷು ಮೃಷು ಸೇಚನೇ ಧಾತು. ಭ್ವಾದಿ. ಲೇಟ್ ಮಧ್ಯಮಪುರುಷ ಬಹುವಚನ ಪರವಾದಾಗ ಧಾತುವಿನ ಲಘೂಪಧೆಗೆ ಗುಣ ಬರುತ್ತದೆ. ಯಸ್ಯ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅನುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ಥ) **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ. ॥ ೭ ॥



ಸಂಹಿತಾಪಾಠಃ

ಶಶಮಾನಸ್ಯ ವಾ ನರಃ ಸ್ವೇದಸ್ಯ ಸತ್ಯಶವಸಃ ।
ವಿದಾ ಕಾಮಸ್ಯ ವೇನತಃ ॥ ೮ ॥

ಪದಪಾಠಃ

ಶಶಮಾನಸ್ಯ । ವಾ । ನರಃ । ಸ್ವೇದಸ್ಯ । ಸತ್ಯಽಶವಸಃ ।
ವಿದ । ಕಾಮಸ್ಯ । ವೇನತಃ ॥ ೮ ॥

ಸಾಯಣಭಾಷ್ಯಂ

ಹೇ ಸತ್ಯಶವಸೋಽವಿತಥಬಲಾ ನರೋ ನೇತಾರೋ ಮರುತಃ ಶಶಮಾನಸ್ಯ ಯುಷ್ಮಾನ್ಸ್ತುತಿಭಿಃ ಸಂಭಜಮಾನಸ್ಯ ಸ್ವೇದಸ್ಯ ಸ್ತಾವಕಮಂತ್ರೋಚ್ಚಾರಣಜನಿತೇನ ಶ್ರಮೇಣ ಸ್ವಿದ್ಯಮಾನಗಾತ್ರಸ್ಯ ವೇನತಃ । ವೇನತಿಃ ಕಾಂತಿಕರ್ಮಾ । ಕಾಮಯಮಾನಸ್ಯ । ವಾಶಬ್ದಃ ಸಮುಚ್ಚಯೇ । ಏವಂಭೂತಸ್ಯ ಸ್ತೋತುಃ ಕಾಮಸ್ಯ ಕಾಮಮಭಿಲಾಷಂ ವಿದ । ಲಂಭಯತ । ಪ್ರಯಚ್ಛತೇತ್ಯರ್ಥಃ ॥ ಶಶಮಾನಸ್ಯ । ಶಶ ಪ್ಲುತಗತೌ । ತಾಚ್ಛೀಲಿಕಶ್ಚಾನಶ್ । ಸ್ವೇದಸ್ಯ । ಞಿಷ್ವಿದಾ ಗಾತ್ರಪ್ರಕ್ಷರಣೇ ಅಂತರ್ಭಾವಿತಣ್ಯರ್ಥಾತ್ಕರ್ಮಣಿ ಘಞ್ । ಞಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ವಿದ । ವಿದ್ಲೃ ಲಾಭೇ । ಲೋಟಿ ಮಧ್ಯಮಪುರುಷಬಹುವಚನಸ್ಯ ವ್ಯತ್ಯಯೇನ ಝಾದೇಶಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಝಸ್ಯಾದಾದೇಶಃ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಪ್ರತ್ಯಯಾದ್ಯುದಾತ್ತತ್ವಂ । ಪಾದಾದಿತ್ವಾನ್ನಿಘಾತಾಭಾವಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಕಾಮಸ್ಯ । ವೃಷಾದಿಷು ಪಾಠಾದಾದ್ಯುದಾತ್ತತ್ವಂ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ ॥

ಪ್ರತಿಪದಾರ್ಥ

**ಸತ್ಯಶವಸಃ**—ನಿಜವಾದ ಬಲವುಳ್ಳವರೂ । **ನರಃ**—ನೇತೃಗಳೂ ಆದ ಎಲೈ ಮರುತ್ತುಗಳೇ, । **ಶಶಮಾನಸ್ಯ**—(ನಿಮ್ಮನ್ನು) ಸ್ತೋತ್ರಗಳಿಂದ ಪೂಜಿಸುವವನೂ । **ಸ್ವೇದಸ್ಯ**—(ನಿಮ್ಮ ಪೂಜಾಕರ್ಮಗಳಿಂದ) ಶ್ರಮಿಸಿ ಬೆವರು ಸುರಿಸುವವನೂ । **ವೇನತಃ**—(ನಿಮ್ಮ ಅನುಗ್ರಹವನ್ನು) ಅಪೇಕ್ಷಿಸುವವನೂ ಆದ ಭಕ್ತನ । **ಕಾಮಸ್ಯ**—ಇಷ್ಟಾರ್ಥವನ್ನು । **ವಿದ**—ತಿಳಿದುಕೊಂಡು (ಒದಗಿಸಿ) ।

ಭಾವಾರ್ಥ

ನಿಜವಾದ ಬಲವುಳ್ಳವರೂ, ನೇತೃಗಳೂ ಆದ ಎಲೈ ಮರುತ್ತುಗಳೇ, ನಿಮ್ಮನ್ನು ಸ್ತೋತ್ರಗಳಿಂದ ಪೂಜಿಸುವವನೂ, ನಿಮ್ಮ ಪೂಜಾಕರ್ಮಗಳಿಂದ ಯಾವಾಗಲೂ ಶ್ರಮಿಸುವವನೂ ಮತ್ತು ನಿಮ್ಮ ಅನುಗ್ರಹವನ್ನು ಅಪೇಕ್ಷಿಸುವವನೂ ಆದ ನಿಮ್ಮ ಭಕ್ತನ ಇಷ್ಟಾರ್ಥವೇನೆಂದು ತಿಳಿದುಕೊಂಡು ಅದನ್ನು ಅನುಗ್ರಹಿಸಿರಿ.

## English Translation

Possessors of true vigor, pay attention to the wishes of him who praises you and toils in your service desiring your favour.

ವಿಶೇಷವಿಷಯಗಳು

**ಶಶಮಾನಸ್ಯ—ಶನ್ಸು ಸ್ತುತೌ । ಸ್ತುತಿಕರಣಶೀಲಸ್ಯ ।** ನಿಮ್ಮನ್ನು ಸ್ತೋತ್ರಮಾಡುವ ಯಜಮಾನನ.

**ನರಃ—ನೇತಾರಃ ।** ನಾಯಕರು, ಮುಖಂಡರು.

**ಸತ್ಯಶವಸಃ**—ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಶವಸ್ ಎಂಬ ಶಬ್ದವು ಪಠಿತವಾಗಿರುವುದರಿಂದ ಶವಃ ಎಂದರೆ ಬಲವು. **ಸತ್ಯಂ ಶವಃ ಯೇಷಾಂತೇ ಸತ್ಯಶವಸಃ** ನಿಜವಾದ ಅಥವಾ ಶ್ರೇಷ್ಠವಾದ ಬಲವುಳ್ಳವರು ಎಂದಭಿಪ್ರಾಯವು.

**ಸ್ವೇದಸ್ಯ**—ಸ್ವೇದ ಎಂದರೆ ಬೆವರು. ಸ್ವೇದಸ್ಯ ಎಂದರೆ ನಿಮ್ಮನ್ನು ಸ್ತೋತ್ರಾದಿಗಳಿಂದ ಆರಾಧನೆಮಾಡಿ ಆ ಶ್ರಮದಿಂದ ಉಂಟಾದ ಬೆವರಿನಿಂದ ಕೂಡಿದ ಯಜಮಾನನ ಎಂದರ್ಥವು.

**ವೇನತಃ—ವೇನತಿಃ ಕಾಂತಿಕರ್ಮಾ ।** ಅಪೇಕ್ಷಿಸುವ, ಎಂದರೆ ನಿಮ್ಮನ್ನು ಸ್ತೋತ್ರಮಾಡಲಪೇಕ್ಷಿಸುವ ಯಜಮಾನನ.

ವ್ಯಾಕರಣಪ್ರಕ್ರಿಯಾ

**ಶಶಮಾನಸ್ಯ**—ಶಶ ಪ್ಲುತಗತೌ ಧಾತು. ತಾಚ್ಛೀಲ್ಯಾರ್ಥದಲ್ಲಿ **ತಾಚ್ಛೀಲ್ಯವಯೋ**—(ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್. **ಆನೇಮುಕ್** ಎಂಬುದರಿಂದ ಮುಕಾಗಮ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಸ್ವೇದಸ್ಯ**—ಞಿಷ್ವಿದಾ ಗಾತ್ರಪ್ರಕ್ಷರಣೇ ಧಾತು. ಣಿಜರ್ಥವು (ಪ್ರೇರಣಾ) ಧಾತ್ವರ್ಥದಲ್ಲಿ ಅಂತರ್ಭೂತವಾಗಿರುವಾಗ ಕರ್ಮಣಿಯಲ್ಲಿ ಘಞ್ ಪ್ರತ್ಯಯ. ಆರ್ಧಧಾತುಕ ನಿಬಂಧನವಾಗಿ ಧಾತುವಿನ ಲಘೂಪಧೆಗೆ ಗುಣ. ಧಾತ್ವಾದಿಗೆ ಸತ್ವ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸತ್ಯಶವಸಃ**— ಸತ್ಯಂ ಶವಃ ಯೇಷಾಂ ತೇ ಸತ್ಯಶವಸಃ ಸಂಬೋಧನಾಬಹುವಚನಾಂತರೂಪ **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

ವಿದಾ—ವಿದ್ಲೃ ಲಾಭೇ ಧಾತು. ಲೋಟ್ ಮಧ್ಯಮಪುರುಷ ಬಹುವಚನ ಪ್ರತ್ಯಯಕ್ಕೆ ವ್ಯತ್ಯಯದಿಂದ ಝಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ **ಆತ್ಮನೇಪದೇಷ್ವನತಃ** ಎಂಬುದರಿಂದ ಅಕಾರದ ಪರದಲ್ಲಿಲ್ಲದಿರುವುದರಿಂದ ಝಪ್ರತ್ಯಯಕ್ಕೆ ಅತಾದೇಶ. **ಸಾರ್ವಧಾತುಕಮಪಿತ್**— ಸೂತ್ರದಿಂದ ಪ್ರತ್ಯಯವು ಙಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ವಿದತ ಎಂದಿರುವಾಗ **ಲೋಪಸ್ತ ಆತ್ಮನೇಪದೇಷು**—ಎಂಬುದರಿಂದ ಪ್ರತ್ಯಯಾವಯವ ತಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ದಕಾರೋತ್ತರಾಕಾರವು ಉದಾತ್ತವಾಗುತ್ತದೆ. ವಿದ ಎಂದಿರುವಾಗ **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ದ್ವ್ಯಚ್ಕವಾಗಿರುವುದರಿಂದ ಅಂತ್ಯ ದೀರ್ಘ ಬರುತ್ತದೆ.

**ಕಾಮಸ್ಯ**—ಷಷ್ಠೀ ಏಕವಚನಾಂತರೂಪ. ವೃಷಾದಿಯಲ್ಲಿ ಪಾಠಮಾಡಿರುವುದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಂಪ್ರದಾನವಿಧಾಯಕಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಂ** ಎಂಬ ವಚನದಿಂದ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬರುತ್ತದೆ. ॥ ೮ ॥

ಸಂಹಿತಾಪಾಠಃ

ಯೂಯಂ ತತ್ಸತ್ಯಶವಸ ಆವಿಷ್ಕರ್ತ ಮಹಿತ್ವನಾ ।
ವಿಧ್ಯತಾ ವಿದ್ಯುತಾ ರಕ್ಷಃ ॥ ೯ ॥

॥ ಪದಪಾಠಃ ॥

ಯೂಯಂ । ತತ್ । ಸತ್ಯಽಶವಸಃ । ಆವಿಃ । ಕರ್ತ । ಮಹಿಽತ್ವನಾ ।
ವಿಧ್ಯತ । ವಿಽದ್ಯುತಾ । ರಕ್ಷಃ ॥ ೯ ॥

ಸಾಯಣಭಾಷ್ಯಂ

ಹೇ ಸತ್ಯಶವಸಃ ಸತ್ಯಬಲಾ ಅನ್ಯೈರಪ್ರಧೃಷ್ಯಬಲಾ ಮರುತೋ ಯೂಯಂ ತದ್ವೃತ್ರವಧಾದಿಷು ಪ್ರಸಿದ್ಧಂ ಯುಷ್ಮದೀಯಂ ಮಾಹಾತ್ಮ್ಯಮಾವಿಷ್ಕರ್ತ । ಆವಿಷ್ಕುರುತ । ಪ್ರಕಾಶಯತ । ವಿದ್ಯುತಾ ವಿದ್ಯೋತಮಾನೇನ ಮಹಿತ್ವನಾ ತೇನ ಮಹತ್ತ್ವೇನ ಮಾಹಾತ್ಮ್ಯೇನ ರಕ್ಷೋಽಸ್ಮಾಕಮುಪದ್ರವಕಾರಿಣಂ ರಾಕ್ಷಸಾದಿಕಂ ವಿಧ್ಯತ । ತಾಡಯತ । ನಾಶಯತೇತ್ಯರ್ಥಃ ॥ ಕರ್ತ । ಕರೋತೇರ್ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ತಪ್ತನಪ್ತನಥನಾಶ್ಚೇತಿ ತಬಾದೇಶಃ । ಗುಣಃ । ಇದುದುಪಧಸ್ಯ ಚಾಪ್ರತ್ಯಯಸ್ಯ । ಪಾ. ೮-೩-೪೧ । ಇತ್ಯಾವಿಃಶಬ್ದೇ ವಿಸರ್ಜನೀಯಸ್ಯ ಷತ್ವಂ । ಮಹಿತ್ವನಾ । ಭಾವಪ್ರತ್ಯಯಾದುತ್ತರಸ್ಯಾಟೋ ವ್ಯತ್ಯಯೇನ ನಾಭಾವ ಉದಾತ್ತತ್ವಂ ಚ । ಯದ್ವಾ । ಸುಪಾಂ ಸುಲುಗಿತಿ ತೃತೀಯಾಯಾ ಆಜಾದೇಶೋ ನಕಾರೋಪಜನಶ್ಚ । ವಿಧ್ಯತ । ವ್ಯಧ ತಾಡನೇ । ಶ್ಯನಿ ಗ್ರಹಿಜ್ಯಾದಿನಾ ಸಂಪ್ರಸಾರಣಂ । ತಶಬ್ದಸ್ಯ ಸಾರ್ವಧಾತುಕಮಪಿದಿತಿ ಙಿತ್ತ್ವೇ ಸತಿ ಋಚಿ ತುನುಘಮಕ್ಷುತಙ್ಕುತ್ರೇತಿ ಸಂಹಿತಾಯಾಂ ದೀರ್ಘಃ ॥

### ಪ್ರತಿಪದಾರ್ಥ

**ಸತ್ಯಶವಸಃ**—(ಶತ್ರುಗಳಿಂದ ಅಪ್ರತಿಹತವಾದ) ನಿಜವಾದ ಪರಾಕ್ರಮವುಳ್ಳ ಮರುತ್ತುಗಳೇ, । **ಯೂಯಂ**—ನೀವು । **ತತ್**—(ವೃತ್ರವಧಾದಿಕಾಲಗಳಲ್ಲಿ ಪ್ರಸಿದ್ಧವಾದ) ಆ ಮಹಾತ್ಮ್ಯವನ್ನು । **ಆವಿಷ್ಕರ್ತಾ**—ಪ್ರಕಾಶಪಡಿಸಿದ್ದೀರಿ. । **ವಿದ್ಯುತಾ**—ಪ್ರಕಾಶಮಾನವಾದ । **ಮಹಿತ್ವನಾ**—ಆ ಮಾಹಾತ್ಮ್ಯದಿಂದ । **ರಕ್ಷಃ**—(ನಮಗೆ ಹಿಂಸಕರಾದ) ರಾಕ್ಷಸರನ್ನು । **ವಿಧ್ಯತ**—ನಾಶಮಾಡಿರಿ.

### ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ನಿಜವಾದ ಬಲವು ಶತ್ರುಗಳಿಂದ ಅಪ್ರತಿಹತವಾದದ್ದು. ವೃತ್ರವಧಾದಿ ಕಾಲಗಳಲ್ಲಿ ನೀವು ನಿಮ್ಮ ಮಾಹಾತ್ಮ್ಯವನ್ನು ಪ್ರಕಾಶಪಡಿಸಿದ್ದೀರಿ. ಪ್ರಕಾಶಮಾನವಾದ ಆ ಮಹಾತ್ಮ್ಯದಿಂದ ನಮಗೆ ಹಿಂಸಕರಾದ ರಾಕ್ಷಸರನ್ನು ನಾಶಮಾಡಿರಿ.

### English Translation

Possessors of true vigor, you have displayed your might with the brilliance of which you have destroyed the Rakshas.

### ವಿಶೇಷ ವಿಷಯಗಳು

**ಸತ್ಯಶವಸಃ**—ಈ ಶಬ್ದದ ವಿವರಣೆಯು ಹಿಂದಿನ ಋಕ್ಕಿನಲ್ಲಿ ಉಕ್ತವಾಗಿದೆ. ಇತರರಿಂದ ಎಂದರೆ ಶತ್ರುಗಳಿಂದ ಸಹಿಸಲಶಕ್ಯವಾದ ಬಲವುಳ್ಳವರು ಎಂದರೆ ಅತ್ಯಂತ ಪರಾಕ್ರಮಯುತರಾದವರು ಎಂದರ್ಥವು.

**ಆವಿಷ್ಕರ್ತ— ಆವಿಷ್ಕುರುತ, ಪ್ರಕಾಶಯತ** । ಪ್ರಕಾಶಪಡಿಸಿದ್ದೀರಿ ಎಂದರೆ ಎಲ್ಲರಿಗೂ ತಿಳಿಯುವಂತೆ ಸ್ಪಷ್ಟಪಡಿಸಿದ್ದೀರಿ.

**ಮಹಿತ್ವನಾ**—ಮಾಹಾತ್ಮ್ಯೆಯಿಂದ, ಶ್ರೇಷ್ಠತೆಯಿಂದ.

**ವಿಧ್ಯತ—ವ್ಯಧ ತಾಡನೇ । ತಾಡಯತ ನಾಶಯತೇತ್ಯರ್ಥಃ** । ತಾಡನಮಾಡಿ ಎಂದರೆ ನಾಶಮಾಡಿ ಈ ಶಬ್ದದ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ರಕ್ಷಃ**—ರಾಕ್ಷಸಾದಿಗಳು, ಪಿಶಾಚಿಗಳು, ಮನುಷ್ಯರಿಗೆ ಕೇಡನ್ನು ಬಯಸುವ ದುಷ್ಟಭೂತಗಳು, evil spirits.

### ವ್ಯಾಕರಣಪ್ರಕ್ರಿಯಾ

**ಕರ್ತ**—ಡುಕೃಞ್ ಕರಣೇ ಧಾತು. ಲೋಣ್ಮಧ್ಯಮಪುರುಷ ಬಹುವಚನಕ್ಕೆ ಲಙ್ವದ್ಭಾವವಿರುವುದರಿಂದ ತಾದೇಶ. **ಬಹುಲಂ ಛಂದಸಿ**—ಸೂತ್ರದಿಂದ ವಿಕರಣಕ್ಕೆ (ಉ) ಲುಕ್. **ತಪ್ತನಪ್ತನಥನಾಶ್ಚ** ( ಪಾ. ಸೂ.

೮-೧-೪೫) ಎಂಬುದರಿಂದ ವಿಭಕ್ತಿಗೆ ತಬಾದೇಶ. ಪಿತ್ತಾದುದರಿಂದ ಙಿದ್ವದ್ಭಾವ ಬರುವುದಿಲ್ಲ. ಆಗ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ. **ತಿಙ್ಙತಿಙಃ**—ಎಂಬುದರಿಂದ ನಿಘಾತ ಸ್ವರ ಬರುತ್ತದೆ. ಕರ್ತ ಎಂದು ರೂಪವಾಗುತ್ತದೆ. ಆವಿಸ್ ಎಂಬುದು ಪೂರ್ವದಲ್ಲಿರುವಾಗ ಸಕಾರಕ್ಕೆ ರುತ್ವ. ವಿಸರ್ಗ. **ಇದುದುಪಧಸ್ಯ ಚಾಪ್ರತ್ಯಯಸ್ಯ** (ಪಾ. ಸೂ. ೮-೩-೪೧) ಎಂಬುದರಿಂದ ಪ್ರತ್ಯಯಭಿನ್ನ ಸಂಬಂಧಿ ವಿಸರ್ಗವಾದುದರಿಂದ ಷತ್ವ ಬರುತ್ತದೆ. ಆವಿಷ್ಕರ್ತ ಎಂದು ರೂಪವಾಗುತ್ತದೆ.

**ಮಹಿತ್ವನಾ** — ಮಹಿತ್ವ+ಟಾ ಎಂದಿರುವಾಗ ವ್ಯತ್ಯಯದಿಂದ ತೃತೀಯಾವಿಕವಚನಕ್ಕೆ ನಾಭಾವವೂ ಉದಾತ್ತಸ್ವರವೂ ಬರುತ್ತದೆ. ಅಥವಾ **ಸುಪಾಂ ಸುಲುಕ್**—ಸೂತ್ರದಿಂದ ತೃತೀಯಾವಿಭಕ್ತಿಗೆ ಆಙ್ ಆದೇಶ. ನಕಾರಾಗಮ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ.

ವಿಧ್ಯತಾ—ವ್ಯಧ ತಾಡನೇ ಧಾತು. ಲೋಟ್ ಮಧ್ಯಮಪುರುಷ ಬಹುವಚನಕ್ಕೆ **ತಸ್‌ಥಸ್‌ಥ**—ಸೂತ್ರದಿಂದ ತಾದೇಶ. **ದಿವಾದಿಭ್ಯಃ ಶ್ಯನ್** ಎಂಬುದರಿಂದ ಶ್ಯನ್ ವಿಕರಣ. **ಸಾರ್ವಧಾತುಕಪಿತ್**—ಸೂತ್ರದಿಂದ ಇದು ಙಿತ್ತಾಗುವುದರಿಂದ **ಗ್ರಹಿಜ್ಯಾವಯಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ (ಯಕಾರಕ್ಕೆ) ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ವಿಧ್ಯತ ಎಂದು ರೂಪವಾದಾಗ ಪ್ರತ್ಯಯ ಙಿತ್ತಾದುದರಿಂದ **ಋಚಿ ತುನುಘ ಮಕ್ಷು ತಙ್**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿರುವುದರಿಂದ ಪ್ರತ್ಯಯವು ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ. ॥ ೯ ॥

---

ಸಂಹಿತಾಪಾಠಃ

ಗೂಹತಾ ಗುಹ್ಯಂ ತಮೋ ವಿ ಯಾತ ವಿಶ್ವಮತ್ರಿಣಂ ।
ಜ್ಯೋತಿಷ್ಕರ್ತಾ ಯದುಶ್ಮಸಿ ॥ ೧೦ ॥

ಪದಪಾಠಃ

ಗೂಹತ । ಗುಹ್ಯಂ । ತಮಃ । ವಿ । ಯಾತ । ವಿಶ್ವಂ । ಅತ್ರಿಣಂ ।
ಜ್ಯೋತಿಃ । ಕರ್ತ । ಯತ್ । ಉಶ್ಮಸಿ ॥ ೧೦ ॥

ಸಾಯಣಭಾಷ್ಯ

ಹೇ ಮರುತೋ ಗುಹ್ಯಂ ಗುಹಾಯಾಂ ಸ್ಥಿತಂ ಸರ್ವತ್ರ ವ್ಯಾಪ್ಯ ವರ್ತಮಾನಂ ತಮೋಽಂಧಕಾರಂ ಗೂಹತ । ಸಂವೃತಂ ಕುರುತ । ಯಥಾಸ್ಮಾಭಿರ್ನ ದೃಶ್ಯತೇ ತಥಾಽದರ್ಶನಂ ಪ್ರಾಪಯತ । ವಿನಾಶಯತೇ ತ್ಯರ್ಥಃ । ವಿಶ್ವಂ ಸರ್ವಮತ್ರಿಣಮತ್ತಾರಂ ರಾಕ್ಷಸಾದಿಕಂ ವಿ ಯಾತ । ವಿವಿಧಂ ಯಾಪಯತ । ಅಸ್ಮತ್ಸಕಾಶಾನ್ನಿರ್ಗಮಯತ । ಯಜ್ಜ್ಯೋತಿಃ ಸೂರ್ಯಾದಿಕಂ ವಯಮುಶ್ಮಸಿ ಕಾಮಯಾಮಹೇ ತತ್ಕರ್ತ । ಕುರುತ । ಯದ್ವಾ । ಗುಹ್ಯಂ ಗುಹಾಯಾಂ ಶರೀರಾಂತರ್ಗತಗುಹಾರೂಪೇ ಹೃದಯೇ ಭವಂ ತಮೋ ಭಾವರೂಪಾಜ್ಞಾನಂ । ತದ್ಗೂಹತ । ವಿನಾಶಯತ । ಅತ್ರಿಣಂ ಪುರುಷಾರ್ಥಸ್ಯಾತ್ತಾರಂ ಕಾಮ-ಕ್ರೋಧಾದಿಕಂ ಸರ್ವಂ ವಿನಿರ್ಗಮಯತ । ಯಜ್ಜ್ಯೋತಿಃ ಪರತತ್ತ್ವಸಾಕ್ಷಾತ್ಕಾರರೂಪಂ ಜ್ಞಾನಂ ಕಾಮಯಾಮಹೇ ಪ್ರಾಣಾಪಾನಾದಿಪಂಚವೃತ್ತಿರೂಪಾ ಹೇ ಮರುತಸ್ತತ್ಕರ್ತ । ಕುರುತ ॥ ಗೂಹತ । ಗುಹೂ ಸಂವರಣೇ । ಶಪಿ ಲಘೂಪಧಗುಣ ಊದುಪಧಾಯಾ ಗೋಹಃ । ಪಾ. ೬-೪-೮೯ । ಇತ್ಯುಪ-ಧಾಯಾ ಊಕಾರಃ । ಯಾತ । ಯಾ ಪ್ರಾಪಣೇ । ಅಸ್ಮಾದಂತರ್ಭಾವಿತಣ್ಯರ್ಥಾಲ್ಲೋಟ್ । ಅತ್ರಿಣಂ । ಅದೇಸ್ತ್ರಿನಿ ಚ । ಉ. ೪-೬೮ । ಇತಿ ತ್ರಿನಿಪ್ರತ್ಯಯಃ । ಉಶ್ಮಸಿ । ವಶ ಕಾಂತೌ । ಇದಂತೋ ಮಸಿಃ । ಅದಾದಿತ್ವಾಚ್ಛಪೋ ಲುಕ್ । ಗ್ರಹಿ ಜ್ಯಾದಿನಾ ಸಂಪ್ರಸಾರಣಂ ॥೧೦

॥ ಪ್ರತಿಪದಾರ್ಥ ॥

ಗುಹ್ಯಂ—(ಎಲೈ ಮರುತ್ತುಗಳೇ) ಗುಹೆಯಲ್ಲಿ ಮರೆಸಿಕೊಂಡು (ಅನಂತರ ಸಕಲ ಜಾಗದಲ್ಲೂ ವ್ಯಾಪಿಸ ತಕ್ಕ) **ತಮಃ**—ಕಗ್ಗತ್ತಲೆಯನ್ನು । **ಗೂಹತ**- (ನಮ್ಮಿಂದ ಮರೆಯಾಗುವಂತೆ ಮಾಡಿರಿ. (ನಾಶಮಾಡಿರಿ) ವಿಶ್ವಂ **ಅತ್ರಿಣಂ**—ಸರ್ವಭಕ್ಷಕರಾದ ರಾಕ್ಷಸಾದಿಗಳನ್ನು । **ವಿ ಯಾತ**—ನಾನಾ ದಿಕ್ಕುಗಳಿಗೆ ಓಡಿಸಿರಿ । **ಯತ್ ಜ್ಯೋತಿಃ**—ಸೂರ್ಯಾದಿ ಯಾವ ತೇಜಸ್ಸುಗಳನ್ನು । **ಉಶ್ಮಸಿ**—(ನಾವು) ಅಪೇಕ್ಷಿಸುತ್ತೇವೆಯೋ, । **ಕರ್ತ**—ಅವೆಲ್ಲ ವನ್ನೂ ಉಂಟುಮಾಡಿರಿ. ।

ಅಥವಾ

**ಗುಹ್ಯಂ**—(ಎಲೈ ಮರುತ್ತುಗಳೇ ಶರೀರದೊಳಗೆ) ಗುಹಾರೂಪವಾದ ಹೃದಯದಲ್ಲಿ ಇರತಕ್ಕ । **ತಮಃ**-ಅಜ್ಞಾನರೂಪವಾದ ಕತ್ತಲೆಯನ್ನು । **ಗೂಹತ**—ನಾಶಮಾಡಿರಿ. । **ಅತ್ರಿಣಂ**—ಪುರುಷಾರ್ಥಗಳನ್ನು ಮರೆಸುವ ಕಾಮಕ್ರೋಧಾದಿಗಳನ್ನು । **ವಿ ಯಾತ**—ದೂರ ಓಡಿಸಿರಿ. । **ಯತ್ ಜ್ಯೋತಿಃ**—ಯಾವ ಪರತತ್ತ್ವದ ಸಾಕ್ಷಾತ್ಕಾರಕ್ಕೆ ಸಾಧನವಾದ ಜ್ಯೋತಿಯನ್ನು । **ಉಶ್ಮಸಿ**—ಅಪೇಕ್ಷಿಸುತ್ತೇವೆಯೋ. । **ಕರ್ತ**—ಅದನ್ನು ನಮಗೆ ಉಂಟು ಮಾಡಿರಿ. ।

ಭಾವಾರ್ಥ

ಎಲೈ ಮರುತ್ತುಗಳೇ, ಗುಹೆಯಲ್ಲಿ ಮರೆಸಿಕೊಂಡು ಅನಂತರ ಸರ್ವಪ್ರದೇಶಗಳಲ್ಲಿಯೂ ವ್ಯಾಪಿಸತಕ್ಕ ಕಗ್ಗತ್ತಲೆಯನ್ನು ನಾಶಮಾಡಿರಿ ಸರ್ವಭಕ್ಷಕರಾದ ರಾಕ್ಷಸಾದಿಗಳನ್ನು ನಾನಾ ದಿಕ್ಕಿಗೆ ಓಡಿಸಿರಿ. ನಾವು ಸೂರ್ಯನೆ ಮೊದಲಾದ ಯಾವ ಯಾವ ತೇಜಸ್ಸುಗಳನ್ನು ಅಪೇಕ್ಷಿಸುತ್ತೇವೆಯೋ ಅವೆಲ್ಲವನ್ನೂ ಉಂಟುಮಾಡಿರಿ.

## English Translation

Disperse the darkness concealing every where ; drive away every devouring enemy ; show us the light we long for.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಭಾಷ್ಯಕಾರರು ಎರಡು ವಿಧವಾದ ಅರ್ಥಗಳನ್ನು ಹೇಳಿರುವರು. ತಮಃ ಎಂಬ ಶಬ್ದಕ್ಕೆ ಸಾಧಾರಣಾರ್ಥವಾದ ಕತ್ತಲೆಯೆಂದೂ ಅಜ್ಞಾನವೆಂದೂ ಅರ್ಥಮಾಡಿ ಅದಕ್ಕನುಸಾರವಾಗಿ ವಿವರಣೆ ಮಾಡಿರುವರು.

**ಗುಹ್ಯಂ—ಗುಹಾಯಾಂ ಸ್ಥಿತಂ। ಸರ್ವತ್ರ ವ್ಯಾಪ್ಯಮಾನಂ।** ಅವಿತುಕೊಂಡಿರತಕ್ಕ ಎಂದರೆ ಯಾರಿಗೂ ಕಾಣಿಸದಂತೆ ರಹಸ್ಯಪ್ರದೇಶದಲ್ಲಿರುವ. ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ರಹಸ್ಯವಾಗಿರುವ ಎಂಬ ಅರ್ಥ ವನ್ನು ಸೂಚಿಸುವ ಸಂದರ್ಭದಲ್ಲಿ **ಗುಹ್ಯಂ, ಗುಹಾ ಹಿತಂ** ಎಂಬ ಶಬ್ದಗಳ ಪ್ರಯೋಗವು ವಿಶೇಷವಾಗಿರುವುದು.

**ಗೂಹತ—ಸಂವೃತಂ ಕುರುತ। ಗುಹೂ ಸಂವರಣೇ। ಅಪನಯೇತ್ಯರ್ಥಃ।** ನಿವಾರಣೆ ಮಾಡಿ ಕತ್ತಲನ್ನು ಹೋಗಲಾಡಿಸಿ.

**ಅತ್ರಿಣಂ—ಸರ್ವಮತ್ತಾರಂ ರಾಕ್ಷಸಾದಿಕಂ।** ಎಲ್ಲ ಪ್ರಾಣಿಗಳನ್ನು ಭಕ್ಷಿಸುವ ರಾಕ್ಷಸಾದಿಗಳನ್ನು.

ವ್ಯಾಕರಣಪ್ರಕ್ರಿಯಾ

**ಗೂಹತ**—ಗುಹೂ ಸಂವರಣೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷ ಬಹುವಚನಕ್ಕೆ ತಾದೇಶ **ಕರ್ತರಿಶಪ್** ಎಂಬುದರಿಂದ ಶಪ್ ವಿಕರಣ. ಸಾರ್ವಧಾತುಕ ನಿಬಂಧನವಾಗಿ **ಪ್ರಗಂತಲಘೂಪಧಸ್ಯ ಚ** ಎಂಬುದ ರಿಂದ ಲಘೂಪಧಗುಣ ಬಂದಾಗ **ಊದುಪಧಾಯಾ ಗೋಹಃ** (ಪಾ. ಸೂ. ೬-೪-೮೯) ಎಂಬುದರಿಂದ ಉಪಧೆಗೆ ಊಕಾರಾದೇಶ. ಗೂಹತ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರದಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಯಾತ**—ಯಾ ಪ್ರಾಪಣೇ ಧಾತು. ಇದಕ್ಕೆ ಣಿಜರ್ಥವು ( ಪ್ರೇರಣಾ ) ಧಾತ್ವರ್ಥಾಂತರ್ಭೂತವಾಗಿರು ವಾಗ ಲೋಟ್. ಮಧ್ಯಮಪುರುಷಬಹುವಚನದಲ್ಲಿ ತಾದೇಶ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ವಿಕರಣಕ್ಕೆ ಲುಕ್. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅತ್ರಿಣಮ್**—ಅದ ಭಕ್ಷಣೇ ಧಾತು. **ಅದೇಸ್ತ್ರಿನಿ ಚ** (ಉ. ಸೂ. ೪-೫೦೮) ಎಂಬುದರಿಂದ ತ್ರಿನಿ ಪ್ರತ್ಯಯ. ಅತ್ರಿನ್ ಶಬ್ದವಾಗುತ್ತದೆ. ಪ್ರತ್ಯಯಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಉಶ್ಮಸಿ**—ವಶ ಕಾಂತೌ ಧಾತು. ಅದಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ಸಾರ್ವಧಾತುಕಮಪಿತ್** ಎಂಬುದರಿಂದ ಅದು ಙಿತ್ತಾದುದರಿಂದ **ಗ್ರಹಿಜ್ಯಾವಯಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ (ವಕಾರಕ್ಕೆ) ಸಂಪ್ರಸಾರಣ. ಅದಾದಿಯಾದುದರಿಂದ ಶಪಿಗೆ ಲುಕ್. **ಇದಂತೋಮಸಿ** (ಪಾ. ಸೂ. ೭-೧-೪೬) ಎಂಬುದರಿಂದ ಪ್ರತ್ಯಯಕ್ಕೆ ಇಕಾಗಮ. ಉಶ್ಮಸಿ ಎಂದು ರೂಪವಾಗುತ್ತದೆ. ಯದ್ವೋಗ

ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಕಾರೋತ್ತರಾಕಾರವು ಉದಾತ್ತವಾಗುತ್ತದೆ. ॥ ೧೦ ॥

---

# ಎಂಭತ್ತೇಳನೆಯ ಸೂಕ್ತವು

---

**ಪ್ರತ್ವಕ್ಷಸ ಇತಿ ಷಡೃಚಂ ತೃತೀಯಂ ಸೂಕ್ತಂ ಗೋತಮಸ್ಯಾರ್ಷಂ ಜಾಗತಂ ಮಾರುತಂ । ತಥಾ ಚಾನುಕ್ರಾಂತಂ । ಪ್ರತ್ವಕ್ಷಸಃ ಷಡ್ಜಾಗತಮಿತಿ ॥ ಅಗ್ನಿಷ್ಟೋಮ ಆಗ್ನಿಮಾರುತಶಸ್ತ್ರ ಇದಂ ಸೂಕ್ತಂ ಮಾರುತನಿವಿದ್ಧಾನಂ । ಅಥ ಯಥೇತಮಿತಿ ಖಂಡೇ ಸೂತ್ರಿತಂ। ಪ್ರತ್ವಕ್ಷಸಃ ಪ್ರತವಸೋ ಯಜ್ಞಾ ಯಜ್ಞಾ ವೋ ಅಗ್ನಯೇ । ಆ. ೫-೨೦- । ಇತಿ ॥**

ಅನುವಾದವು—**ಪ್ರತ್ವಕ್ಷಸಃ** ಎಂಬುವುದು ಈ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು ಈ ಸೂಕ್ತಕ್ಕೆ ಗೋತಮನು ಋಷಿಯು, ಮರುದ್ದೇವತೆಗಳು, ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ **ಪ್ರತ್ವಕ್ಷಸಃ ಷಡ್ಜಾಗತಂ** ಎಂದು ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ಆಗ್ನಿಮಾರುತಶಸ್ತ್ರಮಂತ್ರ ಪಠನಕಾಲದಲ್ಲಿ ಮಾರುತನಿವಿದ್ಧಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂತ್ರದ **ಅಥ ಯಥೇತಂ** ಎಂಬ ಖಂಡದಲ್ಲಿ **ಪ್ರತ್ವಕ್ಷಸಃ ಪ್ರತ್ವವಸೋ ಯಜ್ಞಾ ಯಜ್ಞಾ ವೋ ಅಗ್ನಯೇ** ಎಂಬ ಸೂತ್ರದಿಂದ ವಿಶ್ವತವಾಗಿರುವುದು. (ಆ-೫-೨೦)

---

॥ ಓಂ ॥

## ಸೂಕ್ತ—೮೭

ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೮೭ ॥

ಅಷ್ಟಕ—೧ ॥ ಅಧ್ಯಾಯ—೬ ॥ ವರ್ಗ—೧೩ ।'

ಸೂಕ್ತದಲ್ಲಿರುವ ಋಕ್ಸಂಖ್ಯೆ—೬

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ಇಂದ್ರಃ ॥

॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಪ್ರತ್ವಕ್ಷಸಃ ಪ್ರತವಸೋ ವಿರಪ್ಶಿನೋಽನಾನತಾ ಅವಿಥುರಾ ಋಜೀಷಿಣಃ ।
ಜುಷ್ಟತಮಾಸೋ ನೃತಮಾಸೋ ಅಂಜಿಭಿರ್ವ್ಯಾನಜ್ರೇ ಕೇಚಿದುಸ್ರಾಇವ ಸ್ತೃಭಿಃ ॥ ೧ ॥

ಪದಪಾಠಃ

ಪ್ರಽತ್ವಕ್ಷಸಃ । ಪ್ರಽತವಸಃ । ವಿಽರಪ್ಶಿನಃ । ಅನಾನತಾಃ । ಅವಿಥುರಾಃ । ಋಜೀಷಿಣಃ ।
ಜುಷ್ಟಽತಮಾಸಃ । ನೃಽತಮಾಸಃ । ಅಂಜಿಽಭಿಃ । ವಿ । ಆನಜ್ರೇ । ಕೇ । ಚಿತ್ । ಉಸ್ರಾಃಽಇವ । ಸ್ತೃಭಿಃ ॥ ೧ ॥

॥ ಸಾಯಣಭಾಷ್ಯಂ ॥

ಪ್ರತ್ವಕ್ಷಸಃ ಶತ್ರೂಣಾಂ ಪ್ರಕರ್ಷೇಣ ತನೂಕರ್ತಾರಃ । ಶತ್ರುಘಾತಿನ ಇತ್ಯರ್ಥಃ । ಯತಃ ಪ್ರತವಸಃ ಪ್ರಕೃಷ್ಟಬಲೋಪೇತಾ ಅತ ಏವ ವಿರಪ್ಶಿನೋ ವಿವಿಧೇನ ಜಯಘೋಷೇಣೋಪೇತಾಃ । ಯದ್ವಾ । ಮಹನ್ನಾಮೈತತ್ । ಮಹಾಂತೋ ಹಿ ವಿವಿಧೈಃ ಶಬ್ದೈಃ ಪ್ರಶಸ್ಯಂತೇ । ಅತ ಏವಾನಾನತಾ ಆನತಿರಹಿತಾಃ । ಸರ್ವೋತ್ಕೃಷ್ಟಾ ಇತ್ಯರ್ಥಃ । ಅವಿಥುರಾ ಅವಿಯುಕ್ತಾಃ । ಸಪ್ತಗಣರೂಪೇಣ ಸಂಘೀಭೂತಾ ಇತ್ಯರ್ಥಃ । ಋಜೀಷಿಣಃ । ತೃತೀಯಸವನೇ ಋಜೀಷಸ್ಯಾಭಿಷವಾತ್ ತತ್ರ ಚ ಮರುತಃ ಸ್ತೂಯಂತ ಇತಿ ತೇಷಾಮೃಜೀಷಿತ್ವಂ । ಯದ್ವಾ । ಋಜೀಷಿಣಃ ಪ್ರಾರ್ಜಯಿತಾರೋ ರಸಾನಾಂ । ಜುಷ್ಟತಮಾಸೋಽತಿಶಯೇನ ಯಷ್ಟೃಭಿಃ ಸೇವಿತಾಃ ನೃತಮಾಸೋಽತಿಶಯೇನ ಮೇಘಾದೇರ್ನೇತಾರಃ ಏವಂಭೂತಾ ಮರುತಃ ಸ್ತೃಭಿಃ ಸ್ವಶರೀರಸ್ಯಾಚ್ಛಾದಕೈರಂಜಿಭೀ ರೂಪಾಭಿವ್ಯಂಜಕೈರಾಭರಣೈರ್ವ್ಯಾನಜ್ರೇ। ನಭಸಿ ವ್ಯಕ್ತಾ ದೃಶ್ಯಂತೇ । ತತ್ರ ದೃಷ್ಟಾಂತಃ । ಕೇ ಚಿದುಸ್ರಾ ಇವ । ಯೇ ಕೇಚನ ಸೂರ್ಯರಶ್ಮಯೋ ಯಥಾ ನಭಸಿ ದೀಪ್ಯಂತೇ ತದ್ವತ್ ॥ ಪ್ರತ್ವಕ್ಷಸಃ । ಪ್ರಕರ್ಷೇಣ ತ್ವಕ್ಷಂತೇ ತನೂಕುರ್ವಂತೀತಿ ಪ್ರತ್ವಕ್ಷಸಃ।

**ತಕ್ಷೂ ತ್ವಕ್ಷೂ ತನೂಕರಣೇ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತ್ಯಸುನ್ ಪೂರ್ವಪದಪ್ರಕೃತಿಸ್ವರತ್ವಂ ಚ । ಪ್ರತವಸಃ । ತವ ಇತಿ ಬಲನಾಮ । ಪ್ರಕೃಷ್ಟಂ ತವೋ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವಿರಪ್ಶಿನಃ । ರಪ ಲಪ ಜಲ್ಪ ವ್ಯಕ್ತಾಯಾಂ ವಾಚಿ । ವಿರಪಣಂ ವಿರಪ್ಶಃ । ಔಣಾದಿಕಃ ಶಕ್ಪ್ರತ್ಯಯಃ । ತದ್ವಂತೋ ವಿರಪ್ಶಿನಃ । ಅನಾನತಾಃ । ಆನತಾ ಅವನತಾಃ ಪ್ರಹ್ವೀಭೂತಾಃ । ನ ಆನತಾ ಅನಾನತಾಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅವಿಥುರಾಃ । ವ್ಯಥ ಭಯಚಲನಯೋಃ। ವ್ಯಥೇಃ ಸಂಪ್ರಸಾರಣಂ ಧಃ ಕಿಚ್ಚ । ಉ ೧-೪೦ । ಇತ್ಯುರಚ್ ಪ್ರತ್ಯಯಃ । ಅತ್ರ ತು ಬಹುಲವಚನಾದ್ವತ್ವಂ ನ ಕ್ರಿಯತೇ । ಪೂರ್ವವತ್ಸಮಾಸಸ್ವರೌ । ಜುಷ್ಟತಮಾಸಃ । ನಿತ್ಯಂ ಮಂತ್ರ ಇತಿ ಜುಷ್ಟಶಬ್ದ ಆದ್ಯುದಾತ್ತಃ । ತತ್ರ ಆತಿಶಾಯನಿಕಸ್ಯ ತಮಪಃ ಪಿತ್ತ್ವಾದನುದಾತ್ತತ್ವೇ ಸ ಏವ ಸ್ವರಃ ಶಿಷ್ಯತೇ। ಆನಜ್ರೇ। ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು । ಕರ್ಮಣಿ ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಿಟ್ । ಅತ ಆದೇರಿತ್ಯಭ್ಯಾಸಸ್ಯಾತ್ವಂ । ತಸ್ಮಾನ್ನುಡ್ದ್ವಿಹಲಃ । ಪಾ. ೭-೪-೭೧ । ಇತಿ ನುಟ್ । ವ್ಯತ್ಯಯೇನೋಪಧಾಲೋಪಃ । ಇರಯೋ ರೇ । ಸ್ತೃಭಿಃ । ಸ್ತೃಞ್ ಆಚ್ಛಾದನೇ । ಕ್ವಿಪ್ । ಆಗಮಾನುಶಾಸನಸ್ಯಾನಿತ್ಯತ್ವಾತ್ತುಗಭಾವಃ ॥**

॥ ಪ್ರತಿಪದಾರ್ಥ ॥

**ಪ್ರತ್ವಕ್ಷಸಃ**—ಶತ್ರುನಾಶಕರೂ । **ಪ್ರತವಸಃ** ಶ್ರೇಷ್ಠವಾದ ಬಲದಿಂದ ಕೂಡಿದವರೂ, । **ವಿರಪ್ಶಿನಃ**—ವಿವಿಧವಾದ ಜಯಘೋಷಣೆಗಳನ್ನು ಮಾಡುವವರೂ ಅಥವಾ ವಿವಿಧವಾದ ಶಬ್ದಗಳಿಂದ ಹೊಗಳಲ್ಪಡುವ ಮಾಹಾತ್ಮ್ಯವುಳ್ಳವರೂ (ಆದ್ದರಿಂದಲೇ) । **ಅನಾನತಾಃ**—ಯಾರಿಗೂ ತಲೆಬಾಗದೇ (ಸರ್ವೋತ್ಕೃಷ್ಟರಾಗಿರುವವರೂ) । **ಅವಿಥುರಾಃ**—(ಯಾವಾಗಲೂ) ಬೇರೆಯಾಗದೇ ಕೂಡಿಕೊಂಡಿರುವವರೂ । **ಋಜೀಷಿಣಃ**—ತೃತೀಯಸವನಕಾಲದಲ್ಲಿ ಒಟ್ಟಿಗೆ ಸೋಮರಸವನ್ನು ಪಾನಮಾಡತಕ್ಕವರೂ । **ಜುಷ್ಟತಮಾಸಃ**—(ಯಜ್ಞಕರ್ತರಿಂದ) ಅತಿಶಯವಾಗಿ ಸೇವಿಸಲ್ಪಡುವವರೂ । **ನೃತಮಾಸಃ**—ಮೇಘಗಳಿಗೆ ಮುಂದಾಳುಗಳೂ ಆದ ಮರುತ್ತುಗಳು । **ಸ್ತೃಭಿಃ**—(ತಮ್ಮ) ಶರೀರಗಳನ್ನು ಮುಚ್ಚಿಕೊಂಡಿರುವುವೂ । **ಅಂಜಿಭಿಃ**—(ತಮ್ಮ ಸೌಂದರ್ಯವನ್ನು) ಪ್ರಕಾಶಪಡಿಸುವುವೂ ಆದ ಆಭರಣಗಳಿಂದ । **ಕೇಚಿತ್ ಉಸ್ರಾ ಇವ**—(ಪ್ರಸಿದ್ಧಗಳಾದ) ಕೆಲವು ಸೂರ್ಯಕಿರಣಗಳಂತೆ । **ವ್ಯಾನಜ್ರೇ**—(ಅಂತರಿಕ್ಷದಲ್ಲಿ) ಪ್ರಧಾನವಾಗಿ ಕಾಣುತ್ತಾರೆ.

ಭಾವಾರ್ಥ

ಮರುತ್ತುಗಳು ಶತ್ರುನಾಶಕರು, ಶ್ರೇಷ್ಠವಾದ ಬಲದಿಂದ ಕೂಡಿದವರು. ವಿವಿಧವಾದ ಜಯಘೋಷವನ್ನು ಮಾಡಿಕೊಂಡು ಯಾರಿಗೂ ತಲೆಬಾಗದಿರುವ ಉತ್ಕೃಷ್ಟಸ್ಥಾನವನ್ನಾಕ್ರಮಿಸಿರುವರು. ಯಾವಾಗಲೂ ಪ್ರತ್ಯೇಕವಾಗದೇ ಅವರಲ್ಲೂ ತೃತೀಯಸವನಕಾಲದಲ್ಲಿ ಒಟ್ಟಿಗೆ ಸೇರಿಕೊಂಡು ಸೋಮರಸವನ್ನು ಪಾನಮಾಡುವವರು. ಯಜ್ಞಕರ್ತರಿಂದ ಅತಿಶಯವಾಗಿ ಸೇವಿಸಲ್ಪಡುವವರು ಮೇಘಗಳಿಗೆ ಮುಂದಾಳುಗಳು. ಇಂತಹ ಮರುತ್ತುಗಳು ತಮ್ಮ ಸೌಂದರ್ಯವನ್ನು ಪ್ರಕಾಶಪಡಿಸುವ ಆಭರಣಗಳಿಂದ ಆಕಾಶದಲ್ಲಿ ಪ್ರಸಿದ್ಧವಾದ ಕೆಲವು ಸೂರ್ಯಕಿರಣಗಳು ಅಂತರಿಕ್ಷದಲ್ಲಿ ಪ್ರಧಾನವಾಗಿ ಕಾಣುವಂತೆ ಇವರೂ ಸಹ ಅತ್ಯಂತ ಪ್ರಮುಖರಾಗಿ ಕಾಣುತ್ತಾರೆ.

## English Translation

Annihilators of adversaries, endowed with great strength, loud-shouting unbending, unseperable partakers of the evening oblations, constantly worshipped and leaders of the clouds, the Maruts, by their personal decorations are conspicuous in the sky like some rays of the Sun.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಮರುತಃ ಎಂಬ ಶಬ್ದವಿಲ್ಲದಿದ್ದರೂ, **ಪ್ರತ್ವಕ್ಷಸಃ,, ಪ್ರತವಸಃ,** ವಿರಪ್ಶಿನಃ **ಅನಾನತಾಃ ಅವಿಥುರಾಃ, ಋಜೀಷಿಣಃ, ಜುಷ್ಟತಮಾಸಃ, ನೃತಮಾಸಃ,** ಎಂಬ ಎಂಟು ಶಬ್ದಗಳೂ ಮರುದ್ದೇವತೆಗಳ ಗುಣಗಳನ್ನು ಹೇಳುವ ವಿಶೇಷಣಪದಗಳಾಗಿರುವುವು.

**ಪ್ರತ್ವಕ್ಷಸಃ**—**ತಕ್ಷೂ ತಕ್ಷೂ ತನೂಕರಣೇ । ಪ್ರಕರ್ಷೇಣ ತ್ವಕ್ಷಂತೇ ತನೂಕುರ್ವಂತೀತಿ ಪ್ರತ್ವಕ್ಷಸಃ । ಶತ್ರೂಣಾಂ ಪ್ರಕರ್ಷೇಣ ತನೂಕರ್ತಾರಃ ।** ಶತ್ರುಗಳನ್ನು ನಾಶಮಾಡುವವರು.

**ಪ್ರತವಸಃ**—ತವಸ್ ಎಂದರೆ ಬಲವು. (ನಿ. ೩-೯) **ಪ್ರಕೃಷ್ಟಂ ತವೋ ಯೇಷಾಂ ।** ಹೆಚ್ಚಾದ ಅಥವಾ ಉತ್ಕೃಷ್ಟವಾದ ಬಲವುಳ್ಳವರು.

**ವಿರಪ್ಶಿನಃ—ರಪ ಲಪ ಜಲ್ಪ ವ್ಯಕ್ತಾಯಾಂ ವಾಚಿ । ವಿರಪಣಂ ವಿರಪ್ಶಃ । ತದ್ವಂತೋ ವಿರಪ್ಶಿನಃ ವಿವಿಧೇನ ಜಯಘೋಷೇಣೋಪೇತಾಃ ।** ನಾನಾವಿಧವಾದ ಜಯಘೋಷದಿಂದ ಯುಕ್ತರಾದವರು. ಅಥವಾ ವಿರಪ್ಶಿನ್ ಎಂದರೆ ಮಹನ್ನಾಮವು (ನಿ. ೩-೧೩) ಆದುದರಿಂದ ವಿರಪ್ಶಿನಃ ಎಂದರೆ ಮಹಾಂತಃ ದೊಡ್ಡವರು, ಶ್ರೇಷ್ಠರು ಎಂದರ್ಥವು.

**ಅನಾನತಾಃ—ಆನತಾ ಅವನತಾಃ ಪ್ರಹ್ವೀಭೂತಾಃ । ನ ಆನತಾಃ ಅನಾನತಾಃ । ಅನತಿರಹಿತಾಃ । ಸರ್ವೋತ್ಕೃಷ್ಟಾ ಇತ್ಯರ್ಥಃ ।** ಆನತಾಃ ಅಥವಾ ಅವನತಾಃ ಎಂದರೆ ಬಗ್ಗಿ ನಮಸ್ಕಾರಮಾಡುವವರು. ಅನಾನತಾಃ ಎಂದರೆ ಯಾರಿಗೂ ಬಗ್ಗಿ ನಮಸ್ಕಾರಮಾಡದಿರುವವರು. ಎಂದರೆ ಸರ್ವೋತ್ಕೃಷ್ಟರಾದವರು ಎಂದರ್ಥವು.

**ಅವಿಥುರಾಃ—ವ್ಯಥ ಭಯಚಲನಯೋಃ । ಅವಿಯುಕ್ತಾಃ ।** ಬೇರೆಯಾಗಿಲ್ಲದಿರುವವರು. ಎಂದರೆ ಎಂದರೆ ಈ ಮರುತ್ತುಗಳು ಸಂಘರೂಪದಲ್ಲಿ ಒಟ್ಟಾಗಿ ಸೇರಿರುವರು, ಸಪ್ತಗಣರೂಪದಿಂದ ಸಂಘೀಭೂತವಾಗಿ ಇರತಕ್ಕವರು. ಈ ಶಬ್ದಕ್ಕೆ **ಅಭೀರವಃ** ಭಯರಹಿತರು ಎಂಬ ಅರ್ಥವನ್ನೂ ಹೇಳಬಹುದು.

ಋಜೀಷಿಣಃ—**ಋಜೀಷವಸ್ಯಾಭಿಷವಾತ್ ತತ್ರ ಚ ಮರುತಃ ಸ್ತೂಯಂತ ಇತಿ ತೇಷಾಮೃಜೀಷಿತ್ವಂ । ಯದ್ವಾ ಋಜೀಷಿಣಃ ಪ್ರಾರ್ಜಯಿತಾರೋ ರಸಾನಾಂ ।** ಈ ಶಬ್ದಕ್ಕೆ ಯಾಸ್ಕರು—

**ಋಜೀಷೀ ಸೋಮೋ ಯತ್ ಸೋಮಸ್ಯ ಪೂಯಮಾನಸ್ಯಾತಿರಿಚ್ಯತೇ ತದೃಜೀಷಮಪಾರ್ಜಿತಂ ಭವತಿ ತೇನರ್ಜೀಷೀ ಸೋಮಃ ॥**

ಎಂದು ನಿರ್ವಚನವನ್ನು ಹೇಳಿರುವರು. ಋಜೀಷಿ ಎಂದರೆ ಸೋಮವು. ಸೋಮರಸವನ್ನು ಹಿಂಡುವಾಗ ಲತೆಯಲ್ಲಿರುವ ಅಸಾರವಸ್ತುಗಳನ್ನು ಬೇರ್ಪಡಿಸಿ ಸಾರಭೂತವಾದ ರಸವನ್ನು ಮಾತ್ರ ಪ್ರತ್ಯೇಕಿಸಿ ಉಂಟಾಗಿರುವುದರಿಂದ ಋಜೀಷಿ ಎಂದರೆ ಸೋಮವು ಎಂದು ಹೇಳಿರುವರು. ಇಲ್ಲಿ ಋಜೀಷಿಣಃ ಎಂಬ ಶಬ್ದಕ್ಕೆ ಭಾಷ್ಯಕಾರರು ಹೇಳಿರುವಂತೆ ತೃತೀಯಸವನದಲ್ಲಿ ಸೋಮಪಾನಮಾಡತಕ್ಕ ಮರುದ್ದೇವತೆಗಳು ಎಂದಭಿಪ್ರಾಯವು.

**ಜುಷ್ಟತಮಾಸಃ—ಜುಷೀ ಪ್ರೀತಿಸೇವನಯೋಃ । ಅತಿಶಯೇನ ಯಷ್ಟೃಭಿಃ ಸೇವಿತಾಃ ।** ಯಜ್ಞಮಾಡುವ ಯಜಮಾನರಿಂದ ಅತಿಶಯವಾಗಿ ಸೇವಿಸಲ್ಪಡುವವರು. ಅಥವಾ ಯಜಮಾನರಿಗೆ ಪ್ರೀತಿಪಾತ್ರರಾದವರು.

**ನೃತಮಾಸಃ—ಅತಿಶಯೇನ ಮೇಘಾದೇರ್ನೇತಾರಃ**—ಮೇಘಾದಿಗಳ ಚಲನವಲನಗಳವಿಷಯದಲ್ಲಿ ಅತಿಶಯವಾಗಿ ಕಾರಣಕರ್ತರಾದವರು, ಮುಖಂಡರು, ನಾಯಕರು. ಎಂದರೆ ಗಾಳಿಯು ಬೀಸುವುದಕ್ಕನುಸಾರವಾಗಿ ಮೇಘಗಳ ಚಲನವಲನಗಳಿರುವವು ಎಂದಭಿಪ್ರಾಯವು.

ಅಂಜಿಭಿಃ—**ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು । ರೂಪಾಭಿವ್ಯಂಜಕೈರಾಭರಣೈಃ ।** ಶರೀರದ ಕಾಂತಿಯನ್ನು ಹೆಚ್ಚಿಸುವ ಅಂಜನಾದಿ (ಕಪ್ಪು) ಸೌಂದರ್ಯಸಾಮಗ್ರಿಗಳಿಂದ, ಆಭರಣಗಳಿಂದ.

**ಸ್ತೃಭಿಃ—ಸ್ತೃಞ್ ಆಚ್ಛಾದನೇ ।** ಶರೀರವನ್ನು ಮುಚ್ಚುವ, ಮರೆಮಾಡುವ. ಈ ಶಬ್ದವು ಅಂಜಿಭಿಃ ಎಂಬ ಶಬ್ದಕ್ಕೆ ವಿಶೇಷಣವು. ಸ್ಕಂದಸ್ವಾಮಿಯು ಈ ಶಬ್ದಕ್ಕೆ ನಕ್ಷತ್ರಗಳೆಂದು ಅರ್ಥಮಾಡಿರುವರು. ಎಂದರೆ ಆಕಾಶದಲ್ಲಿ ನಕ್ಷತ್ರಗಳು ಹೇಗೆ ಪ್ರಕಾಶಮಾನವಾಗಿ ಬೆಳಗುವವೋ ಹಾಗೆ ಈ ಮರುದ್ದೇವತೆಗಳು ಆಭರಣಾದಿಗಳಿಂದ ಅಲಂಕೃತರಾಗಿ ಪ್ರಕಾಶಿಸುವರೆಂದಭಿಪ್ರಾಯವು.

**ಆನಜ್ರೇ—**ನಭಸಿ **ವ್ಯಕ್ತಾ ದೃಶ್ಯಂತೇ ।** ಅಂತರಿಕ್ಷದಲ್ಲಿ ಚೆನ್ನಾಗಿ ಪ್ರಕಾಶಿಸುವವರು

**ಉಸ್ರಾ ಇವ**—ಸೂರ್ಯರಶ್ಮಿಗಳಂತೆ. ಅಂತರಿಕ್ಷದಲ್ಲಿ ಸೂರ್ಯರಶ್ಮಿಗಳು ಹೇಗೆ ಸ್ಪಷ್ಟವಾಗಿ ಕಾಣುವವೋ ಅದರಂತೆ ಈ ಮರುತ್ತುಗಳು ವ್ಯಕ್ತವಾಗಿ ಕಾಣಿಸುವರು. ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಪ್ರತ್ವಕ್ಷಸಃ—**ಪ್ರಕರ್ಷೇಣ ತ್ವಕ್ಷಂತೇ ತನೂಕುರ್ವಂತಿ ಇತಿ ಪ್ರತ್ವಕ್ಷಸಃ ತಕ್ಷೂ ತ್ವಕ್ಷೂ ತನೂಕರಣೇ ಧಾತು. **ಗತಿಕಾರಕಯೋರಪಿ ಪೂರ್ವಪದ ಪ್ರಕೃತಿಸ್ವರತ್ವಂ ಚ** (ಉ. ಸೂ. ೪-೬೬೬) ಎಂಬುದರಿಂದ ಅಸುನ್ ಪ್ರತ್ಯಯ. ತತ್ಸನ್ನಿಯೋಗದಿಂದ ಪೂರ್ವಪದಪ್ರಕೃತಿಸ್ವರವೂ ಬರುತ್ತದೆ. ಇಲ್ಲಿ ಗತಿಪೂರ್ವಪದವಾಗಿರುತ್ತದೆ. ಪ್ರಥಮಾಬಹುವಚನಾಂತರೂಪ.

**ಪ್ರತವಸಃ—**ತವಃ ಎಂಬುದು ಬಲಕ್ಕೆ ಹೆಸರು. ಪ್ರಕೃಷ್ಟಂ ತವೋ ಯೇಷಾಂ ತೇ ಪ್ರತವಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವಿರಪ್ಶಿನಃ —ರಪ** ಲಪ ವ್ಯಕ್ತಾಯಾಂ ವಾಚಿ ಧಾತು. ವಿರಪಣಂ ವಿರಪ್ಶಃ. ಔಣಾದಿಕವಾದ ಶಕ್ ಪ್ರತ್ಯಯ. ವಿರಪ್ಶಃ ಯೇಷಾಮಸ್ತೀತಿ ವಿರಪ್ಶಿನಃ ಮತ್ವರ್ಥದಲ್ಲಿ **ಅತಇನಿಠನೌ** ಸೂತ್ರದಿಂದ ಇನಿಪ್ರತ್ಯಯ ಪ್ರತ್ಯಯಸ್ವರದಿಂದ ಇನಿನ ಇಕಾರವು ಉದಾತ್ತವಾಗುತ್ತದೆ.

**ಅನಾನತಾಃ**—ಆನತಾಃ ಅವನತಾಃ ಪ್ರಹ್ವೀಭೂತಾಃ. ಆಙ್ ಉಪಸರ್ಗಪೂರ್ವದಲ್ಲಿರುವಾಗ ಣಮು ಧಾತುವಿಗೆ ಕ್ತಪ್ರತ್ಯಯ. **ಅನುದಾತ್ತೋಪ**—ಸೂತ್ರದಿಂದ ಅನುನಾಸಿಕಕ್ಕೆ ಲೋಪ. ನ ಆನತಾಃ ಅನಾನತಾಃ **ತತ್ಪುರುಷೇ ತುಲ್ಯಾರ್ಥ**— (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅವಿಥುರಾಃ**—ವ್ಯಥ ಭಯಸಂಚಲನಯೋಃ ಧಾತು. **ವ್ಯಥೇಃ ಸಂಪ್ರಸಾರಣಂ ಧಃ ಕಿಚ್ಚ** (ಉ. ಸೂ. ೧-೩೦) ಎಂಬುದರಿಂದ ಉರಚ್‌ಪ್ರತ್ಯಯ. ಥಕಾರಕ್ಕೆ ಧಕಾರಾದೇಶ. ಆದರೆ ಉಣಾದಿಯಲ್ಲಿ ಬಹುಲವಚನವಿರುವುದರಿಂದ ಇಲ್ಲಿ ಧತ್ವವು ಮಾಡಲ್ಪಡಲಿಲ್ಲ. ಯಕಾರಕ್ಕೆ ಇಕಾರ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. ವಿಥುರ ಎಂದು ಶಬ್ದವಾಗುತ್ತದೆ. **ನ ವಿಥುರಾಃ** ಹಿಂದಿನಂತೇ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಜುಷ್ಟತಮಾಸ:**—ಜುಷೀ ಪ್ರೀತಿಸೇವನಯೋಃ ಧಾತು. ಕ್ತಪ್ರತ್ಯಯ. **ನಿತ್ಯಂ ಮಂತ್ರೇ** (ಪಾ. ಸೂ. ೬-೧-೨೩೦) ಎಂಬುದರಿಂದ ಇದು ಆದ್ಯುದಾತ್ತವಾಗುತ್ತದೆ. ಅತಿಶಯೇನ ಜುಷ್ಟಃ. ಜುಷ್ಟತಮಃ. **ಅತಿಶಾಯನೇ-ತಮಬಿಷ್ಠನೌ**—ಎಂಬುದರಿಂದ ತಮಪ್‌ಪ್ರತ್ಯಯ. ಅದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಹಿಂದಿನ ಸ್ವರವೇ ಉಳಿಯುತ್ತದೆ. ಪ್ರಥಮಾ ಬಹುವಚನಪರವಾದಾಗ **ಆಜ್ಜಸೇರಸುಕ್**—ಎಂಬುದರಿಂದ ಜಸಿಗೆ ಅಸುಗಾಗಮ. ಹೀಗೆಯೇ ನೃತಮಾಸಃ ಎಂಬಲ್ಲಿಯೂ ಆಗುತ್ತದೆ.

**ಆನಜ್ರೇ** –ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್ ಲಿಟಃ** ಎಂಬುದರಿಂದ ಲಿಟ್. ಪ್ರಥಮ ಪುರುಷ ಬಹುವಚನದಲ್ಲಿ **ಲಿಟಸ್ತಝಯೋರೇಶಿರೇಚ್** ಎಂಬುದರಿಂದ ಇರೇಚಾದೇಶ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಬಂದಾಗ **ಅತ ಆದೇಃ** (ಪಾ. ಸೂ. ೭-೪-೭೦) ಎಂಬುದರಿಂದ ದೀರ್ಘ. ಆಗ **ತಸ್ಮಾನ್ನುಟ್‌ದ್ವಿಹಲಃ** (ಪಾ. ಸೂ. ೭-೪-೭೧) ಪೂರ್ವದಲ್ಲಿ ಮಾಡಲ್ಪಟ್ಟ ದೀರ್ಘದ ಪರದಲ್ಲಿರುವ ದ್ವಿಹಲ್ ಧಾತುವಿಗೆ ನುಡಾಗಮ ಎಂಬುದರಿಂದ ನುಟ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಧಾತುವಿನ ಉಪಧಾಭೂತ ನಕಾರಕ್ಕೆ ಲೋಪ. **ಇರಯೋರೇ** (ಪಾ. ಸೂ. ೬-೪-೭೬) ಎಂಬುದರಿಂದ ಪ್ರತ್ಯಯಕ್ಕೆ ರೇ ಆದೇಶ. ಆನಜ್ರೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ತೃಭಿಃ**—ಸ್ತೃಞ್ ಆಚ್ಛಾದನೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್. ಹ್ರಸ್ವವಿರುವುದರಿಂದ ತುಗಾಗಮ ಪ್ರಾಪ್ತಿ ಇದ್ದರೂ **ಆಗಮಶಾಸ್ತ್ರ ಮನಿತ್ಯಂ** ಎಂಬ ವಚನದಿಂದ ಇಲ್ಲಿ ತುಗಾಗಮ ಬರುವುದಿಲ್ಲ ॥ ೧ ॥



॥ ಸಂಹಿತಾಪಾಠಃ ॥

ಉಪಹ್ವರೇಷು ಯದಚಿಧ್ವಂ ಯಯಿಂ ವಯಇವ ಮರುತಃ ಕೇನ ಚಿತ್ಪಥಾ ॥
ಶ್ಚೋತಂತಿ ಕೋಶಾ ಉಪ ವೋ ರಥೇಷ್ವಾ ಘೃತಮುಕ್ಷತಾ ಮಧುವರ್ಣಮರ್ಚತೇ ॥ ೨ ॥

ಪದಪಾಠಃ

ಉಪಽಹ್ವರೇಷು । ಯತ್ । ಅಚಿಧ್ವಂ । ಯಯಿಂ । ವಯಃಽಇವ । ಮರುತಃ ಕೇನ । ಚಿತ್ । ಪಥಾ ।
ಶ್ಚೋತಂತಿ । ಕೋಶಾಃ । ಉಪ । ವಃ । ರಥೇಷು । ಆ । ಘೃತಂ । ಉಕ್ಷತ । ಮಧುಽವರ್ಣಂ । ಅರ್ಚತೇ । ॥ ೨ ॥

ಸಾಯಣಭಾಷ್ಯಂ

ಹೇ ಮರುತ ಉಪಹ್ವರೇಷೂಪಹ್ವರ್ತನ್ಯೇಷು ಗಂತವ್ಯೇಷ್ವಸ್ಮಾಕಂ ಸನ್ನಿಕೃಷ್ಟೇಷು ನಭಸಃ ಪ್ರದೇಶೇಷು ಯದ್ಯದಾ ಯಯಿಂ ಗತಿಮಂತಂ ಮೇಘಮಚಿಧ್ವಂ ವರ್ಷಣಸಾಮರ್ಥ್ಯೇನೋಪಚಿತಂ ಕುರುಥ । ಕಿಂ ಕುರ್ವಂತಃ । ವಯ ಇವ ಪಕ್ಷಿಣ ಇವ ಕೇನ ಚಿತ್ಪಥಾ ಕೇನಚಿದಾಕಾಶಮಾರ್ಗೇಣ ಶೀಘ್ರಂ ಗಚ್ಛಂತಃ । ನಭಸಿ ಶೀಘ್ರಂ ವರ್ಷಣಾರ್ಥಂ ಪ್ರವರ್ತಮಾನೈರ್ಮರುದ್ಭಿರ್ಮೇಘಾ ಉಪಚೀಯಂತ ಇತ್ಯರ್ಥಃ । ತದಾನೀಂ ಕೋಶಾಃ । ಮೇಘನಾಮೈತತ್ । ವೋ ಯುಷ್ಮಾಕಂ ರಥೇಷ್ವಾಸಕ್ತಾ ಮೇಘಾಃ ಶ್ಚೋತಂತಿ । ಜಲಂ ಮುಂಚಂತಿ । ಯಸ್ಮಾದೇವಂ ತಸ್ಮಾತ್ ಹೇ ಮರುತೋ ಯೂಯಮರ್ಚತೇ ಯುಷ್ಮಾನ್ ಹವಿರ್ಭಿಃ ಪೂಜಯತೇ ಮಹ್ಯಂ ಯಜಮಾನಾಯ ಮಧುವರ್ಣಂ ಮಧುಸದೃಶರೂಪಂ ಸ್ವಚ್ಛಂ ಘೃತಂ ವೃಷ್ಟ್ಯುದಕಮಾ ಸಮಂತಾದುಕ್ಷತ । ಸಿಂಚತ । ಅಸ್ಮದಭಿಲಷಿತಾಂ ವೃಷ್ಟಿಂ ಕುರುತೇತ್ಯರ್ಥಃ ॥ ಉಪಹ್ವರೇಷು । ಹ್ವೃ ಕೌಟಿಲ್ಯೇ । ಉಪಹ್ವರಂತಿ ಕೌಟಿಲ್ಯೇನ ತಿರ್ಯಗ್ಗಚ್ಛಂತ್ಯೇಷ್ವಿತ್ಯುಪಹ್ವರಾ ನಭಃಪ್ರದೇಶಾಃ । ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣೇತ್ಯಧಿಕರಣೇ ಘಃ । ಅಚಿಧ್ವಂ । ಚಿನೋತೇರ್ವರ್ತಮಾನೇ ಲಙ್ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಯಯಿಂ । ಯಾ ಪ್ರಾಪಣೇ । ಆದೃಗಮ-

**ಹನಜನ ಇತಿ ಕಿಪ್ರತ್ಯಯಃ। ಪಥಾ। ಆಙಃ ಭಸ್ಯ ಟೇರ್ಲೋಪ ಇತಿ ಟಿಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಶ್ಚ್ಯೋತಂತಿ । ಶ್ಚ್ಯುತಿರ್ ಕ್ಷರಣೇ । ಛಾಂದಸೋ ಯಲೋಪಃ । ಉಕ್ಷತ । ಉಕ್ಷ ಸೇಚನೇ ಲೋಟಿ ತಶಬ್ದಸ್ಯ ತಙ್ತ್ವೇ ಸತಿ ಋಚಿ ತುನುಘೇತ್ಯಾದಿನಾ ಸಾಂಹಿತಿಕೋ ದೀರ್ಘಃ ॥೨**

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ । **ವಯ ಇವ**—ಪಕ್ಷಿಗಳಂತೆ । **ಕೇನ ಚಿತ್ ಪಥಾ**—ಒಂದಲ್ಲ ಒಂದು ಮಾರ್ಗದಲ್ಲಿ (ವೇಗವಾಗಿ ಹೋಗುತ್ತ)। **ಉಪಹ್ವರೇಷು**—( ನಿಮ್ಮ ) ಸಮೀಪದಲ್ಲಿರುವ ಅಂತರಿಕ್ಷ ಪ್ರದೇಶಗಳಲ್ಲಿ । **ಯಯಿಂ**—ಸಂಚರಿಸತಕ್ಕ ಮೇಘ (ಸಮುದಾಯ)ವನ್ನು । **ಯತ್**—ಯಾವಾಗ । **ಅಚಿಧ್ವಂ**—ಒಟ್ಟುಗೂಡಿಸುತ್ತೀರೋ (ಆಗ) । **ಕೋಶಾಃ**—ಮೇಘಗಳು । **ವಃ**—ನಿಮ್ಮ । **ರಥೇಷು**—ರಥಗಳಲ್ಲಿ (ಢಿಕ್ಕಿಹೊಡೆದು) । **ಶ್ಚ್ಯೋತಂತಿ**—( ಜಲವನ್ನು ) ಸುರಿಸುತ್ತವೆ । ( ಆದ್ದರಿಂದ, ಎಲೈ ಮರುತ್ತುಗಳೇ ) । **ಅರ್ಚತೇ**—(ನಿಮ್ಮನ್ನು ಹವಿಸ್ಸುಗಳಿಂದ) ಪೂಜಿಸುವ ನನಗೆ । **ಮಧುವರ್ಣಂ**—ಜೇನುತುಪ್ಪದ ಬಣ್ಣವುಳ್ಳ। **ಘೃತಂ**—ಮಳೆಯ ನೀರನ್ನು। **ಆ ಉಕ್ಷತ**—ಸುತ್ತಲೂ ಸುರಿಸಿರಿ ॥

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನೀವು ಪಕ್ಷಿಗಳಂತೆ ಆಕಾಶದಲ್ಲಿ ಒಂದಲ್ಲ ಒಂದು ಮಾರ್ಗದಲ್ಲಿ ವೇಗವಾಗಿ ಸಂಚರಿಸುತ್ತಾ ನಿಮ್ಮ ಸಮೀಪದಲ್ಲಿರುವ ಅಂತರಿಕ್ಷ ಪ್ರದೇಶಗಳಲ್ಲಿ ಸಂಚರಿಸತಕ್ಕ ಮೇಘ ಸಮುದಾಯವನ್ನು ಯಾವಾಗ ಒಟ್ಟುಗೂಡಿಸುತ್ತೀರೋ ಆಗ ಮೇಘಗಳು ನಿಮ್ಮ ರಥಗಳಿಗೆ ಡಿಕ್ಕಿಹೊಡೆದು ಮಳೆಯನ್ನು ಸುರಿಸುತ್ತವೆ. ಆದ್ದರಿಂದ ಎಲೈ ಮರುತ್ತುಗಳೇ, ನಿಮ್ಮನ್ನು ಹವಿಸ್ಸುಗಳಿಂದ ಪೂಜಿಸತಕ್ಕ ಯಜಮಾನನಿಗೆ ಜೇನುತುಪ್ಪದ ಬಣ್ಣವುಳ್ಳ ಮಳೆಯ ನೀರನ್ನು ಸುತ್ತಲೂ ಸುರಿಸಿರಿ.

English Translation

O Maruts, when, flying like birds along a certain path (of the sky), you collect the moving passing clouds in the nearest portion (of the firmanent), then coming into collision with your cars, they pour forth the waters; therefore, shower upon your worshipper the honey-coloured rain.

॥ ವಿಶೇಷವಿಷಯಗಳು ॥

**ಉಪಹ್ವರೇಷು**—ಹ್ವೃ ಕೌಟಿಲ್ಯೇ । **ಉಪಹ್ವರಂತಿ ಕೌಟಿಲ್ಯೇನ ತಿರ್ಯಗ್ಗಚ್ಛಂತ್ಯೇಷ್ವಿತ್ಯುಪಹ್ವರಾ ನಭಃಪ್ರದೇಶಾಃ । ಅಸ್ಮಾಕಂ ಸನ್ನಿಕೃಷ್ಟೇಷು ನಭಸಃ ಪ್ರದೇಶೇಷು ।** ಹ್ವೃ ಧಾತುವಿಗೆ ವಕ್ರವೆಂದರ್ಥ ಇದರಲ್ಲಿ ನೇರವಾಗಿಯೂ ವಕ್ರಗತಿಯಿಂಗಲೂ ಸಂಚಾರಮಾಡಲು ಸಾಧ್ಯವಾಗಿರುವುದರಿಂದ ಉಪಹ್ವರವೆಂದರೆ ಅಂತರಿಕ್ಷವು. ಇಲ್ಲಿ ನಮ್ಮ ಸಮೀಪದಲ್ಲಿ ಎಂದರೆ ನಮ್ಮ ತಲೆಯ ಮೇಲುಭಾಗದಲ್ಲಿರುವ ಅಂತರಿಕ್ಷದಲ್ಲಿ ಎಂದಭಿಪ್ರಾಯವು ಸ್ಕಂದಸ್ವಾಮಿಯು—**ಉಪಹ್ವರೇಷು ಗಹ್ವರೇಷು ಪರ್ವತಪ್ರದೇಶೇಷು ಅಂತರಿಕ್ಷಪ್ರದೇಶೇಷು ವಾ**—ಪರ್ವತಪ್ರದೇಶಗಳಲ್ಲಿ, ಗಿರಿಗಹ್ವರಗಳಲ್ಲಿ, ಅಂತರಿಕ್ಷಪ್ರದೇಶಗಳಲ್ಲಿ ಎಂಬ ಅರ್ಥಗಳನ್ನು ಹೇಳಿರುವರು.

**ಯಯಿಂ—ಅಚಿಧ್ವಂ** ಗತಿಮಂತಂ ಮೇಘಮಚಿಧ್ವಂ ಕುರುತ । ನಾನಾ ದಿಕ್ಕುಗಳಿಗೆ ಹೋಗುತ್ತಿರುವ ಮೇಘಗಳನ್ನು ಒಂದೆಡೆ ಸೇರಿಸಿ (ಮಳೆಯನ್ನು ಹುಯ್ಯುವಂತೆ ಮಾಡಿ).

**ವಯ ಇವ ಕೇನ ಚಿತ್ಪಥಾ**— ಪಕ್ಷಿಗಳು ಸಂಚರಿಸುವಂತೆ ಅಂತರಿಕ್ಷದಲ್ಲಿ ಯಾವುದಾದರೂ ಒಂದು ಕ್ಲಿಪ್ತವಾದ ಮಾರ್ಗದಿಂದ.

**ಕೋಶಾಃ**—ಅದ್ರಿಃ ಗ್ರಾವಾ ಮೊದಲಾದ ಮೂವತ್ತು ಮೇಘನಾಮಗಳ ಮಧ್ಯದಲ್ಲಿ ಕೋಶಃ ಎಂಬ ಶಬ್ದವು ಪಠಿತವಾಗಿರುವುದರಿಂದ ಕೋಶಾಃ ಎಂದರೆ ಮೇಘಗಳು. (ನಿ. ೧-೧೦)

**ಉಪ ವೋ ರಥೇಷು**—ನಿಮ್ಮ ರಥದ ಸಮೀಪದಲ್ಲಿ ಎಂದರೆ ನಿಮ್ಮ ರಥದ ಘರ್ಷಣೆಯಿಂದ ಮೇಘವು ಮಳೆಯನ್ನು ಸುರಿಸುವುದೆಂದಭಿಪ್ರಾಯವು. ಸ್ಕಂದಸ್ವಾಮಿಯು—**ಯತ್ರ ಪ್ರದೇಶೆ ಯುಷ್ಮದೀಯಾ ರಥಾ ವ್ಯವತಿಷ್ಠಂತೇ ತತ್ರ ರಥಚಕ್ರಧಾರಾಭಿಃ ಭಿದ್ಯಮಾನಾ ಮೇಘಾಃ ಪ್ರಕ್ಷರಂತೀತ್ಯರ್ಥಃ**—ನಿಮ್ಮ ರಥಗಳು ಎಲ್ಲೆಲ್ಲಿ ಸಂಚರಿಸುತ್ತವೆಯೋ ಅಲ್ಲೆಲ್ಲಾ ರಥಚಕ್ರಗಳಿಂದ ಛೇದಿಸಲ್ಪಟ್ಟಮೇಘಗಳು ಮಳೆಯನ್ನು ಸುರಿಸುವವು ಎಂದು ಅರ್ಥ ವಿವರಣೆಮಾಡಿರುವರು.

**ಘೃತಂ**—ಅರ್ಣಃ ಕ್ಷೋದಃ ಮೊದಲಾದ ನೂರೊಂದು ಉದಕನಾಮಗಳ ಮಧ್ಯದಲ್ಲಿ **ಘೃತ**ಶಬ್ದವು ಪಠಿತವಾಗಿರುವುದರಿಂದ (ನಿ. ೧-೧೪) ಘೃತವೆಂದರೆ ಉದಕ, ನೀರು ಎಂದರ್ಥವು. ಈ ಶಬ್ದವು ಋಗ್ವೇದದಲ್ಲಿ ಈ ಅರ್ಥದಲ್ಲಿ ವಿಶೇಷವಾಗಿ ಉಪಯೋಗಿಸಲ್ಪಟ್ಟಿರುವುದು.

**ಉಕ್ಷತ – ಉಕ್ಷ ಸೇಚನೇ** ॥ ಸೇಚನೆಮಾಡಿ, ಸುರಿಸಿ.

**ಮಧುವರ್ಣಂ**— ಜೇನುತುಪ್ಪದಂತೆ ವರ್ಣವುಳ್ಳ ಎಂದರೆ ಸ್ವಚ್ಛವಾದ, ಶುದ್ಧವಾದ.

**ಅರ್ಚತೇ**—ನಿಮ್ಮನ್ನು ಸ್ತೋತ್ರಮಾಡುವ ಯಜಮಾನನಿಗಾಗಿ.

॥ ವ್ಯಾಕರಣಪ್ರಕ್ರಿಯಾ ॥

**ಉಪಹ್ವರೇಷು**—ಹ್ವೃ ಕೌಟಿಲ್ಯೇ ಧಾತು. ಉಪಹ್ವರಂತಿ ಕೌಟಿಲ್ಯೇನ ತಿರ್ಯಗ್ಗಚ್ಛಂತಿ ಏಷು ಇತಿ ಉಪಹ್ವರಾಃ ನಭಸಃ ಪ್ರದೇಶಾಃ (ಕುಟಿಲವಾಗಿ ಸಂಚರಿಸುವ ಮಾರ್ಗ. ಆಕಾಶ). **ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ** (ಪಾ. ಸೂ. ೩-೩-೧೧೮) ಎಂಬುದರಿಂದ ಅಧಿಕರಣಾರ್ಥದಲ್ಲಿ ಘ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಬಹುವಚನಾಂತರೂಪ.

**ಅಚಿಧ್ವಮ್**– ಚಿಞ್ ಚಯನೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಮಧ್ಯಮಪುರುಷ ಬಹುವಚನರೂಪ. ಪದಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತನಾಗಿರುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಯಯಿಮ್**—ಯಾ ಪ್ರಾಪಣೇ ಧಾತು. ಆದೃಗಮಹನಜನಃ—(ಪಾ. ಸೂ. ೩-೨-೧೭೧) ಎಂಬುದರಿಂದ ಕಿ ಪ್ರತ್ಯಯ. ಇದಕ್ಕೆ ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವ. **ಹ್ರಸ್ವಃ** ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ

ಕಿತ್ ಪ್ರತ್ಯಯು ಪರದಲ್ಲಿರುವುದರಿಂದ **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಪಥಾ**— ಪಥಿನ್ ಶಬ್ದ. ತೃತೀಯಾ ಏಕವಚನದಲ್ಲಿ ಟಾ ವಿಭಕ್ತಿ. **ಯಚಿ ಭಮ್** ಸೂತ್ರದಿಂದ ಭಸಂಜ್ಞಾ ಇರುವುದರಿಂದ **ಭಸ್ಯ ಟೇರ್ಲೋಪಃ** (ಪಾ. ಸೂ. ೭-೧-೮೮) ಎಂಬುದರಿಂದ ಟಗೆ (ಇನ್) ಲೋಪ. ಅನುದಾತ್ತವಾದ ಅಜ್ ಪರದಲ್ಲಿರುವಾಗ ಉದಾತ್ತಕ್ಕೆ ಲೋಪ ಬಂದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಶ್ಚೋತಂತಿ**—ಶ್ಚ್ಯುತಿರ್ ಕ್ಷರಣೇ ಧಾತು. ಲಟ್ ಪ್ರಥಮಪುರುಷದಲ್ಲಿ ಝಿ ಪ್ರತ್ಯಯ. ಅದಕ್ಕೆ **ಝೋಂತಃ** ಎಂಬುದರಿಂದ ಅಂತಾದೇಶ. ಛಾಂದಸವಾಗಿ ಧಾತುವಿನ ಯಕಾರಕ್ಕೆ ಲೋಪ ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಉಕ್ಷತಃ**— ಉಕ್ಷ ಸೇಚನೇ ಧಾತು. ಲೋಟ್ ಮಧ್ಯಮಪುರುಷ ಬಹುವಚನಕ್ಕೆ ಲಙ್ವದ್ಭಾವವಿರುವುದರಿಂದ **ತಸ್ ಥಸ್ ಥ**— ಸೂತ್ರದಿಂದ ತಾದೇಶ. **ಸಾರ್ವಧಾತುಕಮಪಿತ್** ಸೂತ್ರದಿಂದ ಅದಕ್ಕೆ ಙತ್ವವಿರುವುದರಿಂದ ಸಂಹಿತಾಪಾಠದಲ್ಲಿ **ಯಚಿ ತುನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ಅಂತ್ಯ ದೀರ್ಘ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೧ ॥

॥ ಸಂಹಿತಾಪಾಠಃ ॥

ಪ್ರೈಷಾಮಜ್ಮೇಷು ವಿಥುರೇವ ರೇಜತೇ ಭೂಮಿರ್ಯಾಮೇಷು

ಯದ್ಧ ಯುಂಜತೇ ಶುಭೇ ।

ತೇ ಕ್ರೀಳಯೋ ಧುನಯೋ ಭ್ರಾಜದೃಷ್ಟಯಃ ಸ್ವಯಂ ಮಹಿ-

ತ್ವಂ ಪನಯಂತ ಧೂತಯಃ ॥ ೨ ॥

॥ ಪದಪಾಠಃ ॥

ಪ್ರ । ಏಷಾಂ । ಅಜ್ಮೇಷು । ವಿಥುರಾಽಇವ । ರೇಜತೇ । ಭೂಮಿಃ । ಯಾಮೇ-
ಷು । ಯತ್ । ಹ । ಯುಂಜತೇ । ಶುಭೇ ।

ತೇ । ಕ್ರೀಳಯಃ । ಧುನಯಃ । ಭ್ರಾಜತ್ಽಋಷ್ಟಯಃ । ಸ್ವಯಂ । ಮ-
ಹಿಽತ್ವಂ । ಪನಯಂತ । ಧೂತಯಃ ॥ ೩ ॥

ಸಾಯಣಭಾಷ್ಯಂ

ಯದ್ಧ ಯದಾ ಖಲ್ವೇತೇ ಮರುತಃ ಶುಭೇ ಶೋಭನಾಯ ವೃಷ್ಟ್ಯುದಕಾಯ ಯುಂಜತೇ ಮೇಘಾನ್ ಸಜ್ಜೀಕುರ್ವಂತಿ ತದಾನೀಮಜ್ಮೇಷು ಮೇಘಾನಾಮುತ್ಕ್ಷೇಪಕೇಷ್ವೇಷಾಂ ಮರುತಾಂ ಸಂಬಂಧಿಷು ಯಾಮೇಷು ಮೇಘಾನಾಂ ನಿಯಮನೇಷು ಸತ್ಸು ಭೂಮಿಃ ಪೃಥಿವೀ ಪ್ರ ರೇಜತೇ। ಪ್ರಕರ್ಷೇಣ ಕಂಪತೇ। ಯದ್ವಾ। ಯದಾ ಖಲು ಮರುತಃ ಸ್ವಕೀಯಾನ್ರಥಾನ್ಯುಂಜತೇ ಅಶ್ವೈರ್ಯೋಜಯಂತಿ ತದಾನೀಮೇಷಾಂ ರಥಾನಾಂ ಸಂಬಂಧಿಷು ಪರ್ವತಾದೇರುತ್ಕ್ಷೇಪಕೇಷು ಯಾಮೇಷು ಗಮನೇಷು ಭೂಮಿರ್ಭೀತ್ಯಾ ಕಂಪತೇ। ತತ್ರ ದೃಷ್ಟಾಂತಃ। ವಿಥುರೇವ। ಯಥಾ ಭರ್ತ್ರಾ ವಿಯುಕ್ತಾ ಜಾಯಾ ರಾಜೋಪದ್ರವಾದಿಷು ಸತ್ಸು ನಿರಾಲಂಬಾ ಸತೀ ಕಂಪತೇ ತದ್ವತ್। ತೇ ತಾದೃಶಾಃ ಕ್ರೀಳಯೋ ವಿಹಾರಶೀಲಾ ಧುನಯಶ್ಚಲನಸ್ವಭಾವಾ ಭ್ರಾಜದೃಷ್ಟಯೋ ದೀಪ್ಯಮಾನಾಯುಧಾ ಏವಂಭೂತಾ ಮರುತೋ ಧೂತಯಃ ಪರ್ವತಾದೀನ್ಕಂಪಯಂತಃ ಸಂತೋ ಮಹಿತ್ವಂ ಸ್ವಕೀಯಂ ಮಹಿಮಾನಂ ಸ್ವಯಮೇವ ಪನಯಂತ। ವ್ಯವಹರಂತಿ। ಪ್ರಕಟಯಂತೀತ್ಯರ್ಥಃ॥ ಅಜ್ಮೇಷು। ಅಜ ಗತಿಕ್ಷೇಪಣಯೋಃ। ಅರ್ತಿಸ್ತುಸ್ವಿತ್ಯಾದಿನಾ ವಿಧೀಯಮಾನೋ ಮನ್ ಬಹುಲವಚನಾದಸ್ಮಾದಪಿ ದ್ರಷ್ಟವ್ಯಃ। ವಲಾದಾವಾರ್ಧಧಾತುಕೇ ವಿಕಲ್ಪ ಇಷ್ಯತೇ। ಕಾ.೨-೪-೫೬-೨। ಇತಿ ವಚನಾದಜೇರ್ವ್ಯಘಞಪೋರಿತಿ ವೀಭಾವಾಭಾವಃ। ನಿತ್ತ್ವಾದಾದ್ಯುದಾತ್ತತ್ವಂ। ರೇಜತೇ। ರೇಜೃ ಕಂಪನೇ। ಭ್ಯಸತೇ ರೇಜತ ಇತಿ ಭಯವೇಪನಯೋರಿತಿ ಯಾಸ್ಕಃ। ನಿ. ೩-೨೧। ಯಾಮೇಷು। ಯಮು ಉಪರಮೇ। ಭಾವೇ ಘಞ್। ಕರ್ಷಾತ್ವತ ಇತ್ಯಂತೋದಾತ್ತತ್ವೇಪ್ರಾಪ್ತೇ ವೃಷಾದಿಷು ಪಾಠಾದಾದ್ಯುದಾತ್ತತ್ವಂ। ಯದ್ವಾ। ಯಾ ಪ್ರಾಪಣ ಇತ್ಯಸ್ಮಾದರ್ತಿಸ್ತುಸ್ವಿತ್ಯಾದಿನಾ ಮನ್ಪ್ರತ್ಯಯಃ। ಶುಭೇ। ಶುಭ ದೀಪ್ತೌ। ಸಂಪದಾದಿಲಕ್ಷಣಃ ಕರ್ಮಣಿ ಕ್ವಿಪ್। ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ। ಪನಯಂತ। ಪನ ವ್ಯವಹಾರೇ। ಗುಪೂಧೂಪವಿಚ್ಛೀತ್ಯಾಯಃ। ಪಾ. ೩-೧-೨೮। ಅಸ್ಮಾಚ್ಛಾಂದಸೋ ಲಙ್। ವ್ಯತ್ಯಯೇನ ಹ್ರಸ್ವತ್ವಂ॥

॥ ಪ್ರತಿಪದಾರ್ಥ ॥

**ಯದ್ಧ**— ಯಾವಾಗಲಾದರೂ(ಮರುತ್ತುಗಳು)। **ಶುಭೇ**—(ಮಳೆಯನ್ನುಸುರಿಸುವುದರ ಮೂಲಕ)ಒಳ್ಳೆಯ ಕೆಲಸವನ್ನು ಮಾಡುವುದಕ್ಕಾಗಿ। **ಯುಂಜತೇ**—(ಮೇಘಗಳನ್ನು) ಒಟ್ಟಿಗೆ ಸೇರಿಸುತ್ತವೆಯೋ (ಆಗ) । **ಅಜ್ಮೇಷು**-(ಮೇಘಗಳನ್ನು ಕವಲಿಸುವ) ರಭಸವುಳ್ಳ । **ಏಷಾಂ**— ಈ ಮರುತ್ತುಗಳ । **ಯಾಮೇಷು**— ಸಂಚಾರಕಾಲಗಳಲ್ಲಿ । **ಭೂಮಿಃ**— ಪೃಥ್ವಿಯು । **ವಿಥುರಾ ಇವ**— ಪತಿರಹಿತಳಾದ ಹೆಂಗಸಿನಂತೆ । **ಪ್ರೇಜತೇ**— ನಡಗುತ್ತಿದೆ.

**ಅಥವಾ**

[**ಯದ್ಧ**— ಯಾವಾಗಲಾದರೂ (ಮರುತ್ತುಗಳು) । **ಶುಭೇ**—(ಲೋಕಕ್ಕೆ) ಒಳ್ಳೆಯದನ್ನುಂಟು ಮಾಡಲು । **ಯುಂಜತೇ**—(ತಮ್ಮ ರಥಕ್ಕೆ ಕುದುರೆಗಳನ್ನು) ಸೇರಿಸಿಕಟ್ಟುತ್ತಾರೆಯೋ ಆಗ । **ಏಷಾಂ**— ಈ ಮರುತ್ತುಗಳ । **ಅಜ್ಮೇಷು**—(ಪರ್ವತಾದಿಗಳನ್ನು ಚಲಿಸುವಂತೆ ಮಾಡುವ) ರಭಸವುಳ್ಳ । **ಯಾಮೇಷು**— ಗಮನಕಾಲಗಳಲ್ಲಿ । **ಭೂಮಿಃ**— ಪೃಥ್ವಿಯು । **ವಿಥುರೇವ**— ಪತಿರಹಿತಳಾದ ಹೆಂಗಸಿನಂತೆ । **ಪ್ರೇಜತೇ**— ಅಧಿಕಾರವಾಗಿ ನಡಗುತ್ತದೆ । ]

**ತೇ**— ಅಂತಹ । **ಕ್ರೀಳಯಃ**— ಕ್ರೀಡಾಸಕ್ತರೂ । **ಧುನಯಃ**— ಸಂಚರಿಸುವ ಸ್ವಭಾವವುಳ್ಳವರೂ । **ಭ್ರಾಜದೃಷ್ಟಯಃ** ಪ್ರಕಾಶಮಾನಗಳಾದ ಆಯುಧಗಳುಳ್ಳವರೂ ಆದ ಮರುತ್ತುಗಳು **ಧೂತಯಃ**—(ಪರ್ವತಾದಿಗಳನ್ನು ) ನಡಗಿಸುತ್ತ । **ಮಹಿತ್ವಂ**— ತಮ್ಮ ಪ್ರಭಾವವನ್ನು । **ಪನಯಂತ**— ಪ್ರಕಟಿಸುತ್ತಾರೆ. ।

॥ ಭಾವಾರ್ಥ ॥

ಯಾವಾಗ ಈ ಮರುತ್ತುಗಳು ಲೋಕಕ್ಕೆ ಒಳ್ಳೆಯದನ್ನು ಮಾಡುವುದಕ್ಕಾಗಿ ಮೇಘಗಳನ್ನೆಲ್ಲಾ ಒಟ್ಟಾಗಿ ಸೇರಿಸಿತ್ತಾರೆಯೋ ಆಗ ಅತ್ಯಂತ ರಭಸವುಳ್ಳ ಈ ಮರುತ್ತುಗಳ ಸಂಚಾರದಿಂದ ಪೃಥ್ವಿಯು ಪತಿರಹಿತಳಾದ ಹೆಂಗಸಿನಂತೆ ನಡಗುತ್ತದೆ. ಅಂತಹ ವೇಗವುಳ್ಳವರೂ, ಕ್ರೀಡಾಸಕ್ತರೂ, ಸಂಚರಿಸುವ ಸ್ವಭಾವವುಳ್ಳವರೂ, ಪ್ರಕಾಶಮಾನಗಳಾದ ಆಯುಧಗಳುಳ್ಳವರೂ, ಆದ ಮರುತ್ತುಗಳು ಪರ್ವತಾದಿಗಳನ್ನು ನಡಗಿಸುತ್ತ ತಮ್ಮ ಪ್ರಭಾವವನ್ನು ಪ್ರಕಟಿಸುತ್ತಾರೆ.

English Translation

When they assemble the clouds for the good work, earth trembles at their impetuous movements like a wife whose husband is away; sportive capricious, armed with bright weapons, and agitating (even the solid rock) they manifest their inherent might.

ವಿಶೇಷವಿಷಯಗಳು

**ಅಜ್ಮೇಷು**— **ಅಜಗತಿಕ್ಷೇಪಣಯೋಃ** । ಕವಲಿಸುವ, ಸಂಚರಿಸುವಂತೆ ಮಾಡುವ.

**ವಿಥುರೇವ—ಭರ್ತ್ರಾ ವಿಯುಕ್ತಾ ಜಾಯಾ** । ಪತಿಯು ಇಲ್ಲದಿರುವಾಗ ಇರುವ ಸ್ತ್ರೀಯಂತೆ ಎಂದರೆ ಪತಿಯು ಮನೆಯಲ್ಲಿಲ್ಲದೆ ಸ್ಥಳಾಂತರಕ್ಕೆ ಹೋಗಿರುವಾಗ ಮನೆಯಲ್ಲಿ ಒಬ್ಬಳೇ ಇರುವ ಸ್ತ್ರೀಯಂತೆ.

**ರೇಜತೆ—ರೇಜೃ ಕಂಪನೇ । ಭ್ಯಸತೇ ರೇಜತೇ ಇತಿ ಭಯವೇಪನಯೋಃ** (ನಿ. ೩-೨೧) ಭಯ ದಿಂದ ನಡಗುವುದು.

**ಯಾಮೇಷು— ಯಮು ಉಪರಮೇ ಯದ್ವಾ ಯಾ ಪ್ರಾಪಣೇ ।** ಸೇರಿಸುವುದರಲ್ಲಿ ಅಥವಾ ಗಮನ ಗಳಲ್ಲಿ ಎಂಬ ಎರಡು ಅರ್ಥಗಳನ್ನು ಹೇಳಬಹುದು. ಮೇಘಗಳು ಆಕಾಶದಲ್ಲಿ ಹರಡಿರುವಾಗ ಗಾಳಿಯ ಹೊಡೆತ ದಿಂದ ಅವುಗಳು ಒಂದೆಡೆ ಸೇರಿ ಮಳೆಯನ್ನು ಸುರಿಸುವವು. ಆ ರೀತಿ ಒಂದೆಡೆ ಸೇರುವುದಕ್ಕೆ ಯಾಮವೆಂದು ಹೆಸರು. ಅಥವಾ ಯಾಮವೆಂದರೆ ಗಮನವು. ಗಾಳಿಯ ಹೊಡೆತದಿಂದ ಮೇಘವು ಸಂಚರಿಸುವಾಗ ಅಥವಾ ಮುಂದಕ್ಕೆ ತಳ್ಳಲ್ಪಟ್ಟಾಗ ಎಂದಭಿಪ್ರಾಯವು

**ಭ್ರಾಜದೃಷ್ಟಯಃ-ದೀಪ್ಯಮಾನಾಯುಧಾಃ ।** ಪ್ರಕಾಶಮಾನವಾದ ಆಯುಧಗಳುಳ್ಳವರು. ಮರುತ್ತು ಗಳಿಗೆ ವೇಗವಾದ ಗಮನ ಎಂದರೆ ವೇಗವಾಗಿ ಬೀಸುವುದೇ ಆಯುಧಗಳು. ವೇಗವಾಗಿ ಬೀಸುವುದರಿಂದ ವೃಕ್ಷಾದಿ ಗಳನ್ನು ಕಂಪನವಾಡುವರು.

ವ್ಯಾಕರಣಪ್ರಕ್ರಿಯಾ

**ಅಜ್ಮೇಷು**—ಅಜ ಗತಿಕ್ಷೇಪಣಯೋಃ ಧಾತು. ಉಣಾದಿಯಲ್ಲಿ ಬಹುಲವಚನವಿರುವುದರಿಂದ **ಅರ್ತಿ-ಸ್ತುಸು**—(ಉ. ಸೂ. ೧-೧೩೭) ಎಂಬುದರಿಂದ ವಿಧಿಸಲ್ಪಡುವ ಮನ್‌ಪ್ರತ್ಯಯವು ಇದಕ್ಕೂ ಬರುತ್ತದೆ ಎಂದು ತಿಳಿಯಬೇಕು ವಲಾದಿಯಾದ ಆರ್ಧಧಾತುಕವು ಪರದಲ್ಲಿರುವಾಗ **ಅಜೇರ್ವ್ಯಘಞಪೋಃ** (ಪಾ. ಸೂ. ೨-೪-೫೬) ಎಂಬುದರಿಂದ ಧಾತುವಿಗೆ ವೀಭಾವವು ಪ್ರಾಪ್ತವಾದರೆ **ವಲಾದಾವಾರ್ಧಧಾತುಕೇ ವಿಕಲ್ಪ ಇಷ್ಯತೇ** (ಕಾ. ೨-೪-೫೬-೨) ಎಂಬವಚನದಿಂದ ಇಲ್ಲಿ ವೀಭಾವ ಬರುವುದಿಲ್ಲ. ಅಜ್ಮ ಶಬ್ದವು **ಞ್ನಿತ್ಯಾದಿರ್ನಿತ್ಯಂ**—ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ವಿಧುರಾ**—ಇದೇ ಸೂಕ್ತದ ಒಂದನೇ ಋಕ್ಕಿನಲ್ಲಿ ವ್ಯಾಖ್ಯಾತವಾಗಿದೆ.

**ರೇಜತೇ**—ರೇಜೃ ಕಂಪನೇ ಧಾತು. **ಭ್ಯಸತೇ ರೇಜತ ಇತಿ ಭಯವೇಪನಯೋಃ** (ನಿರು. ೩-೨೧. ಇತಿ ಯಾಸ್ಕಃ (ಇದು ಭಯಾರ್ಥದಲ್ಲಿಯೂ ಇದೆಯೆಂದು ಯಾಸ್ಕರ ಮತ) ಲಟ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಾಮೇಷು**—ಯಮು ಉಪರಮೇ. ಧಾತು. ಭಾವಾರ್ಥದಲ್ಲಿ ಘಞ್‌ಪ್ರತ್ಯಯ ಞಿತ್ತಾದುದರಿಂದ **ಅತ ಉಪಧಾಯಾಃ**—ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ ಬರುತ್ತದೆ. ಞಿತ್‌ಸ್ವರವು ಬಾಧಿತವಾಗಿ **ಕರ್ಷಾತ್ವತಃ**—ಸೂತ್ರದಿಂದ ಅಂತೋದಾತ್ತವು ಪ್ರಾಪ್ತವಾಗುತ್ತದೆ. ಆದರೆ ವೃಷಾದಿಯಲ್ಲಿ ಪಾಠಮಾಡಿರುವುದರಿಂದ. **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಪುನಃ ಆದ್ಯುದಾತ್ತಸ್ವರ ಬರುತ್ತದೆ. ಅಥವಾ ಯಾ ಪ್ರಾಪಣೇ ಧಾತು. ಇದಕ್ಕೆ **ಅರ್ತಿಸ್ತುಸು**—(ಉ. ಸೂ. ೧-೧೩೭) ಎಂಬುದರಿಂದ ಮನ್‌ಪ್ರತ್ಯಯ ನಿತ್ತಾದುದ ರಿಂದ ಆದ್ಯುದಾತ್ತವಾಗುತ್ತದೆ. ಸಪ್ತಮೀಬಹುವಚನಾಂತರೂಪ.

**ಯುಂಜತೇ**—ಯುಜಿರ್ ಯೋಗೇ ಧಾತು. ರುಧಾದಿ. ಲಟ್ ಪ್ರಥಮಪುರುಷಬಹುವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಶುಭೇ**—ಶುಭ ದೀಪ್ತೌ ಧಾತು. ಕರ್ಮಣಿಯಲ್ಲಿ **ಸಂಪದಾದಿಭ್ಯಃ ಕ್ವಿಪ್**—ಎಂಬುದರಿಂದ ಅಲ್ಲಿ ಪಠಿತವಾಗಿರುವುದರಿಂದ ಕ್ವಿಪ್. ಶುಭ್ ಶಬ್ದವಾಗುತ್ತದೆ. ಚತುರ್ಥೀಏಕವಚನಾಂತರೂಪ. ಸುಪರವಾದಾಗ ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪನಯಂತ**—ಪನ ವ್ಯವಹಾರೇ ಧಾತು. **ಗುಪೂಧೂಪವಿಚ್ಛಿಪಣಿಪನಿಭ್ಯ ಆಯಃ** (ಪಾ. ಸೂ. ೩-೧-೨೮) ಎಂಬುದರಿಂದ ಸ್ವಾರ್ಥದಲ್ಲಿ ಆಯಪ್ರತ್ಯಯ. **ಸನಾದ್ಯಂತಾ ಧಾತವಃ** ಸೂತ್ರದಿಂದ ಆಯಪ್ರತ್ಯಯಾಂತವಾದುದಕ್ಕೆ ಧಾತುಸಂಜ್ಞಾ. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ**—ಎಂಬುದರಿಂದ ಲಙ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಪನಾಯ ಎಂಬಲ್ಲಿ ಹ್ರಸ್ವ ಬರುತ್ತದೆ. ಪ್ರಥಮಪುರುಷಬಹುವಚನಕ್ಕೆ **ಝೋಽಂತಃ** ಸೂತ್ರದಿಂದ ಅಂತಾದೇಶ. ಶಪ್ ವಿಕರಣ **ಅತೋಗುಣೇ**—ಎಂಬುದರಿಂದ ಪರರೂಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ**—ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥



ಸಂಹಿತಾಪಾಠಃ

ಸ ಹಿ ಸ್ವಸೃತ್ಪೃಷದಶ್ವೋ ಯುವಾ ಗಣೋ೩ಽಯಾ ಈಶಾನ-

ಸ್ತವಿಷೀಭಿರಾವೃತಃ ।

ಅಸಿ ಸತ್ಯ ಋಣಯಾವಾನೇದ್ಯೋಽಸ್ಯಾ ಧಿಯಃ ಪ್ರಾವಿತಾಥಾ

ವೃಷಾ ಗಣಃ ॥ ೪ ॥

॥ ಪದಪಾಠಃ ॥

ಸಃ । ಹಿ । ಸ್ವ೽ಸೃತ್ । ಪೃಷತ್೽ಅಶ್ವಃ । ಯುವಾ । ಗಣಃ । ಅಯಾ । ಈ-
ಶಾನಃ । ತವಿಷೀಭಿಃ । ಆ೽ವೃತಃ ।
ಅಸಿ । ಸತ್ಯಃ । ಋಣ೽ಯಾವಾ । ಅನೇದ್ಯಃ । ಅಸ್ಯಾಃ । ಧಿಯಃ । ಪ್ರ೽ಅವಿತಾ
ಅಥ । ವೃಷಾ । ಗಣಃ ॥ ೪ ॥

॥ ಸಾಯಣಭಾಷ್ಯಂ ॥

ಸ ಹಿ ಸ ಖಲು ಮರುದ್ಗಣೋಽಯಾ ಅಸ್ಯ ಸರ್ವಸ್ಯ ಜಗತ ಈಶಾನ ಈಶ್ವರಶೀಲೋ ಭವತಿ। ಕೀದೃಶಃ। ಸ್ವಸೃತ್ ಸ್ವಯಮೇವ ಸರನ್। ನ ಹ್ಯನ್ಯಃ ಕಶ್ಚಿದಸ್ಯ ಮರುದ್ಗಣಸ್ಯ ಪ್ರೇರಕೋಽಸ್ತಿ। ಪೃಷದಶ್ವಃ। ಪೃಷತ್ಯಃ ಶ್ವೇತಬಿಂದ್ವಂಕಿತಾ ಮೃಗ್ಯೋಽಶ್ವಸ್ಥಾನೀಯಾ ಯಸ್ಯ ಸ ತಥೋಕ್ತಃ। ಯುವಾ ನಿತ್ಯತರುಣಃ ತವಿಷೀಭಿರನ್ಯೈಷಾಮಸಾಧಾರಣೈರ್ಬಲೈರಾವೃತಃ ಪರಿವೇಷ್ಟಿತಃ ಸತ್ಯಃ ಸತ್ಕರ್ಮಾರ್ಹಃ ಋಣಯಾವಾ ಸ್ತೋತೄಣಾಮೃಣಸ್ಯಾಪಗಮಯಿತಾ। ಬಹುಲಸ್ಯ ಧನಸ್ಯ ದಾತೇತ್ಯರ್ಥಃ। ಅನೇದ್ಯಃ। ಪ್ರಶಸ್ಯನಾಮೈತತ್। ಸರ್ವೈರನಿಂದಿತಃ ವೃಷಾ ಜಲಾನಾಂ ವರ್ಷಿತಾ। ಏವಂಭೂತೋ ಮರುದ್ಗಣೋಽಸ್ಯಾ ಧಿಯೋಽಸ್ಮದೀಯಸ್ಯಾಸ್ಯ ಕರ್ಮಣೋಽಥಾನಂತರಂ ಪ್ರಾವಿತಾಸಿ। ಪ್ರಕರ್ಷೇಣ ರಕ್ಷಿತಾ ಭವತಿ॥ ಅಯಾ। ಸುಪಾಂ ಸುಲುಗಿತಿ ಷಷ್ಠ್ಯಾ ಯಾಜಾದೇಶಃ। ಹಲಿ ಲೋಪಃ। ೭-೨-೧೧೩। ಇತೀದಮ ಇದ್ರೂಪಸ್ಯ ಲೋಪಃ। ಈಶಾನಃ। ಈಶ ಐಶ್ವರ್ಯೇ ಇತ್ಯಸ್ಮಾತ್ತಾಚ್ಛೀಲಿಕಶ್ಚಾನಶ್। ತಸ್ಯ ಲಸಾರ್ವಧಾತುಕತ್ವಾಭಾವೇನ ಚಿತ್ಸ್ವರೇಣಾಂತೋದಾತ್ತತ್ವಂ। ಅಯಾ ಈಶಾನ ಇತ್ಯತ್ರೈಷಾ ಅಕ್ಷಾದಿತ್ವಾತ್ಪ್ರಕೃತಿಭಾವಃ। ಅಸಿ। ಪುರುಷವ್ಯತ್ಯಯಃ। ಋಣಯಾವಾ। ಯಾ ಪ್ರಾಪಣ ಇತ್ಯಸ್ಮಾದಂತರ್ಭಾವಿತಣ್ಯರ್ಥಾದಾತೋ ಮನಿನ್ಕ್ವನಿಪ್ ವನಿಪ್। ಅನೇದ್ಯಃ। ಣಿದಿ ಕುತ್ಸಾಯಾಂ। ಋಹಲೋರ್ಣ್ಯದಿತಿ ಣ್ಯತ್। ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವೇ ಲಘೂಪಧಗುಣಃ। ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ॥

ಪ್ರತಿಪದಾರ್ಥ

**ಸ್ವಸೃತ್**— (ಇತರರ ಸಹಾಯವಿಲ್ಲದೇ) ತಾನೇ ಸಂಚರಿಸತಕ್ಕದ್ದೂ। **ಪೃಷದಶ್ವಃ**— ಬಿಂದುಗಳುಳ್ಳ ಮೃಗಗಳನ್ನು ವಾಹನವಾಗಿ ಉಳ್ಳದ್ದೂ। **ಯುವಾ**—(ನಿತ್ಯ) ತಾರುಣ್ಯದಿಂದ ಕೂಡಿದುದೂ। **ತವಿಷೀಭಿಃ**— (ಇತರರಿಂದ ಸೋಲಿಸಲಸಾಧ್ಯವಾದ) ಬಲಗಳಿಂದ। **ಆವೃತಃ**— ಸುತ್ತಲೂ ತುಂಬಿರುವುದೂ ಆದ। **ಸ ಹಿ**—ಅದೇ ಮರುತ್ತುಗಳ ಗಣವು। **ಅಯಾ**— ಈ ಸಕಲ ಜಗತ್ತಿಗೂ। **ಈಶಾನಃ**— ಪ್ರಭುವಾಗಿದೆ। **ಸತ್ಯಃ**—ಸತ್ಕರ್ಮಗಳಿಗೆ ಯೋಗ್ಯವಾದುದೂ। **ಋಣಯಾವಾ**—(ಭಕ್ತರಿಗೆ ಧನದಾನದಿಂದ) ಸಾಲದಿಂದ ಬಿಡಿಸುವುದೂ। **ಅನೇದ್ಯಃ**—

ಯಾರಿಂದಲೂ ದೂಷಿಸಲ್ಪಡದಿರುವುದೂ । **ವೃಷಾ**—ಮಳೆಯನ್ನು ಸುರಿಸುವುದೂ ಆದ ಮರುದ್ಗಣವು । **ಅಸ್ಯಾಃ ಧಿಯಃ ಅಥ**—ಈ ನಮ್ಮ ಯಜ್ಞಕರ್ಮದ । **ಪ್ರಾವಿತಾ ಅಸಿ**—ರಕ್ಷಕವಾಗುತ್ತದೆ ॥

ಭಾವಾರ್ಥ

ಲೋಕದ ಇತರ ಪ್ರಾಣಿಗಳೆಲ್ಲವೂ ಸಂಚಾರಕ್ಕಾಗಿ ಮರುತ್ತುಗಳ ಸಹಾಯವನ್ನಪೇಕ್ಷಿಸುತ್ತವೆ. ಆದರೆ ಮರುತ್ತುಗಳು ಮಾತ್ರ ಇತರ ಯಾರ ಸಹಾಯವೂ ಇಲ್ಲದೆ ತಾವೇ ಸಂಚರಿಸುತ್ತವೆ. ಇಂತಹ ಶಕ್ತಿಯುಳ್ಳವೂ, ಬಿಂದುಗಳುಳ್ಳ ಮೃಗಗಳೇ ವಾಹನವಾಗಿ ಉಳ್ಳವೂ, ತಾರುಣ್ಯದಿಂದ ಕೂಡಿದವೂ, ಇತರರಿಂದ ಹೊಂದಲಸಾಧ್ಯವಾದ ಬಲದಿಂದ ಕೂಡಿದವೂ ಆದ ಮರುತ್ತುಗಳ ಗಣವು ಈ ಲೋಕಕ್ಕೆಲ್ಲಾ ಪ್ರಭುವಾಗಿದೆ. ಸತ್ಕರ್ಮಗಳಿಗೆ ಯೋಗ್ಯವಾಗುದೂ, ಧನದಾನಾದಿಗಳಿಂದ ಭಕ್ತರನ್ನು ಸಾಲದಿಂದ ಬಿಡಿಸುವುದೂ, ಯಾರಿಂದಲೂ ದೂಷಿಸಲ್ಪಡದಿರುವುದೂ ಆದ ಮರುದ್ಗಣವು ನಮ್ಮ ಈ ಯಜ್ಞ ಕರ್ಮದ ರಕ್ಷಕವಾಗುತ್ತದೆ.

## English Translation

The troop of Maruts is self-moving, deer-borne, ever young, lords of this earth, and invested with vigour ; you who are sincere liberators from debt, irreproachable and shedders of rain, are the protectors of this our rite.

ವಿಶೇಷವಿಷಯಗಳು

**ಸ್ವಸೃತ್—ಸ್ವಯಮೇವ ಸರನ್** । ಇನ್ನೊಬ್ಬರ ಪ್ರೇರಣೆಯಿಲ್ಲದೆ ತಾವೇ ಸಂಚರಿಸುವ.

**ಪೃಷದಶ್ವಃ—ಪೃಷತ್ಯಃ ಶ್ವೇತಬಿಂದ್ವಂಕಿತಾ ಮೃಗ್ಯೋಽಶ್ವಸ್ಥಾನೀಯಾ ಯಸ್ಯ** । ಪೃಷತೀ ಎಂಬ ಶ್ವೇತಬಿಂದುಗಳಿಂದ ಕೂಡಿದ ಜಿಂಕೆಗಳೇ ಮರುದ್ದೇವತೆಗಳಿಗೆ ಅಶ್ವವಾಗಿರುವುದರಿಂದ ಅಂತಹ ಅಶ್ವದಿಂದ ಕೂಡಿದ ರಥವುಳ್ಳ, ಎಂದರ್ಥವು. **ಪೃಷತ್ಯೋ ಮರುತಾಂ** (ನಿ. ೨-೨೮) ಎಂದು ನಿರ್ವಚನವಿರುವುದು.

**ಯುವಾ**—ನಿತ್ಯ ತರುಣರು. ಮರುತ್ತುಗಳ ಬಲವು ಹೆಚ್ಚುಕಡಿಮೆಯಿಲ್ಲದೆ ಯಾವಾಗಲೂ ಅತಿಶಯವಾಗಿಯೇ ಇರುವುದರಿಂದ ಯುವಕರಂತೆ ಬಲಶಾಲಿಗಳಾಗಿರುವರು ಎಂದಭಿಪ್ರಾಯವು.

**ಸತ್ಯಃ—ಸತ್ಕರ್ಮಾರ್ಹಃ**—ಯಜ್ಞಾದಿಸತ್ಕರ್ಮಗಳಿಂದ ಆರಾಧಿಸಲ್ಪಡುವವರು

**ಋಣಯಾವಾ—ಸ್ತೋತೃಣಾಮೃಣಸ್ಯಾಪಗಮಯಿತಾ** । ಸ್ತೋತ್ರಮಾಡುವವರ ಋಣಬಾಧೆಯನ್ನು ಪರಿಹಾರಮಾಡುವ:

**ಅನೇದ್ಯಃ—ಣಿದಿ ಕುತ್ಸಾಯಾಂ। ಸರ್ವೈರನಿಂದಿತಃ।** ಯಾರಿಂದಲೂ ನಿಂದಿಸಲ್ಪಡದಿರುವ ಎಂದರೆ ಸರ್ವರಿಂದಲೂ ಪ್ರಶಂಸಿಸಲ್ಪಡುವ

**ಧಿಯಃ— ಕರ್ಮಣಃ** । ಧೀಶಬ್ದಕ್ಕೆ ಇಲ್ಲಿ ಕರ್ಮವೆಂದರ್ಥವು. (ನಿ. ೩-೧) ನಾವು ಮಾಡುವ ಯಜ್ಞಾದಿ ಕರ್ಮಾನುಷ್ಠಾನಾನಂತರ.

**ಈಶಾನಃ— ಈಶ ಐಶ್ವರ್ಯೇ** । ಜಗತ್ತಿಗೆ ಸ್ವಾಮಿ, ಅಧಿಪತಿ.

॥ ವ್ಯಾಕರಣಪ್ರಕ್ರಿಯಾ ॥

**ಸ್ವಸೃತ್**—ಸೃ ಗತೌ ಧಾತು. **ಕ್ವಿಪ್‌ಚ** ಎಂಬುದರಿಂದ ಕ್ವಿಪ್. **ಹ್ರಸ್ವಸ್ಯ ಪಿತಿಕೃತಿತುಕ್** ಎಂಬುದರಿಂದ ಋಕಾರಕ್ಕೆ ತುಗಾಗಮ. **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಯಾ**—ಇದಮ್ ಶಬ್ದ. ಷಷ್ಠೀ ಏಕವಚನಕ್ಕೆ **ಸುಪಾಂಸುಲುಕ್** ಸೂತ್ರದಿಂದ ಯಾಚಾದೇಶ. ಹಲಾದಿ ವಿಭಕ್ತಿ ಪರದಲ್ಲಿರುವುದರಿಂದ **ಹಲಿ ಲೋಪಃ** (ಪಾ. ಸೂ ೭-೨-೧೧೩) ಎಂಬುದರಿಂದ ಇದಮಿನ ಇದಿಗೆ ಲೋಪ. **ತ್ಯದಾದೀನಾಮಃ** ಎಂಬುದರಿಂದ ಅತ್ವ. **ಅತೋಗುಣೇ** ಸೂತ್ರದಿಂದ ಪರರೂಪ. ಅಯಾ ಎಂದು ರೂಪವಾಗುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ.

**ಈಶಾನಃ**—ಈಶ ಐಶ್ವರ್ಯೇ ಧಾತು. ತಾಚ್ಛೀಲ್ಯಾರ್ಥ ತೋರುವಾಗ **ತಾಚ್ಛೀಲ್ಯವಯೋ**—(ಪಾ. ಸೂ. ೩-೨-೧೨೯) ಸೂತ್ರದಿಂದ ಚಾನಶ್. ಇದು ಲಕಾರಸ್ಥಾನದಲ್ಲಿ ಬಾರದಿರುವುದರಿಂದ **ತಾಸ್ಯನುದಾತ್ತೇತ್**—ಸೂತ್ರದಲ್ಲಿ ಲಸಾರ್ವಧಾತುಕಕ್ಕೆ ಅನುದಾತ್ತಸ್ವರ ಹೇಳಿರುವುದರಿಂದ ಇಲ್ಲಿ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಅಯಾ+ಈಶಾನಃ ಎಂದಿರುವಾಗ ಗುಣಸಂಧಿ ಬರಬೇಕಾಗುತ್ತದೆ. ಆದರೆ ಈಷಾ ಅಕ್ಷಾದಿಯಲ್ಲಿ ಸೇರಿರುವುದರಿಂದ **ಈಷಾ ಅಕ್ಷಾದೀನಾಂ ಛಂದಸಿ ಪ್ರಕೃತಿಭಾವೋ ವಕ್ತವ್ಯಃ** (ವಾ. ೩-೬೮೫) ಎಂಬುದರಿಂದ ಪ್ರಕೃತಿಭಾವ ಬರುತ್ತದೆ.

ಅಸಿ—ಅಸ ಭುವಿ ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಲಟ್. ಪ್ರಥಮಪುರುಷ ಏಕವಚನಕ್ಕೆ ಮಧ್ಯಮಪುರುಷ ಏಕವಚನದ ಸಿಪ್ ಬರುತ್ತದೆ. ಅಸ್-ಸಿ ಎಂದಿರುವಾಗ **ತಾಸಸ್ತ್ಯೋರ್ಲೋಪಃ** ( ಪಾ. ಸೂ. ೭-೪-೫೦ ) ಎಂಬುದರಿಂದ ಸಾದಿಪ್ರತ್ಯಯ ನಿಮಿತ್ತವಾಗಿ ಧಾತುವಿನ ಸಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

**ಋಣಯಾವಾ**—ಯಾ ಪ್ರಾಪಣೇ ಧಾತು. ಣಿಜರ್ಥವು ಧಾತ್ವಂತರ್ಭೂತವಾದಾಗ ಇದಕ್ಕೆ **ಅತೋಮನಿನ್‌ಕ್ವನಿಪ್‌ವನಿಪಶ್ಚ** (ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ. ಯಾವನ್ ಶಬ್ದವಾಗುತ್ತದೆ. ವನಿಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ. ಋಣಸ್ಯ ಯಾವಾ ಋಣಯಾವಾ. **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಅನೇದ್ಯಃ – ಣಿದಿ ಕುತ್ಸಾಯಾಂ ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಇದಿತ್ತಾದುದರಿಂದ ಧಾತುವಿಗೆ **ಇದಿತೋ ನುಮ್‌ಧಾತೋಃ** ಸೂತ್ರದಿಂದ ನುಮಾಗಮ ಪ್ರಾಪ್ತವಾದರೆ **ಆಗಮಾನುಶಾಸನಮನಿತ್ಯಂ** ಎಂಬ ವಚನದಿಂದ ಇಲ್ಲಿ ಬರುವುದಿಲ್ಲ. ಆಗ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಣ್ಯತನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ನ ನೇದ್ಯಃ ಅನೇದ್ಯಃ ನಞ್ ತತ್ಪುರುಷ ಸಮಾಸದಲ್ಲಿ **ತತ್ಪುರುಷೇತುಲ್ಯಾರ್ಥ**—ಸೂತ್ರದಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ತ್ರಾವಿತಾ**—ಅವ ರಕ್ಷಣೇ ಧಾತು. ಕರ್ತ್ರರ್ಥದಲ್ಲಿ ತೃಚ್ ಪ್ರತ್ಯಯ. ಅವಿತೃ ಶಬ್ದವಾಗುತ್ತದೆ. ಸು ಪರವಾದಾಗ **ಋದುಶನ**—ಸೂತ್ರದಿಂದ ಅನಙಾದೇಶ. ಅಪ್ ತೃನ್ ತೃಚ್—ಸೂತ್ರದಿಂದ ಉಪಧಾದೀರ್ಘ. **ಹಲ್**-

ಜಭ್ಯೋಃ ಸೂತ್ರದಿಂದ ಸುಲೋಪ. ನಲೋಪ. ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ.

ವೃಷಾ—ವೃಷನ್ ಶಬ್ದವು ಕನಿನ್ ಪ್ರತ್ಯಯಾಂತವಾಗಿ ಆದ್ಯುದಾತ್ತವಾಗುತ್ತದೆ. ಪ್ರಥಮಾ ಏಕವಚನದ ರೂಪ.



॥ ಸಂಹಿತಾಪಾಠಃ ॥

ಪಿತುಃ ಪ್ರತ್ನಸ್ಯ ಜನ್ಮನಾ ವದಾಮಸಿ ಸೋಮಸ್ಯ ಜಿಹ್ವಾ ಪ್ರ
ಜಿಗಾತಿ ಚಕ್ಷಸಾ ।
ಯದೀಮಿಂದ್ರಂ ಶಮ್ಯೃಕ್ವಾಣ ಆಶತಾದಿನ್ನಾಮಾನಿ ಯಜ್ಞಿಯಾ-
ನಿ ದಧಿರೇ ॥ ೫ ॥

ಪದಪಾಠಃ

ಪಿತುಃ । ಪ್ರತ್ನಸ್ಯ । ಜನ್ಮನಾ । ವದಾಮಸಿ । ಸೋಮಸ್ಯ । ಜಿಹ್ವಾ । ಪ್ರ । ಜಿ-
ಗಾತಿ । ಚಕ್ಷಸಾ ।
ಯತ್ । ಈಂ । ಇಂದ್ರಂ । ಶಮಿ । ಋಕ್ವಾಣಃ । ಆಶತ । ಆತ್ । ಇತ್ ।
ನಾಮಾನಿ । ಯಜ್ಞಿಯಾನಿ । ದಧಿರೇ ॥ ೫ ॥

॥ ಸಾಯಣಭಾಷ್ಯಂ ॥

ಪ್ರತ್ನಸ್ಯ ಚಿರಂತನಸ್ಯ ಪಿತುರಸ್ಮಾಕಂ ಜನಕಸ್ಯ ರಹೂಗಣಸ್ಯ ಸಕಾಶಾದ್ಯಜ್ಜನ್ಮ ತೇನ ವಯಂ ವದಾಮಸಿ । ಬ್ರೂಮಃ । ವಕ್ಷ್ಯಮಾಣಂ ವೃತ್ತಾಂತಮಸ್ಮಾಕಂ ಪಿತೋಪದಿಷ್ಟವಾನ್ ಅತೋ ವಯಂ

ಬ್ರೂಮ ಇತ್ಯರ್ಥಃ । ಕೋಽಸೌ ವೃತ್ತಾಂತ ಇತಿ ಚೇತ್ ಉಚ್ಯತೇ । ಸೋಮಸ್ಯ ಯಜ್ಞೇಷ್ವಭಿಷುತಸ್ಯ ಸೋಮದ್ರವ್ಯಸ್ಯ ಚಕ್ಷಸಾ ಪ್ರಕಾಶಮಾನಯಾಹುತ್ಯಾ ಸಹಿತಾ ಜಿಹ್ವಾ ಸ್ತುತಿರೂಪಾ ವಾಕ್ ಪ್ರ ಜಿಗಾತಿ । ಮರುದ್ಗಣಂ ಪ್ರಕರ್ಷೇಣ ಗಚ್ಛತಿ । ಯಜ್ಞೇಷು ಸೋಮಾಹುತಿಃ ಸ್ತುತಿಶ್ಚ ಮರುದ್ಭ್ಯಃ ಕ್ರಿಯತೇ । ಯಸ್ಮಾದೇತೇ ಸಮಿಂದ್ರಂ ಶಮಿ ವೃತ್ರವಧಾದಿರೂಪೇ ಕರ್ಮಣಿ ಋಕ್ವಾಣಃ ಪ್ರಹರ ಭಗವೋ ಜಹಿ ವೀರಯಸ್ವೇತ್ಯೇವಂರೂಪಯಾ ಸ್ತುತ್ಯಾ ಯುಕ್ತಾಃ ಸಂತ ಆಶತ ಪ್ರಾಪ್ನುವನ್ ನ ಪರ್ಯತ್ಯಾಕ್ಷುಃ ಆದಿತ್ ಏವಮಿಂದ್ರಪ್ರಾಪ್ತ್ಯನಂತರಮೇವ ಯಜ್ಞಿಯಾನಿ ಯಜ್ಞಾರ್ಹಾಣೀದೃಕ್ ಚಾನ್ಯಾದೃಕ್ ಚೇತ್ಯೇವಮಾದೀನಿ ನಾಮಾನೀಂದ್ರಪ್ರಸಾದಾಲ್ಲಬ್ಧ್ವಾ ದಧಿರೇ । ಧೃತವಂತಃ । ತಸ್ಮಾದೇಷಾಂ ಯಜ್ಞೇ ಸೋಮಾಹುತಿಃ ಸ್ತುತಿಶ್ಚ ಕ್ರಿಯತೇ॥ ಶಮಿ। ಶಮೀತಿ ಕರ್ಮನಾಮ। ಸಪ್ತಮ್ಯೇಕವಚನೇ ಛಾಂದಸ ಈಕಾರಲೋಪಃ । ಋಕ್ವಾಣಃ । ಋಚ ಸ್ತುತೌ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಛಂದಸೀವನಿಪಾವಿತಿ ಮತ್ವರ್ಥೀಯೋ ವನಿಪ್ । ಅಂತ್ಯವಿಕಾರಶ್ಛಾಂದಸಃ । ಯದ್ವಾ । ಅಯಸ್ಮಯಾದಿಷು ಕ್ವಚಿದುಭಯಂ ಭವತಿ । ಕಾ. ೧-೪-೨೦ । ಇತ್ಯುಕ್ತತ್ವಾತ್ ಸ ಸುಷ್ಟುಭಾ ಸ ಋಕ್ವತೇತ್ಯಾದಾವಿವ ಪದತ್ವಾತ್ಕುತ್ವಂ ಭತ್ವಾಜ್ಜಶ್ತ್ವಾಭಾವಃ । ಆಶತ । ಅಶೂ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಯಜ್ಞಿಯಾನಿ । ಯಜ್ಞರ್ತ್ವಿಗ್ಭ್ಯಾಂ ಘಖಞಾವಿತ್ಯರ್ಹಾರ್ಥೇ ಘಃ ॥

। ಪ್ರತಿಪದಾರ್ಥ ।

**ಪ್ರತ್ನಸ್ಯ**—ಪುರಾತನನಾದ । **ಪಿತುಃ**—(ರಹೂಗಣನೆಂಬ) ನಮ್ಮ ತಂದೆಯಾದ (ಜನ್ಮಕೊಟ್ಟವನಾದ) । **ವದಾಮಸಿ**—(ಅವನು ನಮಗೆ ಉಪದೇಶಿಸಿದ ಸತ್ಯಾಂಶವನ್ನು) ಪ್ರಕಟಿಸುತ್ತೇವೆ (ಅದೇನೆಂದರೆ) । **ಸೋಮಸ್ಯ**—(ಯಜ್ಞದಲ್ಲಿ ಹಿಂಡಿದ) ಸೋಮರಸದ । **ಚಕ್ಷಸಾ**—ಪ್ರಕಾಶಮಾನವಾದ ಆಹುತಿಯಿಂದ ಕೂಡಿಕೊಂಡು । **ಜಿಹ್ವಾ**—ಸ್ತುತಿರೂಪವಾದ ವಾಕ್ಕು । **ಪ್ರಜಿಗಾತಿ**—(ಮರುದ್ಗಣವನ್ನು) ಸೇರುತ್ತದೆ (ಸೋಮಾಹುತಿಯೂ ಸ್ತುತಿಯೂ ಮರುತ್ತುಗಳಿಗೆ ಒಟ್ಟಿಗೆ ಅರ್ಪಿತವಾಗುತ್ತವೆ) । **ಈಂ ಇಂದ್ರಂ**—ಈ ಇಂದ್ರನನ್ನು । **ಶಮಿ** (ವೃತ್ರವಧಾದಿರೂಪವಾದ) ಕರ್ಮದಲ್ಲಿ । **ಋಕ್ವಾಣಃ**—("ಪ್ರಹರ........" ಇತ್ಯಾದಿ) ಸ್ತುತಿಗಳಿಂದ ಕೂಡಿಕೊಂಡು । **ಆಶತ**—(ಇಂದ್ರನನ್ನು ತ್ಯಜಿಸದೆ) ಜೊತೆಯಲ್ಲಿ ಸೇರಿಕೊಂಡವು । **ಆದಿತ್**—ಅನಂತರವೇ । **ಯಜ್ಞಿಯಾನಿ**—ಯಜ್ಞದಲ್ಲಿ (ಹೊಗಳಲು) ಯೋಗ್ಯವಾದ । **ನಾಮಾನಿ**—ಹೆಸರುಗಳನ್ನು । **ದಧಿರೇ**—(ಇಂದ್ರನ ಅನುಗ್ರಹದಿಂದ) ಹೊಂದಿದವು. ।

ಭಾವಾರ್ಥ

ನಮಗೆ ಜನ್ಮವನ್ನು ಕೊಟ್ಟ ಪುರಾತನನೂ ರಹೂಗಣನೆಂಬ ಹೆಸರುಳ್ಳವನೂ ಆದ ನಮ್ಮ ತಂದೆಯು ನಮಗೆ ಒಂದು ಸತ್ಯಾಂಶವನ್ನು ಉಪದೇಶಿಸಿ ತಿಳಿಸಿದ್ದಾನೆ. ಅದನ್ನು ನಾವು ಈಗ ಪ್ರಕಟಿಸುತ್ತೇವೆ. ಅದೇನೆಂದರೆ ಯಜ್ಞದಲ್ಲಿ ಪ್ರಕಾಶಮಾನವಾದ ಸೋಮಾಹುತಿಯೂ, ಸ್ತುತಿಯೂ ಮರುತ್ತುಗಳಿಗೆ ಒಟ್ಟಿಗೆ ಅರ್ಪಿತವಾಗುತ್ತವೆ. ಆದಾದಮೇಲೆ ಮರುತ್ತುಗಳು ವೃತ್ರವಧಾದಿಕಾರ್ಯಗಳಲ್ಲಿ ತೊಡಗಿದ ಇಂದ್ರನನ್ನು "ಪ್ರಹರ..........." ಇತ್ಯಾದಿ ಉತ್ತೇಜಕವಾಕ್ಯಗಳಿಂದ ಕೂಡಿಕೊಂಡು ಬಿಡದೆ ಅವನ ಜೊತೆಯಲ್ಲಿಯೇ ಸೇರಿಕೊಂಡಿರುತ್ತವೆ. ಅನಂತರ ಯಜ್ಞದಲ್ಲಿ ಹೊಗಳಲು ಯೋಗ್ಯವಾದ ಹೆಸರುಗಳನ್ನು ಇಂದ್ರನ ಅನುಗ್ರಹದಿಂದ ಹೊಂದುತ್ತವೆ.

## English Translation

We declare by our birth from our ancient ( late ) father, that the tongue of praise accompanies the manifesting invocation of the Maruts at the libations of the Soma ; for, as they stood by, encouraging Indra in ihe conflict they have acquired names that are to be recited at sacrifices.

॥ ವಿಶೇಷವಿಷಯಗಳು ॥

**ಪ್ರತ್ನಸ್ಯ ಪಿತುಃ**—**ಚಿರಂತನಸ್ಯ ಪಿತುರಸ್ಮಾಕಂ ಜನಕಸ್ಯ ರಹೂಗಣಸ್ಯ ಸಕಾಶಾತ್** । ಪೂರ್ವಿಕನಾದ ಅಥವಾ ಹಿರಿಯನಾದ ರಹೂಗಣನಾಮಕಋಷಿಯಾದ ನಮ್ಮ ತಂದೆಯಿಂದ.

**ವದಾಮಸಿ**—**ಬ್ರೂಮಃ** । ಹೇಳುತ್ತೇವೆ. ಇಲ್ಲಿ ಗೋತಮನು ಒಬ್ಬನೇ ಆದರೂ, ಕವಿಗಳು, ಗ್ರಂಥಕರ್ತರು ಮಾತನಾಡುವಾಗ ನಾವು ಎಂಬ ಬಹುವಚನವನ್ನೇ ಸಾಧಾರಣವಾಗಿ ಉಪಯೋಗಿಸುವುದು ರೂಢಿಯಾಗಿರುವುದರಿಂದ ಇಲ್ಲಿ ವದಾಮಸಿ ಎಂಬ ಬಹುವಚನಶಬ್ದ ಪ್ರಯೋಗವಿರುವುದು.

**ಜಿಹ್ವಾ**—ನಾಲಗೆ ಎಂದರೆ ನಾಲಗೆಯಿಂದ ಉಚ್ಚರಿಸಲ್ಪಡುವ ಸ್ತುತಿರೂಪವಾದ ವಾಕ್ಯವೆಂದರ್ಥವು.

**ಜಿಗಾತಿ**—**ಗಚ್ಛತಿ** । ಮರುದ್ಗಣಗಳ ಸಮೀಪಕ್ಕೆ ಹೋಗಿ ಸೇರುವುದು. ಎಂದರೆ ಅವರಿಗೆ ಕೇಳಿಸುವುದು.

**ಶಮಿ**—ಶಮಿ ಎಂದರೆ ಕರ್ಮವು. (ನಿ. ೩-೧)ವೃತ್ರವಧಾದಿ ಕರ್ಮಗಳಲ್ಲಿ.

**ಋಕ್ವಾಣಃ**—**ಋಚ ಸ್ತುತೌ** । ಋಗ್ರೂಪವಾದ ಸ್ತುತಿಗಳಿಂದ ಯುಕ್ತರಾಗಿ.

**ನಾಮಾನಿ ಯಜ್ಞಿಯಾನಿ ದಧಿರೆ**—ಯಜ್ಞಗಳಲ್ಲಿ ನಿಮ್ಮ ಹೆಸರುಗಳು ಪಠಿಸಲ್ಪಡುವುವು. ಎಂದರೆ ನೀವು ಇಂದ್ರನಿಗೆ ವೃತ್ರವಧಾದಿಗಳಲ್ಲಿ " **ಪ್ರಹರ ಭಗವೋ ಜಹಿ** " ಎಂದು ಮೊದಲಾದ ವಾಕ್ಯಗಳಿಂದ ಇಂದ್ರನನ್ನು ಪ್ರೋತ್ಸಾಹಿಸಿ ಸಹಾಯಮಾಡಿದ್ದರಿಂದ ನಿಮ್ಮ ಹೆಸರುಗಳು ಯಜ್ಞಗಳಲ್ಲಿ ಪಠಿಸಲ್ಪಡಲು ಯೋಗ್ಯಗಳಾದವು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ವದಾಮಸಿ**—ವದ ವ್ಯಕ್ತಾಯಾಂ ವಾಚಿ. ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಶಪ್ ವಿಕರಣ. **ಅತೋದೀರ್ಘೋಽಯಞಿ** ಎಂಬುದರಿಂದ ಮಸ್ ನಿಮಿತ್ತವಾಗಿ ಅದಂತಾಂಗಕ್ಕೆ ದೀರ್ಘ. **ಇದಂತೋಮಸಿ** ಎಂಬುದರಿಂದ ಪ್ರತ್ಯಯಕ್ಕೆ ಇಕಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜಿಗಾತಿ**—ಗಾ ಸ್ತುತೌ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ಪ್ರತ್ಯಯ. ಶಪಿಗೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಹ್ರಸ್ವಃ**—ಸೂತ್ರದಿಂದ ಅಭ್ಯಾಸಕ್ಕೆ ಹ್ರಸ್ವ. **ಬಹುಲಂ ಛಂದಸಿ** - ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಕುಹೋಶ್ಚುಃ**—ಸೂತ್ರದಿಂದ ಚುತ್ವ. ಇಲ್ಲಿಯೂ ನಿಘಾತಸ್ವರ ಬರುತ್ತದೆ.

**ಶಮಿ**—ಶಮೀ ಎಂಬುದು ಕರ್ಮದ ಹೆಸರು. ಸಪ್ತಮೀ ಏಕವಚನ ಪರವಾದಾಗ ಛಾಂದಸವಾಗಿ ಶಮೀ ಎಂಬುದರ ಈಕಾರಕ್ಕೆ ಲೋಪ ಬರುತ್ತದೆ.

**ಋಕ್ವಾಣಃ**—ಋಚ ಸ್ತುತೌ ಧಾತು. ಭಾವಾರ್ಥ ತೋರುವಾಗ **ಸಂಪದಾದಿಭ್ಯಃ ಕ್ವಿಪ್**—ಎಂಬುದರಿಂದ ಕ್ವಿಪ್. ಋಚ್ ಎಂದು ರೂಪವಾಗುತ್ತದೆ ಋಚ್ ಅಸ್ಯ ಅಸ್ತಿ ಎಂದು ಮತ್ವರ್ಥ ತೋರುವಾಗ **ಛಂದಸೀ ವನಿಪೌ**—ಎಂಬುದರಿಂದ ವನಿಪ್ ಪ್ರತ್ಯಯ. ಛಾಂದಸವಾಗಿ ಅಂತ್ಯವಿಕಾರ ಅಂದರೆ ಚಕಾರಕ್ಕೆ ಕಕಾರಾದೇಶ ಬರುತ್ತದೆ. ಋಕ್ವನ್ ಶಬ್ದವಾಗುತ್ತದೆ. ಬಹುವಚನ ಜಸ್ ಪರವಾದಾಗ ನಾಂತೋಪಧೆಗೆ ದೀರ್ಘ. **ಅಟ್ಕುಪ್ವಾಙ್**—ಸೂತ್ರದಿಂದ ಣತ್ವ. ಋಕ್ವಾಣಃ ಎಂದು ರೂಪವಾಗುತ್ತದೆ. ಅಥವಾ ಅಯಸ್ಮಯಾದಿಷು ಚ ಸೂತ್ರದಲ್ಲಿ **ಕ್ವಚಿದುಭಯಂ ಭವತಿ** (ಕಾ. ೧-೪-೨೦) ಎಂಬ ವಚನವಿರುವುದರಿಂದ ಪದಸಂಜ್ಞಾ, ಭಸಂಜ್ಞಾ ಎರಡೂ ಬರುತ್ತವೆ. 'ಸ ಸುಷ್ಟುಭಾ ಸ ಋಕ್ವತಾ' ಎಂಬಿವೇ ಮುಂತಾದ ಸ್ಥಳಗಳಲ್ಲಿ ಹೇಗೆ ಪದಸಂಜ್ಞೆ ಇದೆಯೆಂದು ಕುತ್ವ ಬಂದಿದೆಯೋ ಅದರಂತೆ ಇಲ್ಲಿಯೂ ಪದಸಂಜ್ಞಾ ನಿಬಂಧನವಾಗಿ ಕುತ್ವ. ಭಸಂಜ್ಞೆಯೂ ಇರುವುದರಿಂದ ಕಕಾರಕ್ಕೆ ಜಶ್ತ್ವ ಬರುವುದಿಲ್ಲ.

**ಆಶತ**—ಅಶೂ ವ್ಯಾಪ್ತೌ ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ (ಶ್ನು) ಲುಕ್ ಆಗ ಅನಕಾರದ ಪರದಲ್ಲಿರುವುದರಿಂದ **ಆತ್ಮನೇಪದೇಷ್ವನತಃ** ಸೂತ್ರದಿಂದ ಝಪ್ರತ್ಯಯಕ್ಕೆ ಅತಾದೇಶ. **ಆಡಜಾದೀನಾಮ್** ಎಂಬುದರಿಂದ ಅಂಗಕ್ಕೆ ಆಡಾಗಮ. ಆಶತ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಯಜ್ಞಿಯಾನಿ**—ಅರ್ಹಾರ್ಥದಲ್ಲಿ ಯಜ್ಞಶಬ್ದದ ಮೇಲೆ **ಯಜ್ಞರ್ತ್ವಿಗ್ಭ್ಯಾಂ ಘಖಞೌ** (ಪಾ. ಸೂ. ೫-೧-೭೧) ಎಂಬುದರಿಂದ ಘ ಪ್ರತ್ಯಯ. **ಆಯನೇಯೀನೀಯಿಯಃ**—ಸೂತ್ರದಿಂದ ಅದಕ್ಕೆ ಇಯಾದೇಶ. **ಯಸ್ಯೇತಿಚ**—ಸೂತ್ರದಿಂದ ಪ್ರಾತಿಪದಿಕದ ಅಕಾರಕ್ಕೆ ಲೋಪ. ಬಹುವಚನದಲ್ಲಿ ನಪುಂಸಕದಲ್ಲಿ ಶಿ ಆದೇಶ **ನಪುಂಸಕಸ್ಯಝಲಚಃ**—ಎಂಬುದರಿಂದ ನುಮಾಗಮ. ಶಿಗೆ ಸರ್ವನಾಮಸ್ಥಾನಸಂಜ್ಞೆ ಇರುವುದರಿಂದ **ಸರ್ವನಾಮಸ್ಥಾನೇಚಾಸಂಬುದ್ಧೌ**—ಎಂಬುದರಿಂದ ನಾಂತೋಪಧೆಗೆ ದೀರ್ಘ. ಪ್ರತ್ಯಯಸ್ವರದಿಂದ ಇಯಾದೇಶದ ಇಕಾರ ಉದಾತ್ತವಾಗುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಶ್ರಿಯಸೇ ಕಂ ಭಾನುಭಿಃ ಸಂ ಮಿಮಿಕ್ಷಿರೇ ತೇ ರಶ್ಮಿಭಿಸ್ತ ಋ-
ಕ್ವಭಿಃ ಸುಖಾದಯಃ ।
ತೇ ವಾಶೀಮಂತ ಇಷ್ಮಿಣೋ ಅಭೀರವೋ ವಿದ್ರೇ ಪ್ರಿಯಸ್ಯ
ಮಾರುತಸ್ಯ ಧಾಮ್ನಃ ॥ ೬ ॥

ಪದಪಾಠಃ

ಶ್ರಿಯಸೇ । ಕಂ । ಭಾನುಽಭಿಃ । ಸಂ । ಮಿಮಿಕ್ಷಿರೇ । ತೇ । ರಶ್ಮಿಽಭಿಃ । ತೇ ।
ಋಕ್ವಽಭಿಃ । ಸುಽಖಾದಯಃ ।
ತೇ । ವಾಶೀಽಮಂತಃ । ಇಷ್ಮಿಣಃ । ಅಭೀರವಃ । ವಿದ್ರೇ । ಪ್ರಿಯಸ್ಯ । ಮಾ-
ರುತಸ್ಯ । ಧಾಮ್ನಃ ॥ ೬ ॥

॥ ಸಾಯಣಭಾಷ್ಯಂ ॥

ತೇ ಪೂರ್ವೋಕ್ತಾ ಮರುತೋ ಭಾನುಭಿರ್ಭಾನುಶೀಲೈರ್ದೀಪ್ಯಮಾನೈಃ ಸೂರ್ಯರಶ್ಮಿಭಿಃ ಸಹ ಕಂ ವೃಷ್ಟ್ಯುದಕಂ ಶ್ರಿಯಸೇ ಶ್ರಯಿತುಂ ಪ್ರಾಣಿಭಿಃ ಸೇವಿತುಂ ಸಂ ಮಿಮಿಕ್ಷಿರೇ । ಸಮ್ಯಗ್ಮೇಢುಮಿಚ್ಛಂತಿ । ಪೃಥಿವೀಂ ವೃಷ್ಟ್ಯುದಕೇನ ಸಮ್ಯಕ್ ಸೇಕ್ತುಮಿಚ್ಛಂತಿ । ಏವಂ ವೃಷ್ಟಿಮುತ್ಪಾದ್ಯ ತೇ ಮರುತ ಋಕ್ವಭಿಃ ಸ್ತುತಿಮದ್ಭಿರೃತ್ವಿಗ್ಭಿಃ ಸಹ ಸುಖಾದಯಃ ಶೋಭಸ್ಯ ಹವಿಷೋ ಭಕ್ಷಯಿತಾರೋ ಭವಂತಿ । ವಾಶೀಮಂತಃ । ವಾಶೀತಿ ವಾಙ್ನಾಮ । ಶೋಭನಯಾ ಸ್ತುತಿಲಕ್ಷಣಯಾ ವಾಚೋಪೇತಾಃ ಇಷ್ಮಿಣೋ ಗತಿಮಂತಃ ಅಭೀರವೋ ಭಯರಹಿತಾಸ್ತೇ ಮರುತಃ । ಪ್ರಿಯಸ್ಯ ಸರ್ವಾಭಿಮತಸ್ಯ ಮಾರುತಸ್ಯ ಮರುತ್ಸಂಬಂಧಿನೋ ಧಾಮ್ನಃ ಸ್ಥಾನಸ್ಯ ಸರ್ವಾಭಿಮತಂ ಮರುತ್ಸಂಬದ್ಧಂ ವಿಶಿಷ್ಟಂ ಸ್ಥಾನಂ ವಿದ್ರೇ । ಲಬ್ಧವಂತಃ ॥ ಶ್ರಿಯಸೇ । ತುಮರ್ಥೇ ಸೇಸೇನಿತಿ ಕಸೇನ್ಪ್ರತ್ಯಯಃ । ಮಿಮಿಕ್ಷಿರೇ । ಮಿಹ ಸೇಚನೇ । ಅಸ್ಮಾದಿಚ್ಛಾಸನಂತಾಲ್ಲಿಟ್ಯಮಂತ್ರ ಇತಿ ನಿಷೇಧಾದಾಮಭಾವಃ । ವ್ಯತ್ಯಯೇನಾತ್ಮನೇಪದಂ । ಸುಖಾದಯಃ

ಖಾದೃ ಭಕ್ಷಣೇ । ಔಣಾದಿಕ ಇಪ್ರತಯಃ । ಶೋಭನಾ ಖಾದಿರ್ಭಕ್ಷಣಂ ಯೇಷಾಂ । ನಞ್ಸುಭ್ಯಾಮಿತ್ಯು-ತ್ತರಪದಾಂತೋದಾತ್ತತ್ವಂ । ಇಷ್ಮಿಣಃ । ಇಷ ಗತೌ । ಇಷುಯುಧೀಂಧೀತ್ಯಾದಿನಾ ಮಕ್ । ತತೋ ಮತ್ವರ್ಥೀಯ ಇನಿಃ । ವಿದ್ರೇ । ವಿದ್ಲೃ ಲಾಭೇ। ಲಿಟಿ ದ್ವಿರ್ವಚನಪ್ರಕರಣೇ ಛಂದಸಿ ವೇತಿ ವ್ಯಕ್ತವ್ಯಮಿತಿ ದ್ವಿರ್ವಚನಾಭಾವಃ । ಇರಯೋ ರ ಇತೀರಯೋ ರೇಭಾವಃ ॥

॥ ಪ್ರತಿಪದಾರ್ಥ ॥

**ತೇ**—ಅವರು. (ಮರುತ್ತುಗಳು) । **ಭಾನುಭಿಃ**—ಪ್ರಕಾಶಮಾನಗಳಾದ । **ರಶ್ಮಿಭಿಃ**—(ಸೂರ್ಯ)ಕಿರಣ ಗಳೊಡನೆ । **ಕಂ**—(ಮಳೆಯ) ನೀರನ್ನು । **ಶ್ರಿಯಸೇ**—(ಪ್ರಾಣಿಗಳ) ಸೇವನೆಗಾಗಿ । **ಸಂ ಮಿಮಿಕ್ಷಿರೇ**—ಮನಃಪೂರ್ವಕವಾಗಿ ಸುರಿಸುತ್ತಾರೆ. (ಅನಂತರ) । **ತೇ**—ಆ ಮರುತ್ತುಗಳು । **ಋಕ್ವಭಿಃ**—ಸ್ತೋತ್ರಮಾಡತಕ್ಕ ಋತ್ವಿಕ್ಕುಗಳೊಡನೆ । **ಸುಖಾದಯಃ**—ರುಚಿಕರವಾದ ಹವಿಸ್ಸುಗಳನ್ನು ಭಕ್ಷಿಸುವವರೂ । **ವಾಶೀಮಂತಃ**—ಸ್ತುತಿರೂಪವಾದ ವಾಕ್ಕುಗಳೊಡನೆ ಕೂಡಿದವರೂ, । **ಇಷ್ಮಿಣಃ**—ಸಂಚಾರಸ್ವಭಾವವುಳ್ಳವರೂ । **ಅಭೀರವಃ**—ಭಯರಹಿತರೂ ಆದ । **ತೇ**—ಆ ಮರುತ್ತುಗಳು । **ಪ್ರಿಯಸ್ಯ**—(ಎಲ್ಲರಿಗೂ) ಹಿತಕರವಾದುದೂ । **ಮಾರುತಸ್ಯ**-ಮರುತ್ತುಗಳಿಗೆ ಯೋಗ್ಯವಾದುದೂ ಆದ । **ಧಾಮ್ನಃ**—(ಶ್ರೇಷ್ಠವಾದ) ಸ್ಥಾನವನ್ನು । **ವಿದ್ರೇ**—ಪಡೆದರು. ।

ಭಾವಾರ್ಥ

ಮರುತ್ತುಗಳು ಪ್ರಕಾಶಮಾನಗಳಾದ ಸೂರ್ಯಕಿರಣಗಳೊಡನೆ ಸೇರಿಕೊಂಡು ಪ್ರಾಣಿಗಳ ಸೇವನೆಗಾಗಿ ಮಳೆಯ ನೀರನ್ನು ಪ್ರಭೂತವಾಗಿ ಸುರಿಸುತ್ತಾರೆ. ಅನಂತರ ಸ್ತೋತ್ರಮಾಡುವ ಋತ್ವಿಕ್ಕುಗಳೊಡನೆ ರುಚಿಕರವಾದ ಹವಿಸ್ಸುಗಳನ್ನು ಭಕ್ಷಿಸುತ್ತಾರೆ. ಸ್ತುತಿರೂಪವಾದ ವಾಕ್ಕುಗಳೊಡನೆ ಕೂಡಿದವರೂ, ಸಂಚಾರಸ್ವಭಾವವುಳ್ಳವರೂ, ಭಯರಹಿತರೂ ಆದ ಆ ಮರುತ್ತುಗಳು ಎಲ್ಲರಿಗೂ ಹಿತಕರವಾದುದೂ, ಅವರಿಗೆ ಯೋಗ್ಯವಾದುದೂ ಆದ ಶ್ರೇಷ್ಠವಾದ ಸ್ಥಾನವನ್ನು ಪಡೆದರು.

## English Translation

Combining with the solar rays, they have willingly poured down( rain ) for the welfare of mankind, and praised by the priests, have been pleased partakers of the sacrificial food ; addressed with praises, moving swiftly and exempt from fear, they have become possessed of a station agreeable and suitable to the Maruts,

ವಿಶೇಷವಿಷಯಗಳು

**ಶ್ರಿಯಸೇ—ಸೇವಿತುಂ** । ಸೇವಿಸುವುದಕ್ಕೆ, ಹೊಂದುವುದಕ್ಕೆ, ಪ್ರಾಪ್ತಿಗಾಗಿ ;
ಸ್ಕಂದಸ್ವಾಮಿಯು **ಸತ್ಯಸಂಪತ್ತಿಲಕ್ಷಣಾಯೈ ಶ್ರಿಯೈ**—ಸತ್ಯಸ್ವರೂಪವಾದ ಸಂಪತ್ತು ಅಥವಾ ಶ್ರೇಯಃಪ್ರಾಪ್ತಿಗಾಗಿ ಎಂಬರ್ಥವನ್ನು ಹೇಳಿರುವರು.

**ಕಂ**—ಉದಕವು, (ನಿ. ೨-೨೪) ಮಳೆಯು

**ಭಾನುಭಿಃ ರಶ್ಮಿಭಿಃ—ದೀಪ್ಯಮಾನೈಃ ಸೂರ್ಯರಶ್ಮಿಭಿಃ ಸಹ ಅಥವಾ ವಿದ್ಯುಲ್ಲಕ್ಷಣಾಭಿಃ ।** ಪ್ರಕಾಶಮಾನವಾದ ಕಿರಣಗಳೊಡನೆ ಅಥವಾ ಮಿಂಚಿನಿಂದ ಕೂಡಿದ.

**ಋಕ್ವಭಿಃ—ಸ್ತುತಿಮದ್ಭಿಃ ಋತ್ವಿಗ್ಭಿಃ ।** ಋಕ್ಕುಗಳಿಂದ ಸ್ತೋತ್ರಮಾಡುತ್ತಿರುವ ಋತ್ವಿಗ್ಜನರಿಂದ.

**ಸುಖಾದಯಃ— ಖಾದೃ ಭಕ್ಷಣೇ । ಶೋಭನಾ ಖಾದಿರ್ಭಕ್ಷಣಂ ಯೇಷಾಂ ತೇ । ಸುಖಸ್ಯ ಶೋಭನಸ್ಯ ಹವಿಷೋ ಭಕ್ಷಯಿತಾರಃ ।** ಉತ್ತಮವಾದ ಹವಿಸ್ಸನ್ನು ಭಕ್ಷಿಸುವ. ಸ್ಕಂದಸ್ವಾಮಿಯು ಈ ಶಬ್ದಕ್ಕೆ **ಶೋಭನಾಃ ಖಾದಯಃ ಆಯುಧವಿಶೇಷಾಃ ಯೇಷಾಂ ।** ಖಾದಿ ಎಂದರೆ ಮರುದ್ಗಣಗಳ ಆಯುಧ ವಿಶೇಷವು. ಅಂತಹ ಆಯುಧಗಳುಳ್ಳವರು. ಈ ವಿಧವಾದ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಎರಡು ಉದಾಹರಣೆಗಳನ್ನು ಕೊಟ್ಟಿರುವರು—

**ತ್ವೇಷಂ ಗಣಂ ತವಸಂ ಖಾದಿಹಸ್ತಂ ಧುನಿವ್ರತಂ ಮಾಯಿನಂ ದಾತಿವಾರಂ ।**

(ಋ. ಸಂ. ೫-೫೮-೨)

**ಅಂಸೇಷು ವ ಋಷ್ಟಯಃ ಪತ್ಸು ಖಾದಯೋ ವಕ್ಷಸ್ಸು ರುಕ್ಮಾ ಮರುತೋ ರಥೇ ಶುಭಃ ।**

(ಋ. ಸಂ. ೫-೫೪-೧೧)

**ವಾಶೀಮಂತಃ—ವಾಶೀತಿ ವಾಙ್ನಾಮ । ಶೋಭನಯಾ ಸ್ತುತಿಲಕ್ಷಣಯಾ ವಾಚೋಪೇತಾಃ ।** ವಾಶೀ ಎಂದರೆ ವಾಕ್ಕು. (ನಿ. ೨-೨೩) ಸ್ತುತಿರೂಪವಾದ ವಾಕ್ಯಗಳಿಂದ ಸ್ತುತಿಸಲ್ಪಡುವವರು ಎಂದಭಿಪ್ರಾಯವು. ಸ್ಕಂದಸ್ವಾಮಿಯು ವಾಶೀ ಶಬ್ದಕ್ಕೂ ಆಯುಧವಿಶೇಷವೆಂದು ಹೇಳಿ—

**ವಾಶೀಮೇಕೋ ಬಿಭರ್ತಿ ಹಸ್ತ ಆಯಸೀಮಂತರ್ದೇವೇಷು ನಿಧ್ರುವಿಃ ।**

(ಋ. ಸಂ. (೮-೨೯-೩)

ಎಂಬ ಉದಾಹರಣೆಯನ್ನು ಕೊಟ್ಟಿರುವರು. ಮತ್ತು ವಾಙ್ನಾಮವೆಂಬ ಅರ್ಥವನ್ನೂ ಹೇಳಿರುವರು.

**ಇಷ್ಮಿಣಃ—ಇಷ ಗತೌ । ಗತಿಮಂತಃ ।** ಹೋಗತಕ್ಕವರು, ಸಂಚಾರಮಾಡುವ ಸ್ವಭಾವವುಳ್ಳವರು.

**ಅಭೀರವಃ**—ಭಯರಹಿತರು, ನಿರ್ಭಯರು.

**ಪ್ರಿಯಸ್ಯ ಮಾರುತಸ್ಯ ಧಾಮ್ನಃ**—ಮರುದ್ದೇವತೆಗಳ ಪ್ರೀತಿಪಾತ್ರವಾದ ಸ್ವಸ್ಥಾನವು. ಸ್ಕಂದಸ್ವಾಮಿಯು ಧಾಮಶಬ್ದಕ್ಕೆ ಸ್ಥಾನಂ ವಾ ನಾಮ ವಾ ಜನ್ಮ ವಾ—ಸ್ಥಾನ ಅಥವಾ ಹೆಸರು ಅಥವಾ ಜನ್ಮ ಎಂಬ ಅರ್ಥಗಳನ್ನು ಹೇಳಿರುವರು.

ವ್ಯಾಕರಣಪ್ರಕ್ರಿಯಾ

**ಶ್ರಿಯಸೇ**—ಶ್ರಿಞ್ ಸೇವಾಯಾಂ ಧಾತು. ತುಮುನರ್ಥ ತೋರುವಾಗ **ತುಮರ್ಥೇಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಕಸೇನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಅಚಿಶ್ನುಧಾತು-**

**ಭ್ರುವಾಂ**—ಸೂತ್ರದಿಂದ ಅಜಾದಿಪ್ರತ್ಯಯ ಪರದಲ್ಲಿರುವುದರಿಂದ ಇಯಜಾದೇಶ. **ಕೃನ್ಮೇಜಂತಃ** ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಮಿಮಿಕ್ಷಿರೇ**—ಮಿಹ ಸೇಚನೇ ಧಾತು. **ಧಾತೋಃ ಕರ್ಮಣಃ ಸಮಾನಕರ್ತೃಕಾದಿಚ್ಛಾಯಾಂ ವಾ.** (ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾ ತೋರುವಾಗ ಸನ್. **ಸನ್ಯಜೋಃ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ. ಮಿಮಿಹ್+ಸ ಎಂದಿರುವಾಗ **ಹೋಢಃ** ಸೂತ್ರದಿಂದ ಹಕಾರಕ್ಕೆ ಢತ್ವ. **ಷಢೋಃಕಃಸಿ** ಸೂತ್ರದಿಂದ ಬಂದಿರುವ ಢಕಾರಕ್ಕೆ ಕತ್ವ. **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯಾವಯವ ಸಕಾರಕ್ಕೆ ಷತ್ವ. ಕಕಾರ ಷಕಾರಯೋಗದಿಂದ ಕ್ಷಕಾರವಾಗುತ್ತದೆ. ಮಿಮಿಕ್ಷ ಎಂಬುದು **ಸನಾದ್ಯಂತಾಧಾತವಃ** (ಪಾ. ಸೂ. ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಲಿಟಿನಲ್ಲಿ **ಕಾಸ್ಪ್ರತ್ಯಯಾದಮಂತ್ರೇ ಲಿಟಿ** ಸೂತ್ರದಲ್ಲಿ ಅಮಂತ್ರೇ ಎಂದು ನಿಷೇಧಮಾಡಿರುವುದರಿಂದ ಆಮ್ ಬರುವುದಿಲ್ಲ. ಬಹುವಚನದಲ್ಲಿ **ಲಿಟಸ್ತಝಯೋಃ** ಸೂತ್ರ ದಿಂದ ಇರೇಚಾದೇಶ. ಮಿಮಿಕ್ಷಿರೇ ಎಂದು ರೂಪವಾಗುತ್ತದೆ. ಇದು ಪರಸ್ಮೈಪದಿಯಾದರೂ **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಸುಖಾದಯಃ**—ಖಾದೃ ಭಕ್ಷಣೇ ಧಾತು. ಇದಕ್ಕೆ ಔಣಾದಿಕವಾದ ಇಪ್ರತ್ಯಯ ಬರುತ್ತದೆ. ಶೋಭನಾ ಖಾದಿಃ ಭಕ್ಷಣಂ ಯೇಷಾಂ ತೇ ಸುಖಾದಯಃ ಪ್ರಥಮಾ ಬಹುವಚನಾಂತರೂಪ. **ನಞ್ಸುಭ್ಯಾಮ್** ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ವಾಶೀಮಂತಃ**—ವಾಶೀ ಎಂದರೆ ಮಾತು. ವಾಶೀ ಅಸ್ಯ ಅಸ್ತಿ ಎಂಬರ್ಥದಲ್ಲಿ **ತದಸ್ಯಾಸ್ತ್ಯಸ್ಮಿನ್**—ಸೂತ್ರದಿಂದ ಮತುಪ್. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ಇಷ್ಮಿಣಃ**—ಇಷ ಗತೌ ಧಾತು. ಇದಕ್ಕೆ **ಇಷಿಯುಧೀಂಧಿ**—(ಉ. ಸೂ. ೧-೧೪೩) ಎಂಬುದರಿಂದ ಮಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಇಷ್ಮ ಶಬ್ದವಾಗುತ್ತದೆ. ಇಷ್ಮ ಯೇಷಾಂ ಅಸ್ತಿ ಇಷ್ಮಿಣಃ. ಮತ್ವರ್ಥದಲ್ಲಿ **ಅತ ಇನಿಠನೌ**—ಎಂಬುದರಿಂದ ಇನಿಪ್ರತ್ಯಯ. ಪ್ರತ್ಯಯಸ್ವರದಿಂದ ಇನಿನ ಇಕಾರವು ಉದಾತ್ತವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ವಿದ್ರೇ**—ವಿದ್ಲೃ ಲಾಭೇ ಧಾತು. ಲಿಟ್‌ಪ್ರಥಮಪುರುಷ ಬಹುವಚನದಲ್ಲಿ ಇರೇಚಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವವು ಪ್ರಾಪ್ತವಾದರೆ ದ್ವಿರ್ವಚನಪ್ರಕರಣದಲ್ಲಿ **ಛಂದಸಿವೇತಿವಕ್ತವ್ಯಮ್** ಎಂದು ವಚನವಿರುವುದರಿಂದ ಇಲ್ಲಿ ದ್ವಿತ್ವ ಬರುವುದಿಲ್ಲ. **ಇರಯೋರೇ** (ಪಾ. ಸೂ. ೬-೪-೭೬) ಎಂಬುದರಿಂದ ವಿಭಕ್ತ್ಯಾದೇಶಕ್ಕೆ ರೇ ಆದೇಶ ಬರುತ್ತದೆ. ಲಿಟಿಗೆ ಕಿದ್ವದ್ಭಾವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ವಿದ್ರೇ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೬ ॥



# ಎಂಭತ್ತೆಂಟನೆಯ ಸೂಕ್ತವು

**ಆ ವಿದ್ಯುನ್ಮದ್ಭಿರಿತಿ ಷಡೃಚಂ ಚತುರ್ಥಂ ಸೂಕ್ತಂ । ಅತ್ರಾನುಕ್ರಮ್ಯತೇ । ಆ ವಿದ್ಯುನ್ಮದ್ಭಿರಾದ್ಯಾಂತೇ ಪ್ರಸ್ತಾರಪಂಕ್ತೀ ಪಂಚಮೀ ವಿರಾಡ್ರೂಪೇತಿ । ಪೂರ್ವವದೃಷಿದೇವತೇ । ಆದ್ಯಾ ಷಷ್ಠೀ ಚ ದ್ವೇ ಪ್ರಸ್ತಾರಪಂಕ್ತೀ । ಆದ್ಯೌ ಪಾದೌ ಜಾಗತೌ ತೃತೀಯಚತುರ್ಥೌ ಗಾಯತ್ರೌ ಯಸ್ಯಾಃ ಸಾ ಪ್ರಸ್ತಾರಪಂಕ್ತಿಃ । ಸೂತ್ರಿತಂ ಚ । ಪ್ರಸ್ತಾರಪಂಕ್ತಿಃ ಪುರತಃ । ಪಿಂ. ೩-೪೦ ಇತಿ । ಅಸ್ಯಾಯಮರ್ಥಃ । ಜಾಗತೌ ಗಾಯತ್ರೌ ಚೇತ್ಯನುವರ್ತತೇ । ಯದಿ ಪುರತಃ ಪುರಸ್ತಾದ್ದ್ವೌ ಜಾಗತೌ ಪಾದೌ ಸ್ಯಾತಾಮಂತ್ಯೌ ಗಾಯತ್ರೌ ಸಾ ಪ್ರಸ್ತಾರಪಂಕ್ತಿರಿತಿ । ಏತತ್ತ್ಯದಿತ್ಯೇಷಾ ಪಂಚಮೀ ವಿರಾಡ್ರೂಪಾ । ಆದಿತಸ್ತ್ರಯಃ ಪಾದಾ ಏಕಾದಶಕಾ ಅಂತ್ಯೋಽಷ್ಟಕಃ ಸಾ ವಿರಾಡ್ರೂಪೇತ್ಯುಚ್ಯತೇ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು - **ಆ ವಿದ್ಯುನ್ಮದ್ಭಿಃ**—ಎಂಬುವುದು ಹದಿನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ಆ ವಿದ್ಯುನ್ಮದ್ಭಿರಾದ್ಯಾಂತ್ಯೇ ಪ್ರಸ್ತಾರಪಂಕ್ತೀ ಪಂಚಮೀ ವಿರಾಡ್ರೂಪೇತಿ ।** ಎಂದು ಹೇಳಿರುವುದು. ಋಷಿದೇವತೆಗಳು ಹಿಂದಿನ ಸೂಕ್ತದಂತೆಯೇ. ಈ ಸೂಕ್ತದ ಮೊದಲನೆಯ ಮತ್ತು ಆರನೆಯ ಋಕ್ಕುಗಳು ಪ್ರಸ್ತಾರಪಂಕ್ತಿಛಂದಸ್ಕವು. ಪ್ರಸ್ತಾರಪಂಕ್ತಿ ಎಂಬ ಛಂದಸ್ಸಿನಲ್ಲಿ ಮೊದಲನೆಯ ಮತ್ತು ಎರಡನೆಯ ಪಾದಗಳು ಜಗತೀಛಂದಸ್ಸಿನಂತೆ ಇರುವುವು. ಮೂರು ಮತ್ತು ನಾಲ್ಕನೆಯ. ಪಾದಗಳು ಗಾಯತ್ರೀಛಂದಸ್ಸಿನಂತೆ ಇರುವುವು. ಈ ವಿಧವಾದ ಛಂದಸ್ಸಿಗೆ ಪ್ರಸ್ತಾರಪಂಕ್ತಿಯೆಂದು ಹೆಸರು. ಈ ವಿಷಯವು ಪಿಂಗಳರ ಖಂಡಸೂತ್ರದಲ್ಲಿ (ಪಿ. ಸೂ. ೩-೪೦) **ಪ್ರಸ್ತಾರಪಂಕ್ತಿಃ ಪುರತಃ** ಎಂಬ ಸೂತ್ರದಿಂದ ಹೇಳಲ್ಪಟ್ಟಿರುವುದು. ಎಂದರೆ ಯಾವ ಋಕ್ಕಿನಲ್ಲಿ ಮೊದಲಿನ ಎರಡು ಪಾದಗಳು ಜಗತೀಛಂದಸ್ಸಿನಂತೆಯೂ ಕೊನೆಯ ಎರಡುಪಾದಗಳು ಗಾಯತ್ರೀಛಂದಸ್ಸಿನಂತೆಯೂ ಇರುವುವೋ ಆ ಋಕ್ಕು ಪ್ರಸ್ತಾರಪಂಕ್ತಿಛಂದಸ್ಕವೆಂದು ಹೇಳಲ್ಪಡುವುದು. ಈ ಸೂಕ್ತದಲ್ಲಿರುವ **ಏತತ್ತ್ಯತ್** ಎಂಬ ಐದನೆಯ ಋಕ್ಕು ವಿರಾಡ್ರೂಪಾ ಎಂಬ ಛಂದಸ್ಕವು. ಯಾವ ಋಕ್ಕಿನಲ್ಲಿ ಮೊದಲನೆಯ ಮೂರು ಪಾದಗಳು ಹನ್ನೊಂದು ಅಕ್ಷರಗಳುಳ್ಳದ್ದಾಗಿಯೂ, ಕೊನೆಯ ಪಾದವು ಎಂಟು ಅಕ್ಷರಗಳುಳ್ಳದ್ದಾಗಿಯೂ ಇರುವುವೋ ಆ ಋಕ್ಕು ವಿರಾಡ್ರೂಪಛಂದಸ್ಕವೆಂದು ಹೇಳಲ್ಪಡುವುದು. ಈ ಸೂಕ್ತದ ವಿನಿಯೋಗವು ಲೈಂಗಿಕವು.



॥ ಓಂ ॥

## ಸೂಕ್ತ—೮೮

ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೮೮ ॥

ಅಷ್ಟಕ—೧ ॥ ಅಧ್ಯಾಯ—೬ ॥ ವರ್ಗ—೧೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೬

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ಮರುತಃ ॥

॥ ಛಂದಃ—೧, ೬. ಪ್ರಸ್ತಾರಪಂಕ್ತಿಃ । ೨-೪. ತ್ರಿಷ್ಟುಪ್ । ೫. ವಿರಾಡ್ರೂಪಾ ॥

ಸಂಹಿತಾಪಾಠಃ

ಆ ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈ ರಥೇಭಿರ್ಯಾತ ಋಷ್ಟಿಮದ್ಭಿ-
ರಶ್ವಪರ್ಣೈಃ ।
ಆ ವರ್ಷಿಷ್ಠಯಾ ನ ಇಷಾ ವಯೋ ನ ಪಪ್ತತಾ ಸುಮಾಯಾಃ ॥

ಪದಪಾಠಃ

ಆ । ವಿದ್ಯುನ್ಮತ್ಽಭಿಃ । ಮರುತಃ । ಸುಽಅರ್ಕೈಃ । ರಥೇಭಿಃ । ಯಾತ । ಋಷ್ಟಿ-
ಮತ್ಽಭಿಃ । ಅಶ್ವಽಪರ್ಣೈಃ ।
ಆ । ವರ್ಷಿಷ್ಠಯಾ । ನಃ । ಇಷಾ । ವಯಃ । ನ । ಪಪ್ತತ । ಸುಽಮಾಯಾಃ ॥೧॥

ಸಾಯಣಭಾಷ್ಯಂ

ಹೇ ಮರುತಃ । ಮಿತಂ ನಿರ್ಮಿತಮಂತರಿಕ್ಷಂ ಪ್ರಾಪ್ಯ ರುವಂತಿ ಶಬ್ದಂ ಕುರ್ವಂತೀತಿ ಮರುತಃ । ಯದ್ವಾ । ಅಮಿತಂ ಭೃಶಂ ಶಬ್ದಕಾರಿಣಃ । ಅಥವಾ ಮಿತಂ ಸ್ವೈರ್ನಿರ್ಮಿತಂ ಮೇಘಂ ಪ್ರಾಪ್ಯ ವಿದ್ಯುದಾತ್ಮನಾ ರೋಚಮಾನಾಃ । ಅಥವಾ ಮಹತ್ಯಂತ್ಯರಿಕ್ಷೇ ದ್ರವಂತೀತಿ ಮರುತಃ । ಯೇ ಮಧ್ಯಮಸ್ಥಾನೇ ದೇವಗಣಾಃ ಸಮಾಮ್ನಾತಾಸ್ತೇ ಸರ್ವೇ ಮರುತ ಆಖ್ಯಾಯಂತೇ । ತಥಾ ಚಾಹುಃ । ಸರ್ವಾ ಸ್ತ್ರೀ ಮಧ್ಯಮಸ್ಥಾನಾ ಪುಮಾನ್ ವಾಯುಶ್ಚ ಸರ್ವಗಃ । ಗಣಾಶ್ಚ ಸರ್ವೇ ಮರುತ ಇತಿ ವೃದ್ಧಾನುಶಾಸನಮಿತಿ । ಪೌರಾಣಿಕಾಸ್ತ್ವಾಚಕ್ಷತೇ । ಮಾರೀಚಾತ್ಕಶ್ಯಪಾತ್ಸಪ್ತಗಣಾತ್ಮಕಾ ಏಕೋನಪಂಚಾಶತ್ಸಖ್ಯಾಕಾ ಮರುತೋ ಜಜ್ಞಿರ ಇತಿ । ಏವಂಭೂತಾ ಹೇ ಮರುತೋ ರಥೇಭಿರಾತ್ಮೀಯೈ ರಥೈರಾ ಯಾತ ಅಸ್ಮದೀಯಂ ಯಜ್ಞಮಾಗಚ್ಛತ । ಕೀದೃಶೈ ರಥೈಃ । ವಿದ್ಯುನ್ಮದ್ಭಿಃ । ವಿದ್ಯೋತನಂ ವಿದ್ಯುತ್ । ವಿಶಿಷ್ಟದೀಪ್ತಿಯುಕ್ತೈಃ ಸ್ವರ್ಕೈಃ ಸ್ವರ್ಚನೈಃ ಶೋಭನಗಮನಯುಕ್ತೈಃ । ಯದ್ವಾ । ಶೋಭನಮರ್ಕೋಽರ್ಚನಂ ಸ್ತುತಿರ್ಯೇಷಾಮಸ್ತಿ ತಾದೃಶೈಃ । ಅಥವಾ ಶೋಭನದೀಪ್ತಿಯುಕ್ತೈಃ । ಋಷ್ಟಿಮದ್ಭಿಃ । ಋಷ್ಟಯಃ ಶಕ್ತಿರೂಪಾಣ್ಯಾಯುಧಾನಿ । ಸ್ಥೂಣಾ ಇತ್ಯನ್ಯೇ । ತದ್ವದ್ಭಿಃ । ಅಶ್ವಪರ್ಣೈಃ । ಅಶ್ವಾನಾಂ ಪತನಂ ಗಮನಂ ಯೇಷಾಮಸ್ತಿ ತಾದೃಶೈಃ । ಯದ್ವಾ । ರಂಹಣಶೀಲಾ ಮೇಘಾ ರಥಾಃ । ತೈಃ ಸಹಾಂತರಿಕ್ಷೇ ವರ್ಷಣಾರ್ಥಮಾಗಚ್ಛಥ । ಕೀದೃಶೈಃ ವಿದ್ಯುನ್ಮದ್ಭಿಃ । ವಿದ್ಯುತಾ ತಡಿತಾ ತದ್ವದ್ಭಿಃ ಸ್ವರ್ಕೈಃ ಶೋಭನಗಮನೈಃ ಋಷ್ಟಿಮದ್ಭಿಃ । ಅರ್ಷಣಂ ಗಮನಂ । ತತ್ಸ್ವಭಾವನೀರಯುಕ್ತೈಃ । ಅಶ್ವಪರ್ಣೈಃ । ಅಶ್ವಂ ವ್ಯಾಪ್ತಂ ಪರ್ಣಂ ಪತನಂ ಗಮನಂ ಯೇಷಾಂ । ಅಂತರಿಕ್ಷಂ ವ್ಯಾಪ್ಯ ವರ್ತಮಾನೈರಿತ್ಯರ್ಥಃ । ಹೇ ಸುಮಾಯಾಃ । ಮಾಯೇತಿ ಕರ್ಮಣೋ ಜ್ಞಾನಸ್ಯ ಚ ನಾಮಧೇಯಂ । ಶೋಭನಕರ್ಮಾಣಃ ಶೋಭನಪ್ರಜ್ಞಾ ವಾ ಮರುತೋ ವರ್ಷಿಷ್ಠಯಾ ಪ್ರವೃದ್ಧತರಯೇಷಾಸ್ಮಭ್ಯಂ ದಾತವ್ಯೇನಾನ್ನೇನ ಸಹ ನೋಽಸ್ಮಾನ್ಪ್ರತಿ ವಯೋ ನ ಪಕ್ಷಿಣ ಇವ ಶೀಘ್ರಮಾ ಪಪ್ತತ । ಆಪತತ । ಆಗಚ್ಛತೇತ್ಯರ್ಥಃ । ಅತ್ರ ನಿರುಕ್ತಂ । ಅಥಾತೋ ಮಧ್ಯಸ್ಥಾನಾ ದೇವಗಣಾಸ್ತೇಷಾಂ ಮರುತಃ ಪ್ರಥಮಾಗಾಮಿನೋ ಭವಂತಿ । ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವೇತಿ । ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈಃ ಸ್ವಂಚನೈರಿತಿ ವಾ ಸ್ವರ್ಚನೈರಿತಿವಾ ಸ್ವರ್ಚಿಭಿರಿತಿ ವಾ ರಥೈರಾಯಾತ ಋಷ್ಟಿಮದ್ಭಿರಶ್ವಪರ್ಣೈರಶ್ವಪತನೈರ್ವರ್ಷಿಷ್ಠೇನ ಚ ನೋಽನ್ನೇನ ವಯ ಇವಾಪತತ ಸುಮಾಯಾಃ ಕಲ್ಯಾಣಕರ್ಮಾಣೋ ವಾ ಕಲ್ಯಾಣಪ್ರಜ್ಞಾ ವಾ । ನಿ. ೧೧-೧೩, ೧೪ । ಇತಿ ॥ ವಿದ್ಯುನ್ಮದ್ಭಿಃ । ಯವಾದೇರಾಕೃತಿಗಣತ್ವೇನ ವಿದ್ಯುಚ್ಛಬ್ದಸ್ಯ ಯವಾದ್ಯಂತರ್ಭಾವಾದಯವಾದಿಭ್ಯ ಇತ್ಯತ್ರಾನುವೃತ್ತೇರ್ಝಯಃ । ಪಾ. ೮-೨-೧೦ । ಇತಿ ಮತುಪೋ ವತ್ವಂ ನ ಪ್ರವರ್ತತೇ । ಋಷ್ಟಿಮದ್ಭಿಃ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಅಶ್ವಪರ್ಣೈಃ । ಅಶೂ ವ್ಯಾಪ್ತೌ । ಅಶಿಪ್ರುಷೀತ್ಯಾದಿನಾ ಕ್ವನ್ಪ್ರತ್ಯಯಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವರ್ಷಿಷ್ಠಯಾ । ವೃದ್ಧಶಬ್ದಾದಾತಿಶಾಯನಿಕ ಇಷ್ಠನಿ ಪ್ರಿಯಸ್ಥಿರೇತ್ಯಾದಿನಾ ವರ್ಷಾದೇಶಃ । ಪಪ್ತತ । ಪತ್ಲೃ ಗತೌ । ಲುಙಿ ಲೃದಿತ್ತ್ವಾತ್ ಚ್ಲೇರಙಾದೇಶಃ । ಪತಃ ಪುಮ್ । ಪಾ. ೭-೪-೧೯ । ಇತಿ ಪುಗಾಗಮಃ ॥

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುತ್ತುಗಳೇ, । **ವಿದ್ಯುನ್ಮದ್ಭಿಃ**—ವಿಶೇಷವಾದ ಕಾಂತಿಯಿಂದ ಕೂಡಿದುವೂ । **ಸ್ವರ್ಕೈಃ**—ಸುಲಭವಾದ ಶ್ರೇಷ್ಠವಾದ ಗಮನವುಳ್ಳವೂ ಅಥವಾ ಶ್ರೇಷ್ಠವಾದ ಸ್ತುತಿಯುಳ್ಳವೂ । **ಋಷ್ಟಿಮದ್ಭಿಃ**—ಆಯುಧಗಳಿಂದ ಭರಿತವಾದುವೂ । **ಅಶ್ವಪರ್ಣೈಃ**—ಕಟ್ಟಿದ ಕುದುರೆಗಳುಳ್ಳವೂ ಆದ । **ರಥೇಭಿಃ**— ನಿಮ್ಮ ರಥಗಳೊಡನೆ । **ಆ ಯಾತ**—(ನಮ್ಮ ಯಜ್ಞಕ್ಕೆ) ಬನ್ನಿರಿ. ।

ಅಥವಾ

[ವಿದ್ಯುನ್ಮದ್ಭಿಃ—ಮಿಂಚುಗಳಿಂದ ಕೂಡಿದವೂ । **ಸ್ವರ್ಕೈಃ**—ಶ್ರೇಷ್ಠವಾದ ಗಮನವುಳ್ಳವೂ । **ಋಷ್ಟಿಮದ್ಭಿಃ**—ಹರಿಯುವ ಸ್ವಭಾವವುಳ್ಳ ನೀರುಗಳಿಂದ ತುಂಬಿದವೂ । **ಅಶ್ವಪರ್ಣೈಃ**—(ಅಂತರಿಕ್ಷವನ್ನೆಲ್ಲ) ವ್ಯಾಪಿಸಿ ಸಂಚರಿಸುವುವೂ ಆದ । **ರಥೇಭಿಃ**—ಮೇಘಗಳೊಡನೆ । **ಆ ಯಾತ**—(ನಮ್ಮ ಯಜ್ಞಕ್ಕೆ) ಬನ್ನಿರಿ. ]

**ಸುಮಾಯಾಃ**—ಶ್ರೇಷ್ಠವಾದ ಕರ್ಮಗಳುಳ್ಳವರೂ ಅಥವಾ ಶ್ರೇಷ್ಠವಾದ ಜ್ಞಾನವುಳ್ಳವರೂ ಆದ ಮರುತ್ತುಗಳೇ, । **ವರ್ಷಿಷ್ಠಯಾ**—ಅತ್ಯಂತಪ್ರಭೂತವಾದ । **ಇಷಾ**—(ನಮಗೆ ಕೊಡಬೇಕಾದ) ಅನ್ನದೊಡನೆ । **ನಃ**—ನಮ್ಮ ಕಡೆಗೆ । **ವಯೋ ನ**—ಪಕ್ಷಿಗಳಂತೆ (ವೇಗವಾಗಿ) । **ಆ ಪಪ್ತತ**—ಬನ್ನಿರಿ.

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ವಿಶೇಷವಾದ ಕಾಂತಿಯುಳ್ಳವೂ, ಸುಲಭವಾದ ಗಮನವುಳ್ಳವೂ, ಆಯುಧಗಳಿಂದ ಭರಿತವಾದುವೂ, ಕಟ್ಟಿದ ಕುದುರೆಗಳುಳ್ಳವೂ, ಆದ ರಥಗಳೊದನೆ ನಮ್ಮ ಯಜ್ಞಕ್ಕೆ ದಯಮಾಡಿ. ಶ್ರೇಷ್ಠವಾದ ಕರ್ಮಗಳುಳ್ಳ ಎಲೈ ಮರುತ್ತುಗಳೇ, ನಮಗೆ ಕೊಡಬೇಕಾದುದೂ ಅತ್ಯಂತ ಪ್ರಭೂತವಾದುದೂ ಆದ ಅನ್ನವನ್ನು ತುಂಬಿಕೊಂಡು ಪಕ್ಷಿಗಳಂತೆ ವೇಗವಾಗಿ ಸಂಚರಿಸುತ್ತ ನಮ್ಮಕಡೆಗೆ ಬನ್ನಿರಿ.

## English Translation

O Maruts, come with your chariots full of lightenings, full of splendors, full of spears and with quick-moving horses. Performers of good deeds, descend like birds and bring abundant food.

॥ ವಿಶೇಷವಿಷಯಗಳು ॥

**ಮರುತಃ**—ಈ ಶಬ್ದಕ್ಕೆ ಭಾಷ್ಯಕಾರರು ಎರಡು ಮೂರು ವಿಧವಾದ ರೂಪನಿಷ್ಪತ್ತಿಗಳನ್ನು ಮಾಡಿ ಅರ್ಥವನ್ನು ವಿವರಿಸಿರುವರು. **ಮಿತಂ ನಿರ್ಮಿತಮಂತರಿಕ್ಷಂ ಪ್ರಾಪ್ಯ ರುವಂತಿ ಶಬ್ದಂ ಕುರ್ವಂತೀತಿ ಮರುತಃ । ಯದ್ವಾ ಅಮಿತಂ ಭೃಶಂ ಶಬ್ದಕಾರಿಣಃ । ಅಥವಾ ಮಿತಂ ಸ್ವೈರ್ನಿರ್ಮಿತಂ ಮೇಘಂ ಪ್ರಾಪ್ಯ ವಿದ್ಯುದಾತ್ಮನಾ ರೋಚಮಾನಾಃ । ಅಥವಾ ಮಹತ್ಯಂತರಿಕ್ಷೇ ದ್ರವಂತೀತಿ ಮರುತಃ ।** ಅಂತರಿಕ್ಷದಲ್ಲಿ ಬೀಸುತ್ತಾ ಶಬ್ದ ಮಾಡುವುದರಿಂದ ಈ ದೇವತೆಗಳಿಗೆ ಮರುತ್ತುಗಳೆಂದು ಹೆಸರು. ಅಥವಾ ಬಹಳವಾಗಿ ಶಬ್ದಮಾಡುವುದರಿಂದ ಮರುತ್ತುಗಳೆಂದು ಹೆಸರು. ಅಥವಾ ಮೇಘಮಧ್ಯದಲ್ಲಿ ವಿದ್ಯುದ್ರೂಪದಿಂದ ಪ್ರಕಾಶಮಾನರಾದುದರಿಂದ ಮರುತ್ತು

ಗಳೆಂದು ಹೆಸರು. ಅಥವಾ ವಿಸ್ತಾರವಾದ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಮರುತ್ತುಗಳೆಂದು ಹೆಸರು. ಇತ್ಯಾದಿ. ಯಾಸ್ಕರು ತಮ್ಮ ನಿರುಕ್ತದಲ್ಲಿ ದೇವತೆಗಳನ್ನು ಸ್ವರ್ಗ, ಅಂತರಿಕ್ಷ, ಭೂಲೋಕ ಇವುಗಳಲ್ಲಿರುವ ದೇವತೆಗಳೆಂದು ಮೂರು ವಿಧವಾಗಿ ವಿಂಗಡಿಸಿರುವರು. ಈ ಮರುದ್ದೇವತೆಗಳು ಮಧ್ಯಮಸ್ಥಾನವಾದ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಅಂತರಿಕ್ಷದೇವತೆಗಳೆಂದು ಕರೆಯಲ್ಪಡುವರು. ಈ ವಿಷಯದಲ್ಲಿ—

**ಸರ್ವಾ ಸ್ತ್ರೀ ಮಧ್ಯಮಸ್ಥಾನಾ ಪುಮಾನ್ ವಾಯುಶ್ಚ ಸರ್ವಗಃ |**
**ಗಣಾಶ್ಚ ಸರ್ವೇ ಮರುತ ಇತಿ ವೃದ್ಧಾನುಶಾಸನಂ || ಇತಿ ||**

ಸಮಸ್ತ ಸ್ತ್ರೀದೇವತೆಗಳೂ ಪುರುಷದೇವತೆಗಳಾದ ವಾಯು ಮತ್ತು ಮರುದ್ಗಣಗಳು ಮಧ್ಯಮಸ್ಥಾನವಾದ ಅಂತರಿಕ್ಷದ ದೇವತೆಗಳೆಂದು ಹೇಳುವರು ಎಂದು ಪೂರ್ವಿಕರ ಮತವು. ಪೌರಾಣಿಕರು—ಮರೀಚಿಪುತ್ರನಾದ ಕಶ್ಯಪಋಷಿಯಿಂದ ನಲವತ್ತೊಂಭತ್ತು ಸಂಖ್ಯಾಕರಾದ ಮರುದ್ದೇವತೆಗಳು ಉತ್ಪನ್ನರಾದರು—ಎಂದು ಹೇಳುವರು. ಯಾಸ್ಕಮಹರ್ಷಿಗಳು ಈ ಶಬ್ದದ ರೂಪನಿಷ್ಪತ್ತಿಯನ್ನು ಮಾಡುವಾಗ-**ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ** (ನಿ- ೧೧-೧೩)ಎಂದು ಹೇಳಿರುವರು. ಇದರ ಅರ್ಥವಿವರಣೆಯನ್ನು ಮೇಲೆ ವಿವರಿಸಿದ್ದೇವೆ.

ವಿದ್ಯುನ್ಮದ್ಭಿಃ—**ವಿಶಿಷ್ಟದೀಪ್ತಿಯುಕ್ತೈಃ | ಅಥವಾ ವಿದ್ಯುತಾ ಸಂಯುಕ್ತೈಃ |** ಸಮಸ್ತವಾದ ಕಾಂತಿಯಿಂದ ಕೂಡಿದವರು ಅಥವಾ ಮಿಂಚಿನಿಂದ ಕೂಡಿದವರು.

ಸ್ವರ್ಕೈಃ—**ಸ್ವರ್ಚನೈಃ ಶೋಭನಗಮನಯುಕ್ತೈಃ | ಯದ್ವಾ | ಶೋಭನಮರ್ಕೋಽರ್ಚನಂ ಸ್ತುತಿರ್ಯೇಷಾಮಸ್ತಿ ತಾದೃಶೈಃ |** ಉತ್ತಮವಾದ ಗಮನಗಳಿಂದ ಕೂಡಿದವರು ಅಥವಾ ಅರ್ಕವೆಂದರೆ ಸ್ತುತಿಯು ಉತ್ತಮವಾದ ಸ್ತುತಿಗಳಿಂದ ಸ್ತುತಿಸಲ್ಪಡುವವರು ಎಂದರ್ಥವು.

**ಋಷ್ಟಿಮದ್ಭಿಃ**—ಶಕ್ತಿರೂಪವಾದ ಆಯುಧಗಳಿಂದ ಯುಕ್ತರಾದವರು. ವೇಗವಾಗಿ ಬೀಸುವ ಮರುತ್ತುಗಳಿಗೆ ಅದ್ಭುತವಾದ ಶಕ್ತಿಯಿರುವುದು. ಈ ವಿಧವಾದ ಶಕ್ತಿಯೇ ಇವರ ಆಯುಧವು.

**ಅಶ್ವಪರ್ಣೈಃ—ಅಶ್ವಂ ವ್ಯಾಪ್ತಂ ಪರ್ಣಂ ಪತನಂ ಗಮನಂ ಯೇಷಾಂ |** ಅಂತರಿಕ್ಷದಲ್ಲಿ ಗಮನವುಳ್ಳವರು ಎಂದರೆ ಅಂತರಿಕ್ಷದಲ್ಲಿ ಸಂಚರಿಸುವವರು.

**ಸುಮಾಯಾಃ**—ಮಾಯಾ ಎಂದರೆ ಕರ್ಮ ಅಥವಾ ಜ್ಞಾನವು. ಸುಮಾಯಾಃ ಎಂದರೆ ಉತ್ತಮವಾದ ಕರ್ಮಗಳನ್ನು ಮಾಡುವವರು ಅಥವಾ ಶ್ರೇಷ್ಠವಾದ ಜ್ಞಾನವುಳ್ಳವರು.

**ವರ್ಷಿಷ್ಠಯಾ**—ವೃಷ್ಟಿಪ್ರದಾನದಿಂದ ಆಹಾರೋತ್ಪತ್ತಿಗೆ ಸಾಧನಭೂತವಾದ ಎಂದರ್ಥವು. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿರುವರು—

**ಅಥಾತೋ ಮಧ್ಯಮಸ್ಥಾನಾ ದೇವಗಣಾಃ | ತೇಷಾಂ ಮರುತಃ ಪ್ರಥಮಗಾಮಿನೋ ಭವಂತಿ | ಮರುತಃ | ಮರುತೋ ಮಿತರಾವಿಣೋ ವಾ, ಮಿತರೋಚಿನೋ ವಾ, ಮಹದ್ದ್ರವಂತೀತಿ ವಾ | ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈಃ ಸ್ವಂಚನೈರಿತಿ ವಾ, ಸ್ವರ್ಚನೈರಿತಿ ವಾ | ಸ್ವರ್ಚಿಭಿರಿತಿ**

**ವಾ । ರಥೈರಾಯಾತ । ಋಷ್ಟಿಮದ್ಭಿರಶ್ವಪರ್ಣೈರಶ್ವಪತನೈರ್ವರ್ಷಿಷ್ಠೇನ ಚ ನೋಽನ್ನೇನ ವಯ ಇವಾಪತತ ಸುಮಾಯಾಃ ಕಲ್ಯಾಣಪ್ರಜ್ಞಾ ವಾ**

(ನಿ. ೧೧-೧೩-೧೪)

ಇದರ ಅರ್ಥವಿವರಣೆಯು ಭಾಷ್ಯಕಾರರು ಮೇಲೆ ವಿವರಿಸಿದಂತೆಯೇ ಇರುವುದು.

॥ ವ್ಯಾಕರಣಪ್ರಕ್ರಿಯಾ ॥

**ವಿದ್ಯುನ್ಮದ್ಭಿಃ**—ವಿದ್ಯುತ್ ಯೇಷಾಂ ಅಸ್ತಿ ಇತಿ ವಿದ್ಯುನ್ವಂತಃ **ತದಸ್ಯಾಸ್ತ್ಯಸ್ಮಿನ್**--ಸೂತ್ರದಿಂದ ಮತುಪ್ ಪ್ರತ್ಯಯ. ಇಲ್ಲಿ ಝಯ್‌ನ (ತಕಾರ) ಪರದಲ್ಲಿ ಮತುಪ್ ಬಂದುದರಿಂದ **ಝಯಃ** (ಪಾ. ಸೂ. ೮-೨-೧೦ ಎಂಬುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ ಪ್ರಾಪ್ತವಾಗುತ್ತದೆ. ಆದರೆ ಯವಾದಿಗಣವು ಆಕೃತಿಗಣವಾದುದ ರಿಂದ ವಿದ್ಯುಚ್ಛಬ್ದವು ಯವಾದಿಯಲ್ಲಿ ಅಂತರ್ಭೂತವಾಗಿದೆಯಾದುದರಿಂದ ಅಯವಾದಿಭ್ಯಃ ಎಂಬುದು ಈ ಸೂತ್ರ ದಲ್ಲಿಯೂ ಅನುವೃತ್ತವಾಗುವುದರಿಂದ ವಿದ್ಯುತ್ತಿನ ಪರದಲ್ಲಿರುವುದರಿಂದ ಮಕಾರಕ್ಕೆ ವತ್ವ ಬರುವುದಿಲ್ಲ.

**ರಥೇಭಿಃ**—ರಥ ಶಬ್ದಕ್ಕೆ ತೃತೀಯಾ ಬಹುವಚನ ಭಿಸ್ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸಾದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಸೂತ್ರದಿಂದ ಏತ್ವ.

**ಯಾತ**—ಯಾ ಪ್ರಾಪಣೇ ಧಾತು. ಅದಾದಿ. ಲೋಟ್ ಮಧ್ಯಮ ಪುರುಷ ಬಹುವಚನಕ್ಕೆ ಲಙ್ವದ್ಭಾವ ವಿರುವುದರಿಂದ **ತಸ್‌ಥಸ್‌ಥ**—ಸೂತ್ರದಿಂದ ತಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ತಿಙಂತ ನಿಘಾತಸ್ವರ ಬರುತ್ತದೆ.

**ಋಷ್ಟಿಮದ್ಭಿಃ**—ಋಷ್ಟಯಃ ಯೇಷಾಂ ಸಂತಿ ಇತಿ ಋಷ್ಟಿಮಂತಃ ಮತುಪ್ ಪ್ರತ್ಯಯ. ತೃತೀಯಾ ಬಹುವಚನಾಂತರೂಪ. **ಹ್ರಸ್ವನುಡ್ಭ್ಯಾಂಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಹ್ರಸ್ವದ ಪರದಲ್ಲಿರು ವುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಅಶ್ವಪರ್ಣೈಃ**—ಅಶೂ ವ್ಯಾಪ್ತೌ ಧಾತು. ಅಶಿಪ್ರುಷಿಲಟಿಕಣಿ—(ಉ. ಸೂ. ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯ. ಅಶ್ವ ಎಂದು ರೂಪವಾಗುತ್ತದೆ ಅಶ್ವಂ ವ್ಯಾಪ್ತಂ ಪರ್ಣಂ ಗಮನಂ ಯೇಷಾಂ ತೇ ಅಶ್ವಪರ್ಣಾಃ ತೈಃ ಅಶ್ವಪರ್ಣೈಃ ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವರ್ಷಿಷ್ಠಯಾ**—ವೃದ್ಧ ಶಬ್ದ. ಅತಿಶಯಾರ್ಥತೋರುವಾಗ **ಅತಿಶಾಯನೇ ತಮಬಿಷ್ಠನೌ** ಎಂಬುದ ರಿಂದ ಇಷ್ಠನ್ ಪ್ರತ್ಯಯ. ಇದು ಪರದಲ್ಲಿರುವಾಗ ಪ್ರಿಯಸ್ಥಿರಸ್ಫಿರ—(ಪಾ. ಸೂ. ೬-೪-೧೫೭) ಎಂಬುದರಿಂದ ವೃದ್ಧ ಶಬ್ದಕ್ಕೆ ವರ್ಷಾದೇಶ. **ಯಸ್ಯೇತಿ ಚ** ಎಂಬುದರಿಂದ ಅದರ ಅಕಾರಕ್ಕೆ ಲೋಪ. ನಿತ್ ಪ್ರತ್ಯಯಾಂತವಾದುದ ರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸ್ತ್ರೀತ್ವ ತೋರುವಾಗ ಟಾಪ್. ತೃತೀಯಾ ಏಕವಚನಾಂತರೂಪ.

**ಪಪ್ತತ**—ಪತ್ಲೃ ಗತೌ ಧಾತು. ಲೃದಿತ್. ಲೋಡರ್ಥದಲ್ಲಿ ಛಾಂದಸಿಕವಾದ ಲುಙ್. ಮಧ್ಯಮಪುರುಷ ಬಹುವಚನಕ್ಕೆ **ತಸ್‌ಥಸ್‌ಥ**—ಎಂಬುದರಿಂದ ತಾದೇಶ. **ಚ್ಲಿ ಲುಙಿ** ಎಂಬುದರಿಂದ ಪ್ರಾಪ್ತವಾದ ಚ್ಲಿಗೆ ಧಾತುವು

ಲೃದಿತ್ತ್ವಾದುದರಿಂದ **ಪುಷಾದಿದ್ಯುತಾದಿ**— (ಪಾ. ಸೂ. ೩-೧-೫೫) ಎಂಬುದರಿಂದ ಅಙ್ ಆದೇಶ ಬರುತ್ತದೆ. **ಪತ್+ಅ+ತ** ಎಂದಿರುವಾಗ **ಪತಃಪುಮ್** (ಪಾ. ಸೂ. ೭-೪-೧೯) ಎಂಬುದರಿಂದ ಅಙ್‌ನಿಮಿತ್ತವಾಗಿ ಪುಮಾಗಮ. **ಏಡಚೋಽಂತ್ಯಾತ್ಸ್ವರಃ** ಸೂತ್ರದಿಂದ ಅಂತ್ಯಾಚಿನಪರವಾಗಿ ಬರುತ್ತದೆ. **ಬಹುಲಂ ಛಂದಸ್ಯಮಾಙ್‌ಯೋ-ಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಪಪ್ತತ ಎಂದು ರೂಪವಾಗುತ್ತದೆ. ಅತಿಙಂತದ ಸರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಮಾಯಾಃ**—ಶೋಭನಾಃ ಮಾಯಾಃ (ಕರ್ಮಾಣಿ) ಯೇಷಾಂ ತೇ ಸುಮಾಯಾಃ ಸಂಬೋಧನಾ ಬಹುವಚನಾಂತರೂಪ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ತೇಽರುಣೇಭಿರ್ವರಮಾ ಪಿಶಂಗೈಃ ಶುಭೇ ಕಂ ಯಾಂತಿ ರಥತೂ-
ರ್ಭಿರಶ್ವೈಃ ।
ರುಕ್ಮೋ ನ ಚಿತ್ರಃ ಸ್ವಧಿತೀವಾನ್ಪವ್ಯಾ ರಥಸ್ಯ ಜಂಘನಂತ
ಭೂಮ ॥ ೨ ॥

॥ ಪದಪಾಠಃ ॥

ತೇ । ಅರುಣೇಭಿಃ । ವರಂ । ಆ । ಪಿಶಂಗೈಃ । ಶುಭೇ । ಕಂ । ಯಾಂತಿ ।
ರಥತೂಃಽಭಿಃ । ಅಶ್ವೈಃ ।
ರುಕ್ಮಃ । ನ । ಚಿತ್ರಃ । ಸ್ವಧಿತಿಽವಾನ್ । ಪವ್ಯಾ । ರಥಸ್ಯ । ಜಂಘನಂತ ।
ಭೂಮ । ॥ ೨ ॥

ಸಾಯಣಭಾಷ್ಯಂ

ತೇ ಪೂರ್ವೋಕ್ತಾ ಮರುತೋಽರುಣೇಭಿರರುಣವರ್ಣೈಃ ಪಿಶಂಗೈಃ ಪಿಂಗಲವರ್ಣೈರುಭಯವರ್ಣೋಪೇತೈ ರಥತೂರ್ಭೀ ರಥಸ್ಯ ಪ್ರೇರಯಿತೃಭಿರಶ್ವೈರ್ವರಂ ದೇವಾನಾಂ ವರೀತಾರಂ ಕಂ ಶಬ್ದಯಿತಾರಂ ಸ್ತುವಂತಂ ಯಜಮಾನಮಾ ಯಾಂತಿ। ಆಗಚ್ಛಂತಿ। ಕಿಮರ್ಥಂ। ಶುಭೇ ತಸ್ಯ ಶೋಭಾಂ ಕರ್ತುಂ। ಅಥವಾ ಶುಭ ಉದಕನಾಮ। ವೃಷ್ಟ್ಯರ್ಥಮಿತ್ಯರ್ಥಃ। ತೇಷಾಂ ಮರುತಾಂ ಗಣೋ ರುಕ್ಮೋ ನ ರೋಚಮಾನಂ ಸುವರ್ಣಮಿವ ಚಿತ್ರೋಽತಿಶಯೇನ ದರ್ಶನೀಯಃ ಸ್ವಧಿತೀವಾನ್ ಸ್ವಧಿತಿರಿತಿ ವಜ್ರನಾಮ। ಶತ್ರೂಣಾಂ ಖಂಡಕೇನಾಯುಧೇನೋಪೇತಃ। ಏವಂವಿಧಗಣರೂಪಾಸ್ತೇ ಮರುತೋ ರಥಸ್ಯ ಪವ್ಯಾ ಚಕ್ರಧಾರಯಾ ಭೂಮ ಭೂಮಿಂ ಜಂಘನಂತ। ಅತ್ಯರ್ಥಂ ಘ್ನಂತಿ। ಸ್ತೋತೃರಕ್ಷಣಾರ್ಥಮಾಗತಾನಾಂ ತೇಷಾಂ ಮರುತಾಂ ಭಾರಮಸಹಮಾನಾ ಭೂಮಿರತಿಪೀಡಿತಾ ಬಭೂವೇತ್ಯರ್ಥಃ॥ ವರಂ। ವ್ರಿಯಂತೇ ದೇವಾ ಅನೇನೇತಿ ವರಃ। ಗ್ರಹವೃದೃನಿಶ್ಚೀತಿ ಕರಣೇಽಪ್। ಕಂ। ಕೈ ಗೈ ಶಬ್ದೇ। ಕಾಯತೀತಿ ಕಃ। ಬಹುಲವಚನಾತ್ಕಪ್ರತ್ಯಯಃ। ರಥತೂರ್ಭಿಃ। ತುರ ತ್ವರಣೇ। ರಥಂ ತುತುರಿತಿ ತ್ವರಾಯುಕ್ತಂ ಕುರ್ವಂತೀತಿ ರಥತುರಃ। ಕ್ವಿಪ್ಚೇತಿ ಕ್ವಿಪ್। ಭಿಸಿ ಹಲಿ ಚೇತಿ ದೀರ್ಘತ್ವಂ। ಪವ್ಯಾ। ಪವೀ ರಥನೇಮಿರ್ಭವತೀತಿ ಯಾಸ್ಕಃ। ನಿ. ೫-೫। ಪೂಞ್ ಪವನೇ। ಅಸ್ಮಾದಚ ಇತೀಪ್ರತ್ಯಯಃ। ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ। ಜಂಘನಂತ। ಹಂತೇರ್ಯಙಂತಾದ್ವರ್ತಮಾನೇ ಛಾಂದಸೋ ಲಙ್। ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದತೋಲೋಪಯಲೋಪೌ। ಭೂಮ। ಭೂಮಿಶಬ್ದಾದುತ್ತರಸ್ಯಾಮಃ ಸುಪಾಂ ಸುಲುಗಿತಿ ಡಾದೇಶಃ। ಛಾಂದಸಂ ಹ್ರಸ್ವತ್ವಂ॥

ಪ್ರತಿಪದಾರ್ಥ

ತೇ—ಆ ಮರುತ್ತುಗಳು। **ಅರುಣೇಭಿಃ**—ಮಿರುಗೆಂಪುಬಣ್ಣವುಳ್ಳವೂ। **ಪಿಶಂಗೈಃ**—ಕಂದುಬಣ್ಣವುಳ್ಳವೂ। **ರಥತೂರ್ಭಿಃ**—ರಥವನ್ನು ಎಳೆಯುವುವೂ ಆದ। **ಅಶ್ವೈಃ**—ಕುದುರೆಗಳೊಡನೆ। **ವರಂ**—ದೇವತೆಗಳನ್ನು ಕೊಂಡಾಡುವವನೂ। **ಕಂ**—ಸ್ತೋತ್ರಮಾಡುವವನೂ ಆದ ಯಜಮಾನನನ್ನು ಕುರಿತು। **ಶುಭೇ**—(ಅವನಿಗೆ) ಒಳ್ಳೆಯದನ್ನು ಮಾಡುವುದಕ್ಕಾಗಿ ಅಥವಾ ಮಳೆಯನ್ನು ಸುರಿಸುವುದಕ್ಕಾಗಿ। **ಆ ಯಾತಿ**—ಬರುತ್ತಾರೆ.। **ರುಕ್ಮೋ ನ**—ಪ್ರಕಾಶಮಾನವಾದ ಚಿನ್ನದಂತೆ। **ಚಿತ್ರಃ**—ಆಕರ್ಷಕವಾದದ್ದೂ। **ಸ್ವಧಿತೀವಾನ್**—ವಜ್ರಾಯುಧವನ್ನು ಹಿಡಿದಿರುವುದೂ ಆದ ಸಂಘರೂಪದ ಮರುತ್ತುಗಳು। **ರಥಸ್ಯ ಪವ್ಯಾ**—ರಥದ ಚಕ್ರದಿಂದ। **ಭೂಮ**-ಭೂಮಿಯನ್ನು। **ಜಂಘನಂತ**—ಬಡಿಯುತ್ತಾರೆ.।

॥ ಭಾವಾರ್ಥ ॥

ಆ ಮರುತ್ತುಗಳು ತಮ್ಮ ಮಿರುಗೆಂಪುಬಣ್ಣವುಳ್ಳವೂ, ಕಂದುಬಣ್ಣವುಳ್ಳವೂ, ರಥವನ್ನು ಎಳೆಯತಕ್ಕವೂ, ಆದ ಕುದುರೆಗಳೊಡನೆ ದೇವತೆಗಳನ್ನು ಕೊಂಡಾಡತಕ್ಕ ಯಜಮಾನನನ್ನು ಕುರಿತು ಅವನಿಗೆ ಒಳ್ಳೆಯದನ್ನು ಮಾಡುವುದಕ್ಕಾಗಿ ಬರುತ್ತಾರೆ. ಪ್ರಕಾಶಮಾನವಾದ ಚಿನ್ನದಂತೆ ಆಕರ್ಷಕವಾದದ್ದೂ, ವಜ್ರಾಯುಧವನ್ನು ಹಿಡಿದಿರುವುದೂ ಆದ ಸಂಘರೂಪವುಳ್ಳ ಆ ಮರುತ್ತುಗಳು ತಮ್ಮ ರಥಚಕ್ರದಿಂದ ಭೂಮಿಯನ್ನು ನಡುಗಿಸಿ ಅದುರುವಂತೆ ಪ್ರಹರಿಸುತ್ತಾರೆ.

## English Translation

To what glorifier of the gods do they repair with their ruddy, tawny car-bearing horses for his advantage? bright as burnished gold and armed with the thunderbolt they break the earth with their chariot-wheels.

ವಿಶೇಷ ವಿಷಯಗಳು

**ಅರುಣೇಭಿಃ ಪಿಶಂಗೈಃ**—ಕೆಂಪು ಮತ್ತು ಪಿಂಗಲ (ಮಾಸಲು ಹಳದಿ) ಬಣ್ಣಗಳಿಂದ ಮಿಶ್ರವಾದ ಬಣ್ಣವುಳ್ಳ. red and tawny horses.

**ವರಂ—ದೇವಾನಾಂ ವರೀತಾರಂ ।** ದೇವತೆಗಳನ್ನು ಕರೆಯುತ್ತಿರುವ ಅಥವಾ ಆಹ್ವಾನಮಾಡುತ್ತಿರುವ ಯಜಮಾನನನ್ನು.

**ಕಂ—ಕೈ ಗೈ ಶಬ್ದೇ । ಕಾಯತೀತಿ ಕಃ ತಂ । ಶಬ್ದಯಿತಾರಂ ಸ್ತುವಂತಂ ।** ಶಬ್ದ ಮಾಡುತ್ತಿರುವ ಎಂದರೆ ಸ್ತೋತ್ರಮಾಡುತ್ತಿರುವ ಯಜಮಾನನನ್ನು ಎಂದರ್ಥವು. ಈ ಶಬ್ದಕ್ಕೆ ಪ್ರಶ್ನಾರ್ಥವನ್ನು ಹೇಳಬಹುದು.

**ಶುಭೇ**—ಶ್ರೇಯಸ್ಸನ್ನುಂಟುಮಾಡುವುದಕ್ಕಾಗಿ ಅಥವಾ ಶುಭವೆಂದರೆ ಉದಕವು (ನಿ. ೨-೨೪) ಉದಕ ಸೇವನಾರ್ಥವಾಗಿ, ವೃಷ್ಟಿಪ್ರದಾನಾರ್ಥವಾಗಿ.

**ರಥತೂರ್ಭಿಃ—ತುರ ತ್ವರಣೇ । ರಥಂ ತುತುರತಿ ತ್ವರಾಯುಕ್ತಂ ಕುರ್ವಂತೀತಿ ರಥತುರಃ ।** ರಥವನ್ನು ತ್ವರಿತಗೊಳಿಸುವುವು ಎಂದರೆ ವೇಗವಾಗಿ ಚಲಿಸುವಂತೆಮಾಡುವ ಅಶ್ವಗಳು.

**ರುಕ್ಮೋ ನ—ರೋಚಮಾನಂ ಸುವರ್ಣಮಿವ ।** ಪ್ರಕಾಶಮಾನವಾದ, ಥಳಥಳನೆ ಹೊಳೆಯುತ್ತಿರುವ ಚಿನ್ನದಂತೆ ಕಾಂತಿಯುಕ್ತವಾದ.

**ಚಿತ್ರಃ—ಅತಿಶಯೇನ ದರ್ಶನೀಯಃ ।** ಬಹು ಸುಂದರವಾದ, ನೋಡುವುದಕ್ಕೆ ಚೆನ್ನಾಗಿ ಕಾಣಿಸುವ.

**ಸ್ವಧಿತೀವಾನ್**— ದಿದ್ಯುತ್ ನೇಮಿಃ ಮೊದಲಾದ ಹದಿನೆಂಟು ವಜ್ರನಾಮಗಳ ಮಧ್ಯದಲ್ಲಿ ಸ್ವಧಿತಿಃ ಎಂಬ ಶಬ್ದವು ಪಠಿತವಾಗಿರುವುದರಿಂದ ಸ್ವಧಿತೀವಾನ್ ಎಂದರೆ ಶತ್ರುಗಳನ್ನು ಸಂಹರಿಸುವುದಕ್ಕಾಗಿ (ವಜ್ರ) ಆಯುಧಗಳಿಂದ ಯುಕ್ತರಾದವರು.

**ಪವ್ಯಾ—ಚಕ್ರಧಾರಯಾ** । ರಥಚಕ್ರದಿಂದ. (ನಿ. ೫-೫)

**ಜಂಘನಂತ ಭೂಮ**—ಭೂಮಿಯನ್ನು ಪ್ರಹರಿಸಿದರು ಎಂದರೆ ಸ್ತೋತ್ರಮಾಡುವವರ ರಕ್ಷಣೆಗಾಗಿ ಭೂಮಿಗೆ ಮರುದ್ದೇವತೆಗಳು ಬರುವಾಗ ಇವರ ಭಾರವನ್ನು ಸಹಿಸಲಾರದೆ ಭೂಮಿಯು ಪೀಡಿತವಾಗುವುದು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅರುಣೇಭಿಃ—ಬಹುಲಂ ಛಂದಸಿ**—ಎಂಬುದರಿಂದ ತೃತೀಯಾಬಹುವಚನದಲ್ಲಿ ಭಿಸಿಗೆ ಐಸ್ ಬರುವುದಿಲ್ಲ. **ಬಹುವಚನೇಝಲ್ಯೇತ್** ಸೂತ್ರದಿಂದ ಏತ್ವ.

**ವರಮ್**—ವ್ರಿಯಂತೇ ದೇವಾಃ ಅನೇನ ಇತಿ ವರಃ. ವೃಞ್ ವರಣೇ. ಇದಕ್ಕೆ **ಗ್ರಹವೃದೃನಿಶ್ಚಿ**—(ಪಾ. ಸೂ. ೩-೩-೫೮) ಎಂಬುದರಿಂದ ಕರಣಾರ್ಥದಲ್ಲಿ ಅಪ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

**ಶುಭೇ**—ಶುಭ ದೀಪ್ತೌ ಧಾತು. ಕ್ವಿಪ್ ಪ್ರತ್ಯಯ. ಚತುರ್ಥೀಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕಮ್**— **ಕೈ ಗೈ** ಶಬ್ದೇ ಧಾತು. ಕಾಯತಿ ಇತಿ ಕಃ. ಬಹುಲವಚನವಿರುವುದರಿಂದ ಇಗುಪಧವಾಗದಿದ್ದರೂ ಕ ಪ್ರತ್ಯಯ ಬರುತ್ತದೆ. **ಆದೇಚ ಉಪದೇಶೇಽಶಿತಿ**—ಎಂಬುದರಿಂದ ಧಾತುವಿಗೆ ಆತ್ವ. ಕಿತ್ ಪ್ರತ್ಯಯಪರವಾದುದರಿಂದ **ಆತೋ ಲೋಪ ಇಟಿ ಚ**—ಎಂಬುದರಿಂದ ಆಕಾರಲೋಪ. ಕ ಶಬ್ದವಾಗುತ್ತದೆ ದ್ವಿತೀಯಾಏಕವಚನಾಂತರೂಪ. ಪ್ರತ್ಯಯಸ್ವರದಿಂದ ಕ ಎಂಬುದು ಅಂತೋದಾತ್ತವಾದಾಗ. ವಿಭಕ್ತಿಗೆ ಏಕಾದೇಶ ಬಂದಾಗ **ಏಕಾದೇಶ ಉದಾತ್ತೇನೋದಾತ್ತಃ**—ಎಂಬುದರಿಂದ ಉದಾತ್ತವಾಗುತ್ತದೆ.

**ರಥತೂರ್ಭಿಃ**—ತುರ ತ್ವರಣೇ ಧಾತು ರಥಂ ತುತುರತಿ ತ್ವರಾಯುಕ್ತಂ ಕುರ್ವಂತಿ ಇತಿ ರಥತುರಃ **ಕ್ವಿಪ್ ಚ** ಎಂಬುದರಿಂದ ಕ್ವಿಪ್‌ಪ್ರತ್ಯಯ. ರಥತುರ್ ಶಬ್ದವಾಗುತ್ತದೆ. ತೃತೀಯಾಬಹುವಚನ ಭಿಸ್ ಪರವಾದಾಗ **ಹಲಿಚ**—(ಪಾ. ಸೂ. ೮-೨-೭೭) ಎಂಬುದರಿಂದ ಧಾತುವಿನ ಉಪಧಾಭೂತ ಇಕಿಗೆ ದೀರ್ಘ. **ಗತಿಕಾರಕೋಪಪದಾತ್ ಕೃತ್**—ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪವ್ಯಾ**—ಪವೀ ರಥನೇಮಿರ್ಭವತಿ (ನಿರು. ೫-೫) ಇತಿ ಯಾಸ್ಕಃ (ರಥದ ಪಟ್ಟಿಗೆ ಪವಿಯೆಂದು ಹೆಸರು) ಪೂಙ್ ಪವನೇಧಾತು. ಇದಕ್ಕೆ **ಅಚ ಇಃ** (ಉ. ಸೂ. ೪-೫೭೮) ಎಂಬುದರಿಂದ ಇಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅವಾದೇಶ. ತೃತೀಯಾಏಕವಚನದಲ್ಲಿ ಟಾ ವಿಭಕ್ತಿ. ಯಣಾದೇಶ. ಉದಾತ್ತಸ್ಥಾನಿಕಯಣಾದೇಶದ ಪರದಲ್ಲಿ ವಿಭಕ್ತಿಬಂದುದರಿಂದ **ಉದಾತ್ತಯಣೋ ಹಲ್‌ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜಂಘನಂತ**—ಹನ ಹಿಂಸಾಗತ್ಯೋಃ ಧಾತು. ಅತಿಶಯಾರ್ಥ ತೋರುವಾಗ **ಧಾತೋರೇಕಾಚಃ**—ಎಂಬುದರಿಂದ ಯಙ್. ಲಙಿನಲ್ಲಿ ಪ್ರಥಮಪುರುಷಬಹುವಚನಕ್ಕೆ **ಝೋಽಂತಃ**—ಎಂಬುದರಿಂದ ಅಂತಾದೇಶ. **ಛಂದಸ್ಯುಭಯಥಾ**-ಎಂಬುದರಿಂದ ಪ್ರತ್ಯಯಕ್ಕೆ ಆರ್ಧಧಾತುಕಸಂಜ್ಞೆಯೂ ಬರುವುದರಿಂದ **ಅತೋ ಲೋಪಃ**—ಎಂಬುದರಿಂದ ಯಙಿನ ಅಕಾರಕ್ಕೆ ಲೋಪ. ಯಙ್‌ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಕುಹೋಶ್ಚುಃ**—ಎಂಬುದರಿಂದ ಹಕಾರಕ್ಕೆ ಚುತ್ವ. **ಅಭ್ಯಾಸಾಚ್ಚ**—ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತು ಹಕಾರಕ್ಕೆ ಕುತ್ವದಿಂದ ಘಕಾರಾದೇಶ. **ನುಗತೋಽನುನಾಸಿಕಾಂತಸ್ಯ** (ಪಾ. ಸೂ. ೭-೪-೮೫) ಎಂಬುದರಿಂದ ಅನುನಾಸಿಕಾಂತವಾದ ಧಾತುವಾದುದರಿಂದ ಅಭ್ಯಾಸಕ್ಕೆ ನುಕಾಗಮ. ನುಕಿನಿಂದ ಅನುಸ್ವಾರವು ಲಕ್ಷಿತವಾಗುತ್ತದೆ ಎಂದು ಅಲ್ಲಿ ವ್ಯಾಖ್ಯಾತವಾದುದರಿಂದ ಅನುಸ್ವಾರ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರಬರುತ್ತದೆ.

**ಭೂಮ**—ಭೂಮಿ+ಅಮ್ ಎಂದಿರುವಾಗ **ಸುಪಾಂ ಸುಲುಕ್**—ಎಂಬುದರಿಂದ ಅಮಿಗೆ ಡಾದೇಶ ಡಿತ್ತಾದುದರಿಂದ ಟಿ (ಇಕಾರ) ಲೋಪವಾಗುತ್ತದೆ. ಸಂಹಿತಾದಲ್ಲಿ ಛಾಂದಸವಾಗಿ ಹ್ರಸ್ವ ಬಂದಿದೆ. ॥ ೨ ॥

॥ ಸಂಹಿತಾಪಾಠಃ ॥

ಶ್ರಿಯೇ ಕಂ ವೋ ಅಧಿ ತನೂಷು ವಾಶೀರ್ಮೇಧಾ ವನಾ ನ
ಕೃಣವಂತ ಊರ್ಧ್ವಾ।
ಯುಷ್ಮಭ್ಯಂ ಕಂ ಮರುತಃ ಸುಜಾತಾಸ್ತುವಿದ್ಯುಮ್ನಾಸೋ ಧನ-
ಯಂತೇ ಅದ್ರಿಂ ॥ ೩ ॥

ಪದಪಾಠಃ

ಶ್ರಿಯೇ । ಕಂ । ವಃ । ಅಧಿ । ತನೂಷು । ವಾಶೀಃ । ಮೇಧಾ। ವನಾ । ನ ।
ಕೃಣವಂತೇ । ಊರ್ಧ್ವಾ ।
ಯುಷ್ಮಭ್ಯಂ । ಕಂ । ಮರುತಃ । ಸುऽಜಾತಾಃ । ತುವಿऽದ್ಯುಮ್ನಾಸಃ । ಧನ-
ಯಂತೇ । ಅದ್ರಿಂ ॥ ೩ ॥

ಸಾಯಣಭಾಷ್ಯಂ

ಹೇ ಮರುತೋ ವೋ ಯುಷ್ಮಾಕಂ ತನೂಷು ಶರೀರೇಷ್ವಂಸಪ್ರದೇಶೇಷು ವಾಶೀಃ ಶತ್ರೂಣಾ-ಮಾಕ್ರೋಶಕಮಾರಾಖ್ಯಮಾಯುಧಂ ಶ್ರಿಯೇ ಕಮೈಶ್ವರ್ಯಾರ್ಥಂ ವರ್ತತ ಇತಿ ಶೇಷಃ। ಕಮಿತ್ಯೇ-ತತ್ಪಾದಪೂರಣಂ। ತದುಕ್ತಂ। ಅಥಾಪಿ ಪಾದಪೂರಣಾಃ ಕಮೀಮಿದ್ವಿತೀತಿ। ತಾದೃಶಾ ಮರುತೋ ವನಾ ನ ಉಚ್ಛ್ರಿತಾನ್ವೃಕ್ಷಸಮೂಹಾನಿವ ಮೇಧಾ ಮೇಧಾನ್ಯಜ್ಞಾನೂರ್ಧ್ವಾ ಊರ್ಧ್ವಾನ್ ಏಕಾಹಾ-ಹೀನಸತ್ರರೂಪೇಣೋಚ್ಛ್ರಿತಾನ್ಕೃಣವಂತೇ। ಯಜಮಾನೈಃ ಕಾರಯಂತಿ। ಹೇ ಸುಜಾತಾಃ ಶೋಭನಜನನಯುಕ್ತಾ ಮರುತೋ ಯುಷ್ಮಭ್ಯಂ ಯುಷ್ಮದರ್ಥಂ ಕಂ ಸುಖಕರಮದ್ರಿಂ ಸೋಮಾಭಿಷವೇ ಪ್ರವೃತ್ತಂ ಗ್ರಾವಾಣಂ ತುವಿದ್ಯುಮ್ನಾಸಃ ಪ್ರಭೂತಧನಾ ಯಜಮಾನಾ ಧನಯಂತೇ। ಧನಂ ಕುರ್ವಂತಿ। ಯುಷ್ಮಾಕಂ ಯಾಗಾಯ ಗ್ರಾವಭಿರಭಿಷುಣ್ವಂತೀತ್ಯರ್ಥಃ॥ ವಾಶೀಃ। ಶತ್ರೂಣಾಂ ಭಯೋತ್ಪಾದನೇನಾ-ಕ್ರೋಶಶಬ್ದಕರಣಂ ವಾಶಃ। ತತಶ್ಛಂದಸೀವನಿಪಾವಿತಿ ಮತ್ವರ್ಥೀಯೋ ಈಕಾರಃ। ವ್ಯತ್ಯಯೇನಾದ್ಯುದಾ-ತ್ತತ್ವಂ। ಮೇಧಾ। ಸುಪಾಂ ಸುಲುಗಿತಿ ಶಸೋ ಡಾದೇಶಃ। ವನಾ। ಶೇಶ್ಛಂದಸಿ ಬಹುಲಮಿತಿ

**ಶೇರ್ಲೋಪಃ । ಕೃಣವಂತೇ । ಕೃವಿ ಹಿಂಸಾಕರಣಯೋಶ್ಚ । ಲಟಿ ವ್ಯತ್ಯಯೇನಾತ್ಮನೇಪದಂ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಪುನರಪಿ ವ್ಯತ್ಯಯೇನಾಂತಾದೇಶಃ । ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಝುಸ್ಯಾಜುತ್ತ್ವಾದ್ಗುಣೇऽವಾದೇಶಃ । ಊರ್ಧ್ವಾಽ । ಪೂರ್ವವಡ್ಡಾದೇಶಃ । ಧನಯಂತೇ । ಧನಶಬ್ದಾತ್ತತ್ಕರೋತೀತಿ ಣಿಚ್ ॥**

ಪ್ರತಿಪದಾರ್ಥ

ವಃ—(ಎಲೈ ಮರುತ್ತುಗಳೇ) ನಿಮ್ಮ । **ತನೂಷು**—ಶರೀರ (ಭುಜ) ಗಳಲ್ಲಿ । **ವಾಶೀಃ**— (ಶತ್ರುಗಳನ್ನು ಭಯಗೊಳಿಸುವಂತೆ) ಶಬ್ದಮಾಡುವ ಆಯುಧವು । **ಶ್ರಿಯೇ ಕಂ**—ಐಶ್ವರ್ಯಸಂಪಾದನೆಗಾಗಿಯೇ (ಇದೆ.) । (ಆ ಮರುತ್ತುಗಳು) **ವನಾ ನ**—ವೃಕ್ಷಸಮೂಹಗಳನ್ನು ಬೆಳೆಸುವಂತೆ । **ಮೇಧಾ**—ಯಜ್ಞಗಳನ್ನು । **ಊರ್ಧ್ವಾ**—ವೃದ್ಧಿಯಾಗಿ ಬೆಳೆಯುವಂತೆ । **ಕೃಣವಂತೆ**—(ಯಜಮಾನರಿಂದ) ಮಾಡಿಸುತ್ತಾರೆ. । **ಸುಜಾತಾಃ**—ಶ್ರೇಷ್ಠವಾದ ಜನ್ಮವುಳ್ಳ । **ಮರುತಃ**—ಎಲೈ ಮರುತ್ತುಗಳೇ । **ಯುಷ್ಮಭ್ಯಂ**—ನಿಮಗಾಗಿಯೇ । **ಕಂ**—ಸುಖಕರವಾದ । **ಅದ್ರಿಂ** - (ಸೋಮರಸವನ್ನು ಹಿಂಡುವ) ಕಲ್ಲನ್ನು । **ತುವಿದ್ಯುಮ್ನಾಸಃ**—ಪ್ರಭೂತವಾದ ಧನವುಳ್ಳ ಯಜಮಾನರು । **ಧನಯಂತೇ**—(ಸೋಮರಸದಿಂದ) ತುಂಬಿದುದನ್ನಾಗಿ ಮಾಡುತ್ತಾರೆ. ।

ಭಾವಾರ್ಥ

ಎಲೈ ಮರುದ್ದೇವತೆಗಳೇ, ನಿಮ್ಮ ಬಾಹುಗಳಲ್ಲಿ ಶತ್ರುಭಯೋತ್ಪಾದಕವಾದ ಆಯುಧಗಳಿರುವುವು. ವೃಕ್ಷಾದಿಗಳು ಎತ್ತರವಾಗಿ ಬೆಳೆಯುವಂತೆ ಯಜ್ಞಗಳನ್ನು ಅಭಿವೃದ್ಧಿಯಾಗುವಂತೆ ಮಾಡುವಿರಿ. ಶ್ರೇಷ್ಠವಾದ ಜನ್ಮವುಳ್ಳ ಎಲೈ ಮರುತ್ತುಗಳೇ, ನಿಮಗಾಗಿ ಯಜಮಾನರು ಸೋಮರಸವನ್ನು ಹಿಂಡುವ ಕಲ್ಲುಗಳನ್ನು ಧನಯುಕ್ತವಾಗುವಂತೆ ಮಾಡುತ್ತಾರೆ ಎಂದರೆ ಕಲ್ಲುಗಳಿಂದ ಸೋಮಲತೆಯನ್ನು ಜಜ್ಜಿ ಸೋಮರಸವನ್ನು ನಿಮ್ಮ ಪಾನಾರ್ಥವಾಗಿ ಸಿದ್ಧಪಡಿಸುತ್ತಾರೆ.

English Translation

O Maruts, the threatening weapons are in your bodies (hands) able to win; to you they raise lofty sacrifices like tall trees ; well born Maruts, for you, the wealthy worshippers enrich the stone ( that presses the Soma plant)

ವಿಶೇಷವಿಷಯಗಳು

**ತನೂಷು**—ಶರೀರಗಳಲ್ಲಿ ಎಂದರೆ ಬಾಹುಗಳಲ್ಲಿ.

**ವಾಶೀಃ**— ಆಯುಧವಿಶೇಷಗಳು. ಶತ್ರುಗಳಿಗೆ ಭಯೋತ್ಪಾದನೆಮಾಡುವ ಶಬ್ದಗಳಿಂದ ಕೂಡಿದ ಆಯುಧಾದಿಗಳು.

**ಮೇಧಾ**—ಯಜ್ಞಗಳನ್ನು

**ತುವಿದ್ಯುಮ್ನಾಸಃ**–ಪ್ರಭೂತಧನವುಳ್ಳ ಯಜಮಾನರು.

**ಧನಯಂತೆ ಅದ್ರಿಂ—ಸೋಮಾಭಿಷವೇ ಪ್ರವೃತ್ತಂ ಗ್ರಾವಾಣಂ ಧನಂ ಕುರ್ವಂತಿ।** ಸೋಮಾಭಿಷವಕ್ಕಾಗಿ ಉಪಯೋಗಿಸುವ ಕಲ್ಲನ್ನು ಧನವುಳ್ಳದ್ದನ್ನಾಗಿ ಎಂದರೆ ಚೆನ್ನಾಗಿ ರಸ ಹಿಂಡುವಂತೆ ಮಾಡುತ್ತಾರೆ.

**ಕಂ**—ಈ ಋಕ್ಕಿನಲ್ಲಿ ಕಂ ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದು. ಪೂರ್ವಾರ್ಧದಲ್ಲಿರುವ ಕಂ ಎಂಬ ಶಬ್ದವು ಕೇವಲ ಪಾದಪೂರಣಕ್ಕಾಗಿ ಉಪಯೋಗಿಸಲ್ಪಟ್ಟಿರುವುದು. **ಅಥಾಪಿ ಪಾದಪೂರಣಾ ಕಮೀಮಿದ್ವಿತೀತಿ** ಎಂದು ಯಾಸ್ಕರ ವಚನವಿರುವುದು. (ನಿ.೧-೯) ಎಂದರೆ ಕಂ, ಈಂ, ಇತ್, ಉ ಎಂಬ ಶಬ್ದಗಳು ಕೇವಲ ಪಾದಪೂರಣಮಾಡುವುದಕ್ಕಾಗಿ ಎಂದರೆ ಪಾದಗಳಲ್ಲಿರಬೇಕಾದ ಕ್ಲಪ್ತ ಸಂಖ್ಯೆಯ ಅಕ್ಷರಗಳು ಕಮ್ಮಿಯಾದಲ್ಲಿ ಅದನ್ನು ಸರಿಪಡಿಸುವುದಕ್ಕಾಗಿ ಈ ಶಬ್ದಗಳನ್ನು ಸೇರಿಸುವರು. ಅಂತಹ ಸಂದರ್ಭದಲ್ಲಿ ಈ ಶಬ್ದಗಳಿಗೆ ಯಾವ ನಿರ್ದಿಷ್ಟಾರ್ಥವೂ ಇರುವುದಿಲ್ಲ. ಉತ್ತರಾರ್ಧದಲ್ಲಿರುವ ಕಂ ಎಂಬ ಶಬ್ದಕ್ಕೆ ಸುಖಕರವಾದ ಎಂದರ್ಥವನ್ನು ಭಾಷ್ಯಕಾರರು ಹೇಳಿರುವರು.

### ವ್ಯಾಕರಣಪ್ರಕ್ರಿಯಾ

**ಶ್ರಿಯೇ—ಸಾವೇಕಾಚಸ್ತೃತೀಯಾದಿಃ**—ಎಂಬುದರಿಂದ ಚತುರ್ಥೀವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಾಶೀಃ**—ಶತ್ರೂಣಾಂ ಭಯೋತ್ಪಾದನೇನ ಆಕ್ರೋಶಶಬ್ದಕರಣಂ ವಾಶಃ. ವಾಶಃ ಅಸ್ಯ ಅಸ್ತಿ ಎಂಬ ಮತ್ವರ್ಥದಲ್ಲಿ **ಛಂದಸೀವನಿಪೌ**—ಎಂಬುದರಿಂದ ಈಕಾರ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತತ್ವವು ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮೇಧಾ**—ಮೇಧ+ಶಸ್ ಎಂದಿರುವಾಗ **ಸುಪಾಂ ಸುಲುಕ್**—ಎಂಬುದರಿಂದ ಶಸಿಗೆ ಡಾದೇಶ.

**ವನಾ**—ವನ ಶಬ್ದ ನಿತ್ಯನಪುಂಸಕಲಿಂಗ. ಬಹುವಚನದಲ್ಲಿ ಆದೇಶವಾಗಿ ಬಂದ ಶಿಗೆ **ಶೇಶ್ಛಂದಸಿ ಬಹುಲಮ್**—ಎಂಬುದರಿಂದ ಲೋಪ.

**ಕೃಣವಂತೇ**—ಕೃವಿ ಹಿಂಸಾಕರಣಯೋಶ್ಚ ಧಾತು. ಲಟ್‌ಪ್ರಥಮಪುರುಷ ಬಹುವಚನದಲ್ಲಿ ಝಪ್ರತ್ಯಯ **ವ್ಯತ್ಯಯೋ ಬಹುಲಮ್**—ಎಂಬುದರಿಂದ ಇಲ್ಲಿ ಆತ್ಮನೇಪದಪ್ರತ್ಯಯ ಬರುತ್ತದೆ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಅಕಾರವು ಅಂತಾದೇಶವಾಗಿಯೂ ಶಪಿಗೆ ಉ ಪ್ರತ್ಯಯವೂ ಬರುತ್ತವೆ. **ಇದಿತೋನುಮ್‌ಧಾತೋಃ** – ಎಂಬುದರಿಂದ ಧಾತುವಿಗೆ ನುಮಾಗಮ. ಕೃಣ್ವ್ ಎಂದಿರುವಾಗ **ಅಲೋಂತ್ಯಸ್ಯ** ಎಂಬ ಪರಿಭಾಷೆಯಿಂದ ವಕಾರಕ್ಕೆ ಅಕಾರವು ಅಂತಾದೇಶವಾಗಿ ಬರುತ್ತದೆ. ಕೃಣ ಅ ಉ ಝ ಎಂದಿರುವಾಗ **ಅತೋ-ಲೋಪಃ**—ಎಂಬುದರಿಂದ ಅಕಾರಕ್ಕೆ ಲೋಪ. ಯದ್ಯಪಿ ಹ್ರಸ್ವಾಕಾರಭಿನ್ನವಾದುದರ ಪರದಲ್ಲಿರುವುದರಿಂದ ಝ ಪ್ರತ್ಯಯಕ್ಕೆ **ಆತ್ಮನೇಪದೇಷ್ವನತಃ**—ಎಂಬುದರಿಂದ ಅತಾದೇಶ ಬರಬೇಕಾಗುತ್ತದೆ. ಆದರೆ ಹಿಂದಿನಂತೆಯೇ ವ್ಯತ್ಯಯದಿಂದ **ಝೋಂತಃ**—ಎಂಬುದರಿಂದಲೇ ಅಂತಾದೇಶ ಬರುತ್ತದೆ. **ಛಂದಸ್ಯುಭಯಥಾ**—(ಪಾ. ಸೂ.

೩-೪-೧೧೭) ಎಂಬುದರಿಂದ ಪ್ರತ್ಯಯಕ್ಕೆ ಆರ್ಧಧಾತುಕಸಂಜ್ಞೆ ಬರುವುದರಿಂದ **ಸಾರ್ವಧಾತುಕಮಪಿತ್**—ಎಂಬ ಸೂತ್ರದಿಂದ ಅದಕ್ಕೆ ಙಿದ್ವದ್ಭಾವ ಬರುವುದಿಲ್ಲ. ಆಗ **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಉಕಾರಕ್ಕೆ ಗುಣ. ಅವಾದೇಶ. ಕೃಣವಂತೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಊರ್ಧ್ವಾ**—ಹಿಂದಿನಂತೆ ಶಸ್‌ವಿಭಕ್ತಿಗೆ **ಸುಪಾಂ ಸುಲುಕ್**—ಸೂತ್ರದಿಂದ ಡಾದೇಶ.

**ಸುಜಾತಾಃ**—**ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಧನಯಂತೇ**—ಧನಂ ಕುರ್ವಂತಿ ಧನಯಂತೇ **ತತ್ಕರೋತಿ ತದಾಚಷ್ಟೇ**—ಎಂಬುದರಿಂದ ಪ್ರಾತಿಪದಿಕದ ಮೇಲೆ ಧಾತ್ವರ್ಥ ವಿವಕ್ಷಾಮಾಡಿದಾಗ ಣಿಚ್ ಬರುತ್ತದೆ. ಇದಕ್ಕೆ **ಇಷ್ಠವಚ್ಚ**—ಎಂದು ಇಷ್ಠವದ್ಭಾವ ಅತಿದೇಶ ಮಾಡಿರುವುದರಿಂದ ಣಿಚ್‌ಪರವಾದಾಗ ಟಿಲೋಪ ಬರುತ್ತದೆ. ಧನಿ ಎಂದು **ಸನಾದ್ಯಂತಾ ಧಾತವಃ**—ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಲಟ್‌ಪ್ರಥಮಪುರುಷಬಹುವಚನದಲ್ಲಿ ಅಂತಾದೇಶ. ಶಪ್‌ವಿಕರಣ. ಶಪ್‌ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥೩॥



॥ ಸಂಹಿತಾಪಾಠಃ ॥

ಅಹಾನಿ ಗೃಧ್ರಾಃ ಪರ್ಯಾ ವ ಆಗುರಿಮಾಂ ಧಿಯಂ ವಾರ್ಕಾರ್-
ಯಾಂ ಚ ದೇವೀಂ।
ಬ್ರಹ್ಮ ಕೃಣ್ವಂತೋ ಗೋತಮಾಸೋ ಅರ್ಕೈರೂರ್ಧ್ವಂ ನುನು-
ದ್ರ ಉತ್ಸಧಿಂ ಪಿಬಧ್ಯೈ ॥ ೪ ॥

ಪದಪಾಠಃ

ಅಹಾನಿ । ಗೃಧ್ರಾಃ । ಪರಿ । ಆ । ವಃ । ಆ । ಅಗುಃ । ಇಮಾಂ । ಧಿಯಂ ।
ವಾರ್ಕಾರ್ಯಾಂ । ಚ । ದೇವೀಂ ।
ಬ್ರಹ್ಮ । ಕೃಣ್ವಂತಃ । ಗೋತಮಾಸಃ । ಅರ್ಕೈಃ । ಊರ್ಧ್ವಂ । ನುನುದ್ರೇ ।
ಉತ್ಸಽಧಿಂ । ಪಿಬಧ್ಯೈ ॥ ೪ ॥

॥ ಸಾಯಣಭಾಷ್ಯಂ ॥

ತೃಷಿತೈರ್ಗೋತಮೈಃ ಸ್ತುತಾ ಮರುತಸ್ತೇಭ್ಯೋ ಗೋತಮೇಭ್ಯೋ ದೇಶಾಂತರೇ ವರ್ತಮಾನಂ ಕೂಪಮುತ್ಪಾಟ್ಯಾನೀಯ ಪ್ರದದುಃ । ಏತದ್ದೃಷ್ಟ್ವಾ ಕಶ್ಚಿದೃಷಿರ್ಬ್ರೂತೇ । ಹೇ ಗೋತಮಾ ಗೃಧ್ರಾ ಜಲಾಭಿಕಾಂಕ್ಷಾಯುಕ್ತಾನ್ವೋ ಯುಷ್ಮಾನಹಾನಿ ಶೋಭನೋದಕೋಪೇತಾನಿ ದಿನಾನಿ ಪರ್ಯಾಗುಃ । ಪರ್ಯಾಗತಾನಿ । ಪರಿತ ಅಭಿಮುಖ್ಯೇನ ಪ್ರಾಪ್ತಾನಿ । ಪ್ರಾಪ್ಯ ಚ ವಾರ್ಕಾರ್ಯಾಂ ವಾರ್ಭಿರುದಕೈರ್ನಿಷ್ಪಾದ್ಯಾಂ ಧಿಯಂ ಜ್ಯೋತಿಷ್ಟೋಮಾದಿಲಕ್ಷಣಂ ಕರ್ಮ ಚ ದೇವೀಂ ದ್ಯೋತಮಾನಮಕುರ್ವನ್ । ಯೇಽಪ್ಯಹಸ್ಸು ಬ್ರಹ್ಮ ಹವಿರ್ಲಕ್ಷಣಮನ್ನಮರ್ಕೈರ್ಮಂತ್ರಸಾಧ್ಯೈಃ ಸ್ತೋತ್ರೈಃ ಸಹ ಕೃಣ್ವಂತೋ ಮರುದ್ಭ್ಯಃ ಕುರ್ವಂತೋ ಗೋತಮಾಸೋ ಗೋತಮಾ ಋಷಯ ಉತ್ಸಧಿಂ । ಉತ್ಸೋ ಜಲಪ್ರವಾಹೋಽಸ್ಮಿನ್ಧೀಯತ ಇತ್ಯುತ್ಸಧಿಃ ಕೂಪಂ । ತಂ ಪಿಬಧ್ಯೈ ಸ್ವಕೀಯಪಾನಾಯೋರ್ಧ್ವಂ ನುನುದ್ರೇ ನುನುದಿರೇ ದೇಶಾಂತರೇ ವರ್ತಮಾನಂ ಕೂಪಮುತ್ಪಾಟನಂತಃ । ಏತದೀಯಸ್ತೋತ್ರೈಃ ಸ್ತುತಾ ಮರುತಃ ಕೂಪಮುತ್ಪಾಟನಂತ ಇತಿ ಯತ್ತದೇತದೀಯಸ್ತೋತ್ರಕಾರಿತಮಿತ್ಯೇತೇಷೂಪಚರ್ಯತೇ ॥ ಗೃಧ್ರಾಃ । ಗೃಧು ಅಭಿಕಾಂಕ್ಷಾಯಾಂ । ಸುಸೂಧಾಗೃಧಿಭ್ಯಃ ಕ್ರನ್ನಿತಿ ಕ್ರನ್ಪ್ರತ್ಯಯಃ । ಸುಪಾಂ ಸುಪೋ ಭವಂತೀತಿ ಶಸೋ ಜಸ್ । ನಿತ್ತ್ವಾದಾದ್ಯುದಾತ್ತತ್ವಂ । ಅಗುಃ। ಏತೇರ್ಲುಙಿಣೋ ಗಾ ಲುಙೀತಿ ಗಾದೇಶಃ । ಆತ ಇತಿ ಝೇರ್ಜುಸ್ । ವಾರ್ಕಾರ್ಯಾಂ । ಡುಕೃಞ್ ಕರಣೇ । ಋಹಲೋರ್ಣ್ಯತ್ । ವಾರ್ಭಿಃ ಕಾರ್ಯಾ ವಾರ್ಕಾರ್ಯಾ। ತ್ರಿಚಕ್ರಾದಿತ್ವಾದುತ್ತರಪದಾಂತೋದಾತ್ತತ್ವಂ। ನನುದ್ರೇ। ಣುದ ಪ್ರೇರಣೇ । ಇರಯೋ ರ ಇತಿ ರೇಆದೇಶಃ। ಉತ್ಸಧಿಂ । ಕರ್ಮಣ್ಯಧಿಕರಣೇ ಚೇತಿ ದಧಾತೇರಧಿಕರಣೇ ಕಿಪ್ರತ್ಯಯಃ । ಪಿಬಧ್ಯೈ । ಪಾ. ಪಾನೇ । ತುಮರ್ಥೇ ಸೇಸೇನಿತಿ ಶಧ್ಯೈನ್ಪ್ರತ್ಯಯಃ । ಪಾಘ್ರೇತ್ಯಾದಿನಾ ಪಿಬಾದೇಶಃ ॥

ಪ್ರತಿಪದಾರ್ಥ

ಗೃಧ್ರಾಃ— (ಎಲೈ ಗೋತಮಪುತ್ರರೇ) ನೀರನ್ನು ಬಹಳವಾಗಿ ಬಯಸಿದ । ವಃ—ನಿಮ್ಮನ್ನು । ಅಹಾನಿ—(ಶ್ರೇಷ್ಠವಾದ ನೀರುಗಳಿಂದ ಕೂಡಿದ) ದಿನಗಳು । ಪರಿ ಆ ಅಗುಃ—(ನಿಮ್ಮನ್ನು) ಎದುರುಗೊಂಡು ಬಂದಿವೆ ಎಂದರೆ ಸಮೀಪಿಸಿ ಬಂದಿವೆ. । (ಮತ್ತು) ವಾರ್ಕಾರ್ಯಾಂ—ನೀರುಗಳಿಂದ (ಲೇ) ಸಂಪಾದಿತವಾಗ

ಬೇಕಾದ । **ಧಿಯಂ**—ಜ್ಯೋತಿಷ್ಟೋಮಾದಿರೂಪವಾದ ಕರ್ಮವನ್ನು । **ದೇವೀಂ ಚ**—ಪ್ರಕಾಶಿಸುವಂತೆಯೂ ಮಾಡಿದವು. (ಈ ದಿವಸಗಳಲ್ಲಿ) । **ಬ್ರಹ್ಮ**—ಹವಿಸ್ಸಿನರೂಪದ ಅನ್ನವನ್ನು । **ಅರ್ಕೈಃ**—ಮಂತ್ರರೂಪವಾದ ಸ್ತೋತ್ರಗಳಿಂದ ಕೂಡಿಸಿ । **ಕೃಣ್ವಂತಃ**—(ಮರುತ್ತುಗಳಿಗೆ) ಅರ್ಪಿಸುತ್ತ । **ಗೋತಮಾಸಃ**—ಗೋತಮ ಪುತ್ರರಾದ ಋಷಿಗಳು । **ಉತ್ಸಧಿಂ**—ನೀರಿನ ಆಶ್ರಯವಾದ ಭಾವಿಯನ್ನು । **ಪಿಬಧ್ಯೈ**—ತಮ್ಮ ಪಾನಕ್ಕಾಗಿ । **ಊರ್ಧ್ವಂ ನುನುದ್ರೇ**—ಮೇಲಕ್ಕೆ (ನೀರು) ಬರುವಂತೆ ಅಗೆದು ತಂದರು. ।

ಭಾವಾರ್ಥ

ಎಲೈ ಗೋತಮಪುತ್ರರೇ, ನೀವು ನೀರಿಗಾಗಿ ಉತ್ಕಟವಾಗಿ ಬಯಸಿದಿರಿ. ನಿಮಗೆ ಬೇಕಾದ ನೀರುಗಳಿಂದ ಕೂಡಿದ ದಿನಗಳು ನಿಮ್ಮನ್ನು ಎದುರುಗೊಂಡು ಬಂದಿವೆ. ಮತ್ತು ನೀರುಗಳಿಂದಲೇ ಸಂಪಾದಿತವಾಗಬೇಕಾದ ಜ್ಯೋತಿಷ್ಟೋಮಾದಿರೂಪವಾದ ಕರ್ಮವನ್ನು ಪ್ರಕಾಶಿಸುವಂತೆ ಮಾಡಿವೆ. ಇಂತಹ ದಿನಗಳಲ್ಲಿ ಗೋತಮಪುತ್ರರಾದ ನೀವು ಹವಿಸ್ಸಿನರೂಪದ ಅನ್ನವನ್ನು ಮಂತ್ರರೂಪವಾದ ಸ್ತೋತ್ರಗಳಿಂದ ಕೂಡಿಸಿ ಮರುತ್ತುಗಳಿಗೆ ಅರ್ಪಿಸುತ್ತ ನೀರಿನ ಆಶ್ರಯವಾದ ಭಾವಿಯನ್ನು ನಿಮ್ಮ ಪಾನಕ್ಕಾಗಿ ನೀರು ಮೇಲಕ್ಕೆ ಬರುವಂತೆ ಅಗೆದು ತಂದಿರಿ. ಮರುತ್ತಗಳೂ ಸಹ ದೂರದೇಶದಿಂದ ಆ ಬಾವಿಯನ್ನು ಆಗೆದು ನಿಮಗಾಗಿ ತಂದರು.

English Translation

Fortunate days have befallen you, ( sons of Gotama ), when thirsty and having sung about you in the sacrifice for which water was essential ; the sons of Gotama, offering oblations with sacred hymns have raised aloft the well provided for their dwelling

ವಿಶೇಷವಿಷಯಗಳು

ಬಾಯಾರಿಕೆಯಿಂದ ಬಳಲಿದ ಗೋತಮಋಷಿಯಿಂದಲೂ ಅವನ ಪುತ್ರರಿಂದಲೂ ಸ್ತುತಿಸಲ್ಪಟ್ಟ ಮರುದ್ದೇವತೆಗಳು ದೇಶಾಂತರದಲ್ಲಿದ್ದ ಒಂದು ನೀರಿನ ಬಾವಿಯನ್ನು ಎತ್ತಿಕೊಂಡು ಬಂದು ಗೋತಮಋಷಿಗೆ ಕೊಟ್ಟರು. ಇದನ್ನು ನೋಡಿದ ಒಬ್ಬ ಋಷಿಯು ಈ ಋಕ್ಕನ್ನು ಹೇಳಿರುವನು.

**ಗೃಧ್ರಾಃ—ಗೃಧು ಅಭಿಕಾಂಕ್ಷಾಯಾಂ** । (ನೀರನ್ನು) ಅಪೇಕ್ಷಿಸುತ್ತಿರುವ.

**ವಾರ್ಕಾರ್ಯಾಂ—ಡುಕೃಞ್ ಕರಣೇ । ವಾರ್ಭಿಃ ಕಾರ್ಯಾ ವಾರ್ಕಾರ್ಯಾ ತಾಂ** । ನೀರಿನಿಂದ ಮಾಡಲ್ಪಡಬೇಕಾದ, ಅವಶ್ಯಕವಾಗಿ ನೀರು ಬೇಕಾದ.

ಧಿಯಂ—ಕರ್ಮವನ್ನು ಎಂದರೆ ಜ್ಯೋತಿಷ್ಟೋಮಾದಿಯಜ್ಞಕರ್ಮವನ್ನು. ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಧೀಃ ಎಂಬ ಶಬ್ದವು ಪಠಿತವಾಗಿರುವುದರಿಂದ ಧಿಯಂ ಎಂದರೆ ಕರ್ಮವನ್ನು ಎಂದರ್ಥವು. (ನಿ-೩-೧)

**ದೇವೀಂ ಚ**—**ದ್ಯೋತಮಾನಮಕುರ್ವನ್ ।** ಪ್ರಕಾಶಮಾನವಾಗುವಂತೆ ಅಥವಾ ಯಶಸ್ವಿಯಾಗುವಂತೆ ಮಾಡಿದವು.

**ಬ್ರಹ್ಮ**—**ಹವಿರ್ಲಕ್ಷಣಮನ್ನಂ ।** ಹವಿಸ್ಸಿನ ರೂಪದಲ್ಲಿ ದೇವತೆಗಳಿಗೆ ಅರ್ಪಿಸಬೇಕಾದ ಅನ್ನವನ್ನು

**ಅರ್ಕೈಃ**—ಋಕ್ಕುಗಳಿಂದ, ಮಂತ್ರಗಳಿಂದ, ಸ್ತೋತ್ರಗಳಿಂದ.

**ಗೋತಮಾಸಃ**—ಗೋತಮಋಷಿಯ ಪುತ್ರರು ಅಥವಾ ವಂಶಸ್ಥರು.

**ಉತ್ಸಧಿಂ**—**ಜಲಪ್ರವಾಹೋಽಸ್ಮಿನ್ಸ್ಥೀಯತ ಇತ್ಯುತ್ಸಧಿಃ ಕೂಪಂ ।** ಜಲಪ್ರವಾಹವಿರುವ ನೀರಿನ ಬಾವಿಯನ್ನು.

ವ್ಯಾಕರಣಪ್ರಕ್ರಿಯಾ

**ಗೃಧ್ರಾಃ**—ಗೃಧು ಅಭಿಕಾಂಕ್ಷಾಯಾಮ್. ಧಾತು. ಇದಕ್ಕೆ **ಸುಸೂಧಾಗೃಧಿಭ್ಯಃ ಕ್ರನ್** (ಉ. ಸೂ ೨-೧೮೨) ಎಂಬುದರಿಂದ ಕ್ರನ್‌ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಗೃಧ್ರಶಬ್ದವಾಗುತ್ತದೆ. **ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಶಸಿಗೆ ಜಸ್ ಪ್ರತ್ಯಯ ಬರುತ್ತದೆ. ಕ್ರನ್ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಗುಃ**—ಇಣ್ ಗತೌ ಧಾತು. ಲುಙಂನಲ್ಲಿ **ಇಣೋಗಾಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾ ಆದೇಶ. ಪ್ರಥಮಪುರುಷಬಹುವಚನದಲ್ಲಿ ಝಿಪ್ರತ್ಯಯ. **ಆತಃ** (ಪಾ. ಸೂ. ೩-೪-೧೧೦) ಆಕಾರದಲ್ಲಿರುವ ಝಿಗೆ ಜುಸಾದೇಶ ಬರುತ್ತದೆ ಎಂಬುದರಿಂದ ಝಿಗೆ ಜುಸಾದೇಶ. **ಉಸ್ಯಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ ಏಕಾದೇಶವಾಗಿ ಬರುತ್ತದೆ. ಅಂಗಕ್ಕೆ ಅಡಾಗಮ. **ತಿಙ್ಙತಿಙಃ**—ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಇಮಾಮ್**—ಇದಮ್ ಶಬ್ದ. ಸ್ತ್ರೀಲಿಂಗದಲ್ಲಿ ದ್ವಿತೀಯಾಏಕವಚನಾಂತರೂಪ. **ಊಡಿದಂಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಾರ್ಕಾರ್ಯಾಮ್**—ಡು ಕೃಞ್ ಕರಣೇ ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಇದಕ್ಕೆ ಣ್ಯತ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ**—ಎಂಬುದರಿಂದ ವೃದ್ಧಿ. **ಉರಣ್ರಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಅಜಾದ್ಯತಷ್ಟಾಪ್**—ಎಂಬುದರಿಂದ ಟಾಪ್ ಬರುತ್ತದೆ. ವಾರ್ಭಿಃ ಕಾರ್ಯಾ ವಾರ್ಕಾರ್ಯಾ. ತ್ರಿಚಕ್ರಾದಿಗಣದಲ್ಲಿ ಸೇರಿರುವುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಗೋತಮಾಸಃ**—ಪ್ರಥಮಾಬಹುವಚನದಲ್ಲಿ **ಆಜ್ಜಸೇರಸುಕ್**—ಎಂಬುದರಿಂದ ಜಸಿಗೆ ಅಸುಕಾಗಮ.

**ನುನುದ್ರೇ**—ಣುದ ಪ್ರೇರಣೇ ಧಾತು. ಲಿಟ್ ಪ್ರಥಮಪುರುಷಬಹುವಚನದಲ್ಲಿ **ಲಿಟಸ್ತಝಯೋರೇಶಿರೇಚ್** ಎಂಬುದರಿಂದ ಇರೇಚ್ ಆದೇಶ. ಅದಕ್ಕೆ ಛಂದಸ್ಸಿನಲ್ಲಿ **ಇರಯೋರೇ** (ಪಾ. ಸೂ. ೬-೪-೭೬) ಎಂಬುದರಿಂದ ರೇ

ಆದೇಶ. ಧಾತುವಿನ ಣಕಾರಕ್ಕೆ **ಣೋನಃ**—ಎಂಬುದರಿಂದ ನತ್ವ. ಲಿಣ್ನಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಅಸಂಯೋಗಾಲ್ಲಿಟ್ ಕಿತ್**—ಎಂಬುದರಿಂದ ಕಿತ್ವವಿರುವುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಉತ್ಸಧಿಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ **ಕರ್ಮಣ್ಯಧಿಕರಣೇ ಚ** (ಪಾ. ಸೂ. ೩-೩-೯೩) ಎಂಬುದರಿಂದ ಅಧಿಕರಣಾರ್ಥದಲ್ಲಿ ಕಿ ಪ್ರತ್ಯಯ. ಉತ್ಸಃ ಅಸ್ಮಿನ್ ಧೀಯತೇ ಇತಿ ಉತ್ಸಧಿ ಪ್ರತ್ಯಯ ಕಿತ್ತಾದುದರಿಂದ **ಆತೋ ಲೋಪ ಇಟಿ ಚ** (ಪಾ.ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪಿಬಧ್ಯೈ**—ಪಾ ಪಾನೇ ಧಾತು. ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಶಧ್ಯೈನ್ ಪ್ರತ್ಯಯ. ಪ್ರತ್ಯಯ ಶಿತ್ತಾದುದರಿಂದ **ಪಾಘ್ರಾಧ್ಮಾಸ್ಥಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಪಿಬ ಎಂಬ ಆದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೪ ॥



ಸಂಹಿತಾಪಾಠಃ

ಏತತ್ತ್ಯನ್ನ ಯೋಜನಮಚೇತಿ ಸಸ್ವರ್ಹ ಯನ್ಮರುತೋ ಗೋತಮೋ ವಃ ।
ಪಶ್ಯನ್ಹಿರಣ್ಯಚಕ್ರಾನಯೋದಂಷ್ಟ್ರಾನ್ವಿಧಾವತೋ ವರಾಹೂನ್ ॥ ೫ ॥

ಪದಪಾಠಃ

ಏತತ್ । ತ್ಯತ್ । ನ । ಯೋಜನಂ । ಅಚೇತಿ । ಸಸ್ವಃ । ಹ । ಯತ್ । ಮರುತಃ । ಗೋತಮಃ । ವಃ ।
ಪಶ್ಯನ್ । ಹಿರಣ್ಯಽಚಕ್ರಾನ್ । ಅಯಃಽದಂಷ್ಟ್ರಾನ್ । ವಿಽಧಾವತಃ । ವರಾಹೂನ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಏತದ್ಯೋಜನಂ । ಯುಜ್ಯತೇಽನೇನ ದೇವತೇತಿ ಯೋಜನಮೇತತ್ಸೂಕ್ತಸಾಧ್ಯಂ ಸ್ತೋತ್ರಂ । ತ್ಯನ್ನ ತ್ಯತ್ ಪ್ರಸಿದ್ಧಮನ್ಯದುತ್ಕೃಷ್ಟಂ ಸ್ತೋತ್ರಮಿವಾಚೇತಿ । ಸರ್ವೈರ್ಜ್ಞಾಯತೇ। ವೋ ಯುಷ್ಮದರ್ಥಂ ಯತ್ ಯದೇತತ್ಸೂಕ್ತರೂಪಂ ಸ್ತೋತ್ರಂ ಗೋತಮ ಋಷಿಃ ಸಸ್ವರ್ಹ ಉಚ್ಚಾರಿತವಾನ್ ಖಲು । ಕಿಂ ಕುರ್ವನ್ । ಹಿರಣ್ಯಚಕ್ರಾನ್ ಹಿರಣ್ಮಯಚಕ್ರರಥಾರೂಢಾನ್ ಹಿತರಮಣೀಯಕರ್ಮಯುಕ್ತಾನ್ವಾಯೋದಂಷ್ಟ್ರಾನ್ । ದಶತೀತಿ ದಂಷ್ಟ್ರಾ ಚಕ್ರಧಾರಾ । ಅಯೋಮಯೀಭಿಶ್ಚಕ್ರಧಾರಾಭಿರ್ಯುಕ್ತಾನ್ । ಯದ್ವಾ । ದಂಶನಸಾಧನಾ ಋಷ್ಟಯೋ ದಂಷ್ಟ್ರಾಃ । ಅಯೋಮಯಾ ಋಷ್ಟಯೋ ಯೇಷಾಂ । ತಾನ್ವಿಧಾವತೋ ವಿವಿಧಮಿತಸ್ತತಃ ಪ್ರವರ್ತಮಾನಾನ್ವರಾಹೂನ್ ವರಸ್ಯೋತ್ಕೃಷ್ಟಸ್ಯ ಶತ್ರೋರ್ಹಂತೄನ್ । ಯದ್ವಾ । ಉತ್ಕೃಷ್ಟಸ್ಯ ವೃಷ್ಟ್ಯುದಕಸ್ಯಾಹರ್ತೄನ್ । ಅಥವಾ ಉತ್ಕೃಷ್ಟಾನಾಂ ದೇವತಾನಾಮಾಹ್ವಾತೄನ್ ವರಸ್ಯ ಹವಿಷೋ ಭಕ್ಷಯಿತೄನ್ವಾ। ಏವಂಭೂತಾನ್ಮರುತಃ ಪಶ್ಯನ್ ಸಮ್ಯಗ್ಜಾನನ್ ಗೋತಮೋ ಯತ್ಸ್ತೋತ್ರಂ ಕೃತವಾನ್ ತದೇತತ್ಸರ್ವೋತ್ಕೃಷ್ಟಂ ಸದಸ್ಮಾಭಿಃ ಸರ್ವೈರುಪಲಭ್ಯತ ಇತ್ಯರ್ಥಃ । ಅತ್ರ ನಿರುಕ್ತಂ । ಅಥಾಪ್ಯೇತೇ ಮಾಧ್ಯಮಿಕಾ ದೇವಗಣಾ ವರಾಹವ ಉಚ್ಯಂತೇ ಪಶ್ಯನ್ಹಿರಣ್ಯಚಕ್ರಾನ್ । ನಿ. ೫-೪ । ಇತಿ ॥ ಅಚೇತಿ । ಚಿತೀ ಸಂಜ್ಞಾನೇ । ಛಾಂದಸೋ ವರ್ತಮಾನೇ ಕರ್ಮಣಿ ಲುಙ್ । ಸಸ್ವಃ । ಸ್ವೃ ಶಬ್ದೋಪತಾಪಯೋಃ । ಲಙಿ ತಿಪಿ ಬಹುಲಂ ಛಂದಸೀತಿ ಶಪಃ ಶ್ಲುಃ । ಗುಣೇ ಹಲ್ಙ್ಯಾಬ್ಭ್ಯ ಇತಿ ತಲೋಪಃ । ಧಾತುಸ್ವರೇಣಾಂತೋದಾತ್ತತ್ವಂ । ವರಾಹೂನ್ । ವರಶಬ್ದೋಪಪದಾದಾಙ್ಪೂರ್ವಾದ್ಧಂತೇರ್ವಾ ಹರತೇರ್ವಾ ಹ್ವಯತೇರ್ವಾ ಜುಹೋತೇರದನಾರ್ಥಾದ್ವಾ । ಹು ಇತ್ಯೇತಸ್ಯ ನಿಷ್ಪತ್ತಿರಿತಿ ಸ್ಕಂದಸ್ವಾಮೀ । ಅಸ್ಯ ಪೃಷೋದರಾದಿತ್ವಾದಭಿಮತಸಿದ್ಧಿಃ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ, । **ಹಿರಣ್ಯಚಕ್ರಾನ್**—ಚಿನ್ನದ ಚಕ್ರವುಳ್ಳ ರಥದಲ್ಲಿ ಕುಳಿತಿರುವವರೂ ಅಥವಾ ಹಿತವಾಗಿಯೂ ರಮಣೀಯವಾಗಿಯೂ ಇರುವ ಕರ್ಮಯುಕ್ತರಾಗಿರುವವರೂ । **ಅಯೋದಂಷ್ಟ್ರಾನ್**—ಉಕ್ಕಿನ ಆಯುಧಗಳನ್ನು ಹಿಡಿದಿರುವವರೂ, । **ವಿಧಾವತಃ**—ಎಲ್ಲಾ ಕಡೆಯಲ್ಲಿಯೂ ರಭಸದಿಂದ ಓಡಾಡುವವರೂ । **ವರಾಹೂನ್**—ಪ್ರಬಲರಾದ ಶತ್ರುನಾಶಕರಾದವರೂ, ಅಥವಾ ಶ್ರೇಷ್ಠವಾದ ಮಳೆಯ ನೀರನ್ನು ತರುವವರೂ, ಅಥವಾ ಶ್ರೇಷ್ಠರಾದ ದೇವತೆಗಳನ್ನು (ಯಜ್ಞಕ್ಕೆ) ಕರೆಯುವವರೂ ಅಥವಾ ಶ್ರೇಷ್ಠವಾದ ಹವಿಸ್ಸಿನ ಭಕ್ಷಕರೂ ಆದ ನಿಮ್ಮನ್ನು । **ಪಶ್ಯನ್**—ಚೆನ್ನಾಗಿ ಗಮನಿಸುತ್ತಾ । **ವಃ**—ನಿಮಗಾಗಿ । **ಯತ್**—ಯಾವ ಸೂಕ್ತರೂಪವಾದ ಸ್ತೋತ್ರವನ್ನು । **ಗೋತಮಃ**—ಗೋತಮಋಷಿಯು । **ಸಸ್ವರ್ಹ**—ಪಠಿಸಿದನೋ, । **ಏತತ್ ಯೋಜನಂ**-ಈ ಸೂಕ್ತರೂಪವಾದ ಸ್ತೋತ್ರವೂ ಸಹ । **ತ್ಯನ್ನ**—ಪ್ರಸಿದ್ಧವಾದ ಆ ಸ್ತೋತ್ರಸಮಾನವಾದುದೇ ಎಂದು । **ಅಚೇತಿ**-(ಎಲ್ಲರಿಂದಲೂ) ಅರಿಯಲ್ಪಟ್ಟಿದೆ. ।

ಭಾವಾರ್ಥ

ಎಲೈ ಮರುತ್ತುಗಳೇ, ಚಿನ್ನದ ಚಕ್ರವುಳ್ಳ ರಥದಲ್ಲಿ ಕುಳಿತಿರುವವರೂ, ಉಕ್ಕಿನ ಆಯುಧಗಳನ್ನು ಹಿಡಿದಿರುವವರೂ, ಎಲ್ಲಾ ಕಡೆಯಲ್ಲಿಯೂ ರಭಸದಿಂದ ಓಡಾಡುವವರೂ, ಮತ್ತು ಪ್ರಬಲರಾದ ಶತ್ರುಗಳನ್ನು ನಾಶಮಾಡು

ಸವರೂ ಆದ ನಿಮ್ಮನ್ನು ಚೆನ್ನಾಗಿ ಗಮನಿಸುತ್ತಾ ಗೋತಮಋಷಿಯು ಯಾವ ಸೂಕ್ತರೂಪವಾದ ನಿಮ್ಮನ್ನುದ್ದೇಶಿಸಿ ಸ್ತೋತ್ರವನ್ನು ಪಠಿಸಿದನೋ, ಈ ಸೂಕ್ತವೂ ಸಹ ಆ ಪ್ರಸಿದ್ಧವಾದ ಸ್ತೋತ್ರಸಮವಾದುದೇ ಎಂದು ಎಲ್ಲರಿಗೂ ಚೆನ್ನಾಗಿ ತಿಳಿಯಲಾಗಿದೆ.

## English Translation

Maruts, this hyman is known to be the same as that which Gotama recited, in your praise, when he beheld you seated in your chariots with golden wheels, armed with iron weapons, hurying hither and thither and destroying your mightiest foes.

॥ ವಿಶೇಷವಿಷಯಗಳು ॥

**ಏತತ್ ತ್ಯತ್ ನ**—ಇದು ಪ್ರಸಿದ್ಧವೂ ಉತ್ಕೃಷ್ಟವೂ ಆದ ಸ್ತೋತ್ರದಂತಿರುವುದು

**ಯೋಜನಂ—ಏತತ್ಸೂಕ್ತಸಾಧ್ಯಂ ಸ್ತೋತ್ರಂ** । ಈ ಸೂಕ್ತದಿಂದ ಮಾಡಲ್ಪಡುವ ಸ್ತೋತ್ರವು. ಸ್ಕಂದ ಸ್ವಾಮಿಯು ಯೋಜನಶಬ್ದಕ್ಕೆ—**ಯುಜ್ಯಂತೇ ಪ್ರಾಣವಿಯೋಗಾದಿನಾ ಅನೇನ ಶತ್ರವ ಇತಿ ಯೋಜನಂ ಸೇನಾಲಕ್ಷಣಂ ಬಲಮಿಹಾಭಿಪ್ರೇತಂ** । ಇವರಲ್ಲಿ ಶತ್ರುಗಳ ಸಂಹಾರವಾಗುವುದರಿಂದ ಯೋಜನಂ ಎಂದರೆ ಸೇನಾರೂಪವಾದ ಬಲವು ಎಂದು ವಿವರಿಸಿರುವರು.

**ಅಚೇತಿ—ಚಿತೀ ಸಂಜ್ಞಾನೇ । ಸರ್ವೈರ್ಜ್ಞಾಯತೇ** । ಸರ್ವರಿಂದಲೂ ತಿಳಿಯಲ್ಪಡುವುದು.

**ಸಸ್ವಃ—ಸ್ವೃ ಶಬ್ದೋಪತಾಪಯೋಃ** । ಉಚ್ಚರಿಸಿದನು.

**ಹಿರಣ್ಯಚಕ್ರಾನ್**—ಸುವರ್ಣಮಯವಾದ ರಥದಲ್ಲಿ ಕುಳಿತಿರುವ ಅಥವಾ ಹಿತವಾದ ಮತ್ತು ರಮಣೀಯ ವಾದ ಕಾರ್ಯಗಳನ್ನು ಮಾಡುವ.

**ಅಯೋದಂಷ್ಟ್ರಾನ್—ದಶತೀತಿ ದಂಷ್ಟ್ರಾ ಚಕ್ರಧಾರಾ । ಅಯೋಮಯೀಭಿಶ್ಚಕ್ರಧಾರಾಭಿರ್ಯುಕ್ತಾನ್ । ಯದ್ವಾ ದಂಶನಸಾಧನಾ ಆಯುಧಾನಿ ದಂಷ್ಟ್ರಾಃ ಅಯೋಮಯಾ ಆಯುಧಾನಿ ಯೇಷಾಂ** । ಕಬ್ಬಿಣದಿಂದ ಮಾಡಿದ ಚಕ್ರಗಳಿಂದ ಯುಕ್ತವಾದ ಅಥವಾ ಕಬ್ಬಿಣದಿಂದ ಮಾಡಲ್ಪಟ್ಟ ಆಯುಧಗಳಿಂದ ಕೂಡಿರುವ.

**ವಿಧಾವತಃ—ವಿವಿಧಮಿತಸ್ತತಃ ಪ್ರವರ್ತಮಾನಾನ್** । ಇಲ್ಲಿಂದಲ್ಲಿಗೆ ಬಹುಪ್ರಕಾರವಾಗಿ ಓಡಾಡುತ್ತಿರುವ.

**ವರಾಹೂನ್—ವರಸ್ಯೋತ್ಕೃಷ್ಟಸ್ಯ ಶತ್ರೋರ್ಹಂತ್ರೂನ್** । ಪ್ರಬಲರಾದ ಶತ್ರುಗಳನ್ನು ನಾಶ ಮಾಡುವ. ಅಥವಾ **ಉತ್ಕೃಷ್ಟಸ್ಯ ವೃಷ್ಟ್ಯುದಕಸ್ಯಾಹರ್ತ್ರೂನ್** । ಉತ್ತಮವಾದ ವೃಷ್ಟಿರೂಪದ ಜಲವನ್ನು ತಂದೊದಗಿಸುವ. ಅಥವಾ **ಉತ್ಕೃಷ್ಟಾನಾಂ ದೇವತಾನಾಮಾಹ್ವಾತ್ರೂನ್**—ಶ್ರೇಷ್ಠರಾದ ದೇವತೆಗಳನ್ನು ಯಜ್ಞ ಭೂಮಿಗೆ ಕರೆತರುವ. ಅಥವಾ **ವರಸ್ಯ ಹವಿಷೋ ಭಕ್ಷಯಿತ್ರೂನ್**—ಉತ್ತಮವಾದ ಹವಿಸ್ಸನ್ನು ಭಕ್ಷಿಸುವ ಮರುದ್ದೇವತೆಗಳನ್ನು ಎಂದರ್ಥವು. ಯಾಸ್ಕಮಹರ್ಷಿಗಳು—**ಅಥಾಪ್ಯೇತೇ ಮಾಧ್ಯಮಿಕಾ ದೇವಗಣಾ ವರಾಹವ**

**ಉಚ್ಯಂತೇ ಪಶ್ಯನ್ ಹಿರಣ್ಯಚಕ್ರಾನ್** (ನಿ.೫-೪) ಸ್ವರ್ಗಾಂತರಿಕ್ಷಭೂಮಿಯೆಂಬ ಮೂರು ಪ್ರದೇಶಗಳಲ್ಲಿ ಮಧ್ಯಮವಾದ ಅಂತರಿಕ್ಷಸ್ಥಾನೀಯರಾದ ದೇವತೆಗಳಿಗೆ ವರಾಹವಃ ಎಂದು ಹೇಳುವರು. ಮರುದ್ದೇವತೆಗಳು ಈ ಅಂತರಿಕ್ಷ ದೇವತೆಗಳ ಗುಂಪಿಗೆ ಸೇರಿದವರಾದುದರಿಂದ ಇವರನ್ನು ವರಾಹವಃ ಎಂಬ ಹೆಸರಿನಿಂದ ವ್ಯವಹರಿಸುವರು ಎಂದು ವರಾಹವಃ ಎಂಬ ಶಬ್ದಕ್ಕೆ ಮರುದ್ದೇವತೆಗಳೆಂಬ ಅರ್ಥವನ್ನು ಸ್ಪಷ್ಟಪಡಿಸಿರುವರು.

ವ್ಯಾಕರಣಪ್ರಕ್ರಿಯಾ

**ಅಚೇತಿ**—ಚಿತೀ ಸಂಜ್ಞಾನೇ ಧಾತು. ವರ್ತಮಾನಾರ್ಥತೋರುವಾಗ ಕರ್ಮಣಿಯಲ್ಲಿ **ಛಂದಸಿಲುಙ್ ಲುಙ್‌ಲಿಟಃ**—ಎಂಬುದರಿಂದ ಲುಙ್. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್‌ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಕರ್ಮಣಿಯಲ್ಲಿ ಚ್ಲಿಗೆ ಚಿಣ್. **ಪುಗಂತಲಘೂಪಧಸ್ಯ ಚ**—ಎಂಬುದರಿಂದ ಧಾತುವಿನ ಲಘೂಪಧೆಗೆ ಚಿಣ್ ನಿಮಿತ್ತವಾಗಿ ಗುಣ. **ಚಿಣೋಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನಪರದಲ್ಲಿರುವ ತಶಬ್ದಕ್ಕೆ ಲುಕ್. ಅಂಗಕ್ಕೆ ಲುಙ್‌ನಿಮಿತ್ತವಾಗಿ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಸ್ವಃ**—ಸ್ವೃ ಶಬ್ದೋಪತಾಪಯೋಃ ಧಾತು. ಲಙ್ ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ**—ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಬಹುಲಂ ಛಂದಸಿ**—ಎಂಬುದರಿಂದ ಶಬ್ವಿಕರಣಕ್ಕೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಉರತ್**—ಎಂಬುದರಿಂದ ಅತ್ವವು ರಪರವಾಗಿ ಬಂದಾಗ ಪುನಃ ಹಲಾದಿಶೇಷ. ಸಸ್ವೃ+ತ್ ಎಂದಿರುವಾಗ ತಿಪ್ ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ ರಪರವಾಗಿ ಬರುತ್ತದೆ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ತಿಪಿಗೆ ಲೋಪ. ಅಂತ್ಯರೇಫಕ್ಕೆ ವಿಸರ್ಗ. **ಅತಿಙಃ**—ಎಂದು ಪರ್ಯುದಾಸಮಾಡಿರುವುದರಿಂದ ಇಲ್ಲಿ ಹಿಂದೆ ತಿಙಂತವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರದಿಂದ ಅಂತೋದಾತ್ತವಾಗುತ್ತದೆ.

**ಪಶ್ಯನ್**—ದೃಶಿರ್ ಪ್ರೇಕ್ಷಣೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಿತ್ತಾದುದರಿಂದ ಇದು ಪರವಾದಾಗ **ಪಾಘ್ರಾಧ್ಮಾಸ್ಥಾ**—ಎಂಬುದರಿಂದ ಪಶ್ಯ ಆದೇಶ. ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ವಿ ಧಾವತಃ**—ಧಾವು ಗತಿಶುದ್ಧ್ಯೋಃ ಧಾತು. ಶತೃಪ್ರತ್ಯಯ. ಹಿಂದಿನಂತೆಯೇ ಧಾತುಸ್ವರ ಉಳಿಯುತ್ತದೆ. ದ್ವಿತೀಯಾಬಹುವಚನಾಂತರೂಪ.

**ವರಾಹೂನ್**—ಹನ ಹಿಂಸಾಗತ್ಯೋಃ ಅಥವಾ ಹೃಙ್‌ಹರಣೇ ಧಾತು. ಆಙ್ ಉಪಸರ್ಗಪೂರ್ವವಾದ ಇದಕ್ಕೆ ವರಶಬ್ದ ಉಪಪದವಾಗಿರುವಾಗ ಹು ಎಂಬ ರೂಪಸಿದ್ಧಿಯಾಗುತ್ತದೆ. ಅಥವಾ ಹ್ವೇಞ್ ಸ್ಪರ್ಧಾಯಾಂ, ಅಥವಾ ಹು ದಾನಾದನಯೋಃ ಈ ಧಾತುಗಳಿಂದ ಹು ಎಂಬ ರೂಪಸಿದ್ಧಿಯಾಗುತ್ತದೆ. ಹುಧಾತುವಿನಿಂದ ಎಂದು ಹೇಳುವುದಾದರೆ ಆಗ ಅದನಾರ್ಥವನ್ನು ಮಾತ್ರ ಹೇಳಬೇಕು. ಇಷ್ಟು ಧಾತುಗಳಿಂದಲೂ ಪೃಷೋದರಾದಿತ್ವ ಕಲ್ಪನೆಯಿಂದಲೇ ರೂಪಸಿದ್ಧಿಯಾಗುತ್ತದೆ. ದ್ವಿತೀಯಾಬಹುವಚನಾಂತರೂಪ. ‖ ೫ ‖

॥ ಸಂಹಿತಾಪಾಠಃ ॥

ಏಷಾ ಸ್ಯಾ ವೋ ಮರುತೋಽನುಭರ್ತ್ರೀ ಪ್ರತಿ ಷ್ಟೋಭತಿ ವಾಘತೋ ನ ವಾಣೀ ।
ಅಸ್ತೋಭಯದ್ವೃಥಾಸಾಮನು ಸ್ವಧಾಂ ಗಭಸ್ತ್ಯೋಃ ॥ ೬ ॥

॥ ಪದಪಾಠಃ ॥

ಏಷಾ । ಸ್ಯಾ । ವಃ । ಮರುತಃ । ಅನುಽಭರ್ತ್ರೀ । ಪ್ರತಿ । ಸ್ತೋಭತಿ । ವಾಘತಃ । ನ । ವಾಣೀ ।
ಅಸ್ತೋಭಯತ್ । ವೃಥಾ । ಆಸಾಂ । ಅನು । ಸ್ವಧಾಂ । ಗಭಸ್ತ್ಯೋಃ ॥ ೬ ॥

ಸಾಯಣಭಾಷ್ಯಂ

ಹೇ ಮರುತಃ ಸ್ಯಾ ಸೈಷಾಸ್ಮದೀಯಾ ಸ್ತುತಿರ್ವೋ ಯುಷ್ಮಾಕಮನುಭರ್ತ್ರೀ ಯುಷ್ಮಾನನು-ಹರಂತೀ ಯುಷ್ಮದ್ಗಣಸದೃಶೀ ಪ್ರತಿ ಷ್ಟೋಭತಿ । ಪ್ರತ್ಯೇಕಂ ಸ್ತೌತಿ । ಸ್ತೋಭತಿಃ ಸ್ತುತಿಕರ್ಮಾ । ತಥಾ ವಾಘತೋ ನ ವಾಣೀ । ನಶಬ್ದಃ ಸಂಪ್ರತ್ಯರ್ಥೇ । ತದುಕ್ತಂ ಯಾಸ್ಕೇನ । ಅಸ್ತ್ಯುಪಮಾರ್ಥಸ್ಯ ಸಂಪ್ರತ್ಯರ್ಥೇ ಪ್ರಯೋಗಃ । ನಿ. ೭-೩೧ । ಇತಿ । ಇದಾನೀಮೃತ್ವಿಕ್ಸಂಬಂಧಿನೀ ವಾಗಪಿ ವೃಥಾನಾಯಾಸೇನಾ-ಸಾಮಾಭಿರ್ಋಗ್ಭಿರಸ್ತೋಭಯತ್ । ಅಸ್ತೌತ್ । ಇದಾನೀಮಿತ್ಯುಕ್ತೇ ಕದೇತ್ಯಾಹ । ಗಭಸ್ತ್ಯೋರಸ್ಮದೀ-ಯಯೋರ್ಬಾಹ್ವೋಃ ಸ್ವಧಾಂ । ಅನ್ನನಾಮೈತತ್ । ಯದಾ ಬಹುವಿಧಮನ್ನಂ ಮರುತಃ ಸ್ಥಾಪಯಂತಿ । ತಾಮನುಲಕ್ಷ್ಯೇತ್ಯರ್ಥಃ ॥ ಅನುಭರ್ತ್ರೀ । ಹೃಞ್ ಹರಣೇ । ತೃಚ್ । ಋನ್ನೇಭ್ಯ ಇತಿ ಙೀಪ್ । ಉದಾತ್ತಯಣೋ ಹಲ್ಪೂರ್ವಾದಿತಿ ನದ್ಯಾ ಉದಾತ್ತತ್ವಂ ॥

॥ ಪ್ರತಿಪದಾರ್ಥ ॥

ಮರುತಃ—ಎಲೈ ಮರುತ್ತುಗಳೇ. । ಸ್ಯಾ ಏಷಾ— ಆ ನಮ್ಮ ಸ್ತುತಿಯು । ವಃ—ನಿಮ್ಮನ್ನು । ಅನುಭರ್ತ್ರೀ—ಮಹಿಮೆಗನುಗುಣವಾಗಿ । ಪ್ರತಿ ಷ್ಟೋಭತಿ—ಹೊಗಳುತ್ತದೆ. । ಗಭಸ್ತ್ಯೋಃ—ನಮ್ಮ ಕೈಗಳಲ್ಲಿ । ಸ್ವಧಾಂ—(ನಾನಾವಿಧವಾದ) ಅನ್ನವನ್ನು (ಮರುತ್ತುಗಳು ಅನುಗ್ರಹಿಸುವುದರಿಂದ) । ನ—ಈಗ । ವಾಘತಃ-ವಾಣೀ—ಋತ್ವಿಕ್ಕಿನಿಂದ ಪಠಿತವಾದ ವಾಕ್ಕು. । ವೃಥಾ—ಶ್ರಮವಿಲ್ಲದೇ । ಆಸಾಂ—ಆ ಋಕ್ಕುಗಳೊಂದಿಗೆ । ಅಸ್ತೋಭಯತ್—ಸ್ತೋತ್ರಮಾಡಿತು. ।

### ಭಾವಾರ್ಥ

ಎಲೈ ಮರುತ್ತುಗಳೇ, ನಮ್ಮ ಸ್ತುತಿಯು ನಿಮ್ಮ ಮಹಿಮೆಗನುಗುಣವಾಗಿ ವ್ಯಾಪಿಸಿ ನಿಮ್ಮಲ್ಲಿ ಒಬ್ಬೊಬ್ಬರನ್ನೂ ಪ್ರತ್ಯೇಕವಾಗಿ ಹೊಗಳುತ್ತದೆ. ಮರುತ್ತುಗಳು ನಮ್ಮೆರಡುಕೈಗಳಲ್ಲೂ ನಾನಾವಿಧವಾದ ಅನ್ನವನ್ನು ಅನುಗ್ರಹಿಸುವುದರಿಂದ ಈಗ ಋತ್ವಿಕ್ಕಿನಿಂದ ಪಠಿತವಾದ ವಾಕ್ಕು ಆ ಋಕ್ಕುಗಳೊಂದಿಗೆ ಶ್ರಮವಿಲ್ಲದೇ ಸ್ತೋತ್ರ ಮಾಡಿತು.

### English Translation

O Maruts, this is that praise which suited to your merits glorifies every one of you. The speech of the priest has now glorified you, without difficulty, with sacred verses since you have placed food in our hands.

### ವಿಶೇಷವಿಷಯಗಳು

**ಸ್ಯಾ—ಸೈಷಾ ।** ಅ, ಅದೇ.

**ಅನುಭರ್ತ್ರೀ—ಹೃಞ್ ಹರಣೇ । ಯುಷ್ಮಾನನುಹರಂತೀ, ಯುಷ್ಮದ್ಗುಣಸದೃಶೀ ।** ನಿಮ್ಮನ್ನು ಅನುಸರಿಸುತ್ತಾ ಎಂದರೆ ನಿಮ್ಮ ಮಹಿಮೆಗೆ ಅನುಗುಣವಾಗಿ, ನಿಮ್ಮ ಮಹಿಮೆಗೆ ತಕ್ಕಂತೆ.

**ಷ್ಟೋಭತಿ (ಸ್ತೋಭತಿ)**— ಅರ್ಚತಿ, ಗಾಯತಿ ಮೊದಲಾದ ನಲವತ್ತನಾಲ್ಕು ಅರ್ಚತಿಕರ್ಮಗಳ ಮಧ್ಯದಲ್ಲಿ ಸ್ತೋಭತಿಶಬ್ದವು ಪಠಿತವಾಗಿರುವುದರಿಂದ ಸ್ತೋಭತಿ ಎಂದರೆ ಸ್ತುತಿಸುವುದು ಎಂದರ್ಥವು. (ನಿ. ೩-೧೪)

**ವಾಘತಃ—ಭಾರತಾಃ ಕರವಃ** ಮೊದಲಾದ ಎಂಟು ಋತ್ವಿಙ್ನಾಮಗಳ ಮಧ್ಯದಲ್ಲಿ ವಾಘತಃ ಎಂಬ ಶಬ್ದವು ಪಠಿತವಾಗಿರುವುದರಿಂದ ವಾಘತಃ ಎಂದರೆ ಋತ್ವಿಕ್ಕುಗಳು. ಇಲ್ಲಿ ವಾಘತಃ ವಾಣೀ ಎಂದರೆ ಋತ್ವಿಕ್ಕುಗಳು ಪಠಿಸುವ ಸ್ತೋತ್ರರೂಪವಾದ ವಾಕ್ಯವು ಎಂದರ್ಥ.

**ನ**—ಈ ಶಬ್ದಕ್ಕೆ ಯಾಸ್ಕರು—**ಅಸ್ತ್ಯುಪಮಾರ್ಥಸ್ಯ ಸಂಪ್ರತ್ಯರ್ಥೇ ಪ್ರಯೋಗಃ** (ನಿ. ೭-೩೧) ನಶಬ್ದಕ್ಕೆ ಉಪಮಾರ್ಥವೂ ಸಂಪ್ರತ್ಯರ್ಥವೂ (ಈಗ ಎಂಬ) ಇರುವುದೆಂದೂ ಹೇಳಿರುವ ಪ್ರಕಾರ ಭಾಷ್ಯಕಾರರು ಇಲ್ಲಿ ಸಂಪ್ರತ್ಯರ್ಥವನ್ನೇ ಹೇಳಿರುವರು. ಸ್ಕಂದಸ್ವಾಮಿಯು ಉಪಮಾರ್ಥವನ್ನು ಹೇಳಿರುವರು

**ವೃಥಾ**—ಅನಾಯಾಸವಾಗಿ, ಶ್ರಮವಿಲ್ಲದೆ.

**ಸ್ವಧಾಂ**—ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಸ್ವಧಾಶಬ್ದವು ಪಠಿತವಾಗಿರುವುದರಿಂದ ಸ್ವಧಾಂ ಎಂದರೆ ಅನ್ನವನ್ನು ಅಥವಾ ಹವಿಸ್ಸಿನರೂಪದಲ್ಲಿರುವ ಅನ್ನವನ್ನು ಎಂದರ್ಥವು.

**ಗಭಸ್ತ್ಯೋಃ**—ಆಯತೀ, ಚ್ಯವಾನಾ ಮೊದಲಾದ ಬಾಹುನಾಮಗಳ ಮಧ್ಯದಲ್ಲಿ ಗಭಸ್ತಿಶಬ್ದವು ಪಠಿತವಾಗಿರುವುದರಿಂದ ಗಭಸ್ತ್ಯೋಃ ಎಂದರೆ ಬಾಹುಗಳಲ್ಲಿ ಅಥವಾ ಕೈಗಳಲ್ಲಿ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸ್ಯಾ**—ತ್ಯದ್ ಶಬ್ದ. ಇದಕ್ಕೆ ಪ್ರಥಮಾ ಸುಪರವಾದಾಗ **ತ್ಯದಾದೀನಾಮಃ**—ಎಂಬುದರಿಂದ ಅತ್ವ. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್**—ಎಂಬುದರಿಂದ ಅದಂತವಾದುದರಿಂದ ಟಾಪ್. ತ್ಯಾ ಎಂದಿರುವಾಗ **ತದೋಃ ಸಃ ಸಾವನಂತ್ಯಯೋಃ** (ಪಾ. ಸೂ. ೭-೨-೧೦೬) ಎಂಬುದರಿಂದ ತಕಾರಕ್ಕೆ ಸಕಾರಾದೇಶ. **ಹಲ್ಙ್ಯಾಭ್ಯೋ**— ಸೂತ್ರದಿಂದ ಸುಲೋಪ. ಸ್ಯಾ ಎಂದು ರೂಪವಾಗುತ್ತದೆ.

**ಅನುಭರ್ತ್ರೀ**- ಭೃಞ್ ಭರಣೇ ಧಾತು. ತೃಚ್‌ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ಭರ್ತೃಶಬ್ದವಾಗುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಋನ್ನೇಭ್ಯೋ ಙೀಪ್** (ಪಾ. ಸೂ. ೪-೧-೫) ಎಂಬುದರಿಂದ ನಾಂತವಾದುದರಿಂದ ಙೀಪ್. ಯಣಾದೇಶ. ತೃಜಂತವಾದುದು **ಚಿತಃ** ಎಂಬುದರಿಂದ ಅಂತೋದಾತ್ತವಾದುದರಿಂದ ಉದಾತ್ತಸ್ಥಾನದಲ್ಲಿ ಯಣ್ ಬಂದಿರುವುದರಿಂದ, **ಉದಾತ್ತಯಣೋ ಹಲ್‌ಪೂರ್ವಾತ್** (ಪಾ. ಸೂ-೬-೧-೧೭೪) ಎಂಬುದರಿಂದ, ಯಣಿನ ಪೂರ್ವದಲ್ಲಿ ಹಲ್‌ವರ್ಣ (ತಕಾರ) ವಿರುವುದರಿಂದ ನದೀ ಸಂಜ್ಞೆಯುಳ್ಳ ಈಕಾರಕ್ಕೆ ಉದಾತ್ತಸ್ವರ ಬರುತ್ತದೆ.

**ಸ್ತೋಭತಿ**—ಷ್ಟುಭು ಸ್ತಂಭೇ ಧಾತು. ಇಲ್ಲಿ ಸ್ತೋತ್ರಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್‌ಪ್ರಥಮ ಪುರುಷಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅಸ್ತೋಭಯತ್**—ಸ್ವಾರ್ಥದಲ್ಲಿ ಣಿಚ್. ಣಿಜಂತದಮೇಲೆ ಲಙ್‌ಪ್ರಥಮಪುರುಷಏಕವಚನರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತ ಬರುತ್ತದೆ. ॥ ೬ ॥



# ಎಂಭತ್ತೊಂಭತ್ತನೆಯ ಸೂಕ್ತವು

ಆ ನೋ ಭದ್ರಾ ಇತಿ ದಶರ್ಚಂ ಪಂಚಮಂ ಸೂಕ್ತಂ। ಗೋತಮಸ್ಯಾರ್ಷಂ ವೈಶ್ವದೇವಂ। ಅದಿತಿಃ ಪಂಚರ್ಚಃ ಸಪ್ತಮೀ ಚ ಜಗತ್ಯಃ ಷಷ್ಠೀ ಸ್ವಸ್ತಿನ ಇಂದ್ರೇತ್ಯೇಷಾ ವಿರಾಟ್‌ಸ್ಥಾನಾ। ನವಕಾ ವೈರಾಜಸ್ತ್ರೈಷ್ಟುಭಶ್ಚ। ಅನು ೯-೫। ಇತ್ಯುಕ್ತಲಕ್ಷಣಯೋಗಾತ್। ಅಷ್ಟಮ್ಯಾದ್ಯಾಸ್ತಿಸ್ರಸ್ತ್ರಿಷ್ಟುಭಃ। ತಥಾ ಚಾನುಕ್ರಾಂತಂ। ಆ ನೋ ದಶ ವೈಶ್ವದೇವಂ ತು ಪಂಚಾದ್ಯಾಃ ಸಪ್ತಮೀ ಚ ಜಗತ್ಯಃ ಷಷ್ಠೀ ವಿರಾಟ್‌ಸ್ಥಾನೇತಿ। ಅಗ್ನಿಷ್ಟೋಮೇ ವೈಶ್ವದೇವಶಸ್ತ್ರ ಉತ್ತಮಾವರ್ಜಮೇತತ್ಸೂಕ್ತಂ ವೈಶ್ವದೇವನಿವಿದ್ಧಾನೀಯಂ। ಸಾ ತು ಪ್ರಕೃತೌ ವಿಕೃತೌ ಚ ವೈಶ್ವದೇವಶಸ್ತ್ರಸ್ಯ ಪರಿಧಾನೀಯಾ। ತಥಾ ಚ ಸೂತ್ರಿತಂ। ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತ ಇತಿ ನವ ವೈಶ್ವದೇವಂ। ಆ. ೫-೧೮। ಇತಿ। ಅದಿತಿರ್ದ್ಯೌರ-

**ದಿತಿರಂತರಿಕ್ಷಮಿತಿ ಪರಿದಧ್ಯಾತ್ಸರ್ವತ್ರ ವೈಶ್ವದೇವೇ । ಆ. ೫-೧೮ । ಇತಿ ಚ । ಬ್ರಾಹ್ಮಣಂ ಚ ಭವತಿ । ಸದೈವ ಪಂಚಜನೀಯಯಾ ಪರಿದಧ್ಯಾತ್ । ಐ. ಬ್ರಾ. ೩-೩೧ । ಇತಿ ॥ ಮಹಾವ್ರತೇ ನಿಷ್ಕೇವಲ್ಯ ಏತತ್ಸೂಕ್ತಂ । ತಥಾ ಚ ಪಂಚಮಾರಣ್ಯಕೇ ಸೂತ್ರ್ಯತೇ। ಆನೋಭದ್ರೀಯಂ ಚ ತಸ್ಯ ಸ್ಥಾನೇ । ಐ. ಬ್ರಾ. ೫-೩-೨ । ಇತಿ ॥**

ಅನುವಾದವು— **ಆ ನೋ ಭದ್ರಾ** ಎಂಬ ಈ ಸೂಕ್ತವು ಹದಿನಾಲ್ಕನೆಯ ಅನುವಾಕದಲ್ಲಿ ಐದನೆಯಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೋತಮನು ಋಷಿಯು. ವಿಶ್ವೇದೇವತೆಗಳು ದೇವತೆಗಳು. ಮೊದಲಿನ ಐದು ಋಕ್ಕುಗಳೂ, ಏಳನೆಯ ಋಕ್ಕೂ ಜಗತೀಛಂದಸ್ಸಿನವು. **ಸ್ವಸ್ತಿನ ಇಂದ್ರ** ಎಂಬ ಆರನೆಯ ಋಕ್ಕು ವಿರಾಟ್‌ಸ್ಥಾನಾ ಎಂಬ ಛಂದಸ್ಸಿನದು. ಎಂಟರಿಂದ ಹತ್ತನೆಯ ಋಕ್ಕಿನವರೆಗಿನ ಮೂರು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ— **ಆ ನೋ ದಶ ವೈಶ್ವದೇವಂ ತು ಪಂಚಾದ್ಯಾಃ ಸಪ್ತಮೀ ಚ ಜಗತ್ಯಃ ಷಷ್ಠೀ ವಿರಾಟ್‌ಸ್ಥಾನೇತಿ** ಎಂದು ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ವೈಶ್ವದೇವಶಸ್ತ್ರಮಂತ್ರವನ್ನು ಪಠಿಸುವಾಗ ಈ ಸೂಕ್ತದ ಕೊನೆಯ ಒಂದು ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳನ್ನು ವೈಶ್ವದೇವನಿವಿದ್ಧಾನೀಯಮಂತ್ರವನ್ನಾಗಿ ಪಠಿಸಬೇಕೆಂದೂ ಮತ್ತು ಪ್ರಕೃತಿವಿಕೃತಿ ರೂಪಗಳಾದ ಯಾಗಗಳಲ್ಲಿಯೂ ವೈಶ್ವದೇವ ಶಸ್ತ್ರಪರಿಧಾನೀಯಾ ಎಂಬ ಮಂತ್ರಗಳಿಗಾಗಿ ಉಪಯೋಗಿಸಬೇಕೆಂದೂ ಆಶ್ವಲಾಯನಶ್ರೌತಸೂತ್ರದ **ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತ ಇತಿ ನವ ವೈಶ್ವದೇವಂ** ಎಂಬ ಸೂತ್ರದಿಂದಲೂ(ಆ. ೫-೧೮) **ಅದಿತಿರ್ದ್ಯೌರದಿತಿರಂತರಿಕ್ಷಮಿತಿ ಪರಿದಧ್ಯಾತ್ಸರ್ವತ್ರ ವೈಶ್ವದೇವೇ** ಎಂಬ ಸೂತ್ರದಿಂದಲೂ (ಆ. ೫-೧೮) ವಿವೃತವಾಗಿರುವುದು. ಈ ವಿಷಯದಲ್ಲಿ **ಸದೈವ ಪಂಚಜನೀಯಾ ಪರಿದಧ್ಯಾತ್** ಎಂಬ ಐತರೇಯಬ್ರಾಹ್ಮಣವಚನವಿರುವುದು. (ಐ. ಬ್ರಾ. ೩-೩೧) ಮತ್ತು ಮಹಾವ್ರತದಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಪಠನದಲ್ಲಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಬ್ರಾಹ್ಮಣದ ಪಂಚಮಾರಣ್ಯಕದಲ್ಲಿ— **ಆ ನೋ ಭದ್ರೀಯಂ ಚ ತಸ್ಯ ಸ್ಥಾನೇ** ಎಂಬ ವಾಕ್ಯವು (ಐ. ಬ್ರಾ. ೫-೩-೨) ನಿರ್ದೇಶಿಸುವುದು.



॥ ಓಂ ॥

## ಸೂಕ್ತ—೮೯

॥ ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೮೯ ॥

॥ ಅಷ್ಟಕ— ೧ ॥ ಅಧ್ಯಾಯ— ೬ ॥ ವರ್ಗ— ೧೫, ೧೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೦ ॥

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ವಿಶ್ವೇದೇವಾಃ ॥

॥ ಛಂದಃ— ೧-೫, ೭ ಜಗತೀ । ೬ ವಿರಾಟಸ್ಥಾನಾ । ೮-೧೦ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತೋಽದಬ್ಧಾ-
ಸೋ ಅಪರೀತಾಸ ಉದ್ಭಿದಃ ।
ದೇವಾ ನೋ ಯಥಾ ಸದಮಿದ್ವೃಧೇ ಅಸನ್ನಪ್ರಾಯುವೋ
ರಕ್ಷಿತಾರೋ ದಿವೇದಿವೇ ॥ ೧ ॥

॥ ಪದಪಾಠಃ ॥

ಆ । ನಃ । ಭದ್ರಾಃ । ಕ್ರತವಃ । ಯಂತು । ವಿಶ್ವತಃ । ಅದಬ್ಧಾಸಃ । ಅಪರಿಽಇ-
ತಾಸಃ । ಉತ್ಽಭಿದಃ ।
ದೇವಾಃ । ನಃ । ಯಥಾ । ಸದಂ । ಇತ್ । ವೃಧೇ । ಅಸನ್ । ಅಪ್ರಽಆಯುವಃ ।
ರಕ್ಷಿತಾರಃ । ದಿವೇಽದಿವೇ ॥ ೧ ॥

ಸಾಯಣಭಾಷ್ಯಂ

ನೋಽಸ್ಮಾನ್ ಕ್ರತವೋಽಗ್ನಿಷ್ಟೋಮಾದಯೋ ಮಹಾಯಜ್ಞಾ ವಿಶ್ವತಃ ಸರ್ವಸ್ಮಾದಪಿ ದಿಗ್ಭಾಗಾದಾ ಯಂತು । ಆಗಚ್ಛಂತು । ಕೀದೃಶಾಃ ಕ್ರತವಃ । ಭದ್ರಾಃ ಸಮೀಚೀನಫಲಸಾಧನತ್ವೇನ ಕಲ್ಯಾಣಾ ಭಜನೀಯಾ ವಾ ಅದಬ್ಧಾಸೋಽಸುರೈರಹಿಂಸಿತಾಃ ಅಪರೀತಾಸಃ ಶತ್ರುಭಿರಪರಿಗತಾಃ । ಅಪ್ರತಿರುದ್ಧಾ ಇತ್ಯರ್ಥಃ । ಉದ್ಭಿದಃ ಶತ್ರೂಣಾಮುದ್ಭೇತ್ತಾರಃ । ಈದೃಶಾಃ ಕ್ರತವೋಽಸ್ಮಾಂಸ್ತಥಾ-ಗಚ್ಛಂತು । ಅಪ್ರಾಯುವೋಽಪ್ರಗಚ್ಛಂತಃ ಸ್ವಕೀಯಂ ರಕ್ಷಿತವ್ಯಮಪರಿತ್ಯಜಂತಃ ಅತ ಏವ ದಿವೇ ದಿವೇ ಪ್ರತಿದಿವಸಂ ರಕ್ಷಿತಾರೋ ರಕ್ಷಾಂ ಕುರ್ವಂತ ಏವಂಗುಣವಿಶಿಷ್ಟಾಃ ಸರ್ವೇ ದೇವಾ ನೋಽಸ್ಮಾಕಂ ಸದಮಿತ್ ಸದೈವ ವೃಧೇ ವರ್ಧನಾಯಾಸನ್ । ಭವಂತು ॥ ಅದಬ್ಧಾಸಃ ದಭ್ನು ದಂಭೇ । ದಂಭೋ ಹಿಂಸಾ । ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿ-ಸ್ವರತ್ವಂ । ಅಪರೀತಾಸಃ । ಇಣ್ ಗತೌ । ಪೂರ್ವವತ್ಕರ್ಮಣಿ ನಿಷ್ಠಾ । ಉಭಯತ್ರಾಜ್ಜಸೇರಸುಕ್ ।

**ವೃಧೇ । ವೃಧು ವೃದ್ಧೌ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಅಸನ್ । ಅಸ ಭುವಿ । ಲೇಟ್ಯಡಾಗಮಃ ಬಹುಲಂ ಛಂದಸೀತಿ ಶಪೋ ಲುಗಭಾವಃ । ತಸ್ಯಾಜಾತ್ವಾತ್ ಶ್ನಸೋರಲ್ಲೋಪ ಇತ್ಯಕಾರಲೋಪಾಭಾವಃ । ಅಪ್ರಾಯುವಃ । ಇಣ್ ಗತೌ । ಅಸ್ಮಾತ್ಪ್ರೂರ್ವಾಚ್ಛಂದಸೀಣ ಇತ್ಯುಣ್ಪ್ರತ್ಯಯಃ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಜಸಿ ಜಸಾದಿಷು ಚ್ಛಂದಸಿ ವಾವಚನಮಿತಿ ಗುಣಸ್ಯ ವಿಕಲ್ಪಿತತ್ವಾದಭಾವೇ ತೆನ್ವಾದಿತ್ವಾದುವಙ್ ॥**

॥ ಪ್ರತಿಪದಾರ್ಥ ॥

**ಯಥಾ**—ಯಾವರೀತಿಯಿಂದ । **ಅಪ್ರಾಯುವಃ**—(ಕಾಪಾಡಬೇಕಾದ ಭಕ್ತರನ್ನು) ತ್ಯಜಿಸದಿರುವವರೂ । **ದಿವೇದಿವೇ**—ಪ್ರತಿದಿನವೂ । **ರಕ್ಷಿತಾರಃ**— (ಯಜ್ಞಕರ್ತರನ್ನು) ರಕ್ಷಿಸುವವರೂ ಆದ । **ದೇವಾಃ**—(ಸಕಲ) ದೇವತೆಗಳೂ । **ನಃ**—ನಮಗೆ । **ಸದಮಿತ್**—ಯಾವಾಗಲೂ । **ವೃಧೇ**—ಅಭಿವೃದ್ಧಿಗೆ ಕಾರಣರಾಗಿ । **ಅಸನ್**—ಆಗುವರೋ । **ತಥಾ**—ಆ ರೀತಿಯಾಗಿ । **ಭದ್ರಾಃ**—ಮಂಗಳಕರವಾದವೂ ಅಥವಾ ಪೂಜ್ಯವಾದವೂ । **ಅದಬ್ಧಾಸಃ**—(ಶತ್ರುಗಳಿಂದ) ಹಿಂಸಿಸಲ್ಪಡದಿರುವುವೂ । **ಅಪರೀತಾಸಃ**— (ಶತ್ರುಗಳಿಂದ) ತಡೆಯಲ್ಪಡದಿರುವುವೂ । **ಉದ್ಭಿದಃ**—ಶತ್ರುನಾಶಕಗಳೂ ಆದ । **ಕ್ರತವಃ**— (ಅಗ್ನಿಷ್ಟೋಮಾದಿ) ಮಹಾಯಜ್ಞಗಳು । **ನಃ**—ನಮ್ಮನ್ನು ಉದ್ದೇಶಿಸಿ । **ವಿಶ್ವತಃ**—ಸಕಲದಿಕ್ಕುಗಳಿಂದಲೂ । **ಆ ಯಂತು**—ಬರಲಿ ॥

॥ ಭಾವಾರ್ಥ ॥

ಭಕ್ತರಾದ ಯಜ್ಞಕರ್ತರನ್ನು ತ್ಯಜಿಸದೇ ಪ್ರತಿದಿನವೂ ಅವರನ್ನು ರಕ್ಷಿಸುವ ದೇವತೆಗಳು ಯಾವರೀತಿ ಯಾವಾಗಲೂ ತಮ್ಮ ಅಭಿವೃದ್ಧಿಗೆ ಕಾರಣರಾಗಿ ಆಗುವರೋ ಆ ರೀತಿಯಲ್ಲಿ ಮಂಗಳಕರವಾದವೂ, ಶತ್ರುಗಳಿಂದ ಹಿಂಸಿಸಲ್ಪಡದಿರುವುವೂ, ಶತ್ರುಗಳಿಂದ ತಡೆಯಲ್ಪಡದಿರುವುವೂ ಮತ್ತು ಶತ್ರುನಾಶಕಗಳೂ ಆದ ಅಗ್ನಿಷ್ಟೋಮಾದಿ ಮಹಾಯಜ್ಞಗಳು ನಮ್ಮನ್ನು ಉದ್ದೇಶಿಸಿ ಸಕಲದಿಕ್ಕುಗಳಿಂದಲೂ ಬರಲಿ.

English Translation

May auspicious work (or excellent wisdom) unmolested, unimpeded, and unconquered come to us from every quarter ; may the gods not turning away from us but granting us protection day by day be, ever with us for our advancement.

ವಿಶೇಷವಿಷಯಗಳು

ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ವಿಶ್ವೇದೇವತೆಗಳೇ ದೇವತೆಗಳು. ಕೆಲವರು ವಿಶ್ವೇದೇವತೆಗಳೆಂದರೆ ಪ್ರತ್ಯೇಕವಾದ ಒಂದು ದೇವತೆಗಳ ಸಂಗಡವೆಂದು ಹೇಳುವರು ಮತ್ತೆ ಕೆಲವರು ವಿಶ್ವೇದೇವತೆಗಳೆಂದರೆ ಎಲ್ಲಾ ದೇವತೆಗಳು ಎಂದು ಹೇಳುವರು. ಯಾಸ್ಕರು ವಿಶ್ವೇ ದೇವಾಃ ಸರ್ವೇ ದೇವಾಃ (ನಿ. ೧೨-೪೯) ಎಂದು ಹೇಳಿರುವರು. ಈ ವಿಷಯದಲ್ಲಿ ನಾವು (ಋ. ಸಂ. ಭಾಗ ೨ ಪೇಜು 49-50)ರಲ್ಲಿ ಬರೆದಿರುವುದನ್ನು ನೋಡಿ. ಈ ಸೂಕ್ತವನ್ನು ಶಾಂತಿ ಮಂತ್ರಪಠನಕ್ಕಾಗಿ ಉಪಯೋಗಿರುವರು.

ಋಗ್ವೇದದಲ್ಲಿ ವಿಶ್ವೇದೇವತೆಗಳ ಪರವಾದ ಋಕ್ಕುಗಳು ಅಲ್ಲಲ್ಲಿ ಬರುವುದಲ್ಲದೆ ವಿಶ್ವೇದೇವತಾಕವಾದ ಪ್ರತ್ಯೇಕ ಸೂಕ್ತಗಳೇ ೫೮ ಇರುವವು—ಋ. ಸಂ. ಪ್ರಥಮಮಂಡಲದಲ್ಲಿ ೧೪, ೮೯, ೯೦, ೧೦೫, ೧೦೬, ೧೦೭, ೧೨೧, ೧೨೨ನೇ ಸೂಕ್ತಗಳು ; ಎರಡನೆಯ ಮಂಡಲದಲ್ಲಿ-೨೯, ೩೧ನೆಯ ಸೂಕ್ತಗಳು ; ಮೂರನೆಯ ಮಂಡಲದಲ್ಲಿ-೫೪ನೆಯ ಸೂಕ್ತವು ; ನಾಲ್ಕನೆಯ ಮಂಡಲದಲ್ಲಿ—೫೫ನೆಯ ಸೂಕ್ತವು ; ಐದನೆಯ ಮಂಡಲದಲ್ಲಿ—೪೧, ೪೨, ೪೩, ೪೪, ೪೫, ೪೬, ೪೮, ೪೯, ೫೦, ೫೧; ಆರನೆಯ ಮಂಡಲದಲ್ಲಿ-೪೯, ೫೦, ೫೧, ೫೨; ಏಳನೆಯ ಮಂಡಲದಲ್ಲಿ-೩೫, ೩೬, ೩೭, ೩೯, ೪೦, ೪೨, ೪೩ ; ಎಂಟನೆಯ ಮಂಡಲದಲ್ಲಿ-೨೭, ೨೮, ೨೯, ೩೦, ೫೮, ೮೩ ; ಹತ್ತನೆಯ ಮಂಡಲದಲ್ಲಿ-೩೧, ೩೨, ೩೫, ೩೬, ೬೪, ೬೫, ೬೬, ೯೨, ೯೩, ೧೦೦, ೧೦೧, ೧೦೯, ೧೧೪, ೧೨೬, ೧೨೮, ೧೩೭, ೧೪೧, ೧೫೭, ೧೮೧ ಎಂಬ ಸೂಕ್ತಗಳು ವಿಶ್ವೇದೇವತಾಕವು.

**ಅದಬ್ಧಾಸಃ—ದನ್ಭು ದಂಭೇ । ದಂಭೋ ಹಿಂಸಾ । ಅದಬ್ಧಾಸೋಽಸುರೈರಹಿಂಸಿತಾಃ ।** ಅಸುರರಿಂದ ಹಿಂಸಿಸಲ್ಪಡದಿರುವ ಅಸುರರು ವಿಘ್ನವನ್ನುಂಟುಮಾಡದಿರುವ.

**ಅಪರೀತಾಸಃ—ಇಣ್ ಗತೌ । ಶತ್ರುಭಿರಪರಿಗತಾಃ ।** ಶತ್ರುಬಾಧಾರಹಿತವಾದ, ಶತ್ರುಗಳು ಸಮೀಪಿಸುವುದಕ್ಕೆ ದುಸ್ಸಾಧ್ಯವಾದ.

**ಉದ್ಭಿದಃ—ಶತ್ರೂಣಾಮುದ್ಭೇತ್ತಾರಃ ।** ಶತ್ರುಗಳನ್ನು ನಾಶಮಾಡುವ- ಸ್ಕಂದಸ್ವಾಮಿಯು ಈ ಶಬ್ದಕ್ಕೆ **ಉದ್ಭಿದಃ । ಉದ್ಭಿನ್ನಾನ್ಯೈಕಾಹಃ । ತತ್ಪ್ರಭೃತಯಃ । ಅಥವಾ ಉದ್ಭಿಂದಂತಿ ಫಲಾನೀತ್ಯುದ್ಭಿದಃ । ಜನಯಿತಾರಃ ಫಲಾನಾಮಿತ್ಯರ್ಥಃ ॥** ಉದ್ಭಿನ್ನವೆಂಬ ಒಂದು ದಿನದಲ್ಲಿ ಮಾಡುವ ಯಜ್ಞವಿಶೇಷವೇ ಮೊದಲಾದುವು ಅಥವಾ (ಯಜ್ಞಾದಿಕರ್ಮಗಳಿಗೆ) ಫಲವನ್ನುಂಟುಮಾಡುವವರು ಎಂದು ಅರ್ಥವಿವರಣೆ ಮಾಡಿರುವರು.

**ಸದಮಿತ್—ಸದೈವ ।** ಸದಾಕಾಲದಲ್ಲಿಯೂ, ಯಾವಾಗಲೂ.

**ಅಪ್ರಾಯುವಃ—ಇಣ್ ಗತೌ । ಅಪ್ರಗಚ್ಛಂತಃ ಸ್ವಕೀಯಂ ರಕ್ಷಿತವ್ಯಮಪರಿತ್ಯಜಂತಃ ।** ತಾವು ರಕ್ಷಿಸಬೇಕಾದ ಯಜಮಾನರನ್ನು ತ್ಯಜಿಸದಿರುವವರು, ಅಲಕ್ಷ್ಯಮಾಡದಿರುವವರು.

ವ್ಯಾಕರಣಪ್ರಕ್ರಿಯಾ

**ಯಂತು**—ಇಣ್ ಗತೌ ಧಾತು. ಅದಾದಿ. ಲೋಟ್ ಪ್ರಥಮಪುರುಷಬಹುವಚನದಲ್ಲಿ **ಝೋಽಂತಃ**—ಎಂಬುದರಿಂದ ಅಂತಾದೇಶ. **ಏರುಃ**—ಎಂಬುದರಿಂದ ಇಕಾರಕ್ಕೆ ಉತ್ವ. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿನ ಇಕಾರಕ್ಕೆ ಯಣಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಅದಬ್ಧಾಸಃ**—ದಂಭು ದಂಭೇ ಧಾತು. ದಂಭವೆಂದರೆ ಹಿಂಸಾ. ಇದಕ್ಕೆ ಕ್ತಪ್ರತ್ಯಯ ಪರವಾದಾಗ **ಯಸ್ಯವಿಭಾಷಾ** (ಪಾ. ಸೂ. ೭-೨-೧೫) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. **ಅನಿದಿತಾಂ-ಹಲಉ**—ಎಂಬುದರಿಂದ ಉಪಧಾನಕಾರಕ್ಕೆ ಲೋಪ. ನ ದಬ್ಧಃ ಅದಬ್ಧಃ ನಞ್‌ತತ್ಪುರುಷ ಸಮಾಸದಲ್ಲಿ **ಅವ್ಯಯೇ ನಞ್ ಕುನಿಪಾತಾನಾಮ್**—ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನ ಪರವಾದಾಗ ಅದಕ್ಕೆ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಗಾಗಮ. ಸಕಾರಕ್ಕೆ ರುತ್ವ ವಿಸರ್ಗ.

**ಅಪರೀತಾಸಃ**—ಇಣ್ ಗತೌ ಧಾತು. ಹಿಂದಿನಂತೆ ಕರ್ಮಣಿಯಲ್ಲಿ ಕ್ತಪ್ರತ್ಯಯ. ಪರಿ ಉಪಸರ್ಗ ಪರೀತ ಎಂದು ರೂಪವಾಗುತ್ತದೆ. ಹಿಂದಿನಂತೆಯೇ ಅವ್ಯಯಪೂರ್ವಪದಪ್ರಕೃತಿಸ್ವರ. ಜಸಿನಲ್ಲಿ ಅಸುಕಾಗಮ.

**ವೃಧೇ**—ವೃಧ ವೃದ್ಧೌ. ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ **ಸಂಪದಾದಿಭ್ಯಃ ಕ್ವಿಪ್** ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ಕ್ವಿಪ್‌ಪ್ರತ್ಯಯ. ವೃಧ್ ಶಬ್ದವಾಗುತ್ತದೆ. ಚತುರ್ಥೀಏಕವಚನಾಂತ ರೂಪ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಸನ್**—ಅಸ ಭುವಿ. ಧಾತು. ಲೇಟ್‌ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. **ಝೋಽಂತಃ**—ಎಂಬುದರಿಂದ ಅಂತಾದೇಶ. **ಇತಶ್ಚಲೋಪಃ ಪರಸ್ಮೈಪದೇಷು**—ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟ್**—ಸೂತ್ರದಿಂದ ಅಡಾಗಮ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್ಕಾಗುವುದಿಲ್ಲ. ಅದು ಜತ್ತಾಗದಿರುವುದರಿಂದ ಅದು ಪರವಾದಾಗ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಲಸಾರ್ವಧಾತುಕವೂ (ಅನ್) **ತಾಸ್ಯನುದಾತ್ತೇತ್**—ಸೂತ್ರದಿಂದ ಧಾತುಸ್ವರ ದಿಂದ ಆದ್ಯುದಾತ್ತವಾಗುತ್ತದೆ.

**ಅಪ್ರಾಯುವಃ**—ಇಣ್ ಗತೌ ಧಾತು. ಪ್ರ ಎಂಬ ಉಪಸರ್ಗ ಪೂರ್ವದಲ್ಲಿರುವಾಗ ಇದಕ್ಕೆ **ಛಂದಸೀಣಃ** (ಉ. ಸೂ. ೧-೩) ಎಂಬುದರಿಂದ ಸಂಹಿತಾದಲ್ಲಿ ಉಣ್‌ಪ್ರತ್ಯಯ. ಣಿತ್ತಾದುದರಿಂದ **ಅಚೋಽಞ್ಣಿತಿ**—ಎಂಬುದ ರಿಂದ ಧಾತುವಿಗೆ ವೃದ್ಧಿ. ಆಯಾದೇಶ. ಪ್ರಾಯು ಶಬ್ದವಾಗುತ್ತದೆ. ನ ಪ್ರಾಯುಃ ಅಪ್ರಾಯುಃ. ನಞ್ ತತ್ಪುರುಷ ಸಮಾಸದಲ್ಲಿ **ತತ್ಪುರುಷೇ ತುಲ್ಯಾರ್ಥ**—ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ಅಪ್ರಾಯು ಎಂಬುದಕ್ಕೆ ಜಸ್‌ಪರವಾದಾಗ **ಜಸಾದಿಷು ಚ್ಛಂದಸಿ ವಾ ವಚನಮ್**—ಎಂಬುದರಿಂದ **ಜಸಿ ಚ**—ಎಂಬುದರಿಂದ ಗುಣ ಬಾರದಿರುವುದರಿಂದ ತನ್ವಾದಿಯಲ್ಲಿ ಪಾಠಮಾಡಿರುವುದರಿಂದ ಉವಜಾದೇಶ. ಅಪ್ರಾಯುವಃ ಎಂದು ರೂಪವಾಗುತ್ತದೆ. ॥ ೧ ॥

ಸಂಹಿತಾಪಾಠಃ

ದೇವಾನಾಂ ಭದ್ರಾ ಸುಮತಿರ್ಋಜೂಯತಾಂ ದೇವಾನಾಂ
ರಾತಿರಭಿ ನೋ ನಿ ವರ್ತತಾಂ।
ದೇವಾನಾಂ ಸಖ್ಯಮುಪ ಸೇದಿಮಾ ವಯಂ ದೇವಾ ನ ಆಯುಃ
ಪ್ರ ತಿರಂತು ಜೀವಸೇ ॥ ೨ ॥

ಪದಪಾಠಃ

ದೇವಾನಾಂ । ಭದ್ರಾ । ಸುಽಮತಿಃ । ಋಜುಽಯತಾಂ । ದೇವಾನಾಂ । ರಾತಿಃ ।
ಅಭಿ । ನಃ । ನಿ । ವರ್ತತಾಂ ।
ದೇವಾನಾಂ । ಸಖ್ಯಂ । ಉಪ । ಸೇದಿಮ । ವಯಂ । ದೇವಾಃ । ನಃ । ಆಯುಃ ।
ಪ್ರ । ತಿರಂತು । ಜೀವಸೇ ॥ ೨ ॥

ಸಾಯಣಭಾಷ್ಯಂ

ಭದ್ರಾ ಸುಖಯಿತ್ರೀ ಭಜನೀಯಾ ವಾ ದೇವಾನಾಂ ಸುಮತಿಃ ಶೋಭನಾ ಮತಿರನುಗ್ರಹಾತ್ಮಿಕಾ ಬುದ್ಧಿರಸ್ಮಾಕಮಸ್ತ್ವಿತಿ ಶೇಷಃ । ಕೀದೃಶಾನಾಂ । ಋಜೂಯತಾಮೃಜುಮಾರ್ಜವಯುಕ್ತಂ ಸಮ್ಯಗನುಷ್ಠಾತಾರಂ ಯಜಮಾನಮಾತ್ಮನ ಇಚ್ಛತಾಂ । ತಥಾ ದೇವಾನಾಂ ರಾತಿರ್ದಾನಂ ನೋಽಸ್ಮಾನಭಿಮುಖ್ಯೇನ ನಿತರಾಂ ವರ್ತತಾಂ । ತದಭಿಮತಫಲಪ್ರದಾನಮಸ್ಮಾಕಂ ಭವತ್ವಿತ್ಯರ್ಥಃ । ವಯಂ ಚ ತೇಷಾಂ ದೇವಾನಾಂ ಸಖ್ಯಂ ಸಖಿತ್ವಂ ಸಖ್ಯುಃ ಕರ್ಮ ವೋಪಸೇದಿಮ । ಪ್ರಾಪ್ನುವಾಮ । ತಾದೃಶಾ ದೇವಾ ನೋಽಸ್ಮಾಕಮಾಯುರ್ಜೀವಸೇ ಜೀವಿತುಂ ಪ್ರ ತಿರಂತು । ವರ್ಧಯಂತು ॥ ಭದ್ರಾ । ಭದಿ ಕಲ್ಯಾಣೇ ಸುಖೇ ಚ । ಋಜ್ರೇಂದ್ರಾಗ್ರೇತ್ಯಾದೌ । ಉ. ೨-೨೮ । ರನ್ಪ್ರತ್ಯಯಾಂತೋ ನಿಪಾತಿತಃ । ಋಜೂಯತಾಂ । ಋಜುಮಾತ್ಮನ ಇಚ್ಛತಿ ಋಜೂಯತಿ । ಸುಪ ಆತ್ಮನಃ ಕ್ಯಚ್ । ತದಂತಾಲ್ಲಟಃ ಶತೃ । ಶತುರನುಮ ಇತ್ಯಜಾದಿವಿಭಕ್ತೇರುದಾತ್ತತ್ವಂ । ರಾತಿಃ । ರಾ ದಾನೇ । ಮಂತ್ರೇ ವೃಷೇತಿ ಕ್ತಿನ ಉದಾತ್ತತ್ವಂ । ಸಖ್ಯಂ । ಸಖ್ಯುರ್ಯ ಇತಿ ಭಾವೇ ಕರ್ಮಣಿ ವಾ ಯಪ್ರತ್ಯಯಃ । ಸೇದಿಮ । ಷದ್ಲೃ ವಿಶರಣಗತ್ಯವಸಾದನೇಷು । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಪ್ರಾರ್ಥನಾಯಾಂ ಲಿಟ್ । ಸತ್ವಸ್ಯಾನೈಮಿತ್ತಿಕತ್ವೇನ ಲಿಟಿ ಪರತ ಆದೇಶಾದಿತ್ವಾಭಾವಾದತ ಏಕಹಲ್ಮಧ್ಯ ಇತ್ಯೇತ್ವಾಭ್ಯಾಸಲೋಪೌ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘತ್ವಂ । ಪ್ರ ತಿರಂತು । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ತಥಾ ಚ ಯಾಸ್ಕೋ ವ್ಯಾಚಖ್ಯೌ । ದೇವಾನಾಂ ಸಖ್ಯಮುಪಸೀದೇಮ ವಯಂ ದೇವಾ ನ ಆಯುಃ ಪ್ರವರ್ಧಯಂತು ಚಿರಂ ಜೀವನಾಯ । ನಿ. ೧೨-೩೯ । ಇತಿ ॥

ಪ್ರತಿಪದಾರ್ಥ

ಋಜೂಯತಾಂ—ಪ್ರಾಮಾಣಿಕನಾದ ಯಜ್ಞಕರ್ತನನ್ನು ಪಡೆಯಲಿಚ್ಛೆಯುಳ್ಳ । **ದೇವಾನಾಂ**—ದೇವತೆಗಳ । **ಭದ್ರಾ**—ಪೂಜ್ಯವಾದುದೂ । **ಸುಮತಿಃ**—ಶ್ರೇಷ್ಠವಾದುದೂ ಆದ ಬುದ್ಧಿಯು (ನಮಗೆ ಅನುಗ್ರಹವನ್ನುಂಟುಮಾಡುವಂತಾಗಲಿ) । **ದೇವಾನಾಂ**—ದೇವತೆಗಳ । **ರಾತಿಃ**—ಉದಾರವಾದ ದಾನವು । **ನಃ**—ನಮ್ಮ ಅಭಿಮುಖವಾಗಿ । **ವರ್ತತಾಂ**—ಇರಲಿ. **ವಯಂ**—ನಾವೂ (ಕೂಡ) । **ದೇವಾನಾಂ**—(ಆ) ದೇವತೆಗಳ ।

**ಸಖ್ಯಂ**—ಸ್ನೇಹವನ್ನು । **ಉಪಸೇದಿಮ**—ಹೊಂದೋಣ. । **ದೇವಾಃ**—ಆ ದೇವತೆಗಳು । **ನಃ**— ನಮ್ಮ। **ಆಯುಃ**—ಆಯಸ್ಸನ್ನು । **ಜೀವಸೇ**—ನಮ್ಮ ಬದುಕಿಗಾಗಿ। **ಪ್ರ ತಿರಂತು**—ಬೆಳೆಸಲಿ. ।

॥ ಭಾವಾರ್ಥ ॥

ಪ್ರಾಮಾಣಿಕನಾದ ಯಜ್ಞಕರ್ತನನ್ನು ಪಡೆಯಲಿಚ್ಛೆಯುಳ್ಳ ದೇವತೆಗಳ ಪೂಜ್ಯವಾದುದೂ ಮತ್ತು ಶ್ರೇಷ್ಠವಾದುದೂ ಆದ ಬುದ್ಧಿಯು ನಮಗೆ ಅನುಗ್ರಹವನ್ನುಂಟುಮಾಡುವಂತಾಗಲಿ. ದೇವತೆಗಳ ಉದಾರವಾದ ದಾನವು ನಮಗೆ ಅಭಿಮುಖವಾಗಿರಲಿ. ನಾವೂ ಸಹ ಆ ದೇವತೆಗಳ ಸ್ನೇಹವನ್ನು ಬೆಳೆಸೋಣ. ಆ ದೇವತೆಗಳು ನಮ್ಮ ಆಯಸ್ಸನ್ನು ಬೆಳೆಯುವಂತೆ ಮಾಡಲಿ.

## English Translation

May the auspicious favour of the gods be ours ; may the bounty of the gods, ever approving of the upright, light upon us ; may we obtain the friendship of the gods and may the gods extend our life that we may live.

ವಿಶೇಷವಿಷಯಗಳು

**ದೇವಾನಾಂ ಭದ್ರಾ ಸುಮತಿಃ**—ನಮಗೆ ಒಳ್ಳೆಯದನ್ನು ಮಾಡಬೇಕೆಂಬ ದೇವತೆಗಳ ಬುದ್ಧಿಯು ಅಥವಾ ಅನುಗ್ರಹವು.

**ಋಜೂಯತಾಂ—ಋಜುಮಾರ್ಜವಯುಕ್ತಂ ಸಮ್ಯಗನುಷ್ಠಾತಾರಂ ಆತ್ಮನ ಇಚ್ಛತಾಂ ।** ಋಜುಮಾರ್ಗದಲ್ಲಿರುವ ಎಂದರೆ ಯಜ್ಞಾದಿಸತ್ಕರ್ಮಾನುಷ್ಠಾನಗಳಲ್ಲಿ ತೊಡಗಿರುವ ಯಜಮಾನರನ್ನು ಅಪೇಕ್ಷಿಸುವ. ಯಜಮಾನರು ಮಾಡುವ ಯಜ್ಞಗಳನ್ನು ಸ್ತೋತ್ರಗಳನ್ನು ದೇವತೆಗಳು ಅನುಮೋದಿಸುವರೆಂದಭಿಪ್ರಾಯವು.

**ರಾತಿಃ—ರಾ ದಾನೇ ।** ದೇವತೆಗಳು ಅನುಗ್ರಹಿಸುವ ಅಥವಾ ಕೊಡುವ ಐಶ್ವರ್ಯಾದಿದಾನಗಳು.

**ಉಪ ಸೇದಿಮ—ಷದ್ಲೃ ವಿಶರಣಗತ್ಯವಸಾದನೇಷು ।** ಹೊಂದೋಣ, ಪಡೆಯೋಣ.

**ಪ್ರ ತಿರಂತು—ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ।** (ನಮ್ಮ ಆಯಸ್ಸನ್ನು) ಅಭಿವೃದ್ಧಿಮಾಡಲಿ ಯಾಸ್ಕರು—**ದೇವಾನ ಆಯುಃ ಪ್ರವರ್ಧಯಿತುಂ ಚಿರಂ ಜೀವನಾಯ** (ನಿ. ೧೨-೩೯) ದೇವತೆಗಳು ನಮ್ಮ ಆಯಸ್ಸನ್ನು ಬಹಳಕಾಲ ಬದುಕಿರುವಂತೆ ವೃದ್ಧಿಪಡಿಸಲಿ ಎಂದು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಭದ್ರಾ**—ಭದಿ ಕಲ್ಯಾಣೇ ಸುಖೇ ಚ. ಧಾತು. **ಋಜ್ರೇಂದ್ರಾಗ್ರವಜ್ರ**—(ಉ. ಸೂ. ೨-೧೮೬) ಎಂಬುದರಿಂದ ರನ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಅಜಾದ್ಯತಷ್ಟಾಪ್**—ಎಂಬುದರಿಂದ ಟಾಪ್ ಪ್ರತ್ಯಯ. ಪ್ರಥಮಾ ಸುವಿಗೆ **ಹಲ್‌ಙ್ಯಾಭ್ಯೋ**— ಸೂತ್ರದಿಂದ ಲೋಪ.

**ಋಜೂಯತಾಮ್**—ಋಜುಂ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷ್ಯೆಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ೩-೧-೮) ಎಂಬುದರಿಂದ ಋಜು ಎಂಬ ಸುಬಂತದ ಮೇಲೆ ಕ್ಯಚ್‌ಪ್ರತ್ಯಯ. **ಅಕೃತ್‌ಸಾರ್ವಧಾತುಕಯೋರ್ದೀರ್ಘಃ**—ಎಂಬುದರಿಂದ ಕ್ಯಚಿನ ಯಕಾರ ಪರವಾದಾಗ ಪೂರ್ವದ ಅಜಂತಕ್ಕೆ ದೀರ್ಘ. **ಸನಾದ್ಯಂತಾ ಧಾತವಃ**-ಎಂಬುದರಿಂದ ಋಜೂಯ ಎಂಬ ಕ್ಯಜಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ ಶಪ್‌ವಿಕರಣ. **ಅತೋ ಗುಣೇ** ಸೂತ್ರದಿಂದ ಪರರೂಪ. ಋಜೂಯಚ್ಛಬ್ದವಾಗುತ್ತದೆ. ಷಷ್ಠೀಬಹುವಚನಾಂತರೂಪ. ನುಮ್‌ರಹಿತವಾದ ಶತೃಪ್ರತ್ಯಯದ ಪರದಲ್ಲಿ ಅಜಾದಿಪ್ರತ್ಯಯ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅಜಾದಿಯಾದ ಆಮಿಗೆ ಉದಾತ್ತಸ್ವರ ಬರುತ್ತದೆ.

**ರಾತಿಃ**—ರಾ ದಾನೇ ಧಾತು. ಇದಕ್ಕೆ ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್**—ಎಂಬುದರಿಂದ ಕ್ತಿನ್ ಪ್ರತ್ಯಯ. ಆದ್ಯುದಾತ್ತಪ್ರಾಪ್ತವಾದರೆ **ಮಂತ್ರೇವೃಷೇಷಪಚ**—(ಪಾ. ಸೂ ೩-೩-೯೬) ಎಂಬುದರಿಂದ ಕ್ತಿನಿಗೆ ಉದಾತ್ತಸ್ವರವು ಬರುತ್ತದೆ.

**ವರ್ತತಾಮ್**-ವೃತು ವರ್ತನೇ ಧಾತು. ಲೋಟ್‌ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಆಮೇತಃ**—ಎಂಬುದರಿಂದ ಟಿತ್ವನಿಮಿತ್ತವಾಗಿ ಪ್ರಾಪ್ತವಾದ ಏತ್ವಕ್ಕೆ ಆಮ್ ಆದೇಶ. ತಿಙಂತನಿಘಾತಸ್ವರ ಬರುತ್ತದೆ.

**ಸಖ್ಯಮ್**—ಸಖ್ಯುಃ ಭಾವಃ ಸಖ್ಯಮ್. **ಸಖ್ಯುರ್ಯಃ** (ಪಾ. ಸೂ. ೫-೧-೧೨೬) ಎಂಬುದರಿಂದ ಭಾವಾರ್ಥದಲ್ಲಿ ಅಥವಾ ಕರ್ಮಾರ್ಥದಲ್ಲಿ ಯ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಇಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಸೇದಿಮಾ**—ಷದ್‌ಲೃ ವಿಶರಣಗತ್ಯವಸಾದನೇಷು. ಧಾತು. **ಛಂದಸಿ ಲುಙ್‌ಲಙ್‌ಲಿಟಃ**—ಎಂಬುದರಿಂದ ಪ್ರಾರ್ಥನಾರೂಪ ಅರ್ಥದಲ್ಲಿ ಲಿಟ್. ಧಾತುವಿನ ಆದಿಗೆ **ಧಾತ್ವಾದೇಃ ಷಃ ಸಃ**-ಎಂಬುದರಿಂದ ಸಕಾರಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಇಲ್ಲಿ ಲಿಣ್ನಿಮಿತ್ತವಾಗಿ ಧಾತುವಿನ ಆದಿಗೆ ಯಾವ ಆದೇಶವೂ ಬಾರದಿರುವುದರಿಂದ **ಅತ ಏಕಹಲ್‌ಮಧ್ಯೇಽನಾದೇಶಾದೇರ್ಲಿಟಿ** (ಪಾ ಸೂ. ೬-೪-೧೨೦) ಎಂಬುದರಿಂದ ಅಸಂಯುಕ್ತಹಲ್ ಮಧ್ಯದಲ್ಲಿರುವ ಧಾತುವಿನ ಅಕಾರಕ್ಕೆ ಏತ್ವವೂ ಅಭ್ಯಾಸಕ್ಕೆ ಲೋಪವೂ ಬರುತ್ತದೆ. ಮಸಿಗೆ ಇಡಾದೇಶ **ಅನ್ಯೇಷಾಮಪಿ ದೃಶ್ಯತೇ**—ಎಂಬುದರಿಂದ ಸಂಹಿತಾದಲ್ಲಿ ಧಾತುವಿನ ಅಂತ್ಯಕ್ಕೆ ದೀರ್ಘ.

**ಪ್ರ ತಿರಂತು**—ಪ್ರ ಎಂಬ ಉಪಸರ್ಗ ಸಹಿತವಾದ ತಿರ ಧಾತುವು ವರ್ಧನರೂಪಾರ್ಥದಲ್ಲಿ ಇದೆ. ಇದೇ ರೀತಿಯಾಗಿ ಯಾಸ್ಕರು ವ್ಯಾಖ್ಯಾನಮಾಡಿರುತ್ತಾರೆ. ದೇವಾನಾಂ ಸಖ್ಯಮುಪಸೇದಿಮ ವಯಂ ದೇವಾ ನ ಆಯುಃ **ಪ್ರವರ್ಧಯಂತು** ಚಿರಂ ಜೀವನಾಯ. (ದೇವತೆಗಳ ಸಖ್ಯವನ್ನು ನಾವು ಹೊಂದೋಣ ದೇವತೆಗಳು ನಾವು ಬಹುಕಾಲ ಬದುಕಿರಲು ನಮ್ಮ ಆಯುಸ್ಸನ್ನು ಹೆಚ್ಚಿಸಲಿ ) (ನಿರು. ೧೨-೩೯) ಇತಿ ಲಟ್‌ಪ್ರಥಮಪುರುಷ ಬಹುವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜೀವಸೇ**—ತುಮುನರ್ಥ ತೋರುವಾಗ **ತುಮರ್ಥೇಸೇಸೇನಸೇ**—ಎಂಬುದರಿಂದ ಅಸೇ ಪ್ರತ್ಯಯ. ||೨||

ಸಂಹಿತಾಪಾಠಃ

ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರ-
ಮದಿತಿಂ ದಕ್ಷಮಸ್ರಿಧಂ ।
ಅರ್ಯಮಣಂ ವರುಣಂ ಸೋಮಮಶ್ವಿನಾ ಸರಸ್ವತೀ ನಃ ಸು-
ಭಗಾ ಮಯಸ್ಕರತ್ ॥ ೩ ॥

ಪದಪಾಠಃ

ತಾನ್ । ಪೂರ್ವಯಾ । ನಿಽವಿದಾ । ಹೂಮಹೇ । ವಯಂ । ಭಗಂ । ಮಿತ್ರಂ ।
ಅದಿತಿಂ । ದಕ್ಷಂ । ಅಸ್ರಿಧಂ ।
ಅರ್ಯಮಣಂ । ವರುಣಂ । ಸೋಮಂ । ಅಶ್ವಿನಾ । ಸರಸ್ವತೀ । ನಃ । ಸುಽಭ-
ಗಾ । ಮಯಃ । ಕರತ್ ॥ ೩ ॥

॥ ಸಾಯಣಭಾಷ್ಯಂ ॥

ತಾನ್ವಿಶ್ವಾನ್ದೇವಾನ್ಪೂರ್ವಯಾ ಪೂರ್ವಕಾಲೀನಯಾ ನಿತ್ಯಯಾ ನಿವಿದಾ ವೇದಾತ್ಮಿಕಯಾ ವಾಚಾ। ನಿವಿದಿತಿ ವಾಙ್ನಾಮ । ಯದ್ವಾ । ನಿವಿದಾ ವಿಶ್ವೇ ದೇವಾಃ ಸೋಮಸ್ಯ ಮತ್ಸನ್ನಿತ್ಯಾದಿಕಯಾ ವೈಶ್ವದೇವಾ ನಿವಿದಾ ವಯಂ ಹೂಮಹೇ। ಆಹ್ವಯಾಮಃ। ದೇವಾನಿತಿ ಯತ್ಸಾಮಾನ್ಯೇನೋಕ್ತಂ ತದೇವ ವಿವ್ರಿಯತೇ। ಭಗಂ ಭಜನೀಯಂ ದ್ವಾದಶಾನಾಮಾದಿತ್ಯಾನಾಮನ್ಯತಮಂ ಮಿತ್ರಂ ಪ್ರಮೀತೇಸ್ತ್ರಾಯಕಮಹರಭಿಮಾನಿನಂ ದೇವಂ । ಮೈತ್ರಂ ವಾ ಅಹಃ । ತೈ. ಬ್ರಾ. ೧-೭-೧೦-೧ । ಇತಿ ಶ್ರುತೇಃ । ಅದಿತಿಮಖಂಡನೀಯಾಮದೀನಾಂ ವಾ ದೇವಮಾತರಂ ದಕ್ಷಂ ಸರ್ವಸ್ಯ ಜಗತೋ ನಿರ್ಮಾಣೇ ಸಮರ್ಥಂ ಪ್ರಜಾಪತಿಂ । ಯದ್ವಾ ಪ್ರಾಣರೂಪೇಣ ಸರ್ವೇಷು ಪ್ರಾಣಿಷು ವ್ಯಾಪ್ಯ ವರ್ತಮಾನಂ ಹಿರಣ್ಯಗರ್ಭಂ । ಪ್ರಾಣೋ ವೈ ದಕ್ಷ ಇತಿ। ಶ್ರುತೇಃ । ಅಸ್ರಿಧಂ ಶೋಷಣರಹಿತಂ ಸರ್ವದೈಕರೂಪೇಣ ವರ್ತಮಾನಂ ಮರುದ್ಗಣಂ । ಅರ್ಯಮಣಂ । ಅರೀನ್ ಮಂದೇಹಾದೀನಸುರಾನ್ಯಚ್ಛತಿ ನಿಯಚ್ಛತೀತ್ಯರ್ಯಮಾ ಸೂರ್ಯಃ । ಅಸೌ ವಾ ಆದಿತ್ಯೋ-

ಽರ್ಯಮೇತಿ ಶ್ರುತೇಃ। ತಂ। ವರುಣಂ। ವೃಣೋತಿ ಪಾಪಕೃತಃ ಸ್ವಕೀಯೈಃ ಪಾಶೈರಾವೃಣೋತೀತಿ ರಾತ್ರ್ಯಭಿಮಾನಿದೇವೋ ವರುಣಃ। ಶ್ರೂಯತೇ ಚ। ವಾರುಣೀ ರಾತ್ರಿಃ। ತೈ. ಬ್ರಾ. ೧-೭-೧೦-೧। ಇತಿ। ಸೋಮಂ ದ್ವೇಧಾತ್ಮಾನಂ ವಿಭಜ್ಯ ಪೃಥಿವ್ಯಾಂ ಲತಾರೂಪೇಣ ದಿವಿ ಚ ಚಂದ್ರಾತ್ಮನಾ ದೇವತಾರೂಪೇಣ ವರ್ತಮಾನಂ। ಅಶ್ವಿನಾಶ್ನುವಂತೌ। ಯದ್ವಾ। ಸರ್ವಂ ವ್ಯಾಪ್ನುವಂತೌ। ತಥಾ ಚ ಯಾಸ್ಕಃ। ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯೋಽಶ್ವೈರಶ್ವಿನಾವಿತ್ಯೌರ್ಣವಾಭಸ್ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇಽಹೋರಾತ್ರಾವಿತ್ಯೇಕೇ ಸೂರ್ಯಾಚಂದ್ರಮಸಾವಿತ್ಯೇಕೇ ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ। ನಿ. ೧೨-೧। ಇತಿ। ಏವಂಭೂತಾನ್ ಸರ್ವಾನ್ದೇವಾನಸ್ಮದ್ರಕ್ಷಣಾರ್ಥಮಾಹ್ವಯಾಮ ಇತಿ ಪೂರ್ವತ್ರ ಸಂಬಂಧಃ। ಅಸ್ಮಾಭಿರಾಹೂತಾ ಸುಭಗಾ ಶೋಭನಧನೋಪೇತಾ ಸರಸ್ವತೀ ನೋಽಸ್ಮಭ್ಯಂ ಮಯಃ ಸುಖಂ ಕರತ್। ಕರೋತು॥ ಹೂಮಹೇ ಹ್ವೇಞೋ ಲಟಿ ಹ್ವ ಇತ್ಯನುವೃತ್ತೌ ಬಹುಲಂ ಛಂದಸೀತಿ ಸಂಪ್ರಸಾರಣಂ। ಪರಪೂರ್ವತ್ವೇ ಹಲ ಇತಿ ದೀರ್ಘತ್ವಂ। ಬಹುಲಂ ಛಂದಸೀತಿ ಶಪೋ ಲುಕ್। ಅಸ್ರಿಧಂ। ಸ್ರಿಧು ಶೋಷಣೇ। ಸಂಪದಾದಿಲಕ್ಷಣೋ ಭಾವೇ ಕ್ವಿಪ್। ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ। ಮಯಸ್ಕರತ್। ಕರೋತೇರ್ಲೇಟ್ಯಡಾಗಮಃ। ಬಹುಲಂ ಛಂದಸೀತಿ ವಿಕರಣಸ್ಯ ಲುಕ್। ಅತಃ ಕೃಕಮೀತಿ ವಿಸರ್ಜನೀಯಸ್ಯ ಸತ್ವಂ॥

ಪ್ರತಿಪದಾರ್ಥ ॥

**ವಯಂ**—ನಾವು। **ಭಗಂ**—ಭಗನನ್ನು। **ಮಿತ್ರಂ**—ಮಿತ್ರನನ್ನು। **ಅದಿತಿಂ**—ಅದಿತಿಯನ್ನು। **ದಕ್ಷಂ**—ದಕ್ಷನನ್ನು। **ಅಸ್ರಿಧಂ**—ಅಸ್ರಿಧನನ್ನು। **ಅರ್ಯಮಣಂ**—ಅರ್ಯಮನನ್ನು। **ವರುಣಂ**—ವರುಣನನ್ನು। **ಸೋಮಂ**—ಸೋಮನನ್ನು। **ಅಶ್ವಿನಾ**—ಅಶ್ವಿನೀದೇವತೆಗಳನ್ನು। **ತಾನ್**—ಈ ಎಲ್ಲಾ ದೇವತೆಗಳನ್ನು। **ಪೂರ್ವಯಾ**—ಪ್ರಾಚೀನಕಾಲದಿಂದ (ಅನಾದಿಯಾಗಿ) ಬಂದ। **ನಿವಿದಾ**—ವೇದಾತ್ಮಕವಾದ ವಾಕ್ಕಿನಿಂದ। **ಹೂಮಹೇ**—ಪ್ರಾರ್ಥಿಸಿ ಕರೆಯುತ್ತೇವೆ। **ಸುಭಗಾ**—ಶ್ರೇಷ್ಠವಾದ ಧನದಿಂದ ಕೂಡಿದ। **ಸರಸ್ವತೀ**—ಸರಸ್ವತಿಯು। **ನಃ**—ನಮಗೆ। **ಮಯಃ**—ಸುಖವನ್ನು। **ಕರತ್**—ಉಂಟುಮಾಡಲಿ।

ಭಾವಾರ್ಥ

ನಾವು ದೇವತೆಗಳ ಗುಂಪಿಗೆ ಸೇರಿದ ಭಗನನ್ನೂ, ಮಿತ್ರನನ್ನೂ, ಅದಿತಿಯನ್ನೂ, ದಕ್ಷನನ್ನೂ, ಅಸ್ರಿಧನನ್ನೂ, (ಮರುದ್ಗಣವನ್ನು) ಅರ್ಯಮನನ್ನೂ, ವರುಣನನ್ನೂ, ಸೋಮನನ್ನೂ, ಅಶ್ವಿನೀದೇವತೆಗಳನ್ನೂ ಅನಾದಿಯಾಗಿ ಬಂದ ವೇದಾತ್ಮಕವಾದ ವಾಕ್ಕಿನಿಂದ ಪ್ರಾರ್ಥಿಸಿ ಕರೆಯುತ್ತೇವೆ. ಶ್ರೇಷ್ಠವಾದ ಧನದಿಂದ ಕೂಡಿದ ಸರಸ್ವತಿಯು ನಮಗೆಸುಖವನ್ನುಂಟುಮಾಡಲಿ.

## English Translation

We invoke them with an ancient speech Bhaga, Mitra, Aditi, Daksha, Asridh, Aryaman, Varuna, Soma, the Aswins; and may the gracious Saraswati grant us happiness.

॥ ವಿಶೇಷವಿಷಯಗಳು ॥

**ನಿವಿದಾ**—ಶ್ಲೋಕಃ ಧಾರಾ ಮೊದಲಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ ನಿವಿತ್ ಎಂಬ ಶಬ್ದವು ಪಠಿತವಾಗಿರುವುದರಿಂದ ನಿವಿದಾ ಎಂದರೆ ವಾಕ್ಯದಿಂದ ಅಥವಾ ವೇದಾತ್ಮಕವಾದ ವಾಕ್ಯದಿಂದ ಎಂದರ್ಥವು. (ನಿ. ೨-೨೩) ಅಥವಾ ವೈಶ್ವದೇವಶಸ್ತ್ರಮಂತ್ರಪಠನದಲ್ಲಿ ನಿವಿತ್ ಎಂಬ ಮಂತ್ರದಿಂದ.

**ಭಗಂ—ಭಜನೀಯಂ ।** ಭಜಿಸಲ್ಪಡಲರ್ಹನಾದ. ಅಥವಾ ದ್ವಾದಶಾದಿತ್ಯರಲ್ಲಿ ಒಬ್ಬನು.

**ಮಿತ್ರಂ**—ಮಿತ್ರನು ಅಹರಭಿಮಾನಿದೇವತೆಯು. ಈ ವಿಷಯದಲ್ಲಿ **ಮೈತ್ರಂ ವಾ ಅಹಃ** (ತೈ. ಬ್ರಾ. ೧-೭-೧೦-೧) ಎಂದು ಶ್ರುತಿವಾಕ್ಯವಿರುವುದು. ಈ ಶಬ್ದಕ್ಕೆ ಯಾಸ್ಕರು—**ಮಿತ್ರಃ ಪ್ರಮೀತೇಸ್ತ್ರಾಯತೇ । ಸಮ್ಮಿನ್ವಾನೋ ದ್ರವತೀತಿ ವಾ । ಮೇದಯತೇರ್ವಾ ॥** ಎಂದರೆ ಮರಣದಿಂದ ಕಾಪಾಡುವನಾದುದರಿಂದ ಈ ದೇವತೆಗೆ ಮಿತ್ರನೆಂದು ಹೆಸರು. ಅಥವಾ ಸುತ್ತಲೂ ಚೆನ್ನಾಗಿ ಅಂತರಿಕ್ಷದಲ್ಲಿ ಉದಕ ರೂಪವಾದ ಮಳೆಯನ್ನು ಸುರಿಸಿ ಎಲ್ಲವನ್ನೂ ನೆನೆಯುವಂತೆ ಮಾಡುವವನಾದುದರಿಂದ ಮಿತ್ರನೆಂದು ಹೆಸರು. ಸಮಸ್ತವನ್ನೂ ಉದಕದಿಂದ ಸೇಚನೆಮಾಡುವುದರಿಂದ ಮಿತ್ರನೆಂದು ಹೆಸರು ಎಂದು ಹೇಳಿ—

**ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।**
**ಮಿತ್ರಃ ಕೃಷ್ಟೀರನಿಮಿಷಾಽಭಿಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥**
(ಋ. ಸಂ. ೩-೫೯-೧)

ಎಂಬ ಉದಾಹರಣೆಯನ್ನು ಅರ್ಥಸಮರ್ಥನೆಗಾಗಿ ಕೊಟ್ಟಿರುವರು.

**ಅದಿತಿಂ—ದೇವಮಾತರಂ ।** ದೇವತೆಗಳಿಗೆ ತಾಯಿಯಾದ ಅದಿತಿಯು. ಈ ಶಬ್ದಕ್ಕೆ ಯಾಸ್ಕರ ನಿರ್ವಚನವು ಈ ರೀತಿ ಇರುವುದು.

**ಅಥಾತೋ ಮಧ್ಯಸ್ಥಾನಾಃ ಸ್ತ್ರಿಯಃ । ತಾಸಾಮದಿತಿಃ ಪ್ರಥಮಾಗಾಮಿನೀ ಭವತಿ । ಅದೀನಾ ದೇವಮಾತಾ ।**

ಸ್ತ್ರೀದೇವತೆಗಳು ಮಧ್ಯಮಸ್ಥಾನ ದೇವತೆಗಳು (ಅಂತರಿಕ್ಷದೇವತೆಗಳು) ಅವರಲ್ಲಿ ಅದಿತಿಯೇ ಮೊದಲನೆಯವಳು. ಅದಿತಿ ಎಂದರೆ ದೀನಳಲ್ಲದ ದೇವಮಾತೆಯೆಂದರ್ಥವು. ಮತ್ತು ಅದಿತಿಯ ವಿಚಾರವಾಗಿ—

**ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।**
**ವಿಶ್ವೇ ದೇವಾ ಅದಿತಿಃ ಪಂಚಜನಾ ಅದಿತಿರ್ಜಾತಮದಿತಿರ್ಜನಿತ್ವಂ ॥**
(ಋ. ಸಂ. ೧-೮೯-೧೦)

**ಇತ್ಯದಿತೇರ್ವಿಭೂತಿಮಾಚಷ್ಟೇ । ಏನಾನ್ಯದೀನಾನೀತಿ ವಾ ॥** (ನಿ. ೪-೨೩) ಎಂದು ಹೇಳಿ ಅದಿತಿಯ ಮಹಿಮೆಯನ್ನು ಈ ಋಕ್ಕು ವಿಶದಪಡಿಸುವುದೆಂದು ಹೇಳಿರುವರು.

**ದಕ್ಷಂ—ಸರ್ವಸ್ಯ ಜಗತೋ ನಿರ್ಮಾಣೇ ಸಮರ್ಥಂ ಪ್ರಜಾಪತಿಂ ।** ಸಮಸ್ತಜಗತ್ತನ್ನೂ ಸೃಷ್ಟಿಸುವ ಸಾಮರ್ಥ್ಯವುಳ್ಳ ಪ್ರಜಾಪತಿಯು. ಅಥವಾ **ಪ್ರಾಣರೂಪೇಣ ಸರ್ವೇಷು ಪ್ರಾಣಿಷು ವ್ಯಾಪ್ಯ ವರ್ತಮಾನಂ ಹಿರಣ್ಯಗರ್ಭಂ । ಪ್ರಾಣೋ ವೈ ದಕ್ಷ ಇತಿ ಶ್ರುತೇಃ ॥** ದಕ್ಷ ಎಂದರೆ ಪ್ರಾಣನೆಂದು ಶ್ರುತಿವಾಕ್ಯವಿರುವುದು. ಅದು

ದರಿಂದ ಪ್ರಾಣರೂಪದಿಂದ ಸರ್ವಪ್ರಾಣಿಗಳಲ್ಲಿಯೂ ವ್ಯಾಪಿಸಿ ಇರುವವನಾದುದರಿಂದ ಹಿರಣ್ಯಗರ್ಭನೆಂದೂ ಹೇಳಬಹುದು. ಯಾಸ್ಕರು ದಕ್ಷ ಶಬ್ದಕ್ಕೆ ಇನ್ನೊಂದು ಅರ್ಥವನ್ನು ಹೇಳಿರುವರು—

**ಆದಿತ್ಯೋ ದಕ್ಷ ಇತ್ಯಾಹುರಾದಿತ್ಯಮಧ್ಯೇ ಚ ಸ್ತುತಃ ।** (ನಿ. ೧೧–೨೩) ದಕ್ಷ ಎಂದರೆ ಆದಿತ್ಯನಿಗೂ ಹೆಸರು. ಏಕೆಂದರೆ ದ್ವಾದಶಾದಿತ್ಯರ ಮಧ್ಯದಲ್ಲಿ ದಕ್ಷನೂ ಸೇರಿದವನು. ಉದಾಹರಣೆಗಾಗಿ—

**ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ ॥**
(ಋ. ಸಂ. ೧೦-೭೨-೪)

ಎಂಬ ಋಕ್ಕನ್ನು ಕೊಟ್ಟಿರುವರು.

**ಅರ್ಯಮಣಂ— ಅರೀನ್ ಮಂದೇಹಾದೀನಸುರಾನ್ಯಚ್ಛತಿ ನಿಯಚ್ಛತೀತ್ಯರ್ಯಮಾ ಸೂರ್ಯಃ ।** ಮಂದೇಹ ಎಂಬ ಹೆಸರಿನ ಅಸುರರಾದ ಶತ್ರುಗಳನ್ನು ನಿಗ್ರಹಮಾಡುವುದರಿಂದ ಈ ದೇವನಿಗೆ ಅರ್ಯಮಾ ಎಂದು ಹೆಸರು. **ಅಸೌ ವಾ ಆದಿತ್ಯೋಽರ್ಯಮಾ** ಎಂದು ಶ್ರುತಿವಾಕ್ಯವಿರುವುದು. ಅರ್ಯಮಾ ಎಂದರೆ ಸೂರ್ಯನು, ದ್ವಾದಶಾದಿತ್ಯರಲ್ಲಿ ಒಬ್ಬನು.

**ಅಸ್ರಿಧಂ— ಶೋಷಣರಹಿತಂ ಸರ್ವದೈಕರೂಪೇಣ ವರ್ತಮಾನಂ ಮರುದ್ಗಣಂ ।** ಶೋಷಣರಹಿತನಾದ ಮತ್ತು ಯಾವಾಗಲೂ ಒಂದೇರೂಪದಿಂದ ಇರುವ ಮರುದ್ಗಣವು.

**ವರುಣಂ— ವೃಣೋತಿ ಪಾಪಕೃತಃ ಸ್ವಕೀಯೈಃ ಪಾಶೈರಾವೃಣೋತೀತಿ ರಾತ್ರ್ಯಭಿಮಾನಿದೇವೋ ವರುಣಃ। ಶ್ರೂಯತೇ ಚ । ವಾರುಣೀ ರಾತ್ರಿಃ** (ತೈ. ಬ್ರಾ. ೧–೭–೧೦-೧) ಪಾಪಮಾಡಿದವರನ್ನು ತನ್ನ ಪಾಶಗಳಿಂದ ಆವರಿಸುವವನು. ಮತ್ತು ಈ ವರುಣನು ರಾತ್ರ್ಯಭಿಮಾನಿದೇವತೆಯೆಂದು ಶ್ರುತಿವಾಕ್ಯವಿರುವುದು.

**ಸೋಮಂ— ದ್ವೇಧಾತ್ಮಾನಂ ವಿಭಜ್ಯ ಪೃಥಿವ್ಯಾಂ ಲತಾರೂಪೇಣ ದಿವಿ ಚ ಚಂದ್ರಾತ್ಮನಾ ದೇವತಾ ರೂಪೇಣ ವರ್ತಮಾನಂ ।** ಸೋಮದೇವತೆಯು ತನ್ನನ್ನು ಎರಡಾಗಿ ವಿಭಾಗಿಸಿಕೊಂಡು ಪೃಥಿವಿಯಲ್ಲಿ ಸೋಮವೆಂಬ ಬಳ್ಳಿಯರೂಪದಿಂದಲೂ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಚಂದ್ರನೆಂಬ ದೇವತಾರೂಪದಿಂದಲೂ ಇರುವನು.

**ಅಶ್ವಿನಾ— ಅಶ್ವಿನಾಶ್ವವಂತೌ । ಯದ್ವಾ ಸರ್ವಂ ವ್ಯಾಪ್ನುವಂತೌ ।** ಅಶ್ವಗಳುಳ್ಳವರಾದುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು. ಅಥವಾ ಸರ್ವವನ್ನೂ ವ್ಯಾಪಿಸಿ ಇರುವವರಾದ್ದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು. ಯಾಸ್ಕರು—

> **ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವೈರಶ್ವಿನಾವಿತ್ಯೌರ್ಣವಾಭಃ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ ।**
>
> **ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ ।** (ನಿ. ೧೨-೧)

ಎಂದರೆ ಅಶ್ವಿನೀದೇವತೆಗಳು ಸಮಸ್ತವನ್ನೂ ಉದಕದಿಂದ ವ್ಯಾಪಿಸುವವರಾದುದರಿಂದ ಇವರಿಗೆ ಅಶ್ವಿನೀದೇವತೆಗಳೆಂಬ ಹೆಸರು ಬಂದಿರುವುದೆಂದು ಕೆಲವರೂ, ಪ್ರಕಾಶದಿಂದ ಸರ್ವವನ್ನೂ ವ್ಯಾಪಿಸುವವರಾದ್ದರಿಂದ

ಅಶ್ವಿನೀದೇವತೆಗಳೆಂದು ಮತ್ತೆ ಕೆಲವರೂ ಹೇಳುವರು. ಅಶ್ವಗಳುಳ್ಳ (ಕುದುರೆ) ವರಾದುದರಿಂದ ಇವರು ಅಶ್ವಿನೀದೇವತೆಗಳೆಂದು ಕರೆಯಲ್ಪಡುವರೆಂದು ಔರ್ಣವಾಭನೆಂಬ ಋಷಿಯು ಹೇಳುವನು. ಈ ಅಶ್ವಿನೀದೇವತೆಗಳು ಯಾರು ? ಯಾವ ದೇವತೆಗಳು ಎಂದರೆ, ದ್ಯಾವಾಪೃಥಿವೀ-ಸ್ವರ್ಗಭೂಮಿಗಳು ಎಂದು ಕೆಲವರೂ, ಅಹೋರಾತ್ರಿಗಳೆಂದು ಕೆಲವರೂ, ಸೂರ್ಯಚಂದ್ರರೆಂದು, ಕೆಲವರೂ ಹೇಳುವರು. ವಿಶೇಷವಾಗಿ ಪುಣ್ಯಕಾರ್ಯಗಳನ್ನು ಮಾಡಿದ ಇಬ್ಬರು ರಾಜರುಗಳ ಹೆಸರೆಂದು ಇತಿಹಾಸಕಾರರು ಹೇಳುವರು.

**ಸರಸ್ವತೀ**—ಸರಸ್ವತೀ ಎಂಬ ದೇವತೆಯು. ಈ ದೇವತೆಯ ವಿಷಯವಾಗಿ ನಾವು ಋ. ಸಂ. ಭಾಗ ೨. ಪೇಜು 69-77 ಗಳಲ್ಲಿ ವಿಸ್ತಾರವಾಗಿ ಬರೆದಿರುವ ವಿವರಣೆಯನ್ನು ನೋಡಿ.

**ಮಯಃ**—ಶಿಂಬಾತಾ, ಶತರಾ ಮೊದಲಾದ ಇಪ್ಪತ್ತು ಸುಖನಾಮಗಳ ಮಧ್ಯದಲ್ಲಿ ಮಯಃಶಬ್ದವು ಪಠಿತವಾಗಿರುವುದರಿಂದ ಮಯಃ ಎಂದರೆ ಸುಖವೆಂದರ್ಥವು (ನಿ. ೩-೧೩)

ವ್ಯಾಕರಣಪ್ರಕ್ರಿಯಾ

**ಹೂಮಹೇ** — ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಟ್‌ಉತ್ತಮಪುರುಷಬಹುವಚನದ ಮಹಿಙ್‌ಪ್ರತ್ಯಯ. **ಟಿತ ಆತ್ಮನೇ**—ಎಂಬುದರಿಂದ ಏತ್ವ. **ಹ್ವಃ ಸಂಪ್ರಸಾರಣಮ್**—ಸೂತ್ರದಿಂದ ಹ್ವಃ ಎಂದು ಅನುವೃತ್ತವಾಗುವಾಗ **ಬಹುಲಂ ಛಂದಸಿ**—ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಹುಮಹೆ ಎಂದಿರುವಾಗ **ಹಲಃ** (ಪಾ. ಸೂ. ೬-೪-೨) ಅಂಗಾವಯವವಾದ ಹಲಿನ ಪರದಲ್ಲಿರುವ ಸಂಪ್ರಸಾರಣಕ್ಕೆ ದೀರ್ಘ ಬರುತ್ತದೆ ಎಂಬುದರಿಂದ ಉಕಾರಕ್ಕೆ ದೀರ್ಘ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ಅಸ್ರಿಧಮ್**—ಸ್ರಿಧು ಶೋಷಣೇ ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ ಭಾವಾರ್ಥದಲ್ಲಿ **ಸಂಪದಾದಿಭ್ಯಃ ಕ್ವಿಪ್**—ಎಂಬುದರಿಂದ ಕ್ವಿಪ್‌ಪ್ರತ್ಯಯ. ಸ್ರಿಧ್‌ಶಬ್ದವಾಗುತ್ತದೆ. ನ ವಿದ್ಯತೇ ಸ್ರಿಧ್ ಯಸ್ಯ ಸ ಅಸ್ರಿಧ್ ತಮ್ ಅಸ್ರಿಧಮ್. ಬಹುವ್ರೀಹಿ ಸಮಾಸವಾದಾಗ **ನಞ್‌ಸುಭ್ಯಾಮ್**—ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅಶ್ವಿನಾ**—ಅಶ್ವಿನ್‌ಶಬ್ದ. ದ್ವಿತೀಯಾ ದ್ವಿವಚನ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಮಯಸ್ಕರತ್**—ಮಯಃ ಕರತ್. ಡುಕೃಞ್ ಕರಣೇ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ (ಉ) ಲುಕ್. ಪ್ರತ್ಯಯನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಧಾತುವಿನ ಇಕಿಗೆ ಗುಣ. ಮಯಃ+ಕರತ್ ಎಂದಿರುವಾಗ ಜಿಹ್ವಾಮೂಲೀಯವು ಪ್ರಾಪ್ತವಾದರೆ

ಅತಃಕೃಕಮಿಕಂಸ—(ಪಾ. ಸೂ. ೮-೩-೪೬) ಎಂಬುದರಿಂದ ಅಕಾರದ ಪರದಲ್ಲಿರುವುದರಿಂದ ವಿಸರ್ಗಕ್ಕೆ ಸತ್ವ ಮಯಸ್ಸರತ್ ಎಂಬಲ್ಲಿ ತಿಜಂತಕ್ಕೆ ತಿಙ್ಙತಿಙಃ–ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥

ಸಂಹಿತಾಪಾಠಃ

ತನ್ನೋ॒ ವಾತೋ॑ ಮಯೋ॒ಭು ವಾ॑ತು ಭೇ॒ಷಜಂ॒ ತನ್ಮಾ॒ತಾ ಪೃ॑ಥಿ॒ವೀ ತತ್ಪಿ॒ತಾ ದ್ಯೌಃ।

ತದ್ಗ್ರಾವಾ॑ಣಃ ಸೋಮ॒ಸುತೋ॑ ಮಯೋ॒ಭುವ॒ಸ್ತದ॑ಶ್ವಿನಾ ಶೃ-
ಣುತಂ ಧಿಷ್ಣ್ಯಾ ಯು॒ವಂ ॥ ೪ ॥

॥ ಪದಪಾಠಃ ॥

ತತ್ । ನಃ॒ । ವಾತಃ॑ । ಮ॒ಯಃ॒ऽಭು । ವಾ॑ತು । ಭೇ॒ಷ॒ಜಂ । ತತ್ । ಮಾ॒ತಾ ।
ಪೃ॒ಥಿ॒ವೀ । ತತ್ । ಪಿ॒ತಾ । ದ್ಯೌಃ ।

ತತ್ । ಗ್ರಾವಾ॑ಣಃ । ಸೋ॒ಮ॒ऽಸುತಃ॑ । ಮ॒ಯಃ॒ऽಭುವಃ॑ । ತತ್ । ಅ॒ಶ್ವಿ॒ನಾ॒ ।
ಶೃ॒ಣು॒ತಂ॒ । ಧಿ॒ಷ್ಣ್ಯಾ॒ । ಯು॒ವಂ ॥ ೪ ॥

ಸಾಯಣಭಾಷ್ಯಂ

ವಾತೋ ವಾಯುಸ್ತದ್ಭೇಷಜಮೌಷಧಂ ನೋಽಸ್ಮಾನ್ವಾತು । ಪ್ರಾಪಯತು । ಯದ್ಭೇಷಜಂ ಮಯೋಭು ಮಯಸಃ ಸುಖಸ್ಯ ಭಾವಯಿತೃ । ಮಾತಾ ಸರ್ವೇಷಾಂ ಜನನೀ ಪೃಥಿವೀ ಭೂಮಿರಪಿ ತದ್ಭೇಷಜಮಸ್ಮಾನ್ಪ್ರಾಪಯತು । ಪಿತಾ ವೃಷ್ಟಿಪ್ರದಾನೇನ ಸರ್ವೇಷಾಂ ರಕ್ಷಿತಾ ದ್ಯೌರ್ದ್ಯುಲೋಕೋಽಪಿ ತದ್ಭೇಷಜಮಸ್ಮಾನ್ಪ್ರಾಪಯತು । ಸೋಮಸುತಃ ಸೋಮಾಭಿಷವಂ ಕೃತವಂತೋ ಮಯೋಭುವೋ ಮಯಸೋ ಯಾಗಫಲಭೂತಸ್ಯ ಸುಖಸ್ಯ ಭಾವಯಿತಾರೋ ಗ್ರಾವಾಣೋಽಭಿಷವಸಾಧನಾಃ ಪಾಷಾಣಾಶ್ಚ ತದ್ಭೇಷಜಮಸ್ಮಾನ್ಪ್ರಾಪಯಂತು । ಹೇ ಧಿಷ್ಣ್ಯಾ । ಧಿಷಣಾ ಬುದ್ಧಿಃ । ತದರ್ಹಾವಶ್ವಿನೌ ಯುವಂ

**ಯುವಾಂ ತದ್ಭೇಷಜಂ ಶೃಣುತಂ । ಆಕರ್ಣಯತಂ । ಯದ್ಭೇಷಜಮಸ್ಮಾಭಿರ್ವಾಯ್ವಾದಿಷು ಪ್ರಾರ್ಥ್ಯತೇ। ತದ್ಭೇಷಜಂ ದೇವಾನಾಂ ಭಿಷಜೌ ಯುವಾಮಸ್ಮಾಕಮನುಕೂಲಂ ಯಥಾ ಭವತಿ ತಥಾ ಜಾನೀತಮಿತ್ಯರ್ಥಃ ॥ ಮಯೋಭು । ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ । ಪಾ.೧-೨-೪೭ । ಇತಿ ಹ್ರಸ್ವತ್ವಂ । ವಾತು । ವಾ ಗತಿಗಂಧನಯೋಃ । ಅಂತರ್ಭಾವಿತಣ್ಯರ್ಥಾತ್ಪ್ರಾರ್ಥನಾಯಾಂ ಲೋಟ್ । ಸೋಮಸುತಃ । ಸೋಮೇ ಸುಞಃ । ಪಾ. ೩-೨-೯೦ । ಇತಿ ಭೂತೇ ಕ್ವಿಪ್ । ಧಿಷ್ಣ್ಯಾ। ಧಿಷಣಾಶಬ್ದಾದರ್ಹಾರ್ಥೇ ಛಂದಸಿ ಚೇತಿ ಯಃ । ವರ್ಣಲೋಪಶ್ಛಾಂದಸಃ । ಸುಪಾಂ ಸುಲುಗಿತ್ಯಾಕಾರಃ ॥**

ಪ್ರತಿಪದಾರ್ಥ

**ವಾತಃ**—ವಾಯುವು। **ಮಯೋಭು**—ಸುಖದಾಯಕವಾದ। **ತತ್ ಭೇಷಜಂ**—ಆ ಔಷಧವನ್ನು। **ನಃ**—ನಮಗೆ । **ವಾತು**—ಸಾಗಿಸಿಕೊಂಡು ಬಂದು ಸೇರಿಸಲಿ । **ಮಾತಾ**—(ಸಕಲರಿಗೂ) ಜನನಿಯಾದ । **ಪೃಥಿವೀ**—ಭೂಮಿಯು । **ತತ್**—ಆ ಔಷಧವನ್ನು (ನಮಗೆ ಹೊಂದಿಸಲಿ) । **ಪಿತಾ**—(ಸಕಲರಿಗೂ) ರಕ್ಷಕನಾದ । **ದ್ಯೌಃ**—ದ್ಯುಲೋಕವೂ ಕೂಡ । **ತತ್**—ಆ ಔಷಧವನ್ನು(ನಮಗೆ ಹೊಂದಿಸಲಿ)। **ಸೋಮಸುತಃ**—ಸೋಮರಸವನ್ನು ಹಿಂಡವುವೂ । **ಮಯೋಭುವಃ**—ಸುಖದಾಯಕವಾದವೂ ಆದ। **ಗ್ರಾವಾಣಃ**—ಹಿಂಡುವ ಕಲ್ಲುಗಳು। **ತತ್**—ಆ ಔಷಧವನ್ನು (ನಮಗೆ ಹೊಂದಿಸಲಿ) । **ಧಿಷ್ಣ್ಯಾ**—ಧ್ಯಾನಕ್ಕೆ ಯೋಗ್ಯರಾದ ಅಶ್ವಿದೇವತೆಗಳೇ। **ಯುವಂ**—ನೀವೂ ಸಹ । **ಶೃಣುತಂ**—(ಆ ಔಷಧಿಗಾಗಿ ಮಾಡುವ ನಮ್ಮ ಪ್ರಾರ್ಥನೆಯನ್ನು) ಕೇಳಿರಿ. ॥

ಭಾವಾರ್ಥ

ವಾಯುವು ಸುಖದಾಯಕವಾದ ಆ ಔಷಧವನ್ನು ನಮಗೆ ಸಾಗಿಸಿಕೊಂಡು ಬಂದು ಸೇರಿಸಲಿ. ಸಕಲರಿಗೂ ಜನನಿಯಾದ ಭೂಮಿಯೂ, ರಕ್ಷಕವಾದ ದ್ಯುಲೋಕ, ಸುಖದಾಯಕವಾದ, ಸೋಮರಸವನ್ನು ಹಿಂಡುವ ಕಲ್ಲುಗಳೂ ಆ ಔಷಧವನ್ನು ನಮಗೆ ತಂದು ಸೇರಿಸಲಿ. ಧ್ಯಾನಕ್ಕೆ ಯೋಗ್ಯರಾದ ಅಶ್ವಿನೀದೇವತೆಗಳೇ, ನಿವೂ ಸಹ ಆ ಔಷಧಿಗಾಗಿ ಮಾಡುವ ನಮ್ಮ ಪ್ರಾರ್ಥನೆಯನ್ನು ಕೇಳಿರಿ.

English Translation

May the wind waft to us the grateful medicament ; may mother earth, may father heaven, convey it to us ; may the stones that express the Soma-juice and are productive of pleasure bring it to us ; Aswins, who are to be meditated upon hear our prayer.

ವಿಶೇಷ ವಿಷಯಗಳು

**ಮಯೋಭು—ಸುಖಸ್ಯ ಭಾವಯಿತೃ ।** ಸುಖವನ್ನುಂಟುಮಾಡುವ

**ತದ್ಭೇಷಜಂ**—ಆ ಔಷಧವನ್ನು ಎಂದರೆ, ಯಾವ ಔಷಧದಿಂದ ನಮಗೆ ಸುಖವುಂಟಾಗುವುದೋ ಆ ಔಷಧವನ್ನು. ಇಲ್ಲಿ ತಚ್ಛಬ್ದಮಾತ್ರ ವಿರುವುದರಿಂದ ಯತ್ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಭೇಷಜ

ಶಬ್ದಕ್ಕೆ ಭಾಷ್ಯಕಾರರು ಅರ್ಥವಿವರಣೆಯನ್ನು ಕೊಟ್ಟಿಲ್ಲ. ಭೇಷಜಂ ಎಂಬ ಶಬ್ದಕ್ಕೆ ಔಷಧವೆಂಬ ಅರ್ಥವಲ್ಲದೆ ಬೇರೆ ಬೇರೆ ಅರ್ಥಗಳನ್ನು ಹೇಳಬಹುದು.

**ಮಾತಾ ಪೃಥಿವೀ ಪಿತಾ ದ್ಯೌಃ**—ಪೃಥಿವಿಯನ್ನು ತಾಯಿಯೆಂದೂ, ದ್ಯೌ ಎಂದರೆ ಸ್ವರ್ಗವನ್ನು ತಂದೆಯೆಂದೂ ಕರೆಯುವ ಪದ್ಧತಿಯು ಋಗ್ವೇದದಲ್ಲಿ ವಿಶೇಷವಾಗಿರುವುದು. ಭೂಮಿಯು ಸಸ್ಯಾದಿಗಳನ್ನು ಉತ್ಪತ್ತಿ ಮಾಡುವುದರಿಂದಲೂ, ದ್ಯೌಃ (ಅಂತರಿಕ್ಷವು) ಮಳೆಯನ್ನು ಸುರಿಸುವುದರಿಂದಲೂ, ಇವರಿಬ್ಬರೂ ಪ್ರಪಂಚದಲ್ಲಿರುವ ಪ್ರಾಣಿಗಳನ್ನು ಪೋಷಿಸುವರೆಂದಭಿಪ್ರಾಯವು.

**ಗ್ರಾವಾಣಃ ಸೋಮಸುತಃ**—ಸೋಮಲತೆಯನ್ನು ಜಜ್ಜುವುದಕ್ಕಾಗಿ ಉಪಯೋಗಿಸುವ ಕಲ್ಲುಗಳು.

॥ ವ್ಯಾಕರಣಪ್ರಕ್ರಿಯಾ ॥

**ಮಯೋಭು**—ಮಯಸ್ ಭೂಃ ಮಯೋಭೂಃ ಭೂ ಸತ್ತಾಯಾಂ ಧಾತು. ಣಿಜಂತದ ಮೇಲೆ ಕ್ವಿಪ್ ಪ್ರತ್ಯಯ. **ಣೇರನಿಟಿ**-ಸೂತ್ರದಿಂದ ಣಿಲೋಪ. ಮಯೋಭೂ ಎಂದಿರುವಾಗ **ಹ್ರಸ್ವೋನಪುಂಸಕೇ ಪ್ರಾತಿಪದಿಕಸ್ಯ** (ಪಾ. ಸೂ. ೧-೨-೪೭) ಎಂಬುದರಿಂದ ನಪುಂಸಕದಲ್ಲಿ ಹ್ರಸ್ವ ಬರುತ್ತದೆ. ಇದಕ್ಕೆ ಸು ಪರವಾದಾಗ **ಸ್ವಮೋರ್ನಪುಂಸಕಾತ್**-ಎಂಬುದರಿಂದ ಸುವಿಗೆ ಲುಕ್. **ಗತಿಕಾರಕೋಪಪದಾತ್ ಕೃತ್**-ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಾತು**—ವಾ ಗತಿಗಂಧನಯೋಃ ಧಾತು. ಅದಾದಿ. ಣಿಜರ್ಥವು (ಪ್ರೇರಣಾ) ಧಾತ್ವರ್ಥಾಂತರ್ಭೂತವಾಗಿರುವಾಗ ಪ್ರಾರ್ಥನಾರೂಪ ಅರ್ಥದಲ್ಲಿ ಲೋಟ್. **ಏರುಃ**-ಎಂಬುದರಿಂದ ಪ್ರತ್ಯಯ ಇಕಾರಕ್ಕೆ ಉತ್ವ. **ಅದಿಪ್ರಭೃತಿಭ್ಯಃ ಶಪಃ**-ಎಂಬುದರಿಂದ ಶಪಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸೋಮಸುತಃ**—ಷುಞ್ ಅಭಿಷವೇ ಧಾತು. **ಧಾತ್ವಾದೇಃ ಷಃ ಸಃ**-ಎಂಬುದರಿಂದ ಆದಿಗೆ ಸತ್ವ. **ಸೋಮೇ ಸುಞಃ** (ಪಾ. ಸೂ. ೩-೨-೯೦) ಎಂಬುದರಿಂದ ಇದಕ್ಕೆ ಸೋಮಶಬ್ದ ಉಪಪದವಾಗಿರುವಾಗ ಭೂತಾರ್ಥದಲ್ಲಿ ಕ್ವಿಪ್. ಪಿತ್ ಪ್ರತ್ಯಯ ಪರದಲ್ಲಿರುವುದರಿಂದ **ಹ್ರಸ್ವಸ್ಯ ಪಿತಿ ಕೃತಿ ತುಕ್** ಎಂಬುದರಿಂದ ಧಾತುವಿನ ಉಕಾರಕ್ಕೆ ತುಗಾಗಮ. ಸೋಮಸುತ್ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಅಶ್ವಿನಾ**—ಪ್ರಥಮಾದ್ವಿವಚನಕ್ಕೆ **ಸುಪಾಂ ಸುಲುಕ್**-ಎಂಬುದರಿಂದ ಆಕಾರಾದೇಶ.

**ಶೃಣುತಮ್**—ಶ್ರು ಶ್ರವಣೇ ಧಾತು. ಲೋಟ್ ಮಧ್ಯಮಪುರುಷ ದ್ವಿವಚನಕ್ಕೆ **ತಸ್ ಥಸ್ ಥ**—ಸೂತ್ರದಿಂದ ತಮಾದೇಶ. **ಶ್ರುವಃ ಶೃ ಚ** (ಪಾ. ಸೂ. ೩-೧-೭೪) ಎಂಬುದರಿಂದ ಶ್ನುವಿಕರಣ. ಪ್ರಕೃತಿಗೆ ಶೃ ಆದೇಶ. **ಋವರ್ಣಾನ್ನಸ್ಯ ಣತ್ವಂ ವಾಚ್ಯಮ್**—ಎಂಬುದರಿಂದ ನಕಾರಕ್ಕೆ ಣತ್ವ. **ಸಾರ್ವಧಾತುಕಮಪಿತ್**—ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ ತನ್ನಿಮಿತ್ತವಾಗಿ ಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಧಿಷ್ಣ್ಯಾ**—ಧಿಷಣಾಶಬ್ದ. ಇದಕ್ಕೆ ಅರ್ಹಾರ್ಥದಲ್ಲಿ **ಛಂದಸಿ ಚ** (ಪಾ. ಸೂ. ೫-೧-೬೭) ಎಂಬುದರಿಂದ ಯಪ್ರತ್ಯಯ. ಛಾಂದಸವಾಗಿ ಷಕಾರೋತ್ತರಾಕಾರ ಲೋಪವಾಗುತ್ತದೆ. ಸಂಬೋಧನೆ ಪ್ರಥಮಾದ್ವಿವಚನಕ್ಕೆ **ಸುಪಾಂ ಸುಲುಕ್**—ಎಂಬುದರಿಂದ ಆಕಾರಾದೇಶ. **ಆಮಂತ್ರಿತಸ್ಯ ಚ**—ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಯುವಮ್**—ಯುಷ್ಮಚ್ಛಬ್ದ. ಇದಕ್ಕೆ ಪ್ರಥಮಾದ್ವಿವಚನ ಪರವಾದಾಗ **ಙೇಪ್ರಥಮಯೋರಮ್**—ಎಂಬುದರಿಂದ ಅಮಾದೇಶ. **ಯುವಾವೌದ್ವಿವಚನೇ**—ಸೂತ್ರದಿಂದ ಪ್ರಕೃತಿಯ ಮಪರ್ಯಂತಕ್ಕೆ ಯುವಾದೇಶ. **ಪ್ರಥಮಾಯಾಶ್ಚ ದ್ವಿ**—(ಪಾ. ಸೂ. ೭-೨-೮೮) ಎಂಬಲ್ಲಿ ಭಾಷಾಯಾಂ ಎಂಬುದರಿಂದ ಛಂದಸಿನಲ್ಲಿ ಆತ್ವ ಬರುವುದಿಲ್ಲ. **ಶೇಷೇ ಲೋಪಃ**-ಎಂಬುದರಿಂದ ಮಪರ್ಯಂತದ ಪರಕ್ಕೆ ಲೋಪ. ॥ ೪ ॥

॥ ಸಂಹಿತಾಪಾಠಃ ॥

ತಮೀಶಾನಂ ಜಗತಸ್ತಸ್ಥುಷಸ್ಪತಿಂ ಧಿಯಂಜಿನ್ವಮವಸೇ ಹೂಮಹೇ ವಯಂ ।
ಪೂಷಾ ನೋ ಯಥಾ ವೇದಸಾಮಸದ್ವೃಧೇ ರಕ್ಷಿತಾ ಪಾಯುರದಬ್ಧಃ ಸ್ವಸ್ತಯೇ ॥ ೫ ॥

ಪದಪಾಠಃ

ತಂ । ಈಶಾನಂ । ಜಗತಃ । ತಸ್ಥುಷಃ । ಪತಿಂ । ಧಿಯಂ ऽ ಜಿನ್ವಂ । ಅವಸೇ । ಹೂಮಹೇ । ವಯಂ ।
ಪೂಷಾ । ನಃ । ಯಥಾ । ವೇದಸಾಂ । ಅಸತ್ । ವೃಧೇ । ರಕ್ಷಿತಾ । ಪಾಯುಃ । ಅದಬ್ಧಃ । ಸ್ವಸ್ತಯೇ ॥ ೫ ॥

ಸಾಯಣಭಾಷ್ಯಂ

ಪೂರ್ವಾರ್ಧೇನೇಂದ್ರಃ ಸ್ತೂಯತೇ । ಅಪರಾರ್ಧೇನ ಪೂಷಾ । ಈಶಾನಮೈಶ್ವರ್ಯವಂತಂ ಅತ ಏವ ಜಗತೋ ಜಂಗಮಸ್ಯ ಪ್ರಾಣಿಜಾತಸ್ಯ ತಸ್ಥುಷಃ ಸ್ಥಾವರಸ್ಯ ಚ ಪತಿಂ ಸ್ವಾಮಿನಂ ಧಿಯಂಜಿನ್ವಂ ಧೀಭಿಃ ಕರ್ಮಭಿಃ ಪ್ರೀಣಯಿತವ್ಯಂ ಏವಂಭೂತಂ ತಮಿಂದ್ರಮವಸೇ ರಕ್ಷಣಾಯ ವಯಂ ಹೂಮಹೇ । ಆಹ್ವಯಾಮಃ । ಪೂಷಾ ನೋಽಸ್ಮಾಕಂ ವೇದಸಾಂ ಧನಾನಾಂ ವೃಧೇ ವರ್ಧನಾಯ ರಕ್ಷಿತಾ ಯಥಾಸತ್ ಯೇನ ಪ್ರಕಾರೇಣ ಭವತಿ ತೇನೈವ ಪ್ರಕಾರೇಣಾದಬ್ಧಃ ಕೇನಾಪ್ಯಹಿಂಸಿತಃ ಪೂಷಾ ಸ್ವಸ್ತಯೇಽಸ್ಮಾಕಮವಿನಾಶಾಯ ಪಾಯುಃ ರಕ್ಷಿತಾ ಭವತು ॥ ತಸ್ಥುಷಃ । ತಿಷ್ಠತೇರ್ಲಿಟಃ ಕ್ವಸುಃ । ಷಷ್ಠ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಷಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸತ್ವಂ । ಧಿಯಂಜಿನ್ವಂ । ಜಿವಿಃ ಪ್ರೀಣನಾರ್ಥಃ । ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾತ್ಖಚ್ । ಇಚ ಏಕಾಚೋಽಮ್ ಪ್ರತ್ಯಯವಚ್ಚ । ಪಾ. ೬-೩-೬೮ । ಇತ್ಯಮಾಗಮಃ । ಅಸತ್ । ಅಸ ಭುವಿ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪೋ ಲುಗಭಾವಃ । ಪಾಯುಃ । ಪಾ ರಕ್ಷಣೇ । ಕೃವಾಪಾಜೀತ್ಯುಣ್ । ಸ್ವಸ್ತಯೇ । ಸುಪೂರ್ವಾದಸ್ತೇರ್ಭಾವೇ ಕ್ತಿನ್ ಛಂದಸ್ಯುಭಯಥೇತಿ ತಸ್ಯ ಸಾರ್ವಧಾತುಕತ್ವಾದಸ್ತೇರ್ಭೂಃ । ಪಾ. ೨-೪-೫೨ । ಇತಿ ಭೂಭಾವಾಭಾವ ಇತಿ ವೃತ್ತಾವುಕ್ತಂ ॥

॥ ಪ್ರತಿಪದಾರ್ಥ ॥

**ಈಶಾನಂ**—ಐಶ್ವರ್ಯವಂತನೂ (ಆದ್ದರಿಂದಲೇ) । **ಜಗತಃ**—ಸಂಚರಿಸುವ ಪ್ರಾಣಿಗಳಿಗೂ । **ತಸ್ಥುಷಃ**—ಸ್ಥಾವರಜಗತ್ತಿಗೂ । **ಪತಿಂ**—ಒಡೆಯನೂ । **ಧಿಯಂಜಿನ್ವಂ**—ಶ್ರೇಷ್ಠವಾದ ಕರ್ಮಗಳಿಂದ ತೃಪ್ತಿಗೊಳಿಸಲ್ಪಡುವವನೂ ಆದ । **ತಂ**—ಆ ಇಂದ್ರನನ್ನು । **ಅವಸೇ**—ರಕ್ಷಣೆಗಾಗಿ । **ವಯಂ**—ನಾವು । **ಹೂಮಹೇ**—ಪ್ರಾರ್ಥಿಸಿ ಕರೆಯುತ್ತೇವೆ. । **ಪೂಷಾ**—ಪೂಷದೇವನು । **ನಃ**—ನಮ್ಮ । **ವೇದಸಾಂ**—ಧನಗಳ । **ವೃಧೇ**—ಅಭಿವೃದ್ಧಿಗಾಗಿ । **ರಕ್ಷಿತಾ**—ರಕ್ಷಕನಾಗಿ । **ಯಥಾ ಅಸತ್**—ಯಾವಪ್ರಕಾರವಾಗಿ ಆಗಿರುವನೋ, (ಹಾಗೆಯೇ) । **ಅದಬ್ಧಃ**—(ಯಾರಿಂದಲೂ) ಹಿಂಸಿಸಲ್ಪಡದಿರುವವನಾಗಿ । **ಸ್ವಸ್ತಯೇ**—ನಮ್ಮ ಮಂಗಳಕ್ಕಾಗಿ । **ಪಾಯುಃ**—(ನಮ್ಮ) ರಕ್ಷಕನಾಗಲಿ. ।

॥ ಭಾವಾರ್ಥ ॥

ಐಶ್ವರ್ಯವಂತನೂ, ಸಕಲಸ್ಥಾವರಜಂಗಮಜಗತ್ತಿಗೆಲ್ಲ ಒಡೆಯನೂ ಮತ್ತು ಶ್ರೇಷ್ಠವಾದ ಕರ್ಮಗಳಿಂದ ತೃಪ್ತಿಗೊಳಿಸಲ್ಪಡುವವನೂ ಆದ ಆ ಇಂದ್ರನನ್ನು ನಾವು ರಕ್ಷಣೆಗಾಗಿ ಪ್ರಾರ್ಥಿಸಿ ಕರೆಯುತ್ತೇವೆ. ಪೂಷದೇವನು ನಮ್ಮ ಧನಗಳ ಅಭಿವೃದ್ಧಿಗಾಗಿ ಯಾವ ಪ್ರಕಾರದಲ್ಲಿ ರಕ್ಷಕನಾಗಿರುವನೋ, ಹಾಗೆಯೇ ಯಾರಿಂದಲೂ ಹಿಂಸಿಸಲ್ಪಡದಿರುವವನಾಗಿ ನಮ್ಮ ಮಂಗಳಕ್ಕಾಗಿ ನಮ್ಮ ರಕ್ಷಕನಾಗಲಿ.

## English Translation

We invoke that lord of living beings, that protector of things immovable, Indra, who is to be propitiated by pious rites for our protection ;

as Pushan has ever been our defender for the increase of our riches, so he may continue to be the unmolested gaurdian of our welfare.

ವಿಶೇಷವಿಷಯಗಳು

ಈ ಋಕ್ಕಿನ ಪೂರ್ವಾರ್ಧದಲ್ಲಿ ಇಂದ್ರನೂ ಉತ್ತರಾರ್ಧದಲ್ಲಿ ಪೂಷನೂ ಸ್ತುತಿಸಲ್ಪಟ್ಟಿರುವರು.

**ಜಗತಃ ತಸ್ಥುಷಃ ಪತಿಂ—ಜಗತಃ ಜಂಗಮಸ್ಯ ಪ್ರಾಣಿಜಾತಸ್ಯ । ತಸ್ಥುಷಃ ಸ್ಥಾವರಸ್ಯ ।** ಚಲಿಸುವ ಪ್ರಾಣಿವರ್ಗಗಳ, ಚಲಿಸದಿರುವ ವೃಕ್ಷಪರ್ವತಾದಿಗಳ ಸ್ವಾಮಿಯು.

**ಈಶಾನಂ—ಈಶ ಐಶ್ವರ್ಯೇ ।** ಐಶ್ವರ್ಯವಂತನಾದ ಇಂದ್ರನನ್ನು.

**ವೇದಸಾಂ**—ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ವೇದಸ್ ಶಬ್ದವು ಪಠಿತವಾಗಿರುವುದರಿಂದ ವೇದಸಾಂ ಎಂದರೆ ಧನಗಳ ಎಂದರ್ಥವು. (ನಿ. ೩-೯)

**ಧಿಯಂಜಿನ್ವಂ—ಧೀಶಬ್ದಃ ಕರ್ಮವಾಚಕಃ । ಜಿವಿಃ ಪ್ರೀಣನಾರ್ಥಃ । ಕರ್ಮಭಿಃ ಪ್ರೀಣಯಿತವ್ಯಃ ।** ಯಜ್ಞಾದಿಕರ್ಮಗಳಿಂದ ತೃಪ್ತಿಪಡಿಸಲರ್ಹನಾದ.

**ಪಾಯುಃ—ಪಾ ರಕ್ಷಣೇ । ರಕ್ಷಿತಾ ।** ರಕ್ಷಿಸುವವನು, ಕಾಪಾಡುವವನು.

**ಸ್ವಸ್ತಯೇ— ಅವಿನಾಶಾಯ ।** ನಾಶವಿಲ್ಲದಿರುವುದಕ್ಕಾಗಿ, ಮಂಗಳಕ್ಕಾಗಿ, ಒಳ್ಳೆಯದನ್ನು ಅಥವಾ ಶುಭವನ್ನುಂಟುಮಾಡುವುದಕ್ಕಾಗಿ, for our welfare.

ವ್ಯಾಕರಣಪ್ರಕ್ರಿಯಾ

**ತಸ್ಥುಷಃ**—ಷ್ಠಾ ಗತಿನಿವೃತ್ತೌ ಧಾತು. ಇದಕ್ಕೆ ಲಿಟ್‌ಪರವಾದಾಗ ಅದಕ್ಕೆ **ಕ್ವಸುಶ್ಚ**-ಎಂಬುದರಿಂದ ಕ್ವಸುರಾದೇಶ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಶರ್ಪೂರ್ವಾಃ ಖಯಃ**-ಎಂಬುದರಿಂದ ಅಭ್ಯಾಸದಲ್ಲಿ ಥಕಾರಕ್ಕೆ ಶೇಷ. **ಅಭ್ಯಾಸೇ ಚರ್ಚ**-ಸೂತ್ರದಿಂದ ಅದಕ್ಕೆ ತಕಾರಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ವಕಾರಕ್ಕೆ ಇಡಾಗಮ. **ಆತೋಲೋಪಇಟಿಚ**— (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ತಸ್ಥಿವಸ್ ಶಬ್ದವಾಗುತ್ತದೆ. ಇದಕ್ಕೆ ಷಷ್ಠೀ ಏಕವಚನಪರವಾಗ **ವಸೋಃಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ**-ಎಂಬುದರಿಂದ ಪೂರ್ವರೂಪ. **ಅಕೃತವ್ಯೂಹಾಃ ಪಾಣಿನೀಯಾಃ**—ಎಂಬುದರಿಂದ ಸಂಪ್ರಸಾರಣದಿಂದ ಇಡಾಗಮಕ್ಕೆ ನಿಮಿತ್ತವಾದ ವಕಾರವು ಸಂಪ್ರಸಾರಣದಿಂದ ಅಪಹಾರವಾಗುವುದರಿಂದ ಇಡಾಗಮ ಬರುವುದಿಲ್ಲ. **ಶಾಸಿವಸಿಘಸೀನಾಂಚ** (ಪಾ. ಸೂ. ೮-೩-೬೦)-ಎಂಬುದರಿಂದ ವಸಿನ ಸಕಾರಕ್ಕೆ ಷತ್ವ. ತಸ್ಥುಷಸ್ ಎಂದಿರುವಾಗ **ಖರವಸಾನಯೋಃ ವಿಸರ್ಜನೀಯಃ**-ಎಂಬುದರಿಂದ ಸಕಾರಕ್ಕೆ ರುತ್ವಬಂದಾಗ ವಿಸರ್ಗ. **ತಸ್ಥುಷಃ+ಪತಿಂ** ಎಂದಿರುವಾಗ **ಷಷ್ಠ್ಯಾಃ ಪತಿಪುತ್ರ** (ಪಾ. ಸೂ. ೮-೩-೫೩) ಎಂಬುದರಿಂದ ಪತಿಶಬ್ದ ಪರವಲ್ಲಿರುವುದರಿಂದ ವಿಸರ್ಗಕ್ಕೆ ಸತ್ವ.

**ಧಿಯಂಜಿನ್ವಮ್**—ಜಿವಿ ಧಾತುವು ಪ್ರೀಣನಾರ್ಥದಲ್ಲಿದೆ. **ಕೃತ್ಯಲ್ಯುಟೋ ಬಹುಲಮ್** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲಗ್ರಹಣವಾಡಿರುವುದರಿಂದ ಇದಕ್ಕೆ ಖಚ್‌ಪ್ರತ್ಯಯ. **ಇದಿತೋ ನುಮ್**

ಧಾತ್ವೋಃ—ಎಂಬುದರಿಂದ ಧಾತುವಿಗೆ ನುಮಾಗಮ. **ಇಚ ಏಕಾಚೋಽಮ್ ಅಮ್‌ಪ್ರತ್ಯಯವಚ್ಚ** (ಪಾ. ಸೂ. ೬-೩-೬೮) ಪಿತ್ ಪ್ರತ್ಯಯಾಂತವು ಪರದಲ್ಲಿರುವಾಗ ಇಚಂತವಾದ ಏಕಾಚಾದಪೂರ್ವಪದಕ್ಕೆ ಅಮ್ ಬರುತ್ತದೆ. ಅದು ವಿಭಕ್ತಿಘಟಕವಾದ ಅಮಿನಂತೆಯೇ ಆಗುತ್ತದೆ ಎಂಬುದರಿಂದ ಧೀಶಬ್ದಕ್ಕೆ ಅಮ್ ಬರುತ್ತದೆ. ವಿಭಕ್ತಿಭಾವ ಹೇಳಿರುವುದರಿಂದ **ಅಚಿಶ್ನುಧಾತುಭ್ರುವಾಂ**—ಎಂಬುದರಿಂದ ಈಕಾರಕ್ಕೆ ಇಯಜಾದೇಶ ಬರುತ್ತದೆ. ಧಿಯಂಜಿನ್ವ ಶಬ್ದವು **ಚಿತಃ**—ಎಂಬುದರಿಂದ ಅಂತೋದಾತ್ತವಾಗುತ್ತದೆ.

**ಅವಸೇ**—ಅವ ರಕ್ಷಣೇ ಧಾತು. ಅಸುನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತವಾಗುತ್ತದೆ. ಚತುರ್ಥೀಏಕವಚನರೂಪ.

**ಹೂಮಹೇ**—ಮೂರನೇಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಅಸತ್**—ಅಸ ಭುವಿ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ-ಲೋಪಃ**—ಸೂತ್ರದಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** ಎಂಬುದರಿಂದ ಅಡಾಗಮ. **ಬಹುಲಂ-—ಛಂದಸಿ** ಸೂತ್ರದಿಂದ ಶಪಿಗೆ ಲುಕ್ ಬರುವುದಿಲ್ಲ. ಆದುದರಿಂದ ಅಸಿನ ಅಕಾರಕ್ಕೆ ಲೋಪ ಬರುವುದಿಲ್ಲ. **ನಿಪಾತೈರ್ಯದ್ಯದಿ**—ಎಂಬುದರಿಂದ ನಿಘಾತನಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ವೃಧೇ**—ವೃಧು ವೃದ್ಧೌ ಧಾತು. ಕ್ವಿಪ್ ಪ್ರತ್ಯಯ. ವೃಧ್ ಶಬ್ದವಾಗುತ್ತದೆ. ಚತುರ್ಥೀಏಕವಚನಾಂತರೂಪ.

**ಪಾಯುಃ**—ಪಾ ರಕ್ಷಣೇ ಧಾತು. **ಕೃವಾಪಾಜಿ** (ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. **ಆತೋ ಯುಕ್ ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಆಕಾರಕ್ಕೆ ಯುಕಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸ್ವಸ್ತಯೇ**—ಅಸ ಭುವಿ ಧಾತು. ಸುಪೂರ್ವನಾಗಿರುವಾಗ ಇದಕ್ಕೆ ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯ ಬಂದ್ಯಪಿ ಕ್ತಿನ್ ಆರ್ಧಧಾತುಕವಾದುದರಿಂದ ಧಾತುವಿಗೆ ಭೂಭಾವ ಬರಬೇಕಾಗುತ್ತದೆ. ಆದರೆ **ಛಂದಸ್ಯುಭಯಥಾ** ಎಂಬುದರಿಂದ ಅದಕ್ಕೆ ಸಾರ್ವಧಾತುಕತ್ವವು ಬರುವುದರಿಂದ **ಅಸ್ತೇರ್ಭೂಃ** (ಪಾ. ಸೂ. ೨-೪-೫೨) ಎಂಬುದರಿಂದ ಭೂಭಾವ ಬರುವುದಿಲ್ಲ. ಇದೇ ಸಮಾಧಾನವನ್ನು ವೃತ್ತಿಕಾರರೂ ಹೇಳಿರುತ್ತಾರೆ. ‖ ೫ ‖



‖ ಸಂಹಿತಾಪಾಠಃ ‖

ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ ಸ್ವಸ್ತಿ ನಃ ಪೂಷಾ ವಿಶ್ವ-

ವೇದಾಃ ।

ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ ಸ್ವಸ್ತಿ ನೋ ಬೃಹಸ್ಪತಿ-
ರ್ದಧಾತು ॥ ೬ ॥

॥ ಪದಪಾಠಃ ॥

ಸ್ವಸ್ತಿ । ನಃ । ಇಂದ್ರಃ । ವೃದ್ಧಽಶ್ರವಾಃ । ಸ್ವಸ್ತಿ । ನಃ । ಪೂಷಾ । ವಿಶ್ವಽವೇದಾಃ ।
ಸ್ವಸ್ತಿ । ನಃ । ತಾರ್ಕ್ಷ್ಯಃ । ಅರಿಷ್ಟಽನೇಮಿಃ । ಸ್ವಸ್ತಿ । ನಃ । ಬೃಹಸ್ಪತಿಃ । ದಧಾತು ॥

ಸಾಯಣಭಾಷ್ಯಂ

ವೃದ್ಧಶ್ರವಾ ವೃದ್ಧಂ ಪ್ರಭೂತಂ ಶ್ರವಃ ಶ್ರವಣಂ ಸ್ತೋತ್ರಂ ಹವಿರ್ಲಕ್ಷಣಮನ್ನಂ ವಾ ಯಸ್ಯ ತಾದೃಶ ಇಂದ್ರೋ ನೋಽಸ್ಮಾಕಂ । ಸ್ವಸ್ತೀತ್ಯವಿನಾಶನಾಮ । ನಿ. ೩-೨೧ । ಸ್ವಸ್ತ್ಯವಿನಾಶಂ ದಧಾತು । ವಿದಧಾತು । ಕರೋತು । ವಿಶ್ವವೇದಾಃ । ವಿಶ್ವಾನಿ ವೇತ್ತೀತಿ ವಿಶ್ವವೇದಾಃ । ಯದ್ವಾ । ವಿಶ್ವಾನಿ ಸರ್ವಾಣಿ ವೇದಾಂಸಿ ಜ್ಞಾನಾನಿ ಧನಾನಿ ವಾ ಯಸ್ಯ । ತಾದೃಶಃ ಪೂಷಾ ಪೋಷಕೋ ದೇವೋ ನೋಽಸ್ಮಾಕಂ ಸ್ವಸ್ತಿ ವಿದಧಾತು । ಅರಿಷ್ಟನೇಮಿಃ । ನೇಮಿರಿತ್ಯಾಯುಧನಾಮ । ಅರಿಷ್ಟೋಽಹಿಂಸಿತೋ ನೇಮಿರ್ಯಸ್ಯ । ಯದ್ವಾ । ರಥಚಕ್ರಸ್ಯ ಧಾರಾ ನೇಮಿಃ । ಯತ್ಸಂಬಂಧಿನೋ ರಥಸ್ಯ ನೇಮಿರ್ನ ಹಿಂಸ್ಯತೇ ಸೋಽರಿಷ್ಟನೇಮಿಃ । ಏವಂಭೂತಸ್ತಾರ್ಕ್ಷ್ಯಸ್ತೃಕ್ಷಸ್ಯ ಪುತ್ರೋ ಗರುತ್ಮಾನ್ ನೋಽಸ್ಮಾಕಂ ಸ್ವಸ್ತ್ಯವಿನಾಶಂ ವಿದಧಾತು । ತಥಾ ಬೃಹಸ್ಪತಿರ್ಬೃಹತಾಂ ದೇವಾನಾಂ ಪಾಲಯಿತಾ ನೋಽಸ್ಮಾಕಂ ಸ್ವಸ್ತ್ಯವಿನಾಶಂ ವಿದಧಾತು ॥ ವೃದ್ಧಶ್ರವಾಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವಿಶ್ವವೇದಾಃ । ವಿದ ಜ್ಞಾನೇ । ವಿದ್ಲೃ ಲಾಭೇ ಆಭ್ಯಾಮಸುನ್ಪ್ರತ್ಯಯಾಂತೋ ವೇದಶಬ್ದಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ತಾರ್ಕ್ಷ್ಯಃ । ತೃಕ್ಷಸ್ಯಾಪತ್ಯಂ । ಗರ್ಗಾದಿಭ್ಯೋ ಯಞ್ । ಪಾ. ೪-೧-೧೦೫ । ಞಿತ್ತ್ವಾದಾದ್ಯುದಾತ್ತತ್ವಂ । ಅರಿಷ್ಟನೇಮಿಃ । ನ ರಿಷ್ಟಾಽರಿಷ್ಟಾ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅರಿಷ್ಟಾ ನೇಮಿರ್ಯಸ್ಯ ಸ ತಥೋಕ್ತಃ ಬೃಹಸ್ಪತಿಃ । ತದ್ಬೃಹತೋಃ ಕರಪತ್ಯೋಃ । ಪಾ. ೬-೧-೧೫೭ । ಇತಿ ಸುಟ್ತಲೋಪೌ । ಉಭೇವನಸ್ಪತ್ಯಾದಿಷ್ವಿತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ

॥ ಪ್ರತಿಪದಾರ್ಥ ॥

ವೃದ್ಧಶ್ರವಾಃ— ಪ್ರಭೂತವಾದ ಸ್ತೋತ್ರವುಳ್ಳ ಅಥವಾ ಹವಿಸ್ಸಿನರೂಪದ ಅನ್ನವುಳ್ಳ । ಇಂದ್ರಃ— ಇಂದ್ರನು । ನಃ— ನಮಗೆ । ಸ್ವಸ್ತಿ— ನಾಶರಹಿತವಾದ ಮಂಗಳವನ್ನು । ದಧಾತು— ಉಂಟುಮಾಡಲಿ । ವಿಶ್ವವೇದಾಃ— ಸಕಲವನ್ನೂ ತಿಳಿಯುವ ಅಥವಾ ಸಕಲವಾದ ಜ್ಞಾನವನ್ನೂ ಹೊಂದಿರುವ । ಪೂಷಾ— ಪೂಷದೇವನು । ನಃ— ನಮಗೆ । ಸ್ವಸ್ತಿ— ಮಂಗಳವನ್ನು ( ಉಂಟುಮಾಡಲಿ) । ಅರಿಷ್ಟನೇಮಿಃ — ಅಕುಂಠಿತವಾದ ಆಯುಧವುಳ್ಳ ಅಥವಾ ಸವೆಯದಿರುವ ರಥಚಕ್ರವುಳ್ಳ । ತಾರ್ಕ್ಷ್ಯಃ— ತಾರ್ಕ್ಷ್ಯನು (ಗುರುತ್ಮಂತನು)

ನಃ— ನಮಗೆ। **ಸ್ವಸ್ತಿ**— ಮಂಗಳವನ್ನು (ಉಂಟುಮಾಡಲಿ) । **ಬೃಹಸ್ಪತಿಃ**—ದೇವತೆಗಳ ಪಾಲಕನಾದ ಬೃಹಸ್ಪತಿಯು । **ನಃ**—ನಮಗೆ । **ಸ್ವಸ್ತಿ**— ಮಂಗಳವನ್ನುಂಟುಮಾಡಲಿ.

ಭಾವಾರ್ಥ

ಪ್ರಭೂತವಾದ ಹವಿಸ್ಸಿನ ರೂಪದ ಅನ್ನವುಳ್ಳ ಇಂದ್ರನೂ, ಸಕಲವನ್ನೂ ತಿಳಿಯುವ ಶಕ್ತಿಯುಳ್ಳ ಪೂಷನೂ, ಅಕುಂಠಿತವಾದ ಆಯುಧವುಳ್ಳ ಗರುತ್ಮಂತನೂ ಮತ್ತು ದೇವತೆಗಳ ಪಾಲಕನಾದ ಬೃಹಸ್ಪತಿಯೂ ನಮಗೆ ನಾಶರಹಿತವಾದ ಮಂಗಳವನ್ನುಂಟುಮಾಡಲಿ.

## English Translation

May Indra, who listens to much praise gaurd our welfare ; may Pushan who knows all things gaurd our welfare ; may Tarkshya with uninjured fellies, and Brihaspati the protector of gods (lord of prayer) gaurd our welfare.

॥ ವಿಶೇಷವಿಷಯಗಳು ॥

**ವೃದ್ಧಶ್ರವಾಃ—ವೃದ್ಧಂ ಪ್ರಭೂತಂ ಶ್ರವಃ ಶ್ರವಣಂ ಸ್ತೋತ್ರಂ ಹವಿರ್ಲಕ್ಷಣಮನ್ನಂ ವಾ ಯಸ್ಯ ।** ನಾವು ಮಾಡುವ ಅನೇಕ ಸ್ತೋತ್ರಗಳನ್ನು ಕೇಳುವ ಅಥವಾ ನಾವು ಅರ್ಪಿಸುವ ಹವಿರ್ಲಕ್ಷಣರೂಪವಾದ ಅನ್ನವನ್ನು ಸ್ವೀಕರಿಸುವ.

**ವಿಶ್ವವೇದಾಃ—ವಿಶ್ವಾನಿ ವೇತ್ತೀತಿ ವಿಶ್ವವೇದಾಃ ।** ಸಮಸ್ತವನ್ನೂ ತಿಳಿದವನು.

**ಪೂಷಾ**—ಪೂಷನೆಂಬ ದೇವತೆಯು ಮಾರ್ಗಪ್ರದರ್ಶಕನಾದ ಓರ್ವ ದೇವತೆಯು. ಪೂಷನು ತಮಗೆ ಸರಿಯಾದ ದಾರಿಯನ್ನು ತೋರಿಸಬೇಕೆಂದು ಅನೇಕ ಋಕ್ಕುಗಳಲ್ಲಿ ಪ್ರಾರ್ಥಿಸಲ್ಪಟ್ಟಿರುವನು. ಪೂಷನ್ ಎಂಬುದು ದ್ವಾದಶಾದಿತ್ಯರ ಹೆಸರುಗಳಲ್ಲಿ ಒಂದಾಗಿರುವುದರಿಂದ ಸೂರ್ಯನೆಂದೂ ಅರ್ಥವಾಗುವುದು.

**ತಾರ್ಕ್ಷ್ಯಃ**—ತೃಕ್ಷನ ಪುತ್ರನು. ಭಾಷ್ಯಕಾರರು ಗರುತ್ಮಾನ್-ಗರುಡನು ಎಂದು ಅರ್ಥವನ್ನು ಹೇಳಿರುವರು. ಈ ಶಬ್ದವೂ ಆದಿತ್ಯನನ್ನೇ ಸೂಚಿಸುವುದು. ತೃಕ್ಷನೆಂದರೆ ಕಶ್ಯಪನೆಂದು ಕೆಲವರು ಹೇಳುವರು. ಅವನ ಪುತ್ರನಾದುದರಿಂದ ಆದಿತ್ಯನೇ ತಾರ್ಕ್ಷ್ಯನೆಂದು ಕರೆಯಲ್ಪಡುವನು. ತಾರ್ಕ್ಷ್ಯವೆಂದರೆ ದೇವಲೋಕದ ಕುದುರೆಯೆಂದೂ, ಸೂರ್ಯನೇ ಈ ರೂಪದಿಂದ ಸ್ತುತಿಸಲ್ಪಡುವನೆಂದೂ ಕೆಲವರು ಅಭಿಪ್ರಾಯಪಡುವರು. ಮತ್ತೆ ಕೆಲವರು ತ್ರಸದಸ್ಯು ಎಂಬವನ ವಂಶಸ್ಥನಾದ ತೃಕ್ಷಿ ಎಂಬವನ ಪುತ್ರನೆಂದೂ ಹೇಳುವರು. ಖಿಲಮಂತ್ರಗಳಲ್ಲಿಯೂ (೨-೪-೧) ಆಶ್ವಲಾಯನ ಶ್ರೌತಸೂತ್ರದಲ್ಲಿಯೂ (ಆ. ೧೦-೭) ತಾರ್ಕ್ಷ್ಯ ಎಂಬ ಶಬ್ದಕ್ಕೆ ಪಕ್ಷಿಶ್ರೇಷ್ಠವು, ಪಕ್ಷಿವಿಶೇಷವು ಎಂಬ ಅರ್ಥವು ಸೂಚಿತವಾಗಿರುವುದು. ಈ ಶಬ್ದದ ಅರ್ಥವು ಸಂದಿಗ್ಧವಾಗಿಯೇ ಇದೆ. ಋ.ಸಂ. ೧೦-೧೭೮ ನೇ ಸೂಕ್ತವು ತಾರ್ಕ್ಷ್ಯ ದೇವತಾಕವಾಗಿದೆ.

**ಅರಿಷ್ಟನೇಮಿಃ—ರಥಚಕ್ರಸ್ಯಧಾರಾ ನೇಮಿಃ । ಅರಿಷ್ಟೋಽಹಿಂಸತೋ ನೇಮಿರ್ಯಸ್ಯ । ಯತ್ಸಂಬಂಧಿನೋ ರಥಸ್ಯ ನೇಮಿರ್ನ ಹಿಂಸ್ಯತೇ ಸೋಽರಿಷ್ಟನೇಮಿಃ ॥** ನೇಮಿಃ ಎಂದರೆ ರಥಚಕ್ರವು. ಹಿಂಸಿಸಲ್ಪಡ

ದಿರುವ ಎಂದರೆ ತಡೆಯಿಲ್ಲದ, ಅಪ್ರತಿಹತವಾದ ಗಮನವುಳ್ಳ ರಥಚಕ್ರಗಳುಳ್ಳವನು ಎಂದಭಿಪ್ರಾಯವು. ಸ್ಕಂದ ಸ್ವಾಮಿಯು ನೇಮಿ ಶಬ್ದಕ್ಕೆ ವಜ್ರಾಯುಧವೆಂದು ಅರ್ಥಮಾಡಿರುವರು. ಅರಿಷ್ಟನೇಮಿ ಎಂಬುವುದು ತೃಕ್ಷನ ಮಗನಾದ ಒಬ್ಬ ಋಷಿಯ ಹೆಸರಿರಬಹುದು. ( ಋ. ಸಂ. ೧೦-೧೭೮ ).

ಬೃಹಸ್ಪತಿಃ—ಸ್ತೋತ್ರಗಳಿಗೆ ಅಧಿಪತಿಯಾದ ದೇವತೆಯು ಅಥವಾ ದೇವತೆಗಳ ಪಾಲಕನು.

ವ್ಯಾಕರಣಪ್ರಕ್ರಿಯಾ

**ವೃದ್ಧಶ್ರವಾಃ**—ವೃದ್ಧಂ ಶ್ರವಃ ಯಸ್ಯ ಸಃ ವೃದ್ಧಶ್ರವಾಃ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**—ಎಂಬುದರಿಂದ ಸಮಾಸಸ್ವರವು ಬಾಧಿತವಾಗಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಿಶ್ವವೇದಾಃ**—ವಿದ ಜ್ಞಾನೇ ಧಾತು. ಅಥವಾ ವಿದ್‌ಲೃಲಾಭೇ **ಸರ್ವಧಾತುಭ್ಯೋಽಸುನ್**—ಎಂಬುದರಿಂದ ಅಸುನ್‌ಪ್ರತ್ಯಯ. **ಪುಗಂತಲಘೂಪಧಸ್ಯ ಚ**-ಎಂಬುದರಿಂದ ಧಾತುವಿನ ಲಘೂಪಧೆಗೆ ಈ ಪ್ರತ್ಯಯನಿಮಿತ್ತವಾಗಿ ಗುಣ. ವೇದಸ್ ಶಬ್ದವಾಗುತ್ತದೆ. **ವಿಶ್ವಾನಿ ಸರ್ವಾಣಿ ವೇದಾಂಸಿ ಜ್ಞಾನಾನಿ ಯಸ್ಯಸಃ ವಿಶ್ವಾವೇದಾಃ ಬಹುವ್ರೀಹೌ. ವಿಶ್ವಂ ಸಂಜ್ಞಾಯಾಮ್** (ಪಾ. ಸೂ. ೬-೨-೧೦೬) ಎಂಬುದರಿಂದ ಇಲ್ಲಿ ದೇವತಾಸಂಜ್ಞೆ ತೋರುವುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ತಾರ್ಕ್ಷ್ಯಃ**—ತೃಕ್ಷಸ್ಯ ಅಪತ್ಯಮ್ ತಾರ್ಕ್ಷ್ಯಃ **ಗರ್ಗಾದಿಭ್ಯೋಯಞ್** (ಪಾ. ಸೂ. ೪-೧-೧೦೫) ಎಂಬುದರಿಂದ ಗರ್ಗಾದಿಗಣದಲ್ಲಿ ಪಠಿತವಾದುದರಿಂದ ಅಪತ್ಯ (ಮಗ) ಎಂಬರ್ಥದಲ್ಲಿ ಯಞ್‌ಪ್ರತ್ಯಯ. ಞಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. **ಉರಣ್‌ರಪರಃ** ಪರಿಭಾಷೆಯಿಂದ ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಂ**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅರಿಷ್ಟನೇಮಿಃ—ನ ರಿಷ್ಟಾ ಅರಿಷ್ಟಾ. ನಞ್ ತತ್ಪುರುಷಸಮಾಸ. ಆಗ **ತತ್ಪುರುಷೇ ತುಲ್ಯಾರ್ಥ** (ಪಾ. ಸೂ. ೬-೧-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ಅರಿಷ್ಟಾ ನೇಮಿರ್ಯಸ್ಯ ಸಃ ಅರಿಷ್ಟನೇಮಿಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಬೃಹಸ್ಪತಿಃ—ಬೃಹತಾಂ ಪತಿಃ **ತದ್‌ಬೃಹತೋಃ ಕರಪತ್ಯೋಃ** ( ಪಾ. ಸೂ. ೬-೧-೧೫೭ ) ತತ್ ಮತ್ತು ಬೃಹತ್ ಶಬ್ದಗಳಿಗೆ ಕ್ರಮವಾಗಿ ಕರ, ಪತಿ ಶಬ್ದಗಳು ಪರವಾದಾಗ ಚೋರ, ದೇವತೆ ಎಂದು ಅರ್ಥತೋರುವಾಗ ಸುಡಾಗಮ. ತತ್ಸನ್ನಿಯೋಗದಿಂದ ತಕಾರಲೋಪ ಎಂಬುದರಿಂದ ಇಲ್ಲಿ ಸುಡಾಗಮ ತಲೋಪ. **ಉಭೇ-ವನಸ್ಪತ್ಯಾದಿಷು** (ಪಾ. ಸೂ. ೬-೨-೧೪೦) ಎಂಬುದರಿಂದ ಸಮಾಸಸ್ವರ ಬಾಧಿತವಾಗಿ ಪೂರ್ವೋತ್ತರಪದಗಳಿಗೆ ಏಕಕಾಲದಲ್ಲಿ ಪ್ರಕೃತಿಸ್ವರ ಬರುತ್ತದೆ.

**ದಧಾತು**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಪ್ರಾರ್ಥನಾರ್ಥದಲ್ಲಿ ಲೋಟ್. ಏರುಃ-ಸೂತ್ರದಿಂದ ತಿ ಎಂಬುದಕ್ಕೆ ತು ಆದೇಶ. ಧಾತುವಿಗೆ ಶ್ಲುನಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಜಸ್ತ್ವ. ತಿಙಂತನಿಘಾತಸ್ವರ ಬರುತ್ತದೆ. ॥ ೬ ॥

ಸಂಹಿತಾಪಾಠಃ

ಪೃಷದಶ್ವಾ ಮರುತಃ ಪೃಶ್ನಿಮಾತರಃ ಶುಭಂಯಾವಾನೋ
ವಿದಥೇಷು ಜಗ್ಮಯಃ ।
ಅಗ್ನಿಜಿಹ್ವಾ ಮನವಃ ಸೂರಚಕ್ಷಸೋ ವಿಶ್ವೇ ನೋ ದೇವಾ
ಅವಸಾ ಗಮನ್ನಿಹ ॥ ೭ ॥

ಪದಪಾಠಃ

ಪೃಷತ್ಽಅಶ್ವಾಃ । ಮರುತಃ । ಪೃಶ್ನಿಽಮಾತರಃ । ಶುಭಂಽಯಾವಾನಃ । ವಿದ-
ಥೇಷು । ಜಗ್ಮಯಃ ।
ಅಗ್ನಿಽಜಿಹ್ವಾಃ । ಮನವಃ । ಸೂರಽಚಕ್ಷಸಃ । ವಿಶ್ವೇ । ನಃ । ದೇವಾಃ । ಅವಸಾ ।
ಆ । ಗಮನ್ । ಇಹ ॥ ೭ ॥

ಸಾಯಣಭಾಷ್ಯಂ

ಪೃಷದಶ್ವಾಃ । ಪೃಷದ್ಭಿಃ ಶ್ವೇತಬಿಂದುಭಿರ್ಯುಕ್ತಾ ಅಶ್ವಾ ಯೇಷಾಂ ತೇ ತಥೋಕ್ತಾಃ । ಪೃಶ್ನಿಮಾತರಃ । ಪೃಶ್ನಿರ್ನಾನಾವರ್ಣಾ ಗೌರ್ಮಾತಾ ಯೇಷಾಂ । ಶುಭಂಯಾವಾನಃ । ಶುಭಂ ಯಾಂತಿ ಗಚ್ಛಂತೀತಿ ಶುಭಂಯಾವಾನಃ । ಶೋಭನಗತಯ ಇತ್ಯರ್ಥಃ । ವಿದಥೇಷು ಯಜ್ಞೇಷು ಜಗ್ಮಯೋ ಗಂತಾರಃ ಅಗ್ನಿಜಿಹ್ವಾ ಅಗ್ನೇರ್ಜಿಹ್ವಾಯಾಂ ವರ್ತಮಾನಾಃ । ಸರ್ವೇ ಹಿ ದೇವಾ ಹವಿಃಸ್ವೀಕರಣಾಯಾಗ್ನೇರ್ಜಿಹ್ವಾಯಾಂ ವರ್ತಂತೇ । ತಾತ್ಸ್ಥ್ಯಾತ್ತಾಚ್ಛಬ್ದ್ಯಂ । ಮನವಃ ಸರ್ವಸ್ಯ ಮಂತಾರಃ ಸೂರಚಕ್ಷಸಃ ಸೂರ್ಯಪ್ರಕಾಶ ಇವ ಚಕ್ಷುಃ ಪ್ರಕಾಶೋ ಯೇಷಾಂ ತ ಏವಂಭೂತಾ ಮರುತೋ ಮರುತ್ಸಂಜ್ಞಕಾ ವಿಶ್ವೇ ದೇವಾಃ ಸರ್ವೇ ದೇವಾ ನೋಽಸ್ಮಾನಿಹಾಸ್ಮಿನ್ಕಾಲೇಽವಸಾ ರಕ್ಷಣೇನ ಸಹಾ ಗಮನ್ । ಆಗಚ್ಛಂತು ॥ ಶುಭಂಯಾವಾನಃ । ಯಾ ಪ್ರಾಪಣೇ । ಆತೋ ಮನಿನ್ನಿತಿ ವನಿಪ್ । ತತ್ಪುರುಷೇ ಕೃತಿ ಬಹುಲಮಿತಿ ಬಹುಲವಚನಾದ್ದ್ವಿತೀಯಾಯಾ ಅಲುಕ್ । ಗಮನ್ । ಗಮೇಃ ಪ್ರಾರ್ಥನಾಯಾಂ ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಬಹುಲಂ ಛಂದಸೀತಿ ಶಪೋ ಲುಕ್ ॥

ಪ್ರತಿಪದಾರ್ಥ

**ಪೃಷದಶ್ವಾಃ**—ಬಿಂದುಗಳಿಂದ ಕೂಡಿದ ಅಶ್ವ (ಜಿಂಕೆ) ವಾಹನಗಳುಳ್ಳವರೂ । **ಪೃಶ್ನಿಮಾತರಃ**—ಪೃಶ್ನಿಯೇ ತಾಯಿಯಾಗಿ ಉಳ್ಳವರೂ, (ನಾನಾಬಣ್ಣದ ಗೋವೇ ತಾಯಿಯಾಗಿ ಉಳ್ಳವರೂ) । **ಶುಭಂಯಾವಾನಃ**—ಶ್ರೇಷ್ಠವಾದ ಗಮನವುಳ್ಳವರೂ । **ವಿದಥೇಷು**—ಯಜ್ಞಗಳಲ್ಲಿ । **ಜಗ್ಮಯಃ**—ಸಂಚರಿಸುವವರೂ । **ಅಗ್ನಿಜಿಹ್ವಾಃ**—ಅಗ್ನಿಯನಾಲಿಗೆಯಲ್ಲಿ ಇರುವವರೂ । **ಮನವಃ**—(ಎಲ್ಲವನ್ನೂ) ಲಕ್ಷಿಸಿ ಗಮನಿಸುವವರೂ । **ಸೂರಚಕ್ಷಸಃ**—ಸೂರ್ಯನಂತೆ ಕಾಂತಿಯುತರೂ ಆದ । **ಮರುತಃ**—ಮರುತ್ತುಗಳೂ । **ವಿಶ್ವೇದೇವಾಃ**—ಸಕಲ ದೇವತೆಗಳೂ । **ನಃ**—ನಮ್ಮನ್ನು ಕುರಿತು । **ಇಹ**—ಈ ಯಜ್ಞಪ್ರದೇಶಕ್ಕೆ (ಯಜ್ಞ ಕಾಲಗಳಲ್ಲಿ) । **ಅವಸಾ**—ರಕ್ಷಣೆಯೊಂದಿಗೆ । **ಆ ಗಮನ್**—ದಯಮಾಡಲಿ. ।

ಭಾವಾರ್ಥ

ಬಿಂದುಗಳಿಂದ ಕೂಡಿದ ಜಿಂಕೆಗಳೇ ವಾಹನವಾಗಿವುಳ್ಳವರೂ, ಪೃಶ್ನಿಯೆ ತಾಯಿಯಾಗಿ ಉಳ್ಳವರೂ, ಯಜ್ಞಗಳಲ್ಲಿ ಸಂಚರಿಸುವವರೂ, ಅಗ್ನಿಯ ನಾಲಿಗೆಯಲ್ಲಿರುವವರೂ, ಎಲ್ಲವನ್ನೂ ಲಕ್ಷಿಸಿ ಗಮನಿಸುವವರೂ, ಸೂರ್ಯನಂತೆ ಕಾಂತಿಯುತರೂ ಆದ ಮರುತ್ತುಗಳೂ, ಸಕಲದೇವತೆಗಳೂ ಈ ಯಜ್ಞಭೂಮಿಗೆ (ಈ ಯಜ್ಞಕಾಲದಲ್ಲಿ) ನಮಗಾಗಿ ತಮ್ಮ ರಕ್ಷಣೆಯೊಂದಿಗೆ ದಯಮಾಡಲಿ.

English Translation

May the Maruts whose horses are spotted deer, who are the sons of Prisni, gracefully moving frequenters of sacrifices, seated on the tongue of Agni regarders of all, and radient as the Sun, may all the gods come hither for our protection.

ವಿಶೇಷವಿಷಯಗಳು

**ಪೃಷದಶ್ವಾಃ—ಪೃಷತ್ಯಃ ಅಶ್ವಾ ಯೇಷಾಂ ತೇ ಪೃಷತ್ಯಃ** । ಶ್ವೇತಬಿಂದುಯುಕ್ತವಾದ ಜಿಂಕೆಗಳೇ ಅಶ್ವಗಳಾಗಿವುಳ್ಳ. ಮರುದ್ದೇವತೆಗಳ ವಾಹನಗಳಿಗೆ ಪೃಷತ್ಯಃ ಎಂದು ಹೆಸರು- **ಪೃಷತ್ಯೋ ಮರುತಾಂ** ಎಂದು ನಿರುಕ್ತವಚನವಿರುವುದು.

**ಪೃಶ್ನಿಮಾತರಃ—ಪೃಶ್ನಿರ್ನಾನಾವರ್ಣಾ ಗೌರ್ಮಾತಾ** । ನಾನಾವಿಧವಾದ ಬಣ್ಣಗಳುಳ್ಳ ಗೋವಿನ ಪುತ್ರರು. ಅಥವಾ ಸ್ಕಂದಸ್ವಾಮಿಯು ಹೇಳುವಂತೆ **ಪೃಶ್ನಿಃ ದ್ಯೌಃ ಸಾ ಮಾತಾ** । ಅಂತರಿಕ್ಷದ ಪುತ್ರರು ಎಂದೂ ಹೇಳಬಹುದು. ಪೃಶ್ನಿಮಾತರಃ ಶಬ್ದದ ವಿಸ್ತಾರವಾದ ಅರ್ಥವಿವರಣೆಗಾಗಿ ಋ. ಸಂ. ಭಾಗ ೩ ಪೇಜು 179-180 ನೋಡಿ.

**ಶುಭಂಯಾವಾನಃ—ಶುಭಂ ಶೋಭನಂ ಯಾಂತಿ ಗಚ್ಛಂತೀತಿ ಶುಭಂಯಾವಾನಃ** । ಶೋಭನವಾದ ಗಮನವುಳ್ಳ. ಸ್ಕಂದಸ್ವಾಮಿಯು—**ಶುಭಮಿತ್ಯುದಕಂ** । **ತದರ್ಥಂ ಮೇಘಾನ್ಪ್ರತಿ ಗಂತಾರಃ** । ಶುಭವೆಂದರೆ

ಉದಕವು. ಉದಕಕ್ಕಾಗಿ ಎಂದರೆ ವೃಷ್ಟ್ಯರ್ಥವಾಗಿ ಮೇಘಗಳ ಸನಿಹಕ್ಕೆ ಹೋಗುವವರಾದ್ದರಿಂದ ಮರುತ್ತು ಗಳಿಗೆ ಶುಭಂಯಾವಾನಃ ಎಂದು ಹೆಸರು.

**ಅಗ್ನಿಜಿಹ್ವಾಃ**— **ಅಗ್ನೇರ್ಜಿಹ್ವಾಯಾಂ ವರ್ತಮಾನಾಃ । ಸರ್ವೇ ಹಿ ದೇವಾ ಹವಿಃಸ್ವೀಕರಣಾ-ಯಾಗ್ನೇರ್ಜಿಹ್ವಾಯಾಂ ವರ್ತಂತೇ ।** ಸಮಸ್ತ ದೇವತೆಗಳಿಗೂ ಅರ್ಪಿಸುವ ಹವಿಸ್ಸನ್ನು ಅವರಿಗೆ ಸೇರುವಂತೆ ಮಾಡುವುದಕ್ಕಾಗಿ ಅಗ್ನಿಯಲ್ಲಿ ಹೋಮ ಮಾಡುವರು. ಆದುದರಿಂದ ದೇವತೆಗಳು ಅಗ್ನಿಯ ಜಿಹ್ವೆಯಲ್ಲಿ ಇರುವ ರೆಂದು ಹೇಳುವುದು ರೂಢಿಯಾಗಿದೆ. ಸ್ಕಂದಸ್ವಾಮಿಯು— **ಅಗ್ನೌ ಪ್ರಕ್ಷಿಪ್ತಂ ಹವಿರ್ದೇವಾ ಅಶ್ನಂತಿ ತೇನೈಷಾ-ಮಗ್ನಿಜಿಹ್ವಾಸ್ಥಾನೀಯಃ । ವಕ್ಷ್ಯಮಾಣಾನಾಂ ವಿಶ್ವೇಷಾಂ ದೇವಾನಾಮೇತದ್ವಿಶೇಷಣಂ ನ ಮರುತಾಂ ॥** ಅಗ್ನಿಯಲ್ಲಿ ಹೋಮಮಾಡಿದ ಹವಿಸ್ಸು ದೇವತೆಗಳನ್ನು ಸೇರುವುದರಿಂದ ದೇವತೆಗಳು ಅಗ್ನಿಜಿಹ್ವಾಸ್ಥಾನೀಯರೆಂದು ಹೇಳುವರು. ಈ ಶಬ್ದವು ಮುಂದೆ ಇರುವ ವಿಶ್ವೇದೇವಾಃ ಎಂಬ ಶಬ್ದಗಳಿಗೆ ವಿಶೇಷಣವು, ಮರುತಃ ಎಂಬ ಶಬ್ದಕ್ಕೆ ಅಲ್ಲ. ಎಂದು ಹೇಳಿರುವರು. **ಅಗ್ನಿಜಿಹ್ವಾ**— ಎಂಬ ಶಬ್ದವಿರುವ ಒಂದೆರಡು ಋಕ್ಕುಗಳನ್ನು ಉದಾಹರಣೆಗಾಗಿ ಕೊಡುವೆವು—

**ಶೃಣ್ವಂತು ಸೋಮಂ ಮರುತಃ ಸುದಾನವೋಽಗ್ನಿಜಿಹ್ವಾ ಋತಾವೃಧಃ ।**
(ಋ. ಸಂ, ೧-೪೪-೧೪)

**ಇಮಂ ಸ್ತೋಮಂ ರೋದಸೀ ಪ್ರ ಬ್ರವೀಮ್ಯೃದೂದರಾಃ ಶೃಣವನ್ನಗ್ನಿಜಿಹ್ವಾಃ ॥**
(ಋ. ಸ. ೩-೫೪-೧೦)

**ಯೇ ಅಗ್ನಿಜಿಹ್ವಾ ಋತಸಾಪ ಆಸುರ್ಯೇ ಮನುಂ ಚಕ್ರುರುಪರಂ ದಸಾಯ ॥**
(ಋ. ಸಂ. ೬-೫೦-೧೧)

**ದ್ವಿಜನ್ಮಾನೋ ಯ ಋತಸಾಪಃ ಸತ್ಯಾಃ ಸ್ವರ್ವಂತೋ ಯಜತಾ ಅಗ್ನಿಜಿಹ್ವಾಃ ।**
(ಋಸಂ, ೬-೫೦-೨)

**ಯೇ ಅಗ್ನಿಜಿಹ್ವಾ ಉತ ವಾ ಯಜತ್ರಾ ಆಸದ್ಯಾಸ್ಮಿನ್ ಬರ್ಹಿಷಿ ಮಾದಯಧ್ವಂ ।**
(ಋ. ಸಂ. ೬-೫೨-೧೩)

**ಬಹವಃ ಸೂರಚಕ್ಷಸೋಽಗ್ನಿಜಿಹ್ವಾ ಋತಾವೃಧಃ ॥**
(ಋ. ಸಂ. ೭-೬೬-೧೦)

**ದಿವಕ್ಷಸೋ ಅಗ್ನಿಜಿಹ್ವಾ ಋತಾವೃಧ ಋತಸ್ಯ ಯೋನಾ ಕ್ಷಯತಃ ಸಮೋಕಸಾ ॥**
(ಋಂ. ಸಂ. ೧೦-೬೫-೭)

ಈ ಋಕ್ಕುಗಳಲ್ಲಿ ಮಾತ್ರ ಈ ಅಗ್ನಿಜಿಹ್ವಾಃ ಎಂಬ ಶಬ್ದಪ್ರಯೋಗವಿರುವುದು. ಇನ್ನೆಲ್ಲಿಯೂ ಇರುವುದಿಲ್ಲ.

**ಮನವಃ**— **ಮಂತಾರಃ ಜ್ಞಾತಾರಃ ।** ತಿಳಿವಳಿಕೆಯುಳ್ಳವರು.

**ಸೂರಚಕ್ಷಸಃ**— ಸೂರ್ಯಪ್ರಕಾಶದಂತೆ ಕಾಂತಿಯುಕ್ತರಾದವರು. **ಸೂರ್ಯಸ್ಯೇವ ಚಕ್ಷುರ್ದರ್ಶನಂ ಯೇಷಾಂ ತೇ ಸೂರಚಕ್ಷಸಃ ॥**

॥ ವ್ಯಾಕರಣಪ್ರಕ್ರಿಯಾ ॥

**ಪೃಷದಶ್ವಾಃ**— ಪೃಷದ್ಭಿಃ ಯುಕ್ತಾಃ ಅಶ್ವಾಃ ಯೇಷಾಂ ತೇ ಪೃಷದಶ್ವಾಃ **ಬಹುವ್ರೀಹೌ ಪ್ರಕೃತ್ಯಾ-ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಹೀಗೆಯೇ ಪೃಶ್ನಿಮಾತರಃ ಎಂಬಲ್ಲಿಯೂ ಸ್ವರ ಬರುತ್ತದೆ.

**ಶುಭಂಯಾವಾನಃ**—ಯಾ ಪ್ರಾಪಣೇ ಧಾತು. ಇದಕ್ಕೆ **ಆತೋಮನಿನ್ಕ್ವನಿಬ್ವನಿಪಶ್ಚ** (ಪಾ. ಸೂ. ೩-೨-೭೪) ಎಂಬುದರಿಂದ ಆದಂತವಾದುದರಿಂದ ವನಿಪ್ ಪ್ರತ್ಯಯ. ಯಾವನ್ ಶಬ್ದವಾಗುತ್ತದೆ. ಶುಭಂ ಯಾಂತಿ-ಗಚ್ಛಂತಿ ಇತಿ ಶುಭಂ ಯಾವಾನಃ **ತತ್ಪುರುಷೇ ಕೃತಿ ಬಹುಲಂ** (ಪಾ. ಸೂ. ೬-೩-೧೪) ಎಂಬಲ್ಲಿ ಬಹುಲಗ್ರಹಣ ದಿಂದ ದ್ವಿತೀಯಾವಿಭಕ್ತಿಗೂ ಸಮಾಸದಲ್ಲಿ ಅಲುಕ್. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದು ತ್ತರಪದ ಪ್ರಕೃತಿಸ್ವರ ಬರುತ್ತದೆ.

**ಜಗ್ಮಯಃ**—ಗಮ್ಲೃ ಗತೌ ಧಾತು. ಇದಕ್ಕೆ **ಆದೃಗಮಹನಜನಃ ಕಿಕಿನೌಲಿಟ್ ಚ** (ಪಾ. ಸೂ. ೩-೨-೧೭೧) ಎಂಬುದರಿಂದ ಕಿನ್ ಪ್ರತ್ಯಯ. ಇದಕ್ಕೆ ಲಿಡ್ವದ್ಭಾವ ಹೇಳಿರುವುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಕುಹೋಶ್ಚುಃ** ಎಂಬುದರಿಂದ ಚುತ್ವ. **ಗಮಹನಜನ**—ಎಂಬುದರಿಂದ ಪ್ರತ್ಯಯ ಕಿತ್ತಾದುದರಿಂದ ತನ್ನಿಮಿತ್ತವಾಗಿ ಧಾತುವಿನ ಉಪಧೆಗೆ ಲೋಪ. ಜಗ್ಮಿಶಬ್ದವಾಗುತ್ತದೆ. ಪ್ರಥಮಾಬಹುವಚನ ದಲ್ಲಿ **ಜಸಿ ಚ**-ಎಂಬುದರಿಂದ ಗುಣ. ಅಯಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅವಸಾ**—ಅವ ರಕ್ಷಣೇ ಧಾತು. ಅಸುನ್ ಪ್ರತ್ಯಯ. ಅವಸ್ ಶಬ್ದವಾಗುತ್ತದೆ. ತೃತೀಯಾಏಕವಚ ನಾಂತರೂಪ.

**ಗಮನ್**—ಗಮ್ಲೃ ಗತೌ ಧಾತು. ಪ್ರಾರ್ಥನಾರೂಪ ಅರ್ಥತೋರುವಾಗ ಲೇಟ್. ಪ್ರಥಮಪುರುಷ ಬಹುವಚನದಲ್ಲಿ ಝಿಪ್ರತ್ಯಯ. **ಝೋಂತಃ**—ಎಂಬುದರಿಂದ ಅಂತಾದೇಶ. **ಇತಶ್ಚಲೋಪಃ ಪರಸ್ಮೈಪದೇಷು** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** ಸೂತ್ರದಿಂದ ಅಡಾಗಮ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಆದುದರಿಂದ ಛಾದೇಶ ಬರುವುದಿಲ್ಲ. ಅತಿಜಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ. ಸಂಯೋಗಾಂತಲೋಪದಿಂದ ಅಂತ್ಯತಕಾರಲೋಪ. ॥ ೭ ॥



॥ ಸಂಹಿತಾಪಾಠಃ ॥

ಭ॒ದ್ರಂ ಕರ್ಣೇ॑ಭಿಃ ಶೃಣುಯಾಮ ದೇವಾ ಭ॒ದ್ರಂ ಪ॑ಶ್ಯೇಮಾ॒-
ಕ್ಷಭಿ॑ರ್ಯಜತ್ರಾಃ।
ಸ್ಥಿ॒ರೈರಂಗೈ॑ಸ್ತುಷ್ಟು॒ವಾಂಸ॑ಸ್ತ॒ನೂಭಿ॒ರ್ವ್ಯ॑ಶೇಮ ದೇ॒ವಹಿ॑ತಂ॒ ಯ॒-
ದಾಯುಃ॑ ॥ ೮ ॥

॥ ಪದಪಾಠಃ ॥

ಭದ್ರಂ । ಕರ್ಣೇಭಿಃ । ಶೃಣುಯಾಮ । ದೇವಾಃ । ಭದ್ರಂ । ಪಶ್ಯೇಮ । ಅಕ್ಷಽಭಿಃ । ಯಜತ್ರಾಃ ।

ಸ್ಥಿರೈಃ । ಅಂಗೈಃ । ತುಸ್ತುಽವಾಂಸಃ । ತನೂಭಿಃ । ವಿ । ಅಶೇಮ । ದೇವಽಹಿತಂ । ಯತ್ । ಆಯುಃ ॥ ೮ ॥

ಸಾಯಣಭಾಷ್ಯಂ

ಅಸ್ತಿ ಸೌಮ್ಯಶ್ಚರುಸ್ತೃತೀಯಸವನೇ । ತೇನ ಚರುಣಾ ದೇವತಾಮಿಷ್ಟ್ವಾವಶೇಷೇ ತಸ್ಮಿನ್ಬಹು ಘೃತಮವನೀಯ ತಸ್ಮಿನ್ಷಟ್‌ಕರ್ತ್ರಾ ಸ್ವಕೀಯಾ ಛಾಯಾ ದ್ರಷ್ಟವ್ಯಾ । ಸಾ ಯದಿ ನ ದೃಶ್ಯೇತ ತದಾನೀಂ ಭದ್ರಮಿತ್ಯೇಕಾ ಪಠಿತವ್ಯಾ । ತ್ವಂ ಸೋಮೇತಿ ಖಂಡೇ ತಥೈವ ಸೂತ್ರ್ಯತೇ । ರಾಜ್ಞಾ ಸೋಮೇನ ತದ್ವಯಮಸ್ಮಾಸು ಧಾರಯಾಮಸಿ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಇತಿ ಚ । ಆ. ೫-೧೯ । ಇತಿ ॥ ಮಹಾನಾಮ್ನೀವ್ರತೇಽಪ್ಯೇಷಾ ಭೂಮಿಸ್ಪರ್ಶನೇ ಜಪ್ಯಾ । ಸೂತ್ರಿತಂ ಚೈತದ್ವಿದಮಿತಿ ಖಂಡೇ । ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ಶಂ ನ ಇಂದ್ರಾಗ್ನೀ ಭವತಾಮವೋಭಿಃ । ಆ. ೮-೧೪ । ಇತಿ ॥

ಹೇ ದೇವಾ ದಾನಾದಿಗುಣಯುಕ್ತಾಃ ಸರ್ವೇ ದೇವಾಃ ಕರ್ಣೇಭಿರಸ್ಮದೀಯೈಃ ಶ್ರೋತ್ರೈರ್ಭದ್ರಂ ಭಜನೀಯಂ ಕಲ್ಯಾಣಂ ವಚನಂ ಶೃಣುಯಾಮ । ಯುಷ್ಮತ್ಪ್ರಸಾದಾಚ್ಛ್ರೋತುಂ ಸಮರ್ಥಾಃ ಸ್ಯಾಮ । ಅಸ್ಮಾಕಂ ಬಾಧಿರ್ಯಂ ಕದಾಚಿದಪಿ ಮಾ ಭೂತ್ । ಹೇ ಯಜತ್ರಾ ಯಾಗೇಷು ಚರುಪುರೋಡಾಶಾದಿಭಿರ್ಯಷ್ಟವ್ಯಾ ದೇವಾ ಅಕ್ಷಭಿರಕ್ಷಿಭಿರಾತ್ಮೀಯೈಶ್ಚಕ್ಷುರ್ಭಿರ್ಭದ್ರಂ ಶೋಭನಂ ಪಶ್ಯೇಮ । ದ್ರಷ್ಟುಂ ಸಮರ್ಥಾಃ ಸ್ಯಾಮ । ಅಸ್ಮಾಕಂ ದೃಷ್ಟಿಪ್ರತಿಘಾತೋಽಪಿ ಮಾ ಭೂತ್ । ಸ್ಥಿರೈರ್ದೃಢೈರಂಗೈರ್ಹಸ್ತಪಾದಾದಿಭಿರವಯವೈಸ್ತನೂಭಿಃ ಶರೀರೈಶ್ಚ ಯುಕ್ತಾ ವಯಂ ತುಷ್ಟುವಾಂಸೋ ಯುಷ್ಮಾನ್ ಸ್ತುವಂತೋ ಯದಾಯುಃ ಷೋಡಶಾಧಿಕಶತಪ್ರಮಾಣಂ ವಿಂಶತ್ಯಧಿಕಶತಪ್ರಮಾಣಂ ವಾ ದೇವಹಿತಂ ದೇವೇನ ಪ್ರಜಾಪತಿನಾ ಸ್ಥಾಪಿತಂ ತದ್ವ್ಯಶೇಮ । ಪ್ರಾಪ್ನುಯಾಮ ॥ ಕರ್ಣೇಭಿಃ । ಬಹುಲಂ ಛಂದಸೀತಿ ಭಿಸ ಐಸಭಾವಃ । ಅಕ್ಷಭಿಃ । ಛಂದಸ್ಯಪಿ ದೃಶ್ಯತ ಇತ್ಯನಙ್ ಸ ಚೋದಾತ್ತಃ । ಯಜತ್ರಾಃ । ಅಮಿನಕ್ಷೀತ್ಯಾದಿನಾ ಯಜೇರತ್ರನ್‌ಪ್ರತ್ಯಯಃ । ತುಷ್ಟುವಾಂಸಃ । ಷ್ಟುಞ್ ಸ್ತುತೌ । ಲಿಟಃ ಕ್ವಸುಃ । ಶರ್ಪೂರ್ವಾಃ ಖಯ ಇತಿ ತಕಾರಃ ಶಿಷ್ಯತೇ । ಅಶೇಮ । ಅಶೂ ವ್ಯಾಪ್ತೌ । ಲಿಙ್ಯಾಶಿಷ್ಯಙ್ । ಯದಿ ತು ತತ್ರ ಪರಿಗಣನಮನ್ಯವ್ಯಾವೃತ್ತ್ಯರ್ಥಂ ತದಾನೀಂ ಲಿಙಃ ವ್ಯತ್ಯಯೇನ ಶಪ್ । ದೇವಹಿತಂ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

**ದೇವಾಃ**—(ದಾನಾದಿಗುಣಯುಕ್ತರಾದ) ಎಲೈ ದೇವತೆಗಳೇ । **ಕರ್ಣೇಭಿಃ**— (ನಮ್ಮ) ಕಿವಿಗಳಿಂದ । **ಭದ್ರಂ**— ಕಲ್ಯಾಣರೂಪವಾದ ವಾರ್ತೆಯನ್ನು । **ಶೃಣುಯಾಮ**—ಕೇಳುವ (ಸಾಮರ್ಥ್ಯವುಳ್ಳ)ವರಾಗಿ ಆಗೋಣ । **ಯಜತ್ರಾಃ**— ಯಜ್ಞದಲ್ಲಿ ಪೂಜಾರ್ಹರಾದ ಎಲೈ ದೇವತೆಗಳೇ । **ಅಕ್ಷಭಿಃ** - (ನಮ್ಮ)ಕಣ್ಣುಗಳಿಂದ । **ಭದ್ರಂ**— ಮಂಗಳಕರವಾದುದನ್ನು । **ಪಶ್ಯೇಮ**— ನೋಡುವ (ಸಾಮರ್ಥ್ಯವುಳ್ಳ)ವರಾಗಿ ಆಗೋಣ. । **ಸ್ಥಿರೈಃ**—ದೃಢಗಳಾದ । **ಅಂಗೈಃ**—ಹಸ್ತಪಾದಾದ್ಯಂಗಗಳಿಂದಲೂ । **ತನೂಭಿಃ**—ಶರೀರಗಳಿಂದಲೂ ಕೂಡಿ (ನಾವು) । **ತುಷ್ಟುವಾಂಸಃ**— ನಿಮ್ಮನ್ನು ಸ್ತುತಿಸುತ್ತಾ । **ಯತ್ ಆಯುಃ**—ಯಾವ ಆಯುಃಪರಿಮಿತಿಯು। **ದೇವಹಿತಂ**— ಪ್ರಜಾಪತಿಯಿಂದ ಅನುಗೃಹೀತವಾಗಿದೆಯೋ ಅದನ್ನು । **ವ್ಯಶೇಮ**—ಹೊಂದೋಣ. (ಅನುಭವಿಸೋಣ) ।

॥ ಭಾವಾರ್ಥ ॥

ಯಜ್ಞಗಳಲ್ಲಿ ಪೂಜಾರ್ಹರಾದ ಎಲೈ ದೇವತೆಗಳೇ, ನಮ್ಮ ಕಿವಿಗಳಿಂದ ಯಾವಾಗಲೂ ಕಲ್ಯಾಣರೂಪವಾದ ವಾರ್ತೆಯನ್ನು ಕೇಳುವ ಸಾಮರ್ಥ್ಯವುಳ್ಳವರಾಗುವಂತೆಯೂ ಮತ್ತು ನಮ್ಮ ಕಣ್ಣುಗಳಿಂದ ಮಂಗಳಕರವಾದುದನ್ನೇ ನೋಡುವ ಸಾಮರ್ಥ್ಯವುಳ್ಳವರಾಗುವಂತೆಯೂ ಅನುಗ್ರಹಿಸಿ. ದೃಢಗಳಾದ ಅವಯವಗಳಿಂದ ಕೂಡಿದ ನಮ್ಮ ಶರೀರಗಳೊಂದಿಗೆ ನಿಮ್ಮನ್ನು ಸ್ತುತಿಸುತ್ತಾ ಪ್ರಜಾಪತಿಯಿಂದ ಅನುಗೃಹೀತವಾದ ನಮ್ಮ ಆಯುಃಪರಿಮಿತಿಯನ್ನು ಅನುಭವಿಸುವಂತೆ ಅನುಗ್ರಹಿಸಿ.

## English Translation

O Gods, let us hear with our ears what is good ; objects of sacrifice, let us see with our eyes what is good ; engaged in your praises let us enjoy with firm limbs and sound bodies the term of life granted by the gods,

ವಿಶೇಷವಿಷಯಗಳು

ತೃತೀಯಸವನದಲ್ಲಿ ಸೌಮ್ಯಚರುವೆಂಬ ಸೋಮದೇವತೆಗೆ ಆಹುತಿಯನ್ನು ವಷಟ್ಕಾರಪೂರ್ವಕವಾಗಿ ಅಗ್ನಿಯಲ್ಲಿ ಹೋಮ ಮಾಡುವುದು ರೂಢಿಯಲ್ಲಿರುವುದು. ದೇವತೆಯನ್ನುದ್ದೇಶಿಸಿ ಹೋಮಮಾಡಿದಮೇಲೆ ಉಳಿದ ಹೋಮಶೇಷಕ್ಕೆ ಹೆಚ್ಚಾಗಿ ತುಪ್ಪವನ್ನು ಬೆರಸಿ ಅದರಲ್ಲಿ ವಷಟ್ಕರ್ತೃವಾದ ಯಜಮಾನನು ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳಬೇಕು. ಆ ಘೃತದಲ್ಲಿ ತನ್ನ ಪ್ರತಿಬಿಂಬವು ಚೆನ್ನಾಗಿ ಕಾಣದಿದ್ದರೆ ಆಗ **ಭದ್ರಂ ಕರ್ಣೇಭಿಃ** ಎಂಬ ಈ ಪ್ರಸಕ್ತವಾದ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ತ್ವಂ ಸೋಮ** ಎಂಬ ಖಂಡದಲ್ಲಿ **ರಾಜ್ಞಾ ಸೋಮೇನ ತದ್ವಯಮಸ್ಮಾಸು ಧಾರಯಾಮಸಿ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಇತಿಚ** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು. (ಆ. ೫-೧೯) ಮಹಾನಾಮ್ನೀವ್ರತದಲ್ಲಿಯೂ ಕೂಡ ಭೂಮಿಸ್ಪರ್ಶನ ಮಾಡುವಾಗ ಈ ಋಕ್ಕನ್ನು ಜಪಿಸಬೇಕೆಂದು **ಏತದ್ವಿದಂ** ಎಂಬ ಖಂಡದಲ್ಲಿ **ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ಶಂನ ಇಂದ್ರಾಗ್ನೀ ಭವತಾಮವೋಭಿಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧೪)

**ಭದ್ರಂ**—ಒಳ್ಳೆಯುದನ್ನು, ಮಂಗಳಕರವಾದ ವಿಷಯವನ್ನು; ಭದ್ರಶಬ್ದವನ್ನು **ಶೃಣುಯಾಮ** ಎಂಬ ಕ್ರಿಯಾಪದವೊಡನೆ ಸಮನ್ವಯಮಾಡುವಾಗ **ಭದ್ರಂ**—ಮಂಗಳಕರವಾದ ವಚನವನ್ನು ಅಥವಾ ಮಾತನ್ನು ಎಂದೂ, **ಪಶ್ಯೇಮ** ಎಂಬ ಕ್ರಿಯೆಯೊಡನೆ ಸೇರಿಸುವಾಗ ಮಂಗಳಕರವಾದ ಕಾರ್ಯಗಳನ್ನು ಎಂದೂ ಅರ್ಥಗಳನ್ನು ಹೇಳಬೇಕು.

**ಯಜತ್ರಾಃ—ಯಾಗೇಷು ಚ ಪುರೋಡಾಶಾದಿಭಿರ್ಯಷ್ಟವ್ಯಾ ದೇವಾಃ ।** ಯಜ್ಞಗಳಲ್ಲಿ ಪುರೋಡಾಶಾದಿಹವಿರ್ದ್ರವ್ಯಗಳಿಂದ ಆರಾಧಿಸಲ್ಪಡುವ ದೇವತೆಗಳು.

**ವ್ಯಶೇಮ—ಅಶೂ ವ್ಯಾಪ್ತೌ । ಪ್ರಾಪ್ನುಯಾಮ ।** ಹೊಂದೋಣ, ಅನುಭವಿಸೋಣ, ಜೀವಿಸಿರೋಣ.

**ದೇವಹಿತಂ ಯದಾಯುಃ—ದೇವೇನ ಪ್ರಜಾಪತಿನಾ ಉಪಕಲ್ಪಿತಂ ಕೃತ್ಸ್ನಂ ಷೋಡಶಾಧಿಕಶತಪ್ರಮಾಣಂ ವಿಂಶತ್ಯಧಿಕಶತಪ್ರಮಾಣಂ ವಾ ಆಯುಃ ।** ಬ್ರಹ್ಮನಿಂದ ಮನುಷ್ಯರ ವಿಷಯದಲ್ಲಿ ಕ್ಲೃಪ್ತವಾಗಿ ನಿರ್ಣಯಿಸಲ್ಪಟ್ಟ ಸಂಪೂರ್ಣ ಆಯುಸ್ಸು ಎಂದರೆ ಭಾಷ್ಯಕಾರರು ಹೇಳಿರುವಂತೆ ನೂರಹದಿನಾರು ಅಥವಾ ನೂರ ಇಪ್ಪತ್ತು ವರ್ಷಗಳ ಆಯುಃಪರಿಮಾಣವು. ಮುಂದಿನ ಋಕ್ಕಿನಲ್ಲಿ ನೂರು ವರ್ಷಗಳು ಮನುಷ್ಯರ ಆಯುಃಪ್ರಮಾಣವೆಂದು ಹೇಳಲ್ಪಟ್ಟಿರುವುದು.

ವ್ಯಾಕರಣಪ್ರಕ್ರಿಯಾ

**ಕರ್ಣೇಭಿಃ**—ಕರ್ಣಶಬ್ದಕ್ಕೆ ತೃತೀಯಾಬಹುವಚನ ಭಿಸ್ ಪರವಾದಾಗ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸಾದೇಶ ಬರುವುದಿಲ್ಲ. ಆಗ **ಬಹುವಚನೇ ಝಲ್ಯೇತ್**—ಎಂಬುದರಿಂದ ಅದಂತಾಂಗಕ್ಕೆ ಏತ್ವ. ಭಿಸಿನ ಸಕಾರಕ್ಕೆ ರುತ್ವವಿಸರ್ಗ.

**ಶೃಣುಯಾಮ**—ಶ್ರು ಶ್ರವಣೇ ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂಙಿತಃ**—ಎಂಬುದರಿಂದ ಸಕಾರಕ್ಕೆ ಲೋಪ. **ಶ್ರುವಃ ಶೃಚ** (ಪಾ. ಸೂ. ೩-೧-೭೪) ಎಂಬುದರಿಂದ ಪ್ರಕೃತಿಗೆ ಶೃ ಆದೇಶ. ಶ್ನುವಿಕರಣ. ಲಿಙಿಗೆ ಯಾಸುಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಅಕ್ಷಭಿಃ**—ಅಕ್ಷಿಶಬ್ದ. ತೃತೀಯಾಬಹುವಚನ ಪರವಾದಾಗ **ಛಂದಸ್ಯಪಿ ದೃಶ್ಯತೇ**—ಎಂಬುದರಿಂದ ಉದಾತ್ತಸ್ವರವಿಶಿಷ್ಟವಾದ ಅನಙ್ ಆದೇಶ. ಙಿತ್ತಾದುದರಿಂದ ಅಂತಾದೇಶವಾಗಿ ಬರುತ್ತದೆ. ಅಕ್ಷನ್+ಭಿಸ್ ಎಂದಿರುವಾಗ **ನಲೋಪಃ ಪ್ರಾತಿಪದಿಕಾಂತಸ್ಯ**—ಎಂಬುದರಿಂದ ನಲೋಪ.

**ಯಜತ್ರಾಃ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಇದಕ್ಕೆ **ಅಮಿನಕ್ಷಿಯಜಿವಧಿ**—ಎಂಬುದರಿಂದ (ಉ. ಸೂ. ೩-೩೮೫) ಅತ್ರನ್ ಪ್ರತ್ಯಯ. ಸಂಬೋಧನಾ ಬಹುವಚನಾಂತರೂಪ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ತುಷ್ಟುವಾಂಸಃ**—ಷ್ಟುಞ್ ಸ್ತುತೌ ಧಾತು. **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟ್ ಸ್ಥಾನದಲ್ಲಿ ಕ್ವಸುಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬಂದಾಗ **ಶರ್ಪೂರ್ವಾಃ ಖಯಃ** (ಪಾ. ಸೂ.

೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ಖಯ್‌ವರ್ಣವಾದ ತಕಾರ ಉಳಿಯುತ್ತದೆ. ತುಷ್ಟುವಸ್ ಶಬ್ದವಾಗುತ್ತದೆ. ಪ್ರಥಮಾಜಸಿನಲ್ಲಿ **ಉಗಿದಚಾಂ ಸರ್ವ**—ಎಂಬುದರಿಂದ ನುಮಾಗಮ. **ಅತ್ವಸಂತಸ್ಯ ಚಾಧಾತೋಃ**—ಎಂಬುದರಿಂದ ಉಪಧಾದೀರ್ಘ. ನಕಾರಕ್ಕೆ ಅನುಸ್ವಾರ. ಪ್ರತ್ಯಯಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ಅಶೇಮ**— ಅಶೂ ವ್ಯಾಪ್ತೌ ಧಾತು. ಇದಕ್ಕೆ ಆಶೀರ್ಲಿಙಿನ ಉತ್ತಮಪುರುಷಬಹುವಚನ ಮಸ್ ಪ್ರತ್ಯಯ. ಸಕಾರಲೋಪ. ಆಶೀರ್ಲಿಙ್ ಪರವಾದಾಗ ಧಾತುವಿಗೆ **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಎಂಬುದರಿಂದ ಅಙ್. ಆ ಸೂತ್ರದಲ್ಲಿ ಇತರ ವ್ಯಾವೃತ್ತಿಗೋಸ್ಕರ ಪರಿಗಣನವಿರುವುದಾದರೆ **ವ್ಯತ್ಯಯೋಬಹುಲಂ** ಎಂಬುದರಿಂದ ಶ್ನುಗೆ ಶಪ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವಹಿತಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಪ್ರಕೃತಿಗೆ ಹಿ ಆದೇಶ. ದೇವೇನ ಹಿತಮ್. ದೇವಹಿತಮ್ **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೮ ॥



ಸಂಹಿತಾಪಾಠಃ

ಶತಮಿನ್ನು ಶರದೋ ಅಂತಿ ದೇವಾ ಯತ್ರಾ ನಶ್ಚಕ್ರಾ ಜರಸಂ ತನೂನಾಂ ।
ಪುತ್ರಾಸೋ ಯತ್ರ ಪಿತರೋ ಭವಂತಿ ಮಾ ನೋ ಮಧ್ಯಾ-ರೀರಿಷತಾಯುರ್ಗಂತೋಃ ॥ ೯ ॥

॥ ಪದಪಾಠಃ ॥

**ಶತಂ । ಇತ್ । ನು । ಶರದಃ । ಅಂತಿ । ದೇವಾಃ । ಯತ್ರ । ನಃ । ಚಕ್ರ । ಜರಸಂ । ತನೂನಾಂ ।**
**ಪುತ್ರಾಸಃ । ಯತ್ರ । ಪಿತರಃ । ಭವಂತಿ । ಮಾ । ನಃ । ಮಧ್ಯಾ । ರಿರಿಷತ । ಆಯುಃ । ಗಂತೋಃ ॥ ೯ ॥**

॥ ಸಾಯಣಭಾಷ್ಯಂ ॥

ಹೇ ದೇವಾ ಅತ್ಯಂತಿಕೇ ಮನುಷ್ಯಾಣಾಂ ಸಮೀಪ ಆಯುಷ್ಟ್ವೇನ ಭವದ್ಭಿಃ ಕಲ್ಪಿತಾಃ ಶರದಃ ಸಂವತ್ಸರಾಃ ಶತಮಿನ್ನು ಶತಂ ಖಲು । ಯಸ್ಮಾತ್ಸೃಷ್ಟಿಕಾಲೇ ಮನುಷ್ಯಾಣಾಂ ಶತಂ ಸಂವತ್ಸರಾ ಆಯುರಿತಿ ಯುಷ್ಮಾಭಿಃ ಪರಿಕಲ್ಪಿತಂ ತಸ್ಮಾನ್ನೋಽಸ್ಮಾಕಮಾಯುರ್ಗಂತೋಃ ಕ್ಲೃಪ್ತಸ್ಯಾಯುಷೋ ಗಮನಾತ್ಪೂರ್ವಂ ಮಧ್ಯಾ ಮಧ್ಯೇ ಮಾ ರೀರಿಷತ । ಮಾ ಹಿಂಸಿಷ್ಟ । ಕೀದೃಶಾನ್ । ನೋಽಸ್ಮಾಕಂ ತನೂನಾಂ ಶರೀರಾಣಾಂ ಜರಸಂ ಜರಾಂ ಯತ್ರ ಯಸ್ಯಾಮವಸ್ಥಾಯಾಂ ಚಕ್ರ ಕೃತವಂತೋ ಯೂಯಂ । ಯತ್ರ ಚ ಪುತ್ರಾಸಃ ಪುತ್ರಾಃ ಪಿತರೋಽಸ್ಮಾಕಂ ರಕ್ಷಿತಾರೋ ಭವಂತಿ । ಈದೃಗ್ದಶಾಪನ್ನಾನಿತ್ಯರ್ಥಃ ॥ ಅಂತಿ । ಅಂತಿಕಶಬ್ದಸ್ಯ ಕಾದಿಲೋಪೋ ಬಹುಲಮಿತಿ ವಕ್ತವ್ಯಮಿತಿ ಕಲೋಪಃ । ಯತ್ರ । ಋಚಿ ತನುಘುಮಕ್ಷುತಙ್ಕುತ್ರೋತ್ಯೇತಿ ಸಂಹಿತಾಯಾಂ ದೀರ್ಘಃ । ಚಕ್ರ । ಲಿಟಿ ಮಧ್ಯಮಬಹುವಚನಸ್ಯ ಕಿತ್ತ್ವಾದ್ಗುಣಾಭಾವೇ ಯಣಾದೇಶಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ । ಜರಸಂ । ಜರಾಯಾ ಜರಸನ್ಯತರಸ್ಯಾಂ । ಪಾ. ೭-೨-೧೦೧ । ಇತಿ ಜರಸಾದೇಶಃ । ಮಧ್ಯಾ । ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ । ರೀರಿಷತ । ರಿಷ ರುಷ ಹಿಂಸಾಯಾಂ । ಅಸ್ಮಾಣ್ಣ್ಯಂತಾತ್ ಮಾಙಃ ಲುಙ ಮಧ್ಯಮಬಹುವಚನೇ ಚ್ಲೇಶ್ಚಙಃ ಣಿಲೋಪೋಪಧಾಹ್ರಸ್ವದ್ವಿರ್ವಚನಹಲಾದಿಶೇಷಸನ್ವದ್ಭಾವೇತ್ವ-ದೀರ್ಘಾಃ । ಛಾಂದಸಃ ಪದಕಾಲೀನೋ ಹ್ರಸ್ವಃ । ಗಂತೋಃ । ಭಾವಲಕ್ಷಣೇ ಸ್ಥೇಣ್ । ಪಾ. ೩-೪-೧೬ । ಇತಿ ಗಮೇಸ್ತೋಸುನ್ಪ್ರತ್ಯಯಃ ॥

ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ । **ಅಂತಿ**—(ಮಾನವರ) ಜೀವಿತದಲ್ಲಿ ಕಲ್ಪಿತಗಳಾದ । **ಶರದಃ**—ಸಂವತ್ಸರಗಳು । **ಶತಂ ಇತ್ ನು**—ನೂರೇ ಅಷ್ಟೇ. (ಆದ್ದರಿಂದ) । **ನಃ**—ನಮ್ಮ । **ತನೂನಾಂ**—ಶರೀರಗಳಿಗೆ । **ಯತ್ರ**—ಯಾವ ನಮ್ಮ ಆಯುಸ್ಸಿನಕಾಲದಲ್ಲಿ । **ಜರಸಂ** (ದುರ್ಬಲವಾದ) ಮುಪ್ಪನ್ನು । **ಚಕ್ರ**—ಉಂಟುಮಾಡೋಣದರಿಂದ । **ಯತ್ರ**—ಯಾವ ನಮ್ಮ ಅದೇ ಆಯುಃಕಾಲದಲ್ಲಿ । **ಪುತ್ರಾಸಃ**—ನಮ್ಮ ಮಕ್ಕಳು । **ಪಿತರಃ**—(ನಮ್ಮ ) ತಂದೆಗಳಂತೆ ರಕ್ಷಕರಾಗಿ ಅಥವಾ ತಮ್ಮ ಪುತ್ರರಿಗೆ ತಂದೆಗಳಾಗಿ । **ಭವಂತಿ**—ಆಗುತ್ತಾರೆಯೋ (ಹಾಗೆ ಮಾಡಿ) । **ನಃ**—ನಮ್ಮನ್ನು । **ಆಯುರ್ಗಂತೋಃ**— ನಮ್ಮ ಪೂರ್ಣವಾದ ಆಯುಸ್ಸು ಮುಗಿಯುವುದರೊಳಗೆ । **ಮಧ್ಯಾ**—ನಡುವೆ । **ಮಾ ರೀರಿಷತ**—ತಡೆಗಟ್ಟಿ ಹಿಂಸಿಸಬೇಡಿ.

ಭಾವಾರ್ಥ

ಎಲೈ ದೇವತೆಗಳೇ, ಮಾನವರಿಗೆ ಜೀವಿತದಲ್ಲಿ ನೂರುವರ್ಷ ಆಯುಸ್ಸೆಂದು ನಿಷ್ಕರ್ಷವಾಗಿಯೇ ಇದೆ. ಆದರೆ ಆ ನೂರುವರ್ಷಗಳ ಆಯುಸ್ಸನ್ನೂ ಸಂಪೂರ್ಣವಾಗಿ ಅನುಭವಿಸುತ್ತಿರುವ ಕಾಲದಲ್ಲೇ ಮಧ್ಯದಲ್ಲಿ ನಮ್ಮ ಶರೀರಗಳಿಗೆ ಮುಪ್ಪೆಂಬ ದೌರ್ಬಲ್ಯವನ್ನು ಉಂಟುಮಾಡಿ ಅದರಿಂದ ನಮ್ಮ ಸ್ವಾಧೀನವಿಲ್ಲದೇ ನಮ್ಮ ಶರೀರರಕ್ಷಣೆಯು ಭಾರವು ನಮ್ಮಮಕ್ಕಳಿಂದ ಆಗುವಂತೆಮಾಡಿ ನಮ್ಮ ಆಯುಸ್ಸಿನ ಮಧ್ಯಕಾಲದಲ್ಲಿ ನಮ್ಮ ಬೆಳವಣಿಗೆಗೆ ತಡೆಗಟ್ಟಿ ನಮ್ಮನ್ನು ಹಿಂಸಿಸಬೇಡಿ.

## English Translation

O Gods, since only a hundred years were oppointed for the life of man at the close of which you cause old age to our bodies and at the close of which the sons become fathers, may you never destroy our life while it is yet running its course.

॥ ವಿಶೇಷವಿಷಯಗಳು ॥

**ಶತಂ ಶರದಃ**—ನೂರು ಸಂವತ್ಸರಗಳು. ಶರದೃತುವು ಒಂದು ಸಂವತ್ಸರದಲ್ಲಿ ಒಂದಾವರ್ತಿ ಮಾತ್ರ ಬರುವುದರಿಂದ ನೂರು ಶರದೃತುಗಳೆಂದರೆ ನೂರು ವರ್ಷಗಳೆಂದರ್ಥವು. ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಸಂವತ್ಸರವನ್ನು ಸೂಚಿಸುವುದಕ್ಕಾಗಿ ಶರತ್ ಶಬ್ದದ ಪ್ರಯೋಗವು ವಿಶೇಷವಾಗಿರುವುದು.

**ಅಂತಿ— ಅಂತಿಕೇ ।** ಶರೀರದಲ್ಲಿ ವಯೋಧರ್ಮಕ್ಕನುಸಾರವಾಗಿ ತಲೆದೋರುವ ವೃದ್ಧಾಪ್ಯವು, ಮುಪ್ಪು.

**ಜರಸಂ ತನೂನಾಂ**—ಸಮೀಪದಲ್ಲಿ

**ಪುತ್ರಾಸೋ ಯತ್ರ ಪಿತರೋ ಭವಂತಿ**—ಭಾಷ್ಯಕಾರರು ಈ ವಾಕ್ಯಕ್ಕೆ—**ಯತ್ರ ಚ ಪುತ್ರಾಃ ಪಿತರೋಽಸ್ಮಾಕಂ ರಕ್ಷಿತಾರೋ ಭವಂತಿ ।** ಯಾವ ವೃದ್ಧಾಪ್ಯದಲ್ಲಿ ನಮ್ಮ ಪುತ್ರರು ನಮ್ಮನ್ನು ರಕ್ಷಿಸಬೇಕಾಗುವುದೋ ಅಂತಹ ಮುಪ್ಪು ಉಂಟಾಗದಿರಲಿ—let us not become so feeble and infirm as to be as it were, and to require the paternal care of our own sons ಎಂಬರ್ಥವನ್ನು ಹೇಳಿರುವರು. ಈ ವಿಧವಾದ ಅರ್ಥಕ್ಕಿಂತಲೂ ನಮ್ಮ ಆಯುಸ್ಯಕಾಲದಲ್ಲಿ ಅಥವಾ ಆಯುಷ್ಯದ ಕೊನೆಯ ಭಾಗದಲ್ಲಿ ನಮಗೆ ಪುತ್ರರಾಗಿರುವವರು (ಪುತ್ರಾದಿಗಳನ್ನು ಉತ್ಪತ್ತಿಮಾಡುವುದರಿಂದ) ತಂದೆಗಳಾಗುವರೋ ಅಂತಹ ವೃದ್ಧಾಪ್ಯವನ್ನು ಎಂಬ ಅರ್ಥವೇ ಈ ಋಕ್ಕಿನಲ್ಲಿ ಭಾಸವಾಗಿರುವುದು.

**ಆಯುರ್ಗಂತೋಃ— ಕ್ಲೃಪ್ತಸ್ಯಾಯುಷೋ ಗಮನಾತ್ಪೂರ್ವಂ ।** ಕ್ಲೃಪ್ತವಾದ ನೂರುವರ್ಷಗಳ ಆಯುಃ ಪರಿಮಿತಿಗೆ ಮುಂಚೆಯೇ ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಅಂತಿ**—ಅಂತಿಕ ಶಬ್ದ. ಇದರ ಕೊನೆಯ ಕಕಾರಕ್ಕೆ **ಕಾದಿಲೋಪೋ ಬಹುಲಮಿತಿ ವಕ್ತವ್ಯಮ್**—ಎಂಬ ವಚನದಿಂದ ಲೋಪ ಬರುತ್ತದೆ.

**ಯತ್ರ**—ಯಚ್ಛಬ್ದ. ಸಪ್ತಮಿಯಲ್ಲಿ **ಸಪ್ತಮ್ಯಾಸ್ತ್ರಲ್**—ಎಂಬುದರಿಂದ ತ್ರಲ್‌ಪ್ರತ್ಯಯ. ಇದಕ್ಕೆ ವಿಭಕ್ತಿಸಂಜ್ಞೆ ಇರುವುದರಿಂದ **ತ್ಯದಾದೀನಾಮಃ** ಎಂಬುದರಿಂದ ತಕಾರಕ್ಕೆ ಅತ್ವ ಪರರೂಪ. **ಋಚಿತುನು-ಘಮಕ್ಷುತಙ್‌ಕುತ್ರ**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾವಲ್ಲಿ ದೀರ್ಘ ಬರುತ್ತದೆ.

**ಚಕ್ರ**—ಡುಕೃಞ್ ಕರಣೇ ಧಾತು. ಲಿಟ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯಕ್ಕೆ ಅ ಆದೇಶ. ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಉರದತ್ವ. ಚುತ್ವ. ಚಕೃ+ಅ ಎಂದಿರುವಾಗ ಯಣಾದೇಶ. ಯತ್ರ ಎಂದು ಹಿಂದೆ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ದ್ವ್ಯಚೋತಸ್ತಿಙಃ**— (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾವಲ್ಲಿ ದೀರ್ಘ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಜರಸಮ್**— ಜರಾ ಶಬ್ದ. ಇದಕ್ಕೆ ದ್ವಿತೀಯಾ ಏಕವಚನ ಅಮ್ ಪರವಾದಾಗ **ಜರಾಯಾ ಜರಸನ್ಯತರಸ್ಯಾಮ್**—(ಪಾ. ಸೂ. ೭-೨-೧೦೧) ಎಂಬುದರಿಂದ ಜರಸ್ ಆದೇಶ.

**ಪುತ್ರಾಸಃ**—ಪುತ್ರ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್**—ಎಂಬುದರಿಂದ ಜಸಿಗೆ ಅಸುಗಾಗಮ.

**ಭವಂತಿ**— ಭೂ ಸತ್ತಾಯಾಂ ಧಾತು. ಪ್ರಥಮಪುರುಷ ಬಹುವಚನರೂಪ. ಯತ್ರ ಎಂದು ಹಿಂದೆ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತ. ಸಾರ್ವಧಾತುಕವು (ಅಂತಿ) ಅದುಪದೇಶದ ಪರದಲ್ಲಿ ಬಂದುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ.

**ಮಧ್ಯಾ**—ಇದಕ್ಕೆ ಸಪ್ತಮೀವಿಭಕ್ತಿ ಪರವಾದಾಗ **ಸುಪಾಂಸುಲುಕ್**— ಎಂಬುದರಿಂದ ಅದಕ್ಕೆ ಡಾ ಆದೇಶ.

**ರೀರಿಷತ**—ರಿಷ ರುಷ ಹಿಂಸಾಯಾಮ್ ಧಾತು. ಪ್ರೇರಣಾರ್ಥರುವುದರಿಂದ **ಹೇತುಮತಿ ಚ**—ಎಂಬುದರಿಂದ ಣಿಚ್. **ಪುಗಂತಲಘೂಪಧಸ್ಯ ಚ**—ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಸನಾದ್ಯಂತಾಧಾತವಃ**— ಸೂತ್ರದಿಂದ ರೇಷಿ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ ಭೂತಾರ್ಥದಲ್ಲಿ ಇದಕ್ಕೆ ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್**— (ಪಾ. ಸೂ. ೩-೧-೪೮) ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಚಙಾದೇಶ. **ಚಙಿ**— (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿನ ಪ್ರಥಮೈಕಾಚಿಗೆ ದ್ವಿತ್ವ- ಅಭ್ಯಾಸಕ್ಕೆ ಹಲಾದಿಶೇಷ. **ಣೌಚಙ್ಯುಪಧಾಯಾ ಹ್ರಸ್ವಃ**—(ಪಾ.ಸೂ. ೭-೪-೧) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ. ಆಗ **ಸನ್ವಲ್ಲಘುನಿಚಙ್ಪರೇಽನಗ್ಲೋಪೇ**—( ಪಾ.ಸೂ. ೭-೪-೯೩) ಎಂಬುದರಿಂದ ಚಙ್ ಪರವಾದ ಣಿ ಪರವಾದ ಅಂಗಾವಯವ ಅಭ್ಯಾಸಕ್ಕೆ ಲಘು ಪರವಾದುದರಿಂದ ಸನ್ವದ್ಭಾವ ಬರುತ್ತದೆ. ಆದ್ದರಿಂದ **ಸನ್ಯತಃ** ಎಂಬುದರಿಂದ ಅಭ್ಯಾಸದ ಇಕಾರಕ್ಕೆ **ದೀರ್ಘೋ ಲಘೋಃ** ಎಂಬುದರಿಂದ ದೀರ್ಘ. **ಣೇರನಿಟಿ** ಸೂತ್ರದಿಂದ ಚಙ್ ನಿಮಿತ್ತವಾಗಿ ಣಿಗೆ ಲೋಪ. ಮಾಙ್ಯೋಗವಿರುವುದರಿಂದ **ನಮಾಙ್ಯೋಗೇ**—(ಪಾ.ಸೂ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಛಾಂದಸವಾಗಿ ಪದಕಾಲದಲ್ಲಿ ಹ್ರಸ್ವ ಬರುತ್ತದೆ.

**ಗಂತೋಃ**—ಗಮ್ಲೃ ಗತೌ ಧಾತು. ಇದಕ್ಕೆ **ಭಾವಲಕ್ಷಣೇಸ್ಥೇಣ್**—(ಪಾ. ಸೂ. ೩-೪-೧೬) ಎಂಬುದರಿಂದ (ಗಮನ) ಭಾವಾರ್ಥದಲ್ಲಿ ತೋಸುನ್ ಪ್ರತ್ಯಯ. **ಕ್ತ್ವಾತೋಸುನ್ಕಸುನಃ**— (ಪಾ. ಸೂ. ೧-೧-೪೦) ಎಂಬುದರಿಂದ ಅವ್ಯಯಸಂಜ್ಞೆ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಪ್ರತ್ಯಯವು ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. || ೯ ||

॥ ಸಂಹಿತಾಪಾಠಃ ॥

ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।
ವಿಶ್ವೇ ದೇವಾ ಅದಿತಿಃ ಪಂಚ ಜನಾ ಅದಿತಿರ್ಜಾತಮದಿತಿರ್ಜನಿತ್ವಂ ॥ ೧೦ ॥

ಪದಪಾಠಃ

ಅದಿತಿಃ । ದ್ಯೌಃ । ಅದಿತಿಃ । ಅಂತರಿಕ್ಷಂ । ಅದಿತಿಃ । ಮಾತಾ । ಸಃ । ಪಿತಾ । ಸಃ । ಪುತ್ರಃ ।
ವಿಶ್ವೇ । ದೇವಾಃ । ಅದಿತಿಃ । ಪಂಚ । ಜನಾಃ । ಅದಿತಿಃ । ಜಾತಂ । ಅದಿತಿಃ । ಜನಿಽತ್ವಂ ॥ ೧೦ ॥

ಸಾಯಣಭಾಷ್ಯಂ

ಅದಿತಿರ್ದ್ಯೌರದಿತಿರಿತ್ಯೇಷಾದಿತಿದೇವತಾಕೇ ಪಶೌ ಹವಿಷೋ ಯಾಜ್ಯಾ । ಸೂತ್ರಿತಂ ಚ । ಅದಿತಿರ್ದ್ಯೌರದಿತಿರಂತರಿಕ್ಷಂ ನ ತೇ ವಿಷ್ಣೋ ಜಾಯಮಾನೋ ನ ಜಾತಃ । ಆ. ೩-೮ ! ಇತಿ ॥

ಅದಿತಿರದೀನಾಖಂಡನೀಯಾ ವಾ ಪೃಥಿವೀ ದೇವಮಾತಾ ವಾ ಸೈವ ದ್ಯೌರ್ದ್ಯೋತನಶೀಲೋ ನಾಕಃ । ಸೈವಾಂತರಿಕ್ಷಮಂತರಾ ದ್ಯಾವಾಪೃಥಿವ್ಯೋರ್ಮಧ್ಯ ಈಕ್ಷ್ಯಮಾಣಂ ವ್ಯೋಮ । ಸೈವ ಮಾತಾ ನಿರ್ಮಾತ್ರೀ ಜಗತೋ ಜನನೀ । ಸೈವ ಪಿತೋತ್ಪಾದಕಃ । ತತಶ್ಚ ಸ ಪುತ್ರೋ ಮಾತಾಪಿತ್ರೋರ್ಜಾತಃ ಪುತ್ರೋಽಪಿ ಸೈವ । ವಿಶ್ವೇ ದೇವಾಃ ಸರ್ವೇಽಪಿ ದೇವಾ ಅದಿತಿರೇವ । ಪಂಚ ಜನಾ ನಿಷಾದಪಂಚಮಾಶ್ಚತ್ವಾರೋ ವರ್ಣಾಃ । ಯದ್ವಾ । ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸಿ । ತದುಕ್ತಂ ಯಾಸ್ಕೇನ । ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ । ನಿ. ೩-೮ । ಇತಿ । ಬ್ರಾಹ್ಮಣೇ ತ್ವೇವಮಾಮ್ನಾತಂ । ಸರ್ವೇಷಾಂ ವಾ ಏತತ್ಪಂಚಜನಾನಾಮುಕ್ಥಂ ದೇವಮನುಷ್ಯಾಣಾಂ ಗಂಧರ್ವಾಪ್ಸರಸಾಂ ಸರ್ಪಾಣಾಂ ಚ ಪಿತೄಣಾಂ ಚ । ಐ. ಬ್ರಾ. ೩-೩೧। ಇತಿ। ತತ್ರ ಗಂಧರ್ವಾಪ್ಸರಸಾಮೈಕ್ಯಾತ್ಪಂಚಜನತ್ವಂ। ಏವಂವಿಧಾಃ ಪಂಚ ಜನಾ ಅಪ್ಯದಿತಿರೇವ। ಜಾತಂ ಜನನಂ ಪ್ರಜಾನಾಮುತ್ಪತ್ತಿಃ ಸಾಪ್ಯದಿತಿರೇವ। ಜನಿತ್ವಂ ಜನ್ಮಾಧಿಕರಣಂ ತದಪ್ಯದಿತಿರೇವ। ಏವಂ ಸಕಲಜಗದಾತ್ಮನಾದಿತಿಃ ಸ್ತೂಯತೇ। ಉಕ್ತಂ ಚ ಯಾಸ್ಕೇನ। ಇತ್ಯದಿತೇರ್ವಿಭೂತಿಮಾಚಷ್ಟೇ ।ನಿ.೪-೨೩। ಇತಿ ॥ ಅದಿತಿಃ । ದೋ ಅವಖಂಡನೇ । ಅಸ್ಮಾತ್ಕರ್ಮಣಿ ಕ್ತಿನಿ ದ್ಯತಿಸ್ಯತಿಮಾಸ್ಥಾಂ । ಪಾ. ೭-೪-೪೦ । ಇತೀತ್ವಂ । ಯಾಸ್ಕಪಕ್ಷೇ ತು ದೀಙ್ ಕ್ಷಯ ಇತ್ಯಸ್ಮಾತ್ ಕ್ತಿನಿ ವ್ಯತ್ಯಯೇನ ಹ್ರಸ್ವತ್ವಂ। ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ। ಸ ಪಿತಾ । ನಿರ್ದಿಶ್ಯಮಾನಪ್ರತಿನಿರ್ದಿಶ್ಯಮಾನಯೋರೇಕತಾಮಾಪಾದಯಂತಿ ಸರ್ವನಾಮಾನಿ ಪರ್ಯಾಯೇಣ ತಲ್ಲಿಂಗತಾಮುಪಾದದತ ಇತ್ಯುದ್ದೇಶ್ಯಲಿಂಗತಯಾ ಪುಲ್ಲಿಂಗತ್ವಂ। ಜನಿತ್ವಂ । ಜನೇರೌಣಾದಿಕಸ್ತ್ವನ್ಪ್ರತ್ಯಯಃ ॥

### ಪ್ರತಿಪದಾರ್ಥ

**ಅದಿತಿಃ**—ಅದಿತಿಯು । **ದ್ಯೌಃ**—ಪ್ರಕಾಶಮಾನವಾದ ಸ್ವರ್ಗವು । **ಅದಿತಿಃ**—ಅದಿತಿಯು । **ಅಂತರಿಕ್ಷಂ**—ಅಂತರಿಕ್ಷವು । **ಅದಿತಿಃ**—ಅದಿತಿಯು । **ಮಾತಾ**—(ಜಗತ್ತಿಗೆಲ್ಲಾ) ಜನನಿಯು । **ಸ ಪಿತಾ**—(ಅವಳೇ ಜಗತ್ತಿಗೆಲ್ಲ) ಜನಕನು । **ಸ ಪುತ್ರಃ**—(ಅವಳೇ ತಂದೆತಾಯಿಗಳಿಗೆ ಹುಟ್ಟಿದ) ಮಗನು । **ವಿಶ್ವೇದೇವಾಃ**—ಸಕಲ ದೇವತೆಗಳೂ । **ಅದಿತಿಃ**—ಅದಿತಿಯೇ । **ಪಂಚಜನಾಃ**—ನಿಷಾದರನ್ನೂ ಕೂಡಿಕೊಂಡ ಉಳಿದ ನಾಲ್ಕು ವರ್ಣಗಳೂ ಅಥವಾ ಗಂಧರ್ವರೂ, ಪಿತೃಗಳೂ, ದೇವತೆಗಳೂ, ಅಸುರರೂ ಮತ್ತು ರಾಕ್ಷಸರೂ ಆದ ಐದು ಜಾತಿಯವರೂ । **ಅದಿತಿಃ**—ಅದಿತಿಯು । **ಜಾತಂ**—ಹುಟ್ಟಿರುವುದು । **ಅದಿತಿಃ**—ಅದಿತಿಯು । **ಜನಿತ್ವಂ**—( ಮುಂದಕ್ಕೆ ) ಹುಟ್ಟುವುದೂ ಅಥವಾ ಉತ್ಪತ್ತಿ ಸ್ಥಾನವೂ (ಅದಿತಿಯು) ॥

### ಭಾವಾರ್ಥ

ಅಖಂಡಳಾದ ಅದಿತಿಯು ಸಕಲವಿಶ್ವಕ್ಕೂ ಜನ್ಮದಾತೆಯು. ಅವಳೇ ಜಗಜ್ಜನನಿಯು, ಜಗಜ್ಜನಕನು. ಉತ್ಪನ್ನವಾದ ಸಕಲವಸ್ತುವೂ ಅವಳೇ, ಅದಿತಿಯೇ ಉತ್ಪತ್ತಿ ಸ್ಥಾನವು. ವರ್ಣಾತ್ಮಕವಾದ ಮತ್ತು ನಿಷಾದರಿಂದ ಕೂಡಿದ ಐದು ಜಾತಿಯ ಜನರೂ ಅವಳೇ. ಅದಿತಿಯೇ ಸಕಲ ದೇವತೆಗಳು, ಅವಳೇ ಪ್ರಕಾಶಮಾನವಾದ ಸ್ವರ್ಗವು, ಅವಳೇ ಅಂತರಿಕ್ಷವು, ಅವಳೇ ಸಕಲ ವಿಶ್ವವು, ಅವಳೇ ವಿಶ್ವನಿಯಾಮಕಳು.

### English Translation

Aditi is heaven ; Aditi is firmament ; Aditi is mother, father and son ; Aditi is all the gods ; Aditi is the five classes of men ; Aditi is what is born, Aditi is what shall be born.

### ವಿಶೇಷವಿಷಯಗಳು

**ಅದಿತಿರ್ದ್ಯೌರದಿತಿಃ**—ಎಂಬ ಈ ಋಕ್ಕನ್ನು ಅದಿತಿದೇವತಾಕವಾದ ಪಶುಯಾಗದಲ್ಲಿ ಹವಿಸ್ಸನ್ನು ಹೋಮಮಾಡುವ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅದಿತಿರ್ದ್ಯೌರದಿತಿರಂತರಿಕ್ಷಂ ನ ತೇ ವಿಷ್ಣೋ ಜಾಯಮಾನೋ ನ ಜಾತಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩-೮).

**ಅದಿತಿಂ**—ಅದಿತಿಯ ವಿಷಯವಾಗಿ ಈ ಸೂಕ್ತದ ೩ನೆಯ ಋಕ್ಕಿನ ವಿಶೇಷವಿಷಯಗಳಲ್ಲಿ ಬರೆದಿರುವುದನ್ನು ನೋಡಿ.

**ಪಂಚ ಜನಾಃ**—ಐದು ಜನಾಂಗಗಳು. ಋಗ್ವೇದಕಾಲದಲ್ಲಿ ಪ್ರಸಿದ್ಧವಾದ ಐದು ಜನಾಂಗಗಳ ವಿಷಯಗಳು ಋಗ್ವೇದದಲ್ಲಿ ಅಲ್ಲಲ್ಲಿ ಸೂಚಿತವಾಗಿರುವುದಲ್ಲದೆ ಐತರೇಯಬ್ರಾಹ್ಮಣ ೩-೩೧ ; ೪-೨೭ ; ತೈತ್ತಿರೀಯಸಂಹಿತಾ ೧.೬.೧-೨ ; ಕಾಠಕಸಂಹಿತಾ ೫-೬ ; ೩೨-೬ ; ಬೃಹದಾರಣ್ಯಕೋಪನಿಷತ್ ೪-೪-೧೭ ಇತ್ಯಾದಿ ಸ್ಥಳಗಳಲ್ಲಿ ಪಠಿತವಾಗಿವೆ. ಋಗ್ವೇದದಲ್ಲಿ ಪಂಚಜನಾಃ ಎಂಬ ಶಬ್ದಗಳಲ್ಲದೆ ಅದೇ ಅರ್ಥವನ್ನು ಹೇಳುವ **ಪಂಚಮಾನುಷಾಃ**

( ಋ. ಸಂ. ೮-೯-೨ ) **ಜನಾಃ** ( ಋ. ಸಂ. ೩-೩೭-೯ ; ೩-೫೯-೮ ; ೬-೧೧-೪ ; ೮-೩೨-೨೨ ; ೯-೬೫-೨೩ ; ೯-೯೨-೩ ; ೧೦-೪೫-೬ ; ) **ಕೃಷ್ಟಯಃ** ( ಋ. ಸಂ. ೨-೨-೧೦ ; ೩-೫೩-೧೬; ೪-೩೮-೧೦ ) ೧೦-೬೦-೪ ; ೧೦-೧೧೯-೬ ; ) **ಕ್ಷಿತಯಃ** ( ಋ. ಸಂ. ೧-೭-೯ ; ೧-೧೭೬-೩ ; ೫-೩೫-೨ ; ೬-೪೬-೭ ; ೭-೭೫-೪ ; ೭-೭೯-೧) **ಚರ್ಷಣ್ಯಃ** ( ಋ. ಸಂ. ೫-೮೬-೨ ; ೭-೧೫-೨ ; ೯-೧೦೧-೯) ಎಂಬ ಶಬ್ದಗಳ ಪ್ರಯೋಗವಿರುವುದು.

ಪಾಶ್ಚಾತ್ಯರಲ್ಲಿ ಕೆಲವರು—ಪಂಚಜನರೆಂದರೆ ಸರಸ್ವತೀನದಿಯ ತೀರದಲ್ಲಿ ವಾಸವಾಗಿದ್ದ ಪ್ರಸಿದ್ಧರಾದ ಅನು, ದ್ರುಹ್ಯು, ಯದು, ತುರ್ವಶ, ಪುರು ಎಂಬ ಐದು ಆರ್ಯಜನಾಂಗಗಳೆಂದು ಅಭಿಪ್ರಾಯಪಡುವರು. ಇವರು ತಮ್ಮ ಅಭಿಪ್ರಾಯ ಸಮರ್ಥನೆಗಾಗಿ ಋ. ಸಂ. ೧-೧೦೮-೮ ; ೮-೧೦-೫ ಎಂಬ ಋಕ್ಕುಗಳನ್ನು ಉದಾಹರಿಸಿರುವರು. ಶತಪಥಬ್ರಾಹ್ಮಣದಲ್ಲಿಯೂ (ಶ. ಬ್ರಾ ೧೩-೫-೪-೧೪) ಐತರೇಯಬ್ರಾಹ್ಮಣದಲ್ಲಿಯೂ (ಐ. ಬ್ರಾ. ೮-೨೩) ಈ ಪಂಚಜನರು ಭರತರೆಂಬುವರ ವೈರಿಗಳೆಂದು ಉಕ್ತವಾಗಿರುವುದು.

**ಪಂಚಜನಾಃ** ಎಂಬ ಶಬ್ದಕ್ಕೆ ಭಾಷ್ಯಕಾರರು **ನಿಷಾದಪಂಚಮಾಃ** ಎಂದೂ, ಸ್ಕಂದಸ್ವಾಮಿಯು **ಗಂಧರ್ವಾಃ ಪಿತರೋ ದೇವಾಃ** ಎಂದೂ ವೆಂಕಟಮಾಧವರು—**ಮನುಷ್ಯಾಣಾಂ ಪಂಚಾನಾಂ ಕ್ಷಿತೀನಾಂ ನಿವಸತಾಂ ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತಿ ಪಂಚತ್ವಂ** ಎಂದೂ ಅರ್ಥವಿವರಣೆ ಮಾಡಿದ್ದಾರೆ. ಸಾಯಣರ ಅಭಿಪ್ರಾಯದಂತೆ ಪಂಚಜನಾಃ ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ ಎಂಬ ಐದು ಜಾತಿಯ ಜನರೆಂದು ಅರ್ಥವಾಗುವುದು. ನಿಷಾದರೆಂದರೆ ಬ್ರಾಹ್ಮಣಾದಿನಾಲ್ಕುವರ್ಣಗಳಲ್ಲಿ ಸೇರದಿರುವ ಮತ್ತು ಮೃಗಗಳ ಬೇಟೆಯಿಂದಲೇ ಜೀವಿಸುವ ಜನರೆಂದರ್ಥವು. ಈ ದೇಶದ ಪೂರ್ವನಿವಾಸಿಗಳಾದ ಗೊಂಡರು, ಕೋಲರು, ಭಿಲ್ಲರು ಮೊದಲಾದವರು ಈ ಜಾತಿಗೆ ಸೇರಿದವರು. ಇವರು ಮಧ್ಯಪ್ರಾಂತ್ಯ ಮೊದಲಾದ ಕೆಲವು ಸ್ಥಳಗಳಲ್ಲಿ ಮಾತ್ರ ಈಗಲೂ ಬಹುಸಂಖ್ಯೆಯಲ್ಲಿ ಬೆಟ್ಟಗುಡ್ಡಗಳಲ್ಲಿ ಅನಾಗರಿಕರಂತೆ ವಾಸಿಸುತ್ತಿರುವರು. ಪಂಚ ಜನಾಃ ಮತ್ತು ಪಂಚಕೃಷ್ಟೀಃ ಎಂಬ ಶಬ್ದಪ್ರಯೋಗವಿರುವ ಒಂದೆರಡು ಋಕ್ಕುಗಳನ್ನು ಉದಾಹರಣೆಗಾಗಿ ಕೊಟ್ಟಿರುತ್ತೇವೆ—

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚಜನಾ ಮಮ ಹೋತ್ರಂ ಜುಷಧ್ವಂ ॥**
( ಋ. ಸಂ. ೧೦-೫೩-೪)

**ಪಂಚ ಜನಾ ಮಮ ಹೋತ್ರಂ ಜುಷಂತಾಂ ಗೋಜಾತಾ ಉತ ಯೇ ಯಜ್ಞಿಯಾಸಃ ॥**
(ಋ. ಸಂ. ೧೦-೫೩-೫)

**ಸದ್ಯಶ್ಚಿದ್ಯಃ ಶವಸಾ ಪಂಚಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ ॥**
( ಋ. ಸಂ. ೧೦-೧೭೮-೩)

ಈ ಋಕ್ಕುಗಳಲ್ಲಿರುವ **ಪಂಚ ಜನಾಃ** ಮತ್ತು **ಪಂಚಕೃಷ್ಟೀಃ** ಎಂಬ ಶಬ್ದಗಳಿಗೆ ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ಅರ್ಥವಿವರಣೆ ಮಾಡಿರುವರು—

**ಪಂಚ ಜನಾ ಮಮ ಹೋತ್ರಂ ಜುಷಧ್ವಂ ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ । ನಿಷಾದಃ ಕಸ್ಮಾನ್ನಿಷದನೋ ಭವತಿ ನಿಷಣ್ಣಮಸ್ಮಿನ್ ಪಾಪಕಮಿತಿ ನೈರುಕ್ತಾ ಇತಿ ॥** (ನಿ. ೩-೮)

ಎಂದರೆ ಪಂಚಜನಸೆಂದರೆ ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದು ವಿಧ ಜನರೆಂದು ಕೆಲವರು ಹೇಳುವರು. ಬ್ರಾಹ್ಮಣಾದಿ ನಾಲ್ಕುವರ್ಣದವರೂ ನಿಷಾದ ಎಂಬ ಬೇಡರಜಾತಿಗೆ ಸೇರಿದ ಜನರೂ ಸೇರಿ ಐದುವಿಧ ಜನರೆಂದು ಉಪಮನ್ಯು ಮುಂತಾದವರ ಮತವು. ಇದನ್ನೇ ಸಾಯಣರು ಅನು ಮೋದಿಸಿರುವರು. ನಿಷಾದರೆಂದರೆ ಪ್ರಾಣಿಗಳನ್ನು ಕೊಲ್ಲುವವರು ಅಥವಾ ಇವರಲ್ಲಿ ಪಾಪವು ತುಂಬಿರುವುದರಿಂದ ಇವರನ್ನು ನಿಷಾದರೆಂದು ನೈರುಕ್ತಕಾರರು ಹೇಳುವರು. ಇದಲ್ಲದೆ ಆ ಕಾಲದಲ್ಲಿ ಪ್ರಸಿದ್ಧವಾಗಿದ್ದ ಅನು, ದ್ರುಹ್ಯು, ಯದು, ತುರ್ವಶ, ಪುರು ಎಂಬ ಮುಖ್ಯವಾದ ಐದು ಆರ್ಯ ಜನಾಂಗಗಳ ಹೆಸರುಗಳನ್ನು ಒಟ್ಟುಗೂಡಿಸಿ ಪಂಚ ಜನಾಃ—ಐದು ಪಂಗಡಗಳು (tribes) ಎಂದು ಹೇಳುವ ರೂಢಿಯಿದ್ದಿರಬಹುದು. ಹೇಗಾದರೂ ಈ ವಿಚಾರದಲ್ಲಿ ನಿರುಕ್ತಕಾರರಾದ ಯಾಸ್ಕರ ಕಾಲದಲ್ಲಿಯೂ ಸಹ ಅಭಿಪ್ರಾಯಭೇದವಿದ್ದಿತೆಂಬುದು ಸ್ಪಷ್ಟವಾಗಿದೆ.

ವ್ಯಾಕರಣಪ್ರಕ್ರಿಯಾ

**ಅದಿತಿಃ**—ದೋ ಅವಖಂಡನೇ ಧಾತು. ಕರ್ಮಣಿಯಲ್ಲಿ ಇದಕ್ಕೆ **ಸ್ತ್ರಿಯಾಂ ಕ್ತಿನ್**—ಎಂಬುದರಿಂದ ಕ್ತಿನ್‌ಪ್ರತ್ಯಯ. ಇದು ಪರವಾದಾಗ **ದ್ಯತಿಸ್ಯತಿಮಾಸ್ಥಾಮಿತ್ತಿ ಕಿತಿ** (ಪಾ. ಸೂ ೭-೪-೪೦) ಎಂಬುದರಿಂದ ಧಾತುವಿಗೆ ಇತ್ವ. ಯಾಸ್ಕರ ಪಕ್ಷದಲ್ಲಿ ದೀಙ್ ಕ್ಷಯೇ. ಧಾತು. ಇದಕ್ಕೆ ಭಾವಾರ್ಥದಲ್ಲಿ ಹಿಂದಿನಂತೆ ಕ್ತಿನ್‌ಪ್ರತ್ಯಯ. ವ್ಯತ್ಯಯದಿಂದ ಧಾತುವಿಗೆ ಪ್ರತ್ಯಯಪರವಾದಾಗ ಹ್ರಸ್ವ. ನ ದಿತಿಃ ಅದಿತಿಃ. ನಞ್ ತತ್ಪುರುಷಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸ ಪಿತಾ**—ಇಲ್ಲಿ ಸಃ ಎಂಬುದರಿಂದ ಹಿಂದೆ ಪ್ರಸಕ್ತವಾದುದನ್ನು ತೆಗೆದುಕೊಳ್ಳಬೇಕು. ಹಿಂದೆ ಪ್ರಸಕ್ತ ವಾದುದು. ದೇವಮಾತಾ ಇತ್ಯಾದಿ. ಅದು ಸ್ತ್ರೀಲಿಂಗವಾಗಿದೆ. ಆಗ ಇಲ್ಲಿಯೂ ಸಾ ಎಂದು ಸ್ತ್ರೀಲಿಂಗದಿಂದಲೇ ಹೇಳಬೇಕಲ್ಲವೇ ಎಂದು ಆಶಂಕೆಯು ಉಂಟಾಗುತ್ತದೆ. ಅದಕ್ಕೆ ಅಭಿಜ್ಞರು ಹೀಗೆ ಸಮಾಧಾನ ಹೇಳಿರುತ್ತಾರೆ. ನಿರ್ದಿಶ್ಯಮಾನಪ್ರತಿನಿರ್ದಿಶ್ಯಮಾನಯೋರೇಕತಾಮಾಪಾದಯಂತಿ ಸರ್ವನಾಮಾನಿ ಪರ್ಯಾಯೇಣ ತಲ್ಲಿಂಗತಾಮು ಪಾದತ್ತೇ ಇತಿ ಉದ್ದೇಶ್ಯಲಿಂಗತಯಾ ಪುಲ್ಲಿಂಗತ್ವಮ್. ಸರ್ವನಾಮಶಬ್ದಗಳು ಉದ್ದೇಶ್ಯವಿಧೇಯಗಳಿಗೆ ಐಕ್ಯವನ್ನು ಬೋಧಿಸುತ್ತವೆ. ಆಗ ವಿವಕ್ಷಾಧೀನವಾಗಿ ಕೆಲವುವೇಳೆ ವಿಧೇಯಲಿಂಗವೂ ಕೆಲವು ಕಡೆ ಉದ್ದೇಶ್ಯ ಲಿಂಗವೂ ಬರುತ್ತವೆ. ಇಲ್ಲಿ ಉದ್ದೇಶ್ಯಲಿಂಗವನ್ನನುಸರಿಸಿ ಪುಲ್ಲಿಂಗದಲ್ಲಿ ನಿರ್ದೇಶಮಾಡಿರುತ್ತಾರೆ.

**ಜನಿತ್ವಮ್**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಅಧಿಕರಣಾರ್ಥದಲ್ಲಿ ಔಣಾದಿಕವಾದ ತ್ವನ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ಅದಕ್ಕೆ ಇಡಾಗಮ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧೦ ॥



# ತೊಂಭತ್ತನೆಯ ಸೂಕ್ತವು

**ಋಜುನೀತೀತಿ ನವರ್ಚಂ ಷಷ್ಠಂ ಸೂಕ್ತಂ ಗೋತಮಸ್ಯಾರ್ಷಂ । ಅತ್ರಾನುಕ್ರಮ್ಯತೇ । ಋಜುನೀತೀ ನವ ಗಾಯತ್ರಮಂತ್ಯಾನುಷ್ಟುಬಿತಿ । ಪೂರ್ವತ್ರ ವೈಶ್ವದೇವಂ ತ್ವಿತ್ಯುಕ್ತತ್ವಾತ್ತು ಹ್ಯಾದಿಪರಿಭಾಷಯೇದಮಪಿ ಸೂಕ್ತಂ ಬಹುದೇವತಾಕಂ । ಸೂಕ್ತವಿನಿಯೋಗೋ ಲೈಂಗಿಕಃ । ಚಾತುರ್ವಿಂಶಿಕೇಽಹನಿ ಪ್ರಾತಃಸವನೇ ಮೈತ್ರಾವರುಣಸ್ಯ ಋಜುನೀತೀ ನ ಇತ್ಯೇಷಾರಂಭಣೀಯಾ । ಚತುರ್ವಿಂಶ ಇತಿ ಖಂಡೇ ಸೂತ್ರಿತಂ । ಋಜುನೀತೀ ನೋ ವರುಣ ಇಂದ್ರಂ ವೋ ವಿಶ್ವತಸ್ಪರಿ । ಆ. ೭-೨ । ಇತಿ ॥ ಅಹರ್ಗಣೇಷು ದ್ವಿತೀಯಾದಿಷ್ವಹಃಸ್ವಪ್ಯೇಷಾರಂಭಣೀಯಾ ಶಂಸನೀಯಾ । ಸೂತ್ರಿತಂ ಚ । ಆರಂಭಣೀಯಾಃ ಪರ್ಯಾಸಾನ್ಕದ್ವತೋಽಹರಹಃ ಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ । ಆ. ೭-೧ । ಇತಿ ॥**

ಅನುವಾದವು—**ಋಜುನೀತೀ** ಎಂಬುವುದು ಈ ಹದಿನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೋತಮನು ಋಷಿಯು. ಅನುಕ್ರಮಣಿಕೆಯಲ್ಲಿ—**ಋಜುನೀತೀ ನವ ಗಾಯತ್ರಮಂತ್ಯಾನುಷ್ಟುಬಿತಿ**—ಎಂದರೆ ಒಂಭತ್ತು ಋಕ್ಕುಗಳಿರುವ ಋಜುನೀತೀ ಎಂಬ ಸೂಕ್ತದಲ್ಲಿ ಮೊದಲಿನ ಎಂಟುಋಕ್ಕುಗಳು ಗಾಯತ್ರೀಛಂದಸ್ಸಿನವು, ಕೊನೆಯ ಋಕ್ಕು ಅನುಷ್ಟುಪ್‌ಛಂದಸ್ಕವು ಎಂದು ಹೇಳಿರುವುದು. ಈ ಸೂಕ್ತಕ್ಕೂ ವಿಶ್ವೇದೇವತೆಗಳೇ ದೇವತೆಗಳು. ಸೂಕ್ತವಿನಿಯೋಗವು ಲೈಂಗಿಕವು. ಯಜ್ಞದ ಇಪ್ಪತ್ತನಾಲ್ಕನೆಯ ದಿನದಲ್ಲಿ ಪ್ರಾತಃಸವನಕಾಲದಲ್ಲಿ ಮೈತ್ರಾವರುಣಮಂತ್ರಪಠನವನ್ನು **ಋಜುನೀತೀ** ಎಂಬ ಋಕ್ಕಿನಿಂದ ಆರಂಭಮಾಡಬೇಕೆಂದು ಆಶ್ವಲಾಯನಶ್ರೌತಸೂತ್ರದ **ಚತುರ್ವಿಂಶೇ** ಎಂಬ ಖಂಡದ **ಋಜುನೀತೀ ನೋ ವರುಣ, ಇಂದ್ರಂ ವೋ ವಿಶ್ವತಸ್ಪರಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೨) ಮತ್ತು ಅಹರ್ಗಣವೆಂಬ ಯಾಗವಿಶೇಷದಲ್ಲಿ ಎರಡನೆಯ ದಿವಸದಿಂದ ಮುಂದಕ್ಕೆ ಈ ಋಕ್ಕಿನಿಂದ ಪ್ರಾರಂಭವಾಗುವ ಮಂತ್ರಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ **ಆರಂಭಣೀಯಾಃ ಪರ್ಯಾಸಾನ್ಕದ್ವತೋ ಅಹರಹಃ ಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೧)

---

॥ ಓಂ ॥

## ಸೂಕ್ತ—೯೦

॥ ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೯೦ ॥

॥ ಅಷ್ಟಕ—೧ ॥ ಅಧ್ಯಾಯ—೬ ॥ ವರ್ಗ— ೧೭, ೧೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೯ ॥

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ವಿಶ್ವೇದೇವಾಃ ॥

॥ ಛಂದಃ— ೧-೮ ಗಾಯತ್ರೀ । ೯. ಅನುಷ್ಟುಪ್ ॥

ಸಂಹಿತಾಪಾಠಃ

ಋಜುನೀತೀ ನೋ ವರುಣೋ ಮಿತ್ರೋ ನಯತು ವಿದ್ವಾನ್ ।

ಅರ್ಯಮಾ ದೇವೈಃ ಸಜೋಷಾಃ ॥ ೧ ॥

ಸಂಹಿತಪಾಠ

ಋಜುऽನೀತೀ । ನಃ । ವರುಣಃ । ಮಿತ್ರಃ । ನಯತು । ವಿದ್ವಾನ್ ।

ಅರ್ಯಮಾ । ದೇವೈಃ । ಸऽಜೋಷಾಃ ॥ ೧ ॥

ಸಾಯಣಭಾಷ್ಯಂ

ಅಹರಭಿಮಾನೀ ದೇವೋ ಮಿತ್ರೋ ವರುಣೋ ರಾತ್ರ್ಯಭಿಮಾನೀ । ಮಿತ್ರಶ್ಚ ವರುಣಶ್ಚ ವಿದ್ವಾನ್ ನೇತವ್ಯಮುತ್ತಮಂ ಸ್ಥಾನಂ ಜಾನನ್ ನೋಽಸ್ಮಾನ್ ಋಜುನೀತೀ ಋಜುನೀತ್ಯಾ ಋಜುನಯನೇನ ಕೌಟಿಲ್ಯರಹಿತೇನ ಗಮನೇನ ನಯತು । ಅಭಿಮತಂ ಫಲಂ ಪ್ರಾಪಯತು । ತಥಾ ದೇವೈರನ್ಯೈರಿಂದ್ರಾದಿಭಿಃ ಸಜೋಷಾಃ ಸಮಾನಪ್ರೀತಿರರ್ಯಮಾಹೋರಾತ್ರವಿಭಾಗಸ್ಯ ಕರ್ತಾ ಸೂರ್ಯಶ್ಚಾಸ್ಮಾನೃಜುಗಮನೇನಾಭಿಮತಂ ಸ್ಥಾನಂ ಪ್ರಾಪಯತು ॥ ಋಜುನೀತೀ । ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘತ್ವಂ ॥

ಪ್ರತಿಪದಾರ್ಥ

**ಮಿತ್ರಃ**—(ಅಹರಭಿಮಾನದೇವತೆಯಾದ) ಮಿತ್ರನೂ । **ವರುಣಃ**—(ರಾತ್ರ್ಯಭಿಮಾನ ದೇವತೆಯಾದ) ವರುಣನೂ । **ವಿದ್ವಾನ್**—(ನಮ್ಮ ಗಮ್ಯಸ್ಥಾನವನ್ನು) ತಿಳಿದುಕೊಂಡು । **ನಃ**—ನಮ್ಮನ್ನು । **ಋಜುನೀತೀ**—ನೇರವಾದ (ಪ್ರಾಮಾಣಿಕವಾದ) ಮಾರ್ಗದಿಂದ ಕರೆದುಕೊಂಡುಹೋಗಿ । **ನಯತು**—(ನಮ್ಮ ಅಭೀಷ್ಟ ಫಲವನ್ನು) ಸೇರಿಸಲಿ (ಹಾಗೆಯೇ) । **ದೇವೈಃ**—ಇತರ ಇಂದ್ರಾದಿದೇವತೆಗಳೊಡನೆ । **ಸಜೋಷಾಃ**—ಸಮಾನವಾದ ಸಂತೋಷವುಳ್ಳ । **ಅರ್ಯಮಾ**—ಅರ್ಯಮದೇವನೂ ಸಹ (ನಮ್ಮ ಅಭೀಷ್ಟಸ್ಥಾನವನ್ನು ಸೇರಿಸಲಿ) ॥

ಭಾವಾರ್ಥ

ಅಹರಭಿಮಾನದೇವತೆಯಾದ ಮಿತ್ರನೂ, ರಾತ್ರ್ಯಭಿಮಾನ ದೇವತೆಯಾದ ವರುಣನೂ ನಮ್ಮ ಗಮ್ಯಸ್ಥಾನವನ್ನು ತಿಳಿದುಕೊಂಡು ನಮ್ಮನ್ನು ಪ್ರಾಮಾಣಿಕವಾದ ಮಾರ್ಗದಿಂದ ಕರೆದುಕೊಂಡುಹೋಗಿ ನಮ್ಮ ಅಭೀಷ್ಟವನ್ನು ಹೊಂದಿಸಲಿ. ಹಾಗೆಯೇ ಇತರ ಇಂದ್ರಾದಿ ದೇವತೆಗಳೊಡನೆ ಸಮಾನವಾದ ಪ್ರೀತಿಯುಳ್ಳ ಮತ್ತು ಅಹೋರಾತ್ರವಿಭಾಗಕರ್ತನಾದ ಅರ್ಯಮ ದೇವನೂ ಸಹ ನಮ್ಮ ಅಭೀಷ್ಟ ಸ್ಥಾನವನ್ನು ಸೇರಿಸಲಿ.

## English Translation

May Varuna, the wise Mitra and Aryaman accompanied with other gods lead us by straight paths.

### ವಿಶೇಷ ವಿಷಯಗಳು

**ಋಜುನೀತೀ—ಕೌಟಿಲ್ಯರಹಿತೇನ ಗಮನೇನ।** ಮೋಸ, ವಂಚನೆ ಮುಂತಾದವುಗಳಿಲ್ಲದ ನ್ಯಾಯವಾದ ಸನ್ಮಾರ್ಗದಿಂದ

**ವಿದ್ವಾನ್**—ತಿಳಿವಳಿಕೆಯುಳ್ಳ, ಬುದ್ಧಿವಂತನಾದ

**ವರುಣಃ ಮಿತ್ರಃ**—ಮಿತ್ರನು ಹಗಲಿಗೆ ಅಭಿಮಾನಿದೇವತೆಯೆಂದೂ ವರುಣನು ರಾತ್ರ್ಯಭಿಮಾನಿದೇವತೆಯೆಂದೂ ಪ್ರಸಿದ್ಧವು. **ಮೈತ್ರಂ ವಾ ಅಹಃ। ವಾರುಣೀ ರಾತ್ರಿಃ** ಎಂದು ತೈ. ಬ್ರಾ. ಶ್ರುತಿವಚನವಿರುವುದು.

**ಅರ್ಯಮಾ**—ದ್ವಾದಶಾದಿತ್ಯರಲ್ಲಿ ಒಬ್ಬನು. ಈ ದೇವತೆಯು ಅಹೋರಾತ್ರಿಗಳನ್ನು ವಿಭಾಗಮಾಡುವವನೆಂದು ಹೇಳುವರು.

**ಸಜೋಷಾಃ—ಸಮಾನಪ್ರೀತಿಃ ಅಥವಾ ದೇವೈಃ ಸಹ ಸಂಪ್ರಿಯಮಾಣಃ।** ದೇವತೆಗಳೊಡನೆ ಸಮನಾದ ಪ್ರೀತಿಯುಳ್ಳವನು

### ವ್ಯಾಕರಣಪ್ರಕ್ರಿಯಾ

**ಋಜುನೀತೀ**—ಋಜುನೀತಿ ಶಬ್ದ ಇಕಾರಾಂತ ಸ್ತ್ರೀಲಿಂಗ. ಇದಕ್ಕೆ ತೃತೀಯಾಏಕವಚನ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಪೂರ್ವಸವರ್ಣದೀರ್ಘ ಬರುತ್ತದೆ.

**ನಯತು**—ಣೀಞ್ ಪ್ರಾಪಣೇ ಧಾತು. **ಣೋನಃ** ಎಂಬುದರಿಂದ ಣಕಾರಕ್ಕೆ ನಕಾರಾದೇಶ. ಲೋಟ್ ಪ್ರಥಮಪುರುಷ ಏಕವಚನದಲ್ಲಿ **ಏರುಃ**—ಎಂಬುದರಿಂದ ತಿಗೆ ತು ಆದೇಶ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಯಾದೇಶ. **ತಿಙ್ಙತಿಙಃ**—ಎಂಬುದರಿಂದ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿದ್ವಾನ್**—ವಿದ ಜ್ಞಾನೇ ಧಾತು. ಇದಕ್ಕೆ ಶತೃಪ್ರತ್ಯಯ ಪರವಾದಾಗ **ವಿದೇಃಶತುರ್ವಸುಃ** (ಪಾ. ಸೂ. ೭-೧-೩೬) ಎಂಬುದರಿಂದ ಶತೃವಿಗೆ ವಸು ಆದೇಶ. ವಿದ್ವಸ್ ಶಬ್ದವಾಗುತ್ತದೆ. ಇದಕ್ಕೆ ಸು ಪರವಾದಾಗ **ಅತ್ವಸಂತಸ್ಯ ಚಾ**—ಸೂತ್ರದಿಂದ ಉಪಧಾದೀರ್ಘ. **ಉಗಿದಚಾಂ ಸ**—ಎಂಬುದರಿಂದ ನುಮಾಗಮ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ. **ಸಂಯೋಗಾಂತಸ್ಯಲೋಪಃ**—ಎಂಬುದರಿಂದ ಅಂತ್ಯಸಕಾರಲೋಪ. ಪ್ರತ್ಯಯಸ್ವರದಿಂದ ವಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಸಜೋಷಾಃ**— ಜುಷೀ ಪ್ರೀತಿಸೇವನಯೋಃ ಧಾತು. ಇದಕ್ಕೆ ಅಸನ್‌ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾನಃ ಜೋಷಃ

(ಪ್ರೀತಿಃ) ಯಸ್ಯ ಸಃ ಸಜೋಷಾಃ **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ತೇ ಹಿ ವಸ್ವೋ ವಸವಾನಾಸ್ತೇ ಅಪ್ರಮೂರಾ ಮಹೋಭಿಃ।
ವ್ರತಾ ರಕ್ಷಂತೇ ವಿಶ್ವಾಹಾ ॥ ೨॥

ಪದಪಾಠಃ

ತೇ । ಹಿ । ವಸ್ವಃ । ವಸವಾನಾಃ । ತೇ । ಅಪ್ರ ಽ ಮೂರಾಃ। ಮಹಃ ಽ ಭಿಃ ।
ವ್ರತಾ । ರಕ್ಷಂತೇ । ವಿಶ್ವಾಹಾ ॥ ೨ ॥

॥ ಸಾಯಣಭಾಷ್ಯಂ ॥

ತೇ ಹಿ ಪೂರ್ವೋಕ್ತಾ ಮಿತ್ರಾದಯೋ ವಸ್ವೋ ವಸುನೋ ಧನಸ್ಯ ವಸವಾನಾ ವಾಸಕಾ ಆಚ್ಛಾದಯಿತಾರಃ। ಸರ್ವಂ ಜಗದ್ಧನೇನಾಚ್ಛಾದಯಂತೀತ್ಯರ್ಥಃ। ಅತಸ್ತೇ ಮಿತ್ರಾದಯೋಽಪ್ರಮೂರಾ ಅಪ್ರಮೂರ್ಛಿತಾ ಅಮೂಢಾಃ ಪ್ರಾಜ್ಞಾಃ ಸಂತೋ ಮಹೋಭಿರಾತ್ಮೀಯೈಸ್ತೇಜೋಭಿರ್ವಿಶ್ವಾಹಾ ಸರ್ವಾಣ್ಯಹಾನಿ। ಅತ್ಯಂತಸಂಯೋಗೇ ದ್ವಿತೀಯಾ। ಸರ್ವೇಷ್ವಪ್ಯಹಸ್ಸು ವ್ರತಾ ವ್ರತಾನಿ ಜಗನ್ನಿರ್ವಾಹರೂಪಾಣಿ ಸ್ವಕೀಯಾನಿ ಕರ್ಮಾಣಿ ರಕ್ಷಂತೇ। ಪಾಲಯಂತಿ॥ ವಸ್ವಃ। ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವೇ ಜಸಾದಿಷು ಛಂದಸಿ ವಾವಚನಮಿತಿ ಘೇರ್ಙಿತೀತಿ ಗುಣಸ್ಯ ವಿಕಲ್ಪನಾದಭಾವೇ ಯಣಾದೇಶಃ। ವಸವಾನಾಃ। ವಸ ಆಚ್ಛಾದನೇ। ಅಸ್ಮಾದಂತರ್ಭಾವಿತಣ್ಯರ್ಥಾಲ್ಲಟಃ ಶಾನಚ್। ಬಹುಲಂ ಛಂದಸೀತಿ ಶಪೋ ಲುಗಭಾವಃ। ವರ್ಣವ್ಯಾಪತ್ತ್ಯಾ ಮಕಾರಸ್ಯ ವಕಾರಃ। ಅಪ್ರಮೂರಾಃ। ಮುರ್ಛಾ ಮೋಹಸಮುಚ್ಛ್ರಾಯಯೋಃ। ಅಸ್ಮಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್। ರಾಲ್ಲೋಪ ಇತಿ ಛಕಾರಲೋಪಃ। ಪ್ರಕೃಷ್ಟಾ ಮೂಃ ಪ್ರಮೂಃ। ತತೋ ಮತ್ವರ್ಥೀಯೋ ರಃ। ರೋ ರಿ। ಪಾ. ೮-೩-೧೪। ಇತಿ ರೇಫಲೋಪಃ। ನ ಪ್ರಮೂರಾ ಅಪ್ರಮೂರಾಃ। ಅವ್ಯಯಪೂರ್ವಪದಪ್ರಕೃತಿಸ್ವರತ್ವಂ। ರಕ್ಷಂತೇ। ರಕ್ಷ ಪಾಲನೇ। ವ್ಯತ್ಯಯೇನ ತಙ್ ॥೨

॥ ಪ್ರತಿಪದಾರ್ಥ ॥

**ತೇ ಹಿ**—ಆ ಮಿತ್ರಾದಿದೇವತೆಗಳಾದರೋ, । **ವಸ್ವಃ**—ಧನದ (ಧನವನ್ನು) । **ವಸವಾನಾಃ**—(ಪ್ರಪಂಚಕ್ಕೆಲ್ಲಾ) ಆಚ್ಛಾದನಮಾಡುವವರಾಗಿ (ಹರಡುವವರಾಗಿ)ದ್ದಾರೆ. । **ತೇ**—ಆ ಮಿತ್ರಾದಿಗಳು । **ಅಪ್ರಮೂರಾಃ**-ಅನಾದರಣೆಯಿಲ್ಲದೇ, । **ಮಹೋಭಿಃ**—ತಮ್ಮ ತೇಜಸ್ಸುಗಳಿಂದ । **ವಿಶ್ವಾಹಾ**—ಎಲ್ಲಾ ದಿನಗಳಲ್ಲೂ । **ವ್ರತಾ**—(ಜಗತ್ತಿನ ನಿರ್ವಹಣರೂಪವಾದ) ಕರ್ಮಗಳನ್ನು । **ರಕ್ಷಂತಿ**—ಪಾಲಿಸುತ್ತಾರೆ. ।

ಭಾವಾರ್ಥ

ಮಿತ್ರಾವರುಣಾದಿದೇವತೆಗಳು ಪ್ರಪಂಚಕ್ಕೆಲ್ಲಾ ಧನವನ್ನು ಹಂಚುವವರಾಗಿದ್ದಾರೆ. ಅವರು ಸ್ವಲ್ಪವೂ ಕರ್ತವ್ಯಲೋಪವಿಲ್ಲದೇ ತಮ್ಮ ಜಗತ್ತಿನ ನಿರ್ವಹಣರೂಪದ ಕರ್ತವ್ಯವನ್ನು ಪ್ರತಿದಿನದಲ್ಲೂ ಶ್ರದ್ಧೆಯಿಂದ ಪಾಲಿಸಿ ತಮ್ಮ ತೇಜಸ್ಸಿನಿಂದ ಬೆಳಗುತ್ತಾರೆ.

English Translation

For, they are the distributors of wealth over the world ; and never heedless, discharge their duties every day.

ವಿಶೇಷವಿಷಯಗಳು

**ತೇ**—ಹಿಂದಿನ ಋಕ್ಕಿನಲ್ಲಿ ಹೇಳಿದ ಮಿತ್ರ ವರುಣ, ಅರ್ಯಮಾ ಎಂಬ ದೇವತೆಗಳು.

**ವಸ್ವಃ ವಸವಾನಾಃ—ವಸ ಆಚ್ಛಾದನೇ** । ವಸಧಾತುವಿಗೆ ಹರಡುವುದು ಎಂದರ್ಥವು. ಧನಗಳನ್ನು ಎಲ್ಲರಲ್ಲಿಯೂ ಹರಡುವವರು ಎಂದರೆ ಸ್ತೋತ್ರಮಾಡುವ ಯಜಮಾನರಾದಿಜನರಿಗೆ ಧನವನ್ನು ಅವರವರ ಕರ್ಮಕ್ಕೆ ತಕ್ಕಂತೆ ಕೊಡುವವರು ಎಂದಭಿಪ್ರಾಯವು.

**ಅಪ್ರಮೂರಾಃ—ಮುರ್ಛಾ ಮೋಹಸಮುಚ್ಛ್ರಾಯಯೋಃ** । ಮೋಹವಿಲ್ಲದ, ಮೂಢರಲ್ಲದ, ಎಂದರೆ ಪ್ರಾಜ್ಞರಾದ.

**ಮಹೋಭಿಃ—ಆತ್ಮೀಯೈಸ್ತೇಜೋಭಿಃ** । ತಮ್ಮ ತೇಜಸ್ಸುಗಳಿಂದ ಅಥವಾ ಮಹಿಮೆಯಿಂದ.

**ವ್ರತಾ**—ತಮ್ಮ ಕರ್ತವ್ಯಕರ್ಮಗಳನ್ನು.

**ವಿಶ್ವಾಹಾ**—ಎಲ್ಲಾ ದಿನಗಳಲ್ಲಿಯೂ.

॥ ವ್ಯಾಕರಣಪ್ರಕ್ರಿಯಾ ॥

**ವಸ್ವಃ** - ವಸು ಶಬ್ದ ಉಕಾರಾಂತ ನಪುಂಸಕಲಿಂಗ. ವಸುನಃ ಎಂದು ರೂಪವಾಗಬೇಕಾಗುತ್ತದೆ. ಆದರೆ **ಆಗಮಶಾಸ್ತ್ರಮನಿತ್ಯಮ್** ಎಂಬ ವಚನದಿಂದ **ಇಕೋಽಚಿ** ವಿಭಕ್ತೌ ಸೂತ್ರದಿಂದ ನುಮಾಗಮ ಬರುವುದಿಲ್ಲ. **ಜಸಾದಿಷು ಛಂದಸಿ ವಾ ವಚನಮ್** ಎಂಬುದರಿಂದ ಇಲ್ಲಿ **ಘೇರ್ಙಿತಿ** (ಪಾ. ಸೂ. ೭-೩-೧೧೧) ಎಂಬುದರಿಂದ ಬರುವ ಗುಣವೂ ವಿಕಲ್ಪವೆಂದುದರಿಂದ ಬರುವುದಿಲ್ಲ. ಆಗ **ಇಕೋಯಣಚಿ** ಸೂತ್ರದಿಂದ ಯಣಾದೇಶ,

**ವಸವಾನಾಃ**—ವಸ ಆಚ್ಛಾದನೇ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿಗೆ ಲಡರ್ಥದಲ್ಲಿ ಶಾನಚ್‌ಪ್ರತ್ಯಯ. ಇದು ಅದಾದಿಯಲ್ಲಿರುವುದರಿಂದ ಶಪಿಗೆ ಲುಕ್ ಪ್ರಾಪ್ತವಾದರೆ **ಬಹುಲಂ ಛಂದಸಿ**—ಎಂಬುದರಿಂದ ಲುಕ್ ಬರುವುದಿಲ್ಲ. ವಸ+ಆನ ಎಂದಿರುವಾಗ **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ವರ್ಣವ್ಯತ್ಯಯದಿಂದ ಮಕಾರಕ್ಕೆ ವಕಾರಾದೇಶ. ಪ್ರತ್ಯಯ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಅಪ್ರಮೂರಾಃ**—ಮುರ್ಛಾ ಮೋಹಸಮುಚ್ಛ್ರಾಯಯೋಃ ಧಾತು. ಇದಕ್ಕೆ ಭಾವಾರ್ಥದಲ್ಲಿ **ಸಂಪದಾದಿಭ್ಯಃ ಕ್ವಿಪ್**—ಎಂಬುದರಿಂದ ಕ್ವಿಪ್. **ರಾಲ್ಲೋಪಃ** (ಪಾ. ಸೂ. ೬-೪-೨೧) ರೇಫದ ಪರದ ಛಕಾರವಕಾರಗಳಿಗೆ ಕ್ವಿಪ್, ಝಲಾದಿಯಾದ, ಅನುನಾಸಿಕಾದಿಯಾದ ಪ್ರತ್ಯಯ ಪರವಾದಾಗ ಲೋಪ ಎಂಬುದರಿಂದ ಇಲ್ಲಿ ಕ್ವಿಪ್ ಪರದಲ್ಲಿರುವುದರಿಂದ ಛಕಾರಕ್ಕೆ ಲೋಪ. ಪ್ರಕೃಷ್ಟಾ ಮೂಃ ಪ್ರಮೂಃ ಪ್ರಮೂ ಶಬ್ದದಮೇಲೆ ಮತ್ವರ್ಥದಲ್ಲಿ ಛಾಂದಸವಾದ ರ ಪ್ರತ್ಯಯ. ರೇಫಕ್ಕೆ ರೇಫ ಪರವಾದುದರಿಂದ **ರೋರಿ** (ಪಾ. ಸೂ. ೮-೩-೧೪) ಎಂಬುದರಿಂದ ರೇಫಕ್ಕೆ ಲೋಪ. ನ ಪ್ರಮೂರಾ ಅಪ್ರಮೂರಾಃ ಎಂದು ನಞ್‌ತತ್ಪುರುಷಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**-ಸೂತ್ರದಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವ್ರತಾ**—ನಪುಂಸಕದಲ್ಲಿ ಶಸಿಗೆ ಶಿ ಆದೇಶ. **ಶೇಶ್ಛಂದಸಿ ಬಹುಲಂ**—ಎಂಬುದರಿಂದ ಶಿಗೆ ಲೋಪ.

**ರಕ್ಷಂತೇ**—ರಕ್ಷ ಪಾಲನೇ ಧಾತು. ಲಟ್ ಪ್ರಥಮಪುರುಷಬಹುವಚನದಲ್ಲಿ **ವ್ಯತ್ಯಯೋ ಬಹುಲಮ್** ಎಂಬುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಶ್ವಾಹಾ**—ವಿಶ್ವಾನಿ ತಾನಿ ಅಹಾನಿ ಚ ವಿಶ್ವಾಹಾನಿ. **ಶೇಶ್ಛಂದಸಿ ಬಹುಲಮ್**—ಎಂಬುದರಿಂದ ಶಿಗೆ ಲೋಪ. ॥ ೨ ॥

॥ ಸಂಹಿತಾಪಾಠಃ ॥

ತೇ ಅ॒ಸ್ಮಭ್ಯಂ॒ ಶರ್ಮ॑ ಯಂಸನ್ನ॒ಮೃತಾ॒ ಮರ್ತ್ಯೇ॑ಭ್ಯಃ ।
ಬಾಧ॑ಮಾನಾ॒ ಅಪ॒ ದ್ವಿಷಃ॑ ॥ ೩ ॥

॥ ಪದಪಾಠಃ ॥

ತೇ । ಅಸ್ಮಭ್ಯಂ । ಶರ್ಮ । ಯಂಸನ್ । ಅಮೃತಾಃ । ಮರ್ತ್ಯೇಭ್ಯಃ ।
ಬಾಧಮಾನಾಃ । ಅಪ । ದ್ವಿಷಃ ॥ ೩ ॥

ಸಾಯಣಭಾಷ್ಯಂ

ಅಮೃತಾ ಅಮರಣಧರ್ಮಾಣಸ್ತೇ ವಿಶ್ವೇ ದೇವಾ ಮರ್ತ್ಯೇಭ್ಯೋ ಮರಣಧರ್ಮಭ್ಯೋಽಸ್ಮಭ್ಯಮನುಷ್ಠಾತೃಭ್ಯಃ ಶರ್ಮಾಮೃತಲಕ್ಷಣಂ ಸುಖಂ ಯಂಸನ್ । ಯಚ್ಛಂತು । ಪ್ರಯಚ್ಛಂತು । ಕಿಂ ಕುರ್ವಂತಃ । ದ್ವಿಷೋಽಸ್ಮದೀಯಾನ್ಪಾಪಲಕ್ಷಣಾನ್ ಶತ್ರೂನಪಬಾಧಮಾನಾಃ ವಿನಾಶಂ ಪ್ರಾಪಯಂತಃ ॥ ಯಂಸನ್ । ಯಮು ಉಪರಮೇ । ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ಅಮೃತಾಃ । ಮೃತಂ ಮರಣಂ ಯೇಷಾಂ ನಾಸ್ತೀತ್ಯಮೃತಾಃ । ನಞಃ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಮೃತಾಃ**—ಮರಣರಹಿತರಾದ । **ತೇ**—ಆ ದೇವತೆಗಳು । **ದ್ವಿಷಃ**— (ನಮ್ಮ ಪಾಪಿಷ್ಠರಾದ) ಶತ್ರುಗಳನ್ನು । **ಅಪ ಬಾಧಮಾನಾಃ**—ನಾಶಗೊಳಿಸುತ್ತ । **ಮರ್ತ್ಯೇಭ್ಯಃ**—ಮರಣ ಧರ್ಮವುಳ್ಳ । **ಅಸ್ಮಭ್ಯಂ**—ನಮಗೆ । **ಶರ್ಮ**—(ಮರಣರಹಿತವಾದ) ಸುಖವನ್ನು । **ಯಂಸನ್**—ಕೊಡಲಿ. ।

॥ ಭಾವಾರ್ಥ ॥

ಮಿತ್ರಾವರುಣಾದಿ ದೇವತೆಗಳು ಮರಣರಹಿತರು. ನಾವೆಲ್ಲಾ ಮರಣ ಧರ್ಮವುಳ್ಳವರು. ಆದರೆ ದುಷ್ಟರಾದ ನಮ್ಮ ಶತ್ರುಗಳನ್ನು ಮಾತ್ರ ನಾಶಗೊಳಿಸಿ ಯಜ್ಞಕರ್ತರಾದ ನಮಗೆ ಮರಣರಹಿತವಾದ ಸೌಖ್ಯವನ್ನು ಅನುಗ್ರಹಿಸಲಿ.

## English Translation

May they, who are immortal, bestow upon us mortals, happiness driving away our enemies.

ವಿಶೇಷವಿಷಯಗಳು

ಈ ಋಕ್ಕಿನ ಅರ್ಥವು ಸುಲಭವಾಗಿರುವುದು. ಯಾವ ವಿಧವಾದ ತೊಡಕುಗಳೂ ಇಲ್ಲ. ಅಭಿಪ್ರಾಯವು ಸ್ಪಷ್ಟವಾಗಿರುವುದು.

**ಶರ್ಮ**—ಸುಖ ಅಥವಾ ಗೃಹ.

**ಅಮೃತಾಃ**—ಮರಣರಹಿತರಾದ ಮಿತ್ರಾದಿದೇವತೆಗಳು.

**ಮರ್ತ್ಯೇಭ್ಯಃ ಅಸ್ಮಭ್ಯಂ**—ಮರಣವನ್ನು ಹೊಂದುವ ಸ್ವಭಾವವುಳ್ಳ ಮನುಷ್ಯರಾದ ನಮಗೆ.

**ಅಪ ಬಾಧಮಾನಾಃ**—ನಾಶಮಾಡುವವರು, ಓಡಿಸುವವರು, ಹಿಂಸಿಸುವವರು.

ವ್ಯಾಕರಣಪ್ರಕ್ರಿಯಾ

**ಯಂಸನ್**—ಯಮ ಉಪರಮೇ ಧಾತು. ಲೇಟ್ ಪ್ರಥಮಪುರುಷಬಹುವಚನದಲ್ಲಿ ಝ ಪ್ರತ್ಯಯ. **ಇತಶ್ಚ ಲೋಪಃ ಪ**—ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ**—ಎಂಬುದರಿಂದ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಸಂಯೋಗಾಂತಲೋಪದಿಂದ ಅಂತ್ಯತಕಾರ ಲೋಪ. **ನಶ್ಚಾಪದಾಂತಸ್ಯಝಲಿ** ಸೂತ್ರದಿಂದ ಮಕಾರಕ್ಕೆ ಅನುಸ್ವಾರ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಮೃತಾಃ**—ಮೃಙ್ ಪ್ರಾಣತ್ಯಾಗೇ ಧಾತು. ಕ್ತಪ್ರತ್ಯಯ. ಮೃತಂ ಮರಣಂ ಯೇಷಾಂ ನಾಸ್ತೀತಿ ಅಮೃತಾಃ **ನಞೋ ಜರಮರಮಿತ್ರ ಮೃತಾಃ** (ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರ ಪದಾದ್ಯುದಾತ್ತಸ್ವರ ಬರುತ್ತದೆ.

**ದ್ವಿಷಃ**—ದ್ವಿಷ ಅಪ್ರೀತೌ ಧಾತು. **ಸತ್ಸೂದ್ವಿಷ**-(ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾಬಹುವಚನಾಂತರೂಪ. ॥ ೩ ॥

——:O:——

ಸಂಹಿತಾಪಾಠಃ

ವಿ ನಃ ಪಥಃ ಸುವಿತಾಯ ಚಿಯಂತ್ವಿಂದ್ರೋ ಮರುತಃ ।
ಪೂಷಾ ಭಗೋ ವಂದ್ಯಾಸಃ ॥ ೪ ॥

ಪದಪಾಠಃ

ವಿ । ನಃ । ಪಥಃ । ಸುವಿತಾಯ । ಚಿಯಂತು । ಇಂದ್ರಃ । ಮರುತಃ ।
ಪೂಷಾ । ಭಗಃ । ವಂದ್ಯಾಸಃ ॥ ೪ ॥

ಸಾಯಣಭಾಷ್ಯಂ

**ವಂದ್ಯಾಸಃ ಸರ್ವೈರ್ವಂದನೀಯಾಃ ಸ್ತೋತವ್ಯಾ ನಮಸ್ಕರ್ತವ್ಯಾ ವೇಂದ್ರಾದಯೋ ದೇವಾ ನೋಽಸ್ಮಾಕಂ ಪಥೋ ಮಾರ್ಗಾನ್ವಿ ಚಿಯಂತು । ವಿಚಿನ್ವಂತು । ಅಶೋಭನೇಭ್ಯೋ ಮಾರ್ಗೇಭ್ಯಃ ಸಕಾಶಾತ್ಪೃಥಕ್ಕುರ್ವಂತು । ಕಿಮರ್ಥಂ । ಸುವಿತಾಯ ಸುಷ್ಠು ಪ್ರಾಪ್ತವ್ಯಾಯ ಸ್ವರ್ಗಾದಿಫಲಾಯ ॥ ಪಥಃ । ಶಸಿ ಭಸ್ಯ ಟೇರ್ಲೋಪ ಇತಿ ಟಿಲೋಪಃ । ಉದಾತ್ತನಿವೃತ್ತಿಸ್ವರೇಣ ಶಸ ಉದಾತ್ತತ್ವಂ । ಸುವಿತಾಯ । ಇಣ್ ಗತಾವಿತ್ಯಸ್ಮಾತ್ಕರ್ಮಣಿ ನಿಷ್ಠಾ । ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಮಿತ್ಯುವಙ್ । ಗತಿರನಂತರ ಇತಿ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಸೂಪಮಾನಾತ್ ಕ್ತ ಇತ್ಯುತ್ತರಪದಾಂತೋದಾತ್ತತ್ವಂ । ಚಿಯಂತು। ಚಿಞ್ ಚಯನೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಇಯಙ್ । ಪಾದಾದಿತ್ವಾನ್ನಿಘಾತಾಭಾವಃ । ವಂದ್ಯಾಸಃ । ವದಿ ಅಭಿವಾದನಸ್ತುತ್ಯೋಃ । ಋಹಲೋರ್ಣ್ಯತ್ । ಈಡವಂದವೃಶಂಸದುಹಾಂ ಣ್ಯತ ಇತ್ಯಾದ್ಯುದಾತ್ತತ್ವಂ । ಆಜ್ಜಸೇರಸುಕ್ ॥**

ಪ್ರತಿಪದಾರ್ಥ

**ವಂದ್ಯಾಸಃ**—(ಸಕಲರಿಂದಲೂ) ವಂದಿಸಲ್ಪಡಲು ಅರ್ಹರಾದ । **ಇಂದ್ರಃ**—ಇಂದ್ರನೂ । **ಮರುತಃ**—ಮರುತ್ತುಗಳೂ । **ಪೂಷಾ**—ಪೂಷದೇವನೂ । **ಭಗಃ**—ಭಗದೇವನೂ ಸಹ । **ಸುವಿತಾಯ**—(ನಮ್ಮ ಅಭೀಷ್ಟವಾದ) ಸ್ವರ್ಗಾದಿಫಲಸಾಧನೆಗಾಗಿ । **ನಃ**—ನಮಗೆ । **ಪಥಃ ವಿಚಿಯಂತು**—(ಕೆಟ್ಟ ದಾರಿಯಿಂದ ತಪ್ಪಿಸಿ) ಸನ್ಮಾರ್ಗಪ್ರವರ್ತಕರಾಗಲಿ. ।

॥ ಭಾವಾರ್ಥ

ಸಕಲ ಲೋಕಕ್ಕೂ ಪೂಜ್ಯರಾದ ಇಂದ್ರನೂ, ಮರುತ್ತುಗಳೂ, ಪೂಷನೂ, ಭಗದೇವನೂ ಸಹ ನಮ್ಮ ಇಷ್ಟಾರ್ಥವಾದ ಸ್ವರ್ಗಾದಿಫಲಸಾಧನೆಗಾಗಿ ನಮ್ಮನ್ನು ಕೆಟ್ಟದಾರಿಯಿಂದ ತಪ್ಪಿಸಿ ನಮಗೆ ಸನ್ಮಾರ್ಗದರ್ಶಕರಾಗಲಿ.

English Translation

May the adorable Indra, the Maruts, Pushan, and Bhaga, so direct our path that they may lead to the attainment of our welfare.

॥ ವಿಶೇಷವಿಷಯಗಳು ॥

**ವಂದ್ಯಾಸಃ**—ವಂದ್ಯಾಃ ಎಂಬ ಶಬ್ದದ ಪ್ರಾಚೀನಪ್ರಯೋಗವು. ಎಲ್ಲರಿಂದಲೂ ನಮಸ್ಕರಿಸಲ್ಪಡುವವರು.

**ಸುವಿತಾಯ—ಸುಷ್ಠು ಪ್ರಾಪ್ತವ್ಯಾಯ ಸ್ವರ್ಗಾದಿಫಲಾಯ** । ನಮಗೆ ಒಳ್ಳೆಯದಾಗುವುದಕ್ಕೆ ಸ್ವರ್ಗಾದಿ ಫಲಪ್ರಾಪ್ತಿಗಾಗಿ.

**ವಿಚಿಯಂತು—ಚಿಞ್ ಚಯನೇ । ವಿಚಿನ್ವಂತು । ಅಶೋಭನೇಭ್ಯೋ ಮಾರ್ಗೇಭ್ಯಃ ಸಕಾಶಾತ್ಪೃಥಕ್ಕುರ್ವಂತು** । ಬೇರ್ಪಡಿಸಲಿ ಎಂದರೆ ಕೆಟ್ಟದಾರಿಗಳಲ್ಲಿ ಹೋಗದಿರುವಂತೆಯೂ ಪ್ರತ್ಯೇಕವಾದ ಒಳ್ಳೆಯದಾರಿಯಲ್ಲಿ ಹೋಗುವಂತೆಯೂ ಮಾಡಲಿ.

॥ ವ್ಯಾಕರಣಪ್ರಕ್ರಿಯಾ ।

**ಪಥಃ**—ಪಥಿನ್ ಶಬ್ದ. ದ್ವಿತೀಯಾ ಬಹುವಚನ ಶಸ್‌ಪರವಾದಾಗ **ಭಸ್ಯಟೇರ್ಲೋಪಃ** (ಪಾ. ಸೂ. ೭-೧-೮೮) ಎಂಬುದರಿಂದ ಟಿಗೆ (ಇನ್) ಲೋಪ. ಅನುದಾತ್ತವಾದ ಶಸ್ ನಿಮಿತ್ತವಾಗಿ ಉದಾತ್ತ (ಇಕಾರ)

ಲೋಪವಾದುದರಿಂದ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ**—ಎಂಬುದರಿಂದ ಶಸಿಗೆ ಉದಾತ್ತಸ್ವರ ಬರುತ್ತದೆ.

**ಸುವಿತಾಯ**—ಇಣ್ ಗತೌ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತಪ್ರತ್ಯಯ. ಸುಷ್ಠು ಇತಃ ಸುವಿತಃ **ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಮ್**—ಎಂಬ ವಚನದಿಂದ ಸುವಿನ ಉಕಾರಕ್ಕೆ ಉವಜಾದೇಶ ಬರುತ್ತದೆ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾದರೆ **ಸೂಪಮಾನಾತ್ ಕ್ತಃ** (ಪಾ. ಸೂ. ೬-೨-೧೪೫) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ.

**ಚಿಯಂತು**—ಚಿಞ್ ಚಯನೇ ಧಾತು. ಸ್ವಾದಿ. ಲೋಟ್‌ಪ್ರಥಮಪುರುಷಬಹುವಚನದಲ್ಲಿ **ಏರುಃ** ಎಂಬುದರಿಂದ ಇಕಾರಕ್ಕೆ ಉತ್ವ. ಅಂತಾದೇಶ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ (ಶ್ನು) ಲುಕ್. **ಸಾರ್ವಧಾತುಕಮಪಿತ್**—ಎಂಬುದರಿಂದ ಪ್ರತ್ಯಯ ಙಿತ್ತಾಗುವುದರಿಂದ ಗುಣ ಬರುವುದಿಲ್ಲ. **ಅಚಿ ಶ್ನುಧಾತುಭ್ರುವಾಮ್**—ಎಂಬುದರಿಂದ ಧಾತುವಿನ ಇಕಾರಕ್ಕೆ ಇಯಙಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ವಂದ್ಯಾಸಃ**—ವದಿ ಅಭಿವಾದನಸ್ತುತ್ಯೋಃ ಧಾತು. **ಋಹಲೋಃ ಣ್ಯತ್**— ಎಂಬುದರಿಂದ ಣ್ಯತ್ ಪ್ರತ್ಯಯ. **ಇದಿತೋ ನುಮ್ ಧಾತೋಃ**—ಎಂಬುದರಿಂದ ಧಾತುವಿಗೆ ನುಮಾಗಮ. ವಂದ್ಯ ಎಂದು ರೂಪ ವಾಗುತ್ತದೆ. **ಈಡವಂದವೃಶಂಸದುಹಾಂ ಣ್ಯತಃ** (ಪಾ. ಸೂ. ೬-೧-೧೧೪) ಎಂಬುದರಿಂದ ಸ್ವರಿತಸ್ವರಕ್ಕೆ ಅಪವಾದವಾಗಿ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನ ಜಸ್ ಪರವಾದಾಗ **ಆಜ್ಜಸೇರಸುಕ್**—ಎಂಬುದರಿಂದ ಜಸಿಗೆ ಅಸುಕಾಗಮ. ಸಕಾರಕ್ಕೆ ರುತ್ವವಿಸರ್ಗ. ವಂದ್ಯಾಸಃ ಎಂದು ರೂಪವಾಗುತ್ತದೆ. ॥೪॥

---- :0: ----

ಸಂಹಿತಾಪಾಠಃ

ಉತ ನೋ ಧಿಯೋ ಗೋಅಗ್ರಾಃ ಪೂಷನ್ವಿಷ್ಣವೇವಯಾವಃ ।
ಕರ್ತಾ ನಃ ಸ್ವಸ್ತಿಮತಃ ॥ ೫ ॥

ಪದಪಾಠಃ

ಉತ । ನಃ । ಧಿಯಃ । ಗೋಽಅಗ್ರಾಃ । ಪೂಷನ್ । ವಿಷ್ಣೋ ಇತಿ । ಏವಽಯಾವಃ ।
ಕರ್ತ । ನಃ । ಸ್ವಸ್ತಿಽಮತಃ ॥ ೫ ॥

ಸಾಯಣಭಾಷ್ಯಂ

ಅಪ್ತೋರ್ಯಾಮೇ ಸಂತಿ ಚತ್ವಾರ್ಯತಿರಿಕ್ತೋಕ್ಥಾನಿ । ತತ್ರ ಚತುರ್ಥೇಽಚ್ಛಾವಾಕಾತಿರಿಕ್ತೋಕ್ಥ ಉತ ನೋ ಧಿಯ ಇತ್ಯೇಷಾನುರೂಪತೃಚಸ್ಯ ವೈಕಲ್ಪಿಕೀ ತೃತೀಯಾ । ಸೂತ್ರಿತಂ ಚ । ಉತ ನೋ ಧಿಯೋ ಗೋಅಗ್ರಾ ಇತಿ ವಾನುರೂಪಸ್ಯೋತ್ತಮಾ । ಆ. ೯-೧೧ । ಇತಿ ॥

ಹೇ ಪೂಷನ್ ಪೋಷಕ ದೇವ ಹೇ ವಿಷ್ಣೋ ವ್ಯಾಪನಶೀಲ ದೇವ ಹೇ ಏವಯಾವಃ । ಏವೈರ್ಗಮತೃಭಿರಶ್ವೈರ್ಯಾತಿ ಗಚ್ಛತೀತ್ಯೇವಯಾವಾ ಮರುದ್ಗಣಃ । ಹೇ ಮರುದ್ಗಣ ತೇ ಸರ್ವೇ ಯೂಯಂ ನೋಽಸ್ಮಾಕಂ ಧಿಯೋಽಪ್ತೋರ್ಯಾಮಲಕ್ಷಣಾನಿ ಕರ್ಮಾಣಿ ಗೋಅಗ್ರಾಃ ಪಶ್ವಗ್ರಾಣಿ ಪಶುಪ್ರಮುಖಾನ್ಯಸ್ಮತ್ಸಕಾಶಾದ್ಭ್ರಷ್ಟೈಃ ಪಶುಭಿರ್ಯುಕ್ತಾನಿ ಕರ್ತ । ಕುರುತ । ಅಪ್ತೋರ್ಯಾಮಕರ್ಮಣಶ್ಚ ಪಶುಪ್ರಾಪ್ತಿಹೇತುತ್ವಮಾಮ್ನಾಯತೇ । ಯಸ್ಮಾತ್ಪಶವಃ ಪ್ರಪ್ರೇವ ಭ್ರಂಶೇರನ್ ಸ ಏತೇನ ಯಜೇತ । ತೈ. ಬ್ರಾ. ೨-೭-೧೪-೨ । ಇತಿ । ಉತಾಪಿ ಚ ನೋಽಸ್ಮಾನ್ಸ್ವಸ್ತಿಮತೋಽವಿನಾಶಿನಃ ಕುರುತ ॥ ಏವಯಾವಃ । ಇಣ್ ಗತೌ । ಇಣ್ಶೀಙ್ಭ್ಯಾಂ ವನ್ನಿತಿ ವನ್ಪ್ರತ್ಯಯಃ । ಅಸ್ಮಿನ್ನುಪಪದೇ ಯಾ ಪ್ರಾಪಣ ಇತ್ಯಸ್ಮಾದಾತೋ ಮನಿನ್ನಿತಿ ವನಿಪ್ । ಸಂಬುದ್ಧೌ ವನ ಉಪಸಂಖ್ಯಾನಂ । ಪಾ. ೮-೩-೧-೧ । ಇತಿ ವಕಾರಸ್ಯ ರುತ್ವಂ ॥

॥ ಪ್ರತಿಪದಾರ್ಥ ॥

**ಪೂಷನ್**— ಎಲೈ ಪೂಷದೇವನೇ । **ವಿಷ್ಣೋ**— ಎಲೈ ವಿಷ್ಣುವೇ । **ಏವಯಾವಃ**— ಅಶ್ವವಾಹಕರಾದ ಮರುತ್ತುಗಳೇ । **ನಃ**—ನಮ್ಮ । **ಧಿಯಃ**—(ಅಪ್ತೋರ್ಯಾಮರೂಪವಾದ) ಕರ್ಮಗಳನ್ನು । **ಗೋಅಗ್ರಾಃ**—(ನಮ್ಮಿಂದ ತಪ್ಪಿಸಿಕೊಂಡಿರುವ) ಪಶುಗಳನ್ನು ಪುನಃ ಸೇರಿಸಿಕೊಡುವುವುಗಳನ್ನಾಗಿ । **ಕರ್ತ**— ಮಾಡಿರಿ । **ಉತ**— ಮತ್ತು । **ನಃ**— ನಮ್ಮನ್ನು । **ಸ್ವಸ್ತಿಮತಃ**—ಸೌಭಾಗ್ಯವಂತರನ್ನಾಗಿ (ಮಾಡಿ)

ಭಾವಾರ್ಥ

ಎಲೈ ಪೂಷದೇವನೇ, ಎಲೈ ವಿಷ್ಣುವೇ, ಎಲೈ ಮರುತ್ತುಗಳೇ, ನಿಮ್ಮೆಲ್ಲರ ಅನುಗ್ರಹದಿಂದ ನಮ್ಮ ಅಪ್ತೋರ್ಯಾಮ ರೂಪವಾದ ಕರ್ಮಗಳು ಸಾರ್ಥಕಗಳಾಗಬೇಕು. ಆ ಕರ್ಮಗಳನ್ನು ಅನುಗ್ರಹಿಸಿ ಅವುಗಳನ್ನು ನಮ್ಮ ಕಳೆದುಹೋಗಿರುವ ಹಸುಗಳನ್ನು ಹಿಂದಕ್ಕೆ ತಂದು ಸೇರಿಸುವ ಸಾಮರ್ಥ್ಯವುಳ್ಳವುಗಳನ್ನಾಗಿ ಮಾಡಿರಿ. ಮತ್ತು ನಮ್ಮನ್ನೆಲ್ಲ ಸೌಭಾಗ್ಯವಂತರನ್ನಾಗಿ ಮಾಡಿರಿ.

English Translation

Pushan, Vishnu, Maruts, make our rites restorative of our cattle; make us prosperous.

ವಿಶೇಷವಿಷಯಗಳು

ಅಪ್ತೋರ್ಯಾಮವೆಂಬ ಯಾಗದಲ್ಲಿ ನಾಲ್ಕು ಅತಿರಿಕ್ತೋಕ್ಥ ಮಂತ್ರಗಳನ್ನು ಪಠಿಸಬೇಕು. ಅವುಗಳಲ್ಲಿ ನಾಲ್ಕನೆಯ ಮಂತ್ರವನ್ನು ಅಚ್ಛಾವಾಕನೆಂಬ ಋತ್ವಿಜನು ಪಠಿಸುವಾಗ **ಉತ ನೋ ಧಿಯ** ಎಂಬ ಋಕ್ಕನ್ನು ಆ

ಋತ್ವಿಜನು ಪಠಿಸುವ ಅನುರೂಪವಾದ ತೃಚದಲ್ಲಿ ಮೂರನೆಯ ಋಕ್ಕನ್ನಾಗಿ ವೈಕಲ್ಪಿಕವಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ **ಉತ ನೋ ಧಿಯೋ ಗೋಅಗ್ರಾ ಇತಿ ವಾನುರೂಪಸ್ಯೋತ್ತಮಾ** ಎಂಬ ಸೂತ್ರವು ನಿರ್ದೇಶಿಸುವುದು (ಆ. ೯-೧೧).

**ಧಿಯಃ**—ಇಲ್ಲಿ ಧೀಶಬ್ದವು ಕರ್ಮಾರ್ಥವನ್ನು ಸೂಚಿಸುವುದು (ನಿ. ೨-೯) ಧಿಯಃ ಎಂದರೆ ಕರ್ಮಗಳು, ಯಜ್ಞಾದಿಕರ್ಮಗಳು.

**ಗೋಅಗ್ರಾಃ— ಗಾವೋಽಗ್ರೇ ಯಾಸಾಂ ತಾ ಗೋ ಅಗ್ರಾಃ ಧಿಯಃ। ಗೋಲಾಭಫಲಾ ಇತ್ಯರ್ಥಃ। ಅಪ್ತೋರ್ಯಾಮಕರ್ಮಣಶ್ಚ ಪಶುಪ್ರಾಪ್ತಿಹೇತುತ್ವಮಾಮ್ನಾಯತೇ। ಯಸ್ಮಾತ್ಪಶವಃ ಪ್ರಪ್ರೇವ ಭ್ರಂಶೇರನ್। ಸ ಏತೇನ ಯಜೇತ** (ತೈ. ಬ್ರಾ. ೨-೭-೧೪-೨) ಗೋಲಾಭವೇ ಮುಖ್ಯ ಫಲವಾಗಿ ವುಳ್ಳ ಕರ್ಮ ಎಂದರೆ ಅಪ್ತೋರ್ಯಾಮ ಮೊದಲಾದ ಯಜ್ಞಕರ್ಮಗಳು ಎಂದರ್ಥವು ಈ ಅಪ್ತೋರ್ಯಾಮವೆಂಬ ಯಜ್ಞವನ್ನು ಪಶುಗಳನ್ನು ಅಪೇಕ್ಷಿಸುವವನು ಮಾಡಬೇಕೆಂದು ತೈ. ಬ್ರಾ. ವಚನವು ನಿರ್ದೇಶಿಸುವುದು. ಆದುದರಿಂದ ಪೂಷನೇ ಮೊದಲಾದ ದೇವತೆಗಳು ನಾವು ಪಶುಲಾಭಕ್ಕಾಗಿ ಮಾಡುತ್ತಿರುವ ಅಪ್ತೋರ್ಯಾಮ ಮೊದಲಾದ ಯಜ್ಞಗಳನ್ನು ಸಾಂಗವಾಗಿ ನೆರವೇರಿಸಲಿ ಎಂದಭಿಪ್ರಾಯವು.

**ಪೂಷನ್, ವಿಷ್ಣೋ—ಪೋಷಕ, ವ್ಯಾಪನಶೀಲ।** ಸರ್ವರನ್ನು ಪೋಷಿಸುವವನಾದ್ದರಿಂದ ಈ ದೇವನನ್ನು (ದ್ವಾದಶಾದಿತ್ಯರಲ್ಲಿ ಒಬ್ಬನು) ಪೂಷನೆಂದೂ, ವಿಷ್ಣುವು ಸರ್ವವನ್ನು ವ್ಯಾಪಿಸಿ ಇರುವವನಾದ್ದರಿಂದ ವಿಷ್ಣುವೆಂದೂ ಹೇಳುವರು.

**ಏವಯಾವಃ—ಇಣ್ ಗತೌ। ಏನೈರ್ಗಂತೃಭಿರಶ್ವೈರ್ಯಾತಿ ಗಚ್ಛತ್ಯೇವಯಾವಾ ಮರುದ್ಗಣಃ।** ಗಮನಶೀಲವಾದ ಪೃಷತ್ಯಃ ಎಂಬ ಅಶ್ವಗಳಿಂದ ರಥದಲ್ಲಿ ಸಂಚರಿಸುವವರಾದ್ದರಿಂದ ಏವಯಾವಃ ಎಂದರೆ ಮರುದ್ಗಣವು ಎಂದು ಭಾಷ್ಯಕಾರರು ಈ ಶಬ್ದಕ್ಕೆ ಅರ್ಥವಿವರಣೆ ಮಾಡಿರುವರು.

**ಸ್ವಸ್ತಿಮತಃ—**ಒಳ್ಳೆಯದನ್ನು, ಅಭಿವೃದ್ಧಿಯನ್ನು ಹೊಂದುವವರನ್ನಾಗಿ, ಮಂಗಳವನ್ನು ಹೊಂದುವಂತೆ. ಈ ಶಬ್ದವು ನಃ ಎಂಬ ಶಬ್ದಕ್ಕೆ ವಿಶೇಷಣವು.

ವ್ಯಾಕರಣಪ್ರಕ್ರಿಯಾ

**ಗೋಅಗ್ರಾಃ— ಸರ್ವತ್ರ ವಿಭಾಷಾ ಗೋಃ** (ಪಾ. ಸೂ. ೬-೧-೧೨೨) ಎಂಬುದರಿಂದ ಪ್ರಕೃತಿಭಾವ ಬರುತ್ತದೆ.

**ಏವಯಾವಃ**— ಇಣ್ ಗತೌ ಧಾತು. ಇದಕ್ಕೆ **ಇಣ್ಶೀಙ್ಭ್ಯಾಂ ವನ್** (ಉ. ಸೂ. ೧-೧೫೦) -- ಎಂಬುದರಿಂದ ವನ್‌ಪ್ರತ್ಯಯ. ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ**— ಎಂಬುದರಿಂದ ಧಾತುವಿಗೆ ಗುಣ. ಏವ ಎಂದು ರೂಪವಾಗುತ್ತದೆ. ಇದು ಉಪಪದವಾಗಿರುವಾಗ, **ಯಾ** ಪ್ರಾಪಣೇ, ಈ ಧಾತುವಿಗೆ **ಆತೋ ಮನಿನ್ ವನಿಪ್** ಎಂಬುದರಿಂದ ವನಿಪ್ ಪ್ರತ್ಯಯ. ಏವಯಾವನ್ ಶಬ್ದವಾಗುತ್ತದೆ. ಸಂಬುದ್ಧಿ ಪರವಾದಾಗ **ವನ ಉಪಸಂಖ್ಯಾನಮ್** (ಪಾ. ಸೂ. ೮-೩-೧-೧) ಎಂಬ ವಚನದಿಂದ ನಕಾರಕ್ಕೆ ರುತ್ವ. **ಹಲ್‌ಙ್ಯಾಭ್ಯೋ**— ಸೂತ್ರದಿಂದ ಸುಲೋಪ. **ಖರವಸಾನಯೋಃ**— ಸೂತ್ರದಿಂದ ರೇಫಕ್ಕೆ ವಿಸರ್ಗ. **ಆಮಂತ್ರಿತಸ್ಯ** (ಪಾ. ಸೂ ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಕರ್ತಾ**—ಡುಕೃಞ್ ಕರಣೇ ಧಾತು. ಕರ್ತ್ರರ್ಥದಲ್ಲಿ ತೃನ್‌ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾವಿಭಕ್ತಿ ಏಕವಚನಾಂತರೂಪ. ॥ ೫ ॥

ಸಂಹಿತಾಪಾಠಃ

ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ ।
ಮಾಧ್ವೀರ್ನಃ ಸಂತ್ವೋಷಧೀಃ ॥ ೬ ॥

ಪದಪಾಠಃ

ಮಧು । ವಾತಾಃ । ಋತಽಯತೇ । ಮಧು । ಕ್ಷರಂತಿ । ಸಿಂಧವಃ ।
ಮಾಧ್ವೀಃ । ನಃ । ಸಂತು । ಓಷಧೀಃ ॥ ೬ ॥

ಸಾಯಣಭಾಷ್ಯಂ

ಋತ್ವಿಗಾದ್ಯರ್ಥಮಾಹುತಂ ಮಧುಪರ್ಕಂ ಮಧು ವಾತಾ ಇತಿ ತೃಚೇನ ಋತ್ವಿಗಾದಿಃ ಪ್ರತಿಗೃಹೀ-ತ್ವಾಽವೇಕ್ಷೇತ । ತಥಾ ಚ ಸೂತ್ರ್ಯತೇ । ಮಧು ವಾತಾ ಋತಾಯತ ಇತಿ ತೃಚೇನಾವೇಕ್ಷ್ಯ । ಆ. ಗೃ ೧-೨೪-೧೪ । ಇತಿ ॥

ಋತಾಯತೇ ಋತಂ ಯಜ್ಞಮಾತ್ಮನ ಇಚ್ಛತೇ ಯಜಮಾನಾಯ ವಾತಾ ವಾಯವೋ ಮಧು. ಮಾಧುರ್ಯೋಪೇತಂ ಕರ್ಮ ಫಲಂ ಕ್ಷರಂತಿ । ವರ್ಷಂತಿ । ಪ್ರಯಚ್ಛಂತೀತ್ಯರ್ಥಃ । ತಥಾ ಸಿಂಧವಃ ಸ್ಯಂದನಶೀಲಾ ನದ್ಯಃ ಸಮುದ್ರಾ ವಾ ಮಧು ಮಾಧುರ್ಯೋಪೇತಂ ಸ್ವಕೀಯಂ ರಸಂ ಕ್ಷರಂತಿ । ಏವಂ ನೋಽಸ್ಮಭ್ಯಮೋಷಧೀಃ ಫಲಪಾಕಾಂತಾ ಓಷಧಯಸ್ತಾಶ್ಚ ಮಾಧ್ವೀರ್ಮಾಧುರ್ಯೋಪೇತಾಃ ಸಂತು । ಭವಂತು ॥ ಮಧು । ಅಸ್ಮಾದುತ್ತರಸ್ಯ ಮತ್ವರ್ಥೀಯಸ್ಯ ಲುಗಕಾರೇಕಾರರೇಫಾಶ್ಚ ವಕ್ತವ್ಯಾಃ । ಪಾ. ೪-೪-೧೨೮-೨ । ಇತಿ ಲುಕ್ । ಋತಾಯತೇ । ಋತಮಾತ್ಮನ ಇಚ್ಛತಿ । ಸುಪ ಆತ್ಮನಃ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ವದೀರ್ಘಯೋರ್ನಿಷೇಧಃ । ಅನ್ಯೇಷಾಮಪಿ ಸಂಹಿತಾಯಾಂ ದೀರ್ಘತ್ವಂ । ಕ್ಯಜಂತಾಲ್ಲಟಃ ಶತೃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಮಾಧ್ವೀಃ । ಮಧೋರಞ್ ಚ । ಪಾ.

೬-೪-೧೭೫ । ಇತಿ ಮತ್ವರ್ಥೀಯೋ ಯತ್ಪ್ರತ್ಯಯಃ । ಋತ್ವ್ಯವಾಸ್ತ್ವ್ಯೇತ್ಯಾದಾವಜಾಂ ಯಣಾದೇಶೋ ನಿಪಾತ್ಯತೇ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಓಷಧೀಃ । ಓಷಃ ಪಾಕ ಆಸು ಧೀಯತ ಇತ್ಯೋಷಧಯಃ ಕರ್ಮಣ್ಯಧಿಕರಣೇ ಚೇತಿ ಕಿಪ್ರತ್ಯಯಃ । ಕೃದಿಕಾರಾದಕ್ತಿನ ಇತಿ ಜೀಪ್ । ಜಸಿ ಪೂರ್ವವತ್ಪೂರ್ವಸವರ್ಣದೀರ್ಘಃ । ದಾಸೀಭಾರಾದಿಷು ಪಠಿತತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ತಚ್ಚ ಘಞಂತಮಾದ್ಯುದಾತ್ತಂ ॥

॥ ಪದಪಾಠಃ ॥

**ಋತಾಯತೇ**—ಯಜ್ಞವನ್ನು ಮಾಡಲಿಚ್ಛಿಸುವ ಯಜಮಾನನಿಗೆ । **ವಾತಾಃ**—ವಾಯುಗಳು । **ಮಧು**—ಮಧುರವಾದ ಕರ್ಮಫಲಗಳನ್ನು । **ಕ್ಷರಂತಿ**—ಸುರಿಸುತ್ತವೆ । **ಸಿಂಧವಃ**—ಪ್ರವಾಹರೂಪವುಳ್ಳ ನದಿಗಳು । **ಮಧು**—ಮಾಧುರ್ಯದಿಂದ ಕೂಡಿದ ತಮ್ಮ ರಸವನ್ನು (ಸುರಿಸುತ್ತವೆ) । **ನಃ**—ನಮಗೆ । **ಓಷಧೀಃ**—ಸಸ್ಯ ಮತ್ತು ಮೂಲಿಕಾದಿಗಳು । **ಮಾಧ್ವೀಃ**—ಮಾಧುರ್ಯದಿಂದ ಕೂಡಿದವುಗಳಾಗಿ । **ಸಂತು**—ಆಗಲಿ ।

ಭಾವಾರ್ಥ

ಯಜ್ಞಗಳನ್ನು ಮಾಡಿ ದೇವಪೂಜಾನಿರತನಾಗಿರತಕ್ಕ ಯಜಮಾನನಿಗೆ ವಾಯುಗಳು ಮಧುರವಾದ ಕರ್ಮಫಲಗಳನ್ನು ಸುರಿಸುತ್ತವೆ. ಪ್ರವಾಹ ರೂಪವುಳ್ಳನದಿಗಳು ತಮ್ಮ ಮಧುರವಾದ ರಸವನ್ನು ಹರಿಸುತ್ತವೆ. ಯಜ್ಞಕರ್ತನಾದ ನನಗೆ ಸಸ್ಯಾದಿಗಳೂ ಮೂಲಿಕೆಗಳೂ ಮಾಧುರ್ಯದಿಂದ ಕೂಡಿದವುಗಳಾಗಿ ಆಗಲಿ.

## English Translation

The winds bring sweet (rewards) to the Sacrificer ; the rivers bring sweet waters ; may the herbs yeild sweetness to us.

Or

Sweetly do the winds blow for the pious Sacrificer ; sweetly do the rivers flow, sweet may the plants be for us

॥ ವಿಶೇಷವಿಷಯಗಳು ॥

ಋತ್ವಿಗಾದಿ ಜನರಿಗೆ ಸಿದ್ಧಮಾಡಿದ ಮಧುಪರ್ಕವನ್ನು ಮಧುವಾತಾ ಎಂದು ಮೊದಲಾಗುವ ಮೂರು ಋಕ್ಕುಗಳಿಂದ ಮಧುಪರ್ಕವನ್ನು ಸ್ವೀಕರಿಸುವ ಋತ್ವಿಗಾದಿ ಜನರು ದೃಷ್ಟಿಸಿ ನೋಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದಲ್ಲಿ **ಮಧುವಾತಾ ಋತಾಯತ ಇತಿ ತೃಚೇನಾವೇಕ್ಷ್ಯ** ಎಂಬ ಸೂತ್ರವು ನಿರ್ದೇಶಿಸುವುದು. ( ಆ. ಗೃ. ೧-೨೪-೧೪ ).

**ಋತಾಯತೇ**—ಯಜ್ಞಮಾತ್ಮನ ಇಚ್ಛತೇ ಯಜಮಾನಾಯ । ಯಜ್ಞಮಾಡುವ ಯಜಮಾನನ ಪ್ರೀತ್ಯರ್ಥವಾಗಿ.

**ಮಧು**—ಮಧುರವಾಗಿ, ಆಹ್ಲಾದಕರವಾಗಿ.

**ಕ್ಷರಂತಿ—ವರ್ಷಂತಿ** । ವರ್ಷಿಸುತ್ತವೆ, ಉಂಟುಮಾಡುತ್ತವೆ.

**ಸಿಂಧವಃ—ಸ್ಯಂದನಶೀಲಾ ನದ್ಯಃ ಸಮುದ್ರಾ ವಾ** । ನದಿಗಳು ಅಥವಾ ಸಮುದ್ರಗಳು.

ಮುಖ್ಯಾಭಿಪ್ರಾಯವು—ಯಜ್ಞಮಾಡುವ ಯಜಮಾನನ ಪ್ರೀತ್ಯರ್ಥವಾಗಿ ಗಾಳಿಯು ಆಹ್ಲಾದಕರವಾಗಿ ಬೀಸಲಿ ; ನದಿಗಳು ಸಿಹಿಯಾದ ಅಥವಾ ಮಧುರವಾದ ನೀರಿನಿಂದ ತುಂಬಿ ಪ್ರವಹಿಸಲಿ ; ಸಸ್ಯಾದಿ ಓಷಧಿವನಸ್ಪತಿಗಳು (ಸಸ್ಯ, ವೃಕ್ಷಾದಿಗಳು) ರುಚಿಕರವಾದ ಫಲಾದಿಗಳಿಂದ ಪೂರ್ಣವಾಗಿ ಕಂಗೊಳಿಸಲಿ.

ವ್ಯಾಕರಣಪ್ರಕ್ರಿಯಾ

**ಮಧು**—ಇದರ ಪರದಲ್ಲಿರುವ ಮತ್ವರ್ಥೀಯಪ್ರತ್ಯಯಕ್ಕೆ **ಲುಗಕಾರೇಕಾರರೇಫಾಶ್ಚ ವಕ್ತವ್ಯಾಃ** (ಪಾ. ಸೂ. ೪-೪-೧೨೮-೨) ಎಂಬ ವಚನದಿಂದ ಲುಕ್. ದ್ವಿತೀಯಾ ಅಮ್ ಪರವಾದಾಗ **ಸ್ವಮೋರ್ನಪುಂಸಕಾತ್**—ಎಂಬುದರಿಂದ ಅದಕ್ಕೆ ಲುಕ್.,

**ಋತಾಯತೇ**—ಋತಮಾತ್ಮನಃ ಇಚ್ಛತಿ ಋತಾಯತೇ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್‌ಪ್ರತ್ಯಯ. ಕ್ಯಚ್ ಪರವಾದಾಗ **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫)—ಎಂಬುದರಿಂದ ಋತ ಎಂಬಲ್ಲಿರುವ ಅಕಾರಕ್ಕೆ ಈತ್ವದೀರ್ಘಗಳು ಬರುವುದಿಲ್ಲ. **ಅನ್ಯೇಷಾಮಪಿ ದೃಶ್ಯತೇ**—ಎಂಬುದರಿಂದ ಸಂಹಿತಾದಲ್ಲಿ ತಕಾರೋತ್ತರಾಕಾರಕ್ಕೆ ದೀರ್ಘ. ಋತಾಯ ಎಂಬ ಕ್ಯಜಂತವು **ಸನಾದ್ಯಂತಾ ಧಾತವಃ**—ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದರ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಋತಾಯತ್ ಶಬ್ದವಾಗುತ್ತದೆ. ಚತುರ್ಥೀಏಕವಚನದಲ್ಲಿ ಋತಾಯತೇ ಎಂದು ರೂಪವಾಗುತ್ತದೆ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕ್ಷರಂತಿ**—ಕ್ಷರ ಪ್ರಸ್ರವಣೇ ಧಾತು. ಲಟ್‌ಪ್ರಥಮಪುರುಷ ಬಹುವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಾಧ್ವೀಃ**—ಮಧು ಅಸ್ಯಾ ಅಸ್ತಿ ಎಂಬರ್ಥದಲ್ಲಿ **ಮಧೋರಞ್ ಚ** (ಪಾ.ಸೂ.೪-೪-೧೨೯) ಎಂಬುದರಿಂದ ಅಞ್‌ಪ್ರತ್ಯಯ. ಇದು ಪರವಾದಾಗ **ಋತ್ವ್ಯವಾಸ್ತ್ವ್ಯ**—(ಪಾ. ಸೂ.೬-೪-೧೭೫) ಎಂಬುದರಿಂದ ಯಣಾದೇಶವು ನಿಪಾತಿತವಾಗಿದೆ. ಪ್ರತ್ಯಯ ಞಿತ್ತಾದುದರಿಂದ ಆದಿವೃದ್ಧಿ. ಸ್ತ್ರೀತ್ವವಿವಕ್ಷಾಮಾಡಿದಾಗ **ಟಿಡ್ಢಾಣಞ್**—ಎಂಬುದರಿಂದ ಙೀಪ್. ಪ್ರಥಮಾಬಹುವಚನದಲ್ಲಿ **ವಾ ಛಂದಸಿ**—ಎಂಬುದರಿಂದ ಪೂರ್ವಸವರ್ಣದೀರ್ಘ. ಸಕಾರಕ್ಕೆ ರುತ್ವವಿಸರ್ಗ. ಮಾಧ್ವೀಃ ಎಂದು ರೂಪವಾಗುತ್ತದೆ.

**ಸಂತು**—ಅಸ ಭುವಿ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ. ಉತ್ವ. **ಶ್ನಸೋರಲ್ಲೋಪಃ**—ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಓಷಧೀಃ**—ಓಷಃ ಪಾಕಃ ಆಸು ಧೀಯತೇ ಇತಿ ಓಷಧಯಃ ಡುಧಾಞ್ ಧಾರಣಪೋಷಣಯೋಃ ಧಾತು. ಅಧಿಕರಣಾರ್ಥದಲ್ಲಿ ಇದಕ್ಕೆ **ಕರ್ಮಣ್ಯಧಿಕರಣೇ ಚ** (ಪಾ. ಸೂ. ೩-೩-೯೩) ಎಂಬುದರಿಂದ ಕಿ ಪ್ರತ್ಯಯ. **ಆತೋ-**

ಲೋಪ ಇಟಿಚ—ಎಂಬುದರಿಂದ ಪ್ರತ್ಯಯಪರವಾದಾಗ ಧಾತುವಿನ ಆಕಾರಕ್ಕೆ ಲೋಪ. ಓಷಧಿ ಶಬ್ದವಾಗುತ್ತದೆ. ಇದಕ್ಕೆ ಸ್ತ್ರೀತ್ವದಲ್ಲಿ **ಕೃದಿಕಾರಾದಿಕ್ತಿನಃ**—ಎಂಬುದರಿಂದ ಙೀಷ್. ಜಸ್ ಪರವಾದಾಗ ಹಿಂದಿನಂತೆ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣದೀರ್ಘ. ದಾಸೀಭಾರಾದಿಯಲ್ಲಿ ಪಠಿತವಾದುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದಾಸೀಭಾರಶಬ್ದವು ಘಞಂತವಾದುದರಿಂದ ಅಂತ್ಯೋದಾತ್ತವಾದುದರಿಂದ ಇದೂ ಅಂತ್ಯೋದಾತ್ತವಾಗುತ್ತದೆ. ॥ ೬ ॥

ಸಂಹಿತಾಪಾಠಃ

ಮಧು ನಕ್ತಮುತೋಷಸೋ ಮಧುಮತ್ಪಾರ್ಥಿವಂ ರಜಃ ।
ಮಧು ದ್ಯೌರಸ್ತು ನಃ ಪಿತಾ ॥ ೭ ॥

॥ ಪದಪಾಠಃ ॥

ಮಧು । ನಕ್ತಂ । ಉತ । ಉಷಸಃ । ಮಧುಽಮತ್ । ಪಾರ್ಥಿವಂ । ರಜಃ ।
ಮಧು । ದ್ಯೌಃ । ಅಸ್ತು । ನಃ । ಪಿತಾ ॥ ೭ ॥

॥ ಸಾಯಣಭಾಷ್ಯಂ ॥

ನಕ್ತಂ ರಾತ್ರಿರ್ನೋಽಸ್ಮಾಕಂ ಮಧು ಮಧುಮತೀ ಮಾಧುರ್ಯೋಪೇತಫಲಪ್ರದಾ ಭವತು । ಉತಾಪಿ ಚೋಷಸ ಉಷಃಕಾಲೋಪಲಕ್ಷಿತಾನ್ಯಹಾನಿ ಚ ಮಧುಮಂತಿ ಭವಂತು । ಪಾರ್ಥಿವಂ ರಜಃ ಪೃಥಿವ್ಯಾಃ ಸಂಬಂಧೀ ಲೋಕೋಽಸ್ಮಾಕಂ ಮಧುಮತ್ ಮಾಧುರ್ಯವಿಶಿಷ್ಟಫಲಯುಕ್ತೋ ಭವತು । ಪಿತಾ ವೃಷ್ಟಿಪ್ರದಾನೇನ ಸರ್ವೇಷಾಂ ಪಾಲಯಿತಾ ದ್ಯೌರ್ದ್ಯುಲೋಕೋಽಪಿ ಮಧು ಮಧುಯುಕ್ತೋ ಭವತು ॥ ಪಾರ್ಥಿವಂ । ಪೃಥಿವ್ಯಾ ಞಾಞೌ । ಪಾ. ೪-೧-೮೫-೨ । ಇತಿ ಪ್ರಾಗ್ದೀವ್ಯತೀಯೋಽಞ್ಪ್ರತ್ಯಯಃ । ರಜಃ । ರಜಃಶಬ್ದೋ ಲೋಕವಾಚೀ । ಲೋಕಾ ರಜಾಂಸ್ಯುಚ್ಯಂತೇ । ನಿ. ೪-೧೯ । ಇತಿ ಯಾಸ್ಕಃ । ರಜಂತ್ಯಸ್ಮಿಞ್ಜನಾ ಇತಿ ರಜಃ । ಅಸುನಿ ರಜಕರಜನರಜಃಸೂಪಸಂಖ್ಯಾನಂ । ಕಾ. ೬-೪-೨೪-೪ । ಇತಿ ರಂಜೇರ್ನಲೋಪಃ ॥

ಪ್ರತಿಪದಾರ್ಥ

**ನಕ್ತಂ**—ರಾತ್ರಿಯು | **ನಃ**—ನಮಗೆ | **ಮಧು**—ಮಾಧುರ್ಯದಿಂದ ಕೂಡಿದ ಫಲಗಳನ್ನು ಕೊಡುವವ ಳಾಗಿ (ಆಗಲಿ) | **ಉತ**—ಮತ್ತು | **ಉಷಸಃ**—ಉಷಃಕಾಲಗಳಿಂದ ಉಪಲಕ್ಷಿತಗಳಾಗುವ ದಿನಗಳು (ಮಾಧುರ್ಯ ವುಳ್ಳ ಫಲಪ್ರದಗಳಾಗಲಿ) | **ಪಾರ್ಥಿವಂ ರಜಃ**—ಪೃಥಿವಿಗೆ ಸಂಬಂಧಿಸಿದ ಲೋಕವು | **ಮಧುಮತ್**—ಮಧುರ ವಾದ ಫಲವುಳ್ಳದ್ದಾಗಲಿ | **ಪಿತಾ**—[ವೃಷ್ಟಿದಾನದಿಂದ ಸಕಲರಿಗೂ] ಪಾಲಕನಾದ | **ದ್ಯೌಃ**—ದ್ಯು ಲೋಕವೂ| **ಮಧು**—ಮಾಧುರ್ಯದಿಂದ ಕೂಡಿರಲಿ |

ಭಾವಾರ್ಥ

ರಾತ್ರಿಯೂ, ಹಗಲೂ ನಮಗೆ ಯಾವಾಗಲೂ ಮಾಧುರ್ಯದಿಂದ ಕೂಡಿದ ಫಲಪ್ರದಗಳಾಗಲಿ. ಪಾರ್ಥಿವ ಲೋಕವೆಲ್ಲವೂ ನಮಗೆ ಮಧುರವಾದ ಫಲವುಳ್ಳದ್ದಾಗಲಿ. ವೃಷ್ಟಿಪ್ರದಾನದಿಂದ ಸಕಲರಿಗೂ ಪಾಲಕನಾದ ದ್ಯುಲೋಕವೂ ಸಹ ಮಾಧುರ್ಯದಿಂದ ಕೂಡಿರಲಿ.

English Translation

May night and morning be sweet; may the region of the earth be full of sweetness; may the protecting heaven be sweet to us.

॥ ವಿಶೇಷವಿಷಯಗಳು ॥

**ಉಷಸಃ— ಉಷಃಕಾಲೋಪಲಕ್ಷಿತಾನ್ಯಹಾನಿ |** ಉಷಃಕಾಲಸಹಿತವಾದ ಹಗಲು ಎಂದರೆ ಪ್ರಾತಃ ಕಾಲವು. early morning

**ಪಾರ್ಥಿವಂ ರಜಃ**— ರಜಃ ಎಂದರೆ ಲೋಕವು **ಲೋಕಾ ರಜಾಂಸ್ಯುಚ್ಯಂತೇ** (ನಿ. ೪-೧೯) **ಪಾರ್ಥಿವಂ ರಜಃ** ಎಂದರೆ ಭೂಲೋಕವು ಅಥವಾ ಭೂಮಿಯು.

**ದ್ಯೌಃ ಪಿತಾ—** ನಮಗೆ ತಂದೆಯಂತಿರುವ **ದ್ಯೌಃ** ಎಂದರೆ ಸ್ವರ್ಗವು. ಋಗ್ವೇದದಲ್ಲಿ ದ್ಯಾವಾಪೃಥಿವೀ ಎಂಬ ಶಬ್ದಪ್ರಯೋಗವು ಅಲ್ಲಲ್ಲಿ ಇರುವುದು. ಈ ಶಬ್ದಕ್ಕೆ ಸ್ವರ್ಗಭೂಮಿಗಳು ಎಂದರ್ಥವು. ಸ್ವರ್ಗವನ್ನು ತಂದೆ ಎಂದೂ ಭೂಮಿಯನ್ನು ತಾಯಿಯೆಂದೂ ಹೇಳುವ ರೂಢಿ ಇರುವುದು. ಏಕೆಂದರೆ ತಂದೆ ತಾಯಿಗಳು ನಮ್ಮನ್ನು ಆಹಾರಾದಿಗಳಿಂದ ಪೋಷಿಸುವಂತೆ ಸ್ವರ್ಗವು ಎಂದರೆ ಅಂತರಿಕ್ಷವು ನಮ್ಮ ಆಹಾರೋತ್ಪತ್ತಿಗೆ ಅವಶ್ಯಕವಾದ ಮಳೆ ಯನ್ನು ಸುರಿಸುವುದು. ಪೃಥಿವಿಯು ಮಳೆಯ ಸಹಾಯದಿಂದ ಸಸ್ಯಾದಿಗಳನ್ನು ಉತ್ಪತ್ತಿಮಾಡಿ ನಮಗೆ ಅವಶ್ಯಕ ವಾದ ಆಹಾರವನ್ನು ಒದಗಿಸುವುದು. ಆದುದರಿಂದ ದ್ಯಾವಾಪೃಥಿವಿಗಳನ್ನು ತಂದೆತಾಯಿಗಳೆಂದು ಕರೆಯುವ ರೂಢಿ ಇರುವುದು.

ವ್ಯಾಕರಣಪ್ರಕ್ರಿಯಾ

**ಮಧುಮತ್**—ಮಧು ಯೇಷಾಂ ಅಸ್ತಿ ಮಧುಮಂತಿ **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್**—ಎಂಬುದರಿಂದ ಮತುಪ್ ಪ್ರತ್ಯಯ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಮ್**—ಎಂಬುದರಿಂದ ಶಿಗೆ ಲೋಪ.

**ಪಾರ್ಥಿವಮ್**—ಪೃಥಿವ್ಯಾಃ ಇದಮ್. ಪಾರ್ಥಿವಮ್. **ಪೃಥಿವ್ಯಾ ಞಾಞೌ** (ಪಾ. ಸೂ ೪-೧-೮೫-೩) ಎಂಬುದರಿಂದ ಪ್ರಾಗ್ದೀವ್ಯತೀಯ (ಸಂಬಂಧಿ) ಅರ್ಥದಲ್ಲಿ ಅಞ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಈಕಾರಕ್ಕೆ ಲೋಪ. **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಮ್** — ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಜಃ**—ರಜಃ ಎಂಬುದು ಇಲ್ಲಿ ಲೋಕರೂಪಾರ್ಥವನ್ನು ತಿಳಿಸುತ್ತದೆ. **ಲೋಕಾ ರಜಾಂಸ್ಯುಚ್ಯಂತೇ** (ನಿರು. ೪-೧೯) ಎಂದು ಯಾಸ್ಕರು ಹೇಳಿರುತ್ತಾರೆ. ರಜಂತ್ಯಸ್ಮಿನ್ ಜನಾಃ ಇತಿ ರಜಃ । ರಂಜ ರಾಗೇ ಧಾತು. ಅಸುನ್‌ಪ್ರತ್ಯಯ. **ರಜಕರಜನರಜ್ಜುಃ ಸೂಪಸಂಖ್ಯಾನಮ್**— ಎಂಬ ವಚನದಿಂದ (ಕಾ. ೬-೪-೨೪-೪) ಅಸುನ್ ಪರವಾದಾಗ ರಂಜ್ ಧಾತುವಿನ ಉಪಧಾ ನಕಾರಕ್ಕೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೭ ॥

---

॥ ಸಂಹಿತಾಪಾಠಃ ॥

ಮಧುಮಾನ್ನೋ ವನಸ್ಪತಿರ್ಮಧುಮಾಁ ಅಸ್ತು ಸೂರ್ಯಃ ।
ಮಾಧ್ವೀರ್ಗಾವೋ ಭವಂತು ನಃ ॥ ೮ ॥

ಪದಪಾಠಃ

ಮಧುಽಮಾನ್ । ನಃ । ವನಸ್ಪತಿಃ । ಮಧುಽಮಾನ್ । ಅಸ್ತು । ಸೂರ್ಯಃ ।
ಮಾಧ್ವೀಃ । ಗಾವಃ । ಭವಂತು । ನಃ ॥ ೮ ॥

॥ ಸಾಯಣಭಾಷ್ಯಂ ॥

ನೋಽಸ್ಮಾಕಂ ವನಸ್ಪತಿರ್ವನಾನಾಂ ಪಾಲಯಿತಾ ಯೂಪಾಭಿಮಾನೀ ದೇವೋ ಮಧುಮಾನ್ ಮಾಧುರ್ಯೋಪೇತಫಲವಾನಸ್ತು । ತಾದೃಶಂ ಫಲಮಸ್ಮಭ್ಯಂ ಪ್ರಯಚ್ಛತ್ವಿತ್ಯರ್ಥಃ । ಸೂರ್ಯಃ ಸರ್ವಸ್ಯ ಪ್ರೇರಕಃ ಸವಿತಾ ಚ ಮಧುಮಾನಸ್ತು । ಗಾವೋಽಗ್ನಿಹೋತ್ರಾದ್ಯರ್ಥಾ ಧೇನವಶ್ಚ ನೋಽಸ್ಮಾಕಂ ಮಾಧ್ವೀರ್ಮಾಧುರ್ಯೋಪೇತೇನ ಪಯಸಾ ಯುಕ್ತಾ ಭವಂತು ॥ ವನಸ್ಪತಿಃ । ವನಾನಾಂ ಪತಿರ್ವನಸ್ಪತಿಃ । ಪಾರಸ್ಕರಾದಿತ್ವಾತ್ಸುಟ್ । ವನಪತಿಶಬ್ದಾವಾದ್ಯುದಾತ್ತೌ । ಉಭೇ ವನಸ್ಪತ್ಯಾದಿಷು ಯುಗಪದಿತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

**ನಃ**—ನಮಗೆ । **ವನಸ್ಪತಿಃ**—ವನಸ್ಪತಿದೇವನು । **ಮಧುಮಾನ್**—ಮಾಧುರ್ಯದಿಂದ ಕೂಡಿದ ಫಲವುಳ್ಳವನಾಗಿ । **ಅಸ್ತು**—ಇರಲಿ (ನಮಗೆ ಅಂತಹ ಫಲಗಳನ್ನನುಗ್ರಹಿಸಲಿ) । **ಸೂರ್ಯಃ**—ಸೂರ್ಯನೂ । **ಮಧುಮಾನ್**—ಮಧುರನಾಗಿ (ಆಗಲಿ) । **ಗಾವಃ**—ಗೋವುಗಳೂ ಸಹ । **ನಃ**—ನಮ್ಮ ಭಾಗಕ್ಕೆ । **ಮಾಧ್ವೀಃ**—ಮಾಧುರ್ಯವುಳ್ಳವುಗಳಾಗಿ । **ಭವಂತು**—ಆಗಲಿ ॥

॥ ಭಾವಾರ್ಥ ॥

ವನಸ್ಪತಿದೇವನು ನಮಗೆ ಮಾಧುರ್ಯದಿಂದ ಕೂಡಿದ ಫಲಪ್ರದನಾಗಿ ಆಗಲಿ. ಸೂರ್ಯನು ನಮ್ಮ ಭಾಗಕ್ಕೆ ಮಧುರನಾಗಿರಲಿ. ಗೋವುಗಳೂ ಸಹ ನಮ್ಮ ಭಾಗಕ್ಕೆ ಮಾಧುರ್ಯವುಳ್ಳವುಗಳಾಗಿ ಆಗಲಿ.

English Translation

May Vanaspati (tree) become sweet for us; may Surya be sweet for us ; may the cows be sweet to us.

ವಿಶೇಷವಿಷಯಗಳು

**ವನಸ್ಪತಿಃ— ವನಾನಾಂ ಪಾಲಯಿತಾ ಯೂಪಾಭಿಮಾನೀ ದೇವೋ ಮಾಧುರ್ಯೋಪೇತಫಲವಾನಸ್ತು** । ವನಗಳ ಪಾಲಕನೂ ಯೂಪಾಭಿಮಾನಿ ದೇವತೆಯೂ ಆದ ವನಸ್ಪತಿಯು ನಮಗೆ ಮಧುರವಾದ ಫಲಗಳನ್ನೊದಗಿಸಲಿ. ವನಸ್ಪತಿ ಎಂದರೆ ವನಗಳ ವೃಕ್ಷಗಳಿಗೆ ಪತಿಯು, ದೊಡ್ಡ ವೃಕ್ಷವು. ಇಂತಹ ವೃಕ್ಷಾದಿಗಳು ಫಲಭರಿತಗಳಾಗಿರಲಿ ಎಂದು ಋಷಿಯ ಪ್ರಾರ್ಥನೆಯು. ಯಾಸ್ಕರು—**ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ** । ಎಂದು ವನಸ್ಪತಿ ಶಬ್ದಕ್ಕೆ ನಿರ್ವಚನವನ್ನು ಹೇಳಿರುವರು (ನಿ. ೮-೩).

ಋಗ್ವೇದದಲ್ಲಿ ವನಸ್ಪತಿಶಬ್ದವು **ವೃಕ್ಷಶ್ರೇಷ್ಠ** ( ಋ. ಸಂ. ೧-೧೬೬-೫ ; ೩-೩೪-೧೦ ; ೫-೭-೪ ; ೫-೪೧-೮ ಇತ್ಯಾದಿ,) **ಯೂಪ** ಎಂದರೆ ಯಜ್ಞಗಳಲ್ಲಿ ಪಶುವನ್ನು ಕಟ್ಟುವ ಸ್ತಂಭ ( ಋ.ಸಂ. ೩-೮-೧ ; ೩-೮-೩ ; ೩-೮-೬ ; ಇತ್ಯಾದಿ ) ಮರದಿಂದ ಮಾಡಿದ **ರಥ** ಅಥವಾ ರಥದ ಯಾವುದಾದರೂ ಒಂದು ಭಾಗ ( ಋ. ಸಂ. ೨-೩೭-೩ ; ೩-೫೩-೨೦ ; ೬-೪೭-೨೬ ) **ಸೋಮ** ( ಋ. ಸಂ. ೧-೯೧-೬ ; ವಾ. ಸಂ. ೧೦-೨೩ ಇತ್ಯಾದಿ ) ಎಂಬ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದು.

ವ್ಯಾಕರಣಪ್ರಕ್ರಿಯಾ

**ವನಸ್ಪತಿಃ**—ವನಾನಾಂ ಪತಿಃ ವನಸ್ಪತಿಃ ಪಾರಸ್ಕರಗಣದಲ್ಲಿ ಸೇರಿರುವುದರಿಂದ **ಪಾರಸ್ಕರಪ್ರಭೃತೀನಿ ಚ ಸಂಜ್ಞಾಯಾಮ್** (ಪಾ. ಸೂ. ೬-೧-೧೫೭) ಎಂಬುದರಿಂದ ಸುಟ್ ಬರುತ್ತದೆ. ವನಶಬ್ದವೂ ಪತಿಶಬ್ದವೂ ಆದ್ಯುದಾತ್ತವಾದುದರಿಂದ **ಉಭೇ ವನಸ್ಪತ್ಯಾದಿಷು ಯುಗಪತ್** (ಪಾ. ಸೂ. ೬-೨-೧೪೦) ಎಂಬುದರಿಂದ ಪೂರ್ವೋತ್ತರಪದಗಳಿಗೆ ಏಕಕಾಲದಲ್ಲಿ ಪ್ರಕೃತಿಸ್ವರ ಬರುತ್ತದೆ.

**ಸೂರ್ಯಃ**—ಸರತಿ ಆಕಾಶೇ ಇತಿ ಸೂರ್ಯಃ. ಸೃ ಗತೌ ಧಾತು. **ರಾಜಸೂಯ ಸೂರ್ಯ ಮೃಷೋದ್ಯರುಚ್ಯ** (ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ ॥ ೮ ॥



ಸಂಹಿತಾಪಾಠಃ

ಶಂ ನೋ ಮಿತ್ರಃ ಶಂ ವರುಣಃ ಶಂ ನೋ ಭವತ್ವರ್ಯಮಾ ।
ಶಂ ನ ಇಂದ್ರೋ ಬೃಹಸ್ಪತಿಃ ಶಂ ನೋ ವಿಷ್ಣುರುರುಕ್ರಮಃ ॥೯॥

॥ ಪದಪಾಠಃ ॥

ಶಂ । ನಃ । ಮಿತ್ರಃ । ಶಂ । ವರುಣಃ । ಶಂ । ನಃ । ಭವತು । ಅರ್ಯಮಾ ।
ಶಂ । ನಃ । ಇಂದ್ರಃ । ಬೃಹಸ್ಪತಿಃ । ಶಂ । ನಃ । ವಿಷ್ಣುಃ । ಉರುಽಕ್ರಮಃ ॥೯॥

ಸಾಯಣಭಾಷ್ಯಂ

ಅಹರಭಿಮಾನೀ ಮಿತ್ರೋ ದೇವೋ ನೋಽಸ್ಮಾಕಂ ಶಂ ಸುಖಕರೋ ಭವತು । ಯದ್ವಾ । ಅಸ್ಮದೀಯಾನಾಮುಪದ್ರವಾಣಾಂ ಶಮಯಿತಾ ಭವತು । ರಾತ್ರ್ಯಭಿಮಾನೀ ವರುಣಶ್ಚ ಶಂ ಸುಖಕರೋ ಭವತು । ಅರ್ಯಮಾಽಹೋರಾತ್ರಯೋಃ ಖ್ಯಾಪಯಿತಾ ಸೂರ್ಯಶ್ಚ ನೋಽಸ್ಮಾಕಂ ಶಂ ಸುಖಕರೋ ಭವತು । ಬೃಹಸ್ಪತಿರ್ಬೃಹತಾಂ ದೇವಾನಾಂ ಪಾಲಯಿತೇಂಪ್ರಶ್ಚ ನೋಽಸ್ಮಾಕಂ ಶಂ ಸುಖಕರೋ ಭವತು। ಉರುಕ್ರಮಃ । ಉರು ವಿಸ್ತೀರ್ಣಂ ಕ್ರಾಮತಿ ಪಾದೌ ವಿಕ್ಷಿಪತೀತ್ಯುರುಕ್ರಮಃ । ವಿಷ್ಣುರ್ಹಿ ವಾಮನಾವತಾರೇ ಪೃಥಿವ್ಯಾದೀನ್ ಲೋಕಾನ್ಪದತ್ರಯರೂಪೇಣಾಕ್ರಾಂತವಾನ್ । ಅತ ಉರುಕ್ರಮೋ ವಿಷ್ಣುಶ್ಚ ನೋಽಸ್ಮಾಕಂ ಶಂ ಸುಖಕರ ಉಪದ್ರವಾಣಾಂ ಶಮಯಿತಾ ವಾ ಭವತು ॥ ಉರುಕ್ರಮಃ । ಕ್ರಮು ಪಾದವಿಕ್ಷೇಪೇ । ಪಚಾದ್ಯಚ್ । ಯದ್ವಾ । ಉರೂನ್ ಕ್ರಾಮತೀತ್ಯರುಕ್ರಮಃ । ಕರ್ಮಣ್ಯಣ್ । ನೋದಾತ್ತೋಪದೇಶಸ್ಯ ಮಾಂತಸ್ಯೇತಿ ವೃದ್ಧಿಪ್ರತಿಷೇಧಃ ॥

ಪ್ರತಿಪದಾರ್ಥ

ಮಿತ್ರಃ—(ಅಹರಭಿಮಾನಿದೇವತೆಯಾದ) ಮಿತ್ರನು । **ನಃ** ನಮಗೆ । **ಶಂ**—(ನಮ್ಮ ಉಪದ್ರವಗಳನ್ನು ತಪ್ಪಿಸಿ) ಸುಖದಾಯಕನಾಗಲಿ । **ವರುಣಃ**—(ರಾತ್ರ್ಯಭಿಮಾನಿದೇವತೆಯಾದ) ವರುಣನೂ । **ಶಂ**—ಸುಖದಾಯಕನಾಗಲಿ । **ಅರ್ಯಮಾ**—(ಅಹೋರಾತ್ರಗಳ ವಿಭಾಗಕರ್ತನಾದ) ಅರ್ಯಮನೂ । **ನಃ**—ನಮಗೆ । **ಶಂ**—ಸುಖಕರ

ನಾಗಲಿ । **ಬೃಹಸ್ಪತಿಃ**—ಬೃಹಸ್ಪತಿಯೂ । **ಇಂದ್ರಃ**—ಇಂದ್ರನೂ । **ನಃ**—ನಮಗೆ । **ಶಂ**— ಶುಖಕರರಾಗಲಿ । **ಉರುಕ್ರಮಃ**— ವಿಸ್ತಾರವಾದ ಪಾದ ವಿಕ್ಷೇಪವುಳ್ಳ । **ವಿಷ್ಣುಃ**— ವಿಷ್ಣುವೂ । **ನಃ**— ನಮಗೆ । **ಶಂ**— ಸುಖಕರನಾಗಲಿ ॥

ಭಾವಾರ್ಥ

ಅಹರಭಿಮಾನಿದೇವನಾದ ಮಿತ್ರನೂ, ರಾತ್ರ್ಯಭಿಮಾನಿದೇವನಾದ ವರುಣನೂ ನಮಗೆ ಸುಖಕರರಾಗಲಿ. ಅಹೋರಾತ್ರಗಳ ವಿಭಾಗ ಕರ್ತನಾದ ಅರ್ಯಮನು ನಮಗೆ ಸುಖವನ್ನುಂಟುಮಾಡಲಿ. ಬೃಹಸ್ಪತಿಯೂ, ಇಂದ್ರನೂ ನಮಗೆ ಸುಖದಾಯಕರಾಗಲಿ. ವಿಸ್ತಾರವಾದ ಪಾದವಿಕ್ಷೇಪವುಳ್ಳ ವಿಷ್ಣುವೂ ಸಹ ನಮಗೆ ಸುಖಕರನಾಗಲಿ.

English Translation

May Mitra be auspicious for us ; may Varuna, may Aryaman be auspicious for us ; may Indra and Brihaspati be propitious to us ; may wide-striding Vishnu be auspicious for us.

ವಿಶೇಷವಿಷಯಗಳು

ಈ ಋಕ್ಕು ತೈತ್ತಿರೀಯ ಉಪನಿಷತ್ತಿನ ಶಿಕ್ಷಾವಲ್ಲೀ ಎಂಬ ಪ್ರಥಮಾಧ್ಯಾಯದ ಶಾಂತಿಪಾಠವಾಗಿ ಪ್ರಯೋಗಿಸಲ್ಪಟ್ಟಿರುವುದು.

**ಶಂ ನೋ ಮಿತ್ರಃ ಭವತು**—ಅಹರಭಿಮಾನಿಯಾದ ಮಿತ್ರನು ನಮಗೆ ಸುಖವನ್ನುಂಟುಮಾಡಲಿ.

**ವರುಣಃ**—ರಾತ್ರ್ಯಭಿಮಾನಿದೇವತೆಯಾದ ವರುಣನು.

**ಬೃಹಸ್ಪತಿಃ—ಬೃಹತಾಂ ದೇವಾನಾಂ ಪಾಲಯಿತಾ ।** ದೊಡ್ಡ ಅಥವಾ ಶ್ರೇಷ್ಠರಾದ, ಅನೇಕರಾದ ದೇವತೆಗಳ ಪಾಲಕನಾದ ಬೃಹಸ್ಪತಿಯು.

**ಅರ್ಯಮಾ**— ಅಹೋರಾತ್ರಿಗಳನ್ನು ವಿಂಗಡಿಸುವ ಸೂರ್ಯನು.

**ವಿಷ್ಣುಃ ಉರುಕ್ರಮಃ—ಕ್ರಮು ಪಾದವಿಕ್ಷೇಪೇ। ಉರು ವಿಸ್ತೀರ್ಣಂ ಕ್ರಾಮತಿ ಪಾದೌ ವಿಕ್ಷಿಪತೀತ್ಯುರುಕ್ರಮಃ । ವಿಷ್ಣುರ್ಹಿ ವಾಮನಾವತಾರೇ ಪೃಥಿವ್ಯಾದೀನ್ ಲೋಕಾನ್ ಪದತ್ರಯರೂಪೇಣಾಕ್ರಾಂತವಾನ್ । ಅತ ಉರುಕ್ರಮೋ ವಿಷ್ಣುಃ ।** ಉರುಕ್ರಮಃ ಎಂದರೆ ವಿಸ್ತೀರ್ಣವಾಗಿ, ದೂರದೂರಕ್ಕೆ ಕಾಲುಗಳನ್ನಿಡುವ; ವಿಷ್ಣುವು ವಾಮನಾವತಾರಕಾಲದಲ್ಲಿ ತನ್ನ ಮೂರು ವಿಕ್ಷೇಪಗಳಿಂದ ಪೃಥಿವ್ಯಾದಿ ಲೋಕಗಳನ್ನು ಆಕ್ರಮಿಸಿದನೆಂದು ಹೇಳಿರುವುದು. ವಿಷ್ಣುವಿನ ಈ ವಿಧವಾದ ಪರಾಕ್ರಮವನ್ನು ಸೂಚಿಸುವ ಋಕ್ಕುಗಳು ಕೆಲವಿವೆ—

**ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ ।**
**ಪೃಥಿವ್ಯಾಃ ಸಪ್ತಧಾಮಭಿಃ ॥**
**ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಂ ।**
**ಸಮೂಳ್ಹಮಸ್ಯ ಪಾಂಸುರೇ ॥**

**ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ ।**
**ಅತೋ ಧರ್ಮಾಣಿ ಧಾರಯನ್ ॥**
(ಋ ಸಂ. ೧-೨೨-೧೬,೧೭, ೧೮)

**ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿ ಕ್ಷಿಯಂತಿ ಭುವನಾನಿ ವಿಶ್ವಾ ।**
(ಋ. ಸಂ. ೧-೧೫೪-೨)

**ಯ ಇದಂ ದೀರ್ಘಂ ಪ್ರಯತಂ ಸಧಸ್ಥಮೇಕೋ ವಿಮಮೇ ತ್ರಿಭಿರಿತ್ಪದೇಭಿಃ ।**
(ಋ. ಸಂ. ೧-೧೫೪-೩)

**ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ॥**
(ಋ. ಸಂ. ೧-೧೫೪-೫)

**ತ್ರಿರ್ದೇವಃ ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ ಮಹಿತ್ವಾ ।**
(ಋ. ಸಂ. ೭-೧೦೦-೩)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ವಿಷ್ಣುವಿನ ಪದವಿಕ್ಷೇಪವು ಪ್ರಸ್ತಾಪಿಸಲ್ಪಟ್ಟಿರುವುದು. ಋ. ಸಂ. ಭಾಗ ೨. ಪೇಜು 125 & 126 ಗಳಲ್ಲಿ ಬರೆದಿರುವುದನ್ನು ನೋಡಿ.

ವ್ಯಾಕರಣಪ್ರಕ್ರಿಯಾ

**ಅರ್ಯಮಾ**—ಅರ್ಯಪೂರ್ವವಾದ ಮಾಙ್‌ಧಾತು. ಇದು **ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ನಿಪಾತಿತವಾಗಿದೆ.

**ಬೃಹಸ್ಪತಿಃ**—ಬೃಹತಾಂ ಪತಿಃ ಬೃಹಸ್ಪತಿಃ **ತದ್ಬೃಹತೋಃಕರಪತ್ಯೋಶ್ಚೋರದೇವತಯೋಃ ಸುಟ್ ತಲೋಪಶ್ಚ** (ವಾ. ೩೭೯೩) ಎಂಬುದರಿಂದ ಸುಟ್. ಬೃಹತ್ ಸಂಬಂಧಿ ತಕಾರಕ್ಕೆ ಲೋಪ. ಹಿಂದಿನಂತೆಯೇ ಉಭಯಪದಗಳಿಗೆ ಪ್ರಕೃತಿಸ್ವರ ಬರುತ್ತದೆ.

**ಉರುಕ್ರಮಃ**—ಕ್ರಮು ಪಾದ ವಿಕ್ಷೇಪೇ ಧಾತು. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಅಥವಾ ಉರೂನ್ ಕ್ರಾಮತಿ ಇತಿ ಉರುಕ್ರಮಃ **ಕರ್ಮಣ್ಯಣ್** (ಪಾ. ಸೂ. ೩-೧-೨) ಎಂಬುದರಿಂದ ಕರ್ಮವಾಚಕಪದ ಉಪಪದವಾಗಿರುವಾಗ ಅಣ್ ಪ್ರತ್ಯಯ. **ಅತ ಉಪಧಾಯಾಃ**— ಎಂಬುದರಿಂದ ವೃದ್ಧಿಯು ಪ್ರಾಪ್ತವಾದರೆ **ನೋದಾತ್ತೋಪದೇಶಸ್ಯ ಮಾಂತಸ್ಯ**—(ಪಾ. ಸೂ. ೭-೩-೩೪) ಎಂಬುದರಿಂದ ಮಾಂತವಾದುದರಿಂದ ವೃದ್ಧಿನಿಷೇಧ. ಪ್ರತ್ಯಯಸ್ವರದಿಂದ ಕ್ರಮಃ ಎಂಬುದು ಅಂತೋದಾತ್ತವಾಗುತ್ತದೆ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೯ ॥



# ತೊಂಭತ್ತೊಂದನೆಯ ಸೂಕ್ತವು

**ತ್ವಂ ಸೋಮೇತಿ ತ್ರಯೋವಿಂಶತ್ಯೃಚಂ ಸಪ್ತಮಂ ಸೂಕ್ತಂ ಗೋತಮಸ್ಯಾರ್ಷಂ ಸೋಮದೇವತಾಕಂ। ಪಂಚಮ್ಯಾದ್ಯಾಃ ಷೋಡಶ್ಯಂತಾ ದ್ವಾದಶರ್ಚೋ ಗಾಯತ್ರ್ಯಃ। ಸಪ್ತದಶ್ಯುಷ್ಣಿಕ್। ಶಿಷ್ಟಾ ದಶ ತ್ರಿಷ್ಟುಭಃ। ತಥಾ ಚಾನುಕ್ರಾಂತಂ। ತ್ವಂ ಸೋಮ ತ್ರ್ಯಧಿಕಾ ಸೌಮ್ಯಂ ಪಂಚಮ್ಯಾದಿ ಗಾಯತ್ರ್ಯೋ ದ್ವಾದಶೋಷ್ಣಿಕ್ ಚೇತಿ॥ ಸೂಕ್ತವಿನಿಯೋಗೋ ಲೈಂಗಿಕಃ॥ ಏಕಾದಶಿನಸ್ಯ ಸೌಮ್ಯಸ್ಯ ಪಶೋರ್ವಪಾಪುರೋಡಾಶಯೋಸ್ತ್ವಂ ಸೋಮೇತಿ ದ್ವೇ ಋಚಾವನುವಾಕ್ಯೇ। ಸೂತ್ರಿತಂ ಚ। ತ್ವಂ ಸೋಮ ಪ್ರ ಚಿಕಿತೋ ಮನೀಷೇತಿ ದ್ವೇ। ಆ. ೩-೭। ಇತಿ॥ ಮಹಾಪಿತೃಯಜ್ಞ ಏಕೈಕಸ್ಯ ಹವಿಷೋ ದ್ವೇ ದ್ವೇ ಅನುವಾಕ್ಯೇ। ತತ್ರ ಸೋಮಸ್ಯ ಪಿತೃಮತಸ್ತ್ವಂ ಸೋಮೇತ್ಯೇಷಾ ಪ್ರಥಮಾನುವಾಕ್ಯಾ। ದಕ್ಷಿಣಾಗ್ನೇರಗ್ನಿಮಿತಿ ಖಂಡೇ ಸೂತ್ರಿತಂ। ತ್ವಂ ಸೋಮ ಪ್ರ ಚಿಕಿತೋ ಮನೀಷಾ ಸೋಮೋ ಧೇನುಂ। ಆ. ೨-೧೯। ಇತಿ॥ ಏಷೈವ ಪ್ರಾಯಣೀಯೇಷ್ಟೌ ಸೌಮ್ಯಸ್ಯಾನುವಾಕ್ಯಾ। ತದಹಃ ಪ್ರಾಯಣೀಯೇಷ್ಟಿರಿತ್ಯತ್ರ ಸೂತ್ರಿತಂ। ತ್ವಂ ಸೋಮ ಪ್ರ ಚಿಕಿತೋ ಮನೀಷಾ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ।ಆ. ೪-೩। ಇತಿ॥**

ಅನುವಾದವು—**ತ್ವಂ ಸೋಮ** ಎಂಬ ಸೂಕ್ತವು ಹದಿನಾಲ್ಕನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಇಪ್ಪತ್ತಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋತಮನು ಋಷಿಯು. ಸೋಮನು ದೇವತೆಯು. ಐದರಿಂದ ಹದಿನಾರುವರೆಗಿನ ಹನ್ನೆರಡು ಋಕ್ಕುಗಳು ಗಾಯತ್ರೀಛಂದಸ್ಸಿನವು, ಹದಿನೇಳನೆಯದು ಉಷ್ಣಿಕ್‌ಛಂದಸ್ಕವು. ಉಳಿದ ಹತ್ತು ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ-**ತ್ವಂ ಸೋಮ ತ್ರ್ಯಧಿಕಾ ಸೌಮ್ಯಂ ಪಂಚಮ್ಯಾದಿ ಗಾಯತ್ರ್ಯೋ ದ್ವಾದಶೋಷ್ಣಿಕ್ ಚೇತಿ।** ಎಂದಿರುವುದು. ಸೂಕ್ತವಿನಿಯೋಗವು ಲೈಂಗಿಕವು. ಏಕಾದಶಿನ ಎಂಬ ಸೋಮಯಾಗದಲ್ಲಿ ಪಶುವಿನ ವಪಾಪುರೋಡಾಶಹೋಮಮಾಡುವಾಗ **ತ್ವಂ ಸೋಮ** -ಎಂಬ ಈ ಸೂಕ್ತದ ಎರಡು ಋಕ್ಕುಗಳನ್ನು ಪುರೋನುವಾಕ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ತ್ವಂ ಸೋಮ ಪ್ರಚಿಕಿತೋ ಮನೀಷೇತಿ ದ್ವೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೭) ಮಹಾಪಿತೃಯಜ್ಞದಲ್ಲಿ ಒಂದೊಂದು ಹವಿಸ್ಸನ್ನು ಹೋಮಮಾಡುವಾಗ ಎರಡೆರಡು ಋಕ್ಕುಗಳು ಪುರೋನುವಾಕ್ಯಾಮಂತ್ರಗಳನ್ನಾಗಿ ಉಪಯೋಗಿಸುವರು. ಅದರಲ್ಲಿ **ತ್ವಂ ಸೋಮ** ಎಂಬ ಋಕ್ಕು ಪ್ರಥಮ ಪುರೋನುವಾಕ್ಯಾಮಂತ್ರವು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ದಕ್ಷಿಣಾಗ್ನೇರಗ್ನಿಂ** ಎಂಬ ಖಂಡದಲ್ಲಿ **ತ್ವಂ ಸೋಮ ಪ್ರ ಚಿಕಿತೋ ಮನೀಷಾ ಸೋಮೋ ಧೇನುಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೧೯) ಇದಲ್ಲದೆ ಈ ಸೂಕ್ತದ ಪ್ರಥಮ ಋಕ್ಕೇ ಪ್ರಾಯಣೀಯೇಷ್ಟಿಯಲ್ಲಿ ಸೋಮದೇವತೆಯ ಪುರೋನುವಾಕ್ಯಾಮಂತ್ರವಾಗಿಯೂ ಇರುವುದೆಂದು ಆಶ್ವಲಾಯನಶ್ರೌತಸೂತ್ರದ **ತದಹಃ ಪ್ರಾಯಣೀಯೇಷ್ಟಿಃ** ಎಂಬ ಖಂಡದಲ್ಲಿ **ತ್ವಂ ಸೋಮ ಪ್ರ ಚಿಕಿತೋ ಮನೀಷಾ ಯಾತೇ ಧಾಮಾನಿ ದಿವಿ ಯಾ ಪೃಥಿವ್ಯಾಂ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. (ಆ. ೪-೩)

॥ ಓಂ ॥

## ಸೂಕ್ತ—೯೧

ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೯೧ ॥

ಅಷ್ಟಕ—೧ ॥ ಅಧ್ಯಾಯ—೬ ॥ ವರ್ಗ—೧೯, ೨೦, ೨೧, ೨೨, ೨೩, ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೨೩

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ— ಸೋಮಃ ॥

॥ ಛಂದಃ—೧-೪, ೧೮-೨೩ ತ್ರಿಷ್ಟುಪ್ । ೫-೧೬ ಗಾಯತ್ರೀ । ೧೭ ಉಷ್ಣಿಕ್ ॥

ಸಂಹಿತಾಪಾಠಃ

ತ್ವಂ ಸೋಮ ಪ್ರ ಚಿಕಿತೋ ಮನೀಷಾ ತ್ವಂ ರಜಿಷ್ಠಮನು
ನೇಷಿ ಪಂಥಾಂ ।
ತವ ಪ್ರಣೀತೀ ಪಿತರೋ ನ ಇಂದೋ ದೇವೇಷು ರತ್ನಮಭಜಂ-
ತ ಧೀರಾಃ ॥೧॥

ಭಾವಾರ್ಥ

ತ್ವಂ । ಸೋಮ । ಪ್ರ । ಚಿಕಿತಃ । ಮನೀಷಾ । ತ್ವಂ । ರಜಿಷ್ಠಂ । ಅನು । ನೇಷಿ ।
ಪಂಥಾಂ ।
ತವ । ಪ್ರಽನೀತೀ । ಪಿತರಃ । ನಃ । ಇಂದೋ ಇತಿ । ದೇವೇಷು । ರತ್ನಂ ।
ಅಭಜಂತ । ಧೀರಾಃ ॥ ೧ ॥

### ಸಾಯಣಭಾಷ್ಯಂ

**ಹೇ ಸೋಮ ತ್ವಂ ಮನೀಷಾ ಮನೀಷಯಾಸ್ಮದೀಯಯಾ ಬುದ್ಧ್ಯಾ ಪ್ರ ಚಿಕಿತಃ । ಪ್ರಕರ್ಷೇಣ ಜ್ಞಾತೋಽಸಿ । ವಯಂ ತ್ವಾಂ ಸ್ತುತಿಭಿರಜ್ಞಾಸಿಷ್ಮೇತ್ಯರ್ಥಃ । ಅತಸ್ತ್ವಂ ರಜಿಷ್ಠಮೃಜುತಮಮಕುಟಿಲಂ ಪಂಥಾಂ ಪಂಥಾನಂ ಕರ್ಮಫಲಾವಾಪ್ತಿಹೇತುಭೂತಂ ಮಾರ್ಗಮನು ನೇಷಿ । ಅಸ್ಮಾನನುಕ್ರಮೇಣ ಪ್ರಾಪಯಸಿ । ಕಿಂಚ ಹೇ ಇಂದೋ ಉಂದನಶೀಲ ಸರ್ವಂ ಜಗದಮೃತೇನ ಕ್ಲೇದಯಿತಃ ಸೋಮ ತವ ಪ್ರಣೀತೀ ಪ್ರಣೀತ್ಯಾ ತ್ವತ್ಕರ್ತೃಕೇಣ ಪ್ರಕೃಷ್ಟನಯನೇನ ಧೀರಾ ಧೀಮಂತಃ ಕರ್ಮವಂತಃ ಪ್ರಜ್ಞಾವಂತೋ ವಾ ನೋಽಸ್ಮಾಕಂ ಪಿತರೋ ದೇವೇಷ್ವಿಂದ್ರಾದಿಷು ರತ್ನಂ ರಮಣೀಯಂ ಧನಮಭಜಂತ । ಅಸೇವಂತ । ಪ್ರಾಪ್ನುವನ್ । ಅತೋಽಸ್ಮಾನಪಿ ತಾದೃಶಂ ಧನಂ ಪ್ರಾಪಯೇತ್ಯರ್ಥಃ ॥ ಪ್ರ ಚಿಕಿತಃ । ಕಿತ ಜ್ಞಾನೇ । ಅಸ್ಮಾತ್ಕರ್ಮಣಿ ನಿಷ್ಠಾ । ಛಾಂದಸಂ ದ್ವಿರ್ವಚನಂ । ಯದ್ವಾ । ಯಙ್ಲುಗಂತಾನ್ನಿಷ್ಠಾ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣೋ ಯಙ್ಲುಕೋರಿತ್ಯಭ್ಯಾಸಸ್ಯ ಗುಣಾಭಾವಃ । ಯದ್ವಾ । ಛಂದಸ್ಯುಭಯಥೇತಿ ನಿಷ್ಠಾಯಾಃ ಸಾರ್ವಧಾತುಕಸಂಜ್ಞಾಯಾಂ ಶಪ್ । ಜುಹೋತ್ಯಾದಿತ್ವಾತ್ತಸ್ಯ ಶ್ಲುಃ । ಶ್ಲಾವಿತಿ ದ್ವಿರ್ವಚನಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಮನೀಷಾ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ । ರಜಿಷ್ಠಂ । ಋಜುಶಬ್ದಾದಿಷ್ಠನಿ ವಿಭಾಷರ್ಜೋಶ್ಛಂದಸಿ । ಪಾ. ೬-೪-೧೬೨ । ಇತಿ ರತ್ವಂ । ಟೇರಿತಿ ಟಿಲೋಪಃ । ನೇಷಿ । ನಯತೇರ್ಲಟಿ ಬಹುಲಂ ಛಂದಸೀತಿ ಶಪೋ ಲುಕ್ । ಪಂಥಾಂ । ಪಥಿಮಥ್ಯೃಭುಕ್ಷಾಮಾತ್ । ಪಾ. ೭-೧-೮೫ । ಇತ್ಯಸಾವಪಿ ವ್ಯತ್ಯಯೇನಾತ್ವಂ । ಪಥಿಮಥೋಃ ಸರ್ವನಾಮಸ್ಥಾನ ಇತ್ಯಾದ್ಯುದಾತ್ತತ್ವಂ । ಪ್ರಣೀತೀ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘತ್ವಂ ॥**

### ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ । **ತ್ವಂ**—ನೀನು । **ಮನೀಷಾ**—ನಮ್ಮ ಬುದ್ಧಿಯಿಂದ । **ಪ್ರಚಿಕಿತಃ** ಚೆನ್ನಾಗಿ ತಿಳಿಯಲ್ಪಟ್ಟಿದ್ದೀಯೇ (ಆದ್ದರಿಂದ) । **ತ್ವಂ**—ನೀನು । **ರಜಿಷ್ಠಮ್**—ಅತ್ಯಂತ ನೇರವಾದ (ಪ್ರಾಮಾಣಿಕವಾದ) । **ಪಂಥಾಂ**—(ಕರ್ಮಫಲವನ್ನು ಹೊಂದಲು ಸಾಧನವಾದ) ಮಾರ್ಗದಿಂದ । **ಅನುನೇಷಿ**-(ನಮ್ಮನ್ನು ಕರೆದುಕೊಂಡು ಹೋಗಿ) ಸೇರಿಸುತ್ತೀಯೆ । **ಇಂದೋ**— (ಸಕಲಜಗತ್ತನ್ನೂ ಅಮೃತದಿಂದ) ತೋಯಿಸುವಂತೆ ಮಾಡುವ ಸೋಮದೇವನೇ । **ತವ**—ನಿನ್ನ । **ಪ್ರಣೀತೀ**—ಶ್ರೇಷ್ಠವಾದ ಮಾರ್ಗದರ್ಶನದಿಂದ । **ಧೀರಾಃ**—ಪ್ರಜ್ಞಾವಂತರಾದ ಅಥವಾ ಕರ್ಮಯುಕ್ತರಾದ । **ನಃ**—ನಮ್ಮ । **ಪಿತರಃ**—ಪಿತೃಗಳು । **ದೇವೇಷು**-ಇಂದ್ರಾದಿದೇವತೆಗಳ ನಡುವೆ । **ರತ್ನಂ**—ರಮಣೀಯವಾದ ಧನವನ್ನು । **ಅಭಜಂತ**—ಹೊಂದಿದರು. ।

### ಭಾವಾರ್ಥ

ಎಲೈ ಸೋಮದೇವನೇ ನಾವು ನಮ್ಮ ಬುದ್ಧಿಯಿಂದ ನಿನ್ನ ಸ್ವರೂಪವನ್ನು ಚೆನ್ನಾಗಿ ಅರಿತಿದ್ದೇವೆ. ನೀನು ನಮ್ಮನ್ನು ಕರ್ಮಫಲವನ್ನು ಹೊಂದಿಸುವ ಅತ್ಯಂತ ಪ್ರಾಮಾಣಿಕವಾದ ಮಾರ್ಗದಲ್ಲಿ ಕರೆದುಕೊಂಡುಹೋಗುತ್ತೀಯೆ. ಸಕಲಜಗತ್ತನ್ನೂ ಅಮೃತದಿಂದ ತೋಯಿಸುವ ಸೋಮದೇವನೇ, ನೀನು ಶ್ರೇಷ್ಠವಾದ ಮಾರ್ಗದರ್ಶಕ

ನಾದುದರಿಂದಲೇ, ನಿನ್ನ ಮಾರ್ಗವನ್ನು ಅನುಸರಿಸಿದ ನಮ್ಮ ಪಿತೃಗಳು ಇಂದ್ರಾದಿದೇವತೆಗಳ ನಡುವೆ ರಮಣೀಯವಾದ ಧನವನ್ನು ಹೊಂದಿದರು. ಹಾಗೆಯೇ ನಮಗೂ ಧನವನ್ನು ಅನುಗ್ರಹಿಸು.

English Translation

Soma, you are thoroughly apprehended by our understanding; you lead us along a straight path ; O Soma, by your guidance our righteous fathers obtained wealth amongst the gods.

ವಿಶೇಷವಿಷಯಗಳು

ತ್ವಂ ಸೋಮ ಎಂಬ ಋಕ್ಕಿನಿಂದ ಪ್ರಾರಂಭವಾಗುವ ಈ ಸೂಕ್ತವು ಸೋಮದೇವತಾಕವು. ಒಂಭತ್ತನೆಯ ಮಂಡಲದಲ್ಲಿ ಸೋಮದೇವತಾಕವಾದ ಮಂತ್ರಗಳೆಲ್ಲವೂ ಸೇರಿರುವುದರಿಂದ ಈ ಸೂಕ್ತವೂ ನ್ಯಾಯವಾಗಿ ಆ ಮಂಡಲದಲ್ಲಿಯೇ ಸೇರಬೇಕು. ಆದರೆ ಹಾಗಿಲ್ಲ. ಅನುಕ್ರಮಣಿಕೆಯಲ್ಲಿಯೂ ಸಹ-**ತ್ವಂ ಸೋಮ ತ್ರ್ಯಧಿಕಾ ಸೌಮ್ಯಂ ಪಂಚನ್ಯಾದಿ ಗಾಯತ್ರ್ಯೋ ದ್ವಾದಶೋಷ್ಣಿಕ್ ಚೇತಿ** ಎಂದು ಹೇಳಿರುವುದು. ಮತ್ತು ಒಂಭತ್ತನೆಯ ಮಂಡಲದ ದೇವತೆಯು ಪವಮಾನಃ ಸೋಮಃ ಎಂದಿರುವುದು. ಸೋಮದೇವತೆಯು ಒಂದೇ ಆದರೂ ಪವಮಾನಃ ಎಂಬ ವಿಶೇಷಣಸಹಿತವಾದ ಸೋಮದೇವತೆಯನ್ನು ಪ್ರತ್ಯೇಕದೇವತೆಯೆಂದು ಭಾವಿಸಿ ಸ್ತೋತ್ರಮಾಡಲಾಗಿರುವುದು. ಆದುದರಿಂದ ಸೋಮದೇವತಾಕವಾದ ಈ ಸೂಕ್ತವು ಪವಮಾನಃ ಸೋಮಃ ಎಂಬ ದೇವತೆಗಳ ಪರವಾದ ಸೂಕ್ತಗಳ ಗುಂಪಿನಲ್ಲಿ ಸೇರಿಸಲ್ಪಟ್ಟಿಲ್ಲ. ಋಗ್ವೇದದಲ್ಲಿ ಈ ವಿಧವಾದ ಕ್ರಮವು ವಿಶೇಷವಾಗಿರುವುದು. ಉದಾಹರಣೆಗಾಗಿ ಸವಿತೃ, ಆದಿತ್ಯ, ಸೂರ್ಯ ಎಂಬ ಶಬ್ದಗಳು ಸಾಧಾರಣವಾಗಿ ಒಂದೇ ದೇವತೆಯನ್ನು ಸೂಚಿಸುವುದಾದರೂ ಸವಿತೃ, ಆದಿತ್ಯ, ಸೂರ್ಯ ಪರವಾಗಿ ಪ್ರತ್ಯೇಕ ಸೂಕ್ತಗಳಿವೆ. ಇದರಂತೆ ಅಗ್ನಿ, ಅಗ್ನಿಃ ಪಾವಕಃ ದ್ರವಿಣೋದಾಃ ಮೊದಲಾದ ದೇವತೆಗಳನ್ನು ಪ್ರತ್ಯೇಕವಾಗಿ ಸ್ತುತಿಸಲಾಗಿದೆ. ಅದರಂತೆ ಈ ಸೂಕ್ತವನ್ನು ಒಂಭತ್ತನೆಯ ಮಂಡಲದಲ್ಲಿ ಸೇರಿಸದೆ ಪ್ರಥಮಮಂಡಲದಲ್ಲಿ ಅಗ್ನಿ, ಇಂದ್ರ ಮೊದಲಾದ ಇತರ ದೇವತಾಕವಾದ ಸೂಕ್ತಗಳ ಜತೆಯಲ್ಲಿಯೇ ಸೇರಿಸಲ್ಪಟ್ಟಿರುವುದೆಂದು ತಿಳಿಯಬೇಕು

**ಪ್ರ ಚಿಕಿತಃ—ಕಿತ ಜ್ಞಾನೇ । ಪ್ರಕರ್ಷೇಣ ಜ್ಞಾತೋಽಸಿ । ವಯಂ ತ್ವಾಂ ಸ್ತುತಿಭಿರಜ್ಞಾಸಿಷ್ಮೇತ್ಯರ್ಥಃ ।** (ನಮ್ಮ ಬುದ್ಧಿಯಿಂದ) ನೀನು ತಿಳಿಯಲ್ಪಡುವೆ ಎಂದರೆ ನಮ್ಮ ಬುದ್ಧಿಶಕ್ತಿಯಿಂದ ನಿನ್ನನ್ನು ಸ್ತೋತ್ರ ಮಾಡುತ್ತೇವೆ. ಅದರಿಂದ ನಾವು ನಿನ್ನನ್ನು ತಿಳಿಯುತ್ತೇವೆ ಎಂದರ್ಥವು. ಸ್ಕಂದಸ್ವಾಮಿಯು ಈ ಶಬ್ದಕ್ಕೆ **ಪ್ರಕರ್ಷೇಣ ಜಾನಾಸಿ ಯಾವತ್ ಜ್ಞಾತವ್ಯಂ**—ತಿಳಿಯಬೇಕಾದ ಸಕಲವನ್ನೂ ನೀನು ತಿಳಿದಿರುವೆ ಎಂದರ್ಥ ವಿವರಣೆಮಾಡಿರುವರು.

**ಮನೀಷಾ**—ನಮ್ಮ ಬುದ್ಧಿಶಕ್ತಿಯಿಂದ, ನಾವು ಮಾಡುವ ಸ್ತುತಿಗಳಿಂದ.

**ರಜಿಷ್ಠಂ—ಋಜುತಮಮಕುಟಿಲಂ ।** ನೇರವಾದ, ವಕ್ರವಲ್ಲದ, ಸರಿಯಾದ, ಸತ್ಯವಾದ ಇತ್ಯಾದ್ಯರ್ಥಗಳನ್ನು ಹೇಳಬಹುದು.

**ಅನು ನೇಷಿ ಪಂಥಾಂ**—ಋಜುಮಾರ್ಗದಲ್ಲಿ ನಮ್ಮನ್ನು ಒಯ್ಯುತ್ತೀಯೆ ಎಂದರೆ ಯಜ್ಞಾದಿಸತ್ಕರ್ಮಾನುಷ್ಠಾನದಲ್ಲಿ ನಾವು ಪ್ರವರ್ತಿಸುವಂತೆ ಮಾರ್ಗದರ್ಶಕನಾಗಿರುತ್ತೀಯೆ.

**ಪ್ರಣೀತೀ**—ನಿನ್ನ ಮಾರ್ಗದರ್ಶನದಿಂದ, ನೀನು ನಮಗೆ ಹೇಳುವ ಬುದ್ಧಿವಾದ ಅಥವಾ ಉಪದೇಶದಿಂದ.

**ಪಿತರಃ**—ನಮ್ಮ ಹಿರಿಯರು, ನಮ್ಮ ಪೂರ್ವೀಕರು, ನಮ್ಮ ಪಿತೃಗಳು.

**ಇಂದೋ—ಉಂದನಶೀಲ, ಸರ್ವಂ ಜಗದಮೃತೇನ ಕ್ಲೇದಯಿತಃ ।** ಸಮಸ್ತ ಜಗತ್ತನ್ನು ಎಂದರೆ ಸಮಸ್ತಜನರನ್ನು ಅಮೃತಸ್ವರೂಪವಾದ ನಿನ್ನ ರಸಾಸ್ವಾದನೆಯಿಂದ ತೃಪ್ತಿಗೊಳಿಸುವ

**ಧೀರಾಃ—ಧೀಮಂತಃ ಪ್ರಜ್ಞಾವಂತೋ ವಾ ।** ಧೀರರು ಎಂದರೆ ಬುದ್ಧಿವಂತರಾದ, ವಿವೇಕಿಗಳಾದ, ತಿಳುವಳಿಕೆಯುಳ್ಳ.

**ದೇವೇಷು ರತ್ನಂ**—ದೇವತೆಗಳಲ್ಲಿರುವ ಪ್ರಸಿದ್ಧವಾದ ರತ್ನಾದಿ ಧನ ಅಥವಾ ಐಶ್ವರ್ಯವನ್ನು.

ವ್ಯಾಕರಣಪ್ರಕ್ರಿಯಾ

**ಪ್ರಚಿಕಿತಃ**—ಕಿತ ಜ್ಞಾನೇ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತಪ್ರತ್ಯಯ. ಛಾಂದಸವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಚುತ್ವ. ಅಥವಾ ಅತಿಶಯಾರ್ಥದಲ್ಲಿ ಯಙ್. **ಯಙೋಽಚಿಚ**—ಎಂಬುದರಿಂದ ಅದಕ್ಕೆ ಲುಕ್. ಆಗ **ಸನ್ಯಙೋಃ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಸಂಜ್ಞಾಪೂರ್ವಕೋ-ವಿಧಿರನಿತ್ಯಃ**—ಎಂಬ ಪರಿಭಾಷೆಯಿಂದ **ಗುಣೋಯಙ್ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ ಬರುವುದಿಲ್ಲ. ಅಥವಾ **ಛಂದಸ್ಯುಭಯಥಾ**—ಎಂಬುದರಿಂದ ಕ್ತಪ್ರತ್ಯಯಕ್ಕೆ ಸಾರ್ವಧಾತುಕ ಸಂಜ್ಞೆಯೂ ಇರುವುದರಿಂದ **ಕರ್ತರಿಶಪ್**—ಎಂಬುದರಿಂದ ಶಪ್‌ವಿಕರಣ. ಜುಹೋತ್ಯಾದಿಯಲ್ಲಿ ಈ ಧಾತುವು ಸೇರಿರುವುದರಿಂದ ಶಪಿಗೆ ಶ್ಲುವಿಕರಣ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. ಪ್ರತ್ಯಯಸ್ವರದಿಂದ ಚಿಕಿತಃ ಎಂಬುದು ಅಂತೋದಾತ್ತ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ.

**ಮನೀಷಾ** — ಇದು ಆಕಾರಾಂತ ಸ್ತ್ರೀಲಿಂಗಶಬ್ದ. ಇದಕ್ಕೆ ತೃತೀಯಾಏಕವಚನಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಅದಕ್ಕೆ ಡಾದೇಶ.

**ರಜಿಷ್ಠಮ್—ಅತಿಶಾಯನೇ ತಮಬಿಷ್ಠನೌ**—ಎಂಬುದರಿಂದ ಅತಿಶಯಾರ್ಥ ತೋರುವಾಗ ಋಜು ಶಬ್ದದ ಮೇಲೆ ಇಷ್ಠನ್‌ಪ್ರತ್ಯಯ. **ಟೇಃ**—ಸೂತ್ರದಿಂದ ಇಷ್ಠನ್ ಪರವಾದಾಗ ಟಿ (ಉ) ಲೋಪ. **ವಿಭಾಷ-ರ್ಜೋಶ್ಛಂದಸಿ**-(ಪಾ. ಸೂ. ೬-೪-೧೬೨) ಎಂಬುದರಿಂದ ರತ್ವ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನೇಷಿ**—ಣೀಞ್ ಪ್ರಾಪಣೇ ಧಾತು. **ಣೋನಃ**—ಎಂಬುದರಿಂದ ಣಕಾರಕ್ಕೆ ನಕಾರಾದೇಶ. ಲಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್‌ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಶಪ್‌ವಿಕರಣಕ್ಕೆ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಧಾತುವಿನ ಇಕಾರಕ್ಕೆ ಗುಣ. ಪ್ರತ್ಯಯಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಂಥಾಮ್**—ಪಥಿನ್ ಶಬ್ದ. ಇದಕ್ಕೆ ಅಮ್ ಪರವಾದಾಗ ವ್ಯತ್ಯಯದಿಂದ **ಪಥಿಮಥಿ ಋಭುಕ್ಷಾಮಾತ್** (ಪಾ. ಸೂ. ೭-೧-೮೫) ಎಂಬುದರಿಂದ ಸು ಪರದಲ್ಲಿ ಇಲ್ಲವಾದರೂ ಆತ್ವ ಬರುತ್ತದೆ. **ಥೋಂಥಃ**—ಸೂತ್ರದಿಂದ ಥಕಾರಕ್ಕೆ ಅಂಥಾದೇಶ. **ಪಥಿಮಥೋಃ ಸರ್ವನಾಮಸ್ಥಾನೇ** (ಪಾ. ಸೂ. ೬-೧-೧೯೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಣೀತೀ**—ಣೀಞ್ ಪ್ರಾಪಣೇ ಧಾತು. **ಸ್ತ್ರಿಯಾಂ ಕ್ತಿನ್**—ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ನಿತ್ತಾದ ತಕಾರಾದಿಯಾದ ಪ್ರತ್ಯಯಾಂತವು ಪರವಾದುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ. ಪ್ರಣೀತಿಶಬ್ದಕ್ಕೆ ತೃತೀಯಾಏಕವಚನ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—ಎಂಬುದರಿಂದ ಪೂರ್ವಸವರ್ಣದೀರ್ಘವು ಏಕಾದೇಶವಾಗಿ ಬರುತ್ತದೆ.

**ಅಭಜಂತ**—ಭಜ ಸೇವಾಯಾಂ ಧಾತು. ಲಙ್ ಪ್ರಥಮ ಪುರುಷ ಬಹುವಚನರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ತ್ವಂ ಸೋಮ ಕ್ರತುಭಿಃ ಸುಕ್ರತುರ್ಭೂಸ್ತ್ವಂ ದಕ್ಷೈಃ ಸುದಕ್ಷೋ ವಿಶ್ವವೇದಾಃ ।
ತ್ವಂ ವೃಷಾ ವೃಷತ್ವೇಭಿರ್ಮಹಿತ್ವಾ ದ್ಯುಮ್ನೇಭಿರ್ದ್ಯುಮ್ನ್ಯಭವೋ ನೃಚಕ್ಷಾಃ ॥ ೨ ॥

॥ ಪದಪಾಠಃ ॥

ತ್ವಂ । ಸೋಮ । ಕ್ರತುಽಭಿಃ । ಸುಽಕ್ರತುಃ । ಭೂಃ । ತ್ವಂ । ದಕ್ಷೈಃ । ಸುಽದಕ್ಷಃ । ವಿಶ್ವಽವೇದಾಃ ।
ತ್ವಂ । ವೃಷಾ । ವೃಷಽತ್ವೇಭಿಃ । ಮಹಿಽತ್ವಾ । ದ್ಯುಮ್ನೇಭಿಃ । ದ್ಯುಮ್ನೀ । ಅಭವಃ । ನೃಽಚಕ್ಷಾಃ ॥ ೨ ॥

ಸಾಯಣಭಾಷ್ಯಂ

ಅಗ್ನಿಷ್ಟೋಮೇ ಮರುತ್ವತೀಯೇ ತ್ವಂ ಸೋಮ ಕ್ರತುಭಿರಿತ್ಯೇಷಾ ಧಾಯ್ಯಾ । ಸೂತ್ರಿತಂ ಚ । ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾಃ । ಆ. ೫-೧೪ । ಇತಿ ॥

ಹೇ ಸೋಮ ತ್ವಂ ಕ್ರತುಭಿಸ್ತ್ವತ್ಸಂಬಂಧಿಭಿರಗ್ನಿಷ್ಟೋಮಾದಿಕರ್ಮಭಿರಾತ್ಮೀಯೈರ್ಜ್ಞಾನೈರ್ವಾ ಸುಕ್ರತುಃ ಶೋಭನಕರ್ಮಾ ಶೋಭನಪ್ರಜ್ಞೋ ವಾ ಭೂಃ । ಭವಸಿ । ತಥಾ ವಿಶ್ವವೇದಾಃ ಸರ್ವಧನಸ್ತ್ವಂ ದಕ್ಷೈರಾತ್ಮೀಯೈರ್ಬಲೈಃ ಸುದಕ್ಷಃ ಶೋಭನಬಲೋ ಭವಸಿ । ತಥಾ ತ್ವಂ ವೃಷತ್ವೇಭಿರ್ವೃಷತ್ವೈಃ ಕಾಮಾಭಿವರ್ಷಣೈರ್ಮಹಿತ್ವಾ ಮಹತ್ತ್ವೇನ ಮಾಹಾತ್ಮ್ಯೇನ ಚ ವೃಷಾ ಕಾಮಾನಾಂ ವರ್ಷಿತಾ ಮಹಾಂಶ್ಚ ಭವಸಿ । ತಥಾ ತ್ವಂ ನೃಚಕ್ಷಾ ನೃಣಾಂ ಯಜ್ಞಸ್ಯ ನೇತೄಣಾಂ ಯಜಮಾನಾನಾಮಭಿಮತಫಲಸ್ಯ ದರ್ಶಯಿತಾ ಸನ್ ದ್ಯುಮ್ನೇಭಿರ್ದ್ಯುಮ್ನೈಸ್ತ್ವೈರ್ದತ್ತೈರ್ಹವಿರ್ಲಕ್ಷಣೈರನ್ನೈರ್ದ್ಯುಮ್ನ್ಯಭವಃ । ಪ್ರಭೂತಾನ್ನೋ ಭವಸಿ ॥ ಸುಕ್ರತುಃ । ಬಹುವ್ರೀಹೌ ಕ್ರತ್ವಾದಯಶ್ಚೇತ್ಯುತ್ತರಪದಾದ್ಯುದಾತ್ತತ್ವಂ । ಸುದಕ್ಷಃ । ದಕ್ಷ ವೃದ್ಧೌ । ದಕ್ಷ್ಯತೇಽನೇನೇತಿ ದಕ್ಷೋ ಬಲಂ । ಕರಣೇ ಘಞ್ । ಞಿತ್ತ್ವಾದಾದ್ಯುದಾತ್ತತ್ವಂ । ಸುಶಬ್ದೇನ ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ವಿಶ್ವವೇದಾಃ । ವಿಶ್ವಾನಿ ವೇದಾಂಸಿ ಯಸ್ಯಾಸೌ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ವೃಷತ್ವೇಭಿಃ । ವೃಷ್ಣೋ ಭಾವೋ ವೃಷತ್ವಂ । ಬಹುಲಂ ಛಂದಸೀತಿ ಭಿಸ ಐಸಭಾವಃ । ಮಹಿತ್ವಾ ಮಹೇರೌಣಾದಿಕ ಇನ್ಪ್ರತ್ಯಯಃ । ಭಾವಪ್ರತ್ಯಯಾಂತಾತ್ಸುಪಾಂ ಸುಲುಗಿತಿ ವಿಭಕ್ತೇರಾಕಾರಃ ॥

ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ । **ತ್ವಂ** —ನೀನು । **ಕ್ರತುಭಿಃ**—( ನಿನ್ನ ) ಅಗ್ನಿಷ್ಟೋಮಾದಿಕರ್ಮಗಳಿಂದ ಅಥವಾ ಜ್ಞಾನಗಳಿಂದ । **ಸುಕ್ರತುಃ**— ಶ್ರೇಷ್ಠವಾದ ಕರ್ಮಗಳನ್ನು ಮಾಡುವವನಾಗಿ ಅಥವಾ ಪ್ರಜ್ಞೆಯುಳ್ಳವನಾಗಿ । **ಭೂಃ**—ಆಗುತ್ತೀಯೆ । **ವಿಶ್ವವೇದಾಃ**—ಸಕಲವನ್ನೂ ತಿಳಿದ (ಸಕಲ ಐಶ್ವರ್ಯವುಳ್ಳ) । **ತ್ವಂ**—ನೀನು । **ದಕ್ಷೈಃ**—(ಸ್ವ) ಶಕ್ತಿಗಳಿಂದ । **ಸುದಕ್ಷಃ**—ಶ್ರೇಷ್ಠವಾದ ಬಲವುಳ್ಳವನಾಗಿ ಆಗುತ್ತೀಯೆ । **ತ್ವಂ**— ನೀನು । **ವೃಷತ್ವೇಭಿಃ**—(ಉದಾರವಾಗಿ) ಇಷ್ಟಾರ್ಥಗಳನ್ನು ಸುರಿಸುವುದರಿಂದ । **ಮಹಿತ್ವಾ**—ಮಹಿಮೆಯಿಂದ । **ವೃಷಾ**—(ಅಭೀಷ್ಟಗಳನ್ನು ಸುರಿಸುತ್ತೀಯೆ । **ನೃಚಕ್ಷಾಃ**—(ಯಜ್ಞಕರ್ತರಾದ) ಮಾನವರಿಗೆ ದರ್ಶಕನಾಗಿ । **ದ್ಯುಮ್ನೇಭಿಃ**—(ಅವರಿಂದ ಅರ್ಪಿತವಾದ) ಹವಿಸ್ಸಿನ ರೂಪದ ಅನ್ನಗಳಿಂದ । **ದ್ಯುಮ್ನೀ**—ಅನ್ನಯುಕ್ತನಾಗಿ (ಪುಷ್ಟನಾಗಿ) **ಅಭವಃ**—ಆಗಿದ್ದೀಯೆ ॥

ಭಾವಾರ್ಥ

ಎಲೈ ಸೋಮದೇವನೇ, ನಿನ್ನ ಅಗ್ನಿಷ್ಟೋಮಾದಿ ಕರ್ಮಗಳಿಂದ ನೀನು ಯಾವಾಗಲೂ ಪವಿತ್ರಗಳಾದ ಕರ್ಮಗಳನ್ನು ಆಚರಿಸುವವನಾಗಿದ್ದೀಯೆ. ಸಕಲವನ್ನೂ ತಿಳಿಯುವ ನೀನು ನಿನ್ನ ಸ್ವಶಕ್ತಿಯಿಂದಲೇ ಶ್ರೇಷ್ಠವಾದ ಬಲವುಳ್ಳವನಾಗಿದ್ದೀಯೆ. ಉದಾರವಾಗಿ ಇಷ್ಟಾರ್ಥಗಳನ್ನು ಸರಿಸುವುದರಿಂದ ಅತಿಶಯವಾದ ಅಭೀಷ್ಟಪ್ರದನಾಗಿದ್ದೀಯೆ. ಯಜ್ಞಕರ್ತರಾದ ಮಾನವರಿಗೆ ಮಾರ್ಗದರ್ಶಕನಾಗಿದ್ದುಕೊಂಡು ಅವರಿಂದ ಅರ್ಪಿತವಾಗುವ ಹವಿಸ್ಸಿನ ರೂಪದ ಅನ್ನದಿಂದ ಪುಷ್ಟನಾಗಿದ್ದೀಯೆ.

## English Translation

Soma, you are the doer of good by pious acts ; you are powerful by your energies and know all things; you are showerer of benefits by your bounties and are great by your greatness ; O guide of men, you have been well nourished by sacrificial offerings.

### ವಿಶೇಷವಿಷಯಗಳು

ಅಗ್ನಿಷ್ಟೋಮಯಾಗದಲ್ಲಿ ಮರುತ್ವತೀಯಶಸ್ತ್ರಮಂತ್ರಪಠನಕಾಲದಲ್ಲಿ **ತ್ವಂ ಸೋಮ ಕ್ರತುಭಿಃ** ಎಂಬ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾಃ** ಎಂಬ ಸೂತ್ರದಿಂದ ಹೇಳಿರುವುದು. (ಆ. ೫-೧೪)

**ಕ್ರತುಭಿಃ**—ಕ್ರತುಶಬ್ದವನ್ನು ಕರ್ಮ, ಪ್ರಜ್ಞೆ, ಸಂಕಲ್ಪ, ಶಕ್ತಿ ಎಂಬ ಅನೇಕ ಅರ್ಥಗಳಲ್ಲಿ ಉಪಯೋಗಿಸಿದ್ದರೂ ಸಹ ಕ್ರತುಭಿಃ ಎಂಬುದಕ್ಕೆ ಮಾತ್ರ **ಕರ್ಮಭಿಃ ಪ್ರಜ್ಞಯಾ ವಾ** ಅಂದರೆ ಕರ್ಮಗಳಿಂದ ಅಥವಾ ಪ್ರಜ್ಞೆಯಿಂದ ಎಂಬರ್ಥವೇ ರೂಢಿಯಲ್ಲಿರುವುದು, ಅದರಂತೆಯೇ ಇಲ್ಲಿಯೂ ಸಹ **ತ್ವತ್ಸಂಬಂಧಿಭಿರಗ್ನಿಷ್ಟೋಮಾದಿಕರ್ಮಭಿಃ ಆತ್ಮೀಯೈರ್ಜ್ಞಾನೈರ್ವಾ** ಎಂದು ವ್ಯಾಖ್ಯಾನವಿರುತ್ತದೆ. ಋ. ಸ. ೧೦-೮೭-೧ ರಲ್ಲಿ ಮಾತ್ರ **ಕರ್ಮಪರೈಃ ಪುರುಷೈಃ** ಎಂಬರ್ಥವನ್ನು ಮಾಡುತ್ತಾರೆ.

**ದಕ್ಷೈಃ ಸುದಕ್ಷಃ**—ಓಜಃ ಪಾಜಃ ಎಂಬ ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ. ೩-೯) ಪಠಿತವಾಗಿರುವುದರಿಂದ ದಕ್ಷಶಬ್ದಕ್ಕೆ ಬಲವೆಂದರ್ಥವು ಆತ್ಮಬಲದಿಂದಲೇ ಶ್ರೇಷ್ಠವಾದ ಬಲವುಳ್ಳವನು ಎಂದರ್ಥವು. ಅಥವಾ ಈ ಶಬ್ದವನ್ನು ವೃದ್ಧಿಪರ್ಯಾಯವಾಗಿಯೂ ಹೇಳಬಹುದು. **ವೃದ್ಧಿಭಿಃ ಸುವೃದ್ಧ ಇತ್ಯರ್ಥಃ** (ಸ್ಕಂ ಭಾ.)

**ವಿಶ್ವವೇದಾಃ**—ವೇದಸ್ ಶಬ್ದಕ್ಕೆ ಧನವೆಂದಾಗಲೀ ಜ್ಞಾನವೆಂದಾಗಲಿ ಅರ್ಥವಾಗುತ್ತದೆ—

**ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ ಸ್ವಸ್ತಿ ನಃ ಪೂಷಾ ವಿಶ್ವವೇದಾಃ**
(ಋ. ಸಂ. ೧-೮೯-೬)

**ರರಕ್ಷ ತಾನ್ ಸುಕೃತೋ ವಿಶ್ವವೇದಾ ದಿಪ್ಸಂತ ಇದ್ರಿಪವೋ ನಾಹ ದೇಭುಃ**
(ಋ. ಸಂ. ೧-೧೪೭-೩)

ಇತ್ಯಾದಿ ಸ್ಥಳಗಳಲ್ಲೆಲ್ಲಾ **ವಿಶ್ವಾನಿ ವೇತ್ತೀತಿ ವಿಶ್ವವೇದಾಃ ; ವಿಶ್ವಾನಿ ಜ್ಞಾನಾನಿ ಧನಾನಿ ವಾ ಯಸ್ಯ ಅಥವಾ ವಿಶ್ವಪ್ರಜ್ಞಃ** ಎಂಬ ವ್ಯಾಖ್ಯಾನದಂತೆ ಇಲ್ಲಿಯೂ ಸಹ ಸಕಲಧನವುಳ್ಳವನು ಅಥವಾ ಸಕಲವಾದ ಜ್ಞಾನವುಳ್ಳವನು ಎಂದಾಗುತ್ತದೆ.

**ವೃಷತ್ವೇಭಿಃ—ಕಾಮಾಭಿವರ್ಷಣೈಃ** । ಇಷ್ಟಾರ್ಥಗಳನ್ನು ಸುರಿಸಿಕೊಡುವುದರಿಂದ.

**ಮಹಿತ್ವಾ—ಮಾಹಾತ್ಮ್ಯೇನ ಚ** ಮಹಿಮೆಯಿಂದಲೂ ಕೂಡ. ಇಲ್ಲಿ ಮಹಿತ್ವಾ ಎಂಬುದನ್ನು ವೃಷತ್ವೇಭಿ ಎಂಬ ಪದಕ್ಕೆ ವಿಶೇಷಣವನ್ನಾಗಿ ಮಾಡಿದರೆ ಮಹತ್ತಾದ ಇಷ್ಟಾರ್ಥಗಳನ್ನು ಸುರಿಸಿಕೊಡುವವನೆಂದರ್ಥವಾಗುವುದು. **ತ್ವಂ ವರ್ಷಿತಾ ಮಹದ್ಭಿರ್ವರ್ಷಣೈಃ** (ಸ್ಕಂ. ಭಾ.)

**ನೃಚಕ್ಷಾಃ—ನೄಣಾಂ ಯಜ್ಞಸ್ಯ ನೇತೄಣಾಂ ಯಜಮಾನಾನಾಂ ಅಭಿಮತಫಲಸ್ಯ ದರ್ಶಯಿತಾ ।** ಯಜ್ಞ ಮಾಡತಕ್ಕ ಯಜಮಾನರಿಗೆ ಇಷ್ಟಾರ್ಥಗಳನ್ನು ತೋರಿಸಿಕೊಡುವನೆಂದರ್ಥವು. ಅಗ್ನಿ, ಸೂರ್ಯ ಮುಂತಾದ ದೇವತೆಗಳ ಪರವಾಗಿಯೂ ಈ ಶಬ್ದ ಪ್ರಯೋಗವಿರುವುದು—

**ತ್ವಂ ನೃಚಕ್ಷಾ ವೃಷಭಾನು ಪೂರ್ವೀಃ ಕೃಷ್ಣಾಸ್ವಗ್ನೇ ಅರುಷೋ ವಿ ಭಾಹಿ**
(ಋ. ಸಂ. ೩-೧೫-೩)

**ಕವಿರ್ನೃಚಕ್ಷಾ ಅಭಿ ಷೀಮಚಷ್ಟ ಋತಸ್ಯ ಯೋನಾ ವಿಘೃತೇ ಮದಂತೀ ।**
(ಋ. ಸಂ. ೩-೫೪-೬)

**ನೃಚಕ್ಷಾ ರಕ್ಷಃ ಪರಿಪಶ್ಯ ವಿಕ್ಷು ತಸ್ಯ ತ್ರೀಣಿ ಪ್ರತಿ ಶೃಣೀಹ್ಯಗ್ರಾ ।**
(ಋ- ಸ. ೧೦-೮೭-೧೦)

ಈ ರೀತಿ ಈ ವಿಶೇಷಣವು ಬರುವ ಸ್ಥಳಗಳಲ್ಲೆಲ್ಲಾ **ನರಾಣಾಂ ದ್ರಷ್ಟಾ** ಎಂದರೆ ಯಜಮಾನರನ್ನು ಅನುಗ್ರಹದಿಂದ ನೋಡುವವನು ಎಂದಾಗುತ್ತದೆ. ಆದರೆ ಇಲ್ಲಿ ಮಾತ್ರ **ದರ್ಶಯಿತಾ**—ಫಲವನ್ನು ತೋರಿಸಿಕೊಡುವವನೆಂದರ್ಥವು. ಋ. ಸಂ. ೧೦-೧೩೯-೨. ನೆಯ ಋಕ್ಕಿನಲ್ಲಿ **ನೃಭಿಃ ರಶ್ಮಿಭಿಃ ಪ್ರಕಾಶಮಾನಃ** ಎಂಬುದಾಗಿ ವ್ಯಾಖ್ಯಾನವನ್ನು ಮಾಡಿರುತ್ತಾರೆ.

**ದ್ಯುಮ್ನೇಭಿಃ—ದ್ಯುಮ್ನಂ ದ್ಯೋತತೇರ್ಯಶೋ ವಾ ಧನಂ ವಾನ್ನಂ ವಾ** ಎಂದಿರುವುದರಿಂದ ಇಲ್ಲಿ ಯಶಸ್ಸುಗಳಿಂದ, ಧನಗಳಿಂದ ಅಥವಾ ಅನ್ನಗಳಿಂದ ಯಶಸ್ವಿಯಾಗಿ, ಧನವಂತನಾಗಿ ಅಥವಾ ಅನ್ನವಂತನಾಗಿ ದ್ವೀಯೆ ಎಂಬ ಯಾವ ಅರ್ಥವನ್ನಾದರೂ ಹೇಳಬಹುದು.

ವ್ಯಾಕರಣಪ್ರಕ್ರಿಯಾ

**ಸುಕ್ರತುಃ**—ಶೋಭನಃ ಕ್ರತುಃ ಯಸ್ಯ ಸಃ ಸುಕ್ರತುಃ. ಬಹುವ್ರೀಹಿ ಸಮಾಸ. **ಕೃತ್ವಾದಯಶ್ಚ** (ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಭೂಃ**—ಭೂ ಸತ್ತಾಯಾಂ ಧಾತು. ವರ್ತಮಾನಾರ್ಥದಲ್ಲಿ ಛಾಂದಸವಾಗಿ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ**—ಎಂಬುದರಿಂದ ಇಕಾರಕ್ಕೆ ಲೋಪ. **ಚ್ಲೇಃ ಸಿಚ್**—ಸೂತ್ರದಿಂದ ಸಿಚಾದೇಶ. **ಗಾತಿಸ್ಥಾಘುಪಾ**-ಎಂಬುದರಿಂದ ಸಿಚಿಗೆ ಲುಕ್. **ಬಹುಲಂ ಛಂದಸ್ಯಮಾಙ್ಯೋಗೇಽಪಿ**-ಎಂಬುದರಿಂದ ಅಡಾಗಮ ಬರುವುದಿಲ್ಲ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುದಕ್ಷಃ**- ದಕ್ಷ ವೃದ್ಧೌ ಧಾತು. ದಕ್ಷ್ಯತೇಽನೇನೇತಿ ದಕ್ಷಃ ಬಲಮ್. ಕರಣಾರ್ಥದಲ್ಲಿ ಘಞ್. ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**- ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಶೋಭನಃ ದಕ್ಷಃ ಯಸ್ಯಸಃ ಸುದಕ್ಷಃ ಬಹುವ್ರೀಹಿ ಸಮಾಸವಾದಾಗ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ ೬-೨-೧೧೯) ಎಂಬುದರಿಂದ ದ್ವ್ಯಚ್ಕವಾದ ಉತ್ತರಪದವಿರುವುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ವಿಶ್ವವೇದಾಃ**-ವಿಶ್ವಾನಿ ವೇದಾಂಸಿ ಯಸ್ಯ ಅಸೌ ವಿಶ್ವವೇದಾಃ **ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್** (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ವೃಷಾ**--ವೃಷು ಸೇಚನೇ ಧಾತು. ಔಣಾದಿಕ ಕನಿನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತವಾಗುತ್ತದೆ. ಪ್ರಥಮಾಏಕವಚನಾಂತರೂಪ.

**ವೃಷತ್ವೇಭಿಃ** - ವೃಷ್ಣೋ ಭಾವಃ ವೃಷತ್ವಮ್. ಇದಕ್ಕೆ ತೃತೀಯಾಬಹುವಚನ ಪರವಾದಾಗ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್**-ಎಂಬುದರಿಂದ ಏತ್ವ. ಸಕಾರಕ್ಕೆ ರುತ್ವ ವಿಸರ್ಗ.

**ಮಹಿತ್ವಾ**—ಮಹ ಪೂಜಾಯಾಂ ಧಾತು. ಇದಕ್ಕೆ ಔಣಾದಿಕವಾದ ಇನ್‌ಪ್ರತ್ಯಯ. ಮಹಿ ಎಂದು ರೂಪವಾಗುತ್ತದೆ ಇದಕ್ಕೆ ಭಾವಾರ್ಥದಲ್ಲಿ ತ್ವ ಪ್ರತ್ಯಯ. ತೃತೀಯಾಏಕವಚನ ಟಾ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ದ್ಯುಮ್ನೇಭಿಃ**—ಹಿಂದಿನಂತೆ **ಬಹುಲಂ ಛಂದಸಿ**—ಎಂಬುದರಿಂದ ತೃತೀಯಾದಲ್ಲಿ ಐಸಾದೇಶ ಬರುವುದಿಲ್ಲ.

**ನೃಚಕ್ಷಾಃ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಔಣಾದಿಕ ಅಸುನ್ ಪ್ರತ್ಯಯ. ಚಕ್ಷಸ್ ಶಬ್ದವಾಗುತ್ತದೆ. ನಿತ್ತ್ವಾದುದರಿಂದ ಆದ್ಯುದಾತ್ತವಾಗುತ್ತದೆ. ನೃಣಾಂ ಚಕ್ಷಾಃ ನೃಚಕ್ಷಾಃ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೨ ॥



ಸಂಹಿತಾಪಾಠಃ

ರಾಜ್ಞೋ ನು ತೇ ವರುಣಸ್ಯ ವ್ರತಾನಿ ಬೃಹದ್ಗಭೀರಂ ತವ
ಸೋಮ ಧಾಮ ।
ಶುಚಿಷ್ಟ್ವಮಸಿ ಪ್ರಿಯೋ ನ ಮಿತ್ರೋ ದಕ್ಷಾಯ್ಯೋ ಅರ್ಯ-
ಮೇವಾಸಿ ಸೋಮ ॥ ೩ ॥

॥ ಪದಪಾಠಃ ॥

ರಾಜ್ಞಃ । ನು । ತೇ । ವರುಣಸ್ಯ । ವ್ರತಾನಿ । ಬೃಹತ್ । ಗಭೀರಂ । ತವ । ಸೋಮ । ಧಾಮ ।

ಶುಚಿಃ । ತ್ವಂ । ಅಸಿ । ಪ್ರಿಯಃ । ನ । ಮಿತ್ರಃ । ದಕ್ಷಾಯ್ಯಃ । ಅರ್ಯಮಾಽ-ಇವ । ಅಸಿ । ಸೋಮ ॥ ೩ ॥

ಸಾಯಣಭಾಷ್ಯಂ

ಹೇ ಸೋಮ ರಾಜ್ಞೋ ಬ್ರಾಹ್ಮಣಾನಾಂ ಸ್ವಾಮಿನಃ । ಸೋಮೋಽಸ್ಮಾಕಂ ಬ್ರಾಹ್ಮಣಾನಾಂ ರಾಜಾ । ತೈ. ಬ್ರಾ. ೧-೭-೪-೨ । ಇತಿ ಶ್ರುತೇಃ । ವರುಣಸ್ಯಯಾಗಾರ್ಥಮಾಹೃತಃ ಕ್ರೀತೋ ವಸ್ತ್ರೇಣಾವೃತಃ ಸೋಮೋ ವರುಣಃ । ವರುಣೋಽಸಿ ಧೃತವ್ರತ ಇತಿ ಮಂತ್ರಲಿಂಗಾತ್ । ಕ್ರೀತಸ್ಯ ತೇ ನು ತವ ಸಂಬಂಧೀನಿ ಹಿ ವ್ರತಾನಿ ಸರ್ವಾಣ್ಯಗ್ನಿಷ್ಟೋಮಾದೀನಿ ಕರ್ಮಾಣಿ । ಅತಃ ಸರ್ವೇಷು ಯಾಗೇಷು ತ್ವಮೇವ ಕರಣಭೂತೋ ಭವಸೀತ್ಯರ್ಥಃ । ಅತಸ್ತವ ಧಾಮ ತ್ವದೀಯಂ ತೇಜೋ ಬೃಹನ್ಮಹದ್ವಿಸ್ತೀರ್ಣಂ ಗಭೀರಂ ಗಾಂಭೀರ್ಯೋಪೇತಂ ಚ । ಯದ್ವಾ । ನು ಇತ್ಯೇತದುಪಮಾರ್ಥೇ । ತದುಕ್ತಂ ಯಾಸ್ಕೇನ । ಅಥಾಪ್ಯುಪಮಾರ್ಥೇ ಭವತಿ ವೃಕ್ಷಸ್ಯ ನು ತೇ ಪುರುಹೂತ ವಯಾಃ । ನಿ. ೧-೪ । ಇತಿ । ರಾಜ್ಞೋ ರಾಜಮಾನಸ್ಯ ವರುಣಸ್ಯ ನು ವರುಣಸ್ಯೇವ ಹೇ ಸೋಮ ತೇ ತವ ವ್ರತಾನಿ ಕರ್ಮಾಣಿ ಲೋಕಹಿತಕಾರೀಣಿ । ಶಿಷ್ಟಂ ಸಮಾನಂ । ಹೇ ಸೋಮ ತ್ವಂ ಶುಚಿಃ ಸರ್ವೇಷಾಂ ಶೋಧಕೋಽಸಿ । ತತ್ರ ದೃಷ್ಟಾಂತಃ । ಪ್ರಿಯೋ ನ ಮಿತ್ರಃ । ಯಥಾ ಸರ್ವೇಷಾಮನುಕೂಲೋಽಹರಭಿಮಾನೀ ಮಿತ್ರೋ ದೇವಃ ಶೋಧಯಿತಾ ಭವತಿ ತದ್ವತ್ । ತಥಾ ತ್ವಮರ್ಯಮೇವಾಸ್ಮಾಭಿರ್ದೃಶ್ಯಮಾನಃ ಸೂರ್ಯ ಇವ ದಕ್ಷಾಯ್ಯೋಽಸಿ । ಸರ್ವೇಷಾಂ ವರ್ಧಕೋ ಭವಸಿ । ಯಥಾಹನಿ ಸೂರ್ಯಃ ಪ್ರಕಾಶೇನ ಸರ್ವಂ ವರ್ಧಯತಿ ಏವಂ ನಿಶ್ಯಮೃತಮಯೈಃ ಸೋಮಕಿರಣೈರಾಪ್ಯಾಯಮಾನಂ ಸತ್ಸ್ಥಾವರಜಂಗಮಾತ್ಮಕಂ ಸರ್ವಂ ಜಗದ್ವರ್ಧತೇ ॥ ಶುಚಿಷ್ಟ್ವಂ । ಯುಷ್ಮತ್ತತ್ತತಕ್ಷುಃಷ್ವಂತಃಪಾದಮಿತಿ ವಿಸರ್ಜನೀಯಸ್ಯ ಷತ್ವಂ । ದಕ್ಷಾಯ್ಯಃ । ದಕ್ಷ ವೃದ್ಧೌ । ಶ್ರುದಕ್ಷಿಸ್ಪೃಹಿಗೃಹಿಭ್ಯ ಆಯ್ಯಃ । ಉ. ೩-೯೬ । ಇತ್ಯಾಯ್ಯಪ್ರತ್ಯಯಃ ॥

ಪ್ರತಿಪದಾರ್ಥ

**ಸೋಮ**— ಎಲೈ ಸೋಮದೇವನೇ । **ತೇ ನು ವ್ರತಾನಿ**— ನಿನಗೆ ಸಂಬಂಧಿಸಿದ ಸಕಲ ಕರ್ಮಗಳೂ ಸಹ । **ರಾಜ್ಞಃ**— ಪ್ರಭುವಾದ ಅಥವಾ ಪ್ರಕಾಶಮಾನನಾದ । **ವರುಣಸ್ಯ**— ವರುಣನ ಕರ್ಮಗಳಂತೆ (ಲೋಕಹಿತಕಾರಿಯಾದವು)

ಅಥವಾ

[**ವ್ರತಾನಿ**—ಸಕಲ ಕರ್ಮಗಳೂ । **ರಾಜ್ಞಃ**—ಒಡೆಯನಾದ । **ವರುಣಸ್ಯ**—ಯಜ್ಞಾರ್ಥವಾಗಿ ಕೊಂಡ ವಸ್ತ್ರದಿಂದ ಆವೃತನಾದ । **ತೇ ನು**— ನಿನ್ನ ಸಂಬಂಧವಾದುವೇ ಆಗಿವೆ. (ನೀನೇ ಸಕಲಕ್ಕೂ ಕಾರಣಭೂತನು)]

**ತವ**—ನಿನ್ನ । **ಧಾಮ**—ತೇಜಸ್ಸು । **ಬೃಹತ್**—ವಿಸ್ತಾರವಾಗಿಯೂ । **ಗಭೀರಂ**— ಗಾಂಭೀರ್ಯದಿಂದ ಕೂಡಿಯೂ ಇದೆ । **ಸೋಮ**—ಎಲೈ ಸೋಮನೇ । **ತ್ವಂ**— ನೀನು । **ಪ್ರಿಯೋ ನ ಮಿತ್ರಃ**— ಅನುಕೂಲ ಕಾರಿಯಾದ ಮಿತ್ರನಂತೆ । **ಶುಚಿಃ ಅಸಿ**— ಎಲ್ಲವನ್ನೂ ಶುದ್ಧಿಮಾಡುವವನಾಗಿದ್ದೀಯೆ । **ಅರ್ಯಮಾ ಇವ**— ಅರ್ಯಮನಂತೆ । **ದಕ್ಷಾಯ್ಯಃ ಅಸಿ**— ಎಲ್ಲರ ವರ್ಧಕನಾಗಿದ್ದೀಯೆ.

ಭಾವಾರ್ಥ

ಎಲೈ ಸೋಮದೇವನೇ, ನಿನ್ನ ಸಕಲಕರ್ಮಗಳೂ ಸಹ ಪ್ರಭುವಾದ ವರುಣನ ಕರ್ಮಗಳಂತೆ ಲೋಕ ಹಿತಕಾರಿಯಾದವು. ನಿನ್ನ ತೇಜಸ್ಸು ವಿಸ್ತಾರವಾಗಿಯೂ ಗಾಂಭೀರ್ಯದಿಂದ ಕೂಡಿಯೂ ಇದೆ. ಎಲೈ ಸೋಮ ದೇವನೇ, ನೀನು ಸಕಲರಿಗೂ ಅನುಕೂಲಕಾರಿಯಾದ ಮಿತ್ರನಂತೆ ಎಲ್ಲವನ್ನೂ ಶುದ್ಧಿಮಾಡುವವನಾಗಿದ್ದೀಯೆ. ಅರ್ಯಮನಂತೆ ಎಲ್ಲರನ್ನೂ ವೃದ್ಧಿಗೆ ತರುತ್ತೀಯೆ.

English Translation

Your acts are like those of king Varuna ; Soma, your glory is great and profound ; you are the purifier of all like the beloved Mitra ; you are the angmenter of all like Aryaman.

ವಿಶೇಷವಿಷಯಗಳು

**ರಾಜ್ಞೋ ನು ತೇ ವರುಣಸ್ಯ ವ್ರತಾನಿ**—ಈ ಪಾದಕ್ಕೆ ಎರಡು ವಿಧವಾಗಿ ಅರ್ಥವನ್ನು ಹೇಳಬಹುದು

**ಸೋಮೋಽಸ್ಮಾಕಂ ಬ್ರಾಹ್ಮಣಾನಾಂ ರಾಜಾ ।**
(ತೈ. ಸಂ. ೧-೮-೧೦-೨)

ಎಂಬ ಶ್ರುತಿಯ ಆಧಾರದಿಂದ ರಾಜನ್ ಶಬ್ದಕ್ಕೆ ಬ್ರಾಹ್ಮಣರ ದೊರೆಯೆಂದೂ **ಯಾಗಾರ್ಥಮಾಹೃತಃ ಕ್ರೀತೋ ವರುಣಃ ।** ಯಾಗಾರ್ಥವಾಗಿ ಕ್ರೀತವಾದುದೂ ವಸ್ತ್ರದಿಂದ ಶೋಧಿತವಾದುದೂ ಆದ ಸೋಮವು ವರುಣನೆಂದು ಪ್ರಸಿದ್ಧನಾಗಿರುವುದರಿಂದ ಆವೃತವಾದ ಸೋಮನೆಂದು ಹೇಳಿದರೆ ಆಗ **ವ್ರತಾನಿ ನು**—ಅಗ್ನಿಷ್ಟೋಮಾದಿ ಸಕಲ ಕರ್ಮಗಳೂ ಸಹ ಯಜ್ಞಕರ್ತರಾದ ನಮ್ಮೆಲ್ಲರ ರಾಜನೂ ವರುಣನೂ ಆದ ನಿನ್ನ ಕರ್ಮಗಳೇ ಆಗಿವೆ ಎಂದು ಒಂದರ್ಥವು. ಅಥವಾ ಅವ್ಯಯವಾದ **ನು** ವನ್ನು **ನು ಇತ್ಯೇತದುಪಮಾರ್ಥೇ** ಅಂದರೆ ಹೋಲಿಕೆಯನ್ನು ಹೇಳುವ ಅರ್ಥದಲ್ಲಿ ಉಪಯೋಗಿಸಿದರೆ **ರಾಜ್ಞಃ**-ಸಕಲ ಲೋಕಕ್ಕೂ ಪ್ರಭುವಾದ **ವರುಣಸ್ಯ**-ವರುಣನ **ವ್ರತಾನಿ ನು**-ಲೋಕೋಪಕಾರಕಗಳಾದ ಕರ್ಮಗಳಂತೆ **ತೇ**-ನಿನ್ನ ಕರ್ಮಗಳೂ ಸಹ ಲೋಕೋಪಕಾರಕಗಳಾಗಿವೆ ಎಂದಾಗುತ್ತದೆ.

ಹಂತಿ ರಕ್ಷೋ ಬಾಧತೇ ಪರ್ಯರಾತೀರ್ವರಿವಃ ಕೃಣ್ವನ್ ವೃಜನಸ್ಯ ರಾಜಾ ।
(ಋ. ಸಂ. ೯-೯೭-೧೦)

**ಪವಿತ್ರೇಭಿಃ ಪವಮಾನೋ ನೃಚಕ್ಷಾ ರಾಜಾ ದೇವಾನಾಮುತ ಮರ್ತ್ಯಾನಾಂ ।**
(ಋ. ಸಂ. ೯-೯೭-೨೪)

ಇತ್ಯಾದಿ ಸ್ಥಳಗಳಲ್ಲಿ ಸೋಮನಿಗೇ ಸಾಕ್ಷಾತ್ತಾಗಿ ರಾಜಾ ಎಂಬ ವಿಶೇಷಣವಿರುತ್ತದೆ

**ಧಾಮ**—ಧಾಮಶಬ್ದಕ್ಕೆ ತೇಜಸ್ಸು, ವಾಸಸ್ಥಾನ ಮುಂತಾದ ನಾನಾ ಅರ್ಥಗಳಿರುತ್ತವೆ. ಇಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು.

**ಗಭೀರಂ**—ಗಹನಾತೀತವಾದುದು. ಸೋಮದೇವನ ವಾಸಸ್ಥಾನವೂ, ಮಹಿಮೆಯೂ ಸಹ ಯಾರಿಗೂ ಪೂರ್ಣವಾಗಿ ಅರ್ಥವಾಗದೇ ಗಂಭೀರವಾದುದೂ ಗಹನಾತ್ಮಕವಾದುದೂ ಆಗಿದೆ. **ಬೃಹದ್ಗಭೀರಂ ತವ ಸೋಮ-ಧಾಮ** ಎಂಬ ಸ್ತುತಿರೂಪವಾದ ವರ್ಣನೆಯು ಇದೇ ಅನುಪೂರ್ವಿಯಿಂದ ಋ. ಸಂ. ೯-೮೮-೮ ನೇ ಋಕ್ಕಿನಲ್ಲಿಯೂ ಪಠಿತವಾಗಿದೆ.

**ಶುಚಿಃ—ಶೋಚತೇರ್ಜ್ವಲತಿ ಕರ್ಮಣಃ** (ನಿ. ೬-೧) ಪ್ರಕಾಶಿಸು ಎಂಬರ್ಥವನ್ನು ಕೊಡುವ **ಶುಚ್** ಧಾತುವಿನಿಂದ **ಶುಚಿ** ಎಂಬ ನಾಮಪದವಾಗಿದೆ. ಶುಚಿ ಎಂಬುದಕ್ಕೂ ಕಾಂತಿ, ಪ್ರಕಾಶ ಎಂದರ್ಥ. ಪವಿತ್ರ, ಶುದ್ಧಿ ಎಂಬರ್ಥವನ್ನು ಕೊಡುವ ಶುಚಿ ಎಂಬ ಪದವೂ ಸಹ ಈಧಾತುವಿನಿಂದಲೇ ಉತ್ಪನ್ನವಾಗಿದೆ. **ನಿಷಿಕ್ತಮಸ್ಮಾ-ತ್ಪಾಪಕಂ** (ನಿ. ೬-೧) ಪಾಪವು ಇವನಿಂದ ದೂಡಲ್ಪಟ್ಟಿದೆ. ಎಂಬ ನಿರುಕ್ತಿಕಾರರ ವಚನವೂ ಪ್ರಸಿದ್ಧವಾಗಿದೆ. ಈ ಆಧಾರಗಳ ಮೇಲೆ ಇಲ್ಲಿ ಶುಚಿ ಎಂದರೆ ಶುದ್ಧಿಯೆಂದರ್ಥಮಾಡಬೇಕು. ಅಹರಭಿಮಾನಿದೇವನಾದ ಮಿತ್ರನು ಯಾವರೀತಿ ಕೊಳೆಯನ್ನೂ ಪಾಪವನ್ನೂ ನಾಶಮಾಡುವುದರಿಂದ ಲೋಕವನ್ನೆಲ್ಲಾ ಶುದ್ಧಿಮಾಡುತ್ತಾನೆಯೋ ಅದ ರಂತೆ ಸೋಮನೂ ಸಹ ಸಕಲರ ಶೋಧಕನೂ ಆಗಿದ್ದಾನೆ, ಪಾಪನಿವಾರಕನಾಗಿದ್ದಾನೆ.

**ಅವಸ್ಯತಂ ಮುಂಚತಂ ಯನ್ನೋ ಅಸ್ತಿ ತನೂಷು ಬದ್ಧಂ ಕೃತಮೇನೋ ಅಸ್ಮತ್**
(ಋ. ಸಂ. ೬-೭೪-೩)

**ದಕ್ಷಾಯ್ಯಃ—ದಕ್ಷ ವೃದ್ಧೌ ।** ವೃದ್ಧಿಗೆ ಸಾಧನವಾದ ಬಲನಾಮಗಳಲ್ಲಿ ದಕ್ಷಶಬ್ದವನ್ನುಪಯೋಗಿಸಿದ್ದರೂ ಇಲ್ಲಿ ವೃದ್ಧಿಯೆಂದೇ ಅರ್ಥವು. ದಕ್ಷಾಯ್ಯಃ ಅಂದರೆ ಇಂತಹ ವೃದ್ಧಿಕಾರಕನು. ಹಗಲುಕಾಲದಲ್ಲೆಲ್ಲಾ ಅರ್ಯಮನ ರೂಪದಲ್ಲಿರುವ ಆದಿತ್ಯನು ಯಾವರೀತಿ ತನ್ನ ಕಿರಣಗಳಿಂದ ಲೋಕವನ್ನು ವೃದ್ಧಿಯಾಗುವಂತೆ ಮಾಡುತ್ತಾನೆಯೋ ಅದರಂತೆಯೇ ಸೋಮನೂ ಕೂಡ ತನ್ನ ಅಮೃತಮಯವಾದ ಕಿರಣಗಳಿಂದ ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತನ್ನೂ ವೃದ್ಧಿಯಾಗುವಂತೆ ಮಾಡುತ್ತಾನೆ.

**ಸೋಮ ರಾಜನ್ಪ್ರ ಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ**
(ಋ. ಸಂ. ೮-೪೮-೭)

ಇತ್ಯಾದಿ ಸ್ಥಳಗಳಲ್ಲೆಲ್ಲಾ **ಅಸ್ಮಾಕಂ ಆಯೂಂಷಿ ಪ್ರ ವರ್ಧಯ।** ಸೂರ್ಯನು ಜಗದ್ವ್ಯಾಪಕಗಳಾದ ಅಹಸ್ಸುಗಳನ್ನು ವೃದ್ಧಿಪಡಿಸುವಂತೆ ನೀನೂ ನಮ್ಮ ಆಯಸ್ಸುಗಳನ್ನು ವೃದ್ಧಿಪಡಿಸು ಎಂಬ ಪ್ರಾರ್ಥನೆಯಿದೆ.

ವ್ಯಾಕರಣಪ್ರಕ್ರಿಯಾ

ರಾಜ್ಞಃ—ರಾಜೃ ದೀಪ್ತೌ ಧಾತು. ಇದಕ್ಕೆ ಔಣಾದಿಕ ಕನಿನ್ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ.

ಸೋಮ—ಸಂಬುದ್ಧಿ ಏಕವಚನಾಂತರೂಪ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಶುಚಿಷ್ಟ್ವಮ್**—ಶುಚಿಃ+ತ್ವಮ್ ಎಂದಿರುವಾಗ **ಯುಷ್ಮತ್ತತಕ್ಷುಃ ಷ್ವಂತಃ ಪಾದಮ್** (ಪಾ. ಸೂ. ೮-೩-೧೦೩) ಎಂಬುದರಿಂದ ಯುಷ್ಮಚ್ಛಬ್ದ ಪರದಲ್ಲಿರುವುದರಿಂದ ವಿಸರ್ಗಕ್ಕೆ ಷತ್ವ.

**ಅಸಿ**—ಅಸ ಭುವಿ ಧಾತು. ಲಟ್ ಮಧ್ಯಮಪುರುಷ ಏಕವಚನ ಸಿಪ್ ಪರವಾದಾಗ **ತಾಸಸ್ತ್ಯೋರ್ಲೋಪಃ** (ಪಾ. ಸೂ. ೭-೪-೫೦) ಎಂಬುದರಿಂದ ಸಾದಿಪ್ರತ್ಯಯ ಪರವಾದುದರಿಂದ ಧಾತುಸಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ದಕ್ಷಾಯ್ಯಃ**—ದಕ್ಷ ವೃದ್ಧೌ ಧಾತು. ಇದಕ್ಕೆ **ಶ್ರುದಕ್ಷಿ ಸ್ಪೃಹಿಗೃಹಿಭ್ಯ ಆಯ್ಯಃ** (ಉ. ಸೂ. ೩-೩೭೬) ಎಂಬುದರಿಂದ ಆಯ್ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಆಕಾರ ಉದಾತ್ತವಾಗುತ್ತದೆ. ॥ ೩ ॥

ಸಂಹಿತಾಪಾಠಃ

ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ ಯಾ ಪರ್ವತೇಷ್ವೋಷಧೀಷ್ವಪ್ಸು ।
ತೇಭಿರ್ನೋ ವಿಶ್ವೈಃ ಸುಮನಾ ಅಹೇಳನ್ರಾಜನ್ತ್ಸೋಮ ಪ್ರತಿ ಹವ್ಯಾ ಗೃಭಾಯ ॥ ೪ ॥

ಪದಪಾಠಃ

ಯಾ । ತೇ । ಧಾಮಾನಿ । ದಿವಿ । ಯಾ । ಪೃಥಿವ್ಯಾಂ । ಯಾ । ಪರ್ವತೇಷು ।
ಓಷಧೀಷು । ಅಪ್ ಽ ಸು ।
ತೇಭಿಃ । ನಃ । ವಿಶ್ವೈಃ । ಸು ಽ ಮನಾಃ । ಅಹೇಳನ್ । ರಾಜನ್ । ಸೋಮ ।
ಪ್ರತಿ । ಹವ್ಯಾ । ಗೃಭಾಯ ॥ ೪ ॥

॥ ಸಾಯಣಭಾಷ್ಯಂ ॥

ಆಗ್ರಯಣೇಷ್ಟೌ ಸೌಮ್ಯಸ್ಯ ಹವಿಷೋ ಯಾತೇ ಧಾಮಾನೀತಿ ಯಾಜ್ಯಾ । ಆಗ್ರಯಣಂ ವ್ರೀಹಿಶ್ಯಾಮಾಕಯವಾನಾಮಿತಿ ಖಂಡೇ ಸೂತ್ರಿತಂ । ಸೋಮ ಯಾಸ್ತೇ ಮಯೋಭುವೋ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ । ಆ. ೨-೯ । ಇತಿ॥ ಏಷೈವೈಕಾದಶಿನಸ್ಯ ಸೌಮ್ಯಸ್ಯ ಪಶೋರ್ವಪಾಯಾಂ ಯಾಜ್ಯಾ । ಸೂತ್ರಿತಂ ಚ । ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಮಷಾಳ್ಹಂ ಯುತ್ಸು ಪೃತನಾಸು ಪಪ್ರಿಂ ।ಆ. ೩-೭। ಇತಿ ॥ ಪ್ರಾಯಣೀಯೇಷ್ಟಾವಪ್ಯೇಷೈವ ಸೌಮ್ಯಸ್ಯ ಯಾಜ್ಯಾ । ಸೂತ್ರಿತಂ ಚ । ತ್ವಂ ಸೋಮ ಪ್ರ ಚಿಕಿತೋ ಮನೀಷಾ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ । ಆ. ೪-೩ । ಇತಿ ॥

ಹೇ ಸೋಮ ತೇ ತವ ದಿವಿ ದ್ಯುಲೋಕೇ ಯಾ ಯಾನಿ ಧಾಮಾನಿ ತೇಜಾಂಸಿ ವರ್ತಂತೇ । ತಥಾ ಪೃಥಿವ್ಯಾಂ ಭೂಮೌ ಯಾನಿ ವರ್ತಂತೇ । ತಥಾ ಪರ್ವತೇಷು ಪರ್ವವತ್ಸು ಶಿಲೋಚ್ಚಯೇಷು ಯಾನಿ ವರ್ತಂತೇ । ತಥಾ ವ್ರೀಹ್ಯಾದ್ಯೋಷಧೀಷ್ವಪ್ಸು ಚ ಯಾನಿ ವರ್ತಂತೇ । ತೇಭಿರ್ವಿಶ್ವೈಸ್ತೈಃ ಸರ್ವೈಸ್ತೇಜೋಭಿರ್ಯುಕ್ತಃ ಸುಮನಾಃ ಶೋಭನಮನಾ ಅಹೇಳನ್ನಕ್ರುಧ್ಯನ್ ಹೇ ರಾಜನ್ ।ಸೋಮ ರಾಜಮಾನ ಸೋಮ ಏವಂಭೂತಸ್ತ್ವಂ ಹವ್ಯಾಸ್ಮಾಭಿಃ ಪ್ರತ್ತಾನಿ ಹವೀಂಷಿ ಪ್ರತಿ ಗೃಭಾಯ ಪ್ರತಿಗೃಹಾಣ ॥ ಯಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಪೃಥಿವ್ಯಾಂ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಓಷಧೀಷು । ಓಷಧೇಶ್ಚ ವಿಭಕ್ತಾವಪ್ರಥಮಾಯಾಂ । ಪಾ. ೬-೩-೧೩೨ । ಇತಿ ದೀರ್ಘಃ । ಅಪ್ಸು । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಸುಮನಾಃ । ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾತ್ತತ್ವಂ । ಗೃಭಾಯ । ಗ್ರಹ ಉಪಾದಾನೇ। ಛಂದಸಿ ಶಾಯಜಪೀತಿ ಹೌ ಶ್ನಾಪ್ರತ್ಯಯಸ್ಯ ಶಾಯಜಾದೇಶಃ ॥

॥ ಪ್ರತಿಪದಾರ್ಥ ॥

**ರಾಜನ್**—ಪ್ರಕಾಶಮಾನನಾದ । **ಸೋಮ**—ಎಲೈ ಸೋಮದೇವನೇ । **ತೇ**—ನಿನ್ನ। **ಯಾ ಧಾಮಾನಿ**—ಯಾವ ತೇಜಸ್ಸುಗಳು । **ದಿವಿ**— ದ್ಯುಲೋಕದಲ್ಲಿವೆಯೋ । **ಪೃಥಿವ್ಯಾಂ**— ಭೂಮಿಯಮೇಲೆ । **ಯಾ**—ಯಾವ

ತೇಜಸ್ಸುಗಳಿವೆಯೋ। **ಪರ್ವತೇಷು**—ಪರ್ವತಗಳಲ್ಲೂ (ಹಾಗೆಯೇ)। **ಓಷಧೀಷು**—ಮೂಲಿಕಾದಿಗಳಲ್ಲಿಯೂ। **ಅಪ್ಸು** — ನೀರುಗಳಲ್ಲಿಯೂ। **ಯಾ** —ಯಾವ ತೇಜಸ್ಸುಗಳಿವೆಯೋ। **ತೇಭಿಃ ವಿಶ್ವೈಃ** — ಆ ಸಕಲ ತೇಜಸ್ಸುಗಳೊಡನೆಯೂ ಕೂಡಿಕೊಂಡು (ಮತ್ತು)। **ಸುಮನಾಃ**— ಅನುಗ್ರಹ ಬುದ್ಧಿಯುಳ್ಳವನಾಗಿಯೂ। **ಅಹೇಳನ್** ಕ್ರೋಧರಹಿತನಾಗಿಯೂ ಇದ್ದು। **ನಃ ಹವ್ಯಾ**— ನಮ್ಮಿಂದ ಅರ್ಪಿತಗಳಾದ ಹವಿಸ್ಸುಗಳನ್ನು। **ಪ್ರತಿ ಗೃಭಾಯ**—ಸ್ವೀಕರಿಸು.

ಭಾವಾರ್ಥ

ಪ್ರಕಾಶಮಾನನಾದ ಎಲೈ ಸೋಮದೇವನೇ, ನಿನ್ನ ಯಾವ ತೇಜಸ್ಸುಗಳು ದ್ಯುಲೋಕದಲ್ಲಿಯೂ ಭೂಮಿಯ ಮೇಲೆಯೂ, ಪರ್ವತಗಳಲ್ಲಿಯೂ, ಮೂಲಿಕಾದಿಗಳಲ್ಲಿಯೂ, ನೀರುಗಳಲ್ಲಿಯೂ ಹರಡಿವೆಯೋ ಆ ಸಕಲ ತೇಜಸ್ಸುಗಳೊಡನೆಯೂ ಕೂಡಿಕೊಂಡವನಾಗಿ ನಮ್ಮ ಮೇಲೆ ಅನುಗ್ರಹಬುದ್ಧಿಯುಳ್ಳವನಾಗಿಯೂ ಮತ್ತು ಕ್ರೋಧ ರಹಿತನಾಗಿಯೂ ಇದ್ದು ನಮ್ಮಿಂದ ಅರ್ಪಿತಗಳಾದ ಹವಿಸ್ಸುಗಳನ್ನು ಸ್ವೀಕರಿಸು.

## English Translation

O illustrious Soma, endowed with all the glories that are displayed by you in heaven, on earth, in the mountains, in the plants, in the waters, be well-disposed towards us and devoid of anger, accept our oblations.

|| ವಿಶೇಷವಿಷಯಗಳು ||

ಆಗ್ರಯಣೇಷ್ಟಿಯಲ್ಲಿ ಸೋಮದೇವತಾಕವಾದ ಹವಿಸ್ಸನ್ನು ಹೋಮಮಾಡುವಾಗ **ಯಾ ತೇ ಧಾಮಾನಿ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಆಗ್ರಯಣಂ ವ್ರೀಹಿಶ್ಯಾಮಾಕಯವಾನಾಂ** ಎಂಬ ಖಂಡದಲ್ಲಿ **ಸೋಮ ಯಾಸ್ತೇ ಮಯೋ ಭುವೋ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು (ಆ. ೨-೯) ಮತ್ತು ಏಕಾದಶಿನ್ ಎಂಬ ಯಾಗದಲ್ಲಿಯೂ ಸೋಮದೇವತಾಕವಾದ ಪಶುವಿನ ವಪಾಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಮಷಾಳ್ಹಂ ಯುತ್ಸು ಪೃತನಾಸು ಪಪ್ರಿಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೮) ಪ್ರಾಯಣೀಯೇಷ್ಟಿಯಲ್ಲಿಯೂ ಸೋಮದೇವತಾಕವಾದ ಹವಿರ್ನಿರ್ವಪನಕಾಲದಲ್ಲಿ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ತ್ವಂ ಸೋಮ ಪ್ರ ಚಿಕಿತೋ ಮನೀಷಾ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ** ಎಂಬ ಸೂತ್ರದಿಂದ ವಿವೃತವಾಗಿರುವುದು. **(ಆ. ೪-೩)**

**ಯಾ ತೇ ಧಾಮಾನಿ**—**ಯಾನಿ ತೇಜಾಂಸಿ ವರ್ತಂತೇ ತೈಸ್ಸರ್ವೈಸ್ತೇಜೋಭಿರ್ಯುಕ್ತಃ** ಇಲ್ಲಿ ಧಾಮ ಶಬ್ದಕ್ಕೆ ತೇಜಸ್ಸು ಅಥವಾ ಸ್ಥಾನ ಎಂಬ ಯಾವ ಅರ್ಥವನ್ನಾದರೂ ಹೇಳಬಹುದು. ನಿನ್ನ ಸಕಲ ತೇಜಸ್ಸುಗಳೊಡ

ನೆಯೂ ಕೂಡಿಕೊಂಡು ಅಥವಾ ನಿನ್ನ ಸಕಲ ಸ್ಥಾನಗಳಿಂದಲೂ ಕೂಡಿ ನಮ್ಮ ಹವಿಸ್ಸನ್ನು ಸ್ವೀಕರಿಸು ಎಂದಾಗುತ್ತದೆ. ಧಾಮ ಶಬ್ದಕ್ಕೆ ಸ್ಥಾನವೆಂಬ ಅರ್ಥವನ್ನು ಮಾಡಿದರೆ ಆಗ ಆ ಸ್ಥಾನಗಳಾವುವೆಂದರೆ ;—

**ದಿವಿ**—ಸೋಮನ ಸ್ವರ್ಗಲೋಕದ ಸ್ಥಾನವೊಂದು. ಸೋಮನ ಪ್ರಥಮ ನಿವಾಸಸ್ಥಾನವು ಸ್ವರ್ಗಲೋಕ ವಾಗಿದ್ದು ಅಲ್ಲಿಂದ ಶ್ಯೇನವು ಅದನ್ನು ಪೃಥಿವಿಗೆ ತಂದ ಕಥೆಯು ಪ್ರಸಿದ್ಧವಾಗಿದೆ.

**ಸೋಮಂ ಭರದ್ವಾದೃಹಾಣೋ ದೇವಾವಾನ್ದಿವೋ ಅಮುಷ್ಮಾದುತ್ತರಾದಾದಾಯ**
( ಋ. ಸಂ. ೪-೨೬-೬ )

**ದಿವಂ ಸುಪರ್ಣೋ ಗತ್ವಾಯ ಸೋಮಂ ವಜ್ರಿಣ ಆಭರತ್ ।**
(ಋ. ಸಂ. ೮-೧೦೦-೮)

ಇತ್ಯಾದಿ ಅನೇಕ ಶ್ರುತಿವಾಕ್ಯಗಳು ಸೋಮನ ಸ್ಥಾನವು ಪ್ರಥಮತಃ ಸ್ವರ್ಗಲೋಕವಾಗಿತ್ತೆಂದೂ ಅನಂತರ ಅದನ್ನು ಶ್ಯೇನವು ಪೃಥ್ವಿಗೆ ತಂದಿತೆಂದೂ ಪ್ರತಿಪಾದಿಸುತ್ತವೆ.

**ಪೃಥಿವ್ಯಾಂ**—ಯಜ್ಞನಿರ್ವಹಣಕ್ಕಾಗಿಯೂ, ತದಂಗವಾದ ಇಂದ್ರಾದಿದೇವತೆಗಳ ತೃಪ್ತ್ಯರ್ಥವಾಗಿಯೂ ಸೋಮರಸವು ಪೃಥ್ವಿಗೆ ತರಲ್ಪಟ್ಟು ಪೃಥ್ವಿಯಲ್ಲಿ ಅದರ ಸ್ಥಾನವು ಪ್ರತಿಷ್ಠಿತವಾಗಿದೆಯೆಂಬುದು

**ದಿವ್ಯನ್ಯಃ ಸದನಂ ಚಕ್ರ ಉಚ್ಚಾ ಪೃಥಿವ್ಯಾಮನ್ಯೋ ಅಧ್ಯಂತರಿಕ್ಷೇ ।**
(ಋ. ಸಂ. ೨-೪೦-೪)

ಎಂಬ ಮಂತ್ರದಲ್ಲಿ ಹೇಳುವಂತೆ ಇನ್ನೂ ಅನೇಕ ಕಡೆಗಳಲ್ಲಿ ಹೇಳಿ ಸೋಮನಿಂದ ಆಗುವ ಲೋಕೋಪಕಾರವನ್ನೂ ವರ್ಣಿಸಿದೆ.

**ಪರ್ವತೇಷು**—ಉತ್ತಮವಾದ ಓಷಧಿಗಳಿಗೆಲ್ಲಾ ಆಶ್ರಯವಾದ ಪರ್ವತವು ಸೋಮಲತೆಗೂ ಆಶ್ರಯ ವಾಗಿದ್ದು ಯಜ್ಞಕರ್ಮಕ್ಕೆ ಬೇಕಾದಾಗಲೆಲ್ಲಾ ಪರ್ವತಗಳಿಂದಲೇ ಈ ಸೋಮಲತೆಯನ್ನು ತರುತ್ತಿದ್ದರೆಂಬುದು ಋಗ್ವೇದದ

**ಆನ್ಯಂ ದಿವೋ ಮಾತರಿಶ್ವಾ ಜಭಾರಾಮಥ್ನಾದನ್ಯಂ ಪರಿ ಶ್ಯೇನೋ ಅದ್ರೇಃ ।**
(ಋ. ಸಂ. ೧-೯೩-೬)

**ಅಸಾವ್ಯಂಶುರ್ಮದಾಯಾಪ್ಸು ದಕ್ಷೋ ಗಿರಿಷ್ಠಾಃ ।**
(೯-೬೨-೪)

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ, ೩-೪೮-೨ ; ೫-೪೩-೪ ; ೯-೮೫-೧೦ । ೯-೯೮-೯ ಮುಂತಾದ ಋಕ್ಕುಗಳ ಲ್ಲಿಯೂ ಸಹ ಪರ್ವತದಲ್ಲಿರುವ ಸೋಮನ ಸ್ಥಾನವು ವರ್ಣಿತವಾಗಿದೆ.

**ಓಷಧೀಷು**—ಮೂಲಿಕೆಗಳಲ್ಲೆಲ್ಲಾ ಶ್ರೇಷ್ಠವಾದ ಸೋಮಲತೆಯೇ ಸೋಮರಸಕ್ಕೆ ಆಧಾರವಾಗಿರುವುದ ರಿಂದ ಮೂಲವಸ್ತುವಿನ ಸ್ಥಾನವು—

**ಆ ಯೋ ಗೋಭಿಃ ಸೃಜ್ಯತ ಓಷಧೀಷ್ವಾ ದೇವಾನಾಂ ಸುಮ್ನ ಇಷಯನ್ನುಪಾವಸುಃ ।**
(ಋ. ಸಂ. ೯-೮೪-೩)

ಮುಂತಾದ ಋಕ್ಕುಗಳಲ್ಲಿ ದೇವತೆಗಳ ತೃಪ್ತ್ಯರ್ಥವಾಗಿ ಸೋಮರಸವು ಓಷಧಿಗಳಲ್ಲಿ ಪ್ರತಿಷ್ಠಿತವಾಗಿರುವುದು ವರ್ಣಿತವಾಗಿದೆ.

**ಅಪ್ಸು**—ಪವಿತ್ರಗಳಾದ ತೀರ್ಥೋದಕಗಳು ಸೋಮರಸದ ಮಾಧುರ್ಯವನ್ನು ಹೆಚ್ಚುಮಾಡುವುದರಿಂದ ಯಜ್ಞಾರಂಭದಲ್ಲಿ ಸೋಮರಸವು ಉದಕಗಳ ಜೊತೆಯಲ್ಲಿ ಮಿಶ್ರಿತವಾಗುವುದರಿಂದ ಅದರ ಮಾಧುರ್ಯವು ಹೆಚ್ಚುತ್ತದೆ. ಇಂತಹ ಸಂದರ್ಭಗಳಲ್ಲಿ

**ಯಾಭಿಃ ಸೋಮೋ ಮೋದತೇ ಹರ್ಷತೇ ಚ ಕಲ್ಯಾಣೀಭಿರ್ಯುವತಿಭಿರ್ನ ಮರ್ಯಃ ।**
(ಋ. ಸಂ. ೧೦-೩೦-೫)

ಇತ್ಯಾದಿ ಋಕ್ಕುಗಳಲ್ಲಿ ಸೋಮ ಮತ್ತು ಉದಕಗಳ ಸಂಬಂಧವನ್ನು ದಾಂಪತ್ಯಸಂಬಂಧಕ್ಕೂ ಮತ್ತು ದಾಂಪತ್ಯ ಸುಖಕ್ಕೂ ಹೋಲಿಸುತ್ತಾರೆ. ಆದುದರಿಂದ ಉದಕಗಳೂ ಸೋಮರಸದ ಸ್ಥಾನಗಳೆಂದು ಪ್ರಸಿದ್ಧವಾಗಿವೆ.

ಹೀಗೆ, ದ್ಯುಲೋಕ, ಪೃಥಿವೀ, ಪರ್ವತ, ಓಷಧಿ, ಉದಕ ಈ ಎಲ್ಲಾ ಸ್ಥಾನಗಳಲ್ಲಿಯೂ ಇದ್ದು ಮತ್ತು ಎಲ್ಲಾ ಸ್ಥಾನಗಳೊಡನೆಯೂ ಕೂಡಿ ನಮ್ಮ ಹವಿಸ್ಸನ್ನು ಸ್ವೀಕರಿಸು ಎಂದಭಿಪ್ರಾಯವು.

ಅಲ್ಲದೇ, ಧಾಮಶಬ್ದಕ್ಕೆ ತೇಜಸ್ಸು ಎಂಬರ್ಥವನ್ನು ಮಾಡಿದರೆ, ಆಗಲೂ ಸಹ ಸೋಮನ ಸಕಲ ವಿಧವಾದ ಮಹಿಮೆಯೆಂದರ್ಥವು. ಋ. ಸಂ. ೨-೪೦-೧-೫ ; ೯-೯೭-೨೪ ; ೯-೫೪-೩ ; ೯-೮೯-೬ ಇತ್ಯಾದಿ ನಾನಾ ಕಡೆಗಳಲ್ಲಿ ವರ್ಣಿತವಾಗಿರುವಂತೆ ಸೋಮನು ಸಕಲ ಮಾನವರಿಗೂ ಮತ್ತು ದೇವತೆಗಳಿಗೂ ಪ್ರಭುವಾಗಿಯೂ, ಸೂರ್ಯನಂತೆ ಪ್ರಭಾಶಾಲಿಯಾಗಿಯೂ, ಸಕಲ ತೇಜೋಮಂಡಲಗಳಿಗೂ ಉತ್ಪಾದಕನಾಗಿಯೂ, ವರುಣನಂತೆ ನೀತಿ ಮಾರ್ಗಕ್ಕೆ ದರ್ಶಕನಾಗಿಯೂ, ಲೋಕನಿಯಮ್ಯನಾಗಿಯೂ ಇರುವುದರಿಂದ ಈ ನಾನಾವಿಧವಾದ ಮಹಿಮೆಗಳಿಂದಲೂ ಕೂಡಿಕೊಂಡು ನಮ್ಮ ಹವಿಸ್ಸನ್ನು ಸ್ವೀಕರಿಸು ಎಂದಭಿಪ್ರಾಯವು.

**ಅಹೇಳನ್**—ರೇಳತೇ, ಹೇಳತೇ ಇತ್ಯಾದಿ ಕ್ರೋಧಕರ್ಮನಾಮಗಳಲ್ಲಿ (ನಿ. ೩-೯) ಪಠಿತವಾಗಿರುವುದರಿಂದ ಹೇಳನ್ ಅಂದರೆ ಕೋಪಗೊಂಡು ಎಂದೂ ಅಹೇಳನ್ ಅಂದರೆ ಕೋಪಗೊಳ್ಳದೆ ಎಂದೂ ಅರ್ಥವಾಗುತ್ತದೆ. **ಅಹೇಳನ್ ಸುಮನಾ ಭವ ।** ಎಂಬ ಪ್ರಾರ್ಥನೆಯು ಋ. ಸಂ. ೧-೨೪-೧೧ ; ೧-೧೩೮-೩ ; ೬-೪೧-೧ ; ೧೦-೩೭-೮ ಇತ್ಯಾದಿ ಋಕ್ಕುಗಳಲ್ಲಿ ಪಠಿತವಾಗಿವೆ. ಅಗ್ನಿ, ವರುಣ. ಸೋಮ ಮುಂತಾದ ದೇವತೆಗಳು ಪಾಪ ಕರ್ತರಿಗೆ ಶಿಕ್ಷೆಮಾಡುವುದು ಕಠಿಣವೆಂಬ ನಂಬಿಕೆಯಿದ್ದುದರಿಂದಲೂ, ಅಂತಹವರಿಗೆ ಆ ದೇವತೆಗಳ ಅನುಗ್ರಹವು ಸಿಕ್ಕುವುದೇ ಇಲ್ಲವೆಂದು ತಿಳಿದಿದ್ದುದರಿಂದಲೂ ಸಹ, ಯಜ್ಞಕರ್ತರೆಲ್ಲರೂ ಅಧಿಕವಾದ ಪಾಪಭೀತಿಯಿಂದ ಕೂಡಿ ಆ ದೇವತೆಗಳನ್ನು ಕೋಪಗೊಳ್ಳದೆ ಇರುವಂತೆಯೂ, ತಮ್ಮನ್ನು ಅನಾದರಿಸದೇ ತಮ್ಮ ಮೇಲೆ ಅನುಗ್ರಹವನ್ನು ಬೀರಿ ಒಳ್ಳೆಯದನ್ನು ಮಾಡಬೇಕೆಂತಲೂ ಪ್ರಾರ್ಥಿಸುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಯಾ**—ಯಚ್ಛಬ್ದ. ನಪುಂಸಕ ಪ್ರಥಮಾಬಹುವಚನದಲ್ಲಿ ಶಿ ಆದೇಶ. ಪ್ರಾತಿಪದಿಕಕ್ಕೆ ಅತ್ವ. ಪರ ರೂಪ ನುಮಾಗಮ. ದೀರ್ಘ. **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ದಿವಿ**—ದಿವ್ ಶಬ್ದ. ಸಪ್ತಮೀ ಏಕವಚನಾಂತರೂಪ. **ಊಡಿದಂ ಪದಾದಿ**–(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೃಥಿವ್ಯಾಮ್**—ಪೃಥಿವೀ ಶಬ್ದಕ್ಕೆ ಸಪ್ತಮೀಏಕವಚನ ಪರವಾದಾಗ **ಙೇರಾಮ್‌ನದ್ಯಾಮ್ನೀಭ್ಯಃ**—ಎಂಬುವರಿಂದ ಆಮ್ ಆದೇಶ. ಈಕಾರಕ್ಕೆ ಯಣಾದೇಶ. **ಉದಾತ್ತಯಣೋ ಹಲ್ ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ಉದಾತ್ತಸ್ಥಾನಿಕ ಯಣಾದೇಶದ ಪರದಲ್ಲಿರುವುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಓಷಧೀಷು** – ಓಷಧಿ ಶಬ್ದ. ಸಪ್ತಮೀ ಬಹುವಚನದಲ್ಲಿ ಸುಪ್. **ಆದೇಶಪ್ರತ್ಯಯಯೋಃ**—ಎಂಬುದರಿಂದ ಷತ್ವ. **ಓಷಧೇಶ್ಚ ವಿಭಕ್ತಾವಪ್ರಥಮಾಯಾಮ್** (ಪಾ. ಸೂ. ೬-೩-೧೩೨) ಎಂಬುದರಿಂದ ಪ್ರಥಮಾಭಿನ್ನ ವಿಭಕ್ತಿ ಪರವಾದುದರಿಂದ ಓಷಧಿ ಶಬ್ದಕ್ಕೆ ದೀರ್ಘ.

**ಅಪ್‌ಸು**—ಸಪ್ತಮೀ ಬಹುವಚನಾಂತ ರೂಪ. **ಊಡಿದಂ ಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತೇಭಿಃ** — ತದ್ ಶಬ್ದ. ತೃತೀಯಾಬಹುವಚನದಲ್ಲಿ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಐಸಾದೇಶ ಬರುವುದಿಲ್ಲ.

**ಸುಮನಾಃ**—ಶೋಭನಂ ಮನಃ ಯೇಷಾಂ ತೇ ಸುಮನಾಃ **ಸೋರ್ಮನಸೀ ಅಲೋಮೋಷಸೀ** (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಹವ್ಯಾ**—ನಪುಂಸಕ ದ್ವಿತೀಯಾಬಹುವಚನದಲ್ಲಿ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಮ್** —ಎಂಬುದರಿಂದ ಶಿಗೆ ಲೋಪ.

**ಗೃಭಾಯ**—ಗ್ರಹ ಉಪದಾನೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಕ್ರ್ಯಾದಿಭ್ಯಃ ಶ್ನಾ**—ಎಂಬುದರಿಂದ ಶ್ನಾವಿಕರಣ. ಅದಕ್ಕೆ ಹಿ ಪರವಾದಾಗ ಶಾನಚಾದೇಶ ಪ್ರಾಪ್ತವಾದರೆ **ಛಂದಸಿ ಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ಶಾಯಚಾದೇಶ. **ಅತೋ ಹೇಃ**—ಎಂಬುದರಿಂದ ಹಿಗೆ ಲುಕ್. ಗೃಹಾಯ ಎಂದಿರುವಾಗ **ಹೃಗ್ರಹೋರ್ಭಶ್ಛಂದಸಿ** (ವಾ. ೪೮೫೩) ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

——— :O: ———

ಸಂಹಿತಾಪಾಠಃ

ತ್ವಂ ಸೋಮಾಸಿ ಸತ್ಪತಿಸ್ತ್ವಂ ರಾಜೋತ ವೃತ್ರಹಾ।

ತ್ವಂ ಭದ್ರೋ ಅಸಿ ಕ್ರತುಃ ॥ ೫ ॥

॥ ಪದಪಾಠಃ ॥

ತ್ವಂ । ಸೋಮ । ಅಸಿ । ಸತ್ಽಪತಿಃ । ತ್ವಂ । ರಾಜಾ । ಉತ । ವೃತ್ರಽಹಾ ।

ತ್ವಂ । ಭದ್ರಃ । ಅಸಿ । ಕ್ರತುಃ ॥ ೫ ॥

ಸಾಯಣಭಾಷ್ಯಂ

ಪೌರ್ಣಮಾಸೇಷ್ಟೌ ಸೌಮ್ಯಸ್ಯಾಜ್ಯಭಾಗಸ್ಯ ತ್ವಂ ಸೋಮೇತ್ಯೇಷಾನುವಾಕ್ಯಾ । ಸೂತ್ರಿತಂ ಚ । ಅಗ್ನಿರ್ವೃತ್ರಾಣಿ ಜಂಘನದಿತಿ ಪೂರ್ವಸ್ಯಾಜ್ಯಭಾಗಸ್ಯಾನುವಾಕ್ಯಾ ತ್ವಂ ಸೋಮಾಸಿ ಸತ್ಪತಿರಿತ್ಯುತ್ತರಸ್ಯ । ಆ. ೧-೫ । ಇತಿ । ಏವಂ ಯತ್ರ ಯತ್ರ ವಾರ್ತ್ರಘ್ನಾವಾಜ್ಯಭಾಗೌ ತತ್ರ ಸರ್ವತ್ರಾಸ್ಯಾ ವಿನಿಯೋಗಃ ॥ ಪ್ರಾತಃಕಾಲೀನಾಯಾಮುಪಸದಿ ಪ್ರಧಾನಸ್ಯ ಸೌಮ್ಯಸ್ಯೈಷೈವಾನುವಾಕ್ಯಾ । ಆಪರಾಹ್ಣಿಕ್ಯಾಮುಪಸದಿ ಸೈವ ಯಾಜ್ಯಾ । ಸೂತ್ರಿತಂ ಚ । ತ್ವಂ ಸೋಮಾಸಿ ಸತ್ಪತಿರ್ಗಯಸ್ಫಾನೋ ಅಮೀವಹಾ ಇತಿ ವಿಪರ್ಯಾಸೋ ಯಾಜ್ಯಾನುವಾಕ್ಯಾನಾಂ । ಆ. ೪-೮ । ಇತಿ ಚ ॥

ಹೇ ಸೋಮ ತ್ವಂ ಸತ್ಪತಿರಸಿ । ಸತಾಂ ಕರ್ಮಸು ವರ್ತಮಾನಾನಾಂ ಬ್ರಾಹ್ಮಣಾನಾಮಧಿಪತಿರ್ಭವಸಿ । ತಸ್ಮಾತ್ಸೋಮರಾಜಾನೋ ಬ್ರಾಹ್ಮಣಾಃ । ತೈ.ಬ್ರಾ. ೧-೭-೪-೨ । ಇತಿ ಶ್ರುತೇಃ । ಯದ್ವಾ । ಸಂತಃ ಸ್ನಾನಾದಯಃ ಪತಯಃ ಪಾಲಕಾ ಯಸ್ಯ ಸೋಮಸ್ಯ ತಾದೃಶೋ ಭವಸಿ । ತಥಾ ಚಾಮ್ನಾಯತೇ । ಸ್ನಾನ ಭ್ರಾಜೇತ್ಯಾಹೈತೇ ವಾ ಅಮುಷ್ಮಿನ್ ಲೋಕೇ ಸೋಮಮರಕ್ಷನ್ । ತೈ. ಸಂ. ೬-೧-೧೦-೫ । ಇತಿ । ಉತಾಪಿ ಚ ರಾಜಾ ರಾಜಮಾನಸ್ತ್ವಂ ವೃತ್ರಹಾ ವೃತ್ರಸ್ಯಾಸುರಸ್ಯ ಶತ್ರೋರ್ವಾ ಹಂತಾಸಿ । ಭದ್ರಃ ಶೋಭನಃ ಕ್ರತುರ್ಯೋऽಯಮಗ್ನಿಷ್ಟೋಮಾದಿಯಾಗಸ್ತ್ವಮೇವ ತದ್ರೂಪೋ ಭವಸಿ । ತ್ವತ್ಸಾಧ್ಯತ್ವಾದ್ಯಾಗಾನಾಂ ॥ ಸತ್ಪತಿಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ತತ್ಪುರುಷಪಕ್ಷೇ ತು ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ತ್ವಂ**—ನೀನು । **ಸತ್ಪತಿಃ ಅಸಿ**—ಕರ್ಮಕರ್ತರಾದ ಸಜ್ಜನರ ಒಡೆಯನಾಗಿದ್ದೀಯೆ. (ರಕ್ಷಕನಾಗಿದ್ದೀಯೆ) । **ಉತ**—ಮತ್ತು । **ರಾಜಾ**—ಪ್ರಕಾಶಮಾನನಾದ । **ತ್ವಂ** ನೀನು । **ವೃತ್ರಹಾ**—ವೃತ್ರಾಸುರನ ಸಂಹಾರಕನಾಗಿದ್ದೀಯೆ.

**ಅಥವಾ**

[**ತ್ವಂ**—ನೀನು । **ಸತ್ಪತಿಃ**—ಸಜ್ಜನರ ಪಾಲಕನಾಗಿಯೂ । **ರಾಜಾ**—ಪ್ರಭುವಾಗಿಯೂ । **ಅಸಿ**—ಆಗಿದ್ದೀಯೆ. ।]

**ಭದ್ರಃ**—ಮಂಗಳಕರವಾದ । **ಕ್ರತುಃ**—ಅಗ್ನಿಷ್ಟೋಮಾದಿಯಾಗವೂ । **ತ್ವಂ (ಏವ) ಅಸಿ**—ನೀನೇ ಆಗಿದ್ದೀಯೆ.

ಭಾವಾರ್ಥ

ಎಲೈ ಸೋಮದೇವನೇ, ನೀನು ಯಜ್ಞಮಾಡತಕ್ಕ ಸಜ್ಜನರ ಒಡೆಯನಾಗಿದ್ದೀಯೆ. ಮತ್ತು ಪ್ರಕಾಶಮಾನನಾದ ನೀನು ವೃತ್ರಾಸುರನ ಹಂತಕನಾಗಿಯೂ ಇದ್ದೀಯೆ. ಮಂಗಳಕರವಾದ ಅಗ್ನಿಷ್ಟೋಮಾದಿ ಯಾಗವೂ ನೀನೇ ಆಗಿದ್ದೀಯೆ.

English Translation

Soma, you are the protector, the sovereign of the pious or even the slayer of vritra ; you are holy sacrifice.

॥ ವಿಶೇಷವಿಷಯಗಳು ॥

ಪೌರ್ಣಮಾಸೇಷ್ಟಿಯಲ್ಲಿ ಸೋಮದೇವತಾಕವಾದ ಆಜ್ಯಭಾಗವನ್ನು ಹೋಮಮಾಡುವಾಗ **ತ್ವಂ ಸೋಮ** ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಗ್ನಿರ್ವೃತ್ರಾಣಿ ಜಂಘನದಿತಿ ಪೂರ್ವಸ್ಯಾಜ್ಯಭಾಗಸ್ಯಾನುವಾಕ್ಯಾ ತ್ವಂ ಸೋಮಾಸಿ ಸತ್ಪತಿರಿತ್ಯುತ್ತರಸ್ಯ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೧-೫) ಈ ರೀತಿಯಾಗಿ ಎಲ್ಲೆಲ್ಲಿ ವೃತ್ರವಧ ಸಂಬಂಧವಾದ ಇಂದ್ರನ ಪರವಾಗಿ ಹೋಮ ಮಾಡುವರೋ ಅಲ್ಲೆಲ್ಲಾ ಈ ಋಕ್ಕಿನ ವಿನಿಯೋಗವಿರುವುದು. ಪ್ರಾತಃಕಾಲದಲ್ಲಿ ಮಾಡಲ್ಪಡುವ ಉಪಸತ್ ಎಂಬ ಇಷ್ಟಿಯಲ್ಲಿ ಸೋಮದೇವತಾ ಮಂತ್ರಗಳಲ್ಲಿ ಈ ಋಕ್ಕನ್ನು ಪ್ರಧಾನವಾದ ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ತ್ವಂ ಸೋಮಾಸಿ ಸತ್ಪತಿರ್ಗಯಸ್ಫಾನೋ ಅಮೀವಹಾ ಇತಿ ವಿಪರ್ಯಾಸೋ ಯಾಜ್ಯಾನುವಾಕ್ಯಾನಾಂ** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು ( ಆ. ೪-೮ ).

**ಸತ್ಪತಿಃ—ಸತಾಂ ಪತಿಃ ।** ಅಥವಾ **ಸತಾಂ ಪಾಲಯಿತಾ ।** ಎಂಬ ತತ್ಪುರುಷವನ್ನಾದರೂ ಮಾಡಬಹುದು. ಅಥವಾ **ಸಂತಃ ಪತಯಃ ಯಸ್ಯ ।** ಎಂಬ ಬಹುವ್ರೀಹಿಯನ್ನಾದರೂ ಮಾಡಬಹುದು.

**ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಂ ।**
( ಋ. ಸಂ. ೯-೯೬-೬ )

**ಪವಿತ್ರೇಭಿಃ ಪವಮಾನೋ ನೃಚಕ್ಷಾ ರಾಜಾ ದೇವಾನಾಮುತ ಮರ್ತ್ಯಾನಾಂ ।**
( ಋ. ಸಂ. ೯-೯೭-೨೪ )

**ತಸ್ಮಾತ್ಸೋಮರಾಜಾನೋ ಬ್ರಾಹ್ಮಣಾಃ ।**
( ತೈ. ಸ. ೬-೧-೧೦-೫ )

ಇತ್ಯಾದಿ ಶ್ರುತಿವಾಕ್ಯಗಳಿಂದ ಸೋಮನು ದೇವತೆಗಳಿಗೂ ಯಜ್ಞಕರ್ತರಾದ ಸಜ್ಜನರಿಗೂ ಒಡೆಯನೆಂದೂ ಸಜ್ಜನರ ಪಾಲಕನೆಂದೂ ಪ್ರಸಿದ್ಧನಾಗಿರುವುದರಿಂದ ಸತಾಂ ಪತಿಃ ಅಥವಾ ಪಾಲಯಿತಾ ಎಂಬ ಅರ್ಥವನ್ನು ಹೇಳಬಹುದು. ಅಥವಾ

**ಸ್ವಾನ ಭ್ರಾಜೇತ್ಯಾಹೈತೇ ವಾ ಅಮುಷ್ಮಿಁಲ್ಲೋಕೇ ಸೋಮಮರಕ್ಷನ್ ।**
( ತೈ. ಸ. ೬-೧-೧೦-೫ )

ಇತ್ಯಾದಿ ಶ್ರುತಿವಾಕ್ಯಗಳಿರುವುದರಿಂದ ಸ್ನಾನಾದಿಗಳೇ ಪತಿಯಾಗಿಯೂ, ರಕ್ಷಕನಾಗಿಯೂ ಯಾವುದಕ್ಕೆ ಇರುವುದೋ ಅಂತಹ ಸೋಮದೇವತೆ ಎಂಬ ಅರ್ಥವನ್ನಾದರೂ ಹೇಳಬಹುದು.

ರಾಜಾ—**ರಾಜಮಾನಃ** । ಸತ್ಪತಿಃ ಎನ್ನುವ ಪದಕ್ಕೆ ಒಡೆಯನು ಎಂಬರ್ಥವಿರುವುದರಿಂದ ಇಲ್ಲಿ ರಾಜಾ ಅಂದರೆ ಪ್ರಕಾಶಮಾನನು ಎಂದಾಗಬಹುದು.

**ವೃತ್ರಹಾ—ವೃತ್ರಸ್ಯಾಸುರಸ್ಯ ಶತ್ರೋರ್ವಾ ಹಂತಾ** । ಅನೇಕ ಸಂದರ್ಭಗಳಲ್ಲಿ ಸೋಮನೂ ಇಂದ್ರನ ಸಹಾಯಾರ್ಥವಾಗಿ ವೃತ್ರನೊಡನೆ ಹೋರಾಡಿ ಇಂದ್ರನಿಗೆ ಜಯವನ್ನು ಸಂಪಾದಿಸಿಕೊಟ್ಟಿದ್ದಾನೆ.

**ಸ ಪವಸ್ವ ಯ ಆವಿಥೇಂದ್ರಂ ವೃತ್ರಾಯ ಹಂತವೇ** ।
( ಋ. ಸಂ. ೯-೬೧-೨೨ )

ಎಂಬ ಋಕ್ಕಿನಲ್ಲಿ ಹೇಳುವಂತೆಯೇ ಋ ಸಂ. ೯-೨೪-೬; ೯-೨೫-೩ ; ೯-೨೮-೩ ; ೯-೨೫-೯ ಮುಂತಾದ ಇನ್ನೂ ಅನೇಕ ಋಕ್ಕುಗಳಲ್ಲಿ ಸೋಮನಿಗೆ ವೃತ್ರಹನೆಂಬ ವಿಶೇಷಣವು ಪ್ರಸಿದ್ಧವಾಗಿರುತ್ತದೆ. ವೃತ್ರನೆಂದರೆ ಮೇಘವು.

**ಭದ್ರಃ**—ಮಂಗಳಕಾರಿಯಾದವನು ಅಥವಾ ಪೂಜ್ಯನು.

**ಕ್ರತುಃ**—ಕರ್ಮವುಳ್ಳವನು ಅಥವಾ ಪ್ರಜ್ಞೆಯುಳ್ಳವನು ಎಂದಾದರೂ ಆಗಬಹುದು. ಅಥವಾ **ಅಗ್ನಿಷ್ಟೋಮಾದಿ ಯಾಗರೂಪಸ್ತ್ವಮೇವ । ತ್ವತ್ಸಾಧ್ಯತ್ವಾದ್ಯಾಗಾನಾಂ** । ನೀನೇ ಸಕಲಯಾಗರೂಪನಾಗಿದ್ದೀಯೆ. ಎಂಬರ್ಥವಾದರೂ ಆಗಬಹುದು. ಸೋಮದೇವನ ಪ್ರಾರ್ಥನೆಯನ್ನು ಮಾಡುವಾಗ,

**ಆತ್ಮಾ ಯಜ್ಞಸ್ಯ ಪೂರ್ವ್ಯಃ** ।
( ಋ. ಸಂ. ೯-೨-೧೦ )

**ಆತ್ಮಾ ಯಜ್ಞಸ್ಯ ರಂಹ್ಯಾ ಸುಷ್ವಾಣಃ ಪವತೇ ಸುತಃ** ।
( ಋ. ಸಂ. ೯-೬-೮ )

ಎಂಬಿವೇ ಮೊದಲಾದ ಋಕ್ಕುಗಳಲ್ಲಿ ಸೋಮನೇ ಯಜ್ಞಾತ್ಮನು ಎಂಬ ವರ್ಣನೆಯಿರುವುದರಿಂದ ಕ್ರತುಃ ಎಂದರೆ ಯಾಗರೂಪನು ಎಂಬ ಅರ್ಥವನ್ನು ಹೇಳಬಹುದು.

ವ್ಯಾಕರಣಪ್ರಕ್ರಿಯಾ

**ಸತ್ಪತಿಃ**—ಬಹುವ್ರೀಹಿ ಸಮಾಸ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಪೂರ್ವ ಪದ ಪ್ರಕೃತಿಸ್ವರ ಬರುತ್ತದೆ. ಸತಾಂ ಪತಿಃ ಎಂದು ತತ್ಪುರುಷ ಸಮಾಸಮಾಡಿದರೆ **ಪತ್ಯಾವೈಶ್ವರ್ಯೇ** ( ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವೃತ್ರಹಾ**—ವೃತ್ರಂ ಹತವಾನ್ ವೃತ್ರಹಾ. ವೃತ್ರಶಬ್ದವು ಉಪಪದವಾಗಿರುವಾಗ ಭೂತಾರ್ಥದಲ್ಲಿ **ಬ್ರಹ್ಮಭ್ರೂಣವೃತ್ರೇಷು ಕ್ವಿಪ್** ( ಪಾ. ಸೂ. ೩-೨-೮೭) ಎಂಬುದರಿಂದ ಹನ್ ಧಾತುವಿಗೆ ಕ್ವಿಪ್. ವೃತ್ರಹನ್ ಶಬ್ದವಾಗುತ್ತದೆ. ಪ್ರಥಮಾಏಕವಚನರೂಪ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

**ಭದ್ರಃ**—ಭದಿ ಕಲ್ಯಾಣೇ ಸುಖೇ ಚ ಧಾತು. ಇದಕ್ಕೆ ಔಣಾದಿಕ ರಕ್‌ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ತ್ವಂ ಚ ಸೋಮ ನೋ ವಶೋ ಜೀವಾತುಂ ನ ಮರಾಮಹೇ ।
ಪ್ರಿಯಸ್ತೋತ್ರೋ ವನಸ್ಪತಿಃ ॥ ೬ ॥

॥ ಪದಪಾಠಃ ॥

ತ್ವಂ । ಚ । ಸೋಮ । ನಃ । ವಶಃ । ಜೀವಾತುಂ । ನ । ಮರಾಮಹೇ ।
ಪ್ರಿಯಽಸ್ತೋತ್ರಃ । ವನಸ್ಪತಿಃ ॥ ೬ ॥

॥ ಸಾಯಣಭಾಷ್ಯಂ ॥

ಸಾಗ್ನಿಚಿತ್ಯೇ ಕ್ರತಾವಗ್ನೀಷೋಮೀಯಸ್ಯ ಪಶುಪುರೋಡಾಶಮನ್ವಷ್ಟೌ ದೇವಸುವಾಂ ಹವೀಂಷಿ ನಿರುಪ್ಯಂತೇ । ತತ್ರ ಸೋಮಸ್ಯ ವನಸ್ಪತೇರ್ಹವಿಷಸ್ತ್ವಂ ಚ ಸೋಮೇತ್ಯೇಷಾನುವಾಕ್ಯಾ । ಅಥಾಗ್ನೀಷೋಮೀಯೇಣೇತಿ ಖಂಡೇ ಸೂತ್ರಿತಂ । ತ್ವಂ ಚ ಸೋಮ ನೋ ವಶೋ ಬ್ರಹ್ಮಾ ದೇವಾನಾಂ ಪದವೀಃ ಕವೀನಾಂ । ಆ. ೪-೧೧ । ಇತಿ ॥

ಹೇ ಸೋಮ ನೋಽಸ್ಮಾಕಂ ಸ್ತೋತೄಣಾಂ ಜೀವಾತುಂ ಜೀವನೌಷಧಂ ತ್ವಂ ಚ ತ್ವಂ ಚೇದ್ವಶಃ ಕಾಮಯೇಥಾಃ ತದಾನೀಂ ವಯಂ ನ ಮರಾಮಹೇ । ನ ಮ್ರಿಯಾಮಹೇ । ಕೀದೃಶಸ್ತ್ವಂ। ಪ್ರಿಯಸ್ತೋತ್ರಃ। ಪ್ರಿಯಾಣಿ ಸ್ತೋತ್ರಾಣಿ ಯಸ್ಯಸಃ ತಥೋಕ್ತಃ । ಬಹುಭಿಃ ಸ್ತೋತವ್ಯ ಇತ್ಯರ್ಥಃ । ವನಸ್ಪತಿರ್ವನಾನಾಮೋಷಧಿವನಸ್ಪತಿರೂಪಾಣಾಂ ಪತಿಃ ಪಾಲಯಿತಾಸಿ । ಸೋಮೋ ವಾ ಓಷಧೀನಾಂ ರಾಜಾ । ತೈ. ಸಂ. ೬-೧-೯-೧। ಇತಿ ಶ್ರುತೇಃ ॥ ವಶಃ। ವಶ ಕಾಂತೌ। ಲೇಟಿ ಸಿಪ್ಯಡಾಗಮಃ। ಆಗಮಾನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ತ್ವಂ ಚೇತಿ ಚಶಬ್ದಶ್ಚಣಿತಿ ನಿಪಾತಾಂತರಂ ಚೇದರ್ಥಂ । ತದ್ಯೋಗಾನ್ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ । ಜೀವಾತುಂ । ಜೀವ ಪ್ರಾಣಧಾರಣೇ । ಜೀವೇರಾತುಃ । ಉ. ೧-೮೦. । ಮರಾಮಹೇ । ಮೃಙ್ ಪ್ರಾಣತ್ಯಾಗೇ । ವ್ಯತ್ಯಯೇನ ಶಪ್ ॥

ಪ್ರತಿಪದಾರ್ಥ

**ಸೋಮ**— ಎಲೈ ಸೋಮದೇವನೇ । **ಪ್ರಿಯಸ್ತೋತ್ರಃ**— ಸ್ತೋತ್ರದಲ್ಲಿ ಅಭಿಮಾನವುಳ್ಳವನೂ । **ವನಸ್ಪತಿಃ**—ಓಷಧಿಗಳ ಮತ್ತು ಸಸ್ಯಗಳ ಒಡೆಯನೂ ಆದ । **ತ್ವಂ**—ನೀನು । **ನಃ**—ನಮಗೆ । **ಜೀವಾತುಂ**—ಪ್ರಾಣಧಾರಕವಾದ ಸತ್ತ್ವವನ್ನು । (ತ್ವಂ) **ಚ**—**ವಶಃ**—ನೀನು (ಅನುಗ್ರಹಿಸಿ) ಇಚ್ಛಿಸಿದ್ದೇ ಆದರೆ । **ನ ಮರಾಮಹೇ**--ನಾವು ಸಾಯುವುದಿಲ್ಲ ॥

ಭಾವಾರ್ಥ

ಎಲೈ ಸೋಮದೇವನೇ, ಸ್ತೋತ್ರಪ್ರಿಯನೂ ಮತ್ತು ಸಸ್ಯೌಷಧ್ಯಾದಿಗಳಿಗೆ ಪತಿಯೂ ಆದ ನೀನು ನಮಗೆ ಪ್ರಾಣಧಾರಕವಾದ ಸತ್ತ್ವವನ್ನು ಅನುಗ್ರಹಿಸಿ ಇಚ್ಛಿಸಿದ್ದೇ ಆದರೆ ನಾವು ಸಾಯುವುದೇ ಇಲ್ಲ.

English Translation

O Soma, fond of praise, the lord, of plants, you are life to us ; if you wish we will not die.

ವಿಶೇಷವಿಷಯ.ಗಳು

ಅಗ್ನಿಚಯನಪೂರ್ವಕವಾಗಿ ಮಾಡುವ ಯಾಗಗಳಲ್ಲಿ ಅಗ್ನೀಷೋಮೀಯ ( ಅಗ್ನಿ ಮತ್ತು ಸೋಮದೇವತೆಗಳಿಗೆ ) ಸಂಬಂಧವಾದ ಪಶುಪುರೋಡಾಶ ಹೋಮಗಳನ್ನು ಮಾಡುವಾಗ ದೇವಸುವ ಎಂಬ ಎಂಟು ಹವಿಸ್ಸಿನ ಹೋಮಗಳನ್ನು ಮಾಡಬೇಕು ಆ ಕಾಲದಲ್ಲಿ ಸೋಮದೇವತೆ ಮತ್ತು ವನಸ್ಪತಿದೇವತೆಯನ್ನುದ್ದೇಶಿಸಿ ಹೋಮ ಮಾಡುವಾಗ **ತ್ವಂ ಚ ಸೋಮ** ಎಂಬ ಈ ಮಂತ್ರವು ಪುರೋನುವಾಕ್ಯಾಮಂತ್ರವಾಗಿ ಉಪಯೋಗಿಸಲ್ಪಡುವುದೆಂದು ಆಶ್ವಲಾಯನ ಶ್ರೌತಸೂತ್ರದ **ಅಥಾಗ್ನೀಷೋಮೀಯೇಣ** ಎಂಬ ಖಂಡದಲ್ಲಿ **ತ್ವಂ ಚ ಸೋಮ ನೋ ವಶೋ ಬ್ರಹ್ಮಾ ದೇವಾನಾಂ ಪದವೀಃ ಕವೀನಾಂ** ಎಂಬ ಸೂತ್ರದಲ್ಲಿ ಹೇಳಿರುವುದು ( ಆ. ೪-೧೧ ).

**ವನಸ್ಪತಿಃ—ವನಾನಾಂ ಓಷಧಿವನಸ್ಪತಿರೂಪಾಣಾಂ ಪಾಲಯಿತಾಸಿ ।** ಸೋಮನು ಓಷಧಿ ಮತ್ತು ಸಸ್ಯಗಳ ಪಾಲಕನು. ಅವನೇ ಜೀವಾತುವು ಮತ್ತು ಮರಣವನ್ನು ತಪ್ಪಿಸುವವನು. ಆದುದರಿಂದಲೇ ಅವನನ್ನು ಯಜ್ಞಕರ್ತರು ಯಾವಾಗಲೂ ಸ್ತುತಿಸುತ್ತಾರೆ.

**ನಿತ್ಯಸ್ತೋತ್ರೋ ವನಸ್ಪತಿರ್ಧೀನಾಮಂತಃ ಸಬರ್ದುಘಃ ।**
( ಋ. ಸಂ. ೯-೧೨-೭ )

**ಸೋಮೋ ವಾ ಓಷಧೀನಾಂ ರಾಜಾ ।**
( ತೈ. ಸಂ. ೬-೧-೯-೧ )

ಇತ್ಯಾದಿಸ್ಥಳಗಳಲ್ಲಿ ಸೋಮನನ್ನು ಓಷಧಿ ಮತ್ತು ಸಸ್ಯಗಳಿಗೆ ರಾಜನೆಂದು ವರ್ಣಿಸಿರುವುದು.

**ಜೀವಾತುಂ—ಜೀವನೌಷಧಂ ।** ಜೀವಾತು ಶಬ್ದಕ್ಕೆ ಪ್ರಾಣಧಾರಣೆಗೆ ಬೇಕಾದ ಸತ್ತ್ವವನ್ನೊಳಗೊಂಡ ಆಹಾರನೆಂಗೂ ಅಥವಾ ಚಿರಕಾಲದ ಜೀವನನೆಂದೂ ಅರ್ಥವಾಗುತ್ತದೆ. ನಿರುಕ್ತಕಾರರು ಋಕ್ಸಂಹಿತೆಯ—

**ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸು ಪ್ರ ತಿರಾ ನ ಆಯುಃ ।**
( ಋ. ಸಂ. ೧೦-೫೯-೫ )

ಎಂಬ ಋಕ್ಕನ್ನು ಉದಹರಿಸಿ ಜೀವಾತವೇ ಎನ್ನುವುದಕ್ಕೆ **ಚಿರಂ ಜೀವನಾಯ ।** ( ನಿ. ೧೦-೪೦ ) ದೀರ್ಘಕಾಲ ಜೀವಿಸುವುದಕ್ಕಾಗಿ ಎನ್ನುವ ಅರ್ಥವನ್ನು ಮಾಡಿರುತ್ತಾರೆ. ಇಲ್ಲಿ ಸಾಯಣರು **ಜೀವನೌಷಧಂ** ಎಂಬ ವ್ಯಾಖ್ಯಾನವನ್ನು ಮಾಡಿದ್ದಾರೆ. ಇಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು.

**ವಶಃ—ವಶ ಕಾಂತೌ । ವಶಃ ಕಾಮಯೇಥಾಃ ।** ನೀನು ಇಚ್ಛಿಸಿದ್ದೇ ಆದರೆ ಎಂದು ಕರ್ತರ್ಯರ್ಥದಲ್ಲಿ ಸಾಯಣರೂ ; **ಕಾಮ್ಯಃ, ಪ್ರಾರ್ಥಯಿತವ್ಯಃ ಯಾಚ್ಯಃ ।** ನೀನು ಪ್ರಾರ್ಥಿಸಲ್ಪಡುವವನು ಎಂಬರ್ಥದಲ್ಲಿ ಸ್ಕಂದಸ್ವಾಮಿಗಳೂ ವ್ಯಾಖ್ಯಾನ ಮಾಡಿರುವರು. ಸನ್ನಿವೇಶಕ್ಕೆ ಹೊಂದಿಕೊಳ್ಳಬೇಕಾದರೆ ಮೊದಲನೆಯ ಅರ್ಥವೇ ಸರಿಯಾಗಿ ಕಾಣುತ್ತದೆ.

**ನ ಮರಾಮಹೇ—ಮೃಙ್ ಪ್ರಾಣತ್ಯಾಗೇ ।** ಸೋಮನು ನಮಗೆ ಅನುಗ್ರಹಿಸಿದ್ದೇ ಆದರೆ ನಾವು ಸಾಯುವುದೇ ಇಲ್ಲವೆಂದು ಅರ್ಥವು.

**ಮೋ ಷು ಣಃ ಸೋಮ ಮೃತ್ಯವೇ ಪರಾದಾಃ ಪಶ್ಯೇಮ ನು ಸೂರ್ಯಮುಚ್ಚರಂತಂ ।**
( ಋ. ಸಂ. ೧೦-೫೯-೪ )

**ಸೋಮ ರಾಜನ್ ಪ್ರ ಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ ।**
( ಋ. ಸಂ. ೮-೪೮-೭ )

ಹೀಗೆ ನಾನಾ ಕಡೆಗಳಲ್ಲಿ ಮೃತ್ಯುವಿನಿಂದ ನಮ್ಮನ್ನು ತಪ್ಪಿಸು ಎಂದು ಸೋಮನಲ್ಲಿ ಮೊರೆಯಿಟ್ಟು ಪ್ರಾರ್ಥಿಸುವುದು ಕಂಡುಬರುವುದು. ಸೋಮನ ಅನುಗ್ರಹವಿದ್ದರೆ ದೀರ್ಘಕಾಲದ ಜೀವನವು ಸಿದ್ಧವೆಂಬ ನಂಬಿಕೆ.

ವ್ಯಾಕರಣಪ್ರಕ್ರಿಯಾ

**ವಶಃ**—ವಶ ಕಾಂತೌ. ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ ಲೋಪಃ ಪರಸ್ಮೈಪದೇಷು**—ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ**—ಎಂಬುದರಿಂದ ಅಡಾಗಮ. ಸಕಾರಕ್ಕೆ ರುತ್ವವಿಸರ್ಗ. **ಆಗಮಾ ಅನುದಾತ್ತಾಃ**—ಎಂಬುದರಿಂದ ಧಾತುಸ್ವರ ಉಳಿಯುತ್ತದೆ. ಇಲ್ಲಿ ತ್ವಂ ಚ ಎಂಬಲ್ಲಿರುವ ಚಶಬ್ದವು ಚಞ್ ಎಂಬ ನಿಪಾತಾರ್ಥಕವಾಗಿರುವುದರಿಂದ ತದ್ಯೋಗವು ವಶಃ ಎಂಬ ತಿಙಂತಕ್ಕೆ ಇರುವುದರಿಂದ **ನಿಪಾತೈರ್ಯದ್ಯದಿಹಂತ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತ ಪ್ರತಿಷೇಧ ಬರುತ್ತದೆ.

**ಜೀವಾತುಮ್**—ಜೀವ ಪ್ರಾಣಧಾರಣೇ ಧಾತು. ಇದಕ್ಕೆ **ಜೀವೇ ರಾತುಃ** (ಉ.ಸೂ. ೧-೭೯) ಎಂಬುದರಿಂದ ಅತು ಪ್ರತ್ಯಯ. ದ್ವಿತೀಯಾ ಏಕವಚನಾಂತರೂಪ ಪ್ರತ್ಯಯಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ಮರಾಮಹೇ**—ಮೃಙ್ ಪ್ರಾಣತ್ಯಾಗೇ. ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತ ಆತ್ಮನೇ**—ಸೂತ್ರದಿಂದ ಕೊನೆಗೆ ಏತ್ವ. **ವ್ಯತ್ಯಯೋ ಬಹುಲಮ್**-ಎಂಬುದರಿಂದ ಶಪ್

ವಿಕರಣ. **ಅತೋ ದೀರ್ಘೋ ಯಞಿ**-ಎಂಬುದರಿಂದ ಅದಂತಾಂಗಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಪ್ರಿಯಸ್ತೋತ್ರಃ—ಪ್ರಿಯಾಣಿ ಸ್ತೋತ್ರಾಣಿ ಯಸ್ಯ ಸಃ ಪ್ರಿಯಸ್ತೋತ್ರಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**-ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವನಸ್ಪತಿಃ— ಉಭೇ ವನಸ್ಪತ್ಯಾದಿಷು** (ಪಾ. ಸೂ. ೬-೨-೧೪೦) ಎಂಬುದರಿಂದ ಪೂರ್ವೋತ್ತರಪದಗಳಿಗೆ ಏಕಕಾಲದಲ್ಲಿ ಪ್ರಕೃತಿಸ್ವರ ಬರುತ್ತದೆ. ವನಾನಾಂ ಪತಿಃ ವನಸ್ಪತಿಃ ಪಾರಸ್ಕರ ಗಣದಲ್ಲಿ ಸೇರಿರುವುದರಿಂದ ಸುಡಾಗಮ ಬರುತ್ತದೆ. ॥ ೬ ॥

——:o:——

ಸಂಹಿತಾಪಾಠಃ

ತ್ವಂ ಸೋಮ ಮಹೇ ಭಗಂ ತ್ವಂ ಯೂನ ಋತಾಯತೇ।
ದಕ್ಷಂ ದಧಾಸಿ ಜೀವಸೇ ॥ ೭ ॥

ಪದಪಾಠಃ

ತ್ವಂ । ಸೋಮ । ಮಹೇ । ಭಗಂ । ತ್ವಂ । ಯೂನೇ । ಋತಽಯತೇ ।
ದಕ್ಷಂ । ದಧಾಸಿ । ಜೀವಸೇ ॥ ೭ ॥

ಸಾಯಣಭಾಷ್ಯಂ

ಆಯುಷ್ಕಾಮೇಷ್ಟ್ಯಾಂ ದ್ವಿತೀಯಸ್ಯಾಜ್ಯಭಾಗಸ್ಯ ತ್ವಂ ಸೋಮ ಮಹೇ ಭಗಮಿತ್ಯೇಷಾನುವಾಕ್ಯಾ। ಅಥ ಕಾಮ್ಯಾ ಇತಿ ಖಂಡೇ ಸೂತ್ರಿತಂ। ಆ ನೋ ಅಗ್ನೇ ಸುಚೇತನಾ ತ್ವಂ ಸೋಮ ಮಹೇ ಭಗಂ। ಆ.-೨-೧೦.। ಇತಿ॥

ಹೇ ಸೋಮ ತ್ವಂ ಮಹೇ ಮಹತೇ ವೃದ್ಧಾಯ ಋತಾಯತೇ ಋತಂ ಯಜ್ಞಮಾತ್ಮನ ಇಚ್ಛತೇ ಪುರುಷಾಯ ಜೀವಸೇ ಜೀವಿತುಂ ದಕ್ಷಮುಪಭೋಗಸಮರ್ಥಂ ಭಗಂ ಧನಂ ದಧಾಸಿ। ವಿದಧಾಸಿ ।

**ಕರೋಷಿ । ತಥಾ ತ್ವಂ ಯೂನೇ ತರುಣಾಯ ಚ ಋತಾಯತೇ ಜೀವಿತುಂ ಧನಂ ಕರೋಷಿ ॥ ಮಹೇ । ಮಹತೇ । ಅಚ್ಛಬ್ದಲೋಪಶ್ಛಾಂದಸಃ । ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ । ಯೂನೇ । ಶ್ವಯುವಮಘೋನಾಮತದ್ಧಿತ ಇತಿ ಸಂಪ್ರಸಾರಣಂ । ಋತಾಯತೇ । ಋತಮಾತ್ಮನ ಇಚ್ಛತಿ । ಸುಪ ಆತ್ಮನಃ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ವದೀರ್ಘಯೋರ್ನಿಷೇಧಃ । ಅನ್ಯೇಷಾಮಪಿ ದೃಶ್ಯತ ಇತಿ ಸಾಂಹಿತಿಕೋ ದೀರ್ಘಃ । ಕ್ಯಜಂತಾಲ್ಲಟಃ ಶತೃ । ಶತುರನುಮೋ ನದ್ಯಜಾದೀ ಇತಿ ವಿಭಕ್ತೇರುದಾತ್ತತ್ವಂ । ಜೀವಸೇ । ಜೀವ ಪ್ರಾಣಧಾರಣೇ । ತುಮರ್ಥೇ ಸೇಸೇನಿತ್ಯಸೇ ಪ್ರತ್ಯಯಃ ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ತ್ವಂ**— ನೀನು । **ಋತಾಯತೇ**— ಯಜ್ಞಮಾಡಲಿಚ್ಛಿಸುವ । **ಮಹೇ**—ವೃದ್ಧನಿಗೂ । **ಜೀವಸೇ**—ಜೀವಿಸಲು। **ದಕ್ಷಂ**—ಅನುಭವಿಸಲು ಯೋಗ್ಯವಾದ । **ಭಗಂ**—ಧನವನ್ನು । **ದಧಾಸಿ**—ಅನುಗ್ರಹಿಸಿಕೊಡುತ್ತೀಯೆ (ಹಾಗೆಯೇ) । **ತ್ವಂ**—ನೀನು । **ಯೂನೇ**—( ಯಜ್ಞಮಾಡಲಿಚ್ಛಿಸುವ ) ತರುಣನಿಗೂ ಸಹ (ಜೀವಿಸಲು ಧನವನ್ನು ಕೊಡುತ್ತೀಯೆ)

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ಯಜ್ಞಕಾರ್ಯಗಳನ್ನು ನೆರವೇರಿಸಬೇಕೆಂದು ಆಸೆಪಡುವ ವೃದ್ಧನಿಗೂ ಅದೇ ರೀತಿ ಆ ಇಚ್ಛೆಯಿರುವ ತರುಣನಿಗೂ ಸಹ ಅವರವರು ಜೀವಿಸುವ ಸಲುವಾಗಿ ಬೇಕಾಗುವ ಮತ್ತು ಅವರು ಅನುಭವಿಸಲು ಯೋಗ್ಯವಾದ ಧನವನ್ನು ಅನುಗ್ರಹಿಸಿ ಕೊಡುತ್ತೀಯೆ.

English Translation

Soma, you bestow upon him who worships you whether old or young, wealth that he may enjoy and live.

ವಿಶೇಷವಿಷಯಗಳು

ಆಯುಷ್ಕಾಮೇಷ್ಟಿಯಲ್ಲಿ ಎರಡನೆಯ ಆಜ್ಯಭಾಗಹೋಮಮಾಡುವಾಗ **ತ್ವಂ ಸೋಮ ಮಹೇ ಭಗಂ** ಎಂಬ ಮಂತ್ರವನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಅಥ ಕಾಮ್ಯಾ ಎಂಬ ಖಂಡದ **ಆ ನೋ ಅಗ್ನೇ ಸುಚೇತುನಾ ತ್ವಂ ಸೋಮ ಮಹೇ ಭಗಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೨-೧೦).

**ಋತಾಯತೇ—ಯಜ್ಞಂ ಆತ್ಮನ ಇಚ್ಛತೇ ಪುರುಷಾಯ** । ಯಜ್ಞವನ್ನು ನೆರವೇರಿಸಿ ಅದರ ಫಲವನ್ನು ಅಪೇಕ್ಷಿಸುವ ಯಜಮಾನನಿಗೆ ಮಾತ್ರ ಧನವೂ ಶಕ್ತಿಯೂ ಲಭಿಸುತ್ತದೆ. ಇಲ್ಲದವನಿಗೆ ಇಲ್ಲ ಎಂದರ್ಥವು. ಇಲ್ಲಿ **ಋತಾಯತೇ ಮಹೇ, ಋತಾಯತೇ ತರುಣಾಯ ಚ ದಕ್ಷಂ ಉಪಭೋಗಸಮರ್ಥಂ ಧನಂ ವಿದಧಾಸಿ।** ಯಜ್ಞಮಾಡುವವನು ವೃದ್ಧನಾಗಲಿ ಅಥವಾ ತರುಣನಾಗಲಿ ಅವನಿಗೆ ಅನುಭವಿಸಲು ಯೋಗ್ಯವಾದ ಧನವನ್ನು ಅನುಗ್ರಹಿಸಿಕೊಡುತ್ತೀಯೆ ಎಂಬರ್ಥವನ್ನು ಸಾಯಣರೂ ; **ಮಹೇ ಭಗಂ, ಋತಾಯತೇ ಯೂನೇ ಬಲಂ**

**ವೃದ್ಧಿಂ ವಾ ದದಾಸಿ ।** ವೃದ್ಧನಿಗೆ ಧನವನ್ನು, ಯಜ್ಞಮಾಡಲಿಚ್ಛಿಸುವ ತರುಣನಿಗೆ ಬಲ ಅಥವಾ ವೃದ್ಧಿಯನ್ನು ಅನುಗ್ರಹಿಸಿಕೊಡುತ್ತೀಯೆ ಎಂದು ಸ್ಕಂದ ಸ್ವಾಮಿಗಳೂ ವ್ಯಾಖ್ಯಾನವನ್ನು ಮಾಡಿರುವರು. **ವೃದ್ಧಾಯ ಧನಂ ದಧಾಸಿ । ಯೂನೇ ಚ ಬಲಂಚ ಯಚ್ಛಸಿ ।** ಎಂದು ಮಾಧವರೂ ಸಹ ಸ್ಕಂದಸ್ವಾಮಿಗಳಂತೆಯೇ ವಿವರಿಸಿ ದಕ್ಷ ಶಬ್ದವನ್ನು ಭಗ ಶಬ್ದಕ್ಕೆ ವಿಶೇಷಣವನ್ನಾಗಿ ಮಾಡದೇ ಬೇರೆಬೇರೆಯಾಗಿ ಅರ್ಥವನ್ನು ಹೇಳಿರುವರು.

**ಜೀವಸೇ**—ಜೀವಿಸುವುದಕ್ಕಾಗಿ. for long life.

ವ್ಯಾಕರಣಪ್ರಕ್ರಿಯಾ

**ಮಹೇ**—ಮಹತ್ ಶಬ್ದ. ಚತುರ್ಥೀ ಏಕವಚನದಲ್ಲಿ ಮಹತೇ ಎಂದು ರೂಪವಾಗುತ್ತದೆ. ಸಂಹಿತಾದಲ್ಲಿ ಮಹತ್ ಎಂಬಲ್ಲಿರುವ ಅತಿಗೆ ಛಾಂದಸವಾಗಿ ಲೋಪ. **ಬೃಹನ್ಮಹತೋರುಪಸಂಖ್ಯಾನಮ್**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯೂನೇ**—ಯುವನ್ ಶಬ್ದ. ಚತುರ್ಥೀಏಕವಚನ ಪರವಾದಾಗ **ಶ್ವಯುವಮಘೋನಾಮತದ್ಧಿತೇ** ಎಂಬುದರಿಂದ ಸಂಪ್ರಸಾರಣವನ್ನುಹೊಂದುವ ವಕಾರವು ಪರದಲ್ಲಿರುವುದರಿಂದ ಯಕಾರಕ್ಕೆ ಸಂಪ್ರಸಾರಣವು ಬರುವುದಿಲ್ಲ. ವಕಾರಕ್ಕೆ ಉಕಾರರೂಪ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ಯೂನೇ ಎಂದು ರೂಪವಾಗುತ್ತದೆ.

**ಋತಾಯತೇ** — ಋತಮಾತ್ಮನಃ ಇಚ್ಛತಿ ಋತಾಯತೇ. **ಸುಪ ಆತ್ಮನಃ ಕ್ಯಚ್** (ಪಾ. ಸೂ ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಋತ ಎಂಬ ಸುಬಂತದ ಮೇಲೆ ಕ್ಯಚ್. **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಕ್ಯಚ್ ನಿಮಿತ್ತವಾಗಿ ಬರುವ ಈತ್ವವೂ ದೀರ್ಘವೂ ಬರುವುದಿಲ್ಲ. **ಅನ್ಯೇಷಾಮಪಿ ದೃಶ್ಯತೇ**—ಎಂಬುದರಿಂದ ಋತ ಎಂಬುದಕ್ಕೆ ಸಂಹಿತಾದಲ್ಲಿ ದೀರ್ಘ. **ಸನಾದ್ಯಂತಾ ಧಾತವಃ**—ಎಂಬುದರಿಂದ ಋತಾಯ ಎಂಬ ಕ್ಯಜಂತಕ್ಕೆ ಧಾತುಸಂಜ್ಞಾ. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ ಋತಾಯತ್ ಶಬ್ದವಾಗುತ್ತದೆ. ಚತುರ್ಥೀಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದಧಾಸಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲಟ್‌ಮಧ್ಯಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಜೀವಸೇ**—ಜೀವ ಪ್ರಾಣಧಾರಣೇ ಧಾತು. ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ**- (ಪಾ. ಸೂ. ೩-೪-೯) ಎಂಬುದರಿಂದ ಅಸೇ ಪ್ರತ್ಯಯ. ಏದಂತವಾದುದರಿಂದ **ಕೃನ್ಮೇಜಂತಃ**—ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ. ॥ ೭ ॥



ಸಂಹಿತಾಪಾಠಃ

ತ್ವಂ ನ್ಃ ಸೋಮ ವಿಶ್ವತೋ ರಕ್ಷಾ ರಾಜನ್ನಘಾಯತಃ ।
ನ ರಿಷ್ಯೇತ್ತ್ವಾವತಃ ಸಖಾ ॥ ೮ ॥

ಪದಪಾಠಃ

ತ್ವಂ । ನಃ । ಸೋಮ । ವಿಶ್ವತಃ । ರಕ್ಷ । ರಾಜನ್ । ಅಘಽಯತಃ ।
ನ । ರಿಷ್ಯೇತ್ । ತ್ವಾಽವತಃ । ಸಖಾ ॥ ೮ ॥

ಸಾಯಣಭಾಷ್ಯಂ

ಸ್ವಸ್ತ್ಯಯನ್ಯಾಂ ದ್ವಿತೀಯಸ್ಯಾಜ್ಯಭಾಗಸ್ಯ ತ್ವಂ ನಃ ಸೋಮೇತ್ಯೇಷಾನುವಾಕ್ಯಾ । ಸೂತ್ರಿತಂ ಚ । ಸ್ವಸ್ತ್ಯಯನ್ಯಾಂ ರಕ್ಷಿತವಂತಾವಗ್ನೇ ರಕ್ಷಾಣೋ ಅಂಹಸಸ್ತ್ವಂ ನಃ ಸೋಮ ವಿಶ್ವತಃ । ಆ ೨-೧೦ । ಇತಿ ॥

ಹೇ ಸೋಮ ರಾಜನ್ ರಾಜನಶೀಲ ತ್ವಮಘಾಯತಃ । ಅಘಂ ಪಾಪಂ ।ತದ್ಧೇತುಕಂ ದುಃಖ ಮಸ್ಮಾಕಂ ಕರ್ತುಮಿಚ್ಛತೋ ವಿಶ್ವತಃ ಸರ್ವಸ್ಮಾದಪಿ ಪುರುಷಾನ್ನೋಽಸ್ಮಾನ್ರಕ್ಷ । ಪಾಲಯ । ತ್ವಾವತ-ಸ್ತ್ವತ್ಸದೃಶಸ್ಯ ಸಖಾ ಸಖ್ಯಂ ಪ್ರಾಪ್ತಃ ಪುರುಷೋ ನ ರಿಷ್ಯೇತ್ । ನಹಿ ವಿನಶ್ಯೇತ್ । ಕಿಮು ವಕ್ತವ್ಯಂ ತ್ವತ್ಸಖಾ ನ ವಿನಶ್ಯತೀತಿ ॥ ಅಘಾಯತಃ । ಅಘಂ ಪಾಪಂ ಪರೇಷಾಮಿಚ್ಛತೀತ್ಯಘಾಯನ್ । ಛಂದಸಿ ಪರೇಚ್ಛಾಯಾಮಪೀತಿ ಕ್ಯಚ್ । ಅಶ್ವಾಘಸ್ಯಾದಿತ್ಯಾತ್ವಂ । ರಿಷ್ಯೇತ್ । ರುಷ ರಿಷ ಹಿಂಸಾಯಾಂ । ತ್ವಾವತಃ । ವತುಪ್ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಮಿತಿ ವತುಪ್ । ಪ್ರತ್ಯಯೋತ್ತರಪದಯೋಶ್ಚೇತಿ ಮಪರ್ಯಂತಸ್ಯ ತ್ವಾದೇಶಃ । ಆ ಸರ್ವನಾಮ್ನ ಇತ್ಯಾತ್ವಂ ॥

ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ । **ರಾಜನ್** - ಪ್ರಕಾಶಮಾನನಾದ । **ತ್ವಂ**—ನೀನು । **ಅಘಾಯತಃ**—ನಮಗೆ ಕೆಡಕನ್ನು ಬಯಸಿ ಹಿಂಸಿಸತಕ್ಕ । **ವಿಶ್ವತಃ**—ಸಕಲವಾದ ಶತ್ರುವಿನಿಂದಲೂ । **ನಃ**—ನಮ್ಮನ್ನು । **ರಕ್ಷ**—ಕಾಪಾಡು । **ತ್ವಾವತಃ** - ನಿನಗೆ ಸದೃಶನಾದ ದೇವತೆಯ । **ಸಖಾ**—ಸ್ನೇಹಿತನಾದ ಪುರುಷನೂ । **ನ ರಿಷ್ಯೇತ್**—ಹಿಂಸೆಗೆ ಒಳಗಾಗುವುದಿಲ್ಲ. (ನಾಶಹೊಂದುವುದಿಲ್ಲ ಅಂದರೆ ಸಾಕ್ಷಾತ್ ನಿನ್ನ ಸ್ನೇಹಿತರೇ ಆದ ನಮಗೆ ನಾಶವೇ ಇಲ್ಲ.)

ಭಾವಾರ್ಥ

ಎಲೈ ಸೋಮದೇವನೇ, ಪ್ರಕಾಶಮಾನನಾದ ನೀನು ನಿನ್ನ ಶಕ್ತಿಯಿಂದ ನಮಗೆ ಕೆಡಕನ್ನು ಬಯಸಿ ಹಿಂಸಿಸತಕ್ಕ ಸಕಲ ಶತ್ರುವನ್ನೂ ನಾಶಮಾಡಿ ನಮ್ಮನ್ನು ರಕ್ಷಿಸು. ನಿನಗೆ ಸಮಾನವಾದ ಗುಣವುಳ್ಳ ಯಾವ ದೇವತೆಯ ಸ್ನೇಹಿತನೂ ನಾಶವಾಗಲಾರನು. ಹಾಗಿರುವಾಗ ಸಾಕ್ಷಾತ್ತಾಗಿ ನಿನ್ನ ಸ್ನೇಹಿತರೇ ಆದ ನಮಗೆ ನಾಶ ವೆಂಬುದಿಲ್ಲವೇ ಇಲ್ಲ.

## English Translation

O King Soma, defend us from every one seeking to harm us; the friend of one like you can never perish.

ವಿಶೇಷ ವಿಷಯಗಳು

ಸ್ವಸ್ತ್ಯಯನದಲ್ಲಿ ಎರಡನೆಯ ಆಜ್ಯಭಾಗಹೋಮದ ಪುರೋನುವಾಕ್ಯಾ ಮಂತ್ರಕ್ಕಾಗಿ **ತ್ವಂ ನಃ ಸೋಮ** ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಸ್ವಸ್ತ್ಯಯನ್ಯಾಂ ರಕ್ಷಿತವಂತಾವಗ್ನೇ ರಕ್ಷಾಣೋ ಅಂಹಸಸ್ತ್ವಂ ನಃ ಸೋಮ ವಿಶ್ವತಃ** ಎಂಬ ಸೂತ್ರವು ನಿರ್ದೇಶಿಸುವುದು. (ಆ. ೨-೧೦)

**ಅಘಾಯತಃ—ಅಘಂ ಪಾಪಂ ತದ್ಧೇತುಕಂ ದುಃಖಂ ಅಸ್ಮಾಕಂ ಕರ್ತುಮಿಚ್ಛತಃ ।** ಪಾಪ ಹೇತುಕವಾದ ದುಃಖವನ್ನು ನಮಗೆ ಉಂಟುಮಾಡಿ ನಮ್ಮನ್ನು ಹಿಂಸಿಸಲು ಇಚ್ಛಿಸುವ.

**ವಿಶ್ವತಃ**—ಸಮಸ್ತ ಶತ್ರುಗಳಿಂದಲೂ (ನಮ್ಮನ್ನು ರಕ್ಷಿಸು)

**ತ್ವಾವತಃ ಸಖಾ—ತ್ವಾವತಃ ।** ನಿನಗೆ ಸಮಾನನಾದವನ **ಸಖಾ**— ಸ್ನೇಹಿತನೂ (ಹಿಂಸೆಗೆ ಒಳಗಾಗು ವುದಿಲ್ಲ) **ಕಿಮು ವಕ್ತವ್ಯಂ ತ್ವತ್ಸಖಾ ನ ವಿನಶ್ಯತೀತಿ ।** ಯಾವಾಗ ನಿನಗೆ ಸದೃಶನಾದ ದೇವತೆಯ ಸ್ನೇಹಿತನೂ ಕೂಡ ಹಿಂಸಿತನಾಗುವುದಿಲ್ಲವೋ ಆಗ ಸಾಕ್ಷಾತ್ ನಿನ್ನ ಸ್ನೇಹಿತರೇ ಆದ ನಮಗೆ ಶತ್ರುಗಳಿಂದ ಹಿಂಸೆಯೇ ಇಲ್ಲವೆಂದರ್ಥವು.

**ನ ರಿಷ್ಯೇತ್—ರಿಷ ಹಿಂಸಾಯಾಂ।** ಹಿಂಸೆಗೆ ಒಳಗಾಗುವ ಸಂಭವವೇ ಇಲ್ಲವೆಂದರ್ಥವು. ಆದುದರಿಂದಲೇ-

**ವೃಣೀಮಹೇ ಸಖ್ಯಾಯ ವೃಣೀಮಹೇ ಯುಜ್ಯಾಯ ।**
(ಋ. ಸಂ. ೯-೬೬-೧೮)

ಎಂಬುದಾಗಿ ಅನೇಕ ಕಡೆಗಳಲ್ಲಿ ಸೋಮನ ಸಖ್ಯಕ್ಕೂ ಅವನ ಸಹಾಯಕ್ಕಾಗಿಯೂ ಪ್ರಾರ್ಥನೆಗಳಿರುತ್ತವೆ.

ವ್ಯಾಕರಣಪ್ರಕ್ರಿಯಾ

**ರಕ್ಷ**—ರಕ್ಷ ಪಾಲನೇ ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್. **ಸೇರ್ಹ್ಯಪಿಚ್ಚ** — ಎಂಬುದರಿಂದ ಅದಕ್ಕೆ ಹಿ ಆದೇಶ. ಶಪ್ ವಿಕರಣ. **ಅತೋ ಹೇಃ**—ಸೂತ್ರದಿಂದ ಹಿಗೆ ಲುಕ್. **ದ್ವ್ಯಚೋಽ- ತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ದ್ವ್ಯಚ್ಕವಾಗಿ ಇರುವುದರಿಂದ ಸಂಹಿತಾದಲ್ಲಿ ದೀರ್ಘ.

ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ.

**ಅಘಾಯತಃ**—ಅಘಂ ಪಾಪಂ ಪರೇಷಾಂ ಇಚ್ಛತಿ ಇತಿ ಅಘಾಯನ್ **ಛಂದಸಿ ಪರೇಚ್ಛಾಯಾಮಪಿ** ಎಂಬ ವಚನದಿಂದ ಪರೇಚ್ಛಾ ತೋರುವಾಗಲೂ ಅಘ ಎಂಬ ಸುಬಂತದ ಮೇಲೆ ಕ್ಯಚ್‌ಪ್ರತ್ಯಯ. **ಕ್ಯಚಿಚ**—ಸೂತ್ರದಿಂದ ಈತ್ವ ಪ್ರಾಪ್ತವಾದರೆ **ನ ಛಂದಸ್ಯಪುತ್ರಸ್ಯ**—ಎಂಬುದರಿಂದ ನಿಷೇಧ. **ಅಶ್ವಾಘಸ್ಯಾತ್** (ಪಾ. ಸೂ ೭-೪-೩೭) ಎಂಬುದರಿಂದ ಕ್ಯಚ್ ಪರವಾದಾಗ ಅಘ ಶಬ್ದಕ್ಕೆ ಆತ್ವ. ಅಘಾಯತ್ ಶಬ್ದವಾಗುತ್ತದೆ. ಪಂಚಮೀ ಏಕವಚನಾಂತ ರೂಪ. **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಶತೃವಿನ ಪರದಲ್ಲಿರುವ ಅಜಾದಿವಿಭಕ್ತಿಗೆ (ಅಸ್) ಉದಾತ್ತಸ್ವರ ಬರುತ್ತದೆ.

**ರಿಷ್ಯೇತ್**—ರುಷ **ರಿಷ** ಹಿಂಸಾಯಾಮ್. ಧಾತು. ವಿಧಿಲಿಙ್ ಪ್ರಥಮಪುರುಷದಲ್ಲಿ **ಇತಶ್ಚ**—ಸೂತ್ರದಿಂದ ತಿಪಿನ ಇಕಾರಕ್ಕೆ ಲೋಪ. ಯಾಸುಟಾಗಮ. ಶ್ಯನ್‌ವಿಕರಣ. **ಅತೋ ಯೇಯಃ**—ಎಂಬುದರಿಂದ ಇಯಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತ್ವಾವತಃ**—ತ್ವತ್ ಸದೃಶಃ ತ್ವಾವಾನ್. **ವತುಪ್ ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯೇ ಉಪಸಂಖ್ಯಾನಮ್**—ಎಂಬ ವಚನದಿಂದ ಇಲ್ಲಿ ಸಾದೃಶ್ಯಾರ್ಥದಲ್ಲಿ ಮತುಪ್‌ಪ್ರತ್ಯಯ. ಯುಷ್ಮದ್+ ಮತುಪ್ ಎಂದಿರುವಾಗ **ಪ್ರತ್ಯಯೋತ್ತರಪದಯೋಶ್ಚ**-(ಪಾ. ಸೂ. ೭-೨-೯೮) ಎಂಬುದರಿಂದ ಯುಷ್ಮದಿನ ಮಪರ್ಯಂತಕ್ಕೆ ತ್ವ ಆದೇಶ. **ಆಸರ್ವನಾಮ್ನಃ**-(ಪಾ. ಸೂ. ೬-೩-೯೧) ದೃಗ್‌ದೃಶ ವತು ಇವು ಪರವಾದಾಗ ಸರ್ವನಾಮ ಶಬ್ದಗಳಿಗೆ ಆತ್ವ ಎಂಬುದರಿಂದ ಇಲ್ಲಿ ವತುಪ್ ಪರವಾದುದರಿಂದ ಆತ್ವ. ತ್ವಾವತ್ ಶಬ್ದವಾಗುತ್ತದೆ. ಷಷ್ಠೀಏಕವಚನಾಂತರೂಪ. ವತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ॥ ೮ ॥

---

ಸಂಹಿತಾಪಾಠಃ

ಸೋಮ ಯಾಸ್ತೇ ಮಯೋಭುವ ಊತಯಃ ಸಂತಿ ದಾಶುಷೇ।
ತಾಭಿರ್ನೋಽವಿತಾ ಭವ ॥ ೯ ॥

ಪದಪಾಠಃ

**ಸೋಮ । ಯಾಃ । ತೇ । ಮಯಃಽಭುವಃ । ಊತಯಃ । ಸಂತಿ । ದಾಶುಷೇ ।**
**ತಾಭಿಃ । ನಃ । ಅವಿತಾ । ಭವ ॥ ೯ ॥**

### ಸಾಯಣ ಭಾಷ್ಯಂ

ಸೋಮಪ್ರವಹಣೇ ಸೋಮ ಯಾಸ್ತ ಇತಿ ತೃಚೋಽನುವಕ್ತವ್ಯಃ । ಸೂತ್ರಿತಂ ಚ । ಸೋಮ ಯಾಸ್ತೇ ಮಯೋಭುವ ಇತಿ ತಿಸ್ರಃ । ಆ. ೪-೪ ಇತಿ ॥ ಆಗ್ರಯಣೇ ಸೌಮ್ಯಸ್ಯ ಸೋಮ ಯಾಸ್ತ ಇತ್ಯೇಷಾನುವಾಕ್ಯಾ । ಸೂತ್ರಿತಂ ಚ । ಸೋಮ ಯಾಸ್ತೇ ಮಯೋಭುವೋ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ । ೨-೯ । ಇತಿ ॥ ಅಶ್ವಮೇಧೇಽಪಿ ಪೌಷ್ಣ್ಯಮಿಷ್ಟೌ ದ್ವಿತೀಯಸ್ಯಾಜ್ಯಭಾಗಸ್ಯೈಷಾನುವಾಕ್ಯಾ । ಸೂತ್ರಿತಂ ಚ । ತ್ವಮಗ್ನೇ ಸಪ್ರಥಾ ಅಸಿ ಸೋಮ ಯಾಸ್ತೇ ಮಯೋಭುವ ಇತಿ ಸದ್ವಂತೌ । ಆ. ೧೦-೬. । ಇತಿ ॥

ಹೇ ಸೋಮ ತೇ ತವ ಸಂಬಂಧಿನ್ಯೋ ದಾಶುಷೇ ಚರುಪುರೋಡಾಶಾದೀನಿ ದತ್ತವತೇ ಯಜಮಾನಾಯ ಮಯೋಭುವೋ ಮಯಸಃ ಸುಖಸ್ಯ ಭಾವಯಿತ್ರ್ಯೋ ಯಾ ಊತಯೋ ರಕ್ಷಾಃ ಸಂತಿ ವಿದ್ಯಂತೇ ತಾಭೀ ರಕ್ಷಾಭಿರ್ನೋಽಸ್ಮಾಕಮವಿತಾ ರಕ್ಷಿತಾ ಭವ ॥ ಮಯೋಭುವಃ । ಅಸ್ಯೋತಿವಿಶೇಷಣತ್ವೇನ ಸ್ತ್ರೀಲಿಂಗತ್ವೇ ಭುವಶ್ಚ । ಪಾ. ೪-೧-೪೭ । ಇತಿ ಙೀಷ್ ಪ್ರಾಪ್ನೋತಿ । ತದ್ವೋತೋ ಗುಣವಚನಾದಿತ್ಯಸ್ಮಾದುತ ಇತಿ ತಪರಕರಣಸ್ಯಾನುವರ್ತನಾನ್ನ ಭವತಿ ॥

### ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ । **ತೇ**—ನಿನಗೆ ಸೇರಿದ । **ದಾಶುಷೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । **ಮಯೋಭುವಃ**—ಸುಖಹೇತುಕಗಳಾದ । **ಯಾಃ ಊತಯಃ**—ಯಾವ ಯಾವ ರಕ್ಷಣಾ ಸಾಧನಗಳು । **ಸಂತಿ**—ಇವೆಯೋ । **ತಾಭಿಃ** – ಆ ರಕ್ಷಣಾ ಸಾಧನಗಳೊಂದಿಗೆ । **ನಃ**— ನಮ್ಮ । **ಅವಿತಾ**—ರಕ್ಷಕನಾಗಿ । **ಭವ**—ಆಗು ॥

### ಭಾವಾರ್ಥ

ಎಲೈ ಸೋಮದೇವನೇ, ನಿನಗೆ ಹವಿಸ್ಸನ್ನು ಅರ್ಪಿಸಿ ನಿನ್ನ ಭಕ್ತನಾದ ಯಜಮಾನನು ತನ್ನ ರಕ್ಷಣೆಗೆ ನಿನ್ನನ್ನೇ ನಂಬಿದ್ದಾನೆ. ಅವನಿಗೆ ಸುಖ ಹೇತುಗಳಾದ ಯಾವ ಯಾವ ರಕ್ಷಣಾ ಸಾಧನಗಳಿವೆಯೋ ಅವುಗಳೊಂದಿಗೆಲ್ಲಾ ನಮ್ಮ ರಕ್ಷಕನಾಗಿರು.

## English Translation

Soma, be our protector with these assistances which are sources of happiness to the offerer of oblations.

### ॥ ವಿಶೇಷವಿಷಯಗಳು ॥

ಸೋಮಪ್ರವಹಣದಲ್ಲಿ **ಸೋಮ ಯಾಸ್ತೇ** ಎಂದು ಮೊದಲಾಗುವ ಮೂರು ಋಕ್ಕುಗಳು ಪುರೋನುವಾಕ್ಯಾಮಂತ್ರಗಳೆಂದು ಆಶ್ವಲಾಯನ ಶ್ರೌತಸೂತ್ರದ **ಸೋಮ ಯಾಸ್ತೇ ಮಯೋಭುವ ಇತಿ ತಿಸ್ರಃ** ಎಂಬ ಸೂತ್ರವು ನಿರ್ದೇಶಿಸುವುದು. ಮತ್ತು ಆಗ್ರಯಣೇಷ್ಟಿಯಲ್ಲಿ ಸೋಮದೇವತಾಕವಾದ ಹೋಮದಲ್ಲಿ **ಸೋಮ**

**ಯಾಸ್ತೇ** ಎಂಬ ಋಕ್ಕು ಪುರೋನುವಾಕ್ಯಾ ಮಂತ್ರವೆಂದು ಆಶ್ವಲಾಯನ ಶ್ರೌತಸೂತ್ರದ **ಸೋಮ ಯಾಸ್ತೇ ಮಯೋಭುವೋ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ** ಎಂಬ ಸೂತ್ರವು ನಿರ್ದೇಶಿಸುವುದು. (ಆ. ೨-೯) ಅಶ್ವಮೇಧಯಾಗನಲ್ಲಿಯೂ ಕೂಡ ಪೂಷದೇವತಾಕವಾದ ಇಷ್ಟಿಯಲ್ಲಿ ಎರಡನೆಯ ಆಜ್ಯಭಾಗಹೋಮದ ಪುರೋನು ವಾಕ್ಯಾಮಂತ್ರಕ್ಕಾಗಿ ಈ ಋಕ್ಕನ್ನು ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ತ್ವಮಗ್ನೇ ಸಪ್ರಥಾ ಅಸಿ ಸೋಮ ಯಾಸ್ತೇ ಮಯೋಭುವ ಇತಿ ಸದ್ವಂತೌ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೧೦-೬)

**ದಾಶುಷೇ—ದಾಶೃ ದಾನೇ** । ಹವಿಸ್ಸನ್ನು ಅರ್ಪಿಸುವ ಯಜ್ಞಕರ್ತನಿಗೆ.

**ಊತಯಃ—ಊತಿರವನಾತ್** । (ನಿ. ೫-೩) ರಕ್ಷಣೆ ಎಂಬ ಅರ್ಥವನ್ನು ಕೊಡುವ **ಅವ** ಧಾತುವಿನಿಂದ **ಊತಿ** ಶಬ್ದದ ನಿಷ್ಪತ್ತಿಯಾಗಿದೆಯೆಂದು ನಿರುಕ್ತಕಾರರು ವಿವರಿಸಿ **ಆ ತ್ವಾ ರಥಂ ಯಥೋತಯೇ** ( ಋ. ಸಂ. ೮-೬೮-೧ ) ಎಂಬ ಋಕ್ಕನ್ನು ಉದಹರಿಸುತ್ತಾರೆ. **ಊತಯಃ** ಎಂದರೆ ರಕ್ಷಣೆಗಳು ಎಂದರ್ಥವು. ಎಂತಹ ರಕ್ಷಣೆಗಳೆಂದರೆ ;—

**ಮಯೋಭುವಃ—ಮಯಸಃ ಸುಖಸ್ಯ ಭಾವಯಿತ್ರ್ಯಃ**। ಸುಖಹೇತುಕಗಳಾದ ರಕ್ಷಣೆಗಳು ಎಂದರ್ಥವು. ಸೋಮನಿಂದ ಲಭಿಸತಕ್ಕ ಸುಖದ ಸ್ವರೂಪವನ್ನು ಋ.ಸಂ.೯-೧೧೩-೭ ರಿಂದ ೧೧ರ ವರೆಗಿನ ಋಕ್ಕುಗಳಲ್ಲಿ ವಿವರಿಸಿದೆ. ಪ್ರಾಯಶಃ ಋಕ್ಸಂಹಿತೆಯಲ್ಲೆಲ್ಲಾ ದೇವತೆಗಳನ್ನು ಉದ್ದೇಶಿಸಿ ಮಾಡುವ ಪ್ರಾರ್ಥನೆಗಳೆಲ್ಲವೂ ಸುಖವನ್ನು ನಿರೀಕ್ಷಿಸಿಯೇ ನಡೆದರೂ ಕೂಡ ಸೋಮದೇವತಾಪ್ರಾರ್ಥನೆಯಲ್ಲಿ ವಿವರಿಸುವ ಸುಖದ ಸ್ವರೂಪವು ಅತ್ಯಂತ ಶ್ರೇಷ್ಠತರಗತಿಗೆ ಸೇರಿದುದಾಗಿದೆ.

**ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಂ ।**
**ತಸ್ಮಿನ್ಮಾಂ ಧೇಹಿ ಪವಮಾನಾಮೃತೇ ಲೋಕೇ ಅಕ್ಷಿತ ಇಂದ್ರಾಯೆಂದೋ ಪರಿ ಸ್ರವ ॥**
( ಋ. ಸಂ. ೯-೧೧೩-೭ )

**ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ ।**
**ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥**
( ಋ. ಸಂ. ೯-೧೧೩-೧೦ )

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥**
( ಋ. ಸಂ. ೯-೧೧೩-೧೧ )

ಈ ಋಕ್ಕುಗಳಲ್ಲಿ ವಿವರಿಸುವ ಸುಖದ ಸ್ವರೂಪವು ಸಾಧಾರಣವಾಗಿ ವರ್ಣಿತವಾಗಿರುವ ಸ್ವರ್ಗ ಸುಖಕ್ಕಿಂತಲೂ ಮೀರಿದುದಾಗಿದೆ ನಿಕಾಮವಾದಂತಹ ಆನಂದ, ಮೋದ, ಪ್ರಮೋದಗಳು ಅತ್ಯಂತ ಶ್ರೇಷ್ಠವಾದ ಸುಖಗಳಾಗಿವೆ.

### ವ್ಯಾಕರಣಪ್ರಕ್ರಿಯಾ

**ಸೋಮ—**ಸಂಬುದ್ಧಿ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ಅಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೮೯) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಮಯೋಭುವಃ**—ಮಯಸಃ ಭಾವಯಿತ್ರ್ಯಃ ಮಯೋಭುವಃ. ಮಯಸ್ ಉಪಪದವಾಗಿರುವಾಗ ಭೂ ಧಾತುವಿಗೆ ಕ್ವಿಪ್. ಜುಸ್ಯಪಿ ಇಲ್ಲಿ ಊತಿ ಶಬ್ದಕ್ಕೆ ವಿಶೇಷಣವಾದುದರಿಂದ ಇದಕ್ಕೆ ಸ್ತ್ರೀತ್ವದಲ್ಲಿ **ಭುವಶ್ಚ** (ಪಾ. ಸೂ. ೪-೧-೪೭) ಎಂಬುದರಿಂದ ಜೀಷ್ ಬರಬೇಕಾಗುತ್ತದೆ. ಆದರೆ ಅಲ್ಲಿ **ವೋತೋಗುಣವಚನಾತ್** (ಪಾ. ಸೂ. ೪-೧-೪೪) ಎಂಬುದರಿಂದ ಉತಃ ಎಂಬ ತಪರನಿಶಿಷ್ಟವಾದ ಪದವು ಅನುವೃತ್ತವಾಗುವುದರಿಂದ ಇಲ್ಲಿ ದೀರ್ಘವಿರುವುದರಿಂದ ಬರುವುದಿಲ್ಲ. **ಅಚಿಶ್ನುಧಾತುಭ್ರುವಾಂ**—(ಪಾ. ಸೂ. ೬-೪-೭೭) ಎಂಬುದರಿಂದ ಜಸ್‌ಪರವಾದಾಗ ಉವಜಾದೇಶ.

**ಸಂತಿ**—ಅಸ ಭುವಿ ಧಾತು. ಲಟ್ ಪ್ರಥಮಪುರುಷಬಹುವಚನದಲ್ಲಿ **ಶ್ನಸೋರಲ್ಲೋಪಃ**—ಎಂಬುದರಿಂದ ಅಸನಿನ ಅಕಾರಕ್ಕೆ ಲೋಪ. ಯಾಃ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ ತಿಜಂತನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಆದ್ಯುದಾತ್ತವಾಗುತ್ತದೆ.

**ದಾಶುಷೇ**—ಡುದಾಞ್ ದಾನೇ ಧಾತು. **ದಾಶ್ವಾನ್ ಸಾಹ್ವಾನ್** — (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀಏಕವಚನದಲ್ಲಿ **ವಸೋಃ ಸಂಪ್ರಸಾರಣಮ್**—ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. **ಶಾಸಿವಸಿಘಸೀನಾಂ ಚ**—ಎಂಬುದರಿಂದ ವಸುವಿನ ಸಕಾರಕ್ಕೆ ಷತ್ವ. ದಾಶುಷೇ ಎಂದು ರೂಪವಾಗುತ್ತದೆ.

**ಅವಿತಾ**—ಅವ ರಕ್ಷಣೇ ಧಾತು. ಕರ್ತ್ರರ್ಥದಲ್ಲಿ ತೃಚ್‌ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ಇಡಾಗಮ. ಅವಿತೃಶಬ್ದವಾಗುತ್ತದೆ. ಪ್ರಥಮಾವಿಭಕ್ತಿ ಸುಪರವಾದಾಗ ಅನಜಾದೇಶ. **ಅಪ್‌ತೃನ್**—ಸೂತ್ರದಿಂದ ಉಪಧಾದೀರ್ಘ. ಸುಲೋಪ. ನಲೋಪ. **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೯ ॥



ಸಂಹಿತಾಪಾಠಃ

ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ ।
ಸೋಮ ತ್ವಂ ನೋ ವೃಧೇ ಭವ ॥ ೧೦ ॥

॥ ಪದಪಾಠಃ ॥

ಇಮಂ । ಯಜ್ಞಂ । ಇದಂ । ವಚಃ । ಜುಜುಷಾಣಃ । ಉಪ ಽ ಆಗಹಿ ।
ಸೋಮ । ತ್ವಂ । ನಃ । ವೃಧೇ । ಭವ ॥ ೧೦ ॥

### ಸಾಯಣಭಾಷ್ಯಂ

ಹೇ ಸೋಮ ತ್ವಮಿಮಮಸ್ಮಾಭಿಃ ಕ್ರಿಯಮಾಣಂ ಯಜ್ಞಮಿದಂ ವಚ ಇದಾನೀಂ ಕ್ರಿಯಮಾಣಂ ಸ್ತುತಿಲಕ್ಷಣಂ ವಚನಂ ಜುಜುಷಾಣಃ ಸೇವಮಾನಃ ಸನ್ ಉಪಾಗಹಿ । ಉಪಾಗಚ್ಛ । ಪ್ರಾಚೀನವಂಶಲಕ್ಷಣಂ ಗೃಹಂ ಪ್ರಾಪ್ನುಹಿ । ಪ್ರಾಪ್ಯ ಚ ನೋಽಸ್ಮಾಕಂ ವೃಧೇ ಯಜ್ಞಸ್ಯ ವರ್ಧನಾಯ ಭವ ॥ ಜುಜುಷಾಣಃ । ಜುಷೀ ಪ್ರೀತಿಸೇವನಯೋಃ । ಛಂದಸಿ ಲಿಟ್ । ಲಿಟಃ ಕಾನಚ್ । ಚಿತ ಇತ್ಯಂತೋದಾತ್ತತ್ವಂ । ಉಪಾಗಹಿ । ಗಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾ ಮಕಾರಲೋಪಃ । ಅಸಿದ್ಧವದತ್ರಾ ಭಾದಿತ್ಯಸ್ಯಾಸಿದ್ಧತ್ವಾದ್ಧೇರ್ಲುಗಭಾವಃ। ಗತಿರ್ಗತೌ । ಪಾ. ೮-೧-೭೦ । ಇತಿ ಪೂರ್ವಸ್ಯ ಗತೇರ್ನಿಘಾತಃ ॥

### ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ, । **ತ್ವಂ**—ನೀನು । **ಇಮಂ ಯಜ್ಞಂ**—(ನಾವು ನೆರವೇರಿಸತಕ್ಕ) ಈ ಯಜ್ಞವನ್ನೂ । **ಇದಂ ವಚಃ**—ಈ ಸ್ತೋತ್ರರೂಪವಾದ ವಾಕ್ಯನ್ನೂ । **ಜುಜುಷಾಣಃ**—(ಸ್ವೀಕರಿಸಿ) ಸೇವಿಸುತ್ತಾ । **ಉಪಾಗಹಿ** — ( ನಮ್ಮ ಈ ಯಜ್ಞಗೃಹಕ್ಕೆ) ದಯಮಾಡು. । **ನಃ**—ನಮ್ಮ । **ವೃಧೇ**—(ಯಜ್ಞದ) ಅಭಿವೃದ್ಧಿಗಾಗಿ । **ಭವ**—(ಅನುಗ್ರಹವುಳ್ಳವನಾಗಿ) ಆಗು. ।

### ಭಾವಾರ್ಥ

ಎಲೈ ಸೋಮದೇವನೇ, ನಾವು ನೆರವೇರಿಸತಕ್ಕ ಈ ಯಜ್ಞವನ್ನೂ ಮತ್ತು ಈ ಸ್ತೋತ್ರರೂಪವಾದ ವಾಕ್ಯನ್ನೂ ಸ್ವೀಕರಿಸಿ ಸೇವಿಸುತ್ತಾ ನಮ್ಮ ಈ ಯಜ್ಞಗೃಹಕ್ಕೆ ದಯಮಾಡು. ಮತ್ತು ನಮ್ಮ ಯಜ್ಞದ ಬೆಳವಣಿಗೆಗೆ ಸಹಾಯಕನಾಗಿರು.

### English Translation

O Soma, accepting this our sacrifice, and this our praise, approach us and be to us as the angmenter of our rite.

### ವಿಶೇಷವಿಷಯಗಳು

**ಜುಜುಷಾಣಃ—ಜುಷೀ ಪ್ರೀತಿಸೇವನಯೋಃ ।** ಸೇವಿಸುವವನಾಗಿ ಎಂದರೆ ನಮ್ಮ ಯಜ್ಞವನ್ನೂ ನಮ್ಮ ಸ್ತೋತ್ರವಾಕ್ಯವನ್ನೂ ಅಭಿಮಾನದಿಂದ ಸೇವಿಸುತ್ತಾ.

**ವೃಧೇ—ವೃಧು ವೃದ್ಧೌ ।** ಅಭಿವೃದ್ಧಿಗಾಗಿ ನಮ್ಮ ಯಜ್ಞದ ಬೆಳವಣಿಗೆಗಾಗಿ.

**ಮತ್ಸಿ ಸೋಮ ವರುಣಂ ಮತ್ಸಿ ಮಿತ್ರಂ ಮತ್ಸೀಂದ್ರಮಿಂದೋ ಪವಮಾನ ವಿಷ್ಣುಂ ।**
**ಮತ್ಸಿ ಶರ್ಧೋ ಮಾರುತಂ ಮತ್ಸಿ ದೇವಾನ್ ಮತ್ಸಿ ಮಹಾಮಿಂದ್ರಮಿಂದೋ ಮದಾಯ ॥**
(ಋ. ಸಂ. ೯-೯೦-೫)

ಇತ್ಯಾದಿ ಋಕ್ಕುಗಳಲ್ಲಿ ಹೇಳಿರುವಂತೆ ಯಜ್ಞನ ಚರಮಪ್ರಯೋಜನಕ್ಕೆ ಸಾಧನವಾದ ಸಕಲ ದೇವತೆಗಳ ತೃಪ್ತಿಯೂ ಸೋಮಪಾನದಿಂದ ಸಂಭವಿಸುವಾಗ ಸೋಮವೇ ಯಜ್ಞದ ಅಭಿವೃದ್ಧಿಗೆ ಮುಖ್ಯವಾದ ಕಾರಣವು. ಆದುದರಿಂದ ನಮ್ಮ ಯಜ್ಞವು ವೃದ್ಧಿಯಾಗುವಂತೆ ಮಾಡು ಎಂಬ ಪ್ರಾರ್ಥನೆಯಿರುವುದು. ಅದೂ ಅಲ್ಲದೇ ಋ. ಸಂ. ೯-೨-೧೦ ೯-೬-೮ ; ಮುಂತಾದ ಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಸೋಮನೇ **ಯಜ್ಞಾತ್ಮ**ನಾಗಿರುವನು. ಆದುದರಿಂದ ಯಜ್ಞದ ಬೆಳೆವಣಿಗೆಗೆ ಅವನೇ ಕಾರಣನು

### ವ್ಯಾಕರಣಪ್ರಕ್ರಿಯಾ

**ಜುಜುಷಾಣಃ**—ಜುಷೀ ಪ್ರೀತಿಸೇವನಯೋಃ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ**—ಎಂಬುವರಿಂದ ಲಿಟ್. **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಲಿಟ ಗೆ ಕಾನಚ್. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ, ಅಭ್ಯಾಸಕ್ಕೆ ಹಲಾದಿಶೇಷ. **ಅಟ್‌ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ. **ಚಿತಃ** (ಪಾ. ಸೂ. ೬-೧ ೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಉಪಾಗಹಿ**—ಉಪ+ಆ ಉಪಸರ್ಗಗಳು. (ಗತಿಶ್ಚ) ಗಮ್‌ಲೃ ಗತೌ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್‌ಪ್ರತ್ಯಯ. **ಸೇರ್ಹ್ಯಪಿಚ್ಚ**—ಎಂಬುದರಿಂದ ಅದಕ್ಕೆ ಹಿ ಆದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. ಹಿಗೆ ಅಪಿತ್ವವಿಧಾನದಿಂದ ಙಿತ್ತಾಗುವುದರಿಂದ **ಅನುದಾತ್ತೋಪದೇಶ**-(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಲೋಪ. **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೨) ಎಂಬುದರಿಂದ ಮಲೋಪವು ಅಸಿದ್ಧವಾಗುವುದರಿಂದ **ಅತೋ ಹೇಃ**—ಸೂತ್ರದಿಂದ ಹಿಗೆ ಲೋಪ ಬರುವುದಿಲ್ಲ. ಇಲ್ಲಿ ಉಪ ಎಂಬುದಕ್ಕೆ ಗತಿಸಂಜ್ಞೆಯುಳ್ಳ ಆ ಎಂಬುದು ಪರದಲ್ಲಿರುವುದರಿಂದ **ಗತಿರ್ಗತೌ** (ಪಾ. ಸೂ. ೮-೧-೭೦) ಎಂಬುದರಿಂದ ಪೂರ್ವದ ಗತಿಗೆ (ಉಪ) ನಿಘಾತಸ್ವರ ಬರುತ್ತದೆ.

**ವೃಧೇ**—ವೃಧು ವೃದ್ಧೌ ಧಾತು. ಕ್ವಿಪ್‌ಪ್ರತ್ಯಯ ಮಾಡಿದಾಗ ವೃಧ್ ಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತರೂಪ. **ಸಾವೇಕಾಚಃ ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ‖ ೧೦ ‖



‖ ಸಂಹಿತಾಪಾಠಃ ‖

ಸೋಮ ಗೀರ್ಭಿಷ್ಟ್ವಾ ವಯಂ ವರ್ಧಯಾಮೋ ವಚೋವಿದಃ ।
ಸುಮೃಳೀಕೋ ನ ಆ ವಿಶ ‖ ೧೧ ‖

॥ ಪದಪಾಠಃ ॥

ಸೋಮ । ಗೀಃऽಭಿಃ । ತ್ವಾ । ವಯಂ । ವರ್ಧಯಾಮಃ । ವಚಃऽವಿದಃ ।
ಸುऽಮೃಳೀಕಃ । ನಃ । ಆ । ವಿಶ ॥ ೧೧ ॥

॥ ಸಾಯಣಭಾಷ್ಯಂ ॥

ದರ್ಶಯಾಗೇ ಸೌಮ್ಯಸ್ಯಾಜ್ಯಭಾಗಸ್ಯ ಸೋಮ ಗೀರ್ಭಿರಿತ್ಯೇಷಾನುವಾಕ್ಯಾ । ಸೂತ್ರಿತಂ ಚ । ಅಗ್ನಿಃ ಪ್ರತ್ನೇನ ಮನ್ಮನಾ ಸೋಮ ಗೀರ್ಭಿಷ್ಟ್ವಾ ವಯಂ । ಆ. ೧-೫ । ಇತಿ । ಅನ್ಯತ್ರಾಪಿ ಯತ್ರ ಪೃಥಕ್ಸಂತಾವಾಜ್ಯಭಾಗೌ ತತ್ರೈಷಾ ದ್ವಿತೀಯಾಜ್ಯಭಾಗಾನುವಾಕ್ಯಾ ॥

ಹೇ ಸೋಮ ತ್ವಾ ತ್ವಾಂ ವಚೋವಿದಃ ಸ್ತುತಿಲಕ್ಷಣಾನಾಂ ವಚಸಾಂ ವೇದಿತಾರೋ ವಯಮನುಷ್ಠಾತಾರೋ ಗೀರ್ಭಿಃ ಸ್ತುತಿಲಕ್ಷಣೈರ್ವಚೋಭಿರ್ವರ್ಧಯಾಮಃ । ಪ್ರವೃದ್ಧಂ ಕುರ್ಮಃ । ತಾದೃಶಸ್ತ್ವಂ ಚ ನೋಽಸ್ಮಾಕಂ ಸುಮೃಳೀಕಃ ಶೋಭನಂ ಸುಖಂ ಕುರ್ವನ್ ಸನ್ ಆ ವಿಶ । ಆಗಚ್ಛ ॥ ಸುಮೃಳೀಕಃ । ಮೃಡ ಸುಖನೇ । ಮೃಡೇಃ ಕೀಕಚ್ಕಕನೌ । ಉ. ೪-೨೪ । ಇತಿ ಭಾವೇ ಕೀಕಚ್ಪ್ರತ್ಯಯಃ । ಶೋಭನಂ ಮೃಡೀಕಂ ಯಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥

ಪ್ರತಿಪದಾರ್ಥ

**ಸೋಮ**— ಎಲೈ ಸೋಮದೇವನೇ । **ತ್ವಾ**— ನಿನ್ನನ್ನು । **ವಚೋವಿದಃ**— ಸ್ತೋತ್ರವಾಕ್ಯಗಳ ಪರಿಚಯವುಳ್ಳ । **ವಯಂ**—ನಾವು । **ಗೀರ್ಭಿಃ**—ಸ್ತೋತ್ರವಾಕ್ಯಗಳಿಂದ । **ವರ್ಧಯಾಮಃ**—ವೃದ್ಧಿಯಾಗುವಂತೆ ಮಾಡುತ್ತೇವೆ । **ನಃ**—ನಮಗೆ । **ಸುಮೃಳೀಕಃ**—ಶ್ರೇಷ್ಠವಾದ ಸುಖಕಾರಿಯಾಗಿ । **ಆ ವಿಶ**—ದಯಮಾಡು ॥

ಭಾವಾರ್ಥ

ಎಲೈ ಸೋಮದೇವನೇ, ನಿನ್ನನ್ನು ಸ್ತೋತ್ರಮಾಡುವ ಕ್ರಮವು ನಮಗೆ ಚೆನ್ನಾಗಿ ಗೊತ್ತಿದೆ. ನಾವು ಪವಿತ್ರವಾದ ಸ್ತೋತ್ರ ವಾಕ್ಯಗಳಿಂದ ನಿನ್ನನ್ನು ಸ್ತುತಿಸಿ ನೀನು ವೃದ್ಧಿಯಾಗುವಂತೆ ಮಾಡುತ್ತೇವೆ. ನಮಗೆ ಅತ್ಯುತ್ತಮವಾದ ಸುಖವನ್ನು ಉಂಟುಮಾಡುವವನಾಗಿ ಇಲ್ಲಿಗೆ ದಯಮಾಡು.

English Translation

Acquainted with hymns we elevate you with praises ; do you who are benignant approach.

ವಿಶೇಷವಿಷಯಗಳು

ದರ್ಶಯಾಗದಲ್ಲಿ ಸೋಮದೇವತಾಕವಾದ ಆಜ್ಯಭಾಗಹೋಮದಲ್ಲಿ **ಸೋಮ ಗೀರ್ಭಿಃ** ಎಂಬ ಮಂತ್ರವು ಪುರೋನುವಾಕ್ಯಾ ಮಂತ್ರವಾಗಿರುವುದೆಂದು ಅಶ್ವಲಾಯನ ಶ್ರೌತಸೂತ್ರದ **ಅಗ್ನಿಃ ಪ್ರತ್ನೇನ ಮನ್ಮನಾ ಸೋಮ**

**ಗೀರ್ಭಿಷ್ಟ್ವಾ ವಯಂ** ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿರುವುದು. (ಅ ೧-೫) ಇತರ ಸ್ಥಳಗಳಲ್ಲಿಯೂ ಎಂದರೆ ವೃಧನ್ವತೀ ಆಜ್ಯಭಾಗಹೋಮಗಳು ಎಲ್ಲೆಲ್ಲಿವೆಯೋ ಅಲ್ಲೆಲ್ಲಾ ಈ ಮಂತ್ರವು ಎರಡನೇ ಆಜ್ಯಭಾಗದ ಪುರೋನು ವಾಕ್ಯಾಮಂತ್ರವಾಗಿರುವುದೆಂದು ತಿಳಿಯಬೇಕು.

**ವಚೋವಿದಃ—ವಚಸಾಂ ಸ್ತುತೀನಾಂ ಜ್ಞಾತಾರಃ ।** ಸ್ತುತಿವಾಕ್ಯಗಳ ಸ್ವರೂಪವನ್ನು ಚೆನ್ನಾಗಿ ತಿಳಿದು ದೇವತೆಗಳನ್ನು ಸ್ತೋತ್ರಮಾಡುವವರೆಂದರ್ಥ. **ವಚಸ್** ಎಂಬ ಪದಕ್ಕೆ ಸ್ತುತಿಯೆಂದೇ ಅರ್ಥವಾಗುತ್ತದೆ. ಉದಾಹರಣೆಗೆ ಋ. ಸಂ. ೯-೯೧-೩; ೯-೬೪-೨೩ ಇತ್ಯಾದಿ ಋಕ್ಕುಗಳಲ್ಲೂ ಮತ್ತು ನಿರುಕ್ತಕಾರರು ಉದಹರಿಸಿರುವ ಋ. ಸಂ. ೪-೩೮-೧೦ ನೇ ಋಕ್ಕಿನಲ್ಲೂ (ನಿ. ೧೦-೩೧) ಸಹ **ವಚಸ್** ಶಬ್ದಕ್ಕೆ ಸ್ತುತಿಯೆಂದೇ ಅರ್ಥವು. ಆದುದರಿಂದ **ವಚೋವಿದಃ** ಅಂದರೆ ಸ್ತುತಿಯ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡು ಸರಿಯಾದ ಕ್ರಮದಲ್ಲಿ ದೇವತೆಗಳನ್ನು ಸ್ತೋತ್ರಮಾಡುವವರೆಂದರ್ಥವಾಗುತ್ತದೆ.

**ಗೀರ್ಭಿಃ—ಸ್ತುತಯೋ ಗಿರಃ । ಗೃಣಾತೇಃ** (ನಿ. ೧-೧೧) ಶಬ್ದಮಾಡು ಎಂಬ ಅರ್ಥವಿರುವ **ಗೄ** ಧಾತುವಿನಿಂದ **ಗಿರ್** ಶಬ್ದವು ನಿಷ್ಪನ್ನವಾಗಿದೆಯೆಂದೂ, **ತಮಿದ್ವರ್ಧಂತು ನೋ ಗಿರಃ** (ಋ. ಸಂ. ೮-೧೩-೧೮) ಎಂಬ ಋಕ್ಕಿನಲ್ಲಿರುವ **ಗಿರಃ** ಎಂಬ ಶಬ್ದಕ್ಕೆ ಸ್ತುತಿಗಳೆಂದೂ ನಿರುಕ್ತಕಾರರು ನಿರ್ವಚನವನ್ನು ಮಾಡಿರುತ್ತಾರೆ. ಋ. ಸಂ. ೬-೧೫-೬; ೮-೧೨-೧೯ ಮುಂತಾದ ಋಕ್ಕುಗಳಲ್ಲೆಲ್ಲಾ ಇದೇ ಅರ್ಥವಿರುವುದರಿಂದ ಇಲ್ಲೂ ಸಹ **ಗೀರ್ಭಿಃ** ಅಂದರೆ ಸ್ತುತಿಗಳಿಂದ ಎಂದಾಗುತ್ತದೆ. ದೇವತೆಗಳೆಲ್ಲರೂ ಸಹ ಸ್ತುತಿಪ್ರಿಯರಾದ್ದರಿಂದಲೂ, ಸ್ತುತಿಗಳಿಂದ ಪಡೆಯ ತಕ್ಕ ಸಂತೋಷದಿಂದ ವೃದ್ಧಿಯಾಗತಕ್ಕವರಾದ್ದರಿಂದಲೂ ಸಹ ಇಲ್ಲಿಯೂ ಸ್ತೋತ್ರರೂಪವಾದ ವಾಕ್ಯಗಳಿಂದ ಎಂದರ್ಥವು.

**ವರ್ಧಯಾಮಃ—ಪ್ರವೃದ್ಧಂ ಕುರ್ಮಃ ।** ವೃದ್ಧಿಯಾಗುವಂತೆ ಸ್ತೋತ್ರವನ್ನು ಮಾಡುತ್ತೇವೆ ಎಂದು ಋ. ಸಂ. ೧೩-೧೮-೮ ನೆಯ **ತಮಿದ್ವರ್ಧಂತು ನೋ ಗಿರಃ** ಎಂಬ ಋಕ್ಕಿನಂತೆಯೇ ಅಭಿಪ್ರಾಯವು.

**ಸುಮೃಳೀಕಃ—ಮೃಳ ಸುಖನೇ । ಶೋಭನಂ ಸುಖಂ ಕುರ್ವನ್ ಸನ್ ।** ಅತ್ಯಂತ ಶ್ರೇಷ್ಠವಾದ ಸುಖವನ್ನು ಉಂಟುಮಾಡುವವನಾಗಿ ದಯಮಾಡು. ಋ. ಸಂ. ೯-೧೧೩ನೇ ಸೂಕ್ತದ ೭ರಿಂದ ೧೧ನೇ ಋಕ್ಕುಗಳಲ್ಲಿ ವರ್ಣಿತವಾಗಿರುವ ಸುಖಸ್ವರೂಪವನ್ನು ೧-೯೧-೯ನೇ ಋಕ್ಕಿನ ವಿವರಣ ಸಂದರ್ಭದಲ್ಲಿ ವಿವರಿಸಲಾಗಿದೆ.

ವ್ಯಾಕರಣಪ್ರಕ್ರಿಯಾ

**ಗೀರ್ಭಿಃ**—ಗಿರ್ ಶಬ್ದ. ತೃತೀಯಾಬಹುವಚನ ಭಿಸ್ ಪರವಾದಾಗ **ರ್ವೋರುಪಧಾಯಾದೀರ್ಘಃ** (ಪಾ. ಸೂ. ೮-೨-೭೬) ಎಂಬುದರಿಂದ ಉಪಧಾಭೂತವಾದ ಇಕಿಗೆ ದೀರ್ಘ.

**ವರ್ಧಯಾಮಃ**—ವೃಧು ವೃದ್ಧೌ ಧಾತು. ಪ್ರೇರಕವ್ಯಾಪಾರತೋರುವುದರಿಂದ ಣಿಚ್. **ಪುಗಂತ ಲಘೂಪಧಸ್ಯ ಚ**—ಎಂಬುದರಿಂದ ಲಘೂಪಧಗುಣ. **ಸನಾದ್ಯಂತಾ ಧಾತವಃ**—ಎಂಬುದರಿಂದ ವರ್ಧಿ ಎಂಬ ಣಿಜಂತಕ್ಕೆ ಧಾತುಸಂಜ್ಞೆ ಬರುತ್ತದೆ. ಇದರ ಮೇಲೆ ಲಟ್. ಉತ್ತಮಪುರುಷಬಹುವಚನದಲ್ಲಿ ಮಸ್ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. **ಅತೋದೀರ್ಘೋ ಯಞಿ**—ಎಂಬುದರಿಂದ ಅದಂತಾಂಗಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಬರುತ್ತದೆ.

**ವಚೋವಿದಃ**—ವಚಾಂಸಿ ವಿದಂತಿ ಇತಿ ವಚೋವಿದಃ ವಿದ ಜ್ಞಾನೇ ಧಾತು. ಇದಕ್ಕೆ ಕ್ವಿಪ್‌ಪ್ರತ್ಯಯ. ಪ್ರಥಮಾಬಹುವಚನಾಂತರೂಪ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಸುಮೃಳೀಕಃ**—ಮೃಡ ಸುಖನೇ ಧಾತು. ಇದಕ್ಕೆ **ಮೃಡೇಃ ಕೀಕಚ್‌ಕಕನೌ** (ಉ. ಸೂ. ೪-೪೬೪) ಎಂಬುದರಿಂದ ಭಾವಾರ್ಥದಲ್ಲಿ ಕೀಕನ್‌ಪ್ರತ್ಯಯ. ಮೃಡೀಕಃ ಎಂದು ರೂಪವಾಗುತ್ತದೆ. ಶೋಭನಂ ಮೃಡೀಕಂ ಯಸ್ಯಸಃ ಸುಮೃಳೀಕಃ. ಬಹುವ್ರೀಹಿ ಸಮಾಸದಲ್ಲಿ **ನಞ್‌ಸುಭ್ಯಾಮ್**-(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ವಿಶ**—ವಿಶ ಪ್ರವೇಶನೇ ಧಾತು. ಲೋಣ್ಮಧ್ಯಮಪುರುಷಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ಗಯಸ್ಫಾನೋ ಅಮೀವಹಾ ವಸುವಿತ್ಪುಷ್ಟಿವರ್ಧನಃ ।
ಸುಮಿತ್ರಃ ಸೋಮ ನೋ ಭವ ॥ ೧೨ ॥

॥ ಪದಪಾಠಃ ॥

ಗಯಽಸ್ಫಾನಃ । ಅಮೀವಽಹಾ । ವಸುಽವಿತ್ । ಪುಷ್ಟಿಽವರ್ಧನಃ ।
ಸುಽಮಿತ್ರಃ । ಸೋಮ । ನಃ । ಭವ ॥ ೧೨ ॥

ಸಾಯಣಭಾಷ್ಯಂ

ಸಂತಿ ಪವಮಾನೇಷ್ಟ್ಯಯಸ್ತಿಸ್ರಃ । ತತ್ರ ತೃತೀಯಸ್ಯಾಮಿಷ್ಟಾವುತ್ತರಸ್ಯಾಜ್ಯಭಾಗಸ್ಯ ಗಯಸ್ಫಾನ ಇತ್ಯೇಷಾನುವಾಕ್ಯಾ । ಸೂತ್ರಿತಂ ಚ । ಪುಷ್ಟಿಮಂತಾವಗ್ನಿನಾ ರಯಿಮಶ್ನವದ್ಗಯಸ್ಫಾನೋ ಅಮೀವಹಾ । ಆ. ೨-೧ । ಇತಿ ॥ ಏಷೈವ ಪ್ರಾತಃಕಾಲೀನೋಪಸದಿ ಸೌಮ್ಯಯಾಗಸ್ಯ ಯಾಜ್ಯಾ ಸಾಯಂಕಾಲೀನಾಯಾಂ ತ್ವನುವಾಕ್ಯಾ । ಸೂತ್ರಿತಂ ಚಾಥೋಪಸದಿತಿ ಖಂಡೇ । ತ್ವಂ ಸೋಮಾಸಿ ಸತ್ಪತಿರ್ಗಯಸ್ಫಾನೋ ಅಮೀವಹಾ । ಆ. ೪-೮ । ಇತಿ ॥

ಗಯಸ್ಫಾನಃ । ಗಯ ಇತಿ ಧನನಾಮ । ಧನಸ್ಯ ವರ್ಧಯಿತಾ ಅಮೀವಹಾ ಽಮೀವಾನಾಂ ರೋಗಾಣಾಂ ಹಂತಾ ವಸುವಿತ್ ಸ್ತೋತೄಣಾಂ ಧನಸ್ಯ ಲಂಭಯಿತಾ ಪ್ರಾಪಯಿತಾ ಪುಷ್ಟಿವರ್ಧನಃ ಪುಷ್ಟೇಃ ಸಂಪದೋ ವರ್ಧಯಿತಾ ಸುಮಿತ್ರಃ। ಶೋಭನಾನಿ ಮಿತ್ರಾಣಿ ಸಖಾಯೋ ಯಸ್ಯ ಸ ತಥೋಕ್ತಃ। ಹೇ ಸೋಮ ತ್ವಂ ನೋಽಸ್ಮಾಕಮೇವಂಗುಣವಿಶಿಷ್ಟೋ ಭವ ॥ ಗಯಸ್ಫಾನಃ । ಸ್ಫಾಯೀ ವೃದ್ಧೌ । ಅಂತರ್ಭಾವಿತಣ್ಯರ್ಥಾತ್ ಲ್ಯುಟಿ ವ್ಯತ್ಯಯೇನ ಯಲೋಪಃ । ಇದಮಾದಿಷು ಚತುರ್ಷು ಪದೇಷು ಕೃದುತ್ತರಪದಪ್ರಕೃತಿಸ್ವರತ್ವಂ । ಸುಮಿತ್ರಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ನಃ**—ನಮಗೆ । **ಗಯಸ್ಫಾನಃ**—ಧನವನ್ನು ವೃದ್ಧಿಯಾಗುವಂತೆ ಮಾಡುವವನಾಗಿಯೂ । **ಅಮೀವಹಾ**—ರೋಗನಾಶಕನಾಗಿಯೂ । **ವಸುವಿತ್**—ಧನವನ್ನು(ಅರಿತು) ಹೊಂದಿಸುವವನಾಗಿಯೂ । **ಪುಷ್ಟಿವರ್ಧನಃ**—ಆಹಾರ ಸಂಪತ್ತನ್ನು ಬೆಳೆಸುವವನಾಗಿಯೂ । **ಸುಮಿತ್ರಃ**—ಶ್ರೇಷ್ಠನಾದ ಸ್ನೇಹಿತನಾಗಿಯೂ । **ಭವ**—ಆಗು ॥

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮ ಐಶ್ವರ್ಯವನ್ನು ಬೆಳೆಸುವವನಾಗಿಯೂ, ರೋಗನಾಶಕನಾಗಿಯೂ, ಧನದಾತನಾಗಿಯೂ, ಪುಷ್ಟಿಸಂಪತ್ತನ್ನು ಬೆಳೆಸುವವನಾಗಿಯೂ ಮತ್ತು ಶ್ರೇಷ್ಠನಾದ ಸ್ನೇಹಿತನಾಗಿಯೂ ಆಗಿರು.

## English Translation

O Soma, be unto us, the bestower of wealth, the remover of desease, the cognizant of riches, the augmenter of nourishment and an excellent friend.

ವಿಶೇಷವಿಷಯಗಳು

ಪವಮಾನೇಷ್ಟಿ ಎಂಬ ಹೆಸರಿನ ಮೂರು ಇಷ್ಟಿಗಳಿರುವವು. ಅವುಗಳಲ್ಲಿ ಮೂರನೆಯ ಇಷ್ಟಿಯಲ್ಲಿ ಕೊನೆಯ ಆಜ್ಯಭಾಗ ಹೋಮಕ್ಕಾಗಿ ಗಯಸ್ಫಾನ ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಪುಷ್ಟಿಮಂತಾವಗ್ನಿನಾ ರಯಿಮಶ್ನವದ್ಗಯಸ್ಫಾನೋ ಅಮೀವಹಾ** ಎಂಬ ಸೂತ್ರವು ನಿರ್ದೇಶಿಸುವುದು. (ಆ. ೨-೧) ಮತ್ತು ಪ್ರಾತಃಕಾಲದಲ್ಲಿ ಮಾಡಲ್ಪಡುವ ಉಪಸತ್ ಎಂಬ ಇಷ್ಟಿಯಲ್ಲಿ ಸೋಮ ಸಂಬಂಧವಾದ ಯಾಗದಲ್ಲಿ ಸಾಯಂಕಾಲದಲ್ಲಿ ಈ ಮಂತ್ರವು ಪುರೋನುವಾಕ್ಯಾಮಂತ್ರವಾಗಿರುವುದೆಂದು ಆಶ್ವಲಾಯನ ಶ್ರೌತಸೂತ್ರದ ಅಥೋಪಸತ್ ಎಂಬ ಖಂಡದಲ್ಲಿ **ತ್ವಂ ಸೋಮಾಸಿ ಸತ್ಪತಿರ್ಗಯಸ್ಫಾನೋ ಅಮೀವಹಾ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೮).

**ಗಯಸ್ಫಾನಃ**—ಗಯ ಇತಿ ಧನನಾಮ । **ಧನಸ್ಯ ವರ್ಧಯಿತಾ** । ಧನವನ್ನು ವೃದ್ಧಿಮಾಡತಕ್ಕವನೆಂ ದರ್ಥವು. **ಗಯ** ಶಬ್ದಕ್ಕೆ ಅಪತ್ಯ, ಗೃಹ ಮತ್ತು ಧನ ಎಂದು ಮೂರು ಅರ್ಥವೂ ಆಗುವುದು. **ತುಕ್, ತೋಕಂ,**

**ತನಯಃ** ಇತ್ಯಾದಿ **ಅಪತ್ಯ** ನಾಮುಗಳಲ್ಲಿ ಗಯಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೨) ಗಯಃ ಶಬ್ದಕ್ಕೆ ಅಪತ್ಯವೆಂದೂ ; **ಮಘಂ, ರೇಕ್ಣಃ** ಇತ್ಯಾದಿ ಧನನಾಮುಗಳಲ್ಲಿ ಪಠಿತವಾಗಿರುವುದರಿಂದ (೩-೯) ಧನವೆಂದೂ ; ಗಯಃ, ಕೃದರಃ, ಹರ್ಮ್ಯಂ ಇತ್ಯಾದಿ ಗೃಹನಾಮುಗಳಲ್ಲಿ ಪಠಿತವಾಗಿರುವುದರಿಂದ (೧೩-೩) ಗೃಹವೆಂದೂ ಅರ್ಥವಿರುವುದು. **ಗಮ್ಯತೇ ನಿವಾಸಾಯ ಇತಿ ಗಯಂ ಗೃಹಂ, ಗೀಯತೇ ಸ್ತೂಯತೇ ಇತಿ ವಾ ಗಯಂ ಧನಂ।** ಎಂಬುದಾಗಿ ಸಾಯಣಾಚಾರ್ಯರು ಋಕ್ಸಂಹಿತೆಯ ೫-೧೦-೩ನೆಯ ಋಕ್ಕನ್ನು ವಿವರಿಸುವಾಗ ಹೇಳಿರುವರು. ಅಲ್ಲದೇ, ಋ. ಸಂ. ೬-೭೪-೨ನೇ ಋಕ್ಕಿನಲ್ಲಿ ಬರುವ **ಗಯ** ಶಬ್ದಕ್ಕೆ **ಗೃಹಂ ಗೃಹಗತಂ ಪ್ರಾಣಿಜಾತಂ ವಾ ।** ಎಂದು ಅರ್ಥವನ್ನು ಹೇಳಿರುವರು. ಇಲ್ಲಿ ಈ ಮೂರು ಅರ್ಥಗಳಲ್ಲಿ ಯಾವುದನ್ನು ಬೇಕಾದರೂ ಹೇಳಬಹುದು. ಸ್ಕಂದ ಸ್ವಾಮಿಗಳ ಭಾಷ್ಯದಲ್ಲಿಯೂ ಸಹ, **ಸ್ಫಾಯಿರ್ವೃದ್ಧ್ಯರ್ಥಃ । ಅಪತ್ಯಸ್ಯ ಧನಸ್ಯ ಗೃಹಸ್ಯ ವಾ ವರ್ಧಯಿತಾ ಗಯಸ್ಫಾನಃ** ಎಂದಿರುತ್ತದೆ. ಸೋಮನಿಗೆ ಗಯಸಾಧನ ಎಂಬ ವಿಶೇಷಣವೂ ಉಂಟು ಉದಾಹರಣೆಗೆ —

**ಸಮೀ ವತ್ಸಂ ನ ಮಾತೃಭಿಃ ಸೃಜತಾ ಗಯಸಾಧನಂ ।**

(ಋ. ಸಂ. ೯-೧೦೪-೨)

ಎಂಬ ಋಕ್ಕಿನಲ್ಲೂ ಸಹ ಈ ಮೂರು ಅರ್ಥವನ್ನೂ ಹೇಳಿರುವರು

**ಅಮೀವಹಾ—ಅಮ-ರೋಗೇ ।** ರೋಗವೆಂದು ಅರ್ಥವನ್ನು ಕೊಡುವ **ಅಮ** ಶಬ್ದದಿಂದ **ಅಮೀವ** ಶಬ್ದವು ನಿಷ್ಪನ್ನವಾಗಿದೆ. ಇದನ್ನು ನಾಶಮಾಡುವವನು **ಅಮೀವಹ**ನೆಂದು ಪ್ರಸಿದ್ಧವಾಗಿದೆ. ರೋಗವನ್ನು ನಾಶ ಮಾಡಬೇಕೆಂಬ ಪ್ರಾರ್ಥನೆಯು ಸೋಮನನ್ನುದ್ದೇಶಿಸಿ ಅನೇಕ ಕಡೆಗಳಲ್ಲಿವೆ. ಉದಾಹರಣೆಗೆ—

**ಇಂದ್ರಾಯ ಸೋಮ ಸುಷುತಃ ಪರಿ ಸ್ರವಾಪಾಮೀವಾ ಭವತು ರಕ್ಷಸಾ ಸಹ ।**

( ಋ. ಸಂ ೯-೮೫-೧ )

**ಸೋಮಾರುದ್ರಾ ವಿ ವೃಹತಂ ವಿಷೂಚೀಮಮೀವಾ ಯಾ ನೋ ಗಯಮಾವಿವೇಶ ।**

( ಋ. ಸಂ. ೬-೭೪-೨ )

ಎಂಬ ಋಕ್ಕುಗಳಲ್ಲಿ ರೋಗವನ್ನು ನಾಶಮಾಡಲು ಸಹಾಯಕನಾಗಬೇಕೆಂದು ಸೋಮನನ್ನು ಪ್ರಾರ್ಥಿಸಲಾಗಿದೆ. **ಅಮೀವಹಾ** ಎಂದರೆ ಹಿಂಸಕರಾದ ಶತ್ರುನಾಶಕನೆಂದೂ ಅರ್ಥವಾಗುವುದು.

**ವಸುವಿತ್—ಧನಸ್ಯ ಪ್ರಾಪಯಿತಾ ।** ಧನವನ್ನು ಒದಗಿಸಿಕೊಡುವವನೆಂದರ್ಥವು. **ವಸು** ಶಬ್ದಕ್ಕೆ ಅನ್ನವೆಂದೂ ಅರ್ಥವು. ( ನಿ. ೫-೧೯ ) ಆದುದರಿಂದ ಅನ್ನದಾತನೆಂದಾದರೂ ಆಗಬಹುದು. ಸೋಮನಿಗೆ **ವಸುವಿತ್ । ಹಿರಣ್ಯವಿತ್ । ಗೋವಿತ್ ।** ಎಂಬ ಹೆಸರುಗಳು ಪ್ರಸಿದ್ಧವಾದವು. ಉದಾಹರಣೆಗೆ—

**ಗೋವಿತ್ಪವಸ್ವ ವಸುವಿದ್ಧಿರಣ್ಯವಿದ್ರೇತೋಧಾ ಇಂದೋ ಭುವನೇಷ್ವರ್ಪಿತಃ ।**

( ಋ. ಸಂ. ೯-೮೬-೩೯ )

ಎಂಬ ಋಕ್ಕಿನಲ್ಲಿ ಈ ಮೂರು ವಿಶೇಷಣಗಳೂ ಇವೆ. ಋ. ಸಂ. ೨-೪೦-೬ನೆಯ ಋಕ್ಕಿನಲ್ಲಿ **ರಯಿಪತಿಃ** ಎಂದು ಕರೆಯುತ್ತಾರೆ.

**ಪುಷ್ಟಿವರ್ಧನಃ—ಪುಷ್ಟೇಃ ಸಂಪದೋ ವರ್ಧಯಿತಾ** । ಸಕಲ ರೋಗಗಳನ್ನು ನಾಶಮಾಡಿ ಧನ ಸಂಪತ್ತನ್ನೊದಗಿಸುವುದರಿಂದ ಸಕಲವಿಧವಾದ ಪುಷ್ಟಿಯನ್ನೂ ವೃದ್ಧಿಮಾಡುವವನು ಎಂದರ್ಥವು

**ಸುಮಿತ್ರಃ—ಶೋಭನಾನಿ ಮಿತ್ರಾಣಿ ಯಸ್ಯ ಸಃ** । ಶ್ರೇಷ್ಠವಾದ ಮಿತ್ರರುಳ್ಳವನು ಎಂದರ್ಥವು. ಅಥವಾ **ಶೋಭನಾನಾಂ ಮಿತ್ರಾಣಾಂ ಕರ್ತಾ** ಒಳ್ಳೆಯ ಸ್ನೇಹಿತರನ್ನೊದಗಿಸಿ ಕೊಡುವವನು ಎಂದೂ ಆಗಬಹುದು.

### ವ್ಯಾಕರಣಪ್ರಕ್ರಿಯಾ

**ಗಯಸ್ಫಾನಃ—**ಸ್ಫಾಯೀ ವೃದ್ಧೌ ಧಾತು. ಇದು ಅಂತರ್ಭಾವಿತ ಣ್ಯರ್ಥಕವಾದ ಧಾತು. (ಧಾತ್ವರ್ಥವು ಪ್ರೇರಣಾರ್ಥವನ್ನು ಒಳಕೊಂಡಿದೆ.) ಇದಕ್ಕೆ ಲ್ಯುಟ್ ಪ್ರತ್ಯಯ ವಿವಕ್ಷಾಮಾಡಿದಾಗ **ವ್ಯತ್ಯಯೋ ಬಹುಲಮ್**—ಎಂಬುದರಿಂದ ಧಾತುವಿನ ಯಕಾರಕ್ಕೆ ಲೋಪ. ಗಯಸ್ಯ ಸ್ಫಾನಃ ಗಯಸ್ಫಾನಃ **ಗತಿಕಾರಕೋಪಪದಾತ್ ಕೃತ್**-(ಪಾ ಸೂ ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಈ ಮಂತ್ರದಲ್ಲಿ ಇದೇ ಆದಿಯಾದ ನಾಲ್ಕು ಶಬ್ದಗಳಲ್ಲಿಯೂ ಕೃದಂತ ಉತ್ತರಪದವಾಗಿರುವುದರಿಂದ ಹಿಂದೆ ಹೇಳಿದ ಸೂತ್ರದಿಂದ ಎಲ್ಲಾ ಕಡೆಯಲ್ಲಿಯೂ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಮೀವಹಾ—**ಅಮೀವಾನಾಂ ಹಂತಾ ಅಮೀವಹಾ. ಹನ ಹಿಂಸಾಗತ್ಯೋಃ **ಅನ್ಯೇಭ್ಯೋಽಪಿ ದೃಶ್ಯತೇ**—ಎಂಬುದರಿಂದ ಕ್ವಿಪ್ ಪ್ರತ್ಯಯ. ಅಮೀವಹನ್ ಶಬ್ದವಾಗುತ್ತದೆ. ಪ್ರಥಮಾಏಕವಚನಾಂತರೂಪ.

**ವಸುವಿತ್—**ವಿದ್ಲೃ ಲಾಭೇ ಧಾತು. ಅಂತರ್ಭಾವಿತಣ್ಯರ್ಥಕವಾದ ಇದಕ್ಕೆ ಕ್ವಿಪ್ ಪ್ರತ್ಯಯ.

**ಪುಷ್ಟಿವರ್ಧನಃ—**ಪುಷ್ಟೇಃ ವರ್ಧಯಿತಾ ಪುಷ್ಟಿವರ್ಧನಃ ವೃಧು ವೃದ್ಧೌ ಧಾತು. ಇಲ್ಲಿ ಅಂತರ್ಭಾವಿತ ಣ್ಯರ್ಥಕದ ಮೇಲೆ ಲ್ಯುಟ್‌ಪ್ರತ್ಯಯ. **ಯುವೋರನಾಕೌ**-(ಪಾ. ಸೂ. ೭-೧-೧) ಎಂಬುದರಿಂದ ಅನಕೆ ಅನಾದೇಶ.

**ಸುಮಿತ್ರಃ—**ಶೋಭನಾನಿ ಮಿತ್ರಾಣಿ ಯಸ್ಯ ಸಃ ಸುಮಿತ್ರಃ **ನಞ್‌ಸುಭ್ಯಾಮ್**-(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ॥ ೧೨ ॥



॥ ಸಂಹಿತಾಪಾಠಃ ॥

ಸೋಮ ರಾರಂಧಿ ನೋ ಹೃದಿ ಗಾವೋ ನ ಯವಸೇಷ್ವಾ ।
ಮರ್ಯ ಇವ ಸ್ವ ಓಕ್ಯೇ ॥ ೧೩ ॥

॥ ಪದಪಾಠಃ ॥

**ಸೋಮ । ರರಂಧಿ । ನಃ । ಹೃದಿ । ಗಾವಃ । ನ । ಯವಸೇಷು । ಆ ।**
**ಮರ್ಯಃऽಇವ । ಸ್ವೇ । ಓಕ್ಯೇ ॥ ೧೩ ॥**

ಸಾಯಣಭಾಷ್ಯಂ

ಹೇ ಸೋಮ ತ್ವಂ ನೋಽಸ್ಮಾಕಂ ಹೃದಿ ಹೃದಯೇ ರರಂಧಿ । ರಮಸ್ವ । ತತ್ರ ನಿದರ್ಶನದ್ವಯ ಮುಚ್ಯತೇ । ಗಾವೋ ನ । ಯಥಾ ಗಾವೋ ಯವಸೇಷು ಶೋಭನತೃಣೇಷ್ವಾಭಿಮುಖ್ಯೇನ ರಮಂತೇ । ಮರ್ಯ ಇವ । ಯಥಾ ವಾ ಮರ್ಯೋ ಮರಣಧರ್ಮಾ ಮನುಷ್ಯಃ ಸ್ವ ಓಕ್ಯೇ ಸ್ವಕೀಯೆ ಓಕಸಿ ಗೃಹೇ ಪುತ್ರಾದಿಭಿಃ ಸಹ ರಮತೇ ತದ್ವದಸ್ಮಾಭಿರ್ದತ್ತೇನ ಹವಿಷಾ ತೃಪ್ತಃ ಸನ್ ಅಸ್ಮಾಸ್ವೇವಾವತಿಷ್ಠಸ್ವ । ನಾನ್ಯತ್ರ ಗಚ್ಛತಿ ನಿದರ್ಶನದ್ವಯಸ್ಯ ತಾತ್ಪರ್ಯಾರ್ಥಃ ॥ ರರಂಧಿ । ರಮು ಕ್ರೀಡಾಯಾಂ । ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ಶಪಃ ಶ್ಲುಃ । ಛಂದಸ್ಯುಭಯಥೇತಿ ಹೇರಾರ್ಧಧಾತುಕತ್ವೇನ ಙಿತ್ತ್ವಾಭಾವಾದಜಂತಕ್ಷೇತಿ ಹೇರ್ಧಿಃ । ಅತ ಏವಾಙಿತ್ತ್ವಾದನುನಾಸಿಕಲೋಪಾಭಾವಃ । ಸೇಹ್ಯಪಿಚ್ಚೇತಿ ಹೇರಪಿತ್ತ್ವಾತ್ತಸ್ಯೈವ ಸ್ವರಃ ಶಿಷ್ಯತೇ । ಛಾಂದಸಮಭ್ಯಾಸದೀರ್ಘತ್ವಂ । ಆಮಂತ್ರಿತಂ ಪೂರ್ವಮವಿದ್ಯಮಾನವದಿತಿ ಪೂರ್ವಸ್ಯಾಮಂತ್ರಿತಸ್ಯಾವಿದ್ಯಮಾನವತ್ತ್ವಾತ್ಪಾದಾದಪರತ್ವೇನ ನಿಘಾತಾಭಾವಃ । ಮರ್ಯ ಇವ । ಛಂದಸಿ ನಿಷ್ಟಕ್ರ್ಯೇತ್ಯಾದೌ ಮರ್ಯಶಬ್ದೋ ಯತ್ಪ್ರತ್ಯಯಾಂತೋ ನಿಪಾತ್ಯತೇ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಓಕ್ಯೇ । ಉಚ ಸಮವಾಯೇ । ಉಚ್ಯತೇ ಸಮವೇಯತೇ ಪ್ರಾಪ್ಯತ ಇತ್ಯೋಕ್ಯಂ ಗೃಹಂ । ಋಹಲೋರ್ಣ್ಯತ್ । ಚಜೋಃ ಕು ಘಿಣ್ಯತೋರಿತಿ ಕುತ್ವಂ । ತಿತ್ಸ್ವರಿತಃ ॥

ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ । **ಯವಸೇಷು**—ಹಸರು ಹುಲ್ಲುಗಾವಲುಗಳಲ್ಲಿ । **ಆ**—ಸುತ್ತಲೂ **ಗಾವೋ ನ**—ಹಸುಗಳು ರಮಿಸುವಂತೆಯೂ । **ಸ್ವೇ ಓಕ್ಯೇ**—ತಮ್ಮ ಸ್ವಂತ ಗೃಹದಲ್ಲಿ । **ಮರ್ಯ ಇವ**—ಮಾನವನು (ಪುತ್ರಾದಿಗಳೊಡನೆ) ಸಂತೋಷದಿಂದ ರಮಿಸುವಂತೆಯೂ । **ತ್ವಂ**—ನೀನು । **ನಃ**—ನಮ್ಮ । **ಹೃದಿ**—ಹೃದಯದಲ್ಲಿ । **ರರಂಧಿ (ರಾರಂಧಿ)**—ರಮಿಸು ॥

ಭಾವಾರ್ಥ

ಎಲೈ ಸೋಮದೇವನೇ, ಪುಷ್ಟವಾದ ಹಸರು ಹುಲ್ಲುಗಾವಲನ್ನು ಸೇರಿ ಹೊರಕ್ಕೆ ಹೋಗದೇ ಹಸುಗಳು ಅಲ್ಲೇ ರಮಿಸುವಂತೆಯೂ, ಪುತ್ರಪೌತ್ರಾದಿಗಳಿಂದ ಕೂಡಿದ ತನ್ನ ಸ್ವಗೃಹದಲ್ಲಿ ಮಾನವನು ಇತರ ಗಮನವಿಲ್ಲದೇ ಸಂತೋಷದಿಂದ ರಮಿಸುವಂತೆಯೂ ನೀನು ನಮ್ಮ ಹೃದಯದಲ್ಲಿದ್ದುಕೊಂಡು ಬೇರೆ ಗಮನವಿಲ್ಲದವನಾಗಿ ಸಂತೋಷದಿಂದ ರಮಿಸುತ್ತಿರು.

## English Translation

Soma, dwell happy in our hearts, like cattle in fresh pastures, like men in their own abodes.

॥ ವಿಶೇಷವಿಷಯಗಳು ॥

**ಓಕ್ಯೇ— ಓಕ ಇತಿ ನಿವಾಸನಾಮೋಚ್ಯತೇ।** (ನಿ. ೩-೩) ನಿವಾಸಸ್ಥಾನಕ್ಕೆ **ಓಕ** ವೆಂಬುದಾಗಿ ಹೆಸರು. **ಸ್ವೇ ಓಕ್ಯೇ।** ಅಂದರೆ ಸ್ವಗೃಹದಲ್ಲಿ ಎಂದರ್ಥವು. ಮಾನವನಿಗೆ ಸ್ವಗೃಹದಲ್ಲಿಯೇ ಸಂಪೂರ್ಣವಾದ ಅಭಿಮಾನ ವಿರುವುದು ಎಂಬುದನ್ನು ತೋರಿಸಲು ನಿರುಕ್ತಕಾರರು ಸ್ವಾರಸ್ಯವಾದ ಉದಾಹರಣೆಯನ್ನು ಕೊಡುತ್ತಾರೆ. (ಋ. ಸಂ ೭-೪-೮) **ಅಥ ಸ ಓಕಃ ಪುನರೇವ ತದೇತಿ ಯತ ಆಗತೋ ಭವತಿ।** ( **ನಿ. ೩-೩**) **ಸ್ವೀಕೃತಪುತ್ರ**ನಿಗೆ ಎಂದಿದ್ದರೂ ಸ್ವಗೃಹದಲ್ಲಿಯೇ ಅಭಿಮಾನವಿದ್ದು ಅಲ್ಲಿಗೇ ವಾಪಸ್ಸು ಹೋಗುತ್ತಾನಾದ್ದರಿಂದ ಸ್ವಗೃಹವು ಪೂರ್ಣವಾದ ಅಭಿಮಾನಕ್ಕೆ ಪಾತ್ರವು. ಅದೇ ಅಭಿಮಾನವನ್ನೂ, ಸ್ವಾತಂತ್ರ್ಯವನ್ನೂ ನಮ್ಮ ಹೃದಯದಲ್ಲಿಯೂ ಇಟ್ಟು ಆದರವನ್ನು ತೋರಿಸಬೇಕೆಂದು ಋಷಿಯು ಈ ಋಕ್ಕಿನಲ್ಲಿ ಸೋಮನನ್ನು ಪ್ರಾರ್ಥಿಸುತ್ತಾರೆ

**ಮರ್ತ್ಯಃ— ಮರ್ತ್ಯೋ ಮನುಷ್ಯೋ ಮರಣಧರ್ಮಾ।** (ನಿ. ೩-೧೫) ಮರಣ ಧರ್ಮವುಳ್ಳವನಾದುದರಿಂದ ಮರ್ತ್ಯನೆಂಬ ಹೆಸರು.

**ರರಂಧಿ (ರಾರಂಧಿ)— ರಮು ಕ್ರೀಡಾಯಾಂ।** ಕ್ರೀಡಿಸಿ ಆನಂದವನ್ನನುಭವಿಸು ಎಂದರ್ಥವು. ಗೋವುಗಳಿಗೆ ಹುಲ್ಲುಗಾವಲುಗಳಲ್ಲಿ ಯಾವ ಆನಂದವು ಲಭಿಸುವುದೋ, ಮಾನವನಿಗೆ ಸ್ವಗೃಹದಲ್ಲಿ ಯಾವ ಆನಂದವು ಲಭಿಸುವುದೋ ಅದೇ ಆನಂದವನ್ನು ನಮ್ಮ ಹೃದಯದಲ್ಲಿಯೂ ಹೊಂದುವೆ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ರರಂಧಿ**—ರಮು ಕ್ರೀಡಾಯಾಂ. ಧಾತು. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲೋಣ್ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದಕ್ಕೆ ಹಿ ಆದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ವಿಕರಣ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸದಲ್ಲಿ ಆದಿಹಲ್‌ಶೇಷ. ರರಮ್+ಹಿ ಎಂದಿರುವಾಗ **ಛಂದಸ್ಯುಭಯಥಾ** (ಪಾ ಸೂ. ೩-೪-೧೧೭) ಎಂಬುದರಿಂದ ಹಿಗೆ ಆರ್ಧಧಾತುಕಸಂಜ್ಞೆ ಇರುವುದರಿಂದ ಙಿತ್ವ ಬಾರದಿರುವುದರಿಂದ **ಅಙಿತಶ್ಚ** (ಪಾ. ಸೂ. ೬-೪-೧೦೩) ಎಂಬುದರಿಂದ ಹಿಗೆ ಧಿ ಆದೇಶ. ಆದುದರಿಂದಲೇ ಙಿತ್ವನಿಮಿತ್ತವಾಗಿ ಧಾತುವಿನ ಅನುನಾಸಿಕ ಮಕಾರಕ್ಕೂ **ಅನುದಾತ್ತೋಪದೇಶ**—ಸೂತ್ರದಿಂದ ಲೋಪ ಬರುವುದಿಲ್ಲ. **ನಶ್ಚಾಪದಾಂತಸ್ಯ ಝಲಿ**—ಎಂಬುದರಿಂದ ಮಕಾರಕ್ಕೆ ಅಪದಾಂತದಲ್ಲಿ ಅನುಸ್ವಾರಾದೇಶ. ರರಂಧಿ ಎಂದು ರೂಪವಾಗುತ್ತದೆ. ಹಿಂದೆ ಸೋಮ ಎಂಬ ಆಮಂತ್ರಿತವಿರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್**—ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ **ತಿಙ್ಙತಿಙಃ**—ಸೂತ್ರದಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಪಿತ್ವವಿಧಾನಮಾಡಿರುವುದರಿಂದ ಪ್ರತ್ಯಯಸ್ವರ ಬರುತ್ತದೆ. ಆಗ ರರಂಧಿ ಎಂಬುದು ಅಂತೋದಾತ್ತವಾದ ಪದವಾಗುತ್ತದೆ. ಸಂಹಿತಾದಲ್ಲಿ ಛಾಂದಸವಾಗಿ ಅಭ್ಯಾಸ ದೀರ್ಘ ಬರುತ್ತದೆ.

**ಹೃದಿ**—ಹೃದಯ ಶಬ್ದಕ್ಕೆ ಸಪ್ತಮೀಏಕವಚನ ಪರವಾದಾಗ **ಪದ್ವನ್ನೋಮಾಸ್‌ಹೃತ್**—ಎಂಬುದರಿಂದ ಹೃದಾದೇಶ. **ಊಡಿದಂ ಪದಾದಿ**-(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮರ್ಯ ಇವ**—**ಛಂದಸಿ ನಿಷ್ಟರ್ಕ್ಯದೇವ**-(ಪಾ. ಸೂ. ೩-೧-೧೨೩) ಎಂಬುದರಿಂದ ಮರ್ಯ ಶಬ್ದವು ಯತ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಯತೋಽನಾವಃ** (ಪಾ. ಸೂ. ೬-೧-೨೧೩)-ಎಂಬುದರಿಂದ ಸ್ವರಿತ ಸ್ವರವು ಬಾಧಿತವಾಗಿ ಆದ್ಯುದಾತ್ತಸ್ವರ ಬರುತ್ತದೆ.

**ಓಕ್ಯೇ**—ಉಚ ಸಮವಾಯೇ ಧಾತು. ಉಚ್ಯತೇ ಸಮವೇಯತೇ **ಪ್ರಾಪ್ಯತೇ** ಇತಿ ಓಕ್ಯಂ ಗೃಹಮ್ (ಸೇರುವ ಸ್ಥಳ ಮನೆ) **ಋಹಲೋರ್ಣ್ಯತ್**-(ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್‌ಪ್ರತ್ಯಯ.. **ಪುಗಂತ-ಲಘೂಪಧಸ್ಯ ಚ** — ಎಂಬುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಚಜೋಃ ಕು ಘಿಣ್ಯತೋಃ** (ಪಾ. ಸೂ. ೭-೩-೫೨) ಎಂಬುದರಿಂದ ಧಾತುವಿನ ಚಕಾರಕ್ಕೆ ಣಿತ್‌ಪ್ರತ್ಯಯನಿಮಿತ್ತವಾಗಿ ಕುತ್ವ. ಓಕ್ಯ ಎಂದು ರೂಪವಾಗುತ್ತದೆ. ಪ್ರತ್ಯಯ ತಿತ್ತಾದುದರಿಂದ **ತಿತ್‌ಸ್ವರಿತಮ್**-(ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ. ‖ ೧೩ ‖



ಸಂಹಿತಾಪಾಠಃ

ಯಃ ಸೋಮ ಸಖ್ಯೇ ತವ ರಾರಣದ್ದೇವ ಮರ್ತ್ಯಃ ।
ತಂ ದಕ್ಷಃ ಸಚತೇ ಕವಿಃ ‖ ೧೪ ‖

‖ ಪದಪಾಠಃ ‖

ಯಃ । ಸೋಮ । ಸಖ್ಯೇ । ತವ । ರರಣತ್ । ದೇವ । ಮರ್ತ್ಯಃ ।
ತಂ । ದಕ್ಷಃ । ಸಚತೇ । ಕವಿಃ ‖ ೧೪ ‖

‖ ಸಾಯಣಭಾಷ್ಯಂ ‖

ಹೇ ದೇವ ದ್ಯೋತಮಾನ ಸೋಮ ತವ ಸಖ್ಯೇ ತ್ವದೀಯೇ ಸಖಿತ್ವೇ ನಿಮಿತ್ತಭೂತೇ ಸತಿ ಯೋ ಮರ್ತ್ಯೋ ಮರಣಧರ್ಮಾ ಯಜಮಾನೋ ರಾರಣತ್ ರಣತಿ ವಿತತ್ಸೂಕ್ತರೂಪೇಣ ತ್ವಾಂ

ಸ್ತೌತಿ ತಂ ಯಜಮಾನಂ ಕವಿಃ ಕ್ರಾಂತದರ್ಶೀ ದಕ್ಷಃ ಸರ್ವಕಾರ್ಯಸಮರ್ಥಸ್ತ್ವಂ ಸಚತೇ । ಸೇವಸೇ । ಅನುಗೃಹ್ಣಾಸೀತ್ಯರ್ಥಃ ॥ ರರಣತ್ । ರಣಶಬ್ದಾರ್ಥಃ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಇತಶ್ಚ ಲೋಪ ಇತೀಕಾರಲೋಪಃ । ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದಚ್ಯನಿಟಿ ಲಸಾರ್ವಧಾತುಕೇ ವಿಧೀಯಮಾನಸ್ಯಾಭ್ಯಸ್ತಾದ್ಯುದಾತ್ತತ್ವಸ್ಯಾಭಾವೇ ಧಾತುಸ್ವರಃ ಶಿಷ್ಯತೇ । ಸಚತೇ । ಷಚ ಸಮವಾಯೇ । ಪುರುಷವ್ಯತ್ಯಯಃ ॥

॥ ಪ್ರತಿಪದಾರ್ಥ ॥

**ದೇವ**—ಪ್ರಕಾಶಮಾನನಾದ । **ಸೋಮ**—ಎಲೈ ಸೋಮದೇವನೇ । **ತವ**—ನಿನ್ನ । **ಸಖ್ಯೇ**—ಸ್ನೇಹ ಸಂಬಂಧವಿರಲಾಗಿ । **ಯಃ ಮರ್ತ್ಯಃ**—ಯಾವ ಯಜಮಾನನು । **ರಾರಣತ್**—ಸೂಕ್ತರೂಪವಾದ ಸ್ತೋತ್ರದಿಂದ ನಿನ್ನನ್ನು ಸ್ತುತಿಸುತ್ತಾನೋ । **ತಂ**—ಆ ಯಜಮಾನನನ್ನು । **ಕವಿಃ**—ದಿವ್ಯಚಕ್ಷುಸ್ಸುಳ್ಳವನೂ । **ದಕ್ಷಃ**—(ಸರ್ವ ಕಾರ್ಯಕ್ಕೂ) ಸಮರ್ಥನೂ ಆದ ನೀನು । **ಸಚತೇ**—ಸೇವಿಸುತ್ತೀಯೆ. (ಅನುಗ್ರಹಿಸುತ್ತೀಯೆ) ।

ಭಾವಾರ್ಥ

ಪ್ರಕಾಶಮಾನನಾದ ಎಲೈ ಸೋಮದೇವನೇ, ನಿನಗೆ ಮಾಡತಕ್ಕ ಸೇವೆಯು ವ್ಯರ್ಥವಾಗುವುದಿಲ್ಲ. ನಿನ್ನ ಸ್ನೇಹದ ನಿಮಿತ್ತವಾಗಿ ಯಾವ ಯಜಮಾನನು ಸೂಕ್ತರೂಪವಾದ ಸ್ತೋತ್ರದಿಂದ ನಿನ್ನನ್ನು ಸ್ತುತಿಸುತ್ತಾನೋ ಆ ಯಜಮಾನನನ್ನು ದಿವ್ಯಚಕ್ಷುಸ್ಸುಳ್ಳವನೂ, ಸರ್ವಕಾರ್ಯಕ್ಕೂ ಸಮರ್ಥನೂ ಆದ ನೀನು ಖಂಡಿತವಾಗಿಯೂ ಅನುಗ್ರಹಿಸುತ್ತೀಯೆ.

English Translation

The experienced sage commends the mortal who, divine Soma, praises you through affection.

ವಿಶೇಷವಿಷಯಗಳು

**ರಾರಣತ್—ರಣತಿ ಏತತ್ಸೂಕ್ತರೂಪೇಣ ತ್ವಾಂ ಸ್ತೌತಿ ।** ಈ ಸೂಕ್ತರೂಪದಲ್ಲಿ ನಿನ್ನನ್ನು ಸ್ತುತಿಸುತ್ತಾನೆ ಎಂಬರ್ಥವನ್ನು ಸಾಯಣರು ಮಾಡುತ್ತಾರೆ. **ರಣ-ಶಬ್ದೇ** ಎಂಬ ಧಾತುವಿನಿಂದ ಶಬ್ದವೆಂಬ ಅರ್ಥವನ್ನು ಕೊಡತಕ್ಕದ್ದಾಗಿ ಈ ರೂಪನಿಷ್ಪತ್ತಿಯನ್ನು ತೋರಿಸಿ ಸ್ತೋತ್ರರೂಪವಾದ ಶಬ್ದವೆಂದು ತೋರಿಸುತ್ತಾರೆ. ಆದರೆ ಈ ಅರ್ಥಕ್ಕಿಂತಲೂ ಸ್ಕಂದಸ್ವಾಮಿಗಳ ಅರ್ಥವೇ ಸಮಂಜಸವಾಗಿ ಕಾಣುವುದು. ಅವರು **ರಾರಣತ್—ಅತ್ಯಂತಂ ರಮತೇ ।** ಅತಿಯಾಗಿ ಹರ್ಷಿಸುತ್ತಾನೆ ಎಂಬ ವ್ಯಾಖ್ಯಾನವನ್ನು ಮಾಡುತ್ತಾರೆ. ಸನ್ನಿವೇಶವನ್ನು ನೋಡಿದರೂ ಸಹ, ನಿನ್ನ ಸಖಿತ್ವದ ಫಲವಾದ ಸಂತೋಷವನ್ನು ನಾವು ಅನುಭವಿಸುತ್ತೇವೆ ಎನ್ನುವುದೇ ಸಹಜವಾಗಿರುತ್ತದೆ. ಋ. ಸಂ. ೧೦-೮೬-೧೨ ಮುಂತಾದ ಋಕ್ಕುಗಳಲ್ಲೂ ಸಹ ಸಂತೋಷಪಡು ಎನ್ನುವ ಅರ್ಥವು ಇರುತ್ತದೆ.

**ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ ಋತೇ ।**

(ಋ. ಸಂ. ೧೦-೮೬-೧೨)

ಎಂಬ ಋಕ್ಕಿಗೆ ಭಾಷ್ಯಕಾರರು **ನ ರರಾಣ ನ ರಮೆ** ಎಂದು ವ್ಯಾಖ್ಯಾನವನ್ನು ಮಾಡುತ್ತಾರೆ.

**ಕವಿಃ**—ಕ್ರಾಂತದರ್ಶೀ, ಮೇಧಾವಿ ಎಂಬ ಅರ್ಥಗಳಿರುವುದನ್ನೂ ಈ ಪದದ ವೈಶಿಷ್ಟ್ಯವನ್ನೂ ಹಿಂದೆ ಅನೇಕ ಸಲ ಹೇಳಿದೆ.

**ಮರ್ತ್ಯಃ**—**ಮರ್ಯಃ** ಎಂಬ ಪದದಂತೆಯೇ ಮರಣ ಧರ್ಮವುಳ್ಳ ಮಾನವನೆಂದರ್ಥವು.

**ಸಚತೇ**—ಸೇವಿಸುತ್ತಾನೆ.

**ತಂ ದಕ್ಷಃ ಸಚತೇ ಕವಿಃ**—ಋಕ್ಕಿನ ಉತ್ತರಾರ್ಧವಾದ ಈ ಭಾಗಕ್ಕೆ ಸಾಯಣರ ಅನ್ವಯವೇ ಒಂದು ವಿಧವಾಗಿಯೂ ಸ್ಕಂದಸ್ವಾಮಿಗಳ ಅನ್ವಯವು ಮತ್ತೊಂದು ವಿಧವಾಗಿಯೂ ಇರುತ್ತದೆ. **ಕವಿಃ**—ಮೇಧಾವಿಯೂ ಅಥವಾ ಕ್ರಾಂತದರ್ಶಿಯೂ, **ದಕ್ಷಃ**—ಸರ್ವಕಾರ್ಯಸಮರ್ಥನೂ ಆದ ನೀನು **ತಂ**—ಯಜಮಾನನನ್ನು **ಸಚತೇ**—ಸೇವಿಸುತ್ತೀಯೆ, ಅಂದರೆ ಅನುಗ್ರಹಿಸುತ್ತೀಯೆ ಎಂದು ಸಾಯಣರೂ, **ಕವಿಃ**—ಮೇಧಾವಿಯಾದ ಯಜಮಾನನು **ತಂ ದಕ್ಷಃ**—ಆ ಬಲವನ್ನಾಗಲಿ ಅಥವಾ ವೃದ್ಧಿಯನ್ನಾಗಲೀ **ಸಚತೇ** –ಸೇವಿಸುತ್ತಾನೆ ಅಂದರೆ ಅನುಭವಿಸುತ್ತಾನೆ ಎಂದು ಸ್ಕಂದಸ್ವಾಮಿಗಳೂ ಅರ್ಥಮಾಡುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಸಖ್ಯೇ**—ಸಖ್ಯುಃ ಭಾವಃ ಸಖ್ಯಮ್. **ಸಖ್ಯುರ್ಯಃ** (ಪಾ. ಸೂ. ೫-೧-೧೨೬) ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರರಣತ್**—ರಣ ಶಬ್ದೇ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್. **ಇತಶ್ಚ ಲೋಪಃ**-(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ ಶೇಷ. **ಲೇಟೋಽಡಾಟೌ**—ಎಂಬುದರಿಂದ ಪ್ರತ್ಯಯಕ್ಕೆ ಅಡಾಗಮ. ಯಃ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—ಎಂಬುದರಿಂದ ನಿಘಾತಸ್ವರ ಪ್ರತಿಷೇಧ. **ಛಂದಸ್ಯುಭಯಥಾ**—ಎಂಬುದರಿಂದ ಪ್ರತ್ಯಯಕ್ಕೆ ಆರ್ಧಧಾತುಕ ಸಂಜ್ಞೆ ಇರುವುದ ರಿಂದ ಇಟ್‌ಭಿನ್ನ ಅಜಾದಿಯಾದ ಲಸಾರ್ವಧಾತುಕಕ್ಕೆ ವಿಧೀಯಮಾನವಾದ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಬರುವ ಆದ್ಯುದಾತ್ತಸ್ವರವು ಬಾರದಿರುವಾಗ ಧಾತುಸ್ವರ ಉಳಿಯುತ್ತದೆ. ಅಭ್ಯಾಸಕ್ಕೆ ಛಾಂದಸವಾಗಿ ಹ್ರಸ್ವ.

**ಸಚತೇ** —ಷ ಚ ಸಮವಾಯೇ ಧಾತು. **ಧಾತ್ವಾದೇಃ ಷಃ ಸಃ**—ಎಂಬುದರಿಂದ ಆದಿಗೆ ಸತ್ವ. **ವ್ಯತ್ಯಯೋ ಬಹುಲಮ್**-ಎಂಬುದರಿಂದ ಮಧ್ಯಮಪುರುಷಏಕವಚನಕ್ಕೆ ಪ್ರಥಮಪುರುಷಏಕವಚನ ಪ್ರತ್ಯಯ ಬರುತ್ತದೆ. **ಟಿತಆತ್ಮನೇಪದಾನಾಂ**-ಎಂಬುದರಿಂದ ಏತ್ವ. **ಕರ್ತರಿ ಶಪ್**—ಎಂಬುದರಿಂದ ಶಪ್‌ವಿಕರಣ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೪ ॥



ಸಂಹಿತಾಪಾಠಃ

ಉರುಷ್ಯಾ ಣೋ ಅಭಿಶಸ್ತೇಃ ಸೋಮ ನಿ ಪಾಹ್ಯಂಹಸಃ ।
ಸಖಾ ಸುಶೇವ ಏಧಿ ನಃ ॥ ೧೫ ॥

ಪದಪಾಠಃ

ಉರುಷ್ಯ । ನಃ । ಅಭಿಽಶಸ್ತೇಃ । ಸೋಮ । ನಿ । ಪಾಹಿ । ಅಂಹಸಃ ।
ಸಖಾ । ಸುಽಶೇವಃ । ಏಧಿ । ನಃ ॥ ೧೫ ॥

ಸಾಯಣಭಾಷ್ಯಂ

ಹೇ ಸೋಮ ತ್ವಂ ನೋಽಸ್ಮಾನಭಿಶಸ್ತೇರಭಿಶಂಸನಾದಭಿಶಾಪರೂಪಾನ್ನಿಂದನಾದುರುಷ್ಯ । ರಕ್ಷ । ಉರುಷ್ಯತೀ ರಕ್ಷಾಕರ್ಮೇತಿ ಯಾಸ್ಕಃ । ನಿ. ೫-೨೩ । ತಥಾಂಹಸೋಽಸ್ಮತ್ಕೃತಾತ್ಪಾಪಾಚ್ಚ ನಿ ಪಾಹಿ । ನಿತರಾಂ ಪಾಲಯ । ಏವಮಸ್ಮದೀಯಂ ಪಾಪಂ ಪರಿಹೃತ್ಯ ಸುಶೇವೋಽಸ್ಮಭ್ಯಂ ದಾತವ್ಯೇನ ಶೋಭನೇನ ಸುಖೇನ ಯುಕ್ತಃ ಸನ್ಸಖೈಧಿ । ಹಿತಕಾರೀ ಭವ ॥ ಅಭಿಶಸ್ತೇಃ । ಶಸ್ಸು ಸ್ತುತೌ । ಅಸ್ಮಾದ್ಭಾವೇ ಕ್ತಿನ್ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಏಧಿ । ಅಸ ಭುವಿ । ಲೋಟಿ ಸೇರ್ಹಿಃ । ತಸ್ಯ ಙಿತ್ತ್ವಾತ್ ಶ್ನಸೋರಲ್ಲೋಪ ಇತ್ಯಕಾರಲೋಪಃ । ಘ್ವಸೋರೇದ್ಧಾವಭ್ಯಾಸಲೋಪಶ್ಚೇತಿ ಸಕಾರಸ್ಯೈತ್ವಂ । ತಸ್ಯಾಸಿದ್ಧವದತ್ರಾ ಭಾದಿತ್ಯಸಿದ್ಧತ್ವಾತ್ ಹುಝಲ್ಭ್ಯೋ ಹೇರ್ಧಿರಿತಿ ಹೇರ್ಧಿರಾದೇಶಃ ॥

ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ । **ನಃ**—ನಮ್ಮನ್ನು । **ಅಭಿಶಸ್ತೇಃ**—ಅಪವಾದ ರೂಪವಾದ ಕಳಂಕದಿಂದ । **ಉರುಷ್ಯ**—ಕಾಪಾಡು । **ಅಂಹಸಃ**—( ನಾವು ಮಾಡಬಹುದಾದ ಅಥವಾ ಮಾಡಿದ ) ಪಾಪದಿಂದ । **ನಿ ಪಾಹಿ**— ಸಂಪೂರ್ಣವಾಗಿ ರಕ್ಷಿಸು । **ಸುಶೇವಃ**— ನಮ್ಮಿಂದ ಅರ್ಪಿತವಾಗುವ ಸುಖದೊಡನೆ ಕೂಡಿ । **ನಃ**—ನಮಗೆ । **ಸಖಾ ಏಧಿ**—ಸ್ನೇಹಿತನಂತೆ ನಮಗೆ ಸುಖಕಾರಿಯಾಗು ॥

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮನ್ನು ಅಪವಾದ ರೂಪವಾದ ಕಳಂಕದಿಂದ ಕಾಪಾಡು. ನಾವು ಮಾಡಿದ ಅಥವಾ ಮಾಡಬಹುದಾದ ಪಾಪದಿಂದ ಸಂಪೂರ್ಣವಾಗಿ ರಕ್ಷಿಸು. ನಮ್ಮಿಂದ ಅರ್ಪಿತವಾಗುವ ಸುಖಸಾಧನಗಳೊಡನೆ ಕೂಡಿಕೊಂಡು ನಮಗೆ ಸ್ನೇಹಿತನಂತೆ ಸುಖಕಾರಿಯಾಗು.

## English Translation

Soma, protect us from calumny, preserve us from Sin ; pleased with our service, be our friend.

॥ ವಿಶೇಷವಿಷಯಗಳು ॥

**ಅಭಿಶಸ್ತೇಃ**—**ಅಭಿಶಸ್ತಿ** ಶಬ್ದಕ್ಕೆ ಶಾಪ, ಆಪತ್ತು, ನಿಂದೆ ಮುಂತಾದ ಅನೇಕ ಅರ್ಥಗಳಿರುತ್ತವೆ. ಇಲ್ಲಿ **ಅಭಿಶಾಪರೂಪಾನ್ನಿಂದನಾತ್ ।** ಅಂದರೆ ಅಪವಾದ ರೂಪವಾದ ಕಳಂಕದಿಂದ ಅಥವಾ ನಿಂದೆಯಿಂದ. ಎಂಬರ್ಥ ವನ್ನು ಭಾಷ್ಯಕಾರರು ಹೇಳಿರುತ್ತಾರೆ.

**ಉರುಷ್ಯ**—**ಉರುಷ್ಯತೀ ರಕ್ಷಾಕರ್ಮಾ ।** ( ನಿ. ೫-೨೩ ) **ಉರುಷ್ಯ** ಅಂದರೆ ರಕ್ಷಿಸು ಎಂದರ್ಥವು. ಋ. ಸಂ. ೫-೨೪-೩ ; ೧-೫೮-೯ ಮುಂತಾದ ಅನೇಕ ಋಕ್ಕುಗಳಲ್ಲಿ ಈ ಪದವು ರಕ್ಷಿಸು ಎಂದರ್ಥದಲ್ಲಿ ಬಂದಿದೆ.

**ಅಂಹಸಃ**—**ಅಂಹತಿಶ್ಚಾಂಹಶ್ಚಾಂಹುಶ್ಚ ಹಂತೇಃ ।** ( ನಿ. ೪-೨೫) ಹಿಂಸಿಸು ಎಂಬರ್ಥವನ್ನು ಕೊಡುವ **ಹನ್** ಧಾತುವಿನಿಂದ **ಅಂಹಸ್** ಎಂಬ ಶಬ್ದವು ನಿಷ್ಪನ್ನವಾಗಿದ್ದರೂ ಸಹ ಈ ಶಬ್ದಕ್ಕೆ ಸಾಧಾರಣವಾಗಿ ಹಿಂಸೆ ಎಂಬರ್ಥಕ್ಕಿಂತಲೂ ಪಾಪವು ಎನ್ನುವ ಅರ್ಥವೇ ಹೆಚ್ಚು ಬಳಕೆಯಲ್ಲಿರುವುದು. ಇಲ್ಲಿ ಪಾಪದಿಂದ ಎಂದರ್ಥವು.

**ಸುಶೇವಃ**—ಶ್ರೇಷ್ಠವಾದ ಸುಖದಾತನಾಗಿ ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಉರುಷ್ಯಾ**—ಉರುಷ್ಯ ಎಂಬುದು ರಕ್ಷಣಾರ್ಥಕವಾದ ಧಾತು. ಲೋಣ್ಮಧ್ಯಮಪುರುಷ ಏಕವಚನರೂಪ **ಅನ್ಯೇಷಾಮಪಿ ದೃಶ್ಯತೇ**—ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅಭಿಶಸ್ತೇಃ** ಶಂಸು ಸ್ತುತೌ ಧಾತು. ಇದಕ್ಕೆ ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್**-(ಪಾ.ಸೂ.೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. **ಅನಿದಿತಾಂ ಹಲಉ**—ಎಂಬುದರಿಂದ ಉಪಧಾನಕಾರಕ್ಕೆ ಲೋಪ. ಶಸ್ತಿ ಶಬ್ದವಾಗುತ್ತದೆ. ಇದು ಪರವಾದಾಗ ಅಭಿಗೆ **ತಾದೌ ಚ ನಿತಿ**-(ಪಾ. ಸೂ. ೬-೨-೫೦) ಎಂಬುದರಿಂದ ನಿತ್ತಾದ ತಕಾರಾದಿ ಪ್ರತ್ಯಯಾಂತವು ಪರವಾದುದರಿಂದ ಪ್ರಕೃತಿಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ಪಾಹಿ**—ಪಾ ರಕ್ಷಣೇ ಧಾತು. ಅದಾದಿ. ಲೋಣ್ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಏಧಿ**—ಅಸ ಭುವಿ ಧಾತು. ಅದಾದಿ. ಲೋಣ್ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಹಿ ಆದೇಶ. **ಸಾರ್ವಧಾತುಕಮಪಿತ್**—ಎಂಬುದರಿಂದ ಅಪಿತ್ವ ಹೇಳಿರು ವುದರಿಂದ ಹಿಗೆ ಙಿತ್ವ ಬರುತ್ತದೆ. ಆಗ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅಸಿನ ಅಕಾರಕ್ಕೆ ಲೋಪ. **ಘ್ವಸೋರೇದ್ಧಾವಭ್ಯಾಸಲೋಪಶ್ಚ**-(ಪಾ. ಸೂ. ೬-೪-೧೧೯) ಎಂಬುದರಿಂದ ಅಸ್‌ಧಾತು ವಿನ ಸಕಾರಕ್ಕೆ ಹಿಪರವಾದಾಗ ಏತ್ವ. ಅದಕ್ಕೆ **ಅಸಿದ್ಧವದತ್ರಾಭಾತ್**—ಎಂಬುದರಿಂದ ಅಸಿದ್ಧವದ್ಭಾವ ಬರುವುದ

ರಿಂದ ಸಕಾರವಿದ್ದಂತೇ ಆಗುವುದರಿಂದ **ಹುಝ್ಝುಲ್‌ಭ್ಯೋಹೇರ್ಧಿಃ** (ಪಾ. ಸೂ. ೬-೪-೧೦೧) ಎಂಬುದರಿಂದ ಝುಲಂತದ ಪರದಲ್ಲಿರುವುದರಿಂದ ಹಿಗೆ ಧಿತ್ವ. ಏಧಿ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ||೧೫||

---

॥ ಸಂಹಿತಾಪಾಠಃ ॥

ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ।
ಭವಾ ವಾಜಸ್ಯ ಸಂಗಥೇ ॥ ೧೬ ॥

ಪದಪಾಠಃ

ಆ । ಪ್ಯಾಯಸ್ವ । ಸಂ । ಏತು । ತೇ । ವಿಶ್ವತಃ । ಸೋಮ । ವೃಷ್ಣ್ಯಂ ।
ಭವ । ವಾಜಸ್ಯ । ಸಂಽಗಥೇ ॥ ೧೬ ॥

ಸಾಯಭಾಷ್ಯಂ

ಗ್ರಾವಸ್ತೋತ್ರ ಆ ಪ್ಯಾಯಸ್ವ ಸಮೇತು ತ ಇತಿ ತೃಚೋ ವಿನಿಯುಕ್ತಃ । ಸೂತ್ರಿತಂ ಚ । ಆ ಪ್ಯಾಯಸ್ವ ಸಮೇತು ತ ಇತಿ ತಿಸ್ರೋ ಮೃಜಂತಿ ತ್ವಾ ದಶ ಕ್ಷಿಪಃ । ಆ. ೫-೧೨ । ಇತಿ ॥ ಪತ್ನೀಸಂಯಾಜೇಷು ಸೌಮ್ಯಸ್ಯಾ ಪ್ಯಾಯಸ್ವೇತ್ಯೇಷಾನುವಾಕ್ಯಾ । ಸೂತ್ರಿತಂ ಚ । ಆ ಪ್ಯಾಯಸ್ವ ಸಮೇತು ತೇ ಸಂತೇ ಪಯಾಂಸಿ ಸಮು ಯಂತು ವಾಜಾಃ । ಆ. ೧-೧೦ । ಇತಿ ॥ ಚಮಸಾಪ್ಯಾಯನೇಽಪ್ಯೇಷಾ ವಿನಿಯುಕ್ತಾ । ಸೂತ್ರಿತಂ ಚ । ಆ ಪ್ಯಾಯಸ್ವ ಸಮೇತು ತೇ ಸಂ ತೇ ಪಯಾಂಸಿ ಸಮು ಯಂತು ವಾಜಾ ಇತಿ ಚಮಸಾನಾದ್ಯೋಪಾದ್ಯಾನ್ । ಆ. ೫-೬ । ಇತಿ ॥

ಹೇ ಸೋಮ ತ್ವಮಾ ಪ್ಯಾಯಸ್ವ । ವರ್ಧಯಸ್ವ । ತೇ ತವ ವೃಷ್ಣ್ಯಂ ವೃಷತ್ವಂ ವೀರ್ಯಂ ಸಾಮರ್ಥ್ಯಂ ವಿಶ್ವತಃ ಸರ್ವತಃ ಸಮೇತು । ಸಂಗಚ್ಛತಾಂ । ತ್ವಯಾ ಸಂಯುಕ್ತಂ ಭವತು । ಏವಂಭೂತಸ್ತ್ವಂ ವಾಜಸ್ಯಾನ್ನಸ್ಯ ಸಂಗಥೇ ಸಂಗಮನೇ ಭವ । ಅಸ್ಮಾಕಮನ್ನಪ್ರದೋ ಭವೇತ್ಯರ್ಥಃ ॥ ವೃಷ್ಣ್ಯಂ । ವೃಷ ಸೇಚನೇ । ಕನಿನ್ಯುವೃಷೀತ್ಯಾದಿನಾ ಕನಿನ್ । ವೃಷ್ಣಿ ಭವಂ ವೃಷ್ಣ್ಯಂ । ಭವೇ ಛಂದ-

**ಸೀತಿ ಯತ್ । ಅಲ್ಲೋಪೋಽನ ಇತ್ಯಕಾರಲೋಪಃ । ಯೇ ಚಾಭಾವಕರ್ಮಣೋರಿತಿ ಪ್ರಕೃತಿಭಾವಸ್ತು ವ್ಯತ್ಯಯೇನ ನ ಪ್ರವರ್ತತೇ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಭವ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ । ಸಂಗಥೇ । ಪಾತೃತುದಿವಚಿರಿಚಿಸಿಚಿಭ್ಯಸ್ಥಕ್ ಇತ್ಯಾದಿನಾ ವಿಧೀಯಮಾನಸ್ಥಕ್ಪ್ರತ್ಯಯೋ ಬಹುಲವಚನಾದ್ಗಮೇರಪಿ ಭವತಿ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥**

ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ, । **ಆ ಪ್ಯಾಯಸ್ವ**—ಸಂಪೂರ್ಣವಾಗಿ ವೃದ್ಧಿಯನ್ನು ಹೊಂದು. **ತೇ**—ನಿನ್ನ । **ವೃಷ್ಣ್ಯಂ**—ವೀರ್ಯವು । **ವಿಶ್ವತಃ**—ನಾನಾದಿಕ್ಕುಗಳಿಂದಲೂ । **ಸಮೇತು**—ಬಂದು (ನಿನ್ನನ್ನು) ತುಂಬಿಕೊಳ್ಳಲಿ । **ವಾಜಸ್ಯ**—(ನಮಗೆ ಹಂಚಬೇಕಾದ) ಅನ್ನದ । **ಸಂಗಥೇ**—ಶೇಖರಣೆಯಲ್ಲಿ । **ಭವ**—ನಿರತನಾಗು.

ಭಾವಾರ್ಥ

ಎಲೈ ಸೋಮದೇವನೇ, ನೀನು ಸಂಪೂರ್ಣವಾಗಿ ವೃದ್ಧಿಯನ್ನು ಹೊಂದು. ನಿನ್ನ ವೀರ್ಯವು ನಾನಾದಿಕ್ಕುಗಳಿಂದಲೂ ಬಂದು ನಿನ್ನನ್ನು ತುಂಬಿಕೊಳ್ಳಲಿ. ನಮಗೆ ಹಂಚಬೇಕಾದ ಅನ್ನದ ಶೇಖರಣೆಯಲ್ಲಿ ನಿರತನಾಗು.

English Translation

Increase Soma ; may vigour come to you from every side ; be deligent in the supply of food to us.

ವಿಶೇಷವಿಷಯಗಳು

**ಆ ಪ್ಯಾಯಸ್ವ ಸಮೇತು ತೇ** ಎಂದು ಮೊದಲಾದ ಮೂರು ಋಕ್ಕುಗಳದುವು ಗ್ರಾವಸ್ತೋತ್ರದಲ್ಲಿ ಎಂದರೆ ಸೋಮಲತೆಯನ್ನು ಜಜ್ಜುವ ಕಲ್ಲುಗಳನ್ನು ಸ್ತೋತ್ರಮಾಡುವಾಗ ಉಪಯೋಗಿಸಲ್ಪಡುವುವು ಎಂದು ಆಶ್ವಲಾಯನ ಶ್ರೌತಸೂತ್ರದ **ಆ ಪ್ಯಾಯಸ್ವ ಸಮೇತು ತೇ ಸಂ ತೇ ಪಯಾಂಸಿ ಸಮು ಯಂತು ವಾಜಾ** ಎಂಬ ಸೂತ್ರದಲ್ಲಿ ಹೇಳಿರುವುದು (ಅ. ೧-೧೦) ಚಮಸಪಾತ್ರವನ್ನು ಸೋಮರಸದಿಂದ ತುಂಬುವಾಗಲೂ ಈಋಕ್ಕಿನ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಆ ಪ್ಯಾಯಸ್ವ ಸಮೇತು ತೇ ಸಂ ತೇ ಪಯಾಂಸಿ ಸಮು ಯಂತು ವಾಜಾ ಇತಿ ಚಮಸಾನಾದ್ಯೋಪಾದ್ಯಾನ್** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು.

**ವೃಷ್ಣ್ಯಂ**—ಉಕ್ಕಿಬರತಕ್ಕ ಬಲ ಅಥವಾ ವೀರ್ಯವೆಂದರ್ಥವು.

**ವಾಜಸ್ಯ**— ವಾಜ ಶಬ್ದವು ಅನ್ನನಾಮಗಳಲ್ಲಿಯೂ ಸಂಗ್ರಾಮಗಳಲ್ಲಿಯೂ ನಿರುಕ್ತದಲ್ಲಿ ಪಠಿತವಾಗಿದೆ. ಈ ವಿಷಯವನ್ನು ಈ ಪದದ ವೈಶಿಷ್ಟ್ಯವನ್ನೂ ಹಿಂದೆ ಹೇಳಿದೆ. ಇಲ್ಲಿ **ವಾಜಸ್ಯ** ಅಂದರೆ ಅನ್ನವೆಂದರ್ಥವು.

**ಸಂಗಥೇ**—ಈ ಶಬ್ದವು ನಿರುಕ್ತದಲ್ಲಿ (೨.೯) ಸಂಗ್ರಾಮ ನಾಮಗಳಲ್ಲಿ ಪಠಿತವಾಗಿದೆ. **ಸಂಗಮನ**ವೆಂದರೆ ಒಟ್ಟಿಗೆ ಸೇರುವುದೆಂಬ ಅರ್ಥದಮೇರೆ ಸಂಗ್ರಾಮವೆಂದು ಒಂದು ಮತ. ಆದರೆ ಇಲ್ಲಿ **ಸಂಗಥೇ** ಅಂದರೆ ಶೇಖರಣೆಯಲ್ಲಿ ಅಥವಾ ನಮಗೆ ತಂದು ಸೇರಿಸುವುದರಲ್ಲಿ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಪ್ಯಾಯಸ್ವ**—ಓಪ್ಯಾಯೀ. ವೃದ್ಧೌ. ಧಾತು. ಭ್ವಾದಿ. ಆತ್ಮನೇಪದಿ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್‌ಪ್ರತ್ಯಯ. **ಥಾಸಃ ಸೇ**—ಎಂಬುದರಿಂದ ಸೇ ಆದೇಶ. **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಏತ್ವಕ್ಕೆ ವ ಆದೇಶ. ಶಪ್‌ವಿಕರಣ. ನಿಘಾತಸ್ವರ ಬರುತ್ತದೆ.

**ಏತು** — ಇಣ್ ಗತೌ ಧಾತು. ಲೋಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ವೃಷ್ಣ್ಯಮ್**—ವೃಷ ಸೇಚನೇ. ಧಾತು. ಇದಕ್ಕೆ **ಕನಿನ್‌ಯುವೃಷಿ**-(ಉ. ಸೂ. ೧-೧೫೪) ಎಂಬುದರಿಂದ ಕನಿನ್‌ಪ್ರತ್ಯಯ. ವೃಷನ್ ಶಬ್ದವಾಗುತ್ತದೆ. ವೃಷ್ಣಿ ಭವಂ ವೃಷ್ಣ್ಯಮ್. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್‌ಪ್ರತ್ಯಯ. ಯಾದಿಪ್ರತ್ಯಯವಾದುದರಿಂದ ಭಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ**—ಎಂಬುದರಿಂದ ವೃಷನ್ ಶಬ್ದದ ಅನಿನ ಅಕಾರಕ್ಕೆ ಲೋಪ. ವಾಸ್ತವವಾಗಿ ಇಲ್ಲಿ **ಯೇಚಾಭಾವಕರ್ಮಣೋಃ** – (ಪಾ. ಸೂ. ೬-೪-೧೬೪) ಎಂಬುದರಿಂದ ಪ್ರಕೃತಿಭಾವ ಬರಬೇಕಾಗುತ್ತದೆ. ಆದರೆ **ವ್ಯತ್ಯಯೋ ಬಹುಲಮ್**—ಎಂಬುದರಿಂದ ಇಲ್ಲಿ ವ್ಯತ್ಯಯದಿಂದ ಬರುವುದಿಲ್ಲ. **ಯತೋಽನಾವಃ**—ಎಂಬುದರಿಂದ ಯತ್‌ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಭವ**—ಭೂ ಸತ್ತಾಯಾಂ ಧಾತು. ಲೋಣ್ಮಧ್ಯಮಪುರುಷ ಏಕವಚನರೂಪ. ಎರಡು ಅಚ್ ಇರುವುದರಿಂದ **ದ್ವ್ಯಚೋಽತಸ್ತಿಙಃ**-(ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸಂಗಥೇ**—ಗಮ್ಲೃ ಗತೌ. ಧಾತು. **ಪಾತೃತುದಿವಚಿ**— (ಉ. ಸೂ. ೨-೧೬೪) ಎಂಬುದರಿಂದ ವಿಧಿಸಲ್ಪಡುವ ಥಕ್ ಪ್ರತ್ಯಯವು ಉಣಾದಿಯಲ್ಲಿ ಬಹುಲವಚನವಿರುವುದರಿಂದ ಗಮ್‌ಧಾತುವಿಗೂ ಬರುತ್ತದೆ. ಕಿತ್ತಾದುದರಿಂದ **ಅನುದಾತ್ತೋಪದೇಶ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕ ಮಕಾರಕ್ಕೆ ಲೋಪ. **ಥಾಥಘಞ್**—(ಪಾ. ಸೂ. ೬-೨-೧೪೪) ಎಂಬುದರಿಂದ ಸಮ್ ಎಂಬುದರೊಡನೆ ಸಮಾಸವಾದಾಗ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ. ॥ ೧೬ ॥

---

ಸಂಹಿತಾಪಾಠಃ

ಆ ಪ್ಯಾಯಸ್ವ ಮದಿಂತಮ ಸೋಮ ವಿಶ್ವೇಭಿರಂಶುಭಿಃ ।
ಭವಾ ನಃ ಸುಶ್ರವಸ್ತಮಃ ಸಖಾ ವೃಧೇ ॥ ೧೭ ॥

ಪದಪಾಠಃ

ಆ । ಪ್ಯಾಯಸ್ವ । ಮದಿನ್ಽತಮ । ಸೋಮ । ವಿಶ್ವೇಭಿಃ । ಅಂಶುಽಭಿಃ ।
ಭವ । ನಃ । ಸುಶ್ರವಃಽತಮಃ । ಸಖಾ । ವೃಧೇ ॥ ೧೭ ॥

ಸಾಯಣಭಾಷ್ಯಂ

ಹೇ ಮಂದಿತಮಾತಿಶಯೇನ ಮದವನ್ ಸೋಮ ವಿಶ್ವೇಭಿಃ ಸರ್ವೈರಂಶುಭಿರ್ಲತಾವಯವೈರಾಪ್ಯಾಯಸ್ವ । ಆ ಸಮಂತಾದ್ವೃದ್ಧೋ ಭವ । ಸ ತ್ವಂ ಸುಶ್ರವಸ್ತಮೋಽತಿಶಯೇನ ಶೋಭನಾನ್ನ-ಯುಕ್ತಃ ಸನ್ ನೋಽಸ್ಮಾಕಂ ವೃಧೇ ವರ್ಧನಾಯ ಸಖಾ ಭವ । ಮಿತ್ರೀಭವ ॥ ಮದಿಂತಮ ಮದೋ ಹರ್ಷಃ । ತದ್ವಾನ್ ಮದೀ । ಅತಿಶಯೇನ ಮದೀ ಮದಿಂತಮಃ । ನಾದ್ಘಸ್ಯ । ಪಾ. ೮-೨-೧೭ ಇತಿ ತಮಪೋ ನುಟ್ । ಸುಶ್ರವಸ್ತಮಃ ಶ್ರವ ಇತ್ಯನ್ನನಾಮ । ಶ್ರೂಯತ ಇತಿ ಶ್ರವಃ । ನಿ ೧೦-೩ । ಇತಿ ಯಾಸ್ಕಃ । ಶೋಭನಂ ಶ್ರವೋ ಯಸ್ಯ ಸ ತಥೋಕ್ತಃ । ಅತಿಶಯೇನ ಸುಶ್ರವಾಃ ಸುಶ್ರವಸ್ತಮಃ । ತಮಪಃ ಪಿತ್ತ್ವಾದನುದಾತ್ತತ್ವೇ ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾತ್ತತ್ವಮೇವ ಶಿಷ್ಯತೇ ॥

॥ ಪ್ರತಿಪದಾರ್ಥ ॥

**ಮದಿಂತಮ**— ಅತಿಶಯವಾದ ಹರ್ಷದಿಂದ ಕೂಡಿದ । **ಸೋಮ**— ಎಲೈ ಸೋಮದೇವನೇ । **ವಿಶ್ವೇಭಿಃ**—ಸಕಲವಾದ । **ಅಂಶುಭಿಃ**—ಲತೆಗಳ ಸುರುಳಿಗಳೊಡನೆ । **ಆಪ್ಯಾಯಸ್ವ**—ಸುತ್ತಲೂ ವೃದ್ಧಿಯನ್ನು ಹೊಂದು । **ಸುಶ್ರವಸ್ತಮಃ**—ಶ್ರೇಷ್ಠವಾದ ಅನ್ನದೊಡನೆ ಅತಿಶಯವಾಗಿ ಕೂಡಿಕೊಂಡು । **ನಃ**—ನಮ್ಮ । **ವೃಧೇ**—ಬೆಳವಣಿಗೆಗೆ (ಕಾರಣನಾದ) । **ಸಖಾ ಭವ**—ಸ್ನೇಹಿತನಾಗಿ ಆಗು ॥

ಭಾವಾರ್ಥ

ಎಲೈ ಸೋಮದೇವನೇ, ನೀನು ಯಾವಾಗಲೂ ಅತಿಶಯವಾದ ಹರ್ಷದಿಂದ ಕೂಡಿರುವೆ. ಸುಂದರವಾಗಿರುವ ಸಮಸ್ತಲತಾಸುರಳಿಗಳೊಡನೆ ನೀನು ಸುತ್ತಲೂ ವೃದ್ಧಿಯನ್ನು ಹೊಂದು. ಶ್ರೇಷ್ಠವಾದ ಅನ್ನದೊಡನೆ ಅತಿಶಯವಾಗಿ ಕೂಡಿಕೊಂಡು ನಮ್ಮ ಬೆಳೆವಣಿಗೆಗೆ ಕಾರಣನಾದ ನಮ್ಮ ಸ್ನೇಹಿತನಾಗಿ ಆಗು.

English Translation

Exulting Soma, increase with all twining plants ; be a friend to us ; well supplied with food we may prosper.

ವಿಶೇಷವಿಷಯ.ಗಳು

**ಮದಿಂತಮ**—ಅತ್ಯಂತ ಅತಿಶಯವಾದ ಮದವುಳ್ಳವನು ಅಂದರೆ ಹರ್ಷವುಳ್ಳವನೆಂದು ಸಾಯಣರೂ, ಅತ್ಯಂತ ಅತಿಶಯವಾಗಿ ಮದವನ್ನುಂಟುಮಾಡುವವನೆಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುತ್ತಾರೆ. ಋಕ್ಸಂಹಿತೆಯ ೯-೯೧-೫ನೆಯ

**ಮತ್ಸಿ ಶರ್ಧೋ ಮಾರುತಂ ಮತ್ಸಿ ದೇವಾನ್ ಮತ್ಸಿ ಮಹಾಮಿಂದ್ರ ಮಿಂದೋ ಮದಾಯ ।**
( ಋ. ಸಂ. ೯-೯೧-೫ )

ಎಂಬ ಋಕ್ಕಿನಲ್ಲಿ ಹೇಳಿರುವಂತೆ ಸಕಲ ದೇವತೆಗಳಿಗೂ ಮದವನ್ನುಂಟುಮಾಡುವವನು ಸೋಮನಾದ್ದರಿಂದ ಮದಕಾರಿ ಯೆಂಬ ಅರ್ಥವೇ ಸರಿಯಾಗುವುದು.

**ಅಂಶುಭಿಃ**—ಅಂಶುನೆಂದರೆ ಕಿರಣವೆಂದರ್ಥವು. ಆದರೆ ಇಲ್ಲಿ ಸೋಮಲತೆಯ ಅವಯವಗಳು ಪ್ರಕಾಶ ಮಾನವಾಗಿಯೂ, ಸೂಕ್ಷ್ಮವಾಗಿಯೂ ಕಿರಣಗಳಂತೆ ನಾನಾದಿಕ್ಕುಗಳಿಗೂ ಹರಡಿರುವುದರಿಂದ ಈ ಅವಯವಗಳಿಗೇ ಅಂಶುಗಳೆಂದು ಹೇಳಿರುತ್ತಾರೆ.

**ಸುಶ್ರವಸ್ತಮಃ**—**ಶ್ರವಃ** ಶಬ್ದವು ಜಲನಾಮಗಳಲ್ಲಿಯೂ ಧನನಾಮಗಳಲ್ಲಿಯೂ ಅನ್ನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಇಲ್ಲಿ ಅನ್ನವೆಂದು ಅರ್ಥಮಾಡಿರುತ್ತಾರೆ. ಅತ್ಯಂತ ಶ್ರೇಷ್ಠವಾದ ಅನ್ನವುಳ್ಳವನೆಂದ ರ್ಥವು. ಸ್ಕಂದಸ್ವಾಮಿಗಳು **ಸುಧನತಮಃ ಸುಕೀರ್ತಿತಮೋ ವಾ** ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ.

ವ್ಯಾಕರಣಪ್ರಕ್ರಿಯಾ

**ಮದಿಂತಮ**—ಮದೋ ಹರ್ಷಃ. ಮದಃ ಅಸ್ಯ ಅಸ್ತೀತಿ ಮದೀ. **ಅತ ಇನಿಠನೌ**—ಎಂಬುದರಿಂದ ಇನಿ ಪ್ರತ್ಯಯ. ಅತಿಶಯೇನ ಮದೀ ಮದಿಂತಮಃ. **ಅತಿಶಾಯನೇ ತಮಬಿಷ್ಠನೌ**—ಎಂಬುದರಿಂದ ತಮಪ್. **ನಾದ್ಘಸ್ಯ** (ಪಾ. ಸೂ. ೮-೨-೧೭) ನಕಾರಾಂತದ ಪರದಲ್ಲಿರುವ ತರಪ್ ತಮಪ್ ಪ್ರತ್ಯಯಗಳಿಗೆ ನುಟಾಗಮ ಎಂಬುದರಿಂದ ಛಂದಸ್ಸಿನಲ್ಲಿ ನುಟ್. ನಕಾರಕ್ಕೆ ಅನುಸ್ವಾರ ಪರಸವರ್ಣ. ಮದಿಂತಮ ಎಂಬುದು ಸಂಬುದ್ಧಿಯ ರೂಪವಾದುದರಿಂದ **ಆಮಂತ್ರಿತಸ್ಯಚ**--(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ವಿಶ್ವೇಭಿಃ**—ವಿಶ್ವ ಶಬ್ದಕ್ಕೆ ಭಿಸ್ ಪರವಾದಾಗ **ಬಹುಲಂ ಛಂದಸಿ**-(ಪಾ. ಸೂ. ೭-೧-೧೦) ಎಂಬುದ ರಿಂದ ಐಸಾದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಸೂತ್ರದಿಂದ ಏತ್ವ. ಸಕಾರಕ್ಕೆ ರುತ್ವವಿಸರ್ಗ.

**ಭವ**—ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತು ಸ್ವರ ಉಳಿಯುತ್ತದೆ.

**ಸುಶ್ರವಸ್ತಮಃ**—ಶ್ರವಃ ಇತಿ ಅನ್ನನಾಮ ಶ್ರೂಯತೇ ಇತಿ ಶ್ರವಃ (ನಿರು. ೧೦-೩) ಇತಿ ಯಾಸ್ಕಃ ಅಭಿಜ್ಞರು ಶ್ರವ ಎಂಬುದು ಅನ್ನದ ಹೆಸರೆಂದು ಹೇಳುತ್ತಾರೆ. ಶೋಭನಂ ಶ್ರವಃ ಯಸ್ಯಸಃ ಸುಶ್ರವಾಃ. ಅತಿ ಶಯೇನ ಸುಶ್ರವಾಃ ಸುಶ್ರವಸ್ತಮಃ. **ಅತಿಶಾಯನೇ ತಮಬಿಷ್ಠನೌ**—ಎಂಬುದರಿಂದ ತಮಪ್ ಪ್ರತ್ಯಯ.

ತಮಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ**—ಎಂಬುದರಿಂದ ಅನುದಾತ್ತ. ಆಗ **ಸೋರ್ಮನಸೀ ಅಲೋಮೋಷಸೀ**—ಎಂಬುದರಿಂದ ಶ್ರವಸ್ ಅಸಂತವಾದುದರಿಂದ ಉತ್ತರಪದ ಆದ್ಯುದಾತ್ತಸ್ವರ ಬಂದಿರುವುದು ಉಳಿಯುತ್ತದೆ. ॥ ೧೭ ॥

———— :o: ————

ಸಂಹಿತಾಪಾಠಃ

ಸಂ ತೇ ಪಯಾಂಸಿ ಸಮು ಯಂತು ವಾಜಾಃ ಸಂ ವೃಷ್ಣ್ಯಾನ್ಯ-
ಭಿಮಾತಿಷಾಹಃ।
ಆಪ್ಯಾಯಮಾನೋ ಅಮೃತಾಯ ಸೋಮ ದಿವಿ ಶ್ರವಾಂಸ್ಯು-
ತ್ತಮಾನಿ ಧಿಷ್ವ ॥ ೧೮ ॥

ಪದಪಾಠಃ

ಸಂ । ತೇ । ಪಯಾಂಸಿ । ಸಂ । ಊಂ ಇತಿ । ಯಂತು । ವಾಜಾಃ । ಸಂ ।
ವೃಷ್ಣ್ಯಾನಿ । ಅಭಿಮಾತಿಽಸಹಃ ।
ಆಽಪ್ಯಾಯಮಾನಃ । ಅಮೃತಾಯ । ಸೋಮ । ದಿವಿ । ಶ್ರವಾಂಸಿ । ಉತ್ಽ-
ತಮಾನಿ । ಧಿಷ್ವ ॥ ೧೮ ॥

॥ ಸಾಯಣಭಾಷ್ಯಂ ॥

ಪತ್ನೀಸಂಯಾಜೇಷು ಸೌಮ್ಯಸ್ಯ ಸಂ ತೇ ಪಯಾಂಸೀತಿ ಯಾಜ್ಯಾ । ಸೂತ್ರಿತಂ ಚ । ಸಂ ತೇ ಪಯಾಂಸಿ ಸಮು ಯಂತು ವಾಜಾ ಇಹ ತ್ವಷ್ಟಾರಮಗ್ರಿಯಂ । ಆ. ೧-೧೦ । ಇತಿ ॥ ಚಮಸಾಪ್ಯಾಯ-

ನೇಽಪ್ಯೇಷಾ । ಸೂತ್ರಿತಂ ಚ । ಸಂ ತೇ ಪಯಾಂಸಿ ಸಮು ಯಂತು ವಾಜಾ ಇತಿ ಚಮಸಾನಾದ್ಯೋಽಸಾದ್ಯಾನ್ । ಆ. ೫-೬ । ಇತಿ ॥

ಹೇ ಸೋಮ ಅಭಿಮಾತಿಷಾಹೋಽಭಿಮಾತೀನಾಂ ಶತ್ರೂಣಾಂ ಹಂತುಸ್ತೇ ತವ ಏವಂಭೂತಂ ತ್ವಾಂ ಪಯಾಂಸಿ ಶ್ರಯಣಾರ್ಥಾನಿ ಕ್ಷೀರಾಣಿ ಸಂ ಯಂತು । ಸಂಗಚ್ಛಂತಾಂ । ತಥಾ ವಾಜಾ ಉ ಹವಿರ್ಲಕ್ಷಣಾನ್ಯನ್ನಾನಿ ಚ ತ್ವಾಂ ಸಂಗಚ್ಛಂತಾಂ । ವೃಷ್ಣ್ಯಾನಿ ವೀರ್ಯಾಣಿ ಚ ಸಂಗಚ್ಛಂತಾಂ । ಹೇ ಸೋಮ। ತ್ವಮಮೃತಾಯಾಸ್ಮಾಕಮಮೃತತ್ವಾಯಾಮರತ್ವಾಯಾಪ್ಯಾಯಮಾನ ಆ ಸಮಂತಾದ್ವರ್ಧಮಾನಃ ಸನ್ದಿವಿ ನಭಸಿ ಸ್ವರ್ಗೇ ಉತ್ತಮಾನ್ಯುದ್ಗತತಮಾನ್ಯುತ್ಕೃಷ್ಟಾನಿ ಶ್ರವಾಂಸ್ಯನ್ನಾನ್ಯಸ್ಮಾಭಿರ್ಭೋಕ್ತವ್ಯಾನಿ ಹವಿರ್ಲಕ್ಷಣಾನಿ ವಾ ಧಿಷ್ವ । ಧಾರಯ ॥ ತೇ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ಅಭಿಮಾತಿಷಾಹಃ । ಷಹ ಅಭಿಭವೇ । ಛಂದಸಿ ಸಹ ಇತಿ ಣ್ವಿಪ್ರತ್ಯಯಃ । ಸುಷಾಮಾದಿತ್ವಾತ್ ಷತ್ವಂ । ಅಮೃತಾಯ । ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಉತ್ತಮಾನಿ । ಉಚ್ಛಬ್ದಾತ್ಸಾಧನಕ್ರಿಯಾವಚನಾದಾತಿಶಾಯನಿಕಸ್ತಮಪ್ । ಉತ್ತಮಶಶ್ವತ್ತಮೌ ಸರ್ವತ್ರ । ಪಾ. ೬-೧-೧೬೦ । ಇತ್ಯುಂಛಾದಿಷು ಪಾಠಾದಂತೋದಾತ್ತತ್ವಂ । ಧಿಷ್ವ । ಸುಧಿತ ವಸುಧಿತ ನೇಮಧಿತ ಧಿಷ್ವ ಧಿಷೀಯ ಚ । ಪಾ. ೭-೪-೪೫ । ಇತಿ ಧಿಭಾವೋ ನಿಪಾತ್ಯತೇ ॥

ಪ್ರತಿಪದಾರ್ಥ

**ಅಭಿಮಾತಿಷಾಹಃ**—ಎಲೈ ಸೋಮದೇವನೇ, ಶತ್ರುನಾಶಕನಾದ । **ತೇ**—ನಿನ್ನ (ನಿನ್ನನ್ನು ಕುರಿತು) । **ಪಯಾಂಸಿ**—(ಸಂರಕ್ಷಕಗಳಾದ) ಕ್ಷೀರಗಳು । **ಸಂ ಯಂತು**—ಸುತ್ತಲೂ ಹರಿದುಬಂದು ಸೇರಲಿ । **ವಾಜಾಃ ಉ ಸಂ**—ಹವಿಸ್ಸಿನರೂಪದ ಅನ್ನಗಳೂ ಸಹ ಬಂದು ನಿನ್ನನ್ನು ಸೇರಿಕೊಳ್ಳಲಿ । **ವೃಷ್ಣ್ಯಾನಿ ಸಂ**—ವೀರ್ಯಗಳೂ ಸಹ ನಿನ್ನನ್ನು ತುಂಬಿಕೊಳ್ಳಲಿ । **ಸೋಮ**—ಎಲೈ ಸೋಮದೇವನೇ । **ಅಮೃತಾಯ**—( ನಮ್ಮ ) ಮರಣವಿಲ್ಲದಿರುವಿಕೆಗಾಗಿ । **ಆಪ್ಯಾಯಮಾನಃ**—ಸುತ್ತಲೂ ವೃದ್ಧಿಯನ್ನು ಹೊಂದುತ್ತಾ । **ದಿವಿ**—ಸ್ವರ್ಗದಲ್ಲಿ । **ಉತ್ತಮಾನಿ**—ಉತ್ಕೃಷ್ಟಗಳಾದ । **ಶ್ರವಾಂಸಿ**—ಅನ್ನಗಳನ್ನು । **ಧಿಷ್ವ**—ಹೊಂದಿರು ॥

ಭಾವಾರ್ಥ

ಎಲೈ ಸೋಮದೇವನೇ, ಸಂರಕ್ಷಕಗಳಾದ ಕ್ಷೀರಪ್ರವಾಹಗಳು ಶತ್ರುನಾಶಕನಾದ ನಿನ್ನನ್ನು ಕುರಿತು ಸುತ್ತಲೂ ಹರಿದು ಬಂದುಸೇರಲಿ, ಹವಿಸ್ಸಿನ ರೂಪದ ಅನ್ನಗಳೂ ಮತ್ತು ವೀರ್ಯಗಳೂ ಸಹ ನಿನ್ನನ್ನು ಬಂದು ತುಂಬಿಕೊಳ್ಳಲಿ. ನಾವು ಮರಣರಹಿತರಾಗಿರುವುದಕ್ಕಾಗಿ ನೀನು ಸುತ್ತಲೂ ವೃದ್ಧಿಯನ್ನು ಹೊಂದುತ್ತಾ ನಮಗಾಗಿ ಸ್ವರ್ಗದಲ್ಲಿ ಉತ್ಕೃಷ್ಟಗಳಾದ ಅನ್ನವನ್ನೂ ಹೊಂದಿರು.

English Translation

May the milky juices flow around you ; may sacrificial offerings and vigour be concentrated in the destroyer of foes ; and, being fully nourished, Soma, provide excellent foods in heaven for our immortality.

ವಿಶೇಷವಿಷಯಗಳು

ಪತ್ನೀಸಂಯಾಜವೆಂಬ ಹೋಮಗಳಲ್ಲಿ ಸೋಮದೇವತಾಕವಾದ ಹೋಮವನ್ನು ಮಾಡುವಾಗ **ಸಂ ತೇ ಪಯಾಂಸಿ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಸಂ ತೇ ಪಯಾಂಸಿ ಸಮು ಯಂತು ವಾಜಾ ಇಹ ತ್ವಷ್ಟಾರಮಗ್ರಿಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೧-೧೦) ಚಮಸಾಪ್ಯಾಯನದಲ್ಲಿಯೂ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಸಂ ತೇ ಪಯಾಂಸಿ ಸಮು ಯಂತು ವಾಜಾ ಇತಿ ಚಮಸಾನಾಪ್ಯಾಯ್ಯೋಪಾದ್ಯಾನ್** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು. (ಆ. ೫-೬).

**ಅಭಿಮಾತಿಷಾಹಃ— ಅಭಿತಃ ಹಿಂಸಂತೀತ್ಯಭಿಮಾತಯಃ । ತೇಷಾಂ ಅಭಿಭವಿತಾ ।** ಸುತ್ತಲೂ ಹಿಂಸಿಸತಕ್ಕ ಶತ್ರುಗಳನ್ನು ನಾಶಮಾಡತಕ್ಕವನೆಂದರ್ಥವು.

**ಪಾಪ್ಮಾ ವಾ ಅಭಿಮಾತಿಃ ।**
( ತೈ. ಸಂ. ೨-೧-೩-೫ )

ಎಂಬ ಶ್ರುತಿ ವಾಕ್ಯದಿಂದ ಪಾಪಿಷ್ಠನಿಗೂ ಅಭಿಮಾತಿಯೆಂದಾಗುತ್ತದೆ. ಶತ್ರುವೂ ಸಹ ಯಜ್ಞಯಾಗಾದಿಗಳನ್ನು ಮಾಡದೇ ಇರುವುದರಿಂದ ಅವನೂ ಪಾಪಿಷ್ಠನೇ ಆಗುತ್ತಾನೆ.

**ಪಯಾಂಸಿ**—ಸಂರಕ್ಷಕಗಳಾದ ಕ್ಷೀರಗಳು ಅಥವಾ ವೃಷ್ಟಿರೂಪವಾದ ಉದಕಗಳು.

**ಅಮೃತಾಯ**—ಮರಣವಿಲ್ಲದಿರುವಿಕೆಗಾಗಿ. ಅಥವಾ **ಅಮೃತಶಬ್ದೋ ದೇವತಾವಚನಃ । ದೇವತಾರ್ಥಮಿತ್ಯರ್ಥಃ ।** (ಸ್ಕಂ. ಭಾ.) ದೇವತೆಗಳಿಗೋಸ್ಕರವಾಗಿ ಎಂದೂ ಅರ್ಥಮಾಡಿರುವರು.

ವ್ಯಾಕರಣಪ್ರಕ್ರಿಯಾ

**ತೇ**—ಸಂಪ್ರದಾನ ಸಂಜ್ಞಾವಿಧಾಯಕ ಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಮ್**—ಎಂಬ ವಚನದಿಂದ ಇಲ್ಲಿ ಸಂಪ್ರದಾನ ಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬಂದಿದೆ **ತೇ ಮಯಾವೇಕವಚನಸ್ಯ**—ಎಂಬುದರಿಂದ ಷಷ್ಠೀ ಏಕವಚನಾಂತ ಯುಷ್ಮದಿಗೆ ತೇ ಎಂಬ ಆದೇಶ.

**ಯಂತು**—ಇಣ್ ಗತೌ. ಧಾತು. ಲೋಟ್ ಪ್ರಥಮಪುರುಷಬಹುವಚನದಲ್ಲಿ ಝಿಗೆ ಅಂತಾದೇಶ. ಉತ್ವ. **ಇಣೋ ಯಣ್**—ಎಂಬುದರಿಂದ ಯಣಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ವೃಷ್ಣ್ಯಾನಿ**—ಇದೇ ಸೂಕ್ತದ ಹದಿನಾರನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಅಭಿಮಾತಿಷಾಹಃ**—ಷಹ ಅಭಿ ಭವೇ. ಧಾತು. **ಛಂದಸಿ ಸಹಃ**-(ಪಾ. ಸೂ. ೩-೨-೬೩) ಎಂಬುದರಿಂದ ಇದಕ್ಕೆ ಣ್ವಿ ಪ್ರತ್ಯಯ. ಣ್ವಿಯಲ್ಲಿ ಸರ್ವಲೋಪವಾಗುತ್ತದೆ. ಣಿತ್ತಾದುದರಿಂದ **ಅತಉಪಧಾಯಾಃ**—ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಸಾಹ್ ಶಬ್ದವಾಗುತ್ತದೆ. ಅಭಿಮಾತೀನಾಂ ಸಾಟ್. ಅಭಿಮಾತಿಷಾಟ್. ಸುಷಾಮಾದಿಯಲ್ಲಿ ಪಠಿತವಾದುದರಿಂದ ಸಕಾರಕ್ಕೆ ಷತ್ವ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಆಪ್ಯಾಯಮಾನಃ**—ಓ ಪ್ಯಾಯೀ ವೃದ್ಧೌ. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್**-(ಪಾ. ಸೂ. ೭-೨-೮೨) ಎಂಬುದರಿಂದ ಅಜಂತಾಂಗಕ್ಕೆ ಮುಕಾಗಮ. ಅಮುಪದೇಶದ ಪರದಲ್ಲಿರು ವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್**--ಎಂಬುದರಿಂದ ಅನುದಾತ್ತ. ಶಪ್ ಪಿತ್ತಾದುದರಿಂದ ಅನು ದಾತ್ತ. ಆಗ ಧಾತುಸ್ವರ ಉಳಿಯುತ್ತದೆ.

**ಅಮೃತಾಯ**—ಮೃಙ್ ಪ್ರಾಣತ್ಯಾಗೇ ಧಾತು. ಕ್ತಪ್ರತ್ಯಯ ನ ಮೃತಂ ಅಮೃತಮ್. **ನಞೋ ಜರಮರಮಿತ್ರ ಮೃತಾಃ** (ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ದಿವಿ—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ಸಪ್ತಮಿಗೆ ಉದಾತ್ತಸ್ವರ ಬರುತ್ತದೆ.

**ಉತ್ತಮಾನಿ**—ಉತ್ ಎಂಬುದು ಸಸಾಧನಕ್ರಿಯಾವಾಚಕ ಶಬ್ದ. ಇದಕ್ಕೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ತಮಪಿಗೆ ಅನುದಾತ್ತವು ಪ್ರಾಪ್ತವಾದರೆ **ಉತ್ತಮ ಶಶ್ವತ್ತಮ್ ಸರ್ವತ್ರ** ( ಪಾ. ಸೂ. ೬-೧-೧೬೦ ) ಎಂದು ಉಞ್ಛಾದಿಗಳಲ್ಲಿ ಪಾಠಮಾಡಿರುವುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಬಹುವಚ ನಾಂತರೂಪ.

**ಧಿಷ್ವ**—ಡುಧಾಞ್ ಧಾರಣಪೋಷಣಯೋಃ: ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ **ಸುಧಿತ ವಸುಧಿತ ನೇಮಧಿತ ಧಿಷ್ವಧಿಷೀಯ ಚ** (ಪಾ. ಸೂ. ೭-೪-೪೫) ಎಂಬುದರಿಂದ ಧಿಭಾವವು ನಿಪಾತಿತ ವಾಗಿದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೮ ॥



॥ ಸಂಹಿತಾಪಾಠಃ ॥

ಯಾ ತೇ ಧಾಮಾನಿ ಹವಿಷಾ ಯಜಂತಿ ತಾ ತೇ ವಿಶ್ವಾ ಪರಿ-
ಭೂರಸ್ತು ಯಜ್ಞಂ ।
ಗಯಸ್ಫಾನಃ ಪ್ರತರಣಃ ಸುವೀರೋಽವೀರಹಾ ಪ್ರ ಚರಾ ಸೋ-
ಮ ದುರ್ಯಾನ್ ॥ ೧೯ ॥

॥ ಪದಪಾಠಃ ॥

ಯಾ । ತೇ । ಧಾಮಾನಿ । ಹವಿಷಾ । ಯಜಂತಿ । ತಾ । ತೇ । ವಿಶ್ವಾ । ಪರಿಽ-ಭೂಃ । ಅಸ್ತು । ಯಜ್ಞಂ ।

ಗಯಽಸ್ಫಾನಃ । ಪ್ರಽತರಣಃ । ಸುಽವೀರಃ । ಅವೀರಽಹಾ । ಪ್ರ । ಚರ । ಸೋಮ । ದುರ್ಯಾನ್ ॥ ೧೯ ॥

ಸಾಯಣಭಾಷ್ಯಂ

ಸೋಮಪ್ರವಹಣೇ ಯಾ ತೇ ಧಾಮಾನೀತ್ಯೇಷಾ । ಸೂತ್ರಿತಂ ಚ । ಯಾತೇ ಧಾಮಾನಿ ಹವಿಷಾ ಯಜಂತೀಮಾಂ ಧಿಯಂ ಶಿಕ್ಷಮಾಣಸ್ಯ ದೇವೇತಿ ನಿಹಿತೇ ಪರಿದಧ್ಯಾತ್ । ಆ. ೪-೪ । ಇತಿ ॥ ಏಕಾದಶಿನಸ್ಯ ಸೌಮ್ಯಸ್ಯ ಪಶೋರ್ಹವಿಷ ಏಷೈವ ಯಾಜ್ಯಾ । ಪ್ರದಾನಾನಾಮಿತಿ ಖಂಡೇ ಸೂತ್ರಿತಂ । ಅಷಾಳ್ಹಂ ಯುತ್ಸು ಪೃತನಾಸು ಪಪ್ರಿಂ ಯಾ ತೇ ಧಾಮಾನಿ ಹವಿಷಾ ಯಜಂತಿ। ಆ. ೩-೭ । ಇತಿ ॥

ಹೇ ಸೋಮ ತೇ ತ್ವದೀಯಾನಿ ಯಾ ಯಾನಿ ಧಾಮಾನಿ ದ್ಯುಪ್ರಭೃತಿಷ್ವವಸ್ಥಿತಾನಿ ತೇಜಾಂಸಿ ಹವಿಷಾ ಚರುಪುರೋಡಾಶಾದಿನಾ ಯಜಂತಿ ಯಜಮಾನಾಃ ಪೂಜಯಂತಿ ತಾ ತೇ ವಿಶ್ವಾ ತ್ವದೀಯಾನಿ ತಾನಿ ಸರ್ವಾಣಿ ಧಾಮಾನಿ ಯಜ್ಞಮಸ್ಮದೀಯಮಧ್ವರಂ ಪರಿಭೂರಸ್ತು । ಪರಿತೋ ಭಾವಯಿತ್ರಾಣಿ ಪರಿತಃ ಪ್ರಾಪ್ತಾನಿ ಸಂತು । ಯದ್ವಾ । ತ್ವದೀಯಾನಾಂ ತೇಷಾಂ ಸರ್ವೇಷಾಂ ಧಾಮ್ನಾಮಸ್ಮದೀಯೋ ಯಜಮಾನಃ ಪರಿಭೂರ್ಯಜ್ಞಂ ಪ್ರತಿಪರಿಗ್ರಹೀತಾ ಯಾಗೇನ ಸ್ವೀಕರ್ತಾಸ್ತು । ಭವತು । ಪರಿಪೂರ್ವೋ ಭವತಿಃ ಪರಿಗ್ರಹಾರ್ಥಃ । ತಾದೃಶೈರ್ಧಾಮಭಿರುಪೇತಸ್ತ್ವಂ ದುರ್ಯಾನ್ ಪ್ರಾಚೀನವಂಶಾದಿಲಕ್ಷಣಾನಸ್ಮದೀಯಾನ್ ಗೃಹಾನ್ ! ಗೃಹಾ ವೈ ದುರ್ಯಾ ಇತಿ ಶ್ರುತೇಃ । ಪ್ರ ಚರ । ಪ್ರಕರ್ಷೇಣ ಗಚ್ಛ । ಕೀದೃಶಸ್ತ್ವಂ । ಗಯಸ್ಫಾನೋ ಗಯಸ್ಯ ಗೃಹಸ್ಯ ಧನಸ್ಯ ವಾ ವರ್ಧಯಿತಾ ಪ್ರತರಣಃ ಪ್ರಕರ್ಷೇಣ ದುರಿತಾತ್ತಾರಯಿತಾ ಸುವೀರಃ ಶೋಭನೈರ್ವೀರೈಃ ಪುರುಷೈರುಪೇತಃ ಅವೀರಹಾ। ವೀರ್ಯಾಜ್ಜಾಯಂತ ಇತಿ ವೀರಾಃ ಪುತ್ರಾಃ । ತೇಷಾಮಹಂತಾ ॥ ಪರಿಭೂಃ । ಭೂ ಪ್ರಾಪ್ತೌ । ಅಸ್ಮಾತ್ಕ್ವಿಪ್ಚೇತಿ ಕ್ವಿಪ್ । ವ್ಯತ್ಯಯೋ ಬಹುಲಂ । ಪಾ. ೩-೧-೮೫ । ಇತಿ ಲಿಂಗವಚನವ್ಯತ್ಯಯೌ । ಅಸ್ತು । ವ್ಯತ್ಯಯೇನೈಕವಚನಂ । ಗಯಸ್ಫಾನಃ । ಗಯ ಇತಿ ಗೃಹಸ್ಯ ಧನಸ್ಯ ಚ ನಾಮಧೇಯಂ । ತೇಷಾಂ ಸ್ಫಾಯಿತಾ । ವರ್ಧಯಿತಾ । ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಲ್ಯುಟಿ ಛಾಂದಸೋ ಯಲೋಪಃ । ಅವೀರಹಾ । ವೀರಾಣಾಂ ಹಂತಾ ವೀರಹಾ । ನ ವೀರಹಾ ಅವೀರಹಾ ॥

ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ । **ತೇ**—ನಿನ್ನ । **ಯಾ ಧಾಮಾನಿ**—(ದ್ಯುಲೋಕಾದಿಗಳಲ್ಲೆಲ್ಲಾ ಹರಡಿರತಕ್ಕ) ಯಾವಯಾವ ತೇಜಸ್ಸುಗಳನ್ನು । **ಹವಿಷಾ**—ಚರುಪುರೋಡಾಶಾದಿಗಳಿಂದ । **ಯಜಂತಿ**—(ಯಜ

ಮಾನರು) ಪೂಜಿಸುತ್ತಾರೆಯೋ । **ತಾ ತೇ ವಿಶ್ವಾ**— ಆ ಸಕಲವಿಧವಾದ ತೇಜಸ್ಸುಗಳೂ । **ಯಜ್ಞಂ**— ನಮ್ಮ ಯಜ್ಞವನ್ನು । **ಪರಿಭೂಃ ಅಸ್ತು**—ಸುತ್ತುವರಿದು ತುಂಬಿಕೊಳ್ಳಲಿ । **ಗಯಸ್ಫಾನಃ**—ಗೃಹದ ಅಥವಾ ಧನದ ವೃದ್ಧಿಕಾರಕನೂ । **ಪ್ರತರಣಃ**—ಪೂರ್ಣವಾಗಿ ದಾಟಿಸುವವನೂ । **ಸುವೀರಃ**—ಶ್ರೇಷ್ಠರಾದ ವೀರರೊಡನೆ ಕೂಡಿದವನೂ । **ಅವೀರಹಾ**—ವೀರರಾದ ( ನಮ್ಮ ) ಪುತ್ರರನ್ನು ಹಿಂಸಿಸದಿರುವವನೂ ಆದ ನೀನು (ಅಂತಹ ತೇಜಸ್ಸುಗಳೊಡನೆ ಕೂಡಿದವನಾಗಿ) । **ದುರ್‍ಯಾನ್**— ನಮ್ಮ (ಪ್ರಾಚೀನವಾದ) ಗೃಹಗಳನ್ನು । **ಪ್ರ ಚರ**- ಅತಿಶಯವಾಗಿ ಬಂದು ಸೇರು ॥

ಭಾವಾರ್ಥ

ಎಲೈ ಸೋಮದೇವನೇ, ದ್ಯುಲೋಕಾದಿಗಳಲ್ಲೆಲ್ಲಾ ಹರಡಿರತಕ್ಕ ನಿನ್ನ ಯಾವ ಯಾವ ತೇಜಸ್ಸುಗಳನ್ನು ಯಜ್ಞಕರ್ತರು ಚರುಪುರೋಡಾಶಾದಿಗಳಿಂದ ಪೂಜಿಸುತ್ತಾರೆಯೋ ಆ ಸಕಲವಿಧವಿವಾದ ತೇಜಸ್ಸುಗಳೂ ನಮ್ಮ ಯಜ್ಞವನ್ನು ಸುತ್ತುವರಿದು ತುಂಬಿಕೊಳ್ಳಲಿ. ನಮ್ಮ ಧನದ ವೃದ್ಧಿಕಾರಕನೂ, ನಮ್ಮನ್ನು ಪಾಪದಿಂದಲೂ, ಕಷ್ಟದಿಂದಲೂ ದಾಟಿಸುವವನೂ ಶ್ರೇಷ್ಠರಾದ ವೀರರೊಡನೆ ಕೂಡಿದವನೂ ಮತ್ತು ನಮ್ಮ ವೀರರಾದ ಪುತ್ರರನ್ನು ಹಿಂಸಿಸದಿರುವವನೂ ಆದ ನೀನು ನಿನ್ನ ಆ ಸಕಲವಾದ ತೇಜಸ್ಸುಗಳೊಡನೆ ಕೂಡಿದವನಾಗಿ ನಮ್ಮ ಪ್ರಾಚೀನವಾದ ಈ ಗೃಹಗಳನ್ನು ಬಂದುಸೇರು.

English Translation

Whichever of your glories, men worship with oblations, may our sacrifice be invested with them all ; Soma, come to our houses, you are the bestower of wealth, the transporter of difficulties ; you are attended by valiant heroes, the non-destroyer of progeny.

॥ ವಿಶೇಷವಿಷಯಗಳು ॥

ಸೋಮಪ್ರವಹಣವೆಂಬ ಕರ್ಮದಲ್ಲಿ **ಯಾ ತೇ ಧಾಮಾನಿ** ಎಂಬ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಯಾ ತೇ ಧಾಮಾನಿ ಹವಿಷಾ ಯಜಂತೀಮಾಂ ಧಿಯಂ ಶಿಕ್ಷಮಾಣಸ್ಯ ದೇವೇತಿ ನಿಹಿತೇ ಪರಿದಧ್ಯಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ.೪-೪) ಏಕಾದಶಿನವೆಂಬ ಯಾಗದಲ್ಲಿ ಸೋಮದೇವತಾಕವಾದ ಪಶುಹೋಮದಲ್ಲಿ ಈ ಋಕ್ಕನ್ನು ಯಾಜ್ಯಾ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ **ಪ್ರದಾನಾನಾಂ** ಎಂಬ ಖಂಡದಲ್ಲಿ **ಅಷಾಳ್ಹಂ ಯುತ್ಸು ಪೃತನಾಸು ಪಪ್ರಿಂ ಯಾ ತೇ ಧಾಮಾನಿ ಹವಿಷಾ ಯಜಂತಿ** ಎಂಬ ಸೂತ್ರವು ನಿರ್ದೇಶಿಸುವುದು ( ಆ. ೩-೭ ).

**ಧಾಮಾನಿ**—ಧಾಮಶಬ್ದಕ್ಕೆ ಸ್ಥಾನ, ನಾಮ, ಜನ್ಮ, ತೇಜಸ್ಸು ಮುಂತಾದ ಅರ್ಥಗಳಿವೆ. ಇವುಗಳ ವಿವರಣೆಯನ್ನು ಋ. ಸಂ. ೧-೯೧-೪ನೆಯ ಋಕ್ಕನ್ನು ವಿವರಿಸುವಾಗ ವಿಶದವಾಗಿ ತಿಳಿಯಪಡಿಸಿದೆ.

**ಪರಿಭೂಃ ಅಸ್ತು**—ಸುತ್ತುವರಿದು ತುಂಬಿಕೊಳ್ಳಲಿ. ಎಂದರೆ ನಿನ್ನ ಸಕಲ ಪ್ರಭಾವಗಳೂ ಸಹ ನಮ್ಮ ಯಜ್ಞಭೂಮಿಯನ್ನು ಸುತ್ತುವರಿದು ತುಂಬಿಕೊಳ್ಳಲಿ ಎಂದರ್ಥವು. **ಪರಿಭೂಃ** ಎನ್ನುವುದಕ್ಕೆ ಇನ್ನೊಂದರ್ಥವು.

ಇದಲ್ಲದೆ, **ಪರಿಪೂರ್ವೋ ಭವತಿಃ ಸರ್ವತ್ರ ಪರಿಗ್ರಹಾರ್ಥೇ ।** ಎನ್ನುವ ನಿಯಮದ ಪ್ರಕಾರ ಸ್ವೀಕರಿಸಲಿ ಎಂದರ್ಥವಾಗುತ್ತದೆ. ಎಂದರೆ ನೀನು ನಿನ್ನ ಸಕಲಪ್ರಭಾವಗಳೊಡನೆ ಬಂದು ನಮ್ಮ ಈ ಯಜ್ಞವನ್ನು ಸ್ವೀಕರಿಸು ಎಂದಭಿಪ್ರಾಯವು. **ಯಾನಿ ತವ ಯಷ್ಟವ್ಯಾನಿ ಧಾಮಾನಿ ತೈಃ ಸರ್ವೈಃ ಇಮಂ ಯಜ್ಞಂ ಪರಿಗೃಹಾಣೇತ್ಯರ್ಥಃ ।** ( ಸ್ಕ. ಭಾ. ) ಇಷ್ಟೇ ಅಲ್ಲದೆ ಸಾಯಣರು **ಪರಿಗ್ರಹ** ಎಂಬ ಅರ್ಥದಲ್ಲಿಯೇ ಬೇರೊಂದು ಅನ್ವಯವನ್ನು ಮಾಡಿ **ಸರ್ವೇಷಾಂ ಧಾಮ್ನಾಂ ಯಜಮಾನಃ ಸ್ವೀಕರ್ತಾ ಅಸ್ತು ।** ಎಂದರೆ ಆ ನಿನ್ನ ಸಕಲ ಪ್ರಭಾವಗಳನ್ನು ಈ ಯಜಮಾನನು ಯಾಗದಿಂದ ಸ್ವೀಕರಿಸಲಿ ಎಂದು ವಿವರಿಸಿರುವರು. ಈ ಶಬ್ದದ ವಿಸ್ತಾರವಾದ ವಿವರಣೆಗಾಗಿ ಋ. ಸಂ. ಭಾಗ ೧ ಪೇಜು 633–634ಗಳನ್ನು ನೋಡಿ.

**ಗಯಸ್ಫಾನಃ**— ಗೃಹದ ಅಥವಾ ಧನದ ವೃದ್ಧಿಕಾರಕನು ; ಈ ಪದದ ವಿವರಣೆಯನ್ನು ಋ. ಸಂ. ೧-೯೧-೧೨ನೆಯ ಋಕನ್ನು ವಿವರಿಸುವಾಗ ವಿಶದವಾಗಿ ತಿಳಿಸಿದೆ.

**ಪ್ರತರಣಃ--ಪ್ರಕರ್ಷೇಣ ದುರಿತಾತ್ ತಾರಯಿತಾ ।** ಪಾಪದಿಂದ ಪೂರ್ಣವಾಗಿ ದಾಟಿಸುವವನೆಂಬ ಅರ್ಥವನ್ನು ಸಾಯಣರು ಹೇಳಿರುವರು. ಸ್ಕಂದಸ್ವಾಮಿಗಳು **ತರತಿರತ್ರ ವೃದ್ಧ್ಯರ್ಥಃ । ವರ್ಧಯಿತಾ ಚ ಸರ್ವಾರ್ಥಾನಾಂ ।** ಸಕಲ ಇಷ್ಟಾರ್ಥಗಳನ್ನೂ ವೃದ್ಧಿಯಾಗುವಂತೆ ಮಾಡುವವನು ಎಂದು ವಿವರಿಸುತ್ತಾರೆ. ಈ ಅರ್ಥವೇ ಹೆಚ್ಚಾಗಿ ಒಪ್ಪಿಕೊಳ್ಳುತ್ತದೆ. ಏತಕ್ಕೆಂದರೆ ಉಳಿದ ಕಡೆಗಳಲ್ಲಿಯೂ ಸಹ **ಪ್ರ** ಎಂಬ ಉಪಸರ್ಗವು **ತೃ** ಧಾತುವಿನೊಡನೆ ಸೇರುವಾಗಲೆಲ್ಲಾ ವೃದ್ಧಿಯಾಗು ಎಂಬ ಅರ್ಥವೇ ಸಾಧಾರಣವಾಗಿ ಕಾಣುತ್ತದೆ. ಉದಾಹರಣೆಗೆ—

**ಸೋಮ ರಾರ್ಜ ಪ್ರ ಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ ।**
( ಋ. ಸಂ. ೮-೪೮-೭ )

**ಕ್ರತ್ವೇ ದಕ್ಷಾಯ ನೋ ಹಿ ನು ಪ್ರಣು ಆಯೂಂಷಿ ತಾರಿಷಃ ।**
( ವಾ. ಸಂ. ೩೪-೮ )

ಇತ್ಯಾದಿ ಸ್ಥಳಗಳಲ್ಲೆಲ್ಲಾ **ಪ್ರವರ್ಧಯ**— ವೃದ್ಧಿಯಾಗುವಂತೆ ಮಾಡು ಎಂಬರ್ಥವೇ ಇರುತ್ತದೆ ( ನಿ. ೧೧-೩೦ )

**ದುರ್ಯಾನ್—ಗಯಃ, ಕೃದರಃ, ಗರ್ತಃ** ಇತ್ಯಾದಿ ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ ಈ ಶಬ್ದಕ್ಕೆ ಗೃಹಗಳು ಎಂದರ್ಥವು. (ನಿ. ೩-೧೩)

ವ್ಯಾಕರಣಪ್ರಕ್ರಿಯಾ

**ಯಜಂತಿ** — ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ಯಾ ಎಂದು ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ತಾ**—ತಚ್ಛಬ್ದ. ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್**—ಎಂಬುದರಿಂದ ಶಿಗೆ ಲೋಪ. ಇದರಂತೆ ವಿಶ್ವಾ ಎಂಬುದು.

**ಪರಿಭೂಃ**—ಭೂ ಪ್ರಾಪ್ತೌ ಧಾತು. ಇದಕ್ಕೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್. **ವ್ಯತ್ಯಯೋ ಬಹುಲಮ್**-(ಪಾ. ಸೂ. ೩-೧-೮೫) ಎಂಬುದರಿಂದ ವಿಶೇಷ್ಯದ ಲಿಂಗವಚನ ವ್ಯತ್ಯಾಸ ಬಂದಿದೆ. ನಪುಂಸಕ ಬಹುವಚನಕ್ಕೆ ಬದಲಾಗಿ ಸ್ತ್ರೀಲಿಂಗ ಪುಲ್ಲಿಂಗಸಾಧಾರಣ ಏಕವಚನ ಬಂದಿದೆ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಸ್ತು**—ಅಸ ಭುವಿ. ಧಾತು. ಲೋಟ್ ಪ್ರಥಮಪುರುಷದಲ್ಲಿ **ವ್ಯತ್ಯಯೋ ಬಹುಲಮ್**—ಎಂಬುದರಿಂದ ಬಹುವಚನಕ್ಕೆ ಏಕವಚನ ಪ್ರತ್ಯಯ ಬರುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಗಯಸ್ಫಾನಃ**—ಗಯ ಎಂಬುದು ಮನೆ ಅಥವಾ ಧನದ ಹೆಸರು. ಗಯಸಾಂ ಸ್ಫಾಯಿತಾ ವರ್ಧಯಿತಾ. ಓ ಸ್ಫಾಯೀ ವೃದ್ಧೌ ಧಾತು. **ಕೃತ್ಯಲ್ಯುಟೋ ಬಹುಲಮ್**-(ಪಾ. ಸೂ. ೩-೩-೧೧೩) ಎಂಬುದರಿಂದ ಲ್ಯುಟ್ ಪ್ರತ್ಯಯ. ಛಾಂದಸವಾಗಿ ಧಾತುವಿನ ಯಕಾರಕ್ಕೆ ಲೋಪ. **ಯುವೋರನಾಕೌ**—ಎಂಬುದರಿಂದ ಅನಾದೇಶ **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುವೀರಃ**—**ನಞ್ಸುಭ್ಯಾಂ**—ಸೂತ್ರದಿಂದ ಉತ್ತರಪದಾಂತೋದಾತ್ತಸ್ವರವು ಪ್ರಾಪ್ತವಾದರೆ **ವೀರವೀರ್ಯೌ ಚ**-(ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಅವೀರಹಾ**—ವೀರಾಣಾಂ ಹಂತಾ ವೀರಹಾ. ವೀರಶಬ್ದ ಉಪಪದವಾಗಿರುವಾಗ ಹನ್ ಧಾತುವಿಗೆ ಕ್ವಿಪ್ ಪ್ರತ್ಯಯ. ನ ವೀರಹಾ ಅವೀರಹಾ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದ (ನಞ್) ಪ್ರಕೃತಿಸ್ವರ ಬರುತ್ತದೆ.

**ಚರ**—ಚರ ಗತಿಭಕ್ಷಣಯೋಃ ಧಾತು. ಲೋಣ್ಮಧ್ಯಮಪುರುಷಏಕವಚನರೂಪ. ತಿಜಂತನಿಘಾತಸ್ವರ ಬರುತ್ತದೆ. ॥ ೧೯ ॥



॥ ಸಂಹಿತಾಪಾಠಃ ॥

ಸೋಮೋ ಧೇನುಂ ಸೋಮೋ ಅರ್ವಂತಮಾಶುಂ ಸೋಮೋ
ವೀರಂ ಕರ್ಮಣ್ಯಂ ದದಾತಿ ।
ಸಾದನ್ಯಂ ವಿದಥ್ಯಂ ಸಭೇಯಂ ಪಿತೃಶ್ರವಣಂ ಯೋ ದದಾಶದ-
ಸ್ಮೈ ॥ ೨೦ ॥

॥ ಪದಪಾಠಃ ॥

**ಸೋಮಃ । ಧೇನುಂ । ಸೋಮಃ । ಅರ್ವಂತಂ । ಆಶುಂ । ಸೋಮಃ । ವೀರಂ । ಕರ್ಮಣ್ಯಂ । ದದಾತಿ ।**

**ಸದನ್ಯಂ । ವಿದಥ್ಯಂ । ಸಭೇಯಂ । ಪಿತೃऽಶ್ರವಣಂ । ಯಃ । ದದಾಶತ್ । ಅಸ್ಮೈ ॥ ೨೦ ॥**

ಸಾಯಣಭಾಷ್ಯಂ

ಮಹಾಪಿತೃಯಜ್ಞೇ ಸೋಮಸ್ಯ ಪಿತೃಮತೋ ಯಾಗೇ ಸೋಮೋ ಧೇನುಮಿತ್ಯೇಷಾ ದ್ವಿತೀಯಾನುವಾಕ್ಯಾ । ತತ್ರ ಹ್ಯೇಕೈಕಸ್ಯ ಹವಿಷೋ ದ್ವೇ ದ್ವೇ ಅನುವಾಕ್ಯೇ ಸಮುಚ್ಚಯೇನ ವಿಹಿತೇ । ತಥೈವ ದಕ್ಷಿಣಾಗ್ನೇರಿತಿ ಖಂಡೇ ಸೂತ್ರಿತಂ । ಸೋಮೋ ಧೇನುಂ ಸೋಮೋ ಅರ್ವಂತಮಾಶುಂ ತ್ವಂ ಸೋಮ ಪಿತೃಭಿಃ ಸಂವಿದಾನಃ । ಆ. ೨-೧೯ । ಇತಿ ॥

ಯೋ ಯಜಮಾನೋ ದದಾಶತ್ ಸೋಮಾಯ ಹವಿರ್ಲಕ್ಷಣಾನ್ಯನ್ನಾನಿ ದದ್ಯಾತ್ ತಸ್ಮೈ ಯಜಮಾನಾಯ ಸೋಮೋ ಧೇನುಂ ಸವತ್ಸಾಂ ದೋಗ್ಧ್ರೀಂ ಗಾಂ ದದಾತಿ । ತಥಾಶುಂ ಶೀಘ್ರಗಾಮಿನಮರ್ವಂತಮಶ್ವಂ ದದಾತಿ । ಪ್ರಯಚ್ಛತಿ । ತಥಾ ವೀರಂ ಪುತ್ರಮಸ್ಮೈ ಯಜಮಾನಾಯ ದದಾತಿ । ಕೀದೃಶಂ ಪುತ್ರಂ । ಕರ್ಮಣ್ಯಂ ಲೌಕಿಕಕರ್ಮಸು ಕುಶಲಂ ಸದನ್ಯಂ । ಸದನಂ ಗೃಹಂ । ತದರ್ಹಂ । ಗೃಹಕಾರ್ಯಕುಶಲಮಿತ್ಯರ್ಥಃ । ವಿದಥ್ಯಂ । ವಿದಂತ್ಯೇಷು ದೇವಾನಿತಿ ವಿದಥಾ ಯಜ್ಞಾಃ । ತದರ್ಹಂ । ದರ್ಶಪೂರ್ಣಮಾಸಾದಿಯಾಗಾನುಷ್ಠಾನಪರಮಿತ್ಯರ್ಥಃ । ಸಭೇಯಂ ಸಭಾಯಾಂ ಸಾಧುಂ । ಸಕಲಶಾಸ್ತ್ರಾಭಿಜ್ಞಮಿತ್ಯರ್ಥಃ । ಪಿತೃಶ್ರವಣಂ ಪಿತಾ ಶ್ರೂಯತೇ ಪ್ರಖ್ಯಾಯತೇ ಯೇನ ಪುತ್ರೇಣ ತಾದೃಶಂ ॥ ಕರ್ಮಣ್ಯಂ । ಕರ್ಮಸು ಸಾಧುಃ ಕರ್ಮಣ್ಯಃ । ತತ್ರ ಸಾಧುಃ । ಪಾ. ೪-೪-೯೮ । ಇತಿ ಯತ್ । ಯೇ ಚಾಭಾವಕರ್ಮಣೋರಿತಿ ಪ್ರಕೃತಿಭಾವಃ । ತಿತ್ಸ್ವರಿತಮಿತಿ ಸ್ವರಿತತ್ವಂ । ಏವಮುತ್ತರತ್ರಾಪಿ ಯತ್ಪ್ರತ್ಯಯಃ । ಸಭೇಯಂ । ಢಶ್ಛಂದಸಿ । ಪಾ. ೪-೪-೧೦೬ । ಇತಿ ತತ್ರ ಸಾಧುರಿತ್ಯರ್ಥೇ ಢಪ್ರತ್ಯಯಃ । ದದಾಶತ್ । ದಾಶೃ ದಾನೇ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ ॥

ಪ್ರತಿಪದಾರ್ಥ

**ಯಃ**— ಯಾವ ಯಜಮಾನನು । **ದದಾಶತ್**— ( ಹವಿಸ್ಸನ್ನು ) ಅರ್ಪಿಸುತ್ತಾನೆಯೋ । **ಅಸ್ಮೈ (ತಸ್ಮೈ)**— ಆ ಯಜಮಾನನಿಗೆ । **ಸೋಮಃ**— ಸೋಮದೇವನು । **ಧೇನುಂ**—(ಕರುವಿನೊಂದಿಗೆ ಕೂಡಿದ) ಕರೆಯುವ ಹಸುವನ್ನು । **ದದಾತಿ**— ಕೊಡುತ್ತಾನೆ । **ಸೋಮಃ**— ಸೋಮದೇವನು । **ಆಶುಂ**— ವೇಗವಾಗಿ ಓಡತಕ್ಕ । **ಅರ್ವಂತಂ**— ಕುದುರೆಯನ್ನು ( ಕೊಡುತ್ತಾನೆ ) । **ಸೋಮಃ**— ಸೋಮದೇವನು ।

**ಕರ್ಮಣ್ಯಂ**—(ಲೌಕಿಕವಾದ) ಕೆಲಸಗಳಲ್ಲಿ ಕುಶಲನೂ । **ಸದನ್ಯಂ**—ಗೃಹಕೃತ್ಯಗಳಲ್ಲಿ ನಿಪುಣನೂ । **ವಿದಥ್ಯಂ**—(ದರ್ಶಪೂರ್ಣಮಾಸಾದಿ) ಯಜ್ಞಕಾರ್ಯಪರನೂ । **ಸಭೇಯಂ**—(ಸಕಲ ಶಾಸ್ತ್ರಗಳ ಜ್ಞಾನದಿಂದ)ಸಭೆಗೆ ಭೂಷಣನೂ **ಪಿತೃಶ್ರವಣಂ**— ತಂದೆಯ ಹೆಸರನ್ನು ಪ್ರಸಿದ್ಧಪಡಿಸುವವನೂ ಆದ । **ವೀರಂ**— ಯೋಗ್ಯನಾದ ಪುತ್ರನನ್ನೂ ಕೊಡುತ್ತಾನೆ.

ಭಾವಾರ್ಥ

ಯಾವ ಯಜಮಾನನು ಹವಿಸ್ಸನ್ನು ಅರ್ಪಿಸುತ್ತಾನೆಯೋ ಆ ಯಜಮಾನನಿಗೆ ಸೋಮದೇವನು ಕರುವಿನೊಂದಿಗೆ ಕೂಡಿದ ಕರೆಯುವ ಹಸುವನ್ನೂ, ವೇಗವಾಗಿ ಓಡತಕ್ಕ ಕುದುರೆಯನ್ನೂ, ಮತ್ತು ಲೌಕಿಕವಾದ ಕೆಲಸಗಳಲ್ಲಿ ಕುಶಲನೂ, ಗೃಹ ಕೃತ್ಯಗಳಲ್ಲಿ ನಿಪುಣನೂ, ದರ್ಶಪೂರ್ಣಮಾಸಾದಿ ಯಜ್ಞಕಾರ್ಯಪರನೂ, ಸಕಲ ಶಾಸ್ತ್ರಗಳ ಜ್ಞಾನದಿಂದ ವಿದ್ವಾಂಸರ ಸಭೆಗೆ ಭೂಷಣನೂ ಮತ್ತು ತಂದೆಯಹೆಸರನ್ನು ಪ್ರಸಿದ್ಧಪಡಿಸಿ.ತಂದೆಗೆ ಗೌರವವನ್ನು ತರುವವನೂ ಆದ ಯೋಗ್ಯನಾದ ಪುತ್ರನನ್ನೂ ಸಹ ಅನುಗ್ರಹಿಸುತ್ತಾನೆ.

## English Translation

To him who presents offerings, Soma gives a milch-cow, a swift horse, and a son who is able in affairs, skilful in domestic concerns, diligent in worships, eminent in Society and who is an honour to his father.

ವಿಶೇಷವಿಷಯಗಳು

ಮಹಾಪಿತೃಯಜ್ಞದಲ್ಲಿ ಸೋಮಃ ಪಿತೃಮಾನ್ ಎಂಬ ದೇವತೆಯನ್ನುದ್ದೇಶಿಸಿ ಹೋಮಮಾಡುವಾಗ **ಸೋಮೋ ಧೇನುಂ** ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದೂ ಮತ್ತು ಆ ಹೋಮದಲ್ಲಿ ಒಂದೊಂದು ಹೋಮಕ್ಕೂ ಎರಡೆರಡು ಪುರೋನುವಾಕ್ಯಾ ಮಂತ್ರಗಳನ್ನು ಒಟ್ಟಾಗಿ ಪಠಿಸಬೇಕೆಂದೂ ಆಶ್ವಲಾಯನ ಶ್ರೌತಸೂತ್ರದ **ತಥೈವ ದಕ್ಷಿಣಾಗ್ನೌ** ಎಂಬ ಖಂಡದಲ್ಲಿ **ಸೋಮೋ ಧೇನುಂ ಸೋಮೋ ಅರ್ವಂತಮಾಶುಂ ತ್ವಂ ಸೋಮ ಪಿತೃಭಿಃ ಸಂವಿದಾನಃ** ಎಂಬ ಸೂತ್ರವು ನಿರ್ದೇಶಿಸುವುದು ( ಆ. ೨-೧೯ ).

**ಅರ್ವಂತಂ**—ಕುದುರೆಯನ್ನು **ಅತ್ಯಃ, ಹಯಃ, ಅರ್ವಾ** ಎಂದು ಅಶ್ವನಾಮಗಳಲ್ಲಿ ( ನಿ. ೨ ೧೪ ) ಪಠಿತವಾಗಿದೆ.

**ವಿದಥ್ಯಂ** – **ವಿದಂತ್ಯೇಷು ದೇವಾ ಇತಿ ವಿದಥಾಃ** । ಯಜ್ಞಗಳಲ್ಲಿ ದೇವತೆಗಳ ಸ್ವರೂಪವನ್ನು ಚೆನ್ನಾಗಿ ತಿಳಿಯುತ್ತಾರಾದ್ದರಿಂದ ವಿದಥವೆಂದರೆ ಯಜ್ಞವು. ಇಂತಹ ದರ್ಶಪೂರ್ಣಮಾಸಾದಿಯಾಗಗಳಲ್ಲಿ ನಿರತನಾಗಿರುವವನಿಗೆ **ವಿದಥ್ಯನೆಂದು** ಹೆಸರು. **ವಿದಥಾನಿ ಪ್ರಚೋದಯನ್** (ಋ. ಸಂ. ೨-೨೭-೭) ಎಂಬ ಋಕ್ಕಿಗೆ ನಿರ್ವಚನವನ್ನು ಮಾಡುವಾಗ ನಿರುಕ್ತಕಾರರು **ವಿದಥಾನಿ ವೇದನಾನಿ** । (ನಿ. ೭-೮) ಎಂದರೆ ತಿಳಿವಳಿಕೆ ಎಂಬರ್ಥವನ್ನು ಹೇಳಿರುತ್ತಾರೆ. ಆದುದರಿಂದ ಇಂತಹ ಜ್ಞಾನಸಾಧನವಾದ ಯಜ್ಞಗಳಲ್ಲಿ ನಿರತನಾದವನಿಗೆ **ವಿದಥ್ಯನೆಂದು** ಹೇಳುತ್ತಾರೆ.

**ಸಭೇಯಂ** —ವಿದ್ವತ್ಸಭೆಯಲ್ಲಿ ಯೋಗ್ಯನು ಎಂದರೆ ಸಕಲಶಾಸ್ತ್ರನಿಪುಣನೆಂದರ್ಥವು.

**ವಿದಥ್ಯಂ ಸಭೇಯಂ—** ಈ ಎರಡು ಪದಗಳನ್ನು ಸಹ ಸ್ಕಂದಸ್ವಾಮಿಗಳು ವಿಶೇಷಣ ಮತ್ತು ವಿಶೇಷ್ಯ ವನ್ನಾಗಿಮಾಡಿ ವಿದ್ವಾಂಸರುಗಳಿರುವ ಸಭೆಗೆ ಯೋಗ್ಯನಾದ ಎಂದರೆ ಶಾಸ್ತ್ರಜ್ಞನಾದವನು ಎಂದು ಅರ್ಥವಿವರಣೆ ಮಾಡಿರುವರು.

**ಪಿತೃಶ್ರವಣಂ—**ತಂದೆಯ ಹೆಸರನ್ನು ಎಲ್ಲರೂ ಕೇಳುವಂತೆ ಮಾಡುವವನು ಎಂದರೆ ತಂದೆಯ ಹೆಸರನ್ನು ಪ್ರಸಿದ್ಧಿಗೆ ತರುವವನು ಎಂದು ಭಾಷ್ಯಕಾರರೂ; ಪಿತೃಗಳು ಹೇಳಿದಂತೆ ಕೇಳುವವನಾದ್ದರಿಂದ ವಿನೀತನು ಎಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುವರು.

ವ್ಯಾಕರಣಪ್ರಕ್ರಿಯಾ

**ಅರ್ವಂತಮ್—**ಋ ಗತೌ ಧಾತು. ವನಿಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಅರ್ವನ್ ಶಬ್ದವಾಗುತ್ತದೆ. ದ್ವಿತೀಯಾಏಕವಚನ ಪರವಾದಾಗ **ಅರ್ವಣಸ್ತ್ರಸಾವನಞಃ—**ಎಂಬುದರಿಂದ ತೃ ಅಂತಾದೇಶ. ಉಗಿತ್ತಾದುದರಿಂದ ನುಮಾಗಮ. ಅನುಸ್ವಾರ ಪರಸವರ್ಣ. ಅರ್ವನ್ತಮ್ ಎಂದು ರೂಪವಾಗುತ್ತದೆ.

**ಕರ್ಮಣ್ಯಮ್—**ಕರ್ಮಸು ಸಾಧುಃ ಕರ್ಮಣ್ಯಃ **ತತ್ರ ಸಾಧುಃ**-(ಪಾ.ಸೂ. ೪-೪-೯೮) ಎಂಬುದರಿಂದ ಸಾಧ್ವರ್ಥದಲ್ಲಿ ಯತ್ ಪ್ರತ್ಯಯ. ಕರ್ಮನ್+ಯ ಎಂದಿರುವಾಗ **ಯೇಚಾಭಾವ ಕರ್ಮಣೋಃ—**ಎಂಬುದರಿಂದ ಅನ್ನಿಗೆ ಪ್ರಕೃತಿಭಾವ ಬರುತ್ತದೆ. **ತಿತ್‌ಸ್ವರಿತಮ್**-(ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಹೀಗೆಯೇ ಸದನ್ಯಂ ವಿದಥ್ಯಮ್ ಎಂಬಲ್ಲಿಯೂ ಯತ್ ಪ್ರತ್ಯಯ. ಸ್ವರಿತಸ್ವರ.

**ದದಾತಿ—**ಡುದಾಞ್ ದಾನೇ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನಾಂತ ರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸಭೇಯಮ್—**ಸಭಾಯಾಂ ಸಾಧುಃ ಸಭೇಯಃ **ಢಶ್ಛಂದಸಿ**-(ಪಾ. ಸೂ. ೪-೪-೧೦೬) ಎಂಬುದರಿಂದ ಸಾಧ್ವರ್ಥದಲ್ಲಿ ಛಂದಸಿನಲ್ಲಿ ಢ ಪ್ರತ್ಯಯ. **ಆಯನೇಯೀ—**ಸೂತ್ರದಿಂದ ಢ ಎಂಬುದಕ್ಕೆ ಏಯಾದೇಶ. **ಯಸ್ಯೇತಿ ಚ—**ಸೂತ್ರದಿಂದ ಸಭಾ ಎಂಬಲ್ಲಿರುವ ಆಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಏಕಾರ ಉದಾತ್ತ ವಾಗುತ್ತದೆ.

**ದದಾಶತ್—**ದಾಶೃ ದಾನೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚಲೋಪಃ** —ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ—**ಎಂಬುದರಿಂದ ಅಡಾಗಮ. **ಬಹುಲಂ ಛಂದಸಿ—** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ—**ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸದಲ್ಲಿ ಆದಿಹಲ್‌ಶೇಷ. ಹ್ರಸ್ವ. ಯಃ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**-(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ. **ಅಭ್ಯಸ್ತಾನಾಮಾದಿಃ**-(ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ॥ ೨೦ ॥

ಸಂಹಿತಾಪಾಠಃ

ಅಷಾಳ್ಹಂ ಯುತ್ಸು ಪೃತನಾಸು ಪಪ್ರಿಂ ಸ್ವರ್ಷಾಮಪ್ಸಾಂ
ವೃಜನಸ್ಯ ಗೋಪಾಂ।
ಭರೇಷುಜಾಂ ಸುಕ್ಷಿತಿಂ ಸುಶ್ರವಸಂ ಜಯಂತಂ ತ್ವಾಮನು ಮ-
ದೇಮ ಸೋಮ ॥ ೨೧ ॥

॥ ಪದಪಾಠಃ ॥

ಅಷಾಳ್ಹಂ । ಯುತ್ ಽ ಸು । ಪೃತನಾಸು । ಪಪ್ರಿಂ । ಸ್ವಃ ಽ ಸಾಂ । ಅಪ್ಸಾಂ ।
ವೃಜನಸ್ಯ । ಗೋಪಾಂ ।
ಭರೇಷು ಽ ಜಾಂ । ಸು ಽ ಕ್ಷಿತಿಂ । ಸು ಽ ಶ್ರವಸಂ । ಜಯಂತಂ । ತ್ವಾಂ । ಅನು ।
ಮದೇಮ । ಸೋಮ ॥ ೨೧ ॥

ಸಾಯಣಭಾಷ್ಯಂ

ಏಕಾದಶಿನಸ್ಯ ಸೌಮ್ಯಸ್ಯ ಪಶೋಃ ಪುರೋಡಾಶಸ್ಯಾಷಾಳ್ಹಂ ಯುತ್ಸ್ವಿತ್ಯೇಷಾ ಯಾಜ್ಯಾ । ಪ್ರದಾನಾನಾಮಿತಿ ಖಂಡೇ ಸೂತ್ರಿತಂ । ಅಷಾಳ್ಹಂ ಯುತ್ಸು ಪೃತನಾಸು ಪಪ್ರಿಂ ಯಾ ತೇ ಧಾಮಾನಿ ಹವಿಷಾ ಯಜಂತಿ । ಆ. ೩-೭ । ಇತಿ ॥

ಯುತ್ಸು ಯುದ್ಧೇಷ್ವಷಾಳ್ಹಂ। ಶತ್ರುಭಿರನಭಿಭವನೀಯಂ ತಥಾ ಪೃತನಾಸು ಸೇನಾಸು ಪಪ್ರಿಂ ಜಯಸ್ಯ ಪೂರಯಿತಾರಂ ಸ್ವರ್ಷಾಂ ಸ್ವರ್ಗಸ್ಯ ಸನಿತಾರಂ ದಾತಾರಂ ಅಪ್ಸಾಮಪಾಂ ವೃಷ್ಟಿಲಕ್ಷಣಾನಾಮುದಕಾನಾಂ ದಾತಾರಂ । ಯದ್ವಾ । ಅಪ್ಸಾಮಪ್ಸಾತ್ಮಕಂ ಭಕ್ಷಕರಹಿತಂ । ಸರ್ವೇಷಾಮನುಗ್ರಾಹಕಮಿತ್ಯರ್ಥಃ । ವೃಜನಸ್ಯ ಗೋಪಾಂ । ವೃಜ್ಯತೇಽನೇನೇತಿ ವೃಜನಂ ಬಲಂ । ತಸ್ಯ ಗೋಪಾಂ ಗೋಪಯಿತಾರಂ ರಕ್ಷಿತಾರಂ ಭರೇಷುಜಾಂ । ಭ್ರಿಯಂತೇ ಏಷು ಹವೀಂಷೀತಿ ಭರಾ ಯಾಗಾಃ । ತೇಷು ಪ್ರಾದುರ್ಭವಂತಂ ಸುಕ್ಷಿತಿಂ ಶೋಭನನಿವಾಸಸ್ಥಾನಂ ಸುಶ್ರವಸಂ ಶೋಭನಯಶಸ್ಕಂ ಜಯಂತಂ ಶತ್ರೂನಭಿಭ-

ವಂತಂ। ಹೇ ಸೋಮ ಈದೃಗ್ಭೂತಂ ತ್ವಾಮನುಲಕ್ಷ್ಯ ಮದೇಮ ಹರ್ಷಯುಕ್ತಾ ಭವೇಮ ॥ ಅಷಾಳ್ಹಂ। ಷಹ ಅಭಿಭವೇ । ಸಾಢ್ಯೈ ಸಾಢ್ವಾ ಸಾಢೇತಿ ನಿಗಮೇ। ಪಾ. ೬-೩-೧೧೩ । ಇತಿ ನಿಪಾತನಾತ್ ಸಹಿವಹೋರೋದವರ್ಣಸ್ಯ। ಪಾ. ೬-೩-೧೧೨ । ಇತ್ಯೋತ್ವಾಭಾವಃ। ಸಹೇಃ ಸಾಡಃ ಸ ಇತಿ ಷತ್ವಂ। ಪಪ್ರಿಂ। ಪ್ರಾ ಪಾಲನಪೂರಣಯೋಃ। ಆದೃಗಮಹನಜನ ಇತಿ ಕಿನ್ಪ್ರತ್ಯಯಃ। ಸ್ವರ್ಷಾಂ। ಸ್ವಃ ಸ್ವರ್ಗಂ ಸನೋತೀತಿ ಸ್ವರ್ಷಾಃ। ಷಣು ದಾನೇ। ಜನಸನಖನೇತಿ ವಿಟ್। ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ। ಅಪ್ಸಾಂ । ಅಪ್ಸುಬ್ಬೋಪಪದಾತ್ಸನೋತೇಃ ಪೂರ್ವವದ್ವಿಟ್ । ಯದ್ವಾ । ಪ್ಸಾ ಭಕ್ಷಣೇ । ಪ್ಸಾತಿ ಭಕ್ಷಯತೀತಿ ಪ್ಸಾಃ। ಕ್ವಿಪ್ಚೇತಿ ಕ್ವಿಪ್। ನ ವಿದ್ಯತೇ ಪ್ಸಾ ಅಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರ-ಪದಾಂತೋದಾತ್ತತ್ವಂ । ಭರೇಷುಜಾಂ । ಜನೀ ಪ್ರಾದುರ್ಭಾವೇ । ಪೂರ್ವವದ್ವಿಟ್ ಆತ್ವಂ ಚ। ಮದೇಮ। ಮದೀ ಹರ್ಷೇ। ವ್ಯತ್ಯಯೇನ ಶಪ್ ॥

ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವನೇ। **ಯುತ್ಸು**—ಯುದ್ಧಗಳಲ್ಲಿ। **ಅಷಾಳ್ಹಂ**—(ಶತ್ರುಗಳಿಂದ) ಸೋಲಿಸಲ್ಪಡದಿರುವವನೂ। **ಪೃತನಾಸು**—ಸೇನೆಗಳಲ್ಲಿ। **ಪಪ್ರಿಂ**— (ಜಯವನ್ನು) ತುಂಬುವವನೂ। **ಸ್ವರ್ಷಾಂ**—ಸ್ವರ್ಗವನ್ನು ಸೇರಿಸುವವನೂ। **ಅಪ್ಸಾಂ**— ವೃಷ್ಟಿರೂಪವಾದ ಜಲವನ್ನು ಕೊಡುವವನೂ (ಅಥವಾ ಎಲ್ಲರನ್ನು ಅನುಗ್ರಹಿಸುವವನೂ)। **ವೃಜನಸ್ಯ**—ಬಲಕ್ಕೆ। **ಗೋಪಾಂ**—ರಕ್ಷಕನೂ । **ಭರೇಷುಜಾಂ**—ಯಜ್ಞಗಳಲ್ಲಿ ಉತ್ಪನ್ನನಾಗುವವನೂ। **ಸುಕ್ಷಿತಿಂ**—ಶ್ರೇಷ್ಠವಾದ ನಿವಾಸಗೃಹಗಳುಳ್ಳವನೂ। **ಸುಶ್ರವಸಂ**—ಪ್ರಸಿದ್ಧವಾದ ಹೆಸರುಳ್ಳವನೂ। **ಜಯಂತಂ**—(ಶತ್ರುಗಳನ್ನು) ಜಯಿಸುವವನೂ ಆದ। **ತ್ವಾಂ ಅನು**—ನಿನ್ನನ್ನು (ಧ್ಯಾನಿಸುತ್ತಾ)। **ಮದೇಮ**—ನಾವು ಹರ್ಷಪಡುತ್ತೇವೆ ॥

ಭಾವಾರ್ಥ

ಎಲೈ ಸೋಮದೇವನೇ, ಯುದ್ಧಗಳಲ್ಲಿ ಶತ್ರುಗಳಿಂದ ಸೋಲಿಸಲ್ಪಡದಿರುವವನೂ, ನಿನ್ನ ಸೇನೆಗಳಿಗೆ ಜಯವನ್ನು ಗಳಿಸುವವನೂ, ನಮ್ಮನ್ನೆಲ್ಲಾ ಸ್ವರ್ಗಕ್ಕೆ ಸೇರಿಸುವವನೂ, ವೃಷ್ಟಿರೂಪವಾದ ಜಲವನ್ನು ಕೊಡತಕ್ಕವನೂ ನಮ್ಮ ಬಲದ ರಕ್ಷಕನೂ, ಯಜ್ಞಗಳ ನಡುವೆ ಉತ್ಪನ್ನನಾಗುವವನೂ, ಶ್ರೇಷ್ಠವಾದ ನಿವಾಸಗೃಹಗಳುಳ್ಳವನೂ, ಪ್ರಸಿದ್ಧವಾದ ಯಶಸ್ಸುಳ್ಳವನೂ ಮತ್ತು ಶತ್ರುಗಳನ್ನು ಜಯಿಸುವವನೂ ಆದ ನಿನ್ನನ್ನು ಕುರಿತು ಧ್ಯಾನಿಸುತ್ತಾ ನಾವು ಹರ್ಷಪಡುತ್ತೇವೆ.

English Translation

O Soma, we rejoice contemplating you invincible in battle, triumphant amongst hosts, the granter of heaven, the giver of rain, the preserver of strength, born amidst sacrifices, occupying a brilliant dwelling, renowned and victorious.

ವಿಶೇಷ ವಿಷಯಗಳು

ಏಕಾದಶಿನವೆಂಬ ಯಾಗದಲ್ಲಿ ಸೋಮದೇವತಾಕವಾದ ಪಶುಪುರೋಡಾಶಹೋಮವನ್ನು ಮಾಡುವಾಗ **ಅಷಾಳ್ಹಂ ಯುತ್ಸು** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ

ಶ್ರೌತಸೂತ್ರದ **ಪ್ರದಾನಾನಾಂ** ಎಂಬ ಖಂಡದಲ್ಲಿ **ಅಷಾಳ್ಹಂ ಯುತ್ಸು ಪೃತನಾಸು ಪಪ್ರಿಂ ಯಾ ತೇ ಧಾಮಾನಿ ಹವಿಷಾ ಯಜಂತಿ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೩-೭).

**ಅಷಾಹ್ಳಂ—ಷಹ ಅಭಿಭವೇ** । ಷಾಳ್ಹಂ ಅಂದರೆ ಸೋಲಿಸಲ್ಪಡುವವನು ಎಂದೂ ಅಷಾಹ್ಳಂ ಎಂದರೆ ಸೋಲಿಸಲ್ಪಡದವನು ಎಂದರೆ ಅಪ್ರತಿಹತನಾದವನೂ ಎಂದರ್ಥವು.

**ಪೃತನಾಸು—ರಣಃ, ವಿವಾಕ್ ವಿಖಾದಃ** ಇತ್ಯಾದಿ ಸಂಗ್ರಾಮನಾಮಗಳಲ್ಲಿ (ನಿ. ೩-೯) ಪಠಿತವಾಗಿರುವುದರಿಂದ **ಪೃತನಾಃ** ಅಂದರೆ ಸಂಗ್ರಾಮವೆಂದರ್ಥವು. **ಪೃತನಾಸು**—ಯುದ್ಧಗಳಲ್ಲಿ ; ಈ ಶಬ್ದವು ಯಾವಾಗಲೂ ಬಹುವಚನದಲ್ಲಿಯೇ ಉಪಯೋಗಿಸಲ್ಪಡುವುದು.

**ಪಪ್ರಿಂ—ಪೄ ಪಾಲನಪೂರಣಯೋಃ** ಎಂಬ ಪೂರಣಾರ್ಥವನ್ನು ಕೊಡುವ **ಪೄ** ಧಾತುವಿನಿಂದ **ಪಪ್ರಿಃ** ಎಂಬ ಶಬ್ದವಾಗಿ ಪೂರಕನು ಅಂದರೆ ತುಂಬಿಕೊಡುವವನು ಎಂದರ್ಥವಾಗುತ್ತದೆ. ಸಾಯಣರು ಈ ಶಬ್ದಕ್ಕೆ **ಜಯಸ್ಯ ಪೂರಯಿತಾರಂ** । ಅಂದರೆ ಜಯವನ್ನು ತುಂಬಿಸಿಕೊಡುವವನು ಎಂದೂ ಸ್ಕಂದಸ್ವಾಮಿಗಳು ಮೊದಲನೆಯ ಅರ್ಥವನ್ನು ತೆಗೆದುಕೊಂಡು, **ಸಂಗ್ರಾಮೇಷು ಯಷ್ಟೄಣಾಂ ಸ್ತೋತೄಣಾಂ ಚ ಪಾಲಯಿತಾರಂ** । ಯುದ್ಧಗಳಲ್ಲಿ ಭಕ್ತರನ್ನು ಪಾಲಿಸುವವನು ಎಂದೂ ವಿವರಿಸುತ್ತಾರೆ. ಋಗರ್ಥದೀಪಿಕೆಯಲ್ಲಿಯೂ ಸಹ ಪಾಲಯಿತಾರಂ ಎಂದೇ ಇದೆ. ಇಲ್ಲಿ ಯಾವ ಅರ್ಥವನ್ನು ಹೇಳಿದರೂ ವ್ಯತ್ಯಾಸವಿಲ್ಲ. (ಋ. ಸಂ. ೧-೫೨-೩) ಇತ್ಯಾದಿ ಸ್ಥಳಗಳಲ್ಲಿ **ಪಪ್ರಿರಂಧಸಃ** ಅನ್ನುವುದಕ್ಕೆ **ಅನ್ನಸ್ಯ ದಾತಾ** ಎಂದೂ ಆಗುತ್ತದೆ.

**ಸ್ವರ್ಷಾಂ—ಸ್ವರ್ಗಸ್ಯ ಸನಿತಾರಂ ದಾತಾರಂ** । ಸ್ವರ್ಗವು ಲಭಿಸುವಂತೆ ಮಾಡುವ, ಸ್ವರ್ಗದಾತೃವನ್ನು.

**ಅಪ್ಸಾಂ—ಅಪಾಂ ವೃಷ್ಟಿಲಕ್ಷಣಾನಾಂ ಉದಕಾನಾಂ ದಾತಾರಂ** । ವೃಷ್ಟ್ಯುದಕಗಳನ್ನು ಒದಗಿಸುವವನನ್ನು ಎಂದೂ ಅಥವಾ **ಪ್ಸಾ ಭಕ್ಷಣೇ ಪ್ಸಾತಿ ಭಕ್ಷಯತೀತಿ ಪ್ಸಾಃ ನ ವಿದ್ಯತೇ ಪ್ಸಾ ಅಸ್ಯೇತಿ** ಭಕ್ಷಕರ ಹಿತನಾದುದರಿಂದ ಸರ್ವರ ಅನುಗ್ರಾಹಕನನ್ನು ಎಂಬರ್ಥವನ್ನು ಮಾಡುತ್ತಾರೆ. ಸಾಧಾರಣವಾಗಿ **ಅಪ್ಸಾಃ** ಎಂಬ ವಿಶೇಷಣವು ಬರುವ ಋ. ಸಂ. ೯-೬೫-೨೦ ; ೯-೭೧-೮ ; ೯-೮೪-೧ ಮುಂತಾದ ಋಕ್ಕುಗಳಲೆಲ್ಲಾ **ಅಪ್ಸಾಃ** ಅಂದರೆ **ಅಪಾಂ-ದಾತಾ** ಎಂದೇ ಆಗುತ್ತದೆ. ಆದುದರಿಂದ ಇಲ್ಲಿಯೂ ಅದೇ ಅರ್ಥವು ಸಹಜವಾಗಿರುತ್ತದೆ.

**ವೃಜನಸ್ಯ ಗೋಪಾಂ**—ವೃಜನವೆಂದರೆ ಬಲವು (ನಿ. ೩-೯) ಬಲದ ರಕ್ಷಕನನ್ನು.

**ಭರೇಷುಜಾಂ**—ಭರ ಶಬ್ದವು **ಸಂಗ್ರಾಮ** ನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) **ಭರೇಷು** ಅಂದರೆ ಯುದ್ಧಗಳಲ್ಲಿ. **ಜನಿರತ್ರ ಸಾಮರ್ಥ್ಯಾಜ್ಜಯತೇರರ್ಥೇ । ಸಂಗ್ರಾಮೇಷು ಜೇತಾರಂ** । ಯುದ್ಧಗಳಲ್ಲಿ ಜಯಿಸುವವನನ್ನು ಎಂಬರ್ಥವನ್ನು ಸ್ಕಂದಸ್ವಾಮಿಗಳೂ, **ಭ್ರಿಯಂತೇ ಏಷು ಹವೀಂಷೀತಿ ಭರಾಃ ಯಾಗಾಃ। ತೇಷು ಪ್ರಾದುರ್ಭವಂತಂ** । ಅಂದರೆ ಹವಿಸ್ಸುಗಳನ್ನು ಭರಣ ಮಾಡುವುದರಿಂದ **ಭರಾಃ** ಎಂದರೆ ಯಾಗಗಳು ಎಂದೂ ಅವುಗಳಲ್ಲಿ ಉತ್ಪತ್ತಿಯಿರುವುದರಿಂದ **ಭರೇಷುಜಾಂ** ಎಂದೂ ವಿವರಿಸಿ ಇಲ್ಲಿ ಯಜ್ಞಗಳಲ್ಲಿ ಪ್ರಾದುರ್ಭವಿಸಿದವನನ್ನು ಎಂಬರ್ಥವನ್ನು ಸಾಯಣರೂ ಮಾಡುತ್ತಾರೆ.

ವ್ಯಾಕರಣಪ್ರಕ್ರಿಯಾ

**ಅಷಾಢ್ಯಮ್**—ಷಹ ಅಭಿಭವೇ ಧಾತು. ಇದಕ್ಕೆ ಕ್ತಪ್ರತ್ಯಯ ಪರವಾದಾಗ **ಸಾಢ್ಯೈ ಸಾಢ್ವಾ ಸಾಢೇತಿ ನಿಗಮೇ**-(ಪಾ. ಸೂ. ೯-೩-೧೧೩) ಎಂಬುದರಿಂದ ನಿಪಾತನಮಾಡಿರುವುದರಿಂದ **ಸಹಿವಹೋರೋದ-ವರ್ಣಸ್ಯ** (ಪಾ.ಸೂ. ೬-೩-೧೧೨) ಎಂಬುದರಿಂದ ಓತ್ವ ಬರುವುದಿಲ್ಲ. **ಸಹೇಃಸಾಢಃಸಃ**—ಎಂಬುದರಿಂದ ಸಕಾರಕ್ಕೆ ಷತ್ವ. ನಞ್‌ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ**—ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿ ಸ್ವರ ಬರುತ್ತದೆ.

**ಯುತ್ಸು**—ಸಪ್ತಮೀಬಹುವಚನರೂಪ. **ಸಾವೇಕಾಚಸ್ತೃತೀಯಾದಿಃ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪಪ್ರಿಮ್**—ಪ್ರಾ ಪಾಲನಪೂರಣಯೋಃ ಧಾತು. ಇದಕ್ಕೆ **ಆದೃಗಮಹನ ಜನಃ ಕಿಕಿನೌಲಿಟ್‌ಚ** (ಪಾ. ಸೂ. ೩-೨-೧೭೧) ಎಂಬುದರಿಂದ ಕಿನ್‌ಪ್ರತ್ಯಯ. ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ. ಹಲಾದಿಶೇಷ. ಪ್ರತ್ಯಯನಿಮಿತ್ತವಾಗಿ ಯಣಾದೇಶ. ಪ್ರತ್ಯಯನಿತ್ತಾದುದರಿಂದ **ಞ್ನಿತ್ಯಾದಿರ್ನಿ-ತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಸ್ವರ್ಷಾಮ್**— ಸ್ವಃ ಸ್ವರ್ಗಂ ಸನೋತೀತಿ ಸ್ವರ್ಷಾಃ. ಷಣು ದಾನೇ ಧಾತು. **ಜನಸನಖನ**-(ಪಾ. ಸೂ. ೩-೨-೬೭) ಎಂಬುದರಿಂದ ವಿಟ್. ಇದು ಪರವಾದಾಗ **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ಸನಿನ ಅನುನಾಸಿಕನಕಾರಕ್ಕೆ ಆತ್ವ. ದ್ವಿತೀಯಾಏಕವಚನಾಂತರೂಪ. **ಗತಿಕಾರಕೋಪಪದಾತ್-ಕೃತ್**—ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅಪ್ಸಾಮ್**—ಅಪ್‌ಶಬ್ದ ಉಪಪದವಾಗಿರುವಾಗ ಹಿಂದೆ ಹೇಳಿದಂತೆ ಷಣು ಧಾತುವಿಗೆ ವಿಟ್. ಹಿಂದಿನಂತೆ ಆತ್ವಾದಿ ಪ್ರಕ್ರಿಯಾ. ಅಥವಾ ಪ್ಸಾ ಭಕ್ಷಣೇ ಧಾತು. ಪ್ಸಾತಿ ಭಕ್ಷಯತಿ ಇತಿ ಪ್ಸಾಃ. **ಕ್ವಿಪ್‌ಚ**—ಎಂಬುದರಿಂದ ಕ್ವಿಪ್ ಪ್ರತ್ಯಯ. ನ ವಿದ್ಯತೇ ಪ್ಸಾ ಅಸ್ಯ ಇತಿ ಅಪ್ಸಾಃ. ಬಹುವ್ರೀಹಿಸಮಾಸ. **ನಞ್-ಸುಭ್ಯಾಮ್**-(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಭರೇಷುಜಾಮ್**—ಜನೀ ಪ್ರಾದುರ್ಭಾವೇ ಧಾತು. ಹಿಂದೆ ಹೇಳಿದಂತೆ ವಿಟ್. ಆತ್ವ. ಭರೇಷು ಜಾಯತೇ ಪ್ರಾದುರ್ಭವತಿ ಇತಿ ಭರೇಷುಜಾಃ **ತತ್ಪುರುಷೇ ಕೃತಿ ಬಹುಲಮ್**—ಎಂಬುದರಿಂದ ಸಪ್ತಮಿಗೆ ಸಮಾಸದಲ್ಲಿ ಅಲುಕ್. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುಕ್ಷಿತಿಮ್**— ಕ್ಷಿ ನಿವಾಸಗತ್ಯೋಃ ಧಾತು. **ಕ್ತಿಚ್‌ಕ್ತೌಚಸಂಜ್ಞಾಯಾಂ**(ಪಾ.ಸೂ.—ಎಂಬುದರಿಂದ ಕ್ತಿಚ್‌ಪ್ರತ್ಯಯ. **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ.

**ಜಯಂತಮ್**—ಜಿ ಜಯೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಪ್‌ವಿಕರಣ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಅಯಾದೇಶ. ಜಯತ್ ಶಬ್ದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ. ಧಾತುಸ್ವರ ಉಳಿಯುತ್ತದೆ.

**ಮದೇಮ**—ಮದೀ ಹರ್ಷೇ. ಧಾತು. ದಿವಾದಿ. ವಿಧಿಲಿಙ್ ಉತ್ತಮಪುರುಷನಲ್ಲಿ ಮಸ್‌ಪ್ರತ್ಯಯ. ನಿತ್ಯಂಙಿತಃ—ಎಂಬುದರಿಂದ ಸಕಾರಕ್ಕೆ ಲೋಪ. **ವ್ಯತ್ಯಯೋಬಹುಲಮ್**—ಎಂಬುದರಿಂದ ಶ್ಯನ್ನಿಗೆ ಶಪ್. ಯಾಸುಟಿಗೆ **ಅತೋಯೇಯಃ** — ಎಂಬುದರಿಂದ ಇಯಾದೇಶ. **ಲೋಪೋವ್ಯೋರ್ವಲಿ** — ಎಂಬುದರಿಂದ ಯಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸೋಮ**—**ಆಮಂತ್ರಿತಸ್ಯ ಚ**—ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೨೧ ॥

———— :o: ————

॥ ಸಂಹಿತಾಪಾಠಃ ॥

ತ್ವಮಿಮಾ ಓಷಧೀಃ ಸೋಮ ವಿಶ್ವಾಸ್ತ್ವಮಪೋ ಅಜನಯ-
ಸ್ತ್ವಂ ಗಾಃ ।
ತ್ವಮಾ ತತಂಥೋರ್ವಂತರಿಕ್ಷಂ ತ್ವಂ ಜ್ಯೋತಿಷಾ ವಿ ತಮೋ
ವವರ್ಥ ॥ ೨೨ ॥

ಪದಪಾಠಃ

**ತ್ವಂ । ಇಮಾಃ । ಓಷಧೀಃ । ಸೋಮ । ವಿಶ್ವಾಃ । ತ್ವಂ । ಅಪಃ । ಅಜನಯಃ ।**
**ತ್ವಂ । ಗಾಃ ।**
**ತ್ವಂ । ಆ । ತತಂಥ । ಉರು । ಅಂತರಿಕ್ಷಂ । ತ್ವಂ । ಜ್ಯೋತಿಷಾ । ವಿ । ತಮಃ ।**
**ವವರ್ಥ ॥ ೨೨ ॥**

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಮಿಮಾ ಭೂಮ್ಯಾಂ ವರ್ತಮಾನಾ ವಿಶ್ವಾಃ ಸರ್ವಾ ಓಷಧೀರಜನಯಃ । ಉತ್ಪಾದಿತವಾನಸಿ । ತಥಾ ತ್ವಮಪಸ್ತಾಸಾಮೋಷಧೀನಾಂ ಕಾರಣಭೂತಾನಿ ವೃಷ್ಟ್ಯುದಕಾನ್ಯಜನಯಃ ।

**ತಥಾ ತ್ವಂ ಗಾಃ ಸರ್ವಾನ್ಪಶೂನುದಪಾದಯಃ । ಉರು ವಿಸ್ತೀರ್ಣಮಂತರಿಕ್ಷಂ ತ್ವಮಾ ತತಂಥ । ವಿಸ್ತಾರಿತವಾನಸಿ । ತಸ್ಮಿನ್ನಂತರಿಕ್ಷೇ ಯತ್ತಮೋಽಸ್ಮದ್ದೃಷ್ಟಿನಿರೋಧಕಮಂಧಕಾರಂ ತದಪಿ ತ್ವಂ ಜ್ಯೋತಿಷಾತ್ಮೀಯೇನ ಪ್ರಕಾಶೇನ ವಿ ವವರ್ಥ । ವಿವೃತಂ ವಿಶ್ಲಿಷ್ಟಂ ವಿನಷ್ಟಂ ಕೃತವಾನಸಿ ॥ ತತಂಥ । ತನು ವಿಸ್ತಾರೇ । ವವರ್ಥ । ವೃಞ್ ವರಣೇ । ಉಭಯತ್ರ ಲಿಟಸ್ಥಲಿ ಬಭೂಥಾ ತತಂಥ ಜಗೃಮ್ಭ ವವರ್ಥೇತಿ ನಿಗಮೇ । ಪಾ. ಸೂ. ೭-೨-೬೪ । ಇತಿ ನಿಪಾತ್ಯತೇ ॥**

ಪ್ರತಿಪದಾರ್ಥ

**ಸೋಮ**— ಎಲೈ ಸೋಮದೇವನೇ । **ತ್ವಂ**— ನೀನು । **ಇಮಾಃ ವಿಶ್ವಾಃ ಓಷಧೀಃ**—(ಭೂಮಿಯ ಮೇಲಿರತಕ್ಕ) ಈ ಸಕಲವಾದ ಮೂಲಿಕೆಗಳನ್ನೂ। **ಅಜನಯಃ**-—ಸೃಷ್ಟಿಸಿರುವೆ। **ತ್ವಂ**— ನೀನು। **ಅಪಃ**—(ಇವುಗಳ ಬೆಳವಣಿಗೆಗೆ ಬೇಕಾದ) ನೀರುಗಳನ್ನು (ಸೃಷ್ಟಿಸಿರುವೆ) । **ತ್ವಂ**— ನೀನು । **ಗಾಃ**— ಪಶುಗಳನ್ನೆಲ್ಲಾ ಸೃಷ್ಟಿಸಿರುವೆ । **ಉರು**— ವಿಸ್ತಾರವಾದ । **ಅಂತರಿಕ್ಷಂ**— ಅಂತರಿಕ್ಷವನ್ನು । **ತ್ವಂ**— ನೀನು । **ಆತತಂಥ**—( ಇನ್ನು ಹೆಚ್ಚಾಗಿ ) ವಿಸ್ತಾರವಾಗುವಂತೆ ಮಾಡಿದ್ದೀಯೆ । **ತಮಃ**— ಅಂಧಕಾರವನ್ನು । **ತ್ವಂ**— ನೀನು । **ಜ್ಯೋತಿಷಾ**— ( ನಿನ್ನ ) ಪ್ರಕಾಶದಿಂದ । **ವಿ ವವರ್ಥ**— ದೂರಕ್ಕೆಹರಡಿ ನಾಶನಮಾಡಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ಈ ಭೂಮಿಯಮೇಲಿರುವ ಸಕಲವಾದ ಮೂಲಿಕೆಗಳನ್ನು ಸೃಷ್ಟಿಸಿರುವೆ ಇವುಗಳ ಬೆಳವಣಿಗೆಗೆ ಬೇಕಾದ ನೀರುಗಳನ್ನು ಸೃಷ್ಟಿಸಿರುವೆ. ಪಶುಗಳನ್ನು ಸೃಷ್ಟಿಮಾಡಿದ್ದೀಯೆ. ವಿಸ್ತಾರವಾದ ಅಂತರಿಕ್ಷವನ್ನು ಇನ್ನು ಹೆಚ್ಚಾಗಿ ವಿಸ್ತಾರವಾಗುವಂತೆ ಮಾಡಿದ್ದೀಯೆ. ನಿನ್ನ ಸ್ವಪ್ರಕಾಶದಿಂದ ಅಂತರಿಕ್ಷಾದಿ ಲೋಕಗಳಲ್ಲಿರುವ ಅಂಧಕಾರವನ್ನೆಲ್ಲಾ ನಾಶಮಾಡಿದ್ದೀಯೆ.

## English Translation

O Soma, you have created these herbs, the water and the cows ; you have spread out the spacious firmament ; you have dispelled the darkness with your light.

॥ ವಿಶೇಷವಿಷಯಗಳು ॥

**ಓಷಧೀಃ**— **ಓಷಧಯ ಓಷದ್ಧಯಂತೀತಿ ವಾ । ಓಷತ್ಯೇನಾಧಯಂತೀತಿ ವಾ ದೋಷಂ ಧಯಂತೀತಿ ವಾ ।** ( ನಿ. ೯-೨೭ ), ಎಂದು ನಿರುಕ್ತಕಾರರು ಮೂರು ವಿಧವಾದ ಅವಯವಾರ್ಥಗಳನ್ನು ಹೇಳಿರುವರು ಮೊದಲನೆಯದಾಗಿ ದಹಿಸು ಎಂಬರ್ಥವನ್ನು ಕೊಡುವ **ಉಷ್ (ಓಷ್)** ಧಾತುವಿನೊಡನೆ ಕುಡಿ ಎಂದಾಗುವ **ಧೇ (ಟ್) ಪಾನೇ** ಎಂಬುದು ಸೇರಿಕೊಂಡು **ಓಷಧಿಃ** ಅಂದರೆ ದೇಹದ ಒಳಗಡೆ ದಾಹಾತ್ಮಕವಾದ ರೋಗಗಳನ್ನು ಹೀರುವುದು ಅಥವಾ ರೋಗದ ದಾಹವಿರುವಾಗ ಪ್ರಾಣಿಗಳು ಕುಡಿಯುತ್ತಾರೆ (**ಓಷತ್ಯೇನಾ ಧಯಂತಿ**) ಎಂದಾಗುತ್ತದೆ. ಮತ್ತು **ದೋಷಂ ಧಯಂತೀತಿ ವಾ ।** ವಾತಾದಿದೋಷಗಳನ್ನು ಹಿಂಡುತ್ತವೆ ಆದುದರಿಂದ ಇವಕ್ಕೆ ಓಷಧಯಃ ಎಂದು ಹೆಸರು.

ಋಕ್ಸಂಹಿತೆಯ ೧೦ನೆಯ ಮಂಡಲದ ೯೭ನೆಯ ಸೂಕ್ತದಲ್ಲಿ ಓಷಧಿಗಳ ಉತ್ಪತ್ತಿ, ಸ್ವರೂಪ, ಪ್ರಯೋಜನ ಇವುಗಳನ್ನೆಲ್ಲಾ ವಿವರಿಸಿ ಮುಖ್ಯವಾಗಿ ಸೋಮನಿಗೂ ಓಷಧಿಗಳಿಗೂ ಇರುವ ಪರಸ್ಪರಸಂಬಂಧವು ವಿವರಿಸಲ್ಪಟ್ಟಿರುವುದು. **ಯಾ ಓಷಧೀಃ ಸೋಮರಾಜ್ಞೀಃ** ಎಂದು ೧೮ ಮತ್ತು ೧೯ನೆಯ ಋಕ್ಕುಗಳಲ್ಲಿ ಹೇಳುವಂತೆ ಸೋಮನು ಓಷಧಿಗಳಿಗೆಲ್ಲಾ **ರಾಜಾ** ಅಂದರೆ ಸ್ವಾಮಿಯಾಗಿರುತ್ತಾನೆ. ಓಷಧಿಗಳ ಬೆಳವಣಿಗೆಗಳಿಗೆಲ್ಲಾ ಸೋಮನೇ ಕಾರಣನಾಗಿರುವುದರಿಂದ ಅನೇಕಕಡೆ ಓಷಧಿ ಶಬ್ದಪ್ರಯೋಗಮಾಡುವಾಗಲೂ ಸಹ ಅದರ ಕಾರಣನಾದ ಸೋಮನೆಂದೇ ಅರ್ಥವಿರುವುದು. ಉದಾಹರಣೆಗೆ—

**ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಂಷಂತ್ಯೋಷಧಿಂ ।**
(ಋ.ಸಂ. ೧೦-೮೫-೩)

ಇತ್ಯಾದಿ ಋಕ್ಕುಗಳಲ್ಲಿ ಓಷಧಿ ಮತ್ತು ಸೋಮನಿಗಿರುವ ಪರಸ್ಪರವಾದ ನಿಕಟಸಂಬಂಧವು ಸೂಚಿತವಾಗಿರುವುದು. ಸಮಸ್ತವಾದ ಸಸ್ಯ ಮತ್ತು ಓಷಧಿಗಳ ಬೆಳವಣಿಗೆಗಳಿಗೆಲ್ಲಾ ಸೋಮನೇ ಕಾರಣನು. ಮತ್ತು ಓಷಧಿಗಳಲ್ಲಿ ರಸವನ್ನು ನಿರ್ಮಿಸಿರುವಂತೆಯೇ ಗೋವುಗಳಲ್ಲಿಯೂ ಕ್ಷೀರವನ್ನು ತುಂಬಿದನೆಂದೂ ಸಹ ಋ. ಸಂ. ೬-೪೪-೨೪ರಲ್ಲಿ ಹೇಳಿದೆ.

**ತ್ವಂ ಅಪಃ ಅಜನಯಃ**—ಸೋಮನನ್ನು ವೃತ್ರಹಂತನೆಂದು ಸಂಬೋಧಿಸಿ, ಪ್ರವಹಿಸುವ ನೀರನ್ನು ಆಕ್ರಮಿಸುತ್ತಲೂ ಮೇಘಗಳನ್ನು ತಡೆದು ಮಳೆಯನ್ನು ಹುಯ್ಯದಂತೆ ಮಾಡುತ್ತಲೂ ಇರುವ ವೃತ್ರನನ್ನು ಸಂಹಾರ ಮಾಡಿ ವೃಷ್ಟ್ಯುದಕಗಳನ್ನು ಸುರಿಸಿದನು ಎಂದು ವರ್ಣನೆಗಳಿವೆ. ಓಷಧಿಗಳ ಬೆಳವಣಿಗೆಗೆ ಬೇಕಾದ ಉದಕಗಳನ್ನು ಸುರಿಸಿದನೆಂದರ್ಥವು.

**ಪವಸ್ವ ವೃತ್ರಹಂತಮೋಕ್ಥೇಭಿರನುಮಾದ್ಯಃ ।**
( ಋ. ಸಂ. ೯-೨೪-೬ )

**ಸಂ ದೇವೈಃ ಶೋಭತೇ ವೃಷಾ ಕವಿರ್ಯೋನಾವಧಿ ಶ್ರಿತಃ ।**
**ವೃತ್ರಹಾ ದೇವವೀತಮಃ ॥**
(ಋ. ಸಂ. ೯-೨೫-೩)

ಇತ್ಯಾದಿ ಋಕ್ಕುಗಳಲ್ಲಿ ಸೋಮನನ್ನು ವೃತ್ರಸಂಹಾರಕನನ್ನಾಗಿ ವರ್ಣಿಸಲಾಗಿದೆ. ಈ ಸ್ಥಳಗಳಲ್ಲಿ ವೃತ್ರಶಬ್ದಕ್ಕೆ ಸಾಧಾರಣವಾಗಿ ಮೇಘನೆಂಬ ಅರ್ಥವನ್ನೇ ಹೇಳಬೇಕು (ನಿ. ೨-೧೬).

**ಉರು ಅಂತರಿಕ್ಷಂ ಆತತಂಥ**—ನೀನು ಅಂತರಿಕ್ಷವನ್ನು ವಿಸ್ತಾರವಾಗುವಂತೆ ಮಾಡಿದೆ ಎಂದರ್ಥವು. ಋಕ್ಸಂಹಿತೆಯ

**ಅಯಂ ಪೀಯೂಷಂ ತಿಸೃಷು ಪ್ರವತ್ಸು ಸೋಮೋ ದಾಧಾರೋರ್ವ೧ ಂತರಿಕ್ಷಂ ।**
( ಋ. ಸಂ. ೬-೪೭-೪ )

**ಅಯಂ ದ್ಯಾವಾಪೃಥಿವೀ ವಿ ಷ್ಕಭಾಯದಯಂ ರಥಮಯುನಕ್ಸಪ್ತರಶ್ಮಿಂ ।**
**ಅಯಂ ಗೋಷು ಶಚ್ಯಾ ಪಕ್ವಮಂತಃ ಸೋಮೋ ದಾಧಾರ ದಶಯಂತ್ರಮುತ್ಸಂ ॥**
( ಋ. ಸಂ. ೬-೪೪-೨೪ )

ಇತ್ಯಾದಿ ಋಕ್ಕುಗಳಲ್ಲಿ ಸೋಮನು ಅಂತರಿಕ್ಷಾದಿ ಲೋಕಗಳನ್ನೆಲ್ಲಾ ಎತ್ತಿಹಿಡಿದು ಅವೆಲ್ಲವನ್ನೂ ವಿಸ್ತಾರವಾಗುವಂತೆ ಮಾಡಿದನು ಎಂಬ ವಿವರಣೆಯಿದೆ. ಆ ಅಂಶವನ್ನೇ ಇಲ್ಲಿಯೂ ಹೇಳಲಾಗಿದೆ.

**ತಮಃ(ವಿ) ವವರ್ಥ**— ಅಂಧಕಾರವನ್ನು ನಾಶಮಾಡಿದೆಯೆಂದರ್ಥವು. ಅಂತರಿಕ್ಷದ ಅಂಧಕಾರವನ್ನು ನಾಶಮಾಡಿ ಜ್ಯೋತಿಯನ್ನು ಬೀರಿದನು ಎಂದು ಸೋಮನನ್ನು ಅನೇಕ ಕಡೆಗಳಲ್ಲಿ ಹೊಗಳುವ ಶ್ರುತಿವಾಕ್ಯಗಳಿವೆ.—

**ಪವಮಾನ ಋತಂ ಬೃಹಚ್ಛುಕ್ರಂ ಜ್ಯೋತಿರಜೀಜನತ್ ।**
**ಕೃಷ್ಣಾ ತಮಾಂಸಿ ಜಂಘನತ್ ॥**
( ಋ. ಸಂ. ೯-೬೭-೨೪ )

ಇತ್ಯಾದಿ ಋಕ್ಕುಗಳು ಈ ವಿಷಯವನ್ನು ಸಮರ್ಥಿಸುವುವು.

॥ ವ್ಯಾಕರಣಪ್ರಕ್ರಿಯಾ ॥

**ಅಪಃ**—ಅಪ್‌ಶಬ್ದ ದ್ವಿತೀಯಾಬಹುವಚನಾಂತರೂಪ. **ಊಡಿದಂ ಪದಾದಿ**— ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಜನಯಃ**— ಜನೀ ಪ್ರಾದುರ್ಭಾವೇ ಧಾತು. ಪ್ರಯೋಜಕವ್ಯಾಪಾರತೋರುವುದರಿಂದ **ಹೇತು-ಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಜನೀಜೃಷ್**—ಸೂತ್ರದಿಂದ ಧಾತುವಿಗೆ ಮಿತ್ ಸಂಜ್ಞಾ ಬರುವುದರಿಂದ **ಮಿತಾಂ ಹ್ರಸ್ವಃ**-(ಪಾ. ಸೂ. ೬-೪-೯೨) ಎಂಬುದರಿಂದ ಣಿಚ್‌ನಿಮಿತ್ತವಾಗಿ ಬಂದ ವೃದ್ಧಿಗೆ ಹ್ರಸ್ವ. ಲಙ್ ಮಧ್ಯಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ತತನ್ಥ**—ತನು ವಿಸ್ತಾರೇ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಥಲಾದೇಶ. ಛಾಂದಸವಾಗಿ ಇಡಭಾವ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸದ ಆದಿಹಲ್‌ಶೇಷ. ಧಾತುನಕಾರಕ್ಕೆ ಅನುಸ್ವಾರ ಪರಸವರ್ಣ. ತಿಙಂತನಿಘಾತಸ್ವರ ಬರುತ್ತದೆ. ಇದು ಮುಂದೆ ಹೇಳುವ ನಿಪಾತದಿಂದಲೂ ಸಿದ್ಧವಾಗುತ್ತದೆ.

**ವವರ್ಥ**—ವೃಞ್ ವರಣೇ ಧಾತು. ಲಿಟನ್ನಲ್ಲಿ ಥಲಾದೇಶ ಬಂದಾಗ **ಬಭೂಥಾ ತತನ್ಥ ಜಗೃಂಭ ವವರ್ಥೇತಿ ನಿಗಮೇ** (ಪಾ. ಸೂ. ೭-೨-೬೪) ಎಂಬುದರಿಂದ ನಿಪಾತಿತವಾಗಿದೆ. ॥ ೨೨ ॥

---

ಸಂಹಿತಾಪಾಠಃ

ದೇವೇನ ನೋ ಮನಸಾ ದೇವ ಸೋಮ ರಾಯೋ ಭಾಗಂ ಸಹ-
ಸಾವನ್ನಭಿ ಯುಧ್ಯ ।

ಮಾ ತ್ವಾ ತನದೀಶಿಷೇ ವೀರ್ಯಸ್ಯೋಭಯೇಭ್ಯಃ ಪ್ರ ಚಿಕಿ-
ತ್ಸಾ ಗವಿಷ್ಟೌ ॥ ೨೩ ॥

ಪದಪಾಠಃ

ದೇವೇನ । ನಃ । ಮನಸಾ । ದೇವ । ಸೋಮ । ರಾಯಃ । ಭಾಗಂ । ಸಹಸಾಽ-
ವನ್ । ಅಭಿ । ಯುಧ್ಯ ।

ಮಾ । ತ್ವಾ । ಆ । ತನತ್ । ಈಶಿಷೇ । ವೀರ್ಯಸ್ಯ । ಉಭಯೇಭ್ಯಃ । ಪ್ರ ।
ಚಿಕಿತ್ಸ । ಗೋಽಇಷ್ಟೌ ॥ ೨೩ ॥

ಸಾಯಣಭಾಷ್ಯಂ

ಹೇ ದೇವ ದ್ಯೋತಮಾನ ಸಹಸಾವನ್ ಬಲವನ್ ಸೋಮ ದೇವೇನ ಮನಸಾ ದ್ಯೋತಮಾನಯಾ ತ್ವದೀಯಯಾ ಬುದ್ಧ್ಯಾ ರಾಯೋ ಭಾಗಂ ಧನಸ್ಯಾಂಶಂ ನೋಽಸ್ಮಾನಭಿಲಕ್ಷ್ಯ ಯುಧ್ಯ । ಪ್ರೇರಯ । ಯದ್ವಾ । ನೋಽಸ್ಮಾಕಂ ರಾಯೋ ಧನಸ್ಯ ಭಾಗಂ ಭಕ್ತಾರಮುಪಹರ್ತಾರಂ ಶತ್ರುಮಭಿಯುಧ್ಯ । ಅಭಿಮುಖ್ಯೇನ ಸಮ್ಯಕ್ ಪ್ರಹರ । ತ್ವಾ ತಾದೃಶಂ ತ್ವಾಂ ಕಶ್ಚಿದಪಿ ಶತ್ರುರ್ಮಾ ಆ ತನತ್ । ಕ್ಲೇಶೇನಾತತಂ ಮಾ ಕಾರ್ಷೀತ್ । ಮಾ ಹಿಂಸೀದಿತ್ಯರ್ಥಃ । ಉಭಯೇಭ್ಯ ಉಭಯೇಷಾಂ ಯುಧ್ಯಮಾನಾನಾಂ ಸಂಬಂಧಿನೋ ವೀರ್ಯಸ್ಯ ಬಲಸ್ಯ ತ್ವಮೀಶಿಷೇ । ಈಶ್ವರೋ ಭವಸಿ । ಸ ತ್ವಂ ಗವಿಷ್ಟೌ ಸಂಗ್ರಾಮೇ ಪ್ರ ಚಿಕಿತ್ಸ । ಅಸ್ಮದೀಯಮುಪದ್ರವಂ ಪರಿಹರ ॥ ರಾಯಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಭಾಗಂ । ಭಜತೇಃ ಕರ್ಮಣಿ ಘಞ್ । ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾತ್ಕರ್ತರಿ ವಾ । ಕರ್ಷಾತ್ವತ ಇತ್ಯಂತೋದಾತ್ತತ್ವಂ । ಸಹಸಾವನ್ । ಸಹಃಶಬ್ದಾನ್ಮತುಪಿ ಛಾಂದಸ ಆಕಾರೋಪಜನಃ । ಯುಧ್ಯ । ಯುಧ ಸಂಪ್ರಹಾರೇ । ವ್ಯತ್ಯಯೇನ ಪರಸ್ಮೈಪದಂ । ತನತ್ । ತನು ವಿಸ್ತಾರೇ । ವ್ಯತ್ಯಯೇನ ಶಪ್ । ನಮಾಙ್ಯೋಗ ಇತ್ಯಡಭಾವಃ । ಈಶಿಷೇ । ಈಶಃ ಸೇ । ಪಾ. ೭-೨-೭೭ । ಇತೀಡಾಗಮಃ । ಚಿಕಿತ್ಸ । ಕಿತ ಜ್ಞಾನೇ । ಗುಪ್ತಿಜ್ಕಿದ್ಭ್ಯಃ ಸನ್ । ಪಾ. ೩-೧-೫ । ಗವಿಷ್ಟೌ । ಗವಾಂ ಬಾಣಾನಾಮಿಷ್ಟಯ ಏಷಣಾನಿ ಗಮನಾನಿ ಯಸ್ಮಿನ್ನಿತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ದೇವ—ಪ್ರಕಾಶಮಾನನೂ । ಸಹಸಾವನ್—ಬಲಶಾಲಿಯೂ ಆದ । ಸೋಮ—ಎಲೈ ಸೋಮದೇವನೇ । ದೇವೇನ ಮನಸಾ—ಪ್ರಭಾಯುತವಾದ ನಿನ್ನ ಮನಸ್ಸಿನಿಂದ ( ಮನಃಪೂರ್ವಕವಾಗಿ ) । ರಾಯಃ—ಧನದ ।

**ಭಾಗಂ**—ಅಂಶವನ್ನು । **ನಃ** —ನಮ್ಮಲ್ಲಿಗೂ । **ಅಭಿ ಯುಧ್ಯ**—ಕಳುಹಿಸಿಕೊಡು । [**ರಾಯಃ**—ಧನದ । **ಭಾಗಂ**—ಅಂಶವನ್ನು ಅಪಹರಿಸುವ । **ನಃ (ಅಭಿ)**-- ನಮ್ಮ (ಶತ್ರುವನ್ನು) । **ಅಭಿ ಯುಧ್ಯ**—ಯುದ್ಧ ಮಾಡಿ ಕೊಲ್ಲು ] **ತ್ವಾ**— (ಅಂತಹ) ನಿನ್ನನ್ನು । **ಮಾ ಆ ತನತ್**— ( ನಿನ್ನ ಯಾವ ಶತ್ರುವೂ ) ಹಿಂಸಿಸದಿರಲಿ, ಪ್ರತಿಬಂಧಿಸದಿರಲಿ । **ಉಭಯೇಭ್ಯಃ**—(ಯುದ್ಧದಲ್ಲಿ ನಿರತರಾಗಿರುವ) ಎರಡು ಪಂಗಡಗಳಿಗೂ । **ವೀರ್ಯಸ್ಯ**— ಬಲ (ವನ್ನು ಕೊಡುವುದ)ಕ್ಕೆ । **ಈಶಿಷೇ** (ನೀನೇ) ಸಮರ್ಥನಾದ ಪ್ರಭುವಾಗಿದ್ದೀಯೆ । **ಗವಿಷ್ಟೌ**— ಯುದ್ಧದಲ್ಲಿ **ಪ್ರಚಿಕಿತ್ಸ**—(ನಮ್ಮನ್ನು) ಕಾದು ರಕ್ಷಿಸು.

ಭಾವಾರ್ಥ

ಪ್ರಕಾಶಮಾನನೂ ಬಲಶಾಲಿಯೂ ಆದ ಎಲೈ ಸೋಮದೇವನೇ, ಪ್ರಭೆಯಿಂದ ಕೂಡಿದ ನಿನ್ನ ಧನದ ಕೊಂಚ ಅಂಶವನ್ನು ಮನಃಪೂರ್ವಕವಾಗಿ ನಮ್ಮಲ್ಲಿಗೂ ಕಳುಹಿಸಿಕೊಡು. ನಿನ್ನನ್ನು ಯಾವ ಶತ್ರುವೂ ತಡೆಯದಿರಲಿ ಯುದ್ಧದಲ್ಲಿ ನಿರತರಾಗಿರುವ ಎರಡು ಪಂಗಡಗಳಿಗೆ ಶಕ್ತಿಯನ್ನು ಅನುಗ್ರಹಿಸಲು ನೀನೇ ಸಮರ್ಥನಾದ ಪ್ರಭುವಾಗಿದ್ದೀಯೆ. ಆದ್ದರಿಂದ ಯಜ್ಞಕರ್ತರಾದ ನಮಗೆ ಬೆಂಬಲವಾಗಿ ನಿಂತು ನಮ್ಮನ್ನು ರಕ್ಷಿಸಿ ಯುದ್ಧದಲ್ಲಿ ಶತ್ರುವನ್ನು ನಾಶಮಾಡು.

English Translation

Divine and powerful Soma, gracefully give us our portion of wealth ; may none annoy you ; you are superior to two foes combined. Defend us in battle.

॥ ವಿಶೇಷವಿಷಯಗಳು ॥

**ಸಹಸಾವನ್**—ಓಜಃ ಪಾಜಃ ಶರಃ ಇತ್ಯಾದಿ ಇಪ್ಪತ್ತು ಬಲನಾಮಗಳಲ್ಲಿ ಸಹಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) **ಸಹಸ್** ಶಬ್ದಕ್ಕೆ ಬಲವೆಂದರ್ಥವು ಸಹಸಾವಾನ್ ಎಂದರೆ ಬಲಶಾಲಿಯೆಂದರ್ಥವು. ಸಹಸಾವನ್ ಎಂಬುವುದು ಸಂಬೋಧನಪ್ರಥಮೈಕವಚನವು.

**ದೇವೇನ ಮನಸಾ-ದ್ಯೋತಮಾನಯಾ ತ್ವದೀಯಯಾ ಬುದ್ಧ್ಯಾ** । ಅಂದರೆ ಪ್ರಭಾಯುತವಾದ ನಿನ್ನ ಮನಸ್ಸಿನಿಂದ (ಮನಃಪೂರ್ವಕವಾಗಿ) ಎಂದು ಸಾಯಣರು ವಿವರಿಸುತ್ತಾರೆ. ಆದರೆ ಸ್ಕಂದಸ್ವಾಮಿಗಳು **ದೀವ್ಯತಿಃ ದಾನಾರ್ಥಃ ದಾನಾಭಿಮುಖೇನ ಮನಸಾ** । ಅಂದರೆ ದಾನಾಭಿಮುಖವಾದ ಮನಸ್ಸಿನೊಡಗೂಡಿ ಎಂದರ್ಥವನ್ನು ಮಾಡುತ್ತಾರೆ. ನಿರುಕ್ತಕಾರರ ನಿರ್ವಚನದ ಪ್ರಕಾರ ಎರಡರ್ಥವನ್ನೂ ಮಾಡಬಹುದು. ಏತಕ್ಕೆಂದರೆ **ದೇವ** ಶಬ್ದಕ್ಕೆ **ದೇವೋ ದಾನಾದ್ವಾ, ದೀಪನಾದ್ವಾ, ದ್ಯೋತನಾದ್ವಾ, ದ್ಯುಸ್ಥಾನೋ ಭವತೀತಿ ವಾ** । ಎಂದರೆ (ನಿ. ೭-೧೫) ದಾನವಾಗಲೀ, ಪ್ರಕಾಶಮಾನನೆಂದಾಗಲೀ, ಬೆಳಗಿಸುವುದು ಎಂದಾಗಲೀ ದೇವಶಬ್ದಕ್ಕೆ ಅರ್ಥವಾಗುವುದರಿಂದ ಇಲ್ಲಿ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು.

**ಅಭಿ ಯುಧ್ಯ**—**ಅಭಿ ಯುಧ್ಯ** ಎಂದರೆ ಯುದ್ಧಮಾಡಿ ಸಂಹರಿಸು ಎಂದರ್ಥವು. ಅಥವಾ **ಅಭಿಯುಧ್ಯತಿಃ ಗತಿಕರ್ಮಾ,** ಎಂಬ ನಿರ್ವಚನವಿರುವುದರಿಂದ **ಅಭಿಗಮಯ** । ಅಂದರೆ ನಮ್ಮಲ್ಲಿಗೆ ಬರಮಾಡು ಎಂದಾಗುತ್ತದೆ.

ಇಲ್ಲಿ ಎರಡರ್ಥವೂ ಒಂದೇ ಆಗುತ್ತದೆ. ಹೇಗೆಂದರೆ **ರಾಯಃ ಭಾಗಂ ನಃ ಅಭಿಯುಧ್ಯ ।** ಎನ್ನುವುದಕ್ಕೆ ಧನದ ಅಂಶವನ್ನು ಅಪಹರಿಸಿರುವ ನಮ್ಮ ಶತ್ರುವನ್ನು ಕೊಂದು ಆ ಧನವನ್ನು ನಮ್ಮಲ್ಲಿಗೆ ಬರಮಾಡು ಎಂದರ್ಥವು.

**ಮಾ ಆ ತನತ್**—ಸಾಧಾರಣವಾಗಿ **ಆತನಿಃ**—ಎಂಬ ಪದಕ್ಕೆ ವಿಸ್ತಾರಮಾಡುವವನು ಎಂದರ್ಥವಾದರೂ ಇಲ್ಲಿ **ಆತನತ್** ಪ್ರತಿಬಂಧವೆಂದಾಗುವುದರಿಂದ ನೀನು ನಮಗೆ ಧನದ ದಾನವನ್ನು ಮಾಡುತ್ತಿರುವಾಗ ಯಾರೂ ನಿನ್ನನ್ನು ಪ್ರತಿಬಂಧಿಸದಿರಲಿ ಅಥವಾ ಶತ್ರುಗಳಾರೂ ತಡೆಯದಿರಲಿ ಎಂದರ್ಥವು.

**ವೀರ್ಯಸ್ಯ ಈಶಿಷೇ**—ಇಲ್ಲಿ **ಉಭಯೇಭ್ಯಃ ವೀರ್ಯಸ್ಯ** ಎಂದು ಒಂದು ವಿಧವಾದ ಅನ್ವಯವಾದರೆ ಯುದ್ಧದಲ್ಲಿ ನಿರತರಾಗಿರುವ ಎರಡು ಪಂಗಡಗಳ ವೀರ್ಯಕ್ಕೂ ನೀನೇ ಒಡೆಯನಾಗಿರುವುದರಿಂದ ನಿನಗೆ ಇಷ್ಟ ಬಂದವರಿಗೆ ಜಯವನ್ನು ಒದಗಿಸಬಹುದು ಎಂದರ್ಥವಾಗುತ್ತದೆ. ಸಕಲ ಶೂರರಿಗಿಂತಲೂ ಅಧಿಕವಾದ ಶೂರ ನಾಗಿರುವುದರಿಂದ ಇವನನ್ನು ಜಯಿಸಲು ಯಾರಿಂದಲೂ ಶಕ್ಯವಿಲ್ಲ. ಋಕ್ಸಂಹಿತೆಯ ೯-೬೬-೧೬ ಮತ್ತು ೧೭ ನೇ ಋಕ್ಕುಗಳಲ್ಲಿ ವರ್ಣಿತವಾಗಿರುವಂತೆ—

**ಮಹಾಁ ಅಸಿ ಸೋಮ ಜ್ಯೇಷ್ಠ ಉಗ್ರಾಣಾಮಿಂದ ಓಜಿಷ್ಠಃ । ಯುಧ್ವಾ ಸಞ್ಛಶ್ವಜ್ಜಿಗೇಥ ॥**
(ಋ. ಸಂ. ೯-೬೬-೧೬)

**ಯ ಉಗ್ರೇಭ್ಯಶ್ಚಿದೋಜೀಯಾಞ್ಛೂರೇಭ್ಯಶ್ಚಿಚ್ಛೂರತರಃ । ಭೂರಿದಾಭ್ಯಶ್ಚಿನ್ಮಂಹೀಯಾನ್ ॥**
(ಋ. ಸಂ. ೯-೬೬-೧೭)

ಎಂದು ಸೋಮನ ವೀರ್ಯವೂ, ಸಾಮರ್ಥ್ಯವೂ ಅತ್ಯಧಿಕವಾದುದು. ಇದೇ ರೀತಿ ಐತರೇಯಬ್ರಾಹ್ಮಣದಲ್ಲಿಯೂ ಸಹ ಸೋಮನ ಮಹಿಮೆಯನ್ನು ವರ್ಣಿಸುತ್ತಾ ದೇವಾಸುರರ ಯುದ್ಧಕಾಲದಲ್ಲಿ ದೇವತೆಗಳಿಗೆ ಪರಾಜಯವೂ ಸುತ್ತಲೂ ಸಂಭವಿಸಿದ ಕಾಲದಲ್ಲಿ ಅವರು ಸೋಮನನ್ನು ರಾಜನನ್ನಾಗಿ ಮಾಡಿಕೊಂಡ ಮೇಲೆ ಸಕಲ ದಿಕ್ಕುಗಳಲ್ಲಿಯೂ ಜಯ ವನ್ನು ಪಡೆದರೆಂಬ ಅಂಶವನ್ನು ತಿಳಿಸಿದೆ.

**ತೇ ಸೋಮಂ ರಾಜಾನಮಕುರ್ವನ್ । ತೇ ಸೋಮೇನ ರಾಜ್ಞಾ ಸರ್ವಾದಿಶೋಽಜಯನ್ ॥**
(ಐ. ಬ್ರಾ. ೧-೧೪)

ಸ್ಕಂದಸ್ವಾಮಿಗಳು **ಉಭಯೇಭ್ಯಃ** ಎನ್ನುವ ಪದಕ್ಕೆ **ಆತ್ಮೀಯೇಭ್ಯೋಽಸ್ಮದೀಯೇಭ್ಯಶ್ಚ ಉಭಯೇಭ್ಯೋಽಪಿ ಶತ್ರುಭ್ಯೋ ಧನಾನ್ಯಾಹೃತ್ಯ ।** ಅಂದರೆ ನಿನ್ನ ಶತ್ರುಗಳಿಂದಲೂ ನಮ್ಮ ಶತ್ರುಗಳಿಂದಲೂ ಈ ರೀತಿ ಎರಡು ಪಂಗಡಗಳ ಶತ್ರುಗಳಿಂದಲೂ ಧನವನ್ನು ಅಪಹರಿಸಿ ತಂದು ಕೊಡು ಎಂದು ಒಂದು ವಿಧವಾಗಿಯೂ, ಅಲ್ಲದೇ, **ಅಥವಾ ಉಭಯಶಬ್ದಃ ಪ್ರಯೋಜನವಚನಃ ಯಾನಿ ಚಾಸ್ಮಾಕಮಿಹ ಲೋಕೇ ಪ್ರಯೋಜನಾನಿ ಯಾನಿ ಚ ಪರತ್ರ ತೇಭ್ಯಃ ಉಭಯೇಭ್ಯಃ ।** ಎಂದರೆ ನಮಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಯಾವ ಪ್ರಯೋಜನವು ಲಭಿಸಬೇಕೋ ಆ ಎರಡುವಿಧವಾದ ಪ್ರಯೋಜನಗಳಿಗೂ ನೀನೇ ಒಡೆಯನು ಮತ್ತು ನಮಗೆ ಒದಗಿ ಸಲು ಸಮರ್ಥನು ಎಂದೂ ಸಹ ಅರ್ಥವಿವರಣೆಮಾಡಿರುವರು.

ಗವಿಷ್ಟೌ—**ಗವಾಂ ಬಾಣಾನಾಂ ಇಷ್ಟಯಃ ಏಷಣಾನಿ ಗಮನಾನಿ ಯೇಷು ।** ಎಂದರೆ ಬಾಣಗಳ ಸಂಚಾರಗಳು ಇರತಕ್ಕ ಯುದ್ಧದಲ್ಲಿ ಎಂದು **ಗವಿಷ್ಟಿ** ಶಬ್ದಕ್ಕೆ ಸಂಗ್ರಾಮವೆಂದು ಸಾಯಣರೂ, **ಗಾವಃ ಇಷ್ಯಂತೇ**

**ಯತ್ರ ಪ್ರಾಪ್ತುಂ ಸಾ ಗವಿಷ್ಟಿರಿಷ್ಟಿಃ । ತತ್ರ ಯಜ್ಞೇ ಇತ್ಯರ್ಥಃ ।** ಎಂದರೆ ಗೋವುಗಳನ್ನು ಪಡೆಯಲಿಚ್ಛಿಸಿ ನೆರವೇರಿಸುವ ಯಜ್ಞದಲ್ಲಿ ಎಂದು ಸ್ಕಂದಸ್ವಾಮಿಗಳು ಅರ್ಥವನ್ನು ಮಾಡಿರುವರು

**(ಪ್ರ) ಚಿಕಿತ್ಸಾ**—ಗವಿಷ್ಟ ಶಬ್ದಕ್ಕೆ ಯುದ್ಧವೆಂದು ಅರ್ಥಮಾಡಿದರೆ ಆಗ **ಪ್ರ ಚಿಕಿತ್ಸ** ಎನ್ನುವುದಕ್ಕೆ **ಅಸ್ಮದೀಯಮುಪದ್ರವಂ ಪರಿಹರ**। ಎಂದರೆ ನಮ್ಮ ಉಪದ್ರವಗಳನ್ನು ನಾಶಮಾಡು ಎಂಬುದಾಗಿಯೂ, ಯಜ್ಞವೆಂದು ಅರ್ಥಮಾಡಿದರೆ **ಕಿತ ಜ್ಞಾನೇ । ಜ್ಞಾನೇನ ಚಾತ್ರ ತತ್ಪೂರ್ವಕಂ ದಾನಂ ಲಕ್ಷ್ಯತೇ । ಪ್ರಕರ್ಷೇಣ ದೇಹೀತ್ಯರ್ಥಃ ।** ಎಂದರೆ ನಮಗೆ ಯಜ್ಞದಲ್ಲಿ ಉದಾರವಾಗಿ ದಾನವನ್ನು ಮಾಡು ಎಂದೂ ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ರಾಯಃ**—ರೈ ಶಬ್ದ. ಷಷ್ಠೀಏಕವಚನದಲ್ಲಿ ರಾಯಃ ಎಂದು ರೂಪವಾಗುತ್ತದೆ. **ಊಡಿದಂ ಪದಾದಿ**-(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭಾಗಮ್**—ಭಜ ಸೇವಾಯಾಮ್. ಧಾತು. ಇದಕ್ಕೆ ಕರ್ಮಣಿಯಲ್ಲಿ ಘಞ್. **ಅತ ಉಪಧಾಯಾಃ**—ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಚಜೋಃ ಕು ಘಿ ಣ್ಯತೋಃ**-(ಪಾ. ಸೂ. ೭-೩-೫೨) ಎಂಬುದರಿಂದ ಜಕಾರಕ್ಕೆ ಕುತ್ವ. ಅಥವಾ **ಕೃತ್ಯಲ್ಯುಟೋ ಬಹುಲಮ್** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲ ಗ್ರಹಣಮಾಡಿರುವುದರಿಂದ ಕರ್ತರಿಯಲ್ಲಿ ಘಞ್ ಪ್ರತ್ಯಯ. **ಕರ್ಷಾತ್ವತಃ**-(ಪಾ. ಸೂ. ೬-೧-೧೫೯) ಎಂಬುದರಿಂದ ಞಿತ್‌ಸ್ವರವು ಬಾಧಿತವಾಗಿ ಅಂತೋದಾತ್ತಸ್ವರ ಬರುತ್ತದೆ.

**ಸಹಸಾವನ್**—ಸಹಃ ಬಲಂ ಅಸ್ಯ ಅಸ್ತಿ ಎಂಬರ್ಥದಲ್ಲಿ **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ಸಹಸ್‌ಶಬ್ದಕ್ಕೆ ಛಾಂದಸವಾಗಿ ಆಕಾರ ಅಂತಾಗಮವಾಗಿ ಬರುತ್ತದೆ. ಆಕಾರದ ಪರದಲ್ಲಿ ಮತುಪ್ ಬಂದುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವಕಾರಾದೇಶ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಯುಧ್ಯ**—ಯುಧ ಸಂಪ್ರಹಾರೇ. ಧಾತು. ದಿವಾದಿ. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲೋಣ್ಮಧ್ಯಮಪುರುಷಏಕವಚನದಲ್ಲಿ ಸಿಪಿಗೆ ಹಿ ಆದೇಶ. **ದಿವಾದಿಭ್ಯಃ ಶ್ಯನ್**—ಎಂಬುದರಿಂದ ಶ್ಯನ್ ವಿಕರಣ. **ಅತೋ ಹೇಃ**—ಎಂಬುದರಿಂದ ಹಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತನತ್**- ತನು ವಿಸ್ತಾರೇ ಧಾತು. ಲಙ್ ಪ್ರಥಮ ಪುರುಷಏಕವಚನದಲ್ಲಿ ತಿಪ್. **ಇತಶ್ಚ**—ಎಂಬುದರಿಂದ ಇಕಾರಕ್ಕೆ ಲೋಪ. **ವ್ಯತ್ಯಯೋ ಬಹುಲಮ್**—ಎಂಬುದರಿಂದ ವಿಕರಣಕ್ಕೆ ಶಪ್. **ನ ಮಾಙ್ ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಮಾಙ್ ಸಂಬಂಧವಿರುವುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಈಶಿಷೇ**—ಈಶ ಐಶ್ವರ್ಯೇ ಧಾತು. ಲಟ್ ಮಧ್ಯಮ ಪುರುಷಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃ ಸೇ**—ಎಂಬುದರಿಂದ ಅದಕ್ಕೆ ಸೇ ಆದೇಶ. **ಈಶಃ ಸೇ**-(ಪಾ. ಸೂ. ೭-೨-೭೭) ಎಂಬುದರಿಂದ ಇದರ

ಪರದಲ್ಲಿರುವ ಸೇ ಎಂಬುದಕ್ಕೆ ಇಡಾಗಮ. **ಆದೇಶಪ್ರತ್ಯಯಯೋಃ**—ಎಂಬುದರಿಂದ ಪ್ರತ್ಯಯಕ್ಕೆ ಷತ್ವ. ತಿಜಂತದ ಪರದಲ್ಲಿರುವುದರಿಂದ ಸೂತ್ರದಲ್ಲಿ **ಅತಿಙಃ**—ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಚಿಕಿತ್ಸ**—ಕಿತ ಜ್ಞಾನೇ ಧಾತು. **ಗುಪ್‌ತಿಜ್‌ಕಿದ್ಭ್ಯಃಸನ್** - (ಪಾ. ಸೂ. ೩-೧-೫) ಎಂಬುದರಿಂದ ಸ್ವಾರ್ಥದಲ್ಲಿ ಸನ್. ಕಿತ್ಸ ಎಂಬುದು **ಸನಾದ್ಯಂತಾ ಧಾತವಃ**—ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಸನ್ಯಙೋಃ**-(ಪಾ. ಸೂ. ೬-೧-೯) ಎಂಬುದರಿಂದ ಸನ್ನಂತದ ಪ್ರಥಮ ಏಕಾಚಿಗೆ ದ್ವಿತ್ವ. ಅಭ್ಯಾಸಕ್ಕೆ ಚುತ್ವ. **ಅತೋಹೇಃ**—ಎಂಬುದರಿಂದ ಹಿಗೆ ಲುಕ್. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಗವಿಷ್ಟೌ**—ಗವಾಂ ಬಾಣಾನಾಮಿಷ್ಟಯಃ ಏಷಣಾನಿ ಗಮನಾನಿ ಏಸು ಇತಿ ಗವಿಷ್ಟಿಃ. ಬಹುವ್ರೀಹಿ ಸಮಾಸ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**-(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನರೂಪ. ॥ ೨೩ ॥

---

# ತೊಂಭತ್ತೆರಡನೆಯ ಸೂಕ್ತವು

**ಏತಾ ಉ ತ್ಯಾ ಇತ್ಯಷ್ಟಾದಶರ್ಚಮಷ್ಟಮಂ ಸೂಕ್ತಂ ಗೋತಮಸ್ಯಾರ್ಷಂ। ಆದಿತಶ್ಚತಸ್ರೋ ಜಗತ್ಯಃ। ತ್ರಯೋದಶ್ಯಾದ್ಯಾಃ ಷಡೃಚ ಉಷ್ಣಿಹಃ ಶಿಷ್ಟಾ ಅಷ್ಟೌ ತ್ರಿಷ್ಟುಭಃ। ಉಷಾ ದೇವತಾ। ಅಶ್ವಿನಾ ವರ್ತಿರಿತ್ಯಂತ್ಯಸ್ತೃಚೋಽಶ್ವಿದೇವತಾಕಃ। ತಥಾ ಚಾನುಕ್ರಾಂತಂ। ಏತಾ ಉ ತ್ಯಾ ಮ್ಯ್ಯಾನೋಷಸ್ಯಂ ಚತುರ್ಜಗತ್ಯಾದಿ ಷಳುಷ್ಣಿಗಂತಂ ತೃಚೋಽಂತ್ಯ ಆಶ್ವಿನ ಇತಿ॥ ಸೂಕ್ತವಿನಿಯೋಗೋ ಲೈಂಗಿಕಃ॥ ಪ್ರಾತರನುವಾಕ ಉಷಸ್ಯೇ ಕ್ರತೌ ಜಾಗತೇ ಛಂದಸ್ಯಾಶ್ವಿನಶಸ್ತ್ರೇ ಚೈತಾ ಉ ತ್ಯಾ ಇತಿ ಚತಸ್ರೋ ವಿನಿಯುಕ್ತಾಃ। ಸೂತ್ರಿತಂ ಚ। ಏತಾ ಉ ತ್ಯಾ ಇತಿ ಚತಸ್ರೋ ಜಾಗತಂ। ಆ. ೪-೧೪। ಇತಿ॥**

ಅನುವಾದವು—**ಏತಾ ಉತ್ಯಾ** ಎಂಬ ಸೂಕ್ತವು ಹದಿನಾಲ್ಕನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹದಿನೆಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋತಮನು ಋಷಿಯು. ಮೊದಲಿಂದ ನಾಲ್ಕು ಋಕ್ಕುಗಳು ಜಗತೀ ಛಂದಸ್ಸಿನವು. ಹದಿಮೂರರಿಂದ ಆರು ಋಕ್ಕುಗಳು ಉಷ್ಣಿಕ್ ಛಂದಸ್ಸಿನವು. ಉಳಿದ ಎಂಟು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಈ ಸೂಕ್ತಕ್ಕೆ ಉಷಸ್ಸು ದೇವತೆಯು. **ಅಶ್ವಿನಾ ವರ್ತಿಃ** ಎಂಬ ಕೊನೆಯ ಮೂರು ಋಕ್ಕುಗಳು ಅಶ್ವಿನೀದೇವತಾಕವು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಉಷಸ್ಯಕ್ರತು ಸಂಬಂಧವಾದ ಮಂತ್ರಗಳಲ್ಲಿ

ಜಗತೀಛಂದಸ್ಸಿನ ಮಂತ್ರಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ **ಏತಾ ಉತ್ಯಾ** ಎಂಬನಾಲ್ಕು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಏತಾ ಉತ್ಯಾ ಇತಿ ಚತಸ್ರೋ ಜಾಗತಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೧೪).

## ಸೂಕ್ತ—೯೨

ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೯೨ ॥

ಅಷ್ಟಕ—೧ ॥ ಅಧ್ಯಾಯ—೬ ॥ ವರ್ಗ— ೨೪, ೨೫, ೨೬, ೨೭, ॥

ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೮

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ— ೧-೧೫, ಉಷಾಃ । ೧೬-೧೮. ಅಶ್ವಿನೌ ॥

॥ ಛಂದಃ—೧-೪. ಜಗತೀ । ೫-೧೨ ತ್ರಿಷ್ಟುಪ್ । ೧೩-೧೮ ಉಷ್ಣಿಕ್ ॥

॥ ಸಂಹಿತಾಪಾಠಃ ॥

ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ
ರಜಸೋ ಭಾನುಮಂಜತೇ ।
ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽ-
ರುಷೀರ್ಯಂತಿ ಮಾತರಃ ॥ ೧ ॥

ಪದಪಾಠಃ

ಏತಾಃ । ಊಂ ಇತಿ । ತ್ಯಾಃ । ಉಷಸಃ । ಕೇತುಂ । ಅಕ್ರತ । ಪೂರ್ವೇ ।
ಅರ್ಧೇ । ರಜಸಃ । ಭಾನುಂ । ಅಂಜತೇ ।

ನಿಃ ಽ ಕೃಣ್ವಾನಾಃ । ಆಯುಧಾನಿ ಽ ಇವ । ಧೃಷ್ಣವಃ । ಪ್ರತಿ । ಗಾವಃ। ಅರುಷೀಃ।
ಯಂತಿ। ಮಾತರಃ ॥ ೧ ॥

ಸಾಯಣಭಾಷ್ಯಂ

ಉ ಇತ್ಯೇತತ್ಪಾದಪೂರಣಂ। ತ್ಯಾಸ್ತಾ ಏತಾ ಉಷಸಃ ಪ್ರಭಾತಕಾಲಾಭಿಮಾನಿನ್ಯೋ ದೇವತಾಃ ಕೇತುಮಂಧಕಾರಾವೃತಸ್ಯ ಸರ್ವಸ್ಯ ಜಗತಃ ಪ್ರಜ್ಞಾಪಕಂ ಪ್ರಕಾಶಮಕ್ರತ । ಅಕೃಷತ। ಕೃತವತ್ಯಃ । ಯಸ್ಮಾದೇವಂ ತಸ್ಮಾದುಷಸೋ ರಜಸೋಽಂತರಿಕ್ಷಲೋಕಸ್ಯ ಪೂರ್ವೇಽರ್ಧೇ ಪ್ರಾಚೀನ-ದಿಗ್ಭಾಗೇ ಭಾನುಂ ಪ್ರಕಾಶಮಜಂತೇ। ವ್ಯಕ್ತೀಕುರ್ವಂತಿ। ಧೃಷ್ಣವೋ ಧರ್ಷಣಶೀಲಾ ಯೋದ್ಧಾರ ಆಯುಧಾನೀವ ಯಥಾಸಿಪ್ರಭೃತೀನ್ಯಾಯುಧಾನಿ ಸಂಸ್ಕುರ್ವಂತಿ ಏವಂ ನಿಷ್ಕೃಣ್ವಾನಾಃ ಸ್ವಭಾಸಾ ಜಗ-ತ್ಸಂಸ್ಕುರ್ವಾಣಾ ಗಾವೋ ಗಮನಸ್ವಭಾವಾ ಅರುಷೀರಾರೋಚಮಾನಾ ಮಾತರಃ ಸೂರ್ಯಪ್ರಕಾಶಸ್ಯ ನಿರ್ಮಾತ್ರ್ಯೋ ಜಗಜ್ಜನನ್ಯೋ ವೋಷಸಃ ಪ್ರತಿ ಯಂತಿ । ಪ್ರತಿದಿವಸಂ ಗಚ್ಛಂತಿ। ಏವಂವಿಧಾ ಉಷಸೋಽಸ್ಮಾನ್ರಕ್ಷಂತ್ವಿತ್ಯರ್ಥಃ। ಅತ್ರ ನಿರುಕ್ತಂ। ಏತಾಸ್ತಾ ಉಷಸಃ ಕೇತುಮಕೃಷತ ಪ್ರಜ್ಞಾನಮೇ। ಕಸ್ಯಾ ಏವ ಪೂಜನಾರ್ಥೇ ಬಹುವಚನಂ ಸ್ಯಾತ್ ಪೂರ್ವೇಽರ್ಧೇಽಂತರಿಕ್ಷಲೋಕಸ್ಯ ಸಮಂಜತೇ ಭಾನುನಾ ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ । ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನೇ । ಏಮೀದೇಷಾಂ ನಿಷ್ಕೃತಂ ಜಾರಿಣೀವೇತ್ಯಪಿ ನಿಗಮೋ ಭವತಿ। ಪ್ರತಿ ಯಂತಿ ಗಾವೋ ಗಮನಾದರುಷೀರಾರೋಚನಾ-ನ್ಮಾತರೋ ಭಾಸೋ ನಿರ್ಮಾತ್ರ್ಯಃ। ನಿ. ೧೨-೭। ಇತಿ॥ ಅಕ್ರತ। ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್। ನಿಷ್ಕೃಣ್ವಾನಾಃ। ಕೃವಿ ಹಿಂಸಾಕರಣಯೋಶ್ಚ। ಅಸ್ಮಾತ್ತಾಚ್ಛೀಲಿಕಶ್ಚಾನಶ್। ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ। ಇದುದುಪಧಸ್ಯ ಚಾಪ್ರತ್ಯಯಸ್ಯೇತಿ ವಿಸರ್ಜನೀಯಸ್ಯ ಷತ್ವಂ ಕೃದುತ್ತರಪದಪ್ರಕೃತಿಸ್ವರತ್ವಂ॥

॥ ಪ್ರತಿಪದಾರ್ಥ ॥

**ತ್ಯಾ ಏತಾ ಉಷಸಃ**—ಪ್ರಸಿದ್ಧವಾದ ( ಮತ್ತು ಪ್ರಾತಃಕಾಲಾಭಿಮಾನಿದೇವತೆಗಳಾದ ) ಆ ಉಷೋದೇವತೆಗಳು । **ಕೇತುಂ**— ( ಅಂಧಕಾರದಿಂದ ಆವರಿಸಿದ ಲೋಕಕ್ಕೆ ) ಪ್ರಕಾಶವನ್ನು ಅಥವಾ ಜ್ಞಾನವನ್ನು । **ಅಕ್ರತ**—ಉಂಟುಮಾಡಿದರು । **ರಜಸಃ**—ಅಂತರಿಕ್ಷ ಮಂಡಲದ । **ಪೂರ್ವೇ ಅರ್ಧೇ**—ಪೂರ್ವಾರ್ಧ ದಿಕ್ಕಿನಲ್ಲಿ । **ಭಾನುಂ**—ಪ್ರಭೆಯನ್ನು । **ಅಂಜತೇ**—ಪ್ರಕಾಶಪಡಿಸುತ್ತಾರೆ। **ಧೃಷ್ಣವಃ**—( ಘೋರಾದತಕ್ಕ ) ಯೋಧರು । **ಆಯುಧಾನಿ ಇವ**— ( ತಮ್ಮ ) ಆಯುಧಗಳನ್ನು ಮಸೆದು ಥಳಪಿಸುವಂತೆ। **ನಿಷ್ಕೃಣ್ವಾನಾಃ**—(ತಮ್ಮ ಪ್ರಭೆಯಿಂದ ಜಗತ್ತನ್ನು) ಬೆಳಗಿಸುತ್ತಾ । **ಗಾವಃ**— ಗಮನ ಸ್ವಭಾವವುಳ್ಳವರೂ । **ಅರುಷೀಃ**— ಪ್ರಾತಃಸಂಧ್ಯಾ ರಾಗವುಳ್ಳವರೂ । **ಮಾತರಃ**— ಸೂರ್ಯಪ್ರಭೆಯ ಉತ್ಪಾದಕರೂ ಅಥವಾ ಜಗಜ್ಜನನಿಗಳೂ ಆದ ಉಷೋದೇವತೆಗಳು । **ಪ್ರತಿ ಯಂತಿ**— ಪ್ರತಿದಿನವೂ ಸಂಚರಿಸುತ್ತಾರೆ ॥

ಭಾವಾರ್ಥ

ಕಗ್ಗತ್ತಲಿನಿಂದ ಆವರಿಸಿದ್ದ ಲೋಕಕ್ಕೆ ಆ ಉಷೋದೇವತೆಗಳು ಪ್ರಕಾಶವನ್ನು ಹರಡಿದರು. ಅವರು ಅಂತರಿಕ್ಷದ ಪೂರ್ವಾರ್ಧದ ದಿಕ್ಕಿನಲ್ಲಿ ತಮ್ಮ ಪ್ರಭೆಯನ್ನು ಪ್ರಕಾಶಪಡಿಸುತ್ತಾರೆ. ಯೋಧರು ತಮ್ಮ ಆಯುಧಗಳನ್ನು ಮಸೆದು ಝಳಪಿಸುವಂತೆ ಉಷೋದೇವತೆಗಳು ತಮ್ಮ ಪ್ರಭೆಯಿಂದ ಜಗತ್ತನ್ನು ಬೆಳಗಿಸುತ್ತಾ ಗಮನಸ್ವಭಾವವುಳ್ಳವರೂ, ಪ್ರಾತಃ ಸಂಧ್ಯಾರಾಗವುಳ್ಳವರೂ ಸೂರ್ಯಪ್ರಭೆಯ ಉತ್ಪಾದಕರೂ ಆದ ಅವರು ಪ್ರತಿದಿನವೂ ತಮ್ಮ ನಿಯಮದ ಪ್ರಕಾರ ಸಂಚರಿಸುತ್ತಾರೆ.

## English Translation

The celebrated dawn has spread the banner ; In the eastern half of the firmament, light is made manifest, making all things bright, like warriors brandishing their bright weapons. Thus the mother, radiant and advancing, travels daily;

ವಿಶೇಷವಿಷಯಗಳು

**ತ್ಯಾಃ ಉಷಸಃ**—ಹಿಂದಿನ ಪ್ರಭಾತಗಳಲ್ಲೆಲ್ಲಾ ಆವಿರ್ಭವಿಸಿ ಪ್ರಸಿದ್ಧರಾದ ಆ ಉಷಸ್ಸುಗಳೇ, ಅಥವಾ **ಏಕಸ್ಯಾ ಏವ ಪೂಜನಾರ್ಥೇ ಬಹುವಚನಂ ಸ್ಯಾತ್** । (ನಿ. ೧೨-೭) ಎಂದು ನಿರುಕ್ತಕಾರರು ಹೇಳುವಂತೆ ಪೂಜಾರ್ಥದಲ್ಲಿ ಬಹುವಚನವಿರುತ್ತದೆ. ಒಂದೇ ಉಷಸ್ಸೇ ಪ್ರತಿದಿನವೂ ಆವಿರ್ಭವಿಸುವುದರಿಂದ ಅನೇಕ ಉಷಸ್ಸುಗಳೆಂದು ಭಾವಿಸಿ ಬಹುವಚನಪ್ರಯೋಗವನ್ನು ಮಾಡಲಾಗಿದೆ.

ಉಷೋದೇವತೆಯ ಸ್ವರೂಪ ಮತ್ತು ಮಹಿಮೆಗಳ ವಿಷಯದ ವಿವರಣೆಯನ್ನು ಋ. ಸಂ. ಭಾಗ ೫ ಪೇಜು 32-33 ಗಳಲ್ಲಿ ವಿಶದವಾಗಿ ತಿಳಿಸಿದೆ.

**ಕೇತುಂ**— **ಕೇತಃ, ಕೇತುಃ ಚೇತಃ** ಇತ್ಯಾದಿ ಪ್ರಜ್ಞಾನಾಮಗಳಲ್ಲಿ ಪಠಿತವಾಗಿರುವುದರಿಂದ(ನಿ. ೩-೧೩) **ಕೇತುಂ** ಎಂದರೆ ಜಗತ್ತಿನ ಪ್ರಜ್ಞೆಯನ್ನು ಎಂದಾಗುತ್ತದೆ. ಅಥವಾ **ಕೇತು** ಶಬ್ದಕ್ಕೆ ಧ್ವಜವೆಂದರ್ಥಮಾಡಿದರೆ ಧ್ವಜದಂತಿರುವ ದೀಪ್ತಿಯನ್ನು ಹರಡಿದರು ಎಂದಾಗುತ್ತದೆ.

**ಭಾನುಂ ಅಂಜತೇ**—ಪ್ರಕಾಶವನ್ನು ವ್ಯಕ್ತಪಡಿಸುತ್ತಾರೆಂದರ್ಥವು. ಇಲ್ಲಿ ಎರಡು ವಿಧವಾದ ಅನ್ವಯವು ಸಾಧ್ಯವಾಗುತ್ತದೆ. **ರಜಸಃ ಪೂರ್ವೇ ಅರ್ಧೇ ಭಾನುಂ ಅಂಜತೇ** । ಎಂದರೆ ಅಂತರಿಕ್ಷದ ಪೂರ್ವ ದಿಗ್ಭಾಗದಲ್ಲಿ ಪ್ರಭೆಯನ್ನು ಹರಡಿ ವ್ಯಕ್ತಪಡಿಸುತ್ತಾರೆ ಎಂದು ಸಾಯಣರೂ ; **ರಜಸಃ ಪೂರ್ವೇ ಅರ್ಧೇ ಸ್ಥಿತಾ ಭಾನುನಾ ಅಂಜತೇ** । ಎಂದರೆ ಅಂತರಿಕ್ಷದ ಪೂರ್ವಭಾಗದಲ್ಲಿದ್ದುಕೊಂಡು ತಮ್ಮ ಪ್ರಭೆಯಿಂದ ಸಮಸ್ತವನ್ನೂ ವ್ಯಕ್ತಪಡಿಸುತ್ತಾರೆ ಎಂದು ಸ್ಕಂದಸ್ವಾಮಿಗಳೂ ವಿವರಿಸುತ್ತಾರೆ. ಇಷ್ಟೇ ಅಲ್ಲದೆ, ಮುಂದಿನ **ನಿಷ್ಕೃಣ್ವಾನಾಃ ಧೃಷ್ಣವ ಇವ** । ಎಂಬ ಉಪಮಾನವನ್ನೂ ಸಹ ಸ್ಕಂದಸ್ವಾಮಿಗಳು **ಅಂಜತೇ** ಎನ್ನುವುದರೊಂದಿಗೆ ಸೇರಿಸುತ್ತಾರೆ. ಯೋಧರು ತಮ್ಮ ಆಯುಧಗಳನ್ನು ಮಸೆಯುವುದೇ ಮೊದಲಾದ ಸಂಸ್ಕಾರಗಳಿಂದ ಪ್ರಕಾಶಿಸುವಂತೆ ಹೇಗೆ ಮಾಡುತ್ತಾರೋ

ಆ ರೀತಿ ಉಷಸ್ಸುಗಳು ಸಹ ತಮ್ಮ ಪ್ರಭೆಗಳಿಂದ ಅಂತರಿಕ್ಷವನ್ನೆಲ್ಲಾ ಪ್ರಕಾಶಗೊಳಿಸುತ್ತಾರೆಂದು ಅನ್ವಯವನ್ನು ಮಾಡುತ್ತಾರೆ. ಸಾಯಣರು ಈ ಉಪಮಾನವನ್ನು ಉತ್ತರಾರ್ಧದೊಡನೆ ಸೇರಿಸಿ **ಯೋದ್ಧಾರಃ ಯಥಾ ಆಯುಧಾನಿ ಸಂಸ್ಕುರ್ವಂತಿ ಏವಂ ನಿಷ್ಕೃಣ್ವಾನಾಃ ಉಷಸಃ** । ಅಂದರೆ ಯೋಧರು ತಮ್ಮ ಆಯುಧಗಳನ್ನು ಸಂಸ್ಕರಿಸುವಂತೆ ಉಷಸ್ಸುಗಳೂ ಸಹ ತಮ್ಮ ಪ್ರಭೆಯಿಂದ ಜಗತ್ತನ್ನು ಸಂಸ್ಕರಿಸುತ್ತಾ ಪ್ರತಿದಿನವೂ ಸಂಚರಿಸುತ್ತಾರೆ ಎಂದು ಅನ್ವಯವನ್ನು ಮಾಡುತ್ತಾರೆ.

**ನಿಷ್ಕೃಣ್ವಾನಾಃ—ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನೇ ।** (ನಿ ೧೨-೭) ಎಂದರೆ **ನಿರ್** ಎಂಬ ಉಪಸರ್ಗವು **ಸಂ** ಎಂಬದರ ಸ್ಥಾನದಲ್ಲಿ ಬಂದಿದೆಯೆಂದೂ **ಸಂಸ್ಕುರ್ವಾಣಾಃ** ಅಂದರೆ ಇಲ್ಲಿ ಮೆರಗುವಂತೆ ನಯವಾಗಿ ಮಾಡುತಾ ಎಂದರ್ಥವೆಂದೂ ನಿರುಕ್ತಕಾರರು ವಿವರಿಸುತ್ತಾರೆ.

**ಗಾವಃ—ಗಾವೋ ಗಮನಾತ್ ।** (ನಿ. ೧೨-೭) ಸಂಚಾರ ಸ್ವಭಾವವುಳ್ಳವಾದ್ದರಿಂದ **ಗಾವಃ** ಎಂದೂ ;

**ಅರುಷೀಃ— ಅರುಷೀರಾರೋಚನಾತ್ ।** ( ನಿ. ೧೨-೭ ) ಆಕರ್ಷಕವಾಗಿ ಪ್ರಕಾಶಿಸುವುದರಿಂದ **ಅರುಷೀಃ** ಎಂದೂ ;

**ಮಾತರಃ—ಭಾಸೋ ನಿರ್ಮಾತ್ರ್ಯಃ** (ನಿ.೧೨-೭) ಪ್ರಭೆಗಳ ನಿರ್ಮಾತೃಗಳಾದ್ದರಿಂದ **ಮಾತರಃ** ಎಂದೂ ಸಹ ಕಿರಣಗಳಿಗೆ ವಿಶೇಷಣಗಳಿರುತ್ತವೆಯೆಂದು ನಿರುಕ್ತಕಾರರು ವಿವರಿಸುತ್ತಾರೆ. ಈ ಭಾವಗಳನ್ನೇ ಮುಂದೆಯೂ ಸಹ—

**ಪೂರ್ವೇ ಅರ್ಧೇ ರಜಸೋ ಅಪ್ತ್ಯಸ್ಯ ಗವಾಂ ಜನಿತ್ರ್ಯಕೃತ ಪ್ರ ಕೇತುಂ ।**
**ವ್ಯು ಪ್ರಥತೇ ವಿತರಂ ವರೀಯ ಓಭಾ ಪೃಣಂತೀ ಪಿತ್ರೋರುಪಸ್ಥಾ ॥**
( ಋ. ಸಂ. ೧-೧೨೪-೫ )

ಎಂಬ ಋಕ್ಕಿನಲ್ಲಿ ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಅಕ್ರತ—**ಡುಕೃಞ್ ಕರಣೇ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಯಪ್ರತ್ಯಯ. **ಮಂತ್ರೇ ಘಸಹ್ವ—**(ಪಾ. ಸೂ. ೨-೪-೮೦) ಎಂಬುದರಿಂದ ಲುಙಃನಲ್ಲಿ ಪ್ರಾಪ್ತವಾದ ಚ್ಲಿಗೆ ಲುಕ್. ಅನಕಾರದ ಪರದಲ್ಲಿರುವುದರಿಂದ **ಆತ್ಮನೇಪದೇಷ್ವನತಃ—**ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ. ಧಾತುವಿನ ಋಕಾರಕ್ಕೆ ಯಣಾದೇಶ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಂಜತೇ—**ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಲಟ್ ಪ್ರಥಮಪುರುಷಬಹುವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

ನಿಷ್ಕೃಣ್ವಾನಾಃ—ಕೃವಿ ಹಿಂಸಾಕರಣಯೋಶ್ಚ. ಧಾತು. ಇದಕ್ಕೆ ತಚ್ಛೀಲಾರ್ಥದಲ್ಲಿ ಚಾನಶ್ ಪ್ರತ್ಯಯ. ಶಿತ್ತಾದುದರಿಂದ **ಧಿನ್ವಿಕೃಣ್ವ್ಯೋರಚ** (ಪಾ. ಸೂ ೩-೧-೮೦) ಎಂಬುದರಿಂದ ಉ ಪ್ರತ್ಯಯ. ಇದಿತ್ತಾದುದರಿಂದ

**ಇದಿತೋ ನುಮ್‌ಧಾತೋಃ**— ಎಂಬುದರಿಂದ ನುಮಾಗಮ. ಉಕಾರಕ್ಕೆ ಯಣಾದೇಶ. ಕೃಣ್ವಾನ ಎಂದು ರೂಪವಾಗುತ್ತದೆ. ನಿಃ ಎಂಬಲ್ಲಿರುವ ವಿಸರ್ಗಕ್ಕೆ **ಇದುದುಪಧಸ್ಯ ಚಾಪ್ರತ್ಯಯಸ್ಯ**-(ಪಾ. ಸೂ. ೮-೩-೪೧) ಎಂಬುದರಿಂದ ಕಕಾರಪರದಲ್ಲಿರುವುದರಿಂದ ಷತ್ವ. ಶಾನಚ್ ಚಿತ್ತಾದುದರಿಂದ **ಚಿತಃ**—ಎಂಬುದರಿಂದ ಕೃಣ್ವಾನ ಶಬ್ದವು ಅಂತೋದಾತ್ತವಾಗುತ್ತದೆ. ನಿರಿನೊಡನೆ ಗತಿಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಯಂತಿ**—ಇಣ್ ಗತೌ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ. **ಅದಿಪ್ರಭೃತಿಭ್ಯಃ ಶಪಃ**—ಎಂಬುದರಿಂದ ಶಪಿಗೆ ಲುಕ್. **ಇಣೋಯಣ್**-(ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿನ ಇಕಾರಕ್ಕೆ ಯಣಾದೇಶ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥

——:o:——

ಸಂಹಿತಾಪಾಠಃ

ಉದಪಪ್ತನ್ನರುಣಾ ಭಾನವೋ ವೃಥಾ ಸ್ವಾಯುಜೋ ಅರುಷೀರ್ಗಾ ಅಯುಕ್ಷತ ।
ಅಕ್ರನ್ನುಷಾಸೋ ವಯುನಾನಿ ಪೂರ್ವಥಾ ರುಶಂತಂ ಭಾನುಮರುಷೀರಶಿಶ್ರಯುಃ ॥ ೨ ॥

ಪದಪಾಠಃ

ಉತ್ । ಅಪಪ್ತನ್ । ಅರುಣಾಃ । ಭಾನವಃ । ವೃಥಾ । ಸುಽಆಯುಜಃ । ಅರುಷೀಃ । ಗಾಃ । ಅಯುಕ್ಷತ ।
ಅಕ್ರನ್ । ಉಷಸಃ । ವಯುನಾನಿ । ಪೂರ್ವಽಥಾ । ರುಶಂತಂ । ಭಾನುಂ । ಅರುಷೀಃ । ಅಶಿಶ್ರಯುಃ ॥ ೨ ॥

॥ ಸಾಯಣಭಾಷ್ಯಂ ॥

ಅರುಣಾ ಆರೋಚಮಾನಾ ಭಾನವ ಔಷಸ್ಯೋ ದೀಪ್ತಯೋ ವೃಥಾನಾಯಾಸೇನ ಸ್ವಯಮೇವೋದಪಪ್ತನ್ । ಉದಗಮನ್ । ತದನಂತರಮುಷಸಶ್ಚ ಸ್ವಾಯುಜಃ ಸುಖೇನ ರಥ ಆಯೋಕ್ತುಂ ಶಕ್ಯಾ ಅರುಷೀಃ ಶುಭ್ರವರ್ಣಾ ಗಾಃ ಪೂರ್ವಮುತ್ಥಿತಾನ್ ರಶ್ಮೀನ್ ಈದೃಶೀಃ ಸ್ವವಾಹನಭೂತಾಶ್ಚತುಷ್ಪದೀರ್ಗಾ ಏವ ವಾಯುಕ್ಷತ । ಸ್ವರಥೇಽಯೋಜಯನ್ । ಉಕ್ತಂಚ । ಅರುಣ್ಯೋ ಗಾವ ಉಷಸಾಮಿತಿ । ಏವಂ ಗೋಭಿರ್ಯುಕ್ತಂ ರಥಮಾರುಹ್ಯೋಷಸಃ ಪೂರ್ವಥಾ ಪೂರ್ವೇಷ್ವತೀತೇಷ್ವಹಃಸ್ವಿವ ವಯುನಾನಿ ಸರ್ವೇಷಾಂ ಪ್ರಾಣಿನಾಂ ಜ್ಞಾನಾನ್ಯಕ್ರನ್ । ಅಕಾರ್ಷುಃ । ಉಷಃಕಾಲೇ ಜಾತೇ ಹಿ ಸರ್ವೇ ಪ್ರಾಣಿನೋ ಜ್ಞಾನಯುಕ್ತಾ ಭವಂತಿ । ತದನಂತರಮರುಷೀರಾರೋಚಮಾನಾಸ್ತಾ ಉಷಸೋ ರುಶಂತಂ । ರುಶದಿತಿ ವರ್ಣನಾಮ ರೋಚತೇರ್ಜ್ವಲತಿಕರ್ಮಣಃ । ನಿ. ೨-೨೦ । ಇತಿ ಯಾಸ್ಕಃ । ಶುಭ್ರವರ್ಣಂ ಭಾನುಂ । ಸೂರ್ಯಮಶಿಶ್ರಯುಃ । ಅಸೇವಂತ । ತೇನ ಸಹೈಕೀಭವಂತೀತ್ಯರ್ಥಃ ॥ ಅಪಪ್ತನ್ । ಪತ್ಲೃ ಗತೌ । ಲುಙಿ ಲೃದಿತ್ವಾತ್ ಚ್ಲೇರಙಾದೇಶಃ । ಪತಃ ಪುಮ್ । ೭-೪-೧೯ । ಇತಿ ಧಾತೋಃ ಪುಮಾಗಮಃ । ಅಕ್ರನ್ । ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ಪೂರ್ವಥಾ । ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸಿ । ಪಾ. ೫-೩-೧೧೧ । ಇತಿವಾರ್ಥೇ ಥಾಲ್ಪ್ರತ್ಯಯಃ । ಅಶಿಶ್ರಯುಃ । ಶ್ರಿಞ್ ಸೇವಾಯಾಂ । ಬಹುಲಂ ಛಂದಸೀತಿ ಶಪಃ ಶ್ಲುಃ । ಸಿಜಭ್ಯಸ್ತವಿದಿಭ್ಯಶ್ಚೇತಿ ಝೇರ್ಜುಸ್ । ಜುಸಿ ಚ । ಪಾ. ೭-೩-೮೩ । ಇತಿ ಗುಣಃ ॥

ಪ್ರತಿಪದಾರ್ಥ

**ಅರುಣಾಃ**—ಹೊಂಬಣ್ಣದ । **ಭಾನವಃ**—(ಉಷೋದೇವತೆಗಳ) ಪ್ರಭೆಗಳು । **ವೃಥಾ**—ಅಯತ್ನಪೂರ್ವಕವಾಗಿ **ಉದಪಪ್ತನ್**—ಊರ್ಧ್ವಮುಖವಾಗಿ ಹೊರಚಿಮ್ಮಿದವು. (ಅನಂತರ)। **ಉಷಸಃ**—ಉಷೋದೇವತೆಗಳು । **ಸ್ವಾಯುಜಃ**—ಸುಖವಾಗಿ ಸೇರಿಸಲು ಯೋಗ್ಯವಾದವೂ । **ಅರುಷೀಃ**—ಹೊಂಬಣ್ಣವುಳ್ಳವೂ ಆದ । **ಗಾಃ**—(ಹಿಂದೆ ಆವಿರ್ಭವಿಸಿದ) ತಮ್ಮ ರಶ್ಮಿಗಳನ್ನು ಅಥವಾ (ತಮ್ಮ ರಥದ) ಗೋವುಗಳನ್ನು । **ಅಯುಕ್ಷತ**—(ತಮ್ಮ ರಥಕ್ಕೆ) ಯೋಜಿಸಿದರು. (ಮತ್ತು) । **ಪೂರ್ವಥಾ**—ಹಿಂದಿನ ಪ್ರಭಾತಗಳಲ್ಲೆಲ್ಲಾ ನಡೆಸಿದಂತೆ । **ವಯುನಾನಿ** ಸಕಲ ಪ್ರಾಣಿಗಳಿಗೂ ಚೈತನ್ಯವನ್ನು । **ಅಕ್ರನ್**—ಉಂಟುಮಾಡಿದರು. (ಆಮೇಲೆ)। **ಅರುಷೀಃ**—ಹೊಂಬಣ್ಣದ ಉಷೋದೇವತೆಗಳು । **ರುಶಂತಂ**—ಶುಭ್ರವರ್ಣವುಳ್ಳ । **ಭಾನುಂ**—ಸೂರ್ಯನನ್ನು । **ಅಶಿಶ್ರಯುಃ**—ಸೇವಿಸಿದರು. (ಅವನೊಂದಿಗೆ ಒಂದಾದರು)

ಭಾವಾರ್ಥ

ಉಷೋ ದೇವತೆಗಳ ಹೊಂಬಣ್ಣದ ಪ್ರಭೆಗಳು ಪ್ರಯತ್ನವಿಲ್ಲದೇನೇ ಊರ್ಧ್ವಮುಖವಾಗಿ ಹೊರಚಿಮ್ಮಿದವು. ಅನಂತರ ಉಷೋದೇವತೆಗಳು ಸುಖವಾಗಿ ಸೇರಿಸತಕ್ಕವೂ ಸಂಧ್ಯಾರಾಗವುಳ್ಳವೂ ಆದ ತಮ್ಮ ರಶ್ಮಿಗಳನ್ನು ಅಥವಾ ಗೋವುಗಳನ್ನು ತಮ್ಮ ರಥಕ್ಕೆ ಸೇರಿಸಿದರು. ಮತ್ತು ಹಿಂದಿನ ದಿನಗಳ ಪ್ರಾತಃಕಾಲಗಳಲ್ಲೆಲ್ಲಾ ನಡೆಸಿದಂತೆ ಸಕಲ ಪ್ರಾಣಿಗಳಿಗೂ ಚೈತನ್ಯವನ್ನುಂಟುಮಾಡಿದರು. ಆಮೇಲೆ ಅವರು ತಮ್ಮ ಕಾಂತಿಯೊಡಗೂಡಿ ಶುಭ್ರವರ್ಣವುಳ್ಳ ಸೂರ್ಯನೊಡನೆ ಒಂದಾದರು.

## English Translation

The purple rays fly up quickly; easy to be yoked, the cows are harnessed; as of yore, the dieties of the dawn have restored consciousness; and bright-rayed have attended upon the glorious Sun.

### ವಿಶೇಷವಿಷಯಗಳು

**ಅರುಣಾಃ— ಅರುಣ ಆರೋಚನಃ ।** (ನಿ. ೫-೨೧) ಎಂದರೆ ಆಕರ್ಷಕವಾದ ಹೊಂಬಣ್ಣವೆಂದರ್ಥವು.

**ವೃಥಾ—ವೃಥಾ ಇತಿ ಅನಾಯಾಸವಚನಃ ।** ಎಂದು ಸಾಯಣರು ಋ. ಸಂ. ೧-೫೮-೪ ; ೧-೬೩-೭ ಇತ್ಯಾದಿ ಋಕ್ಕುಗಳನ್ನು ವಿವರಿಸುವಾಗ ಸಾಮಾನ್ಯವಾಗಿ ಹೇಳಿರುತ್ತಾರೆ. ಇಲ್ಲಿಯೂ ಸಹ ಅಯತ್ನಪೂರ್ವಕ ವಾಗಿಯೇ ಎಂದರೆ ಸ್ವಸಂತೋಷದಿಂದಲೇ ಪ್ರಸರಿಸಿದವು ಎಂದು ಹೇಳಬಹುದು.

**ಸ್ವಾಯುಜಃ—ಸುಖೇನ ರಥೇ ಆಯೋಕ್ತುಂ ಶಕ್ಯಾಃ** ಎಂದರೆ ರಥದಲ್ಲಿ ಸುಲಭವಾಗಿ ಸೇರಿಸಿ ಕಟ್ಟಲು ಸಾಧ್ಯವಾದವು ಎಂದರ್ಥ.

**ಅರುಷೀಃ ಗಾಃ—ಅರುಷೀರಾರೋಚನಾತ್ ।** (ನಿ. ೧೨-೭) ಎಂದೂ **ಅರುಣೋ ಗಾವ ಉಷಸಾಂ** (ನಿ. ೨-೨೮)ಅರುಣ ಆರೋಚನಃ (ನಿ. ೫-೨೧)ಎಂದೂ ನಿರುಕ್ತಕಾರರು ವಿವರಿಸುತ್ತಾರೆ. ಇದರ ಅರ್ಥವು ಉಷಸ್ಸುಗಳ ವಾಹನವು ಆರೋಚಕಗಳಾದ ರಶ್ಮಿಗಳು. ಅಥವಾ ಕೆಂಪು ಬಣ್ಣದ ಗೋವುಗಳು ಎಂದರ್ಥವು.

**ವಯುನಾನಿ—ಕೇತಃ, ಕೇತುಃ** (ನಿ. ೩-೧೩) ಇತ್ಯಾದಿ **ಪ್ರಜ್ಞಾ** ನಾಮಗಳಲ್ಲಿ ಪಠಿತವಾಗಿರುವುದರಿಂದ ಪ್ರಜ್ಞೆಯೆಂದರ್ಥವಾಗುತ್ತದೆ. ಪ್ರಕಾಶವನ್ನುಂಟುಮಾಡುವುದರಿಂದ ಸಕಲ ಪ್ರಾಣಿಗಳಿಗೂ ಪ್ರಬೋಧವನ್ನು ಚೈತನ್ಯವನ್ನು ಉಂಟುಮಾಡಿದವು ಎಂದಭಿಪ್ರಾಯವು.

**ರುಶಂತಂ— ರುಶದಿತಿ ವರ್ಣನಾಮ । ರೋಚತೇರ್ಜ್ವಲತಿಕರ್ಮಣಃ ।** (ನಿ. ೨-೨೦) ಎಂದರೆ ಪ್ರಕಾಶಿಸು ಎಂಬರ್ಥವನ್ನು ಕೊಡುವ **ರುಚ್** ಎಂಬ ಧಾತುವಿನಿಂದ **ರುಚತ್** ಎಂದರೆ ಶುಭ್ರವರ್ಣವೆಂಬ ಅರ್ಥವನ್ನು ಕೊಡುವ ಪದವು ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ವಿವರಿಸುತ್ತಾರೆ. ಶಭ್ರವರ್ಣವೆಂದಾಗುತ್ತದೆ.

**ಭಾನುಂ ಅಶಿಶ್ರಯುಃ**—ಸೂರ್ಯನನ್ನು ಸೇವಿಸಿದರು. ಅವನೊಂದಿಗೆ ಒಂದಾಗಿ ತಲ್ಲೀನರಾದರು ಎಂದರೆ ಸೂರ್ಯೋದಯವಾಗುವುದಕ್ಕೆ ಮೊದಲು ತಮ್ಮ ಕಾಂತಿಯನ್ನು ಬೀರುತ್ತಾ ಸೂರ್ಯೋದಯವಾದನಂತರ ಅವನ ಕಾಂತಿ ಯೊಡನೆ ಸೇರಿಸಿಕೊಂಡರು ಎಂದರ್ಥ.

### ವ್ಯಾಕರಣಪ್ರಕ್ರಿಯಾ

**ಅಪಪ್ತನ್**—ಪತ್ಲೃ ಗತೌ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಂತಃ** ಸೂತ್ರದಿಂದ ಅಂತಾದೇಶ **ಇತಶ್ಚ** ಎಂಬುದರಿಂದ ಇಕಾರಕ್ಕೆ ಲೋಪ. ಧಾತುವು ಲೃದಿತ್ತಾದದುರಿಂದ

**ಪುಷಾದಿದ್ಯುತಾ**— (ಪಾ. ಸೂ. ೩-೧-೫೫) ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಅಙಾದೇಶ. **ಪತಃ ಪುಮ್**— (ಪಾ. ಸೂ. ೭-೪-೧೯) ಎಂಬುದರಿಂದ ಅಙ್ ನಿಮಿತ್ತವಾಗಿ ಧಾತುವಿಗೆ ಪುಮಾಗಮ. **ಮಿದಚೋಽಂತ್ಯಾತ್ಪರಃ** ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಸಂಯೋಗಾಂತಲೋಪದಿಂದ ಪ್ರತ್ಯಯದ ಅಂತ್ಯ ತಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ವಾಯುಜಃ**—ಯುಜಿರ್ ಯೋಗೇ ಧಾತು. ಸು+ಆ ಪೂರ್ವದಲ್ಲಿರುವಾಗ ಕ್ವಿಪ್ ಪ್ರತ್ಯಯ. ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತ ರೂಪ.

**ಅಕ್ರನ್**— ಡುಕೃಞ್ ಕರಣೇ ಧಾತು. ಲುಙಿನಲ್ಲಿ ಝಿಗೆ ಅಂತಾದೇಶ. ಅಂತ್ಯ ಇಕಾರಲೋಪ. **ಮಂತ್ರೇಘಸಹ್ವರಣ**— (ಪಾ. ಸೂ ೨-೪-೮೦) ಎಂಬುದರಿಂದ ಚ್ಲಿಗೆ ಲುಕ್ ಧಾತುವಿನ ಋಕಾರಕ್ಕೆ ಯಣಾದೇಶ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ. ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಪೂರ್ವಥಾ**— ಪೂರ್ವೇಷು ಇವ ಪೂರ್ವಥಾ. **ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸಿ**—(ಪಾ. ಸೂ. ೫-೩-೧೧೧) ಎಂಬುದರಿಂದ ಇವಾರ್ಥದಲ್ಲಿ ಥಾಲ್ ಪ್ರತ್ಯಯ. **ಲಿತಿ**— (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅಶಿಶ್ರಯುಃ**— ಶ್ರಿಞ್ ಸೇವಾಯಾಮ್ ಧಾತು. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಬಹುವಚನದಲ್ಲಿ ಪ್ರಾಪ್ತವಾದ ಝಿಗೆ. **ಸಿಜಭ್ಯಸ್ತವಿದಿಭ್ಯಶ್ಚ**— (ಪಾ. ಸೂ. ೩-೪-೧೦೯) ಎಂಬುದರಿಂದ ಅಭ್ಯಸ್ತದ ಪರದಲ್ಲಿರುವುದರಿಂದ ಜುಸಾದೇಶ. **ಜುಸಿ ಚ**—(ಪಾ. ಸೂ ೭-೩-೮೩) ಎಂಬುದರಿಂದ ಜುಸ್ ನಿಮಿತ್ತವಾಗಿ ಇಗಂತಾಂಗಕ್ಕೆ ಗುಣ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. || ೨ ||



|| ಸಂಹಿತಾಪಾಠಃ ||

ಅರ್ಚಂತಿ ನಾರೀರಪಸೋ ನ ವಿಷ್ಟಿಭಿಃ ಸಮಾನೇನ ಯೋಜನೇ-
ನಾ ಪರಾವತಃ ।

ಇಷಂ ವಹಂತೀಃ ಸುಕೃತೇ ಸುದಾನವೇ ವಿಶ್ವೇದಹ ಯಜಮಾ-
ನಾಯ ಸುನ್ವತೇ ॥ ೩ ॥

ಪದಪಾಠಃ

ಅರ್ಚಂತಿ । ನಾರೀಃ । ಅಪಸಃ । ನ । ವಿಷ್ಟಿಽಭಿಃ । ಸಮಾನೇನ । ಯೋಜನೇನ ।
ಆ । ಪರಾಽವತಃ ।

ಇಷಂ । ವಹಂತೀಃ । ಸುಽಕೃತೇ । ಸುಽದಾನವೇ । ವಿಶ್ವಾ । ಇತ್ । ಅಹ ।
ಯಜಮಾನಾಯ । ಸುನ್ವತೇ ॥ ೩ ॥

ಸಾಯಣಭಾಷ್ಯಂ

ನಾರೀರ್ನೇತ್ರ್ಯ ಉಷಸೋ ವಿಷ್ಟಿಭಿರ್ನಿವೇಶಕೈಃ ಸ್ವಕೀಯೈಸ್ತೇಜೋಭಿಃ ಸಮಾನೇನ ಯೋಜನೇ-ನೈಕೇನೈವ ಯೋಜನೇನೋದ್ಯೋಗೇನ ಪರಾವತ ಆ ದೂರದೇಶಾದಾ ಪಶ್ಚಿಮದಿಗ್ಭಾಗಾದರ್ಚಂತಿ । ನಭಃಪ್ರದೇಶಂ ಪೂಜಯಂತಿ । ಕೃತ್ಸ್ನಂ ಜಗದ್ಯುಗಪದೇವ ವ್ಯಾಪ್ನುವಂತೀತ್ಯರ್ಥಃ । ತತ್ರ ದೃಷ್ಟಾಂತಃ । ಅಪಸೋ ನ । ಯುದ್ಧಕರ್ಮಣೋಪೇತಾಃ ಪುರುಷಾ ಯಥಾ ಸ್ವಕೀಯೈರಾಯುಧೈರ್ಧಾಟೀಮುಖೇನ ಸರ್ವಂ ದೇಶಂ ವ್ಯಾಪ್ನುವಂತಿ ತದ್ವತ್ । ಕಿಂ ಕುರ್ವತ್ಯಃ । ಸುಕೃತೇ ಶೋಭನಸ್ಯ ಕರ್ಮಣಃ ಕರ್ತ್ರೇ ಸುನ್ವತೇ ಸೋಮಾಭಿಷವಂ ಕುರ್ವತೇ ಸುದಾನವೇ ಕಲ್ಯಾಣೀರ್ದಕ್ಷಿಣಾ ಋತ್ವಿಗ್ಭ್ಯೋ ದದತೇ ಯಜಮಾನಾಯ ವಿಶ್ವೇದಹ ಸರ್ವಮೇವೇಷಮನ್ನಂ ವಹಂತೀರಾವಹಂತ್ಯಃ । ಪ್ರಯಚ್ಛಂತ್ಯ ಇತ್ಯರ್ಥಃ ॥ ನಾರೀಃ । ನೄ ನಯೇ । ಋದೋರಪ್ । ನೃನರಯೋರ್ವೃದ್ಧಿಶ್ಚ । ಪಾ. ೪-೧-೭೩ । ಇತಿ ಶಾರ್ಙ್ಗರವಾದಿಷು ಪಾಠಾತ್ ಙೀನ್ । ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಅಪಸಃ । ಅಪಶ್ಚಬ್ದಾದರ್ಶಆದಿಭ್ಯೋಽಜಿತ್ಯಚ್ । ಸುಪಾಂ ಸುಲಗಿತಿ ಜಸಃ ಸುಃ । ವ್ಯತ್ಯಯೇನ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ವಿಷ್ಟಿಭಿಃ । ವಿಶ ಪ್ರವೇಶನೇ । ವಿಶಂತಿ ಪ್ರವಿಶಂತೀತಿ ವಿಷ್ಟಯಃ ಕಿರಣಾಃ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ವಿಶ್ವಾ । ಸುಪಾಂ ಸುಲುಗಿತ್ಯಮೋ ಡಾದೇಶಃ ॥

ಪ್ರತಿಪದಾರ್ಥ

**ನಾರೀಃ**— ಮಾರ್ಗದರ್ಶಕರಾದ ಉಷೋದೇವತೆಗಳು । **ಸುಕೃತೇ**— ಪವಿತ್ರಗಳಾದ ಕರ್ಮಗಳನ್ನು ಮಾಡುವವನೂ । **ಸುನ್ವತೇ**—ಸೋಮರಸವನ್ನು ಹಿಂಡುವವನೂ । **ಸುದಾನವೇ**—(ಋತ್ವಿಕ್ಕುಗಳಿಗೆ) ಉದಾರ

ವಾಗಿ ದಾನಮಾಡತಕ್ಕವನೂ ಆದ। **ಯಜಮಾನಾಯ**— ಯಜ್ಞಕರ್ತನಿಗೆ। **ವಿಶ್ವೇದಹ**— ಸಕಲವೂ ಆದ। **ಇಷಂ**—ಅನ್ನವನ್ನು। **ವಹಂತೀಃ**—ಹೊತ್ತುಕೊಂಡುಬಂದು (ಕೊಡುತ್ತಾ)। **ವಿಷ್ಟಿಭಿಃ**—(ತಮ್ಮ ನೈಸರ್ಗಿಕವಾದ) ಕಿರಣಗಳೊಡನೆ। **ಸಮಾನೇನ ಯೋಜನೇನ**—ಏಕಕಾಲದ ಪ್ರಯತ್ನದಿಂದ। **ಅಪಸೋಽನ**—ಯುದ್ಧ ನಿರತರಾದ ಪುರುಷರು ತಮ್ಮ ಆಯುಧಗಳೊಡನೆ ಯುದ್ಧಭೂಮಿಯ ಸಕಲ ಪ್ರದೇಶಗಳನ್ನು ವ್ಯಾಪಿಸುವಂತೆ। **ಆ ಪರಾವತಃ**—(ಅಂತರಿಕ್ಷದ) ಅತ್ಯಂತ ದೂರದ ಪ್ರದೇಶಗಳಲ್ಲೂ ಸಹ। **ಅರ್ಚಂತಿ**—ವ್ಯಾಪಿಸುತ್ತಾರೆ ॥

ಭಾವಾರ್ಥ

ಉಷೋದೇವತೆಗಳು ಸಕಲರಿಗೂ ಮಾರ್ಗದರ್ಶಕರು. ಅವರು ಪವಿತ್ರಗಳಾದ ಕರ್ಮಗಳನ್ನು ಆಚರಿಸುವವನೂ, ಯಜ್ಞಗಳಲ್ಲಿ ಸೋಮರಸವನ್ನು ಹಿಂಡುವವನೂ, ಋತ್ವಿಕ್ಕುಗಳಿಗೆ ಉದಾರವಾಗಿ ದಾನ ಮಾಡತಕ್ಕವನೂ ಆದ ಯಜ್ಞಕರ್ತನಿಗೆ ಸಕಲವಾದ ಅನ್ನವನ್ನು ಹೊತ್ತುಕೊಂಡು ಬಂದುಕೊಡುತ್ತಾ ಯೋಧರು ಯುದ್ಧಭೂಮಿಯನ್ನೆಲ್ಲಾ, ವ್ಯಾಪಿಸುವಂತೆ ಅವರೂ ಸಹ ತಮ್ಮ ನೈಸರ್ಗಿಕವಾದ ಕಿರಣಗಳೊಡನೆ ಅಂತರಿಕ್ಷದ ಅತ್ಯಂತ ದೂರ ಪ್ರದೇಶಗಳಲ್ಲೂ ಸಹ ಏಕಕಾಲದಲ್ಲಿ ವ್ಯಾಪಿಸುತ್ತಾರೆ.

## English Translation

The female leaders of the morning illuminate with their inherent radiance, the remotest parts of the heaven, with a sumultaneous effort, like warriors with their shining arms in the van of the battle, bringing every kind of food to the performer of good works, to the bountiful, and to the worshipper who presents libations.

॥ ವಿಶೇಷವಿಷಯಗಳು ॥

**ನಾರೀಃ—ನೇತ್ರ್ಯಃ**। ಮಾರ್ಗದರ್ಶಕರಾದ ಎಂದರೆ ಸಕಲ ಜೀವರಾಶಿಗಳನ್ನು ಕತ್ತಲಿನಿಂದ ಬಿಡಿಸಿ ಬೆಳಕನ್ನೂ ಚೈತನ್ಯವನ್ನೂ ಕೊಟ್ಟು ಅವರವರ ಕರ್ಮಗಳನ್ನು ಮಾಡುವಂತೆ ದಾರಿಯನ್ನು ತೋರಿಸಿ ಕೊಡುವರೆಂದರ್ಥವು.

**ಇಷಂ**—ಅಂಧಃ, ವಾಜಃ ಇತ್ಯಾದಿ ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) **ಇಷಂ** ಎಂದರೆ ಅನ್ನವನ್ನು ಎಂದರ್ಥವು.

**ವಿಷ್ಟಿಭಿಃ— ಅಪಃ, ಅಪ್ನಃ** ಇತ್ಯಾದಿ ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೨) ಕರ್ಮಗಳಿಂದ ಎಂದರ್ಥ. ಆದರೆ ಇಲ್ಲಿ ಸಾಯಣರು ತೇಜಸ್ಸುಗಳಿಂದ ಎಂದು ಅರ್ಥವನ್ನು ಮಾಡುತ್ತಾರೆ. **ವಿಶಂತಿ ಪ್ರವಿಶಂತೀತಿ ವಿಷ್ಟಯಃ ಕಿರಣಾಃ**। ಜಗತ್ತನ್ನೆಲ್ಲಾ ಪ್ರವೇಶಿಸಿ ಹರಡುವುದರಿಂದ ಕಿರಣವೆಂದರ್ಥವಾಗುತ್ತದೆ. ಈ ಎರಡು ವಿಧವಾದ ಅರ್ಥಗಳಿಗೂ ಇಲ್ಲಿ ಅನ್ವಯವಿರುತ್ತದೆ. **ಅಪಸೋ ನ ವಿಷ್ಟಿಭಿಃ** ಎಂದು ಸ್ಕಂದಸ್ವಾಮಿಗಳು ಮಾಡುವ ಅನ್ವಯದಂತೆ, ಉಪಲೇಪನಾದಿಗೃಹಕರ್ಮಗಳಿಂದ ಕೂಡಿದ ಕಾರ್ಯಕುಶಲರಾದ ನಾರಿಯರಂತೆ ಎಂದಾಗುತ್ತದೆ.

**ಅಪಸೋ ನ**— **ಅಪಸ್** ಶಬ್ದಕ್ಕೆ ಕರ್ಮ ಅಥವಾ ಕರ್ಮಕೌಶಲ್ಯವೆಂದು ಅರ್ಥ (ನಿ. ೭-೨೮) ಗೃಹಕರ್ಮಗಳಲ್ಲಿ ಕುಶಲರಾದ ನಾರಿಯರಂತೆ ಎಂದಾಗುತ್ತದೆ. ಆದರೆ ಸಾಯಣರು ಆಯುಧಕರ್ಮಗಳಲ್ಲಿ ಕುಶಲರಾದ ಯೋಧರಂತೆ ಎಂದು ವಿವರಿಸುತ್ತಾರೆ. **ಅಪಸೋ ನ** ಎನ್ನುವ ಉಪಮಾನಕ್ಕೆ ಗೃಹಾಲಂಕಾರಾದಿ ಕಾರ್ಯಗಳಲ್ಲಿ ಕುಶಲರಾದ ನಾರಿಯರು ಎಂದು ಸ್ಕಂದಸ್ವಾಮಿಗಳು ಮಾಡುವ ವಿವರಣೆಯೇ ಹೆಚ್ಚು ಒಪ್ಪಿಕೊಳ್ಳುತ್ತದೆ. ಅಲಂಕಾರಾದಿಗಳಿಂದ ನಾರಿಯರು ಗೃಹವನ್ನು ಯಾವ ವಿಧದಲ್ಲಿ ಅಂದವಾಗಿರುವಂತೆಯೂ ಪ್ರಕಾಶಿಸುವಂತೆಯೂ ಮಾಡುತ್ತಾರೆಯೋ ಅದೇ ರೀತಿ ಉಷಸ್ಸುಗಳೂ ಸಹ ಅಂತರಿಕ್ಷವನ್ನೆಲ್ಲಾ ಪ್ರಕಾಶಯುಕ್ತವನ್ನಾಗಿ ಮಾಡುತ್ತಾ ತಮ್ಮ ಕಿರಣಗಳೊಡನೆ ಸಕಲ ಪ್ರದೇಶಗಳಲ್ಲೂ ವ್ಯಾಪಿಸುತ್ತಾರೆ ಎಂಬುದು ಸಹಜವಾಗಿದೆ.

**ಪರಾವತಃ**—**ಆಕೇ, ಪರಾಕೇ** ಇತ್ಯಾದಿ ದೂರ ನಾಮಗಳಲ್ಲಿ ಪಠಿತವಾಗಿದೆ (ನಿ. ೩-೨೦) **ಆ ಪರಾವತಃ** ಅಂದರೆ ಅತ್ಯಂತ ದೂರ ಪ್ರದೇಶಗಳಲ್ಲಿಯೂ ಎಂದಾಗುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ಅರ್ಚಂತಿ**— ಅರ್ಚ ಪೂಜಾಯಾಂ ಧಾತು. ಲಟ್ ಪ್ರಥಮಪುರುಷ ಬಹುವಚನರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದ್ದರಿಂದ ಅನುದಾತ್ತ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು (ಅಂತಿ) ಬರುವುದರಿಂದ **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ನಾರೀಃ**— ನೃ ನಯೇ ಧಾತು. **ಋದೋರಪ್**— (ಪಾ. ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ನರ ಶಬ್ದವಾಗುತ್ತದೆ. **ನೃ ನರಯೋರ್ವೃದ್ಧಿಶ್ಚ**—(ಪಾ. ಸೂ. ೪-೧-೭೩.ಗ) ಎಂದು ಶಾರ್ಙ್ಗರವಾದಿಯಲ್ಲಿ ಪಾಠಮಾಡಿರುವುದರಿಂದ ಸ್ತ್ರೀತ್ವದಲ್ಲಿ ಙೀನ್ ಮತ್ತು ಪ್ರಕೃತಿಗೆ ವೃದ್ಧಿ ನಾರೀ ಶಬ್ದವಾಗುತ್ತದೆ. ಪ್ರಥಮಾ ಜಸ್ ಪರವಾದಾಗ **ವಾ ಛಂದಸಿ** ಎಂಬುದರಿಂದ ಸಂಹಿತಾದಲ್ಲಿ ಪೂರ್ವಸವರ್ಣದೀರ್ಘ ಬರುತ್ತದೆ.

**ಅಪಸಃ**— ಅಪಸ್ ಶಬ್ದ. ಅಪಃ ಅಸ್ಯ ಅಸ್ತಿ ಎಂಬರ್ಥದಲ್ಲಿ **ಅರ್ಶ ಆದಿಭ್ಯೋಽಚ್**—(ಪಾ. ಸೂ. ೫-೨-೧೨೭) ಎಂಬುದರಿಂದ ಅಚ್ ಪ್ರತ್ಯಯ. ಅಪಸ ಶಬ್ದವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ಸುಪಾಂ ಸುಲುಕ್** ಎಂಬುದರಿಂದ ಜಸಿಗೆ ಸು ಆದೇಶ. ಸುವಿಗೆ ರುತ್ವವಿಸರ್ಗ. ಅಪಸಃ ಎಂದು ರೂಪವಾಗುತ್ತದೆ. ವ್ಯತ್ಯಯದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ವಿಷ್ಟಿಭಿಃ— ವಿಶ ಪ್ರವೇಶನೇ ಧಾತು. ವಿಶಂತಿ ಪ್ರವಿಶಂತಿ ಇತಿ ಪ್ರವಿಷ್ಟಯಃ ಕಿರಣಾಃ **ಕ್ತಿಚ್ ಕ್ತೌ ಚ ಸಂಜ್ಞಾಯಾಂ**— (ಪಾ. ಸೂ. ೩-೩-೧೭೪) ಎಂಬುದರಿಂದ ಸಂಜ್ಞೆ ತೋರುವುದರಿಂದ ಕ್ತಿಚ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ವ್ರಶ್ಚ ಭ್ರಸ್ಜ** ಎಂಬುದರಿಂದ ಧಾತುವಿನ ಶಕಾರಕ್ಕೆ ಷಕಾರಾದೇಶ. ಷ್ಟುತ್ವದಿಂದ ಪ್ರತ್ಯಯತಕಾರಕ್ಕೆ ಟಕಾರಾದೇಶ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ವಹಂತೀಃ**— ವಹ ಪ್ರಾಪಣೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್ ಜಸಿನಲ್ಲಿ **ವಾ ಛಂದಸೀ** ಎಂಬುದರಿಂದ ಪೂರ್ವಸವರ್ಣದೀರ್ಘ.

ವಿಶ್ವಾ—**ಸುಪಾಂ ಸುಲುಕ್**— ಎಂಬುದರಿಂದ ದ್ವಿತೀಯಾ ಏಕವಚನ. ಅಮಿಗೆ ಡಾದೇಶ. ॥ ೩ ॥

ಸಂಹಿತಾಪಾಠಃ

ಅಧಿ ಪೇಶಾಂಸಿ ವಪತೇ ನೃತೂರಿವಾಪೋರ್ಣುತೇ ವಕ್ಷ ಉಸ್ರೇ-
ವ ಬರ್ಜಹಂ ।
ಜ್ಯೋತಿರ್ವಿಶ್ವಸ್ಮೈ ಭುವನಾಯ ಕೃಣ್ವತೀ ಗಾವೋ ನ-
ವ್ರಜಂ ವ್ಯು೧ಷಾ ಆವರ್ತಮಃ ॥ ೪ ॥

॥ ಪದಪಾಠಃ ॥

ಅಧಿ । ಪೇಶಾಂಸಿ । ವಪತೇ । ನೃತೂಃಽಇವ । ಅಪ । ಊರ್ಣುತೇ । ವಕ್ಷಃ ।
ಉಸ್ರಾಽಇವ । ಬರ್ಜಹಂ ।
ಜ್ಯೋತಿಃ । ವಿಶ್ವಸ್ಮೈ । ಭುವನಾಯ । ಕೃಣ್ವತೀ । ಗಾವಃ । ನ । ವ್ರಜಂ । ವಿ ।
ಉಷಾಃ । ಆವರಿತ್ಯಾವಃ । ತಮಃ ॥ ೪ ॥

ಸಾಯಭಾಷ್ಯಂ

ಉಷಾಃ ಪೇಶಾಂಸಿ ಜಗತ್ಸ್ವಶ್ಲಿಷ್ಟಾನಿ ಕೃಷ್ಣವರ್ಣಾನಿ ತಮಾಂಸ್ಯಧ್ಯಾಧಿಕ್ಯೇನ ವಪತೇ ಛಿನತ್ತಿ । ತತ್ರ ದೃಷ್ಟಾಂತಃ । ನೃತೂರಿವ । ನೄಂಸ್ತೂರ್ವತಿ ಕೇಶೇನ ರಿಕ್ತೀಕರೋತೀತಿ ನೃತೂರ್ನಾಪಿತಃ । ಸ ಯಥಾ ಕೇಶಾನ್ನಿಃಶೇಷೇಣ ಚ್ಛಿನತ್ತಿ ಏವಮುಷಾ ಅಪ್ಯಂಧಕಾರಂ ಸಮೂಲಂ ಹಿನಸ್ತೀತ್ಯರ್ಥಃ । ಯದ್ವಾ । ನೃತೂರಿವ ನೃತ್ಯಂತೀ ಯೋಷಿದಿವ । ಪೇಶಾಂಸಿ । ರೂಪನಾಮೈತತ್ । ಸರ್ವೈರ್ದರ್ಶನೀಯಾನಿ ರೂಪಾಣ್ಯುಷಾ ಅಧಿ ವಪತೇ । ಸ್ವಾತ್ಮನ್ಯಧಿಕಂ ಧಾರಯತಿ । ಏವಂ ಪ್ರಥಮತೋಽಂಧಕಾರಂ ಸ್ವಕಿರಣೈರ್ನಿರಸ್ಯ ವಕ್ಷಃ ಸ್ವಕೀಯಮುರಃಪ್ರದೇಶಮಪೋರ್ಣುತೇ । ತಮಸಾನಾಚ್ಛಾದಿತಂ ಕರೋತಿ । ಸ್ವಯಮಾವಿರ್ಭವತೀತ್ಯರ್ಥಃ । ಬರ್ಜಹಂ ಪಯಸ ಉತ್ಪತ್ತಿಸ್ಥಾನಂ ದೋಹನಸಮಯ ಉಸ್ರಾ ಗೌರ್ಯಥಾವಿಷ್ಕರೋತಿ ತದ್ವತ್ । ಕಿಂ ಕುರ್ವತೀ । ಗಾವೋ ನ ವ್ರಜಂ ಯಥಾ ಗಾವಃ ಸ್ವಕೀಯಂ ಗೋಷ್ಠಂ ಸ್ವಯಮೇವ ಶೀಘ್ರಂ ವ್ಯಾಪ್ನುವಂತಿ ಏವಂ ಸ್ವಯಮೇವ ಪ್ರಾಚೀಂ ದಿಶಂ ಪ್ರಾಪ್ಯ ವಿಶ್ವಸ್ಮೈ ಭುವನಾಯ ಸರ್ವಸ್ಮೈ ಲೋಕಾಯ ಜ್ಯೋತಿಷ್ಕೃಣ್ವತೀ । ಪ್ರಕಾಶಂ ಕುರ್ವತೀ । ಏವಮುಕ್ತೇನ ಪ್ರಕಾರೇಣೋ-

ಷಾಸ್ತವೋಽಂಧಕಾರಂ ನ್ಯಾವಃ । ವಿವೃತಮುಪಶ್ಲಿಷ್ಟಮಕರೋತ್ ॥ ನೃತೂರಿವ । ತುರ್ವೀಹಿಂಸಾರ್ಥಃ । ಕ್ವಿಪ್ಚೇತಿ ಕ್ವಿಪ್ । ರಾಲ್ಲೋಪ ಇತಿ ವಲೋಪಃ । ರ್ವೋರುಪಧಾಯಾ ಇತಿ ದೀರ್ಘತ್ವಂ । ಯದ್ವಾ । ನೃತೀ ಗಾತ್ರವಿನಾಮೇ । ನೃತಿಶೃಧ್ಯೋಃ ಕೂಃ । ಉ. ೧-೯೩ । ಇತಿ ಕೂಪ್ರತ್ಯಯಃ । ಬರ್ಜಹಂ । ವೃಜ್ ಸಂಭಕ್ತೌ । ವೃಣೀತೇ ಸಂಭಜತೇ ಗಾಮಿತಿ ಬಃ ಪಯಃ । ವಿಚ್ । ತೇಜ್ಜಹಾತೀತಿ ಬರ್ಜಹಃ । ಓಹಾಜ್ ತ್ಯಾಗೇ । ಖಶ್ಪ್ರಕರಣೇ ವಾತಶುನೀತಿಲಗರ್ಧೇಷ್ವಜಧೇಟ್ತುದಜಹಾತಿಭ್ಯ ಉಪಸಂಖ್ಯಾನಂ । ಪಾ.೩-೨-೨೮-೧ । ಇತ್ಯಗರ್ಧಶಬ್ದೋಪಪದಾದಪಿ ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾತ್ ಖಶ್ । ತಸ್ಯ ಸಾರ್ವಧಾತುಕತ್ವೇನ ಕರ್ತರಿ ಶಪಿ ಜುಹೋತ್ಯಾದಿತ್ವಾತ್ ಶ್ಲುಃ । ದ್ವಿರ್ವಚನಾದಿ । ಬವಯೋರಭೇದ ಇತಿ ಬತ್ವಂ । ದಿವೋದಾಸಾದಿತ್ವಾತ್ಪೂರ್ವಪದಾದ್ಯುದಾತ್ತತ್ವಂ । ಆವಃ । ವೃಞ್ ವರಣೇ । ಲುಜಃ ಮಂತ್ರೇ ಘಸೇತಿ ಚ್ಲೇರ್ಲುಕ್ । ಗುಣೇ ಹಲ್ಙ್ಯಾಬ್ಭ್ಯ ಇತಿ ಲೋಪಃ । ಛಂದಸ್ಯಪಿ ದೃಶ್ಯತೇ । ಪಾ ೬-೪-೭೩ । ಇತ್ಯಾಡಾಗಮಃ ॥ ೪

ಪ್ರತಿಪದಾರ್ಥ

ಉಷಾಃ— ಉಷೋ ದೇವತೆಯು । **ನೃತೂಃ ಇವ**—ನಾಪಿತನು ಕೂದಲನ್ನು ಸಂಪೂರ್ಣವಾಗಿ ಕತ್ತರಿಸುವಂತೆ । **ಪೇಶಾಂಸಿ**— ( ಜಗತ್ತನ್ನು ಆವರಿಸುವ ) ಕಗ್ಗತ್ತಲೆಗಳನ್ನು ನಿಶ್ಶೇಷವಾಗಿ । **ವಪತೇ**—ಛಿದ್ರ (ನಾಶ) ಮಾಡುತ್ತಾಳೆ [ **ನೃತೂಃ ಇವ**— ನರ್ತನಮಾಡತಕ್ಕ (ಸುಂದರ) ಸ್ತ್ರೀಯಂತೆ । **ಪೇಶಾಂಸಿ**—(ಆಕರ್ಷಕಗಳಾದ) ತನ್ನ ರೂಪುಲಾವಣ್ಯಗಳನ್ನು । **ಅಧಿ ವಪತೇ**—(ತನ್ನಲ್ಲಿ) ಸಂಪೂರ್ಣವಾಗಿ ಧರಿಸುತ್ತಾಳೆ ।] **ಉಸ್ರಾ**—ಹಸುವು। **ಬರ್ಜಹಂ**—( ಕರೆಯುವಕಾಲದಲ್ಲಿ ) ಕೆಚ್ಚಲನ್ನು ತೋರಿಸುವಂತೆ । **ವಕ್ಷಃ**—ತನ್ನ ವಕ್ಷಸ್ಸನ್ನು । **ಅಪೋರ್ಣುತೇ**—(ಕತ್ತಲಿನಿಂದ) ಹೊರಕ್ಕೆ ತೆಗೆದು ತೋರಿಸುತ್ತಾಳೆ । **ಗಾವಃ**—ಹಸುಗಳು । **ವ್ರಜಂ ನ**—ಕೊಟ್ಟಿಗೆಯನ್ನು ಹೋಗಿ ಸೇರುವಂತೆ ( ಉಷಸ್ಸೂ ಸಹ ಪೂರ್ವದಿಕ್ಕನ್ನು ಸೇರಿ ) । **ವಿಶ್ವಸ್ಮೈ ಭುವನಾಯ**—ಸಕಲ ಲೋಕಕ್ಕೂ । **ಜ್ಯೋತಿಃ**— ಪ್ರಕಾಶವನ್ನು । **ಕೃಣ್ವತೀ**—ಉಂಟುಮಾಡುತ್ತಾ । **ತಮಃ**— ಅಂಧಕಾರವನ್ನು । **ವಿ ಆವಃ**—ಸಂಪೂರ್ಣವಾಗಿ ನಾಶಮಾಡಿದಳು ॥

ಭಾವಾರ್ಥ

ನಾಪಿತನು ಕೂದಲನ್ನು ಕತ್ತರಿಸುವಂತೆ ಉಷೋದೇವತೆಯು ಕತ್ತಲನ್ನು ಹೋಗಲಾಡಿಸುತ್ತಾಳೆ. ನರ್ತನಮಾಡತಕ್ಕ ಸ್ತ್ರೀಯಂತೆ ಉಷೋದೇವಿಯು ತನ್ನ ಆಕರ್ಷಕಗಳಾದ ರೂಪುಲಾವಣ್ಯಗಳನ್ನು ಸಂಪೂರ್ಣವಾಗಿ ಧರಿಸುತ್ತಾಳೆ. ಹಸುವು ಕರೆಯುವ ಕಾಲದಲ್ಲಿ ಕೆಚ್ಚಲನ್ನು ತೋರಿಸುವಂತೆ ತನ್ನ ವಕ್ಷಸ್ಸನ್ನು ತೋರಿಸುತ್ತಾಳೆ. ಹಸುಗಳು ಕೊಟ್ಟಿಗೆಯನ್ನು ಹೋಗಿ ಸೇರುವಂತೆ ಉಷಸ್ಸೂ ಪೂರ್ವದಿಕ್ಕನ್ನು ಸೇರಿ ಸಕಲ ಲೋಕಕ್ಕೂ ಪ್ರಕಾಶವನ್ನು ಉಂಟುಮಾಡುತ್ತಾ ಅಂಧಕಾರವನ್ನು ಸಂಪೂರ್ಣವಾಗಿ ನಾಶಮಾಡಿದಳು.

English Translation

Ushas cuts off the accumulated glooms as a barber cuts off the hair ; she bares her bosom as a cow yeilds her udder to the milker ; and as cattle

hasten to their pastures, she speeds to the east, and, shedding light upon all the world dissipates the darkness.

॥ ವಿಶೇಷವಿಷಯಗಳು ॥

**ನೃತೂಃ ಇವ**—ಈ ಉಪಮಾನದಲ್ಲಿ ವಿಕಾರವನ್ನು ನಾಶಮಾಡುವುದು ಮತ್ತು ಸೌಂದರ್ಯವನ್ನು ಪ್ರಕಟಿಸುವುದು ಎಂಬುದಾಗಿ ಎರಡುವಿಧವಾದ ಅರ್ಥವೂ ಆಗುತ್ತದೆ. ಮೊದಲನೆಯದಾಗಿ **ನೃತೂಃ** ಅಂದರೆ, **ನೄ್ ತೂರ್ವತಿ ಕೇಶೇನ ರಿಕ್ತೀಕರೋತೀತಿ ನೃತೂರ್ನಾಪಿತಃ।** ನರರ ಕೂದಲುಗಳನ್ನೆಲ್ಲಾ ಪೂರ್ಣವಾಗಿ ಕತ್ತರಿಸುವುದರಿಂದ ಕ್ಷೌರಕನಿಗೆ **ನೃತೂಃ, ನಾಪಿತಃ** ಎಂದು ಹೆಸರು.

**ವಪತೇ—ಛಿನತ್ತಿ।** ಕತ್ತರಿಸುತ್ತಾನೆ. ಯಾವ ರೀತಿ ನಾಪಿತನು ತಲೆಯ ಕೂದಲನ್ನು ಕತ್ತರಿಸುತ್ತಾನೆಯೋ ಅದರಂತೆಯೇ ಉಷಸ್ಸೂ ಕೂಡ **ಪೇಶಾಂಸಿ**—ಜಗತ್ತನ್ನು ಆವರಿಸುವ ಕೃಷ್ಣವರ್ಣದ ಕತ್ತಲನ್ನು **ಅಧಿ**—ಸಂಪೂರ್ಣವಾಗಿ **ವಪತೇ**—ನಾಶಮಾಡುತ್ತಾಳೆಂದರ್ಥ. ಈ ಅರ್ಥದಲ್ಲಿ ವಿಕಾರವನ್ನು ನಾಶಮಾಡುವುದರ ಮೂಲಕ ಕಾಂತಿಯನ್ನು ಹರಡುವುದೆಂದಾಗುತ್ತದೆ.

ಎರಡನೆಯದಾಗಿ ; **ನೃತೂಃ ಇವ—ನೃತ್ಯಂತೀ ಯೋಷಿದಿವ।** ಅಂದರೆ ನರ್ತನ ಮಾಡತಕ್ಕ ಸುಂದರ ಸ್ತ್ರೀಯು ಯಾವರೀತಿ **ಪೇಶಾಂಸಿ**—ಮನೋಹರಗಳಾದ ತನ್ನ ರೂಪು ಲಾವಣ್ಯಗಳನ್ನು ಸಿದ್ಧಪಡಿಸಿಕೊಳ್ಳುತ್ತಾಳೆಯೋ ಅದರಂತೆಯೇ ಉಷಸ್ಸೂ ಕೂಡ ತನ್ನ ಮನೋಹರವಾದ ಸೌಂದರ್ಯವನ್ನು **ಅಧಿ ವಪತೇ**— ಹೊಂದಿರುತ್ತಾಳೆ ಸುತ್ತಲೂ ತನ್ನ ಕಾಂತಿಯನ್ನು ಬೀರುತ್ತಾಳೆಂದರ್ಥವು.

**ಉಸ್ರಾ—ಅಘ್ನ್ಯಾ, ಉಸ್ರಾ** ಇತ್ಯಾದಿ ಗೋನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) **ಉಸ್ರಾ** ಎಂದರೆ ಗೋವು ಎಂದರ್ಥವು. **ಉಸ್ರಾವಿಣೋಽಸ್ಯಾಂ ಭೋಗಾಃ।** ಸುಖಸಾಧನವಾದ ಕ್ಷೀರವು ಹರಿಯುವುದರಿಂದ ಗೋವಿಗೆ ಉಸ್ರಿಯಾ ಎಂಬ ಹೆಸರು ಬಂದಿದೆ.

**ಬರ್ಜಹಂ— ಪ್ರಾಣಿನಾಂ ಭರಣಸಮರ್ಥತ್ವಾತ್ ಬಸ್ ಇತಿ ಕ್ಷೀರಮುಚ್ಯತೇ। ತೆಜ್ಜಹತೀತಿ ಬರ್ಜಹಂ ಊಧಃ।** ಪ್ರಾಣಿಗಳನ್ನು ಪೋಷಿಸುವ ಸಾಮರ್ಥ್ಯವುಳ್ಳ ಕ್ಷೀರಕ್ಕೆ **ಬಸ್** ಎಂದು ಹೆಸರು. ಆ ಕ್ಷೀರವನ್ನು ಕೊಡುವ ಸ್ಥಳವಾದ ಕೆಚ್ಚಲಿಗೆ **ಬರ್ಜಹಂ** ಎಂದು ಹೆಸರಾಗಿದೆ.

ಇಲ್ಲಿ ಉಪಮಾನವು ಬಹಳ ಔಚಿತ್ಯದಿಂದ ಕೂಡಿದೆ. ಗೋವು ಲೋಕದ ಎಲ್ಲಾ ಪ್ರಾಣಿಗಳ ಜೀವನಾಧಾರವಾದ ಕ್ಷೀರವನ್ನು ಉದಾರವಾಗಿ ಕೊಡುವುದಕ್ಕೆ ಯಾವ ರೀತಿ ಕೆಚ್ಚಲನ್ನು ತೋರಿಸುತ್ತದೆಯೋ ಅದರಂತೆ ಉಷಸ್ಸೂ ಕೂಡ ತನ್ನ ವಕ್ಷಸ್ಸನ್ನು ಬಿಚ್ಚಿ ತೋರಿಸುತ್ತಾಳೆ. ಅಂದರೆ ತನ್ನ ಕಾಂತಿಯನ್ನು ಉದಾರವಾಗಿ ಹರಡಿ ಲೋಕಕ್ಕೆಲ್ಲಾ ಬಿಟ್ಟು ಬೆಳಕನ್ನೂ ಚೈತನ್ಯವನ್ನೂ ಉಂಟುಮಾಡುತ್ತಾಳೆಂದರ್ಥವು.

**ವ್ರಜಂ—ವೃಣೋತೇರ್ವ್ರಜಃ।** (ನಿ. ೬-೨) ಆವರಣದಿಂದ ಮುಚ್ಚುತ್ತದೆಯಾದ್ದರಿಂದ ವ್ರಜವೆಂದು ಹೆಸರು. **ವ್ರಜಂ ನ** ಅಂದರೆ ಗೋವು ತನ್ನ ರಕ್ಷಣಾಸ್ಥಾನವಾದ ಕೊಟ್ಟಿಗೆಯನ್ನು ಸ್ವಸಂತೋಷದಿಂದಲೂ ಇತರರ ನಿರ್ಬಂಧವಿಲ್ಲದೆಯೂ ಯಾವ ರೀತಿ ಸೇರಿಕೊಳ್ಳುತ್ತದೆಯೋ ಅದೇ ರೀತಿ ಉಷಸ್ಸೂ ಕೂಡ ತನ್ನ ಸ್ವಸ್ಥಾನವಾದ

ಪ್ರಾಗ್ದಿಕ್ಕನ್ನು ಆತ್ಮಸಂತೋಷದಿಂದ ಸೇರಿಕೊಂಡು ಸಕಲ ಲೋಕಕ್ಕೂ ಸಹ ಜ್ಯೋತಿಯನ್ನು ಬೆಳಗುತ್ತಾಳೆ. ಈ ಅಂಶವನ್ನೇ ಈ ಕೆಳಗಿನ ಋಕ್ಕೂ ತಿಳಿಸುವುದು.

**ಉದಪಪ್ತನ್ನರುಣಾ ಭಾನವೋ ವೃಥಾ ಸ್ವಾಯುಜೋ ಅರುಷೀರ್ಗಾ ಅಯುಕ್ಷತ ।**
( ಋ. ಸಂ. ೧-೯೨-೨ )

ವ್ಯಾಕರಣಪ್ರಕ್ರಿಯಾ

**ವಪತೇ**—ಡುವಪ್ ಬೀಜಸಂತಾನೇ ಧಾತು. ಇದು ಛೇದನಾರ್ಥದಲ್ಲಿಯೂ ಇದೆ. ಲಟ್ ಪ್ರಥಮ ಪುರುಷಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ನೃತೂರಿವ**—ತುರ್ವೀ ಹಿಂಸಾರ್ಥಃ ಧಾತು. **ಕ್ವಿಪ್ ಚ** ಎಂಬುದರಿಂದ **ಕ್ವಿಪ್. ರಾಲ್ಲೋಪಃ** (ಪಾ. ಸೂ. ೬-೪-೨೧) ಎಂಬುದರಿಂದ ರೇಫದ ಪರದಲ್ಲಿರುವ ವಕಾರಕ್ಕೆ ಲೋಪ. ಸು ಪರವಾದಾಗ **ರ್ವೋರುಪಧಾಯಾಃ** ಎಂಬುದರಿಂದ ರೇಫಾಂತದ ಉಪಧೆಗೆ ದೀರ್ಘ. ತೂಃ ಎಂದು ರೂಪವಾಗುತ್ತದೆ. ಅಥವಾ ನೃತೀ ಗಾತ್ರವಿನಾಮೇ. ಧಾತು. **ನೃತಿ ಶೃಧ್ಯೋಃ ಕೂಃ** (ಉ. ಸೂ. ೧-೯೧) ಎಂಬುದರಿಂದ ಕೂಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಊರ್ಣುತೇ**— ಊರ್ಣುಞ್ ಆಚ್ಛಾದನೇ ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಬರ್ಜಹಮ್**—ವೃಜ್ ಸಂಭಕ್ತೌ ಧಾತು. ವೃಣೀತೇ ಸಂಭಜತೇ ಗಾಮಿತಿ ಬಃ ಪಯಃ. ವಿಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ರ ಪರವಾಗಿ ಬರುವುದರಿಂದ ರೇಫಕ್ಕೆ ವಿಸರ್ಗ. **ಖಶ್ ಪ್ರಕರಣೇ ವತಶುನೀ ತಿಲಗರ್ಧೇಷ್ವಜಧೇಟ್‌ತುದ ಜಹಾತಿಭ್ಯ ಉಪಸಂಖ್ಯಾನಮ್** (ಪಾ. ಸೂ. ೩-೨-೨೮-೧) ಎಂಬುದರಿಂದ ಇಲ್ಲಿ ಗರ್ಧ ಶಬ್ದ ಉಪಪದವಾಗದೇ ಇದ್ದರೂ **ಕೃತ್ಯಲ್ಯುಟೋ ಬಹುಲಮ್** ಎಂಬಲ್ಲಿ ಬಹುಲಗ್ರಹಣದಿಂದ ಖಶ್ ಪ್ರತ್ಯಯ ಬರುತ್ತದೆ. **ತಿಙ್‌ಶಿತ್ ಸಾರ್ವಧಾತುಕಮ್** ಎಂಬುದರಿಂದ ಅದು ಶಿತ್ತಾದುದರಿಂದ ಸಾರ್ವಧಾತುಕಸಂಜ್ಞೆಯನ್ನು ಹೊಂದುತ್ತದೆ. ಆಗ **ಕರ್ತರಿ ಶಪ್** ಎಂಬುದರಿಂದ ಶಪ್ ಬಂದಾಗ ಜುಹೋತ್ಯಾದಿಯಲ್ಲಿ ಸೇರಿರುವುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. **ಕುಹೋಶ್ಚುಃ** ಎಂಬುದರಿಂದ ಚುತ್ವ. **ವಬಯೋರಭೇದ** ನ್ಯಾಯದಿಂದ ವಕಾರಕ್ಕೆ ಬತ್ವ. ದಿವೋದಾಸಾದಿಯಲ್ಲಿ ಸೇರಿರುವುದರಿಂದ ಪೂರ್ವಪದಾದ್ಯುದಾತ್ತಸ್ವರ ಬರುತ್ತದೆ.

**ಆವಃ**—ವೃಞ್ ವರಣೇ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಕ್ಕೆ ಲೋಪ. **ಮಂತ್ರೇಘಸಹ್ವರಣ** (ಪಾ. ಸೂ. ೨-೪-೮೦) ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಲುಕ್. ತಿಪ್ ನಿಮಿತ್ತವಾಗಿ ಧಾತುವಿಗೆ ಗುಣ. ಹಲಂತದ ಪರದಲ್ಲಿ ಅಪೃಕ್ತ ತಿಪ್ ಬಂದುದರಿಂದ **ಹಲ್‌ಙ್ಯಾಭ್ಯೋ** (ಪಾ-ಸೂ-೬-೪-೬೩) ಎಂಬುದರಿಂದ ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

ಸಂಹಿತಾಪಾಠಃ

ಪ್ರತ್ಯರ್ಚೀ ರುಶದಸ್ಯಾ ಅದರ್ಶಿ ವಿ ತಿಷ್ಠತೇ ಬಾಧತೇ ಕೃಷ್ಣ-
ಮಭ್ವಂ।
ಸ್ವರುಂ ನ ಪೇಶೋ ವಿದಥೇಷ್ವಂಜಞ್ಚಿತ್ರಂ ದಿವೋ ದುಹಿತಾ
ಭಾನುಮಶ್ರೇತ್ ॥೫॥

॥ ಪದಪಾಠಃ ॥

ಪ್ರತಿ । ಅರ್ಚಿಃ । ರುಶತ್ । ಅಸ್ಯಾಃ । ಅದರ್ಶಿ । ವಿ । ತಿಷ್ಠತೇ । ಬಾಧತೇ ।
ಕೃಷ್ಣಂ । ಅಭ್ವಂ ।
ಸ್ವರುಂ । ನ । ಪೇಶಃ । ವಿದಥೇಷು । ಅಂಜನ್ । ಚಿತ್ರಂ । ದಿವಃ । ದುಹಿತಾ ।
ಭಾನುಂ । ಅಶ್ರೇತ್ ॥ ೫ ॥

ಸಾಯಣಭಾಷ್ಯಂ

ಪ್ರಾತರನುವಾಕಸ್ಯೋಷಸ್ಯೇ ಕ್ರತೌ ಪ್ರತ್ಯರ್ಚಿರಿತ್ಯಷ್ಟಾವನುವಕ್ತವ್ಯಾಃ । ಆಶ್ವಿನಶಸ್ತ್ರೇ ಚ । ತಥಾ ಚ ಸೂತ್ರಿತಂ । ಪ್ರತ್ಯರ್ಚಿರಿತ್ಯಷ್ಟೌ ವೃಷಾ ಆ ವೋ ದಿವಿಜಾ ಇತಿ ಷಳಿತಿ ತ್ರೈಷ್ಟುಭಂ । ಆ. ೪-೧೪ । ಇತಿ ॥

ಅಸ್ಯಾ ಉಷಸೋ ರುಶದ್ದೀಪ್ಯಮಾನಮರ್ಚಿಸ್ತೇಜಃ ಪ್ರತ್ಯದರ್ಶಿ । ಸರ್ವೈಃ ಪೂರ್ವಸ್ಯಾಂ ದಿಶಿ ಪ್ರಥಮತೋ ದೃಶ್ಯತೇ । ವಿ ತಿಷ್ಠತೇ । ಸರ್ವಾಸು ದಿಕ್ಷು ವಿವಿಧಮವತಿಷ್ಠತೇ । ವ್ಯಾಪ್ನೋತೀತ್ಯರ್ಥಃ । ಸರ್ವಾ ದಿಶೋ ವ್ಯಾಪ್ಯ ಚಾಭ್ವಂ । ಮಹನ್ನಾಮೈತತ್ । ಅತಿಶಯೇನ ವಿಪುಲಂ ಕೃಷ್ಣಂ ಕೃಷ್ಣವರ್ಣ-ಮಂಧಕಾರಂ ಬಾಧತೇ । ಅಪಸಾರಯತಿ । ವಿದಥೇಷು ಯಜ್ಞೇಷು ಸ್ವರುಂ ನ ಸ್ವರುನಾಮ್ನಾ ಶಕಲೇನ ಯುಕ್ತಂ ಯೂಪಂ ಯಥಾಜ್ಯೇನಾಧ್ವರ್ಯವೋ ಅಂಜನ್ ಅಂಜಂತಿ ತದ್ವನ್ನಭಸಿ ಸ್ವಕೀಯಂ ಪೇಶೋ ರೂಪಮುಷಾ ಅನಕ್ತಿ । ಸಂಶ್ಲಿಷ್ಟಂ ಕರೋತಿ । ತದನಂತರಂ ಚಿತ್ರಂ ಚಾಯನೀಯಂ ಭಾನುಂ

**ಸೂರ್ಯಂ ದಿವೋ ದುಹಿತಾ ದ್ಯುಲೋಕಾದುತ್ಪನ್ನೋಷಾ ಅಶ್ರೇತ್ । ಅಸೇವತ ॥ ವಿ ತಿಷ್ಠತೇ । ಸಮುವಪ್ರವಿಭ್ಯ ಇತ್ಯಾತ್ಮನೇಪದಂ । ಅಶ್ರೇತ್ । ಶ್ರೀಞ್ ಸೇವಾಯಾಂ । ಲಙಃ ಬಹುಲಂ ಛಂದಸೀತಿ ಶಪೋ ಲುಕ್ ॥**

ಪ್ರತಿಪದಾರ್ಥ

**ಅಸ್ಯಾಃ**— ಉಷೋದೇವಿಯ । **ರುಶತ್**— ಪ್ರಕಾಶಮಾನವಾದ । **ಅರ್ಚಿಃ**— ಪ್ರಭೆಯು । **ಪ್ರತಿ ಅದರ್ಶಿ**—ಮೊದಲು(ಪೂರ್ವದಿಕ್ಕಿನಲ್ಲಿ) ಕಾಣಲ್ಪಡುತ್ತದೆ । **ವಿ ತಿಷ್ಠತೇ**—(ಅನಂತರ) ಎಲ್ಲಾ ದಿಕ್ಕುಗಳಿಗೂ ಹರಡುತ್ತದೆ । **ಅಭ್ವಂ**— ವಿಸ್ತಾರವಾಗಿ ಹರಡಿರುವ । **ಕೃಷ್ಣಂ**— ಕಗ್ಗತ್ತಲೆಯನ್ನು । **ಬಾಧತೇ**-—ನಾಶಮಾಡುತ್ತದೆ । **ವಿದಥೇಷು**—ಯಜ್ಞಗಳಲ್ಲಿ । **ಸ್ವರುಂ ನ ಅಂಜನ್**—ಯೂಪಸ್ತಂಭಕ್ಕೆ ಸಲಾಕಿಯಿಂದ ತುಪ್ಪವನ್ನು ಸವರುವಂತೆ । **ಪೇಶಃ**—ತನ್ನ ರೂಪವನ್ನು (ಉಷೆಯು ಅಂಜನಾದಿಗಳಿಂದ ಅಲಕರಿಸಿಕೊಳ್ಳುತ್ತಾಳೆ) । **ಚಿತ್ರಂ**— ತೇಜೋಮಯನಾದ । **ಭಾನುಂ**—ಸೂರ್ಯನನ್ನು । **ದಿವೋ ದುಹಿತಾ**—ದ್ಯುಲೋಕದ ಪುತ್ರಿಯಾದ ಉಷೆಯು। **ಅಶ್ರೇತ್**—ಸೇವಿಸಿದಳು.

ಭಾವಾರ್ಥ

ಉಷೋದೇವಿಯ ಪ್ರಕಾಶಮಾನವಾದ ಪ್ರಭೆಯು ಮೊದಲು ಪೂರ್ವದಿಕ್ಕಿನಲ್ಲಿ ಗೋಚರವಾಗುತ್ತದೆ. ಅನಂತರ ಎಲ್ಲಾ ದಿಕ್ಕೂಗಳಿಗೂ ಹರಡಿ ವಿಶಾಲವಾಗಿ ವ್ಯಾಪಿಸಿರುವ ಕಗ್ಗತ್ತಲೆಯನ್ನು ನಾಶಮಾಡುತ್ತದೆ. ಯಜ್ಞಗಳಲ್ಲಿ ಸಲಾಕಿಯಿಂದ ತುಪ್ಪವನ್ನು ಸವರಿ ಯೂಪಸ್ತಂಭವನ್ನು ಹೇಗೆ ಅಲಂಕರಿಸುತ್ತಾರೆಯೋ ಅದೇರೀತಿ ಉಷೋದೇವಿಯೂ ತನ್ನ ರೂಪವನ್ನು ಸಿಂಗರಿಸಿಕೊಳ್ಳುತ್ತಾಳೆ. ಮತ್ತು ತೇಜೋಮಯನಾದ ಸೂರ್ಯನನ್ನು ದ್ಯುಲೋಕದ ಪುತ್ರಿಯಾದ ಉಷೆಯು ಸೇವಿಸುತ್ತಾಳೆ.

English Translation

Her brilliant light is first seen towards the east ; it spreads and disperses the thick darkness ; she anoints her body as the priests anoint the sacrificial post in sacrifices ; the daughter of the sky awaits the glorious Sun.

ವಿಶೇಷವಿಷಯಗಳು

ಪ್ರಾತರನುವಾಕಮಂತ್ರಪಠನಕಾಲದಲ್ಲಿ ಉಷಸ್ಯಕ್ರತು ಸಂಬಂಧವಾದ ಮಂತ್ರಗಳಿಗಾಗಿ **ಪ್ರತ್ಯರ್ಚಿ** ಎಂದು ಮೊದಲಾಗುವ ಎಂಟು ಋಕ್ಕುಗಳನ್ನು ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಸಹ ಈ ಮಂತ್ರಗಳನ್ನು ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಪ್ರತ್ಯರ್ಚಿರಿತ್ಯಷ್ಟೌ ವ್ಯೂಷಾ ಆ ವೋ ದಿವಿಜಾ ಇತಿ ಷಳಿತಿ ತ್ರೈಷ್ಟುಭಂ** ಎಂಬ ಸೂತ್ರದಿಂದ ವಿವೃತವಾಗಿರುವುದು. ( ಆ. ೪-೧೪ ).

**ಸ್ವರುಂ ನಂ**— ಸ್ವರುವೆಂದರೆ ಸಲಾಕಿ, ಕಣ್ಣಿಗೆ ಕಪ್ಪನ್ನು ಹಚ್ಚಿಕೊಳ್ಳುವ ಕಡ್ಡಿ. ಯೂಪಸ್ತಂಭಕ್ಕೆ ತುಪ್ಪವನ್ನು ಬಳಿದು ಹೇಗೆ ಅಲಂಕರಿಸುವರೋ ಹಾಗೆ ಉಷೋದೇವತೆಯು ಕಣ್ಣಿಗೆ ಅಂಜನ ಅಥವಾ ಕಪ್ಪನ್ನು ಹಚ್ಚಿಕೊಳ್ಳುವ ಕಡ್ಡಿಯಿಂದ ಅಲಂಕಾರಮಾಡಿಕೊಳ್ಳುತ್ತಾಳೆ ಎಂದಭಿಪ್ರಾಯವು.

ಇದಲ್ಲದೆ ಸ್ವರುವೆಂದರೆ ಯೂಪವೆಂದೂ ಅರ್ಥವು. ಋ.ಸಂ.೭-೩೫.೭ ಋಕ್ಕಿನಲ್ಲಿ ಸ್ವರೂಣಾಂ ಎಂಬ ಶಬ್ದಕ್ಕೆ **ಸ್ವರೂಣಾಂ ಯೂಪಾನಾಂ** ಎಂದೂ ಋ.ಸಂ.೪-೬-೩ರಲ್ಲಿ **ಸ್ವರುರ್ನ ಯೂಪಶಕಲವಾಚೀ ಸ್ವರುರತ್ರ ಯೂಪಂ ಲಕ್ಷಯತಿ** ಎಂದೂ ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು. ಸಾಧಾರಣವಾಗಿ ಸ್ವರುಶಬ್ದಕ್ಕೆ ಯೂಪವೆಂದೇ ಅರ್ಥವು. ಈ ಶಬ್ದಪ್ರಯೋಗವಿರುವ ಕೆಲವು ಋಕ್ಕುಗಳನ್ನು ಉದಾಹರಣೆಗಾಗಿ ಕೊಟ್ಟಿರುತ್ತೇವೆ.—

**ಉದು ಸ್ವರುರ್ನವಜಾ ನಾಕ್ರಃ ಪಶ್ವೋ ಅನಕ್ತಿ ಸುಧಿತಃ ಸುಮೇಕಃ ॥**
( ಋ. ಸಂ. ೪-೬-೩ )

**ಶಂ ನಃ ಸ್ವರೂಣಾಂ ಮಿತಯೋ ಭವಂತು ಶಂ ನಃ ಪ್ರಸ್ವ೧ಃ ಶಮ್ವಸ್ತು ವೇದಿಃ ॥**
( ಋ. ಸಂ. ೭-೩೫-೭ )

**ಬೃಹನ್ನಿದಿಧ್ಮ ಏಷಾಂ ಭೂರಿ ಶಸ್ತಂ ಪೃಥುಃ ಸ್ವರುಃ ।**
( ಋ. ಸಂ. ೮-೪೫-೨ )

**ತೇ ದೇವಾಸಃ ಸ್ವರವಸ್ತಸ್ಥಿವಾಂಸಃ ಪ್ರಜಾವದಸ್ಮೇ ದಿಧಿಷಂತು ರತ್ನಂ ।**
( ಋ. ಸಂ. ೩-೮-೬ )

**ಹಂಸಾ ಇವ ಶ್ರೇಣಿಶೋ ಯತಾನಾಃ ಶುಕ್ರಾ ವಸಾನಾಃ ಸ್ವರವೋ ನ ಆಗುಃ ।**
( ಋ. ಸಂ. ೩-೮-೯ )

**ಶೃಂಗಾಣೀವೇಚ್ಛೃಂಗಿಣಾಂ ಸಂ ದದೃಶ್ರೇ ಚಷಾಲವಂತಃ ಸ್ವರವಃ ಪೃಥಿವ್ಯಾಂ ।**
( ಋ. ಸಂ. ೩-೮-೧೦ )

**ಅಸ್ಥುರು ಚಿತ್ರಾ ಉಷಸಃ ಪುರಸ್ತಾನ್ಮಿತಾ ಇವ ಸ್ವರವೋಽಧ್ವರೇಷು ।**
( ಋ. ಸಂ. ೪-೫೧-೨ )

ಈ ಋಕ್ಕುಗಳಲ್ಲಿ ಇರುವ ಸ್ವರುಶಬ್ದವು ಯೂಪವೆಂಬ ಅರ್ಥವನ್ನೇ ಸೂಚಿಸುವುದು. ಈ ಶಬ್ದಕ್ಕೆ ಯಾಸ್ಕರು ಯಾವ ವಿವರಣೆಯನ್ನೂ ಕೊಟ್ಟಿರುವುದಿಲ್ಲ.

**ರುಶತ್**— ಶುಭ್ರವರ್ಣದಿಂದ, ಪ್ರಕಾಶಮಾನವಾದ ಎಂದರ್ಥ. ಇದರ ನಿಷ್ಪತ್ತಿಯ ಕ್ರಮವನ್ನು ೧-೧೯-೨ನೇ ಋಕ್ಕಿನ ವಿವರಣೆಯಲ್ಲಿ ತಿಳಿಸಿದೆ.

**ಅರ್ಚಿಃ**—ಅರ್ಚಿಃ, ಶೋಚಿಃ, ತಪಃ ಇತ್ಯಾದಿ ಜ್ವಲನನಾಮಗಳ ಮಧ್ಯದಲ್ಲಿ ಪಠಿತವಾಗಿದೆ. (ನಿ.೨-೨೮) ಜ್ಯೋತಿಯೆಂದರ್ಥ.

**ವಿ ತಿಷ್ಠತೇ**—ಮೂರು ಲೋಕಗಳಲ್ಲೂ ವಿಧವಿಧವಾಗಿ ಹರಡುತ್ತದೆಂದರ್ಥ.

**ವಿದಥೇಷು**—ಯಜ್ಞಃ, ವೇನಃ, ಅಧ್ವರಃ ಇತ್ಯಾದಿ ಯಜ್ಞನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೭). ವಿದಥಾನಿ-ವೇದನಾನಿ ಎಂದರೆ ಜ್ಞಾನಗಳೆಂದರ್ಥ. ಈ ಅರ್ಥದಲ್ಲಿ ವಿವರಣೆಯನ್ನು ಕೊಡುತ್ತಾ ನಿರುಕ್ತಕಾರರು ಋಕ್ಸಂಹಿತೆಯ—

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ ।**
**ವಿದಥಾನಿ ಪ್ರಚೋದಯನ್ ॥**

( ಋ. ಸಂ. ೩-೨೭-೭ )

ಎಂಬ ಋಕ್ಕನ್ನು ಉದಹರಿಸುತ್ತಾರೆ. ಇಲ್ಲಿಯೂ ಸಹ ಜ್ಞಾನಸಾಧನಗಳಾದ ಯಜ್ಞಗಳಲ್ಲಿ ಎಂದರ್ಥ.

**ದಿವೋ ದುಹಿತಾ**—ದ್ಯುಲೋಕದಿಂದ ಉತ್ಪನ್ನಳಾದ ಉಷಸ್ಸೆಂದರ್ಥ. ಉಷಸ್ಸಿಗೆ **ದಿವೋ ದುಹಿತಾ** ಅಥವಾ **ದುಹಿತರ್ದಿವಃ** ಎಂಬ ವಿಶೇಷಣವೂ ಮತ್ತು ಸಂಬೋಧನೆಯೂ ಅನೇಕ ಕಡೆಗಳಲ್ಲಿ ಬಂದಿವೆ. ಉದಾಹರಣೆಗೆ—

**ತ್ವಂ ತ್ಯೇಭಿರಾಗಹಿ ವಾಜೇಭಿರ್ದುಹಿತರ್ದಿವಃ ।**

( ಋ. ಸಂ. ೧-೩೦-೨೨ )

**ಸಹ ವಾಮೇನ ನ ಉಷೋ ವ್ಯುಚ್ಛಾ ದುಹಿತರ್ದಿವಃ ।**

( ಋ. ಸಂ. ೧-೪೮-೧ )

ಹೀಗೆಯೇ, ೬-೩೦-೮ ; ೭-೪೭-೧೪ ಮುಂತಾದ ಅನೇಕ ಋಕ್ಕುಗಳಲ್ಲಿ ಈ ಶಬ್ದ ಪ್ರಯೋಗವಿರುವುದು.

**ಅಭ್ವಂ—ಮಹತ್, ಬೃಹತ್, ಉಕ್ಷಿತಃ** ಇತ್ಯಾದಿ ಮಹನ್ನಾಮಗಳಲ್ಲಿ ಪಠಿತವಾಗಿದೆ. ( ನಿ. ೩-೧೩ ). ಅತ್ಯಂತ ಬೃಹತ್ತಾದ ಮತ್ತು ಗಾಢವಾದ ಅಂಧಕಾರವನ್ನೂ ಉಷಸ್ಸು ನಾಶಮಾಡುತ್ತಾಳೆ.

**ಭಾನುಂ ಅಶ್ರೇತ್**—ಸೂರ್ಯನನ್ನು ಸೇವಿಸಿದಳು ಎಂದು ಒಂದರ್ಥವೂ ; ದೀಪ್ತಿಯನ್ನು ಹೊಂದಿದಳು ಅಂದರೆ ಪ್ರತಿಕ್ಷಣವೂ ಉಜ್ವಲಿತಳಾಗಿ ರೂಪಾಂತರವನ್ನು ಹೊಂದುತ್ತಿರುತ್ತಾಳೆ ಎಂದು ಇನ್ನೊಂದು ಅರ್ಥವೂ ಆಗುತ್ತದೆ. **ಪ್ರತಿಕ್ಷಣಂ ದೀಪ್ತಾ ರೂಪಾಂತರೀಭವತೀತ್ಯರ್ಥಃ** ಎಂದು ಸ್ಕಂದಸ್ವಾಮಿಗಳು ಹೇಳುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಅದರ್ಶಿ**—ದೃಶಿರ್ ಪ್ರೇಕ್ಷಣೇ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್ ಭಾವಕರ್ಮಣೋಃ** ಎಂಬುದರಿಂದ ಚ್ಲಿಗೆ ಚಿಣ್. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನ ಪರದಲ್ಲಿರುವ ತ ಶಬ್ದಕ್ಕೆ ಲುಕ್. ಚಿಣ್‌ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಅಂಗಕ್ಕೆ ಅಡಾಗಮ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿತಿಷ್ಠತೇ**—ಷ್ಠಾ ಗತಿನಿವೃತ್ತೌ ಧಾತು. ಪರಸ್ಮೈಪದಿ. ವಿ ಎಂಬ ಉಪಸರ್ಗ ಸಂಬಂಧಬಂದಾಗ **ಸಮವಪ್ರವಿಭ್ಯಃ ಸ್ಥಃ** (ಪಾ. ಸೂ. ೧-೩-೨೨) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮಪುರುಷಏಕವಚನದಲ್ಲಿ **ಟಿತ ಆತ್ಮನೇಪದಾನಾಂ** ಎಂಬುದರಿಂದ ಏತ್ವ. ಶಪ್ ವಿಕರಣ. **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಪ್ರಕೃತಿಗೆ ತಿಷ್ಠ ಆದೇಶ. ತಿಙಂತನಿಘಾತಸ್ವರ ಬರುತ್ತದೆ.

**ಬಾಧತೇ**—ಬಾಧೃ ವಿಲೋಡನೇ ಧಾತು. ಲಡಂತರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

ದಿವಃ—**ಊಡಿದಂ ಪದಾದಿ**—ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಶ್ರೇತ್**—ಶ್ರಿಞ್ ಸೇವಾಯಾಂ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಇಕಾರ ಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. ಅಂಗಕ್ಕೆ ಅಡಾಗಮ. ಅಶ್ರೇತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥೫॥

ಸಂಹಿತಾಪಾಠಃ

ಅತಾರಿಷ್ಮ ತಮಸಸ್ಪಾರಮಸ್ಯೋಷಾ ಉಚ್ಛಂತೀ ವಯುನಾ ಕೃಣೋತಿ।
ಶ್ರಿಯೇ ಛಂದೋ ನ ಸ್ಮಯತೇ ವಿಭಾತೀ ಸುಪ್ರತೀಕಾ ಸೌಮನಸಾಯಾಜೀಗಃ ॥೬॥

ಪದಪಾಠಃ

ಅತಾರಿಷ್ಮ । ತಮಸಃ । ಪಾರಂ । ಅಸ್ಯ । ಉಷಾಃ । ಉಚ್ಛಂತೀ । ವಯುನಾ । ಕೃಣೋತಿ ।
ಶ್ರಿಯೇ । ಛಂದಃ । ನ । ಸ್ಮಯತೇ । ವಿऽಭಾತೀ । ಸುऽಪ್ರತೀಕಾ । ಸೌಮನಸಾಯ । ಅಜೀಗರಿತಿ ॥೬॥

ಸಾಯಣಭಾಷ್ಯಂ

ಅಸ್ಯ ನೈಶಸ್ಯ ತಮಸೋಽಂಧಕಾರಸ್ಯ ಪಾರಂ ಸಮಾಪ್ತಿಪ್ರದೇಶಮತಾರಿಷ್ಮ। ಉತ್ತೀರ್ಣಾ ಅಭೂಮ । ಅನಂತರಮುಚ್ಛಂತೀ ನೈಶಂ ತಮೋ ವರ್ಜಯಂತ್ಯುಷಾ ವಯುನಾ ವಯುನಾನಿ

ಸರ್ವೇಷಾಂ ಪ್ರಾಣಿನಾಂ ಜ್ಞಾನಾನಿ ಕೃಣೋತಿ । ನಿರ್ಮಿಮೀತೇ । ಶ್ರಿಯೇ ಸಂಪದರ್ಥಂ ಛಂದೋ ನ ಸ್ಮಯತೇ । ಯಥೋಪಚ್ಛಂದಯಿತಾ ವಶೀಕರಣೇ ಸಮರ್ಥಃ ಪುರುಷ ಆಢ್ಯಸಮೀಪಂ ಪ್ರಾಪ್ಯ ತತ್ಪ್ರೀತ್ಯರ್ಥಂ ಸ್ಮಯತೇ ಹಸತಿ ಏವಂ ವಿಭಾತೀ ವಿಶಿಷ್ಟಪ್ರಕಾಶಂ ಕುರ್ವತ್ಯುಷಾಃ ಸ್ವಕೀಯಯಾ ನಿರ್ಮಲದೀಪ್ತ್ಯಾ ಹಸಂತೀವ ದೃಶ್ಯತೇ । ಏವಂ ಸುಪ್ರತೀಕಾ ವಿಶಿಷ್ಟಪ್ರಕಾಶರೂಪತ್ವೇನ ಶೋಭನಾಂಗೀ ಸತೀ ಸೌಮನಸಾಯ ಸರ್ವೇಷಾಂ ಸೌಮನಸ್ಯಾಯಾಜೀಗಃ । ಅಂಧಕಾರಂ ಭಕ್ಷಿತವತೀ ॥ ಅತಾರಿಷ್ಮ । ತೄ ಪ್ಲವನತರಣಯೋಃ । ಲುಙಿ ಸಿಚಿ ವೃದ್ಧಿಃ । ತಮಸಃ । ಪಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸಂಹಿತಾಯಾಂ ಸತ್ವಂ । ಸ್ಮಯತೇ । ಸ್ಮಿಙ್ ಈಷದ್ಧಸನೇ । ಭೌವಾದಿಕಃ । ಅಜೀಗಃ । ಗೄ ನಿಗರಣೇ । ಲಙಿ ಬಹುಲಂ ಛಂದಸೀತಿ ಶಪಃ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ತುಜಾದಿತ್ವಾದ್ದೀರ್ಘಃ ॥

॥ ಪ್ರತಿಪದಾರ್ಥ ॥

**ಅಸ್ಯ ತಮಸಃ**— ರಾತ್ರಿಕಾಲದ ಈ ಕಗ್ಗತ್ತಲೆಯ । **ಪಾರಂ**—ಕೊನೆಯನ್ನು । **ಅತಾರಿಷ್ಮ**—ದಾಟದ್ದೇವೆ. । **ಉಚ್ಛಂತೀ**—(ಕತ್ತಲಿನಿಂದ) ಕತ್ತಲನ್ನು ಚದುರಿಸಿ ಹೊರಕ್ಕೆ ಆವಿರ್ಭವಿಸುತ್ತಾ । **ಉಷಾಃ**—ಉಷೋದೇವಿಯು । **ವಯುನಾ**—(ಸಕಲ ಪ್ರಾಣಿಗಳ) ಚೈತನ್ಯಗಳನ್ನು । **ಕೃಣೋತಿ**—ಉಂಟುಮಾಡುತ್ತಾಳೆ. । **ಶ್ರಿಯೇ**—ಧನಕ್ಕಾಗಿ । **ಛಂದಃ**—ಮುಖಸ್ತುತಿ ಮಾಡಲು ಸಮರ್ಥನಾದವನು । **ಸ್ಮಯತೇ ನ**—(ಧನಿಕನಲ್ಲಿಗೆ ಹೋಗಿ) ಪುಸಲಾಯಿಸುವ ಸಲುವಾಗಿ ನಸುನಗುವಂತೆ । **ವಿಭಾತೀ**—ತನ್ನ ಕಾಂತಿರೂಪದ ನಗೆಯನ್ನು ಬೀರುತ್ತಲೂ । **ಸುಪ್ರತೀಕಾ**—ಪ್ರಭೆಯಿಂದ ಮನೋಹರವಾಗಿ ಶೋಭಿಸುತ್ತಲೂ ಅಥವಾ ಮನೋಹರವಾದ ಮುಖವುಳ್ಳವಳಾಗಿಯೂ । **ಸೌಮನಸಾಯ**—(ಪ್ರಾಣಿಗಳ) ಸಂತೋಷಾರ್ಥವಾಗಿ । **ಅಜೀಗಃ**—(ಅಂಧಕಾರವನ್ನು) ನುಂಗಿದಳು. ।

॥ ಭಾವಾರ್ಥ ॥

ನಾವು ಉಷೋದೇವಿಯ ಸಹಾಯದಿಂದ ರಾತ್ರಿಕಾಲದ ಕಗ್ಗತ್ತಲೆಯ ಅಂತವನ್ನು ದಾಟದ್ದೇವೆ. ಉಷೋದೇವಿಯು ಕತ್ತಲಿನಿಂದ ಹೊರಕ್ಕೆ ಆವಿರ್ಭವಿಸುತ್ತಾ ಸಕಲ ಪ್ರಾಣಿಗಳಿಗೂ ಚೈತನ್ಯಗಳನ್ನುಂಟುಮಾಡುತ್ತಾಳೆ. ಮತ್ತು ಧನಸಂಪಾದನೆಗಾಗಿ ಮುಖಸ್ತುತಿಮಾಡಲು ಸಮರ್ಥನಾದ ಪುರುಷನು ಧನಿಕನಲ್ಲಿಗೆ ಹೋಗಿ ಪುಸಲಾಯಿಸಿ ನಗುವಂತೆ ಇವಳೂ ತನ್ನ ಕಾಂತಿರೂಪದ ನಗೆಯನ್ನು ಬೀರುತ್ತಲೂ ಮತ್ತು ಪ್ರಭೆಯಿಂದ ಮನೋಹರವಾಗಿ ಶೋಭಿಸುತ್ತಲೂ ಸಕಲ ಪ್ರಾಣಿಗಳ ಸಂತೋಷಾರ್ಥವಾಗಿ ಅಂಧಕಾರವನ್ನು ನುಂಗಿದಳು.

English Translation

We have crossed over the boundary of darkness. Ushas restores the consciousness of living beings ; bright-shining, she smiles, like a flatterer, to obtain favour, and lovely in all her radiance, she has swallowed, the darkness for our delight.

ವಿಶೇಷವಿಷಯಗಳು

**ಉಚ್ಛಂತೀ**—ಈ ಪದಕ್ಕೆ ಚದುರಿಸಿ ನಾಶಮಾಡುತ್ತಾ ಎಂಬುದಾಗಿ ಒಂದರ್ಥವನ್ನೂ ಅಥವಾ ಕಾಂತಿಯಿಂದ ಪ್ರಕಾಶಿಸುತ್ತಾ ಎಂದು ಇನ್ನೊಂದು ಅರ್ಥವನ್ನೂ ಹೇಳಬಹುದು. **ಉಷಾ** ಎನ್ನುವ ಶಬ್ದದ ನಿಷ್ಪತ್ತಿಯೂ ಸಹ **ಉಚ್ಛತಿ** ಎನ್ನುವುದರ ಮೂಲಕವಾಗಿಯೇ ಆಗಿದೆ. (ನಿ. ೨-೧೮). ಆದರೆ **ಉಚ್ಛತಿ** ಶಬ್ದವು **ಉಚ್ಛೀ ವಿವಾಸೇ** ಎಂಬ ಧಾತುವಿನಿಂದಲೂ ನಿಷ್ಪನ್ನವಾಗಬಹುದು ಅಥವಾ **ವಶ-ಕಾಂತೌ** ಎಂಬ ಧಾತುವಿನಿಂದಲಾಗಲಿ ನಿಷ್ಪನ್ನವಾಗಬಹುದು. ಈ ಅಂಶವನ್ನೇ ನಿರುಕ್ತಕಾರರು ೧೨-೭ನೇ ಖಂಡದಲ್ಲಿಯೂ ಸಹ ಪ್ರಸ್ತಾಪಿಸಿದ್ದಾರೆ. ಪ್ರಕೃತದಲ್ಲಿ ಯಾವ ಅರ್ಥವನ್ನು ಬೇಕಾದರೂ ಮಾಡಬಹುದು. **ಉಚ್ಛಂತೀ ಉಷಾ** ಅಂದರೆ ಕತ್ತಲನ್ನು ಚದುರಿಸಿ ಉಷಸ್ಸು ಹೊರಕ್ಕೆ ಆವಿರ್ಭವಿಸುತ್ತಾ ಎಂದಾದರೂ ಆಗಬಹುದು. ಅಥವಾ ಉಷಸ್ಸು ಪ್ರಕಾಶಿಸುತ್ತಾ ಎಂದಾದರೂ ಆಗಬಹುದು.

**ಛಂದಃ**—**ರೇಭಃ, ಜರಿತಾ, ಕಾರುಃ** ಇತ್ಯಾದಿ **ಸ್ತೋತ್ರ** ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಇಲ್ಲಿ ಸ್ತುತಿಮಾಡುವವನು, ಅದರಲ್ಲೂ ಮುಖಸ್ತುತಿಮಾಡುವವನೆಂದರ್ಥ. ಧನವಂತನಲ್ಲಿ ಹೋಗಿ ಅವನನ್ನು ವಶಪಡಿಸಿಕೊಳ್ಳಲು ಅವನನ್ನು ಸ್ತುತಿಸುತ್ತಾ ಯಾವರೀತಿ ಈ ಸ್ತುತಿಪಾಠಕನು ಹಸನ್ಮುಖಿಯಾಗುತ್ತಾನೆಯೋ ಅದರಂತೆ ಉಷಸ್ಸೂ ಹಸನ್ಮುಖಿಯಾಗಿ ತನ್ನ ಕಾಂತಿಯನ್ನು ಬೀರುತ್ತಾಳೆಂದು ಒಂದರ್ಥವಾಗುತ್ತದೆ. ಅದಲ್ಲದೇ ಸ್ಕಂದಸ್ವಾಮಿಗಳು ಹೇಳುವಂತೆ **ಛದಿಸ್ತ್ಸದಿತಿ ಕಾಂತಿಕರ್ಮಸು ಪಾಠಾತ್ ಛಂದಶ್ಶಬ್ದಃ ಅತ್ರ ಕಾಮಿವಚನಃ ।** **ಛದತ್ಸತ್** ಎಂಬುದು ಕಾಂತಿಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩-೯ ) ಇಲ್ಲಿ ಛಂದಃ ಎನ್ನುವ ಪದಕ್ಕೆ ಕಾಮಿಯೆಂದು ಹೇಳಬಹುದು. ಕಾಮಿನಿಯೆಂದರೆ ಇನ್ನು ಹೆಚ್ಚಾಗಿ ಒಪ್ಪಿಕೊಳ್ಳುತ್ತದೆ. **ಯಥಾ ಕಾಮಿನೀ ಈಷದ್ಧಸಂತೀ ಸ್ವದಂತಕಿರಣಾನ್ ಪ್ರಕಾಶಯತಿ ಏವಮುಷಾಃ ಸ್ವಕಿರಣಾನಾವಿಷ್ಕರೋತಿ** ಕಾಮಿನಿಯು ನಸುನಗುತ್ತಾ ತನ್ನ ದಂತಕಿರಣಗಳನ್ನು ಪ್ರಕಾಶಪಡಿಸುವಂತೆ ಉಷಸ್ಸೂ ಸಹ ತನ್ನ ಕಿರಣಗಳನ್ನು ಪ್ರಕಾಶಪಡಿಸುತ್ತಾಳೆಂದರ್ಥ.

**ಸುಪ್ರತೀಕಾ**— **ಪ್ರತೀಕಶಬ್ದೋ ಮುಖವಚನಃ ದರ್ಶನಪರ್ಯಾಯೋ ವಾ । ಸುಮುಖಾ ಸುದರ್ಶನಾ ವಾ ।** ಪ್ರತೀಕವೆಂದರೆ ಮುಖವೆಂದಾಗಲಿ ಅಥವಾ ಕಾಣಿಸಿಕೊಳ್ಳುವುದೆಂದಾಗಲಿ ಅರ್ಥವಾಗುತ್ತದೆ. ಆದ್ದರಿಂದ ಇಲ್ಲಿ ಸುಂದರವಾದ ಮುಖವುಳ್ಳವಳೆಂದಾಗಲಿ ಅಥವಾ ಮನೋಹರವಾದ ರೂಪದರ್ಶನವುಳ್ಳವಳೆಂದಾಗಲಿ ಅರ್ಥವು. ಋಕ್ಸಂಹಿತೆಯ.—

**ಯಾವನ್ಮಾತ್ರಮುಷಸೋ ನ ಪ್ರತೀಕಂ ಸುಪರ್ಣ್ಯೋ೩ ವಸತೇ ಮಾತರಿಶ್ವಃ ।**
( ಋ. ಸಂ. ೧೦-೮೮-೧೯ )

ಎಂಬ ಋಕ್ಕಿನಲ್ಲಿಯೂ ಸಹ **ಪ್ರತೀಕ** ಶಬ್ದಕ್ಕೆ ಈ ವಿಧವಾದ ಅರ್ಥವನ್ನೇ ಹೇಳುತ್ತಾರೆ.

ಅಜೀಗಃ—ಈ ಶಬ್ದದ ನಿರ್ವಚನವನ್ನು ಮಾಡುವಾಗ ನಿರುಕ್ತಕಾರರು ಋಕ್ಸಂಹಿತೆಯ—

ಯದಾ ತೇ ಮರ್ತೋ ಅನು ಭೋಗಮಾನಳಾದಿದ್ಗ್ರಸಿಷ್ಠ ಓಷಧೀರಜೀಗಃ ।
( ಋ. ಸಂ. ೧-೧೬೩-೭ )

ಎಂಬ ಋಕ್ಕನ್ನು ಉವಹರಿಸಿ **ಜಿಗರ್ತಿರ್ಗಿರತಿಕರ್ಮಾ ವಾ ಗೃಣಾತಿಕರ್ಮಾ ವಾ ಗೃಹ್ಣಾತಿಕರ್ಮಾ ವಾ ।** ಎಂಬ ಮೂರು ಅರ್ಥಗಳನ್ನು ಹೇಳುತ್ತಾರೆ. ಎಂದರೆ ಭಕ್ಷಿಸು, ಅಥವಾ ಸ್ತುತಿಸು ಅಥವಾ ಹಿಡಿದುಕೊ ( ನಿ. ೬-೮ ) ಎಂಬರ್ಥಗಳಲ್ಲಿ ಯಾವುದಾದರೂ ಆಗಬಹುದೆನ್ನುತ್ತಾರೆ. ಆದರೆ ಮೇಲಿನ ಋಕ್ಕಿನಲ್ಲಿಯೂ ಪ್ರಕೃತವಾದ ಈ ಋಕ್ಕಿನಲ್ಲಿಯೂ ಸಹ ಅಜೀಗಃ ಎನ್ನುವುದಕ್ಕೆ **ಅಂಧಕಾರಂ ಭಕ್ಷಿತವತೀ ।** ಎಂದರೆ ಅಂಧಕಾರವನ್ನು ನುಂಗಿದಳು ಎಂದು ಸಾಯಣರೂ **ತ್ರೀನಪಿಲೋಕಾನ್ ಪ್ರತಿಗಚ್ಛತಿ ।** ಮೂರು ಲೋಕಗಳನ್ನೂ ಆಕ್ರಮಿಸುತ್ತಾಳೆ ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ಮಾಡುತ್ತಾರೆ.

### ವ್ಯಾಕರಣಪ್ರಕ್ರಿಯಾ

**ಅತಾರಿಷ್ಮ**—ತೄ ಪ್ಲವನತರಣಯೋಃ ಧಾತು. ಲುಙ್ ಉತ್ತಮಪುರುಷ ಬಹುವಚನದಲ್ಲಿ ಮಸ್‌ಪ್ರತ್ಯಯ **ನಿತ್ಯಂ ಙಿತಃ** ಎಂಬುದರಿಂದ ಸಕಾರಕ್ಕೆ ಲೋಪ. **ಚ್ಲಿ ಲುಙಿ** ಸೂತ್ರದಿಂದ ಪ್ರಾಪ್ತವಾದ ಚ್ಲಿಗೆ **ಚ್ಲೇಃ ಸಿಚ್** ಎಂಬುದರಿಂದ ಸಿಚ್ ಆದೇಶ. **ಸಿಚಿ ವೃದ್ಧಿಃ ಪರಸ್ಮೈಪದೇಷು** (ಪಾ. ಸೂ. ೭-೨-೧) ಎಂಬುದರಿಂದ ವೃದ್ಧಿ ರಪರವಾಗಿ ಬರುತ್ತದೆ. ಅಂಗಕ್ಕೆ ಅಡಾಗಮ. ಅತಾರಿಷ್ಮ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ತಮಸಃ**—ತಮಸಸ್+ಪಾರಂ ಎಂದಿರುವಾಗ **ಷಷ್ಠ್ಯಾಃಪತಿಪುತ್ರ**– (ಪಾ. ಸೂ. ೮-೩-೫೩) ಎಂಬುದ ರಿಂದ (ಸಕಾರಕ್ಕೆ ರುತ್ವವಿಸರ್ಗ ಬಂದಾಗ) ವಿಸರ್ಗಕ್ಕೆ ಸತ್ವ ಬರುತ್ತದೆ.

**ಕೃಣೋತಿ**—ಕೃವಿ ಹಿಂಸಾಯಾಂ ಧಾತು. ಲಟ್‌ಪ್ರಥಮಪುರುಷ ಏಕವಚನ ಪರವಾದಾಗ **ಧಿನ್ವಿ-ಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಶಪಿಗೆ ಉ ವಿಕರಣ. ಅಕಾರ ಅಂತಾದೇಶ. ಇದಿತ್ತಾದುದ ರಿಂದ ಧಾತುವಿಗೆ ನುಮಾಗಮ. ಕೃನ-ಉ-ತಿ ಎಂದಿರುವಾಗ **ಅತೋಲೋಪಃ**—ಎಂಬುದರಿಂದ ಉ ನಿಮಿತ್ತವಾಗಿ ಅಕಾರಲೋಪ. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಉಕಾರಕ್ಕೆ ತಿಪ್‌ನಿಮಿತ್ತವಾಗಿ ಗುಣ. ತಿಙಂತನಿಘಾತಸ್ವರ ಬರುತ್ತದೆ.

**ಶ್ರಿಯೇ**—ಚತುರ್ಥೀಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸ್ಮಯತೇ**—ಸ್ಮಿಙ್ ಈಷದ್ಧಸನೇ. ಧಾತು. ಭ್ವಾದಿ. ಲಟ್‌ಪ್ರಥಮಪುರುಷಏಕವಚನದಲ್ಲಿ ತಕ್ಕೆ **ಟಿತ-ಆತ್ಮನೇಪದಾನಾಮ್**—ಎಂಬುದರಿಂದ ಏತ್ವ. ಶಪ್‌ವಿಕರಣ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅಯಾದೇಶ. ತಿಙಂತ ನಿಘಾತಸ್ವರ ಬರುತ್ತದೆ.

**ಅಜೀಗಃ**—ಗೄ ನಿಗರಣೇ ಧಾತು. ಲಙ್ ಮಧ್ಯಮಪುರುಷಏಕವಚನದಲ್ಲಿ ಸಿಪ್. ಇಕಾರಲೋಪ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಸೂತ್ರದಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಗಕಾರಕ್ಕೆ ಜಕಾರಾದೇಶ. **ಬಹುಲಂ ಛಂದಸಿ**—ಎಂಬುದರಿಂದ ಅಭ್ಯಾಸಕ್ಕೆ ಇತ್ವ.

ತುಜಾದಿಯಲ್ಲಿ ಪಠಿತವಾಗಿರುವುದರಿಂದ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥

—————— :o: ——————

॥ ಸಂಹಿತಾಪಾಠಃ ॥

ಭಾಸ್ವತೀ ನೇತ್ರೀ ಸೂನೃತಾನಾಂ ದಿವಃ ಸ್ತವೇ ದುಹಿತಾ
ಗೋತಮೇಭಿಃ ।
ಪ್ರಜಾವತೋ ನೃವತೋ ಅಶ್ವಬುಧ್ಯಾನುಷೋ ಗೋಅಗ್ರಾ
ಉಪ ಮಾಸಿ ವಾಜಾನ್ ॥ ೭ ॥

ಪದಪಾಠಃ

ಭಾಸ್ವತೀ । ನೇತ್ರೀ । ಸೂನೃತಾನಾಂ । ದಿವಃ । ಸ್ತವೇ । ದುಹಿತಾ । ಗೋತಮೇಭಿಃ ।
ಪ್ರಜಾಽವತಃ । ನೃಽವತಃ । ಅಶ್ವಽಬುಧ್ಯಾನ್ । ಉಷಃ । ಗೋಽಅಗ್ರಾನ್ ।
ಉಪ । ಮಾಸಿ । ವಾಜಾನ್ ॥ ೭ ॥

ಸಾಯಣಭಾಷ್ಯಂ

ಭಾಸ್ವತೀ ತೇಜಸ್ವಿನೀ । ಸೂನೃತೇತಿ ವಾಙ್ನಾಮ । ಸೂನೃತಾನಾಂ ಪ್ರಿಯಸತ್ಯಾತ್ಮಿಕಾನಾಂ ನೇತ್ರೀ ಪ್ರಣೇತ್ರೀ ಕಾರಯಿತ್ರೀ । ಉಷಸಿ ಹಿ ಜಾತಾಯಾಂ ಮನುಷ್ಯಪ್ರಮುಖಾಃ ಪ್ರಾಣಿನಃ ಸ್ವಸ್ವವ್ಯಾಪಾರಾಯೇತಸ್ತತಃ ಶಬ್ದಂ ಕುರ್ವಂತಿ । ಏವಂಭೂತಾ ದಿವೋ ದುಹಿತಾ ದ್ಯುಲೋಕಸಕಾಶಾದುತ್ಪನ್ನೋಷಾ ಗೋತಮೇಭಿರ್ಋಷಿಭಿರಸ್ಮಾಭಿಃ ಸ್ತವೇ । ಸ್ತೂಯತೇ । ಹೇ ಉಷ ಅಸ್ಮಾಭಿಃ ಸ್ತುತಾ ತ್ವಂ ವಾಜಾನನ್ನಾನ್ಯುಪ ಮಾಸಿ । ಪ್ರಯಚ್ಛ । ಕೀದೃಶಾನ್ವಾಜಾನ್ । ಪ್ರಜಾವತಃ ಪ್ರಜಾಭಿಃ ಪುತ್ರಪೌತ್ರಾದಿಭಿರ್ಯುಕ್ತಾನ್

**ನೃವತೋ ದಾಸಲಕ್ಷಣೈರ್ನೃಭಿರುಪೇತಾನ್ ಅಶ್ವಬುಧ್ಯಾನ್ । ಅಶ್ವಾ ಬುಧ್ಯಾ ವಿದ್ಯಮಾನತ್ವೇನ ಬೋದ್ಧವ್ಯಾ ಯೇಷು ವಾಜೇಷು ತಾನ್ । ಯದ್ವಾ । ಅಶ್ವಬುಧ್ನಾನ್ । ವರ್ಣವ್ಯಾಪತ್ತ್ಯಾ ಯಕಾರಃ । ಅಶ್ವಮೂಲಾನ್ । ಅಶ್ವೈರ್ಹಿ ರಾಜಾನೋ ಧನಾನ್ಯನ್ನಾನಿ ಚ ಲಭಂತೇ । ಅತೋಽನ್ನಾನಾಂ ತನ್ಮೂಲತ್ವಂ । ಗೋಅಗ್ರಾನ್ । ಗಾವೋಽಗ್ರೇ ಪ್ರಮುಖೇ ಯೇಷಾಂ ತಾದೃಶಾನ್ ॥ ಭಾಸ್ವತೀ । ಭಾ ದೀಪ್ತೌ । ಅಸುನ್ । ತತೋ ಮತುಪ್ । ಮಾದುಪಧಾಯಾ ಇತಿ ಮತುಪೋ ವತ್ವಂ । ಉಗಿತಶ್ಚೇತಿ ಙೀಪ್ । ನೇತ್ರೀ । ಋನ್ನೇಭ್ಯೋ ಙೀಪ್ । ಉದಾತ್ತಯಣೋ ಹಲ್ಪೂರ್ವಾದಿತಿ ಙೀಪ ಉದಾತ್ತತ್ವಂ । ಸ್ತವೇ । ಷ್ಟುಞ್ ಸ್ತುತೌ । ಕರ್ಮಣಿ ಲಟಿ ಬಹುಲಂ ಛಂದಸೀತಿ ಬಹುಲಗ್ರಹಣಾದ್ಯಕೋಽಪಿ ಲುಕ್ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಛಂದಸ್ಯುಭಯಥೇತ್ಯೇಕಾರಸ್ಯಾರ್ಧಧಾತುಕತ್ವೇನ ಙಿತ್ತ್ವಾಭಾವಾದ್ಗುಣಾವಾದೇಶೌ । ನೃವತಃ । ವ್ಯತ್ಯಯೇನ ಮತೋರ್ವತ್ವಂ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಮಾಸಿ । ಮಾ ಮಾನೇ । ಆದಾದಿಕಃ ॥**

ಪ್ರತಿಪದಾರ್ಥ

**ಭಾಸ್ವತೀ**—ತೇಜಸ್ವಿನಿಯೂ । **ಸೂನೃತಾನಾಂ**—ಪ್ರಿಯವಾದುವೂ ಸತ್ಯಾತ್ಮಿಕವಾದವೂ ಆದ ವಾಗ್ವ್ಯವಹಾರಗಳಿಗೆ । **ನೇತ್ರೀ**— ಕಾರಣಭೂತಳೂ ಆದ । **ದಿವಃ ದುಹಿತಾ** – ದ್ಯುಲೋಕದ ಪುತ್ರಿಯಾದ ಉಷೋದೇವಿಯು । **ಗೋತಮೇಭಿಃ**— ಗೋತಮ ವಂಶದಲ್ಲಿ ಹುಟ್ಟಿದ ನಮ್ಮಿಂದ । **ಸ್ತವೇ**—ಸ್ತುತಿಸಲ್ಪಡುತ್ತಾಳೆ । **ಉಷಃ**—ಎಲೈ ಉಷೋದೇವಿಯೇ । **ಪ್ರಜಾವತಃ**— ಸಂತಾನಗಳಿಂದ ಕೂಡಿದವೂ । **ನೃವತಃ**— ಭೃತ್ಯಾದಿ ಜನರಿಂದ ಕೂಡಿದವೂ । **ಅಶ್ವಬುಧ್ಯಾನ್**—ಕುದುರೆಗಳಿಂದ ವಿಶಿಷ್ಟವಾದವೂ । **ಗೋಅಗ್ರಾನ್**—ಹಸುಗಳಿಂದ ತುಂಬಿದವೂ ಆದ । **ವಾಜಾನ್**—ಅನ್ನಗಳನ್ನು । **ಉಪ ಮಾಸಿ**—ಅನುಗ್ರಹಿಸಿ ಕೊಡು ॥

ಭಾವಾರ್ಥ

ತೇಜಸ್ವಿನಿಯೂ, ಪ್ರಿಯಸತ್ಯಾತ್ಮಿಕಗಳಾದ ವಾಗ್ವ್ಯವಹಾರಗಳಿಗೆ ಕಾರಣಭೂತಳೂ, ಮತ್ತು ದ್ಯುಲೋಕದಿಂದ ಉತ್ಪನ್ನಳಾದಳೂ ಆದ ಉಷೋದೇವಿಯನ್ನು ಗೋತಮವಂಶೋತ್ಪನ್ನರಾದ ನಾವು ಸ್ತುತಿಸುತ್ತೇವೆ. ಎಲೈ ಉಷೋದೇವಿಯೇ, ಸಂತಾನಗಳಿಂದ ಕೂಡಿದವೂ,ಭೃತ್ಯಾದಿ ಜನರಿಂದ ಕೂಡಿದವೂ, ಕುದುರೆಗಳಿಂದ ವಿಶಿಷ್ಟವಾದವೂ ಮತ್ತು ಗೋವುಗಳಿಂದ ತುಂಬಿದವೂ ಆದ ಅನ್ನಗಳನ್ನು ನಮಗೆ ಅನುಗ್ರಹಿಸಿಕೊಡು.

English Translation

The brilliant daughter of the sky, the exciter of pleasant voices, is praised by the descendants of Gotama. Ushas, grant us food associated with progeny and dependants and distinguished by horses and cattle.

ವಿಶೇಷವಿಷಯಗಳು

**ಸೂನೃತಾನಾಂ ನೇತ್ರೀ**—ಸೂನೃತಾ, ಸೂನೃತಾವತೀ, ಸೂನೃತಾವರೀ ಇತ್ಯಾದಿಗಳೆಲ್ಲವೂ ಉಷಸ್ಸಿನ ವಿಶೇಷಣಗಳು ಅಥವಾ ಪರ್ಯಾಯ ಪದಗಳು ( ನಿ. ೨-೧೯ ). **ಸೂನೃತೇತಿ ವಾಙ್‌ನಾಮ । ನೇತ್ರೀ ಉತ್ಪಾದ-**

ಯಿತ್ರೀ । ಉಷಸಃ ಪ್ರಾದುರ್ಭಾವಾನಂತರಂ ಹಿ ಪಶುಪಕ್ಷಿಮೃಗಾದಯಃ ಸರ್ವೇ ಶಬ್ದಂ ಕುರ್ವಂತಿ । ಅತಸ್ಸೈವ ತಾಸಾಂ ವಾಚಾಂ ಪ್ರವರ್ತಯಿತ್ರೀತ್ಯುಚ್ಯತೇ । ಎಂದರೆ **ಸೂನೃತ**ವೆಂಬ ಪದವು ಸಮಸ್ತವಾಗ್ವ್ಯವಹಾರಗಳೆಲ್ಲಕ್ಕೂ ಅನ್ವಯಿಸುತ್ತದೆ. ಉಷಸ್ಸಿನ ಉದಯದ ಅನಂತರವೇ ಸಮಸ್ತ ಪಶುಪಕ್ಷ್ಯಾದಿಗಳ ವಾಗ್ವ್ಯವಹಾರವೆಲ್ಲವೂ ಪ್ರವರ್ತಿಸುವುದರಿಂದ ಉಷಸ್ಸೇ ಅವೆಲ್ಲಕ್ಕೂ ಉತ್ಪಾದಕಳು ಎಂದರ್ಥ. ಈ ವಿಶೇಷಣವನ್ನು ಕುತ್ಸರೂ ವಸಿಷ್ಠರೂ ತಮ್ಮ ಶ್ರುತಿಗಳಲ್ಲೂ ಸಹ ವಿಶೇಷವಾಗಿ ಉಪಯೋಗಿಸುತ್ತಾರೆ. ಉದಾಹರಣೆಗೆ--

**ಭಾಸ್ವತೀ ನೇತ್ರೀ ಸೂನೃತಾನಾಮಚೇತಿ ಚಿತ್ರಾ ವಿ ದುರೋ ನ ಆವಃ ।**
( ಋ. ಸಂ. ೧-೧೧೩-೪ )

**ಏಷಾ ನೇತ್ರೀ ರಾಧಸಃ ಸೂನೃತಾನಾಮುಷಾ ಉಚ್ಛಂತೀ ರಿಭ್ಯತೇ ವಸಿಷ್ಠೈಃ ।**
( ಋ. ಸಂ. ೭-೭೬-೭ )

ಕೆಲವು ಸ್ಥಳಗಳಲ್ಲಿ **ಸೂನೃತಾನಾಂ** ಎಂಬ ಪದಕ್ಕೆ ಸಾಯಣರು **ಸ್ತುತೀನಾಂ** ಎಂದರೆ ಸ್ತೋತ್ರಗಳ **ನೇತ್ರೀ** ಎಂದೂ ವ್ಯಾಖ್ಯಾನಮಾಡಿರುವರು.

**ಗೋತಮೇಭಿಃ**—ಎನ್ನುವುದಕ್ಕೆ ಸಾಯಣರು **ಋಷಿಭಿರಸ್ಮಾಭಿಃ ।** ಎಂದರೆ ಋಷಿಗಳಾದ ನಮ್ಮಿಂದ ಎಂದೂ, ಸ್ಕಂದಸ್ವಾಮಿಗಳು **ಏಕಸ್ಮಿನ್ನೇವ ಬಹುವಚನಂ । ಗೋತಮೇನ ಮಯಾ ।** ಅಂದರೆ ಏಕವಚನಕ್ಕೆ ಬಹುವಚನದ ಪ್ರಯೋಗವಿರುವುದೆಂದೂ ಗೋತಮನಾದ ನನ್ನಿಂದ ಎಂದೂ ವಿವರಿಸುತ್ತಾರೆ.

**ಅಶ್ವಬುಧ್ಯಾನ್**— ಈ ವಿಶೇಷಣಕ್ಕೆ ಎರಡು ವಿಧವಾಗಿ ಅರ್ಥಮಾಡಬಹುದು. **ಅಶ್ವೈರ್ಯೇ ಬೋಧ್ಯಂತೇ ತೇ ಅಶ್ವಬುಧ್ಯಾಃ ತಾನ್ ।** ಅಶ್ವಗಳ ವಿದ್ಯಮಾನದಿಂದ ತಿಳಿಯಬಹುದಾದ ಐಶ್ವರ್ಯ ಅಥವಾ ಅನ್ನ ಎಂಬ ವಿವರಣೆಯಿಂದ ಪ್ರಭೂತವಾದ ಅಶ್ವಗಳಿಂದ ಕೂಡಿದುದು ಎಂಬುದಾಗಿಯೂ ಅಥವಾ ಸಾಯಣರು ಹೇಳುವಂತೆಃ **ಅಶ್ವಬುಧ್ನಾನ್** ಎನ್ನುವ ಪದವು ವರ್ಣವ್ಯಾಪತ್ತಿಯಿಂದ **ನಕಾರ**ಕ್ಕೆ ಬದಲಾಗಿ **ಯಕಾರ**ವು ಬಂದು **ಅಶ್ವಬುಧ್ಯಾನ್** ಎಂಬುದಾಗಿದೆಯಾಗಿ ಇದಕ್ಕೆ ಅರ್ಥವು ಅಶ್ವಗಳೇ ಮೂಲವಾಗಿ ಉಳ್ಳ ಅನ್ನವೆಂದೂ ಆಗಬಹುದು. ಎರಡನೆಯ ಅರ್ಥವನ್ನು ಹೇಳಿದರೆ, ರಾಜರುಗಳೆಲ್ಲಾ ಅಶ್ವಗಳ ಸಹಾಯದಿಂದಲೇ ಧನಗಳನ್ನೂ, ಅನ್ನಗಳನ್ನೂ ಹೊಂದುವುದರಿಂದಲೂ **ಅಶ್ವಬುಧ್ಯಾನ್** ಎಂದಾಗಿದೆ. ಋಕ್ಸಂಹಿತೆಯ ೧-೧೨೧-೧೪ನೆಯ ಋಕ್ಕಿನಲ್ಲಿ ಬರುವ ಈ ಪದಕ್ಕೂ ಈ ವಿಧವಾದ ಎರಡು ಅರ್ಥಗಳನ್ನು ಮಾಡುತ್ತಾರೆ.

ವ್ಯಾಕರಣಪ್ರಕ್ರಿಯಾ

**ಭಾಸ್ವತೀ**—ಭಾ ದೀಪ್ತೌ ಧಾತು. ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ. ಭಾಃ ಅಸ್ಯಾಃ ಅಸ್ತಿ ಇತಿ ಭಾಸ್ವತೀ. **ತದಸ್ಯಾಸ್ತ್ಯ**—ಎಂಬುದರಿಂದ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ. **ಉಗಿತಶ್ಚ**—ಎಂಬುದರಿಂದ ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್.

**ನೇತ್ರೀ**—ಣೀಞ್ ಪ್ರಾಪಣೇ. ಧಾತು. ಕರ್ತ್ರರ್ಥದಲ್ಲಿ ತೃಚ್ ಪ್ರತ್ಯಯ. ನೇತೃಶಬ್ದವಾಗುತ್ತದೆ. ಸ್ತ್ರೀತ್ವದಲ್ಲಿ ಋದಂತವಾದುದರಿಂದ **ಋನ್ನೇಭ್ಯೋ ಙೀಪ್**—ಎಂಬುದರಿಂದ ಙೀಪ್ ಪ್ರತ್ಯಯ. ಯಣಾದೇಶ.

ಋಕಾರವು **ಚಿತಃ**—ಎಂಬುದರಿಂದ ಉದಾತ್ತವಾದುದರಿಂದ ಅದಕ್ಕೆ ಯಣಾದೇಶ ಬಂದು ಅದರ ಪರದಲ್ಲಿ ಜಸ್—ಎಂಬುದರಿಂದ **ಉದಾತ್ತಯಣೋ**—(ಪಾ.ಸೂ.೬-೧-೧೭೪) ಎಂಬುದರಿಂದ ಜಸಿಗೆ ಉದಾತ್ತಸ್ವರ ಬರುತ್ತದೆ.

**ಸ್ತವೇ**—ಷ್ಟುಞ್ ಸ್ತುತೌ ಧಾತು. ಕರ್ಮಣಿ ಲಟ್‌ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. **ಬಹುಲಂ ಛಂದಸಿ**—ಎಂಬಲ್ಲಿ ಬಹುಲಗ್ರಹಣದಿಂದ ಕರ್ಮಣಿಯಲ್ಲಿ ಪ್ರಾಪ್ತವಾದ ಯಕಿಗೆ ಲುಕ್. **ಲೋಪಸ್ತ ಆತ್ಮನೇಪದೇಷು**-(ಪಾ. ಸೂ. ೭-೧-೪೧) ಎಂಬುದರಿಂದ ವಿಭಕ್ತಿಯ ತಕಾರಕ್ಕೆ ಲೋಪ. ಏಕಾರ ಉಳಿಯುತ್ತದೆ. **ಛಂದಸ್ಯುಭಯಥಾ**—ಎಂಬುದರಿಂದ ಏಕಾರಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಸಾರ್ವಧಾತುಕಮಪಿತ್**—ಎಂಬುದರಿಂದ ಙಿತ್ವ ಬರುವುದಿಲ್ಲ. ಆದುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ಅವಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಗೋತಮೇಭಿಃ**—ಗೋತಮ ಶಬ್ದಕ್ಕೆ ತೃತೀಯಾಬಹುವಚನ ಭಿಸ್ ಪರವಾದಾಗ **ಬಹುಲಂ ಛಂದಸಿ**—ಎಂಬುದರಿಂದ ಭಿಸಿಗೆ ಐಸಾದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್**—ಎಂಬುದರಿಂದ ಏತ್ವ.

**ನೃವತಃ**—ನಾ ಅಸ್ಯ ಅಸ್ತಿ ಎಂಬರ್ಥದಲ್ಲಿ ನೃಶಬ್ದಕ್ಕೆ ಮತುಪ್‌ಪ್ರತ್ಯಯ. ನಿಮಿತ್ತವಿಲ್ಲದಿದ್ದರೂ ವ್ಯತ್ಯಯದಿಂದ ಮತುಪಿನ ಮಕಾರಕ್ಕೆ ವತ್ವ. ದ್ವಿತೀಯಾಬಹುವಚನಾಂತರೂಪ. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಮಾಸಿ**—ಮಾ ಮಾನೇ ಧಾತು. ಅದಾದಿ. ಲಟ್ ಮಧ್ಯಮಪುರುಷಏಕವಚನರೂಪ. ಶಪಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ. ॥ ೭ ॥



ಸಂಹಿತಾಪಾಠಃ

ಉಷಸ್ತಮಶ್ಯಾಂ ಯಶಸಂ ಸುವೀರಂ ದಾಸಪ್ರವರ್ಗಂ ರಯಿ-
ಮಶ್ವಬುಧ್ಯಂ ।
ಸುದಂಸಸಾ ಶ್ರವಸಾ ಯಾ ವಿಭಾಸಿ ವಾಜಪ್ರಸೂತಾ ಸುಭಗೇ
ಬೃಹಂತಂ ॥ ೮ ॥

ಪದಪಾಠಃ

ಉಷಃ । ತಂ । ಅಶ್ಯಾಂ । ಯಶಸಂ । ಸುऽವೀರಂ । ದಾಸऽಪ್ರವರ್ಗಂ । ರಯಿಂ ।
ಅಶ್ವऽಬುಧ್ಯಂ ।
ಸುऽದಂಸಸಾ । ಶ್ರವಸಾ । ಯಾ । ವಿऽಭಾಸಿ । ವಾಜऽಪ್ರಸೂತಾ । ಸುऽಭಗೇ ।
ಬೃಹಂತಂ ॥ ೮ ॥

ಸಾಯಣಭಾಷ್ಯಂ

ಹೇ ಉಷ ಉಷೋದೇವತೇ ತಂ ರಯಿಂ ಧನಮಶ್ಯಾಂ । ಪ್ರಾಪ್ನುಯಾಂ । ಕೀದೃಶಂ । ಯಶಸಂ ಯಶಸಾ ಕೀರ್ತ್ಯಾ ಯುಕ್ತಂ । ಸರ್ವೈಃ ಪ್ರಶಸ್ಯಮಿತ್ಯರ್ಥಃ । ಸುವೀರಂ ಶೋಭನೈರ್ವೀರೈಃ ಪುತ್ರಾದಿಭಿರ್ಯುಕ್ತಂ ದಾಸಪ್ರವರ್ಗಂ । ಪ್ರಕೃಷ್ಟೋ ವರ್ಗಃ ಸಂಘಃ ಪ್ರವರ್ಗಃ । ದಾಸಾನಾಂ ಕರ್ಮಕರಾಣಾಂ ಪ್ರವರ್ಗೋ ಯಸ್ಮಿನ್ ತಂ । ಅನೇಕೈರ್ಭೃತ್ಯೈರುಪೇತಮಿತ್ಯರ್ಥಃ । ಅಶ್ವಬುಧ್ಯಂ । ಅಶ್ವಾ ಬುಧ್ಯಾ ಬೋದ್ಧವ್ಯಾ ಯೇನ ಧನೇನ ತಾದೃಶಂ । ಹೇ ಸುಭಗೇ ಶೋಭನಧನ ಉಷಃ ಸುದಂಸಸಾ ಶೋಭನೇನ ಕರ್ಮಣಾ ಯುಕ್ತೇನ ಶ್ರವಸಾ ಶ್ರವಣೀಯೇನ ಸ್ತೋತ್ರೇಣ ಪ್ರೀತಾ ತ್ವಂ ವಾಜಪ್ರಸೂತಾಸ್ಮಭ್ಯಂ ದತ್ತಾನ್ನಾ ಸತೀ ಬೃಹಂತಂ ಪ್ರೌಢಂ ಯಾ ಯಂ ರಯಿಂ ವಿಭಾಸಿ ವಿಶೇಷೇಣ ಪ್ರಕಾಶಯಸಿ । ತಮಶ್ಯಾಮಿತಿ ಪೂರ್ವೇಣ ಸಂಬಂಧಃ ॥ ಅಶ್ಯಾಂ । ಅಶೂ ವ್ಯಾಪ್ತೌ । ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಯಶಸಂ । ಅರ್ಶಆದಿತ್ವಾನ್ಮತ್ವರ್ಥೀಯೋऽಚ್ । ವ್ಯತ್ಯಯೇನ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ದಾಸಪ್ರವರ್ಗಂ । ದಾಸಯುತ್ಯುಪಕ್ಷಪಯತಿ ಶತ್ರೂನಿತಿ ದಾಸೋ ಭೃತ್ಯಃ । ದಸು ಉಪಕ್ಷಯೇ । ಅಸ್ಮಾಣ್ಣ್ಯಂತಾತ್ಪಚಾದ್ಯಚ್ । ಚಿತ್ತ್ವಾದಂತೋದಾತ್ತತ್ವಂ । ತದೇವ ಬಹುವ್ರೀಹಿಸ್ವರೇಣ ಶಿಷ್ಯತೇ । ಸುದಂಸಸಾ । ಸೋರ್ಮನಸೀ ಅಲೋಮೋಷಸೀ ಇತಿ ಬಹುವ್ರೀಹಾವುತ್ತರಪದಾದ್ಯುದಾತ್ತತ್ವಂ । ಯಾ । ಸುಪಾಂ ಸುಲುಗಿತ್ಯಯೋ ಡಾದೇಶಃ ॥

ಪ್ರತಿಪದಾರ್ಥ

**ಉಷಃ**—ಎಲೈ ಉಷೋದೇವಿಯೇ । **ಯಶಸಂ**—(ಎಲ್ಲರಿಂದಲೂ) ಹೊಗಳಲ್ಪಡುವುದೂ । **ಸುವೀರಂ**—ಶ್ರೇಷ್ಠರಾದ ಪುತ್ರರೊಂದಿಗೆ ಕೂಡಿದುದೂ । **ದಾಸಪ್ರವರ್ಗಂ**—ಉತ್ತಮರಾದ ಭೃತ್ಯರ ಗುಂಪಿನಿಂದ ಕೂಡಿದುದೂ । **ಅಶ್ವಬುಧ್ಯಂ**—ಕುದುರೆಗಳಿಂದ ವಿಶಿಷ್ಟವಾದುದೂ ಆದ । **ತಂ ರಯಿಂ**—ಪ್ರಸಿದ್ಧವಾದ ಆ ಧನವನ್ನು । **ಅಶ್ಯಾಂ**—ನಾನು ಅನುಭವಿಸುವಂತಾಗಲಿ । **ಸುಭಗೇ**—ಅಪೌರ್ವವಾದ ಧನವುಳ್ಳ ಉಷೋದೇವಿಯೇ । **ಸುದಂಸಸಾ**—ಪವಿತ್ರಗಳಾದ ಕರ್ಮಗಳಿಂದ ಕೂಡಿದ । **ಶ್ರವಸಾ**—ಸ್ತೋತ್ರದಿಂದ (ತೃಪ್ತಳಾದ ನೀನು) । **ವಾಜಪ್ರಸೂತಾ**—ನಮಗೆ

ಅನ್ನವನ್ನು ಕೊಡುತ್ತಾ । **ಬೃಹಂತಂ**—ಪ್ರೌಢಿಮೆಯನ್ನು ಹೊಂದಿದ । **ಯೊ**—ಯಾವ ಧನವನ್ನು । **ವಿಭಾಸಿ**—ಪ್ರಕಾಶಗೊಳಿಸುತ್ತೀಯೋ ( ಆ ಧನವನ್ನು ನಾನು ಅನುಭವಿಸುವಂತಾಗಲಿ ).

॥ ಭಾವಾರ್ಥ ॥

ಅಮೌಲ್ಯವಾದ ಧನವುಳ್ಳ ಎಲೈ ಉಷೋ ದೇವಿಯೇ, ನಮ್ಮ ಪವಿತ್ರಗಳಾದ ಕರ್ಮಗಳಿಂದ ಕೂಡಿದ ಸ್ತೋತ್ರಗಳಿಂದ ನೀನು ತೃಪ್ತಳಾಗಿ ನಮಗೆ ಅನ್ನವನ್ನು ಕೊಡುತ್ತಾ ಪ್ರೌಢಿಮೆಯನ್ನು ಪಡೆದ ನಿನ್ನ ಧನವನ್ನು ಪ್ರಕಾಶಪಡಿಸುತ್ತೀಯೆ. ಎಲ್ಲರಿಂದಲೂ ಹೊಗಳಲ್ಪಡುವುದೂ, ನಮಗೆ ಕೀರ್ತಿ ತರುವುದೂ, ಶ್ರೇಷ್ಠರಾದ ಪುತ್ರರೊಂದಿಗೆ ಕೂಡಿದುದೂ, ಕುದುರೆಗಳಿಂದ ವಿಶಿಷ್ಟವಾದುದೂ ಆದ ಪ್ರಸಿದ್ಧವಾದ ಆ ಧನವನ್ನು ನಾನು ಅನುಭವಿಸುವಂತಾಗಲಿ.

## English Translation

May I obtain, Ushas, that ample wealth which confers fame, posterity, troops of servants and is accompanied with horses ; you abound in riches and are the giver of food ; you display them when gratified by hymns and holy Sacrifices.

ವಿಶೇಷ ವಿಷಯಗಳು

**ಯಶಸಂ—ಯಶಸಾ ಕೀರ್ತ್ಯಾ ಯುಕ್ತಂ । ಸರ್ವೈಃ ಪ್ರಶಸ್ಯಂ ।** ಕೀರ್ತಿಯಿಂದ ಕೂಡಿದುದು ಎಂದರೆ ಸಕಲರಿಂದಲೂ ಹೊಗಳಲ್ಪಡುವುದು ಎಂದು ಸಾಯಣರೂ, **ಅಂಧಃ, ವಾಜಃ, ಪಯಃ** ಇತ್ಯಾದಿ **ಅನ್ನ** ನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩-೯ ) **ಯಶಸ್ವಂತಂ । ಅನ್ನೇನ ಸಹಿತಂ ।** ಅನ್ನದೊಡನೆ ಕೂಡಿರುವುದು ಎಂದು ಸ್ಕಂದಸ್ವಾಮಿಗಳೂ ವಿವರಿಸುತ್ತಾರೆ.

**ಸುವೀರಂ— ಶೋಭನೈರ್ವೀರೈಃ ಪುತ್ರೈಃ ಸಹಿತಂ ।** ಶ್ರೇಷ್ಠರೂ ವೀರರೂ ಆದ ಪುತ್ರರೊಡನೆ ಕೂಡಿದುದು.

**ದಾಸಪ್ರವರ್ಗಂ—ದಾಸೋ ದಸ್ಯತೇರುಪದಾಸಯತಿ ಕರ್ಮಾಣಿ ।** (ನಿ. ೨-೧೭) ಮುಗಿಸು, ತೀರಿಸು ಎಂದು ಅರ್ಥವನ್ನು ಕೊಡುವ **ದಸ್** ಧಾತುವಿನಿಂದ ದಾಸನೆಂದಾಗಿದೆ. ಕೃಷ್ಯಾದಿ ಕೆಲಸಗಳನ್ನೆಲ್ಲಾ ಪೂರ್ಣವಾಗಿ ಮಾಡಿ ತೀರಿಸುವವನೆಂದರ್ಥ; ಸೇವಕನು, ಪರಿಚಾರಕನು ಎಂದಾಗುತ್ತದೆ. **ಪ್ರವರ್ಗ**ವೆಂದರೆ **ಪ್ರಕೃಷ್ಟೋ ವರ್ಗಃ ಸಂಘಃ ।** ಶ್ರೇಷ್ಠವಾದ ಗುಂಪು, ಎಂದರೆ ಯಜಮಾನನ ಕೆಲಸಗಳನ್ನು ಮಾಡುವುದರಲ್ಲಿ ಅತ್ಯಂತ ಶಕ್ತರಾದವರ ಗುಂಪು. ಇಂತಹ ಕಾರ್ಯಕುಶಲರಾದ ದಾಸರ ಸಮೂಹವುಳ್ಳದ್ದು. **ದಾಸ** ಶಬ್ದಕ್ಕೆ ರಾಕ್ಷಸ ಎಂಬ ಅರ್ಥದಲ್ಲೂ ಪ್ರಯೋಗವುಂಟೆಂಬುದನ್ನು **ದಾಸಪತ್ನೀಃ** ( ಋ. ಸಂ. ೩-೧೨-೬ ) ಎಂಬ ಪದವು ಇರುವ ಋಕ್ಕಿನಲ್ಲಿ ನೋಡಿ ತಿಳಿಯಬಹುದು.

**ಅಶ್ವಬುಧ್ಯಂ**—ಈ ಪದದ ವಿವರಣೆಯನ್ನು ಇದೇ ಸೂಕ್ತದ ೭ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ಮಾಡಲಾಗಿದೆ. ಅಶ್ವಗಳಿಂದ ಗುರ್ತಿಸಬಹುದಾದುದು ಎಂದರೆ ಬಹುಸಂಖ್ಯಾಕವಾದ ಅಶ್ವಗಳುಳ್ಳದ್ದು.

**ಸುಭಗೇ**—**ಮಘಂ, ರೇಕ್ಣಃ, ರಿಕ್ಥಂ** ಇತ್ಯಾದಿ **ಧನ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ.೨-೧೦) **ಸುಭಗ**ವೆಂದರೆ ಶ್ರೇಷ್ಠವಾದ ಧನವೆಂದರ್ಥ. **ಸುಭಗೇ** ಎಂದರೆ ಶ್ರೇಷ್ಠವಾದ ಧನವುಳ್ಳವಳೇ ಎಂಬ ಸಂಬೋಧನೆ

**ಸುದಂಸಸಾ**—**ಅಪಃ, ಅಪ್ನಃ ದಂಸಃ** ಇತ್ಯಾದಿ ಇಪ್ಪತ್ತಾರು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೨-೧ ) ದಂಸಃ ಎಂದರೆ ಕರ್ಮವೆಂದರ್ಥ. **ಸುದಂಸಸಾ** ಎಂದರೆ **ಶೋಭನೇನ ಕರ್ಮಣಾ ।** ಶ್ರೇಷ್ಠವಾದ ಕರ್ಮದಿಂದ ಎಂದಾಗುತ್ತದೆ. ಇಂದ್ರ, ಅಶ್ವಿನೀದೇವತೆಗಳು ಇತ್ಯಾದಿ ದೇವತೆಗಳ ವಿಷಯದಲ್ಲಿ ಹೇಳುವಂತೆ ಉಷಸ್ಸೂ ಸಹ ಅಗ್ನಿಷ್ಟೋಮಾದಿ ಕರ್ಮಯುಕ್ತಳು ಅಥವಾ ಕರ್ಮಸಹಾಯಕಳು ಎಂದು ಅನೇಕಕಡೆ ವರ್ಣಿಸಿದೆ. ಉದಾಹರಣೆಗೆ—

**ಸ್ವ೧ ರ್ಜನಂತೀ ಸುಭಗಾ ಸುದಂಸಾ ಆಂತಾದ್ದಿವಃ ಪಪ್ರಥ ಆ ಪೃಥಿವ್ಯಾಃ ।**
( ಋ. ಸಂ. ೩-೬೧-೪ )

ಎಂಬ ಋಕ್ಕಿನಲ್ಲಿ ಇರುವ **ಸುದಂಸಾಃ** ಎಂಬ ಶಬ್ದಕ್ಕೆ **ಶೋಭನಾಗ್ನಿಹೋತ್ರಕರ್ಮಾ**। ಉತ್ತಮವಾದ ಅಗ್ನಿಹೋತ್ರ ಕರ್ಮಕರ್ತಳು ಎಂದರ್ಥ. ಅದರಂತೆಯೇ ಇಲ್ಲಿಯೂ ಕರ್ಮಯುಕ್ತಳು ಎಂದಾಗುತ್ತದೆ.

**ಶ್ರವಸಾ**—**ಶ್ರವಃಶಬ್ದಃ ಕೀರ್ತಿಪರ್ಯಾಯಃ ।** ಎಂದು ಸ್ಕಂದಸ್ವಾಮಿಗಳು **ಶ್ರವಸ್** ಶಬ್ದಕ್ಕೆ ಕೀರ್ತಿ ಯೆಂದು ಅರ್ಥಮಾಡುತ್ತಾರೆ. ಆಗ ಅನ್ವಯವು **ಅತಿಶಯವತ್ಕರ್ಮನಿಮಿತ್ತಕೀರ್ತ್ಯರ್ಥಂ ।** ಎಂದರೆ ಅತಿಶಯ ವಾದ ಕರ್ಮನಿಮಿತ್ತವಾಗಿ ಲಭಿಸತಕ್ಕ ಕೀರ್ತಿಯೆಂದಾಗುತ್ತದೆ.

**ಸುದಂಸಸಾ ಶ್ರವಸಾ**—ಮೇಲೆ ಹೇಳಿದ ಅರ್ಥವಲ್ಲದೇ ಸ್ಕಂದಸ್ವಾಮಿಗಳು ಇನ್ನೂ ಒಂದು ವಿಧವಾಗಿ ಅನ್ವಯಮಾಡಿ ಅರ್ಥವನ್ನು ವಿವರಿಸುತ್ತಾರೆ. ಅದರ ಪ್ರಕಾರ **ದಸಿ ದಂಶದರ್ಶನಯೋರಿತ್ಯಸ್ಯ ದಂಸಶಬ್ದೋ ದರ್ಶನವಚನಃ । ಶ್ರವಃಶಬ್ದೋಽಪಿ ಜ್ಯೋತಿರ್ವಚನಃ । ಸುದರ್ಶನೇನ ಜ್ಯೋತಿಷಾ ವಾ ।** ಎಂದರೆ ದರ್ಶನವೆಂಬ ಅರ್ಥದಲ್ಲಿ **ದಂಸ** ಶಬ್ದವೂ ಜ್ಯೋತಿಯೆಂಬ ಅರ್ಥದಲ್ಲಿ **ಶ್ರವಃ**ಶಬ್ದವೂ ಉಪಯುಕ್ತವಾಗಿ ಮನೋಹರವಾದ ಕಾಂತಿಯಿಂದ ಕೂಡಿದವಳು ಎಂದಾಗುತ್ತದೆ. ಸಾಯಣರು, **ಶೋಭನೇನ ಕರ್ಮಣಾ ಯುಕ್ತೇನ ಶ್ರವಣೀಯೇನ ಸ್ತೋತ್ರೇಣ ಪ್ರೀತಾ ತ್ವಂ ।** ಎಂದರೆ ಪವಿತ್ರವಾದ ಕರ್ಮದಿಂದ ಕೂಡಿದ ಸ್ತೋತ್ರ ದಿಂದ ತೃಪ್ತಳಾದ ನೀನು ಎಂದು ಅರ್ಥವನ್ನು ಹೇಳುತ್ತಾರೆ.

**ವಾಜಪ್ರಸೂತಾ**—ಹವಿಸ್ಸಿನ ರೂಪದ ಅನ್ನದಿಂದ ಪ್ರೇರಿತಳಾಗಿ ಅಥವಾ ಅನ್ನವನ್ನು ಕೊಡುವವಳಾಗಿ ಎಂದರ್ಥ. ಸಾಯಣರು ಈ ಪದಕ್ಕೆ **ದತ್ತಾನ್ನಾಸತೀ ।** ಎಂದರೆ ನಮಗೆ ಅನ್ನದಾತಳಾಗಿ ಎಂದು ಈ ಋಕ್ಕಿನಲ್ಲಿ ವಿವರಿಸುತ್ತಾರೆ. ಹಿಂದೆ ಋ. ಸಂ. ೧-೭೭-೪ ನೇ ಋಕ್ಕಿನಲ್ಲಿ ಪ್ರಯೋಗಿಸಿರುವ ಇದೇ ಸಮಾಸಕ್ಕೆ (ಸ್ಕಂದ ಸ್ವಾಮಿಗಳು ಈ ಋಕ್ಕಿನಲ್ಲಿ ಮಾಡಿರುವಂತೆ) **ಪ್ರಸೂತಂ** ಎನ್ನುವುದಕ್ಕೆ **ಪ್ರೇರಿತಂ** ಎಂದೂ, **ಪ್ರೇರಿತಂ ಹವಿರ್ಲಕ್ಷಣಮನ್ನಂ ಯೈಃ** ಎಂದು ಸಮಸ್ತಪದಕ್ಕೂ ಅರ್ಥಮಾಡುತ್ತಾರೆ. ಅದರಂತೆಯೇ ಇಲ್ಲಿಯೂ ಮಾಡಿದರೆ ಹವಿ ಸ್ಸಿನ ರೂಪದ ಅನ್ನದಿಂದ ಪ್ರೇರಿತಳಾಗಿ ಎಂದು ಸ್ಕಂದಸ್ವಾಮಿಗಳು ವಿವರಿಸುವಂತೆಯೇ ಆಗುತ್ತದೆ.

ವ್ಯಾಕರಣಪ್ರಕ್ರಿಯಾ

**ಅಶ್ಯಾಮ್**—ಅಶೂ ವ್ಯಾಪ್ತೌ. ಧಾತು. ವಿಧಿಲಿಙ್ ಉತ್ತಮಪುರುಷದಲ್ಲಿ ಮಿಪ್ ಪ್ರತ್ಯಯ. **ತಸ್ ಥಸ್ ಥಮಿಪಾಮ್**—ಎಂಬುದರಿಂದ ಅದಕ್ಕೆ ಅಮಾದೇಶ. ಇದು ಆತ್ಮನೇಪದಿಯಾದರೂ **ವ್ಯತ್ಯಯೋ ಬಹು**-

**ಲಸ್**—ಎಂಬುದರಿಂದ ಪರಸ್ಮೈಪದಿಯಾಗುತ್ತದೆ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ (ಶ್ನು) ಲುಕ್. ಲಿಜಃಗೆ ಯಾಸುಟಾಗಮ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಶಸಮ್**—ಯಶಃ ಅಸ್ಯ ಅಸ್ತಿ ಇತಿ ಯಶಸಃ ಮತ್ವರ್ಥದಲ್ಲಿ **ಅರ್ಶಆದಿಭ್ಯೋಽಚ್**—ಎಂಬುದರಿಂದ ಅಚ್ ಪ್ರತ್ಯಯ. ಚಿತ್ತಾದರೂ ವ್ಯತ್ಯಯದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸುವೀರಮ್**—ಶೋಭನಾಃ ವೀರಾಃ ಯಸ್ಯ ಸಃ ಸುವೀರಃ **ವೀರವೀರ್ಯೌ ಚ** (ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ದಾಸಪ್ರವರ್ಗಮ್**—ದಾಸಯತಿ ಉಪಕ್ಷಪಯತಿ ಶತ್ರೂನಿತಿ ದಾಸೋ ಭೃತ್ಯಃ. ದಸು ಉಪಕ್ಷಯೇ ಧಾತು. ಇದಕ್ಕೆ ಣಿಚ್ ಬಂದಾಗ ದಾಸಿ ಎಂದು ರೂಪವಾಗುತ್ತದೆ. ಣಿಜಂತದ ಮೇಲೆ **ನಂದಿಗ್ರಹಪಚಾದಿಭ್ಯಃ** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್‌ಪ್ರತ್ಯಯ. **ಣೇರನಿಟಿ**—ಎಂಬುದರಿಂದ ಅಚ್ ನಿಮಿತ್ತವಾಗಿ ಣಿಚಿಗೆ ಲೋಪ. ದಾಸ ಎಂದು ರೂಪವಾಗುತ್ತದೆ. ಪ್ರಕೃಷ್ಟೋ ವರ್ಗಃ ಪ್ರವರ್ಗಃ ದಾಸಾನಾಂ ಪ್ರವರ್ಗೋ ಯಸ್ಮಿನ್ ಸಃ ತಮ್ ದಾಸ ಎಂಬುದು ಚಿತ್ ಪ್ರತ್ಯಯಾಂತವಾದುದರಿಂದ **ಚಿತಃ**—ಎಂಬುದರಿಂದ ಅಂತೋದಾತ್ತವಾಗುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಸಮಾಸದಲ್ಲಿ ಅದೇ ಸ್ವರ ಉಳಿಯುತ್ತದೆ.

**ಸುದಂಸಸಾ**—ಶೋಭನಂ ದಂಸಃ ಯಸ್ಯ ತತ್ ಸುದಂಸಃ ತೇನ. ಸುದಂಸಸಾ. ಸಮಾಸದಲ್ಲಿ ಅಸಂತವಾದುದರಿಂದ **ಸೋರ್ಮನಸೀ ಅಲೋಮೋಷಸೀ** (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಯಾ**—ಯಚ್ಛಬ್ದಕ್ಕೆ ದ್ವಿತೀಯಾಏಕವಚನ ಅಮ್ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—ಎಂಬುದರಿಂದ ಡಾದೇಶ. ಪ್ರಕೃತಿಗೆ ತ್ಯದಾದ್ಯತ್ವ. ಪರರೂಪ.

**ವಿಭಾಸಿ**—ಭಾ ದೀಪ್ತೌ. ಧಾತು. ಲಟ್ ಮಧ್ಯಮಪುರುಷಏಕವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. ಉದಾತ್ತವಿಶಿಷ್ಟತಿಜಂತ ಪರದಲ್ಲಿರುವುದರಿಂದ ಗತಿಗೆ (ವಿ) ನಿಘಾತಸ್ವರ ಬರುತ್ತದೆ. ॥ ೮ ॥



ಸಂಹಿತಾಪಾಠಃ

ವಿಶ್ವಾ॑ನಿ ದೇವೀ॒ ಭುವ॑ನಾಭಿ॒ಚಕ್ಷ್ಯಾ॑ ಪ್ರತೀ॒ಚೀ ಚಕ್ಷು॑ರುರ್ವಿ॒ಯಾ ವಿ ಭಾ॑ತಿ ।
ವಿಶ್ವಂ॑ ಜೀ॒ವಂ ಚ॒ರಸೇ॑ ಬೋ॒ಧಯಂ॑ತೀ॒ ವಿಶ್ವ॑ಸ್ಯ॒ ವಾಚ॑ಮವಿದನ್ಮನಾ॒ಯೋಃ ॥ ೯ ॥

॥ ಪದಪಾಠಃ ॥

ವಿಶ್ವಾನಿ । ದೇವೀ । ಭುವನಾ । ಅಭಿऽಚಕ್ಷ್ಯ । ಪ್ರತೀಚೀ । ಚಕ್ಷುಃ । ಉರ್ವಿಯಾ । ವಿ । ಭಾತಿ ।

ವಿಶ್ವಂ । ಜೀವಂ । ಚರಸೇ । ಬೋಧಯಂತೀ । ವಿಶ್ವಸ್ಯ । ವಾಚಂ । ಅವಿದತ್ । ಮನಾಯೋಃ ॥ ೯ ॥

ಸಾಯಣಭಾಷ್ಯಂ

ದೇವೀ ದ್ಯೋತಮಾನೋಷಾ ವಿಶ್ವಾನಿ ಸರ್ವಾಣಿ ಭುವನಾ ಭುವನಾನಿ ಭೂತಜಾತಾನ್ಯಭಿಚಕ್ಷ್ಯಾಭಿಪ್ರಕಾಶ್ಯ ಪ್ರಕಾಶವಂತಿ ಕೃತ್ವಾನಂತರಂ ಪ್ರತೀಚೀ ಪ್ರತ್ಯಙ್ಮುಖೀ ಸತೀ ಚಕ್ಷುಃ ಪ್ರಕಾಶಕೇನ ತೇಜಸೋರ್ವಿಯೋರ್ವೀ ವಿಸ್ತೀರ್ಣಾ ಸತೀ ವಿ ಭಾತಿ । ಪ್ರಕಾಶತೇ । ಅಪಿ ಚ ವಿಶ್ವಂ ಜೀವಂ ಸರ್ವಂ ಪ್ರಾಣಿಜಾತಂ ಚರಸೇ ಚರಣಾಯ ಸ್ವಸ್ವವ್ಯಾಪಾರೇಷು ಪ್ರವರ್ತನಾಯ ಬೋಧಯಂತೀ ನಿದ್ರಾತಃ ಸಕಾಶಾದುದ್ಬೋಧಯಂತ್ಯುಷಾ ವಿಶ್ವಸ್ಯ ಸರ್ವಸ್ಯ ಮನಾಯೋರ್ಮನಸಾ ಯುಕ್ತಸ್ಯ ವಾಗ್ವ್ಯವಹಾರಸಮರ್ಥಸ್ಯ ಪ್ರಾಣಿಜಾತಸ್ಯ ಯಾ ವಾಗಸ್ತಿ ತಾಂ ವಾಚಮವಿದತ್ । ಅಲಭತ! ಅತ ಏವೋಷಸಃ ಸೂನೃತಾವತೀತಿ ಸಂಜ್ಞೋಪಪನ್ನಾ ಭವತಿ ॥ ಅಭಿಚಕ್ಷ್ಯ । ಚಕ್ಷಿಙ್ ವ್ಯಕ್ತಾಯಾಂ ವಾಚಿ । ಅಯಂ ಪ್ರಕಾಶನಾರ್ಥೋಽಪಿ । ಸಮಾಸೇಽನಞ್ಪೂರ್ವೇ । ಪಾ. ೭.೧-೩೭ । ಇತಿ ಕ್ತ್ವಾಪ್ರತ್ಯಯಸ್ಯ ಲ್ಯಬಾದೇಶಃ । ಪ್ರತೀಚೀ । ಪ್ರತಿಪೂರ್ವಾದಂಚತೇರ್ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ । ಉರ್ವಿಯಾ । ಉರ್ವೀಶಬ್ದಾದುತ್ತರಸ್ಯ ಸೋರಿಯಾಡಿಯಾಜೀಕಾರಾಣಾಂ ಚೋಪಸಂಖ್ಯಾನಂ । ಪಾ. ೭.೧-೩೯-೧ । ಇತಿ ಡಿಯಾಜಾದೇಶಃ । ಆದೇಶಸಾಮರ್ಥ್ಯಾದ್ಗತ್ವಸ್ಯ ಲೋಪೋ ನ ಭವತಿ । ಮನಾಯೋಃ । ಮನ ಆತ್ಮನ ಇಚ್ಛತಿ ಮನಸ್ಯತಿ । ಸುಪ ಆತ್ಮನಃ ಕ್ಯಚ್ । ಕ್ಯಾಚ್ಛಂದಸೀತ್ಯುಃ । ವರ್ಣವ್ಯಾಪತ್ತ್ಯಾ ಸಕಾರ ಆಕಾರಃ । ಯದ್ವಾ । ಕರ್ತುಃ ಕ್ಯಙ್ ಸಲೋಪಶ್ಚೇತಿ ಕ್ಯಙ್ ಸಕಾರಲೋಪಶ್ಚ । ಅಕೃತ್ಸಾರ್ವಧಾತುಕಯೋರಿತಿ ದೀರ್ಘಃ ॥ ೯

ಪ್ರತಿಪದಾರ್ಥ

ದೇವೀ—ಪ್ರಕಾಶಮಾನಳಾದ ಉಷೋದೇವಿಯು । ವಿಶ್ವಾನಿ ಭುವನಾ—ಸಮಸ್ತವಾದ ಭೂತಗಳನ್ನು । ಅಭಿಚಕ್ಷ್ಯ—ಪ್ರಕಾಶಗೊಳಿಸಿ । ಪ್ರತೀಚೀ—ಪಶ್ಚಿಮಾಭಿಮುಖಳಾಗಿ । ಚಕ್ಷುಃ—(ತನ್ನ) ತೇಜಸ್ಸಿನೊಡನೆ । ಉರ್ವಿಯಾ—ವಿಸ್ತಾರವಾಗಿ ಹರಡಿಕೊಂಡು । ವಿಭಾತಿ—ಬೆಳಗುತ್ತಾಳೆ । ವಿಶ್ವಂ ಜೀವಂ—ಸಕಲವಾದ ಪ್ರಾಣಿಜಾತವನ್ನು । ಚರಸೇ—(ಅವುಗಳ ವ್ಯವಹಾರಗಳಲ್ಲಿ) ಪ್ರವರ್ತಿಸುವುದಕ್ಕಾಗಿ । ಬೋಧಯಂತೀ (ನಿದ್ರೆಯಿಂದ)

ಎಚ್ಚರಿಸುತ್ತಾ। **ವಿಶ್ವಸ್ಯ**—ಸಕಲವಾದ (ಮತ್ತು)। **ಮನಾಯೋಃ**—ಚೇತನಾವಿಶಿಷ್ಟವಾದ ಪ್ರಾಣಿಗಳ। **ವಾಚಂ**—(ಧ್ವನಿರೂಪವಾದ) ವಾಕ್ಕನ್ನು । **ಅವಿದತ್** —(ಹೊಂದುತ್ತಾಳೆ)ಕೇಳುತ್ತಾಳೆ ॥

ಭಾವಾರ್ಥ

ಪ್ರಕಾಶವಾನಳಾದ ಉಷೋದೇವೀಯು ಲೋಕದ ಸಮಸ್ತ ಭೂತಗಳನ್ನು ಪ್ರಕಾಶಗೊಳಿಸಿ ಅನಂತರ ಪಶ್ಚಿಮಾಭಿಮುಖವಾಗಿ ತನ್ನ ತೇಜಸ್ಸಿನೊಡನೆ ಹರಡಿಕೊಂಡು ಬೆಳಗುತ್ತಾಳೆ. ಸಕಲ ಪ್ರಾಣಿಗಳನ್ನೂ ಅವುಗಳ ವ್ಯವಹಾರಗಳಲ್ಲಿ ಪ್ರವರ್ತಿಸುವುದಕ್ಕಾಗಿ ನಿದ್ರೆಯಿಂದ ಎಚ್ಚರಿಸುತ್ತಾ ಸಕಲಚೇತನಾವಿಶಿಷ್ಟವಾದ ಪ್ರಾಣಿಗಳ ಧ್ವನಿರೂಪವಾದ ವಾಕ್ಕನ್ನೂ ಕೇಳುತ್ತಾಳೆ.

English Translation

The divine Ushas having lighted up the whole world, spreads expanding| with her radiance towards the west, arousing all living creatures to their labours ; she hears the speach of all endowed with thought.

ವಿಶೇಷವಿಷಯಗಳು

**ಅಭಿಚಕ್ಷ್ಯ—ದರ್ಶಯಿತ್ವಾ ।** ಪ್ರಕಾಶಗೊಳಿಸಿ ಎಂದರ್ಥ. **ಚಕ್ಷ್** ಧಾತುವನ್ನು ಋಕ್ಸಂಹಿತೆಯಲ್ಲೆಲ್ಲಾ ಸಾಧಾರಣವಾಗಿ ನೋಡು ಅಥವಾ ಕಾಣಿಸಿಕೊಳ್ಳು ಎನ್ನುವ ಅರ್ಥದಲ್ಲಿಯೇ ಉಪಯೋಗಿಸಿದೆ. **ಅಭಿ** ಎನ್ನುವ ಉಪಸರ್ಗದೊಡನೆ ಸೇರಿಸಿ ಉಪಯೋಗಿಸಿದಾಗಲೂ ಸಹ ಈ ಎರಡು ಅರ್ಥಗಳೇ ಮುಖ್ಯವಾಗಿ ಬಳಕೆಯಲ್ಲಿವೆ. ಉದಾಹರಣೆಗೆ,

**ಆಪೋ ಹಿ ಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ ।**
**ಮಹೇ ರಣಾಯ ಚಕ್ಷಸೇ ।**
( ಋ. ಸಂ. ೧೦-೯-೧ )

**ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ।**
( ಋ. ಸಂ. ೩-೫೯-೧ )

ಈ ಋಕ್ಕುಗಳಲ್ಲಿ ಉಪಸರ್ಗವಿಲ್ಲದಿರುವ **ಚಕ್ಷಸೇ** ಎನ್ನುವ ಪದಕ್ಕೂ ಉಪಸರ್ಗದೊಂದಿರುವ ಅಭಿಚಷ್ಟೇ ಎಂಬ ಪದಕ್ಕೂ ನೋಡುವುದು ಎಂದರ್ಥವಾಗುವುದು. **ಚಕ್ಷಸೇ** ಎನ್ನುವುದಕ್ಕೆ **ದರ್ಶನಾಯ** ( ನಿ. ೯-೨೭ ) ಎಂದರೆ ನೋಡುವುದಕ್ಕಾಗಿ ಎಂದೂ, **ಅಭಿಚಷ್ಟೇ** ಎನ್ನುವ ಪದಕ್ಕೆ **ಅಭಿಪಶ್ಯತಿ ।** ( ನಿ. ೧೦-೨೨ ) **ಸರ್ವತಃ ಪಶ್ಯತಿ ।** ಸುತ್ತಲೂ ಚೆನ್ನಾಗಿ ನೋಡುತ್ತಾನೆ ಎಂದೂ ಅರ್ಥವಾಗುತ್ತದೆ.

ಈ ಪದಗಳಿಗೇ ಕಾಣಿಸಿಕೊ, ಪ್ರಕಾಶಿಸು ಎಂಬ ಅರ್ಥವೂ ಸಹ ಅನೇಕ ಸಂದರ್ಭಗಳಲ್ಲಿ ಆಗುತ್ತದೆ. ಉದಾಹರಣೆಗೆ,

**ಯೇನ ಚಷ್ಟೇ ವರುಣೋ ಮಿತ್ರೋ ಅರ್ಯಮಾ ಯೇನ ನಾಸತ್ಯಾ ಭಗಃ ।**
( ಋ. ಸಂ. ೮-೧೯-೧೬ )

**ಮಹತ್ತೇ ವಿಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ।**
( ಋ. ಸಂ. ೮-೪-೭ )

ಈ ಋಕ್ಕುಗಳಲ್ಲಿನ **ಚಷ್ಟೇ, ಅಭಿಚಕ್ಷ್ಯಂ** ಎಂಬ ಎರಡು ಕ್ರಿಯಾಪದಗಳಿಗೂ ಸಹ **ಪ್ರಕಾಶಯತಿ, ಪ್ರಕಾಶ್ಯಂ** । ಎಂದರೆ ಪ್ರಕಟವಾಗಿ ಪ್ರಕಾಶಪಡಿಸುವುದು ಮತ್ತು ಪ್ರಕಾಶಗೊಳ್ಳುವುದು ಎಂಬ ಅರ್ಥವಾಗುತ್ತದೆ. ಅದರಂತೆ ಪ್ರಕೃತವಾದ ಈ ಋಕ್ಕಿನಲ್ಲಿರುವ **ಅಭಿಚಕ್ಷ್ಯ** ಎನ್ನುವ ಪದಕ್ಕೂ ಸಹ ಸಮಸ್ತ ಭೂತಗಳನ್ನು ಪ್ರಕಾಶಗೊಳಿಸಿ ಎಂದರ್ಥವು.

**ಉರ್ವಿಯಾ— ಉರುಶಬ್ದಾತ್ತೃತೀಯೈಕವಚನೇ ಉರ್ವಿಯಾ ಇತಿ ರೂಪಂ ।** ಉರುತ್ವೇನ । **ಉರು** ಶಬ್ದದಮೇಲೆ ತೃತೀಯಾ ವಿಭಕ್ತಿಯ ಏಕವಚನದ ಪ್ರಯೋಗವಾದಮೇಲೆ **ಉರ್ವಿಯಾ** ಎಂದಾಗುತ್ತದೆ. ವಿಸ್ತಾರವಾಗಿ ಎಂದರ್ಥವು. ವ್ಯಾಪಿಸು, ಎಲ್ಲಾ ಕಡೆಯೂ ವಿಸ್ತಾರವಾಗಿ ಹರಡು ಎನ್ನುವ ಸನ್ನಿವೇಶದಲ್ಲಿ ಈರೀತಿ **ಉರ್ವಿಯಾ** ಎಂಬ ಪ್ರಯೋಗವಿದೆ. ಉದಾಹರಣೆಗೆ,

**ವ್ಯಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ ।**
( ಋ. ಸಂ. ೧೦-೧೧೦-೫ )

ಇತ್ಯಾದಿ ಋಕ್ಕುಗಳಲ್ಲಿ ಉಪಯೋಗಿಸಿರುವಂತೆ ಇಲ್ಲಿಯೂ ಸಹ ಉಷಸ್ಸು ವಿಸ್ತಾರವಾಗಿ ವ್ಯಾಪಿಸಿ ಹರಡಿಕೊಂಡು ಬೆಳಗಲಿ ಎಂದರ್ಥ.

**ಬೋಧಯಂತೀ— ಸುಪ್ತಾನುತ್ಥಾಪಯಂತೀ ।** ಮಲಗಿರುವವರನ್ನು ಎಚ್ಚರಗೊಳಿಸಿ ಎಬ್ಬಿಸುತ್ತಾ, ಸಕಲರನ್ನು ಅವರವರ ಕೆಲಸಗಳಲ್ಲಿ ಪ್ರವರ್ತಿಸುವಂತೆ ಮಾಡುತ್ತಾಳೆ ಎಂದರ್ಥ. ಮೃತಪ್ರಾಯವಾಗಿ ಮಲಗಿರತಕ್ಕ ಸಕಲ ಜೀವರಾಶಿಗಳನ್ನೂ ರಾತ್ರಿಯಾದನಂತರ ಉಷಸ್ಸು ಎಬ್ಬಿಸಿ ಚೈತನ್ಯವನ್ನು ತುಂಬುತ್ತಾಳೆ ಎಂಬ ಅಭಿಪ್ರಾಯವು ಅನೇಕ ಕಡೆಗಳಲ್ಲಿ ಸುರಸವಾದ ಭಾಷೆಯಲ್ಲಿ ವ್ಯಕ್ತವಾಗಿದೆ. ಉದಾಹರಣೆಗೆ,

**ಅದ್ಮಸನ್ನ ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ ।**
( ಋ. ಸಂ. ೧-೧೨೪-೪ )

**ವ್ಯುಚ್ಛಂತೀ ಜೀವಮುದೀರಯಂತ್ಯುಷಾ ಮೃತಂ ಕಂ ಚನ ಬೋಧಯಂತೀ ।**
( ಋ. ಸಂ. ೧-೧೧೩-೮ )

**ವ್ಯು೧ಷಾ ಆವಃ ಪಥ್ಯಾ೩ ಜನಾನಾಂ ಪಂಚ ಕ್ಷಿತೀರ್ಮಾನುಷೀರ್ಬೋಧಯಂತೀ ।**
( ಋ. ಸಂ. ೭-೭೯-೧ )

ಇತ್ಯಾದಿ ನಾನಾ ಕಡೆಗಳಲ್ಲಿ ಉಷೋದೇವಿಯಿಂದ ಜಗತ್ತಿಗೆ ಆಗತಕ್ಕ ಉಪಕಾರದ ವಿವರಣೆಯು ಋಕ್ಸಂಹಿತೆಯ ಕಾವ್ಯಭಾಷೆಯಲ್ಲಿ ರಮಣೀಯವಾಗಿ ವಿವರಿಸಿದೆ.

**ಮನಾಯೋಃ**—**ಮನ್ಯತೇರರ್ಚತಿಕರ್ಮಣೋ ಮನಾ ಸ್ತುತಿರುಚ್ಯತೇ । ತತ್ಕಾಮಸ್ಯ ಮನಾಯೋಃ** ಎಂದರೆ **ಅರ್ಚತಿ; ಗಾಯತಿ, ರೇಭತಿ** ಇತ್ಯಾದಿ 44 ಪೂಜಾಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ **ಮನಾ** ಎನ್ನುವ ಶಬ್ದಕ್ಕೆ **ಸ್ತುತಿ**ಯೆಂದೂ ಅದನ್ನು ಪಠಿಸಲಿಚ್ಛಿಸುವವನಿಗೆ **ಮನಾಯು**ವೆಂದೂ ಆಗುತ್ತದೆ. ಆದುದರಿಂದ ಇಲ್ಲಿ **ಸ್ತುತಿಕಾಮೇನ ಋಷಿಣಾ ಯಜಮಾನೇನ ವಾ ।** ಸ್ತುತಿಮಾಡಲಿಚ್ಛಿಸುವ ಋಷಿಯಾಗಲಿ ಅಥವಾ ಯಜಮಾನನಾಗಲಿ ಅಂತಹ ಸ್ತೋತೃವಿನ, ಎಂದಾಗುತ್ತದೆ ಎಂದು ಸ್ಕಂದಸ್ವಾಮಿಗಳು ವಿವರಿಸುತ್ತಾರೆ. ಸಾಯಣರೂ ಸಹ ಈ ಪದವು ಬರುವ ಇತರ ಕಡೆಗಳಲ್ಲೆಲ್ಲಾ ಇದೇ ರೀತಿ ವಿವರಿಸಿ ಅರ್ಥಮಾಡುತ್ತಾರೆ. ಉದಾಹರಣೆಗೆ,

**ಪ್ರಿಯಃ ಸುಕೃತ್ಪ್ರಿಯ ಇಂದ್ರೇ ಮನಾಯುಃ ಪ್ರಿಯಃ ಸುಪ್ರಾವೀಃ ಪ್ರಿಯೋ ಅಸ್ಯ ಸೋಮೀ ।**
( ಋ. ಸಂ. ೪-೨೫-೫ )

**ಪ್ರತಿ ಮನಾಯೋರುಚಥಾನಿ ಹರ್ಯನ್ ತಸ್ಮಿನ್ದಧದ್ವೃಷಣಂ ಶುಷ್ಮಮಿಂದ್ರಃ ।**
( ಋ. ಸಂ. ೪-೨೪-೭ )

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಮನಾಯುಃ** ಎಂಬುದಕ್ಕೆ ಸ್ತುತಿಕಾಮನೆಂದು **ಮನಾಯೋಃ** ಎಂಬುದಕ್ಕೆ **ಸ್ತುತಿಕಾಮಸ್ಯ** ಎಂದೂ ವ್ಯಾಖ್ಯಾನಮಾಡುತ್ತಾರೆ. ಆದರೆ ಈ ಋಕ್ಕಿನಲ್ಲಿ ಬರುವ **ಮನಾಯೋಃ** ಎಂಬ ಪದಕ್ಕೆ ಮಾತ್ರ **ಮನಸಾ ಯುಕ್ತಸ್ಯ ವಾಗ್ವ್ಯವಹಾರಸಮರ್ಥಸ್ಯ ಪ್ರಾಣಿಜಾತಸ್ಯ ।** ಎಂದರೆ ಮನಸ್ಸಿನಿಂದ ಕೂಡಿದುದೂ, ವಾಗ್ವ್ಯವಹಾರಗಳಿಗೆ ಸಮರ್ಥವಾದ ಸಕಲ ಪ್ರಾಣಿವರ್ಗದ ಎಂದು ವಿವರಿಸುತ್ತಾರೆ.

ವ್ಯಾಕರಣಪ್ರಕ್ರಿಯಾ

**ಅಭಿಚಕ್ಷ್ಯ**—**ಚಕ್ಷಿಙ್** ವ್ಯಕ್ತಾಯಾಂ ವಾಚಿ. ಧಾತು **ಧಾತೂನಾಮನೇಕಾರ್ಥತ್ವಮ್**—ಎಂಬುದರಿಂದ ಇದು ಪ್ರಕಾಶನಾರ್ಥದಲ್ಲಿಯೂ ಇದೆ. ಪೂರ್ವಕಾಲಿಕ ಕ್ರಿಯಾವಾಚಿಯಾದುದರಿಂದ ಕ್ತ್ವಾಪ್ರತ್ಯಯ ಬರುತ್ತದೆ. ಇಲ್ಲಿ ಅಭಿ ಎಂಬುದರೊಡನೆ ಸಮಾಸವಾದಾಗ **ಸಮಾಸೇನಞ್ ಪೂರ್ವೇ ಕ್ತ್ವೋ ಲ್ಯಪ್** (ಪಾ. ಸೂ. ೭-೧-೩೭) ಎಂಬುದರಿಂದ ಕ್ತ್ವಾ ಪ್ರತ್ಯಯಕ್ಕೆ ಲ್ಯಬಾದೇಶ. ಅದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪ್ರತೀಚೀ**—ಪ್ರತಿಪೂರ್ವಕವಾದ ಅಂಚು (ಗತಿಪೂಜನಾರ್ಥಕ) ಧಾತುವಿಗೆ **ಋತ್ವಿಕ್‌ದಧೃಕ್**—ಎಂಬುದರಿಂದ ಕ್ವಿನ್‌ಪ್ರತ್ಯಯ, ಕಿತ್ತಾದುದರಿಂದ **ಅನಿದಿತಾಂ ಹಲಉಪ**—ಎಂಬುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ಇದಕ್ಕೆ ಸ್ತ್ರೀತ್ವ ವಿವಕ್ಷಾಮಾಡಿದಾಗ **ಅಂಚತೇಶ್ಚೋಪಸಂಖ್ಯಾನಮ್**—ಎಂಬುದರಿಂದ ಙೀಪ್ ಪ್ರತ್ಯಯ. ಅಜಾದಿಪ್ರತ್ಯಯ ಪರದಲ್ಲಿರುವುದರಿಂದ **ಯಚಿ ಭಮ್**—ಎಂಬುದರಿಂದ ಭಸಂಜ್ಞಾ ಬರುವುದರಿಂದ **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. **ಚೌ** (ಪಾ. ಸೂ. ೬-೩-೧೩೮) ಲುಪ್ತಾಕಾರ ನಕಾರವುಳ್ಳ ಅಂಚುಧಾತುವು ಪರವಾದಾಗ ಪೂರ್ವಕ್ಕೆ ದೀರ್ಘ ಎಂಬುದರಿಂದ ಪ್ರತಿ ಎಂಬಲ್ಲಿರುವ ಇಕಾರಕ್ಕೆ ದೀರ್ಘ. ಪ್ರತೀಚೀ ಎಂದು ರೂಪವಾಗುತ್ತದೆ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಙೀಪ್ ಪರವಾದಾಗ ಉದಾತ್ತವಾದ ಧಾತುವಿನ ಅಕಾರವು ಲೋಪವಾದುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ.

**ಉರ್ವಿಯಾ**—ಉರ್ವೀ ಶಬ್ದ. ಇದಕ್ಕೆ ಪ್ರಥಮಾ ಸು ಪರವಾದಾಗ ಅದಕ್ಕೆ **ಇಯಾಡಿಯಾಜೀಕಾರಾಣಾಂ ಚೋಪಸಂಖ್ಯಾನಮ್**-(ಪಾ. ಸೂ. ೭-೧-೩೯-೧) ಎಂಬುದರಿಂದ ಡಿಯಾಜಾದೇಶ. ಡಿತ್ತ್ವದುದರಿಂದ ಈಕಾರಕ್ಕೆ ಲೋಪ. ಚಿತ್ತ್ವದುದರಿಂದ **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಚರಸೇ**—ಚರ ಗತಿಭಕ್ಷಣಯೋಃ ಧಾತು. ತುಮುನರ್ಥದಲ್ಲಿ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಅಸೇ ಪ್ರತ್ಯಯ.

**ಅವಿದತ್**—ವಿದ್ಲೃ ಲಾಭೇ ಧಾತು. ಲುಙ್ ಪ್ರಥಮಪುರುಷಏಕವಚನದಲ್ಲಿ ತಿಪ್ಪ್ರತ್ಯಯ ಇತಶ್ಚ ಸೂತ್ರದಿಂದ ಇಕಾರಲೋಪ. ಧಾತು ಲೃದಿತ್ತ್ವದುದರಿಂದ **ಪುಷಾದಿದ್ಯುತಾದಿ**-(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಮನಾಯೋಃ**—ಮನಃ ಆತ್ಮನಃ ಇಚ್ಛತಿ ಮನಸ್ಯತಿ. ಇಚ್ಛಾರ್ಥದಲ್ಲಿ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಮನಃ ಎಂಬ ಸುಬಂತದ ಮೇಲೆ ಕ್ಯಚ್. ಇದಕ್ಕೆ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. ಉ ಪರವಾದಾಗ ವರ್ಣವ್ಯತ್ಯಾಸದಿಂದ ಸಕಾರಕ್ಕೆ ಆಕಾರಾದೇಶ. ಅಥವಾ **ಕರ್ತುಃ ಕ್ಯಙ್ ಸಲೋಪಶ್ಚ**-(ಪಾ. ಸೂ. ೩-೧-೧೧) ಎಂಬುದರಿಂದ ಕ್ಯಙ್ಪ್ರತ್ಯಯ ತತ್ಸನ್ನಿಯೋಗದಿಂದ ಸಕಾರಕ್ಕೆ ಲೋಪ. ಮನ+ಯ ಎಂದಿರುವಾಗ **ಅಕೃತ್ ಸಾರ್ವಧಾತುಕಯೋಃ ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಯ ನಿಮಿತ್ತವಾಗಿ ಪೂರ್ವಕ್ಕೆ ದೀರ್ಘ. ಆಮೇಲೆ ಹಿಂದಿನಂತೇ ಉಪ್ರತ್ಯಯ ಮನಾಯು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀಏಕವಚನಾಂತರೂಪ. ।೯।



ಸಂಹಿತಾಪಾಠಃ

ಪುನಃಪುನರ್ಜಾಯಮಾನಾ ಪುರಾಣೀ ಸಮಾನಂ ವರ್ಣಮಭಿ
ಶುಂಭಮಾನಾ ।
ಶ್ವಘ್ನೀವ ಕೃತ್ನುರ್ವಿಜ ಆಮಿನಾನಾ ಮರ್ತಸ್ಯ ದೇವೀ ಜರ-
ಯಂತ್ಯಾಯುಃ ॥ ೧೦ ॥

ಪದಪಾಠಃ

ಪುನಃ ऽ ಪುನಃ । ಜಾಯಮಾನಾ । ಪುರಾಣೀ । ಸಮಾನಂ । ವರ್ಣಂ । ಅಭಿ । ಶುಂಭಮಾನಾ ।

ಶ್ವಘ್ನೀಃ ऽ ಇವ । ಕೃತ್ನುಃ । ವಿಜಃ । ಆ ऽ ಮಿನಾನಾ । ಮರ್ತಸ್ಯ । ದೇವೀ । ಜರಯಂತೀ । ಆಯುಃ ॥ ೧೦ ॥

॥ ಸಾಯಣಭಾಷ್ಯಂ ॥

ಪುನಃಪುನರ್ಜಾಯಮಾನಾ ಪ್ರತಿದಿವಸಂ ಸೂರ್ಯೋದಯಾತ್ಪೂರ್ವಂ ಪ್ರಾದುರ್ಭವಂತೀ ಪುರಾಣೀ ಚಿರಂತನೀ। ನಿತ್ಯೇತ್ಯರ್ಥಃ । ಯಸ್ಮಾತ್ಸಮಾನಂ ವರ್ಣಮೇಕಮೇವ ರೂಪಮಭಿ ಪ್ರಾಪ್ಯ ಶುಂಭಮಾನಾ ಶೋಭಮಾನಾ। ವಿಭಿನ್ನೇಷ್ವಪಿ ದಿವಸೇಷ್ವಸ್ಯಾ ಏಕರೂಪ್ಯೇಣಾವಸ್ಥಾನಾನ್ನಿತ್ಯತ್ವಮಿತ್ಯರ್ಥಃ । ಏವಂಗುಣವಿಶಿಷ್ಟಾ ದೇವೀ ದೇವನಶೀಲೋಷಾ ಮರ್ತಸ್ಯ ಮರಣಧರ್ಮಣಃ ಸರ್ವಸ್ಯ ಪ್ರಾಣಿಜಾತಸ್ಯಾಯುರ್ಜೀವನಂ ಜರಯಂತ್ಯೂನಯಂತೀ ವರ್ತತೇ । ಬಹ್ವೀಷೂಷಃಸ್ವತೀತಾಸು ಹಿ ಸರ್ವೇಷಾಮಾಯುರ್ಹೀಯತೇ। ಉಷಾಶ್ಚ ಪುನಃಪುನರ್ಜಾಯಮಾನೇತ್ಯುಕ್ತಂ ಅತಃ ಸೈವಾಯುರ್ಜರಯತಿ । ತತ್ರ ದೃಷ್ಟಾಂತಃ। ಕೃತ್ನುಃ ಕರ್ತನಶೀಲಾ ಶ್ವಘ್ನೀವ ವ್ಯಾಧಸ್ತ್ರೀವ। ಸಾ ಯಥಾ ವಿಜಶ್ಚಲತಃ ಪಕ್ಷಿಣ ಆಮಿನಾನಾ ಪಕ್ಷಾದಿಚ್ಛೇದನೇನ ಹಿಂಸಂತೀ ತೇಷಾಮಾಯುರ್ಜರಯತಿ ತದ್ವತ್ ॥ ಪುರಾಣೀ। ಪುರೇತ್ಯಸ್ಮಾದವ್ಯಯಾತ್ ಸಾಯಂಚಿರಂಪ್ರಾಹ್ಣ ಇತ್ಯಾದಿನಾ। ಪಾ- ೪-೩-೨೩। ಭವಾರ್ಥೇ ಟ್ಯುಪ್ರತ್ಯಯಃ। ಪುರಾಣಪ್ರೋಕ್ತೇಷು ಬ್ರಾಹ್ಮಣಕಲ್ಪೇಷು। ಪಾ. ೪-೩-೧೦೫। ಇತಿ ನಿಪಾತನಾತ್ತುಡಭಾವಃ। ಯೋರನಾದೇಶಃ। ಟಿತ್ವಾಜ್ಙೀಪ್ । ವ್ಯತ್ಯಯೇನಾಂತೋದಾತ್ತತ್ವಂ । ಶುಂಭಮಾನಾ। ಶುಭ ದೀಪ್ತೌ। ಶಪಃ ಪಿತ್ತ್ವಾದನುದಾತ್ತತ್ವಂ । ಶಾನಚೋಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ। ಶ್ವಘ್ನೀ। ಶುನಾ ಮೃಗಾನ್ ಹತವಾನ್ ಶ್ವಹಾ। .ಬಹುಲಂ ಛಂದಸಿ। ಪಾ. ೩-೨-೮೮। ಇತಿ ವಚನಾದ್ಬ್ರಹ್ಮಾದಿವ್ಯತಿರಿಕ್ತೇऽಪ್ಯುಪಪದೇ ಹಂತೇಃ ಕ್ವಿಪ್। ಋನ್ನೇಭ್ಯೋ ಙೀಬಿತಿ ಙೀಪ್। ಅಲ್ಲೋಪೋऽನ ಇತ್ಯಕಾರಲೋಪಃ। ಹೋ ಹಂತೇರಿತಿ ಘುತ್ವಂ। ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ। ಕೃತ್ನುಃ। ಕೃತೀ ಛೇದನೇ। ಔಣಾದಿಕಃ ಕ್ನುಪ್ರತ್ಯಯಃ। ವಿಜಃ। ಓವಿಜೀ ಭಯಚಲನಯೋಃ। ವಿಜಂತಿ ಚಲಂತೀತಿ ವಿಜಃ ಪಕ್ಷಿಣಃ । ಆಮಿನಾನಾ। ಮೀಞ್ ಹಿಂಸಾಯಾಂ ಕ್ರ್ಯಾದಿಕಃ। ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ। ಶಾನಚಶ್ಚಿತ್ತ್ವಾದಂತೋದಾತ್ತತ್ವಂ॥

ಪ್ರತಿಪದಾರ್ಥ

ಪುನಃಪುನಃ--(ಒಂದೇ ರೀತಿಯಾಗಿ) ಮತ್ತೆ ಮತ್ತೆ। ಜಾಯಮಾನಾ—ಆವಿರ್ಭವಿಸುತ್ತಾ। ಪುರಾಣೀ-ಪ್ರಾಚೀನಕಾಲ (ಅನಾದಿಯಾದುದು)ದರಿಂದ। ಸಮಾನಂ ವರ್ಣಂ ಅಭಿ—(ಬದಲಾವಣೆಯಿಲ್ಲದೆ) ಒಂದೇ ರೂಪ

ವನ್ನು ಹೊಂದಿ । **ಶುಂಭಮಾನಾ**—ಶೋಭಿಸತಕ್ಕ । **ದೇವೀ**—ಕಾಂತಿಯುತಳಾದ ಉಷೋದೇವಿಯು । **ಮರ್ತಸ್ಯ**—ಮರಣಧರ್ಮವುಳ್ಳ ಸಕಲ ಪ್ರಾಣಿಗಳ । **ಆಯುಃ**—ಆಯಸ್ಸನ್ನೂ । **ಕೃತ್ನುಃ**—ಜಾಣನಾದ । **ಶ್ವಘ್ನೀವ**—ಜೂಜುಗಾರನಂತೆ ।

**ಅಥವಾ**

**ಅಮಿನಾನಾ**—(ರೆಕ್ಕೆ ಮೊದಲಾದುವನ್ನು) ಬಿಡಿಸುವುದರಿಂದ ಹಿಂಸಿಸುವವಳೂ । **ವಿಜಃ**—(ಸಂಚರಿಸುವ) ಪಕ್ಷಿಗಳ । **ಕೃತ್ನುಃ**—(ರೆಕ್ಕೆಗಳನ್ನು) ಕತ್ತರಿಸುವವಳೂ ಆದ । **ಶ್ವಘ್ನೀವ**—ಬೇಡನ ಹೆಂಡತಿಯಂತೆ । **ಜರಯಂತೀ**—ಮುಪ್ಪುಕೊಟ್ಟು ನಾಶಮಾಡುತ್ತಾಳೆ.

॥ ಭಾವಾರ್ಥ ॥

ಕಾಂತಿಯುತಳಾದ ಉಷೋದೇವಿಯು ಅನಾದಿಯಾದುದರಿಂದ ಪ್ರತಿದಿನವೂ ಒಂದೇ ರೀತಿಯಾಗಿ ಆವಿರ್ಭವಿಸುತ್ತಾ ಕೊಂಚವೂ ಬದಲಾವಣೆಯಿಲ್ಲದ ರೂಪವುಳ್ಳವಳಾಗಿದ್ದಾಳೆ. ಮತ್ತು ಸಂಚರಿಸತಕ್ಕ ಪಕ್ಷಿಗಳ ರೆಕ್ಕೆ ಮುಂತಾದುವನ್ನು ಸೀಳುವುದರಿಂದ ಅವುಗಳನ್ನು ಹಿಂಸಿಸುವವಳೂ ಅವುಗಳನ್ನು ಕತ್ತರಿಸಿ ಸಾಯಿಸುವವಳೂ ಆದ ಬೇಡನ ಹೆಂಡತಿಯಂತೆ ಈ ಉಷೋದೇವಿಯೂ ಸಹ ಮರಣಧರ್ಮವುಳ್ಳ ಸಕಲ ಪ್ರಾಣಿಗಳಿಗೂ ಮುಪ್ಪನ್ನು ಕೊಟ್ಟು ಅವುಗಳ ಆಯುಸ್ಸು ಕ್ಷಯಿಸುವಂತೆ ಮಾಡುತ್ತಾಳೆ.

English Translation

The divine and ancient Ushas, born again and again and bright with unchanging hues, wastes away the life of a mortal, like the wife of a hunter cutting up and dividing the birds.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಹರ್ಷದೊಡನೆ ಒಂದು ವಿಧವಾದ ವ್ಯಾಕುಲವೂ ಮಿಶ್ರಿತವಾಗಿದೆ. ಲೋಕಕ್ಕೆಲ್ಲಾ ಚೈತನ್ಯವನ್ನೂ ಬೆಳಕನ್ನೂ ಕೊಟ್ಟು ಜೀವಕಳೆಯನ್ನು ತುಂಬತಕ್ಕ ಉಷಸ್ಸಿನ ಸೊಬಗು ಮತ್ತು ಸೌಂದರ್ಯಗಳನ್ನು ವರ್ಣಿಸಿ ಆನಂದಾನುಭವವನ್ನು ವ್ಯಕ್ತಪಡಿಸುವುದರ ಮೂಲಕ ಜೊತೆಯಲ್ಲಿಯೇ ನಿತ್ಯವಾಗಿ ತಾರುಣ್ಯಾವಸ್ಥೆಯನ್ನೇ ಹೊಂದಿರುವ ಉಷಸ್ಸಿನ ಎದುರಿಗೇ ಮಾನವಾದಿ ಸಕಲ ಪ್ರಾಣಿಗಳೂ ಸಹ ಅಲ್ಪಕಾಲದಲ್ಲಿಯೇ ವಾರ್ಧಕ್ಯವನ್ನು ಹೊಂದಿ ಮೃತರಾಗುವ ಭಾವನೆಯಲ್ಲಿ ಕೊಂಚ ಉದ್ವೇಗವೂ ತೋರುತ್ತದೆ. ಸೌಂದರ್ಯಾನುಭವದೊಡನೆ ಸತ್ಯದ ಅನುಭವವೂ ಜೊತೆಗೂಡಿದೆ. ಈ ಸಂದರ್ಭದಲ್ಲಿ ಪ್ರೊ॥ ಮಾಕ್ಸ್‌ಮುಲ್ಲರು ಈ ಋಕ್ಕಿನ ಅಭಿಪ್ರಾಯವನ್ನು ವಿವರಿಸುತ್ತಾ ಉಷೋದೇವತೆಯ ವಿಷಯವಾಗಿ ಹೇಳಿರುವ ಕೆಲವು ವಾಕ್ಯಗಳನ್ನು ಉದಹರಿಸಿದರೆ ಅಪ್ರಯುಕ್ತವಾಗಲಾರದೆಂದು ಅವನ್ನು ಇಲ್ಲಿ ಕೊಟ್ಟಿದೆ.

"The Dawn, which to us is merely a beautiful sight, was to the early gazer and thinker, the problem of all problems. It was the unknown land from whence rose every day those bright emblems of a divine power which left in

the mind of man the first impression and intimation of another world, of power above, of order and wisdom. What we simply call the sun-rise, brought before their eyes every day, the riddle of the riddles, the riddle of existence. The days of their life sprang from that dark abyss which every morning seemed instinct with light and life. Their youth, their manhood, their old age, all were to the Vedic bards the gift of that heavenly mother who appeared bright, young, unchanged, immortal every morning, while everything else seemed to grow old, to change, and drop, and at last to set, never to return. It was there, in that bright chamber, that, as their poets said, mornings and days were spun, or under a different image, where mornings and days were nourished, where life or time was drawn out ".

( Lectures on the Science of Language
Vol. II (P. 481–482 )

ಹೀಗೆ ಅಶಾಶ್ವತವಾದ ಜಗಜ್ಜೀವನದ ಮುಂದೆ ಶಾಶ್ವತವಾದ ತಾರುಣ್ಯವನ್ನು ಸೌಂದರ್ಯವನ್ನೂ ವರ್ಣಿಸುವಾಗ,

**ಪುನಃಪುನರ್ಜಾಯಮಾನಾ ಪುರಾಣೀ** — ಎಂದು ಉಷಸ್ಸಿನ ಸ್ವರೂಪದ ನಿರೂಪಣೆಯಿದೆ. ಇಲ್ಲಿ **ಜಾಯಮಾನಾ** ಎನ್ನುವುದಕ್ಕೆ **ಜನ್ಮನಾತ್ರೋದಯೋಽಭಿಪ್ರೇತಃ । ಪ್ರತಿದಿವಸಂ ಸೂರ್ಯೋದಯಾತ್ಪೂರ್ವಂ ಪ್ರಾದುರ್ಭವಂತೀ ।** ಎಂದರೆ ಜನ್ಮವೆನ್ನುವುದಕ್ಕೆ ಹೊಸದಾದ ಉತ್ಪತ್ತಿಯೆಂದರ್ಥವಲ್ಲ. ಹೊಸದಾದ ಉದಯ ವೆಂದೂ, ಸೂರ್ಯೋದಯಕ್ಕೆ ಮುಂಚೆ ಪ್ರತಿದಿನವೂ ಆವಿರ್ಭಾವವಾಗುವುದೆಂದೂ ಅರ್ಥ. **ಪುರಾಣೀ ಚಿರಂತನೀ ನಿತ್ಯಾ ಇತ್ಯರ್ಥಃ । ಜಗತ್ಸೃಷ್ಟಿಕಾಲ ಏವೋತ್ಪನ್ನತ್ವಾದುಷಾ ಪುರಾಣೀತ್ಯುಚ್ಯತೇ ।** ಅನಾದಿಯಾಗಿಯೂ ಶಾಶ್ವತಳಾಗಿಯೂ ಜಗತ್ಸೃಷ್ಟಿಕಾಲದಿಂದಲೂ ಇರುವುದರಿಂದಲೂ **ಪುರಾಣೀ** ಎಂಬ ವಿಶೇಷಣವಿದೆ. ಈ ವಿಧವಾದ ವರ್ಣನೆಯು ಉಷಸ್ಸಿನ ಸ್ತೋತ್ರಪರವಾದ ಋಕ್ಕುಗಳಲ್ಲೆಲ್ಲಾ ಪದೇ ಪದೇ ಕಂಡುಬರುತ್ತದೆ. ಉದಾಹರಣೆಗೆ,

**ಶಶ್ವತ್ಪುರೋಷಾ ವ್ಯುವಾಸ ದೇವ್ಯಥೋ ಅದ್ಯೇದಂ ವ್ಯಾವೋ ಮಘೋನೀ ।**
**ಅಥೋ ವ್ಯುಚ್ಛಾದುತ್ತರಾँ ಅನು ದ್ಯೂನಜರಾಮೃತಾ ಚರತಿ ಸ್ವಧಾಭಿಃ ॥**
(ಋ. ಸಂ. ೧–೧೧೩-೧೩)

**ಪುರಾಣೀ ದೇವೀ ಯುವತಿಃ ಪುರಂಧಿರನು ವ್ರತಂ ಚರಸಿ ವಿಶ್ವವಾರೇ ।**
(ಋ. ಸಂ. ೩-೬೧–೧)

**ಈಯುಷೀಣಾಮುಪಮಾ ಶಶ್ವತೀನಾಂ ವಿಭಾತೀನಾಂ ಪ್ರಥಮೋಷಾ ವ್ಯಶ್ವೈತ್ ।**
(ಋ. ಸಂ. ೧-೧೧೩-೧೫)

ಇತ್ಯಾದಿ ಋಕ್ಕುಗಳಲ್ಲಿ ಅನಾದಿಯಾದ ಉಷಸ್ಸು ಪ್ರತಿದಿನವೂ ಹೊಸದಾಗಿ ಉದಯಿಸಿ ತನ್ನ ನಿಯಮಕ್ಕನುಸಾರ ವಾಗಿ ಲೋಕವನ್ನೆಬ್ಬಿಸುತ್ತಾಳೆ ಎಂಬ ವರ್ಣನೆಯಿದೆ.

**ಶುಂಭಮಾನಾ—ಶುಂಭ ದೀಪ್ತೌ ।** ಪ್ರಕಾಶಿಸು, ಶೋಭಿಸು ಎನ್ನುವ ಅರ್ಥವನ್ನು ಕೊಡುವ **ಶುಂಭ** ಧಾತುವಿನಿಂದ **ಶುಂಭಮಾನಾ** ಎಂದಾಗಿದೆ. **ಶುಂಭಮಾನಾಃ—ಸುಶೋಭಿಷಮಾಣಾಃ** (ನಿ. ೮-೧೧) ಎಂದು ನಿರುಕ್ತಕಾರರು ಅತಿಶಯವಾಗಿ ಶೋಭಿಸತಕ್ಕ ಎಂದು ವಿವರಿಸುತ್ತಾರೆ. ಆಕರ್ಷಕವಾಗಿ ಶೋಭಿಸತಕ್ಕ ಎಂದರ್ಥ. ಈ ರೀತಿ ಮನಸ್ಸನ್ನೆಳೆಯುವಂತೆ ಶೋಭಿಸು ಎಂಬ ಅಭಿಪ್ರಾಯವು ಬರುವ ಕಡೆಗಳಲ್ಲೆಲ್ಲಾ ಈ ಪದಪ್ರಯೋಗ ವಿದೆ. ಉದಾಹರಣೆಗೆ—

**ವ್ಯಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ ।**
(ಋ. ಸಂ. ೧೦-೧೧೦-೫)

**ಆಪ ಇವ ಪ್ರವತಾ ಶುಂಭಮಾನಾ ಉರುಷ್ಯದಗ್ನಿಃ ಪಿತ್ರೋರುಪಸ್ಥೇ ॥**
(ಋ. ಸಂ. ೩-೫-೮)

**ಆವಿರ್ವಕ್ಷಃ ಕೃಣುಷೇ ಶುಂಭಮಾನೋಷೋ ದೇವಿ ರೋಚಮಾನಾ ಮಹೋಭಿಃ ।**
(ಋ. ಸಂ. ೬-೬೪-೨)

ಇತ್ಯಾದಿ ಋಕ್ಕುಗಳಲ್ಲಿ ನೋಡಬಹುದು. ಹೀಗೆ ಉಷಸ್ಸಿನ ಆಕರ್ಷಕವಾದ ಸ್ವರೂಪವನ್ನು ವರ್ಣಿಸಿ ಮುಂದಕ್ಕೆ ಕೊಂಚ ವ್ಯಾಕುಲಹೇತುವಾದ ಅಂಶವನ್ನು ವಿವರಿಸಿದೆ.

**ವಿಜಃ—ವಿರಿತಿ ಶಕುನಿನಾಮ ವೇತೇರ್ಗತಿಕರ್ಮಣಃ ।** (ನಿ. ೨-೬) ಚಲಿಸು, ಸಂಚರಿಸು ಎಂಬ ಅರ್ಥದಲ್ಲಿ ಬರುವ **ವೀ** ಧಾತುವಿನಿಂದ ವಿಃ ಎಂದಾಗಿ ಅದರಿಂದ **ವಿಜಃ** ಎಂಬ ಪದವು ನಿಷ್ಪನ್ನವಾಗಿದೆ. **ವಿಃ ಇತಿ ಪಕ್ಷಿನಾಮ । ತತೋ ಜಾತ ಇತಿ ವಿಜಃ ।** ಎಂದು ಸ್ಕಂದಸ್ವಾಮಿಗಳು ವಿಃ ಎಂದರೆ ಪಕ್ಷಿಯೆಂದೂ ಅದರಿಂದ ಹುಟ್ಟಿದುದರಿಂದ ವಿಜಃ ಎಂದಾಗಿದೆಯೆಂದೂ ನಿರುಕ್ತಕಾರರಿಗನುಸಾರವಾಗಿ ವಿವರಿಸುತ್ತಾರೆ. ಸಾಯಣರು ಮಾತ್ರ **ಓವಿಜೀ ಭಯಚಲನಯೋಃ** ಎಂಬ ಧಾತುವಿನಿಂದ **ವಿಜಂತಿ ಚಲಂತೀತಿ ವಿಜಃ ಪಕ್ಷಿಣಃ ।** ಚಲಿಸುವುವಾದ್ದರಿಂದ **ವಿಜಃ** ಎಂದರೆ ಪಕ್ಷಿಗಳು ಎಂದು **ವಿಜ್** ಧಾತುನಿಷ್ಪನ್ನವೆಂದು ವಿವರಿಸುತ್ತಾರೆ.

ಸಾಧಾರಣವಾಗಿ **ಪಕ್ಷಿ** ಎನ್ನುವುದಕ್ಕೆ ಋಕ್ಸಂಹಿತೆಯಲ್ಲಿ **ವಿಜಃ** ಎಂಬ ಪ್ರಯೋಗವು ಇದೊಂದೇ ಕಡೆ ಇದೆಯೆಂದು ಹೇಳಬಹುದು ಋ. ಸಂ. ೨ನೇ ಮಂಡಲದ ೧೨ ನೇ ಸೂಕ್ತದ ೫ ನೇ ಋಕ್ಕಿನಲ್ಲಿ ಉಪಯೋಗಿಸಿರುವ ವಿಜಃ ಎನ್ನುವ ಪದಕ್ಕೆ **ಉದ್ವೇಜಕಃ** ಎಂದು ಅರ್ಥವು. ಉಳಿದ ಕಡೆಗಳಲ್ಲೆಲ್ಲಾ **ಪಕ್ಷಿ** ಎನ್ನುವುದಕ್ಕೆ ವಿಃ ಅಥವಾ **ವಯಃ** ಎಂಬ ಪದಗಳೇ ಉಪಯುಕ್ತವಾಗಿವೆ.

**ಅಮಿನಾನಾ—ಮೀಞ್ ಹಿಂಸಾಯಾಂ । ಬಲಾದ್ಹಿಂಸಂತೀ ।** ಹಿಂಸಾರ್ಥಕವಾದ **ಮೀ** ಧಾತುವಿನಿಂದ ಹುಟ್ಟಿದ ಈ ಶಬ್ದಕ್ಕೆ ಬಲಾತ್ಕಾರದಿಂದ ಹಿಂಸಿಸುವವಳು ಎಂದರ್ಥವಾಗುತ್ತದೆ.

**ಕೃತ್ನುಃ—ಕೃತೀ ಛೇದನೇ ।** ಕತ್ತರಿಸು ಎನ್ನುವ ಧಾತುವಿನಿಂದ ನಿಷ್ಪನ್ನವಾಗಿ ರೆಕ್ಕೆಗಳನ್ನೆಲ್ಲಾ ಕತ್ತರಿಸಿ ಹಿಂಸಿಸುವವಳು ಎಂದರ್ಥ.

**ಶ್ವಘ್ನೀ**—ಈ ಪದಕ್ಕೆ ಮೋಸಮಾಡತಕ್ಕ ಜೂಜುಗಾರನೆಂದೂ, ವ್ಯಾಧನೆಂದೂ, ವ್ಯಾಧನ ಪತ್ನಿಯೆಂದೂ ಮೂರುವಿಧವಾಗಿ ಅರ್ಥವನ್ನು ಮಾಡಬಹುದು. ಮೊದಲನೆಯದಾಗಿ ನಿರುಕ್ತಕಾರರ ವಿವರಣೆಯಂತೆ **ಶ್ವಘ್ನೀ**

**ಕಿತವೋ ಭವತಿ, ಸ್ವಂ ಹಂತಿ ಸ್ವಂ ಪುನರಾಶ್ರಿತಂ ಭವತಿ ।** **ಶ್ವಘ್ನಿ**ಯೆಂದರೆ ಜೂಜುಗಾರನು. ತಾನು ತನ್ನನ್ನೇ ನಾಶಮಾಡಿಕೊಳ್ಳುತ್ತಾನೆ. ಮತ್ತು ಪರಾಧೀನನಾಗುತ್ತಾನೆ ಎಂದು ವಿವರಿಸಿ ಋಕ್ಸಂಹಿತೆಯ,

**ಕೃತಂ ನ ಶ್ವಘ್ನೀ ವಿ ಚಿನೋತಿ ದೇವನೇ ಸಂವರ್ಗಂ ಯನ್ಮಘವಾ ಸೂರ್ಯಂ ಜಯೆತ್ ।**
(ಋ. ಸಂ. ೧೦-೪೩-೫)

ಎಂಬ ಋಕ್ಕನ್ನು ಉದಹರಿಸುತ್ತಾರೆ. (ನಿ. ೫-೨೨) ಈ ವಿವರಣೆಯನ್ನು ಅನುಸರಿಸಿದರೆ ಇಲ್ಲಿ ಜೂಜುಗಾರನೆಂದಾಗುತ್ತದೆ. ಸ್ಕಂದಸ್ವಾಮಿಗಳು **ಶ್ವಭಿರ್ಹಂತೀತಿ ಶ್ವಘ್ನಿರ್ಲುಬ್ಧಕ ಇಹೋಚ್ಯತೇ ।** ನಾಯಿಗಳ ಮುಖಾಂತರ ಕೊಲ್ಲತಕ್ಕ ಬೇಟೆಗಾರನು ಎಂದೂ, ಸಾಯಣರು **ಶುನಾ ಮೃಗಾನ್ ಹತವಾನ್ ಶ್ವಹಾ । ತಸ್ಯ ಸ್ತ್ರೀ ಶ್ವಘ್ನೀ।** ನಾಯಿಯ ಮೂಲಕ ಮೃಗಗಳನ್ನು ಕೊಲ್ಲತಕ್ಕ ವ್ಯಾಧನ ಸ್ತ್ರೀ ಎಂದೂ ವಿವರಿಸುತ್ತಾರೆ. **ಋಕ್ಸಂಹಿತೆಯಲ್ಲಿ** ಈ ಋಕ್ಕನ್ನು ಬಿಟ್ಟು ಉಳಿದ ಐದು ಕಡೆಗಳಲ್ಲಿ **ಶ್ವಘ್ನೀ** ಎಂಬ ಪದದ ಪ್ರಯೋಗವಿದೆ. ಅವುಗಳಲ್ಲಿ ೨-೧೨-೪ ; ಮತ್ತು ೪-೨೦-೩ ಈ ಋಕ್ಕುಗಳಲ್ಲಿ ಈ ಶಬ್ದಕ್ಕೆ **ವ್ಯಾಧ**ನೆಂದೂ ೧೦-೪೨-೯ ; ೧೦-೪೩-೫ ; ೮-೪೫-೩೮ ಈ ಋಕ್ಕುಗಳಲ್ಲಿ ಬರುವಾಗ **ಕಿತವ**ನೆಂದೂ ಸಾಯಣರು ಅರ್ಥಮಾಡುತ್ತಾರೆ.

ಯಾವ ಅರ್ಥವನ್ನು ಮಾಡಿದರೂ ಸಹ ಸೌಂದರ್ಯದಾಯಕಳೂ, ಲೋಕಕ್ಕೆ ಚೈತನ್ಯದಾಯಕಳೂ ಆದ ಉಷಸ್ಸು ಪ್ರಾಣಿಗಳಿಗೆಲ್ಲಾ ತಿಳಿಯದೆಯೇ ಮುಪ್ಪನ್ನು ತಂದುಕೊಟ್ಟು, ನಾಶಕ್ಕೆ ಕಾರಣಳೂ ಆಗುತ್ತಾಳೆ ಎಂಬ ಒಂದು ವ್ಯಾಕುಲತೆಯೂ ವ್ಯಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜಾಯಮಾನಾ**— ಜನೀ ಪ್ರಾದುರ್ಭಾವೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ **ಜ್ಞಾಜನೋರ್ಜಾ** ಎಂಬುದರಿಂದ ಧಾತುವಿಗೆ ಜಾದೇಶ. ಶ್ಯನ್ ವಿಕರಣ. **ಆನೇಮುಕ್**— ಎಂಬುದರಿಂದ ಅಜಂತಾಂಗಕ್ಕೆ ಮುಕಾಗಮ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**— ಸೂತ್ರದಿಂದ ಅನುದಾತ್ತ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತನಾಗುತ್ತದೆ.

**ಪುರಾಣೀ**— ಪುರಾ ಭವಾ ಪುರಾಣೀ. ಪುರಾ ಎಂಬುದು ಆಕಾರಾಂತವಾದ ಅವ್ಯಯ. **ಸಾಯಂ ಚಿರಂ ಪ್ರಾಹ್ಣೇಪ್ರಗೇವ್ಯಯೇಭ್ಯಃ**— (ಪಾ. ಸೂ. ೪-೩-೨೩) ಎಂಬುದರಿಂದ ಭಾವಾರ್ಥದಲ್ಲಿ ಟ್ಯುಪ್ರತ್ಯಯ. **ಯುವೋರನಾಕೌ**— ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯ ಟಿತ್ತಾದುದರಿಂದ ಸ್ತ್ರೀತ್ವದಲ್ಲಿ **ಟಿಡ್ಢಾಣಞ್**— ಎಂಬುದರಿಂದ ಙೀಪ್. ರೇಫದ ಪರದಲ್ಲಿ ನಕಾರ ಬಂದುದರಿಂದ **ಅಟ್‌ಕುಪ್ವಾಙ್**— ಎಂಬುದರಿಂದ ಅದಕ್ಕೆ ಣತ್ವ. ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ಶುಂಭಮಾನಾ**— ಶುಭ ದೀಪ್ತೌ ಧಾತು. ಲಡರ್ಥದಲ್ಲಿ ಶಾನಚ್‌ಪ್ರತ್ಯಯ. ಶಪ್ ವಿಕರಣ. **ಆನೇಮುಕ್**— ಎಂಬುದರಿಂದ ಅಜಂತಾಂಗಕ್ಕೆ ಮುಕಾಗಮ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ **ತಾಸ್ಯನುದಾತ್ತೇತ್**— ಎಂಬುದರಿಂದ ಲಸಾರ್ವಧಾತುಕವು (ಆನ) ಅನುದಾತ್ತವಾಗುತ್ತದೆ ಆಗ ಧಾತುಸ್ವರ ಉಳಿಯುತ್ತದೆ.

ಶ್ವಘ್ನೀ— ಶುನಾ ಮೃಗಾನ್ ಹತವಾನ್ ಶ್ವಹಾ. **ಬಹುಲಂ ಛಂದಸಿ** (ಪಾ. ಸೂ. ೩-೨-೮೮). ಎಂಬುದರಿಂದ ಬ್ರಹ್ಮಾದಿಗಳೇ ಉಪಪದವಾಗಿರಬೇಕೆಂದು ನಿಯಮಮಾಡಿದರೂ ತದ್ವ್ಯತಿರಿಕ್ತವಾದುದು ಉಪಪದವಾಗಿರುವಾಗ ಹನ್‌ಧಾತುವಿಗೆ ಕ್ವಿಪ್. ಶ್ವಹನ್ ಶಬ್ದವಾಗುತ್ತದೆ. ನಾಂತವಾದುದರಿಂದ ಸ್ತ್ರೀತ್ವದಲ್ಲಿ **ಋನ್ನೇಭ್ಯೋ ಙೀಪ್**—ಎಂಬುದರಿಂದ ಙೀಪ್. ಭಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ**—ಎಂಬುದರಿಂದ ಅನಿನ ಅಕಾರಕ್ಕೆ ಲೋಪ. **ಹೋ ಹಂತೇರ್ಞ್ಣಿನ್ನೇಷು** (ಪಾ. ಸೂ. ೭-೩-೫೪) ಎಂಬುದರಿಂದ ನಕಾರ ಪರದಲ್ಲಿರುವುದರಿಂದ ಧಾತುವಿನ ಹಕಾರಕ್ಕೆ ಕುತ್ವದಿಂದ ಘಕಾರಾದೇಶ. ಙೀಪ್‌ಪರವಾದಾಗ ಉದಾತ್ತವಾದ ಧಾತುವಿನ ಅಕಾರವು ಲೋಪವಾದುದರಿಂದ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ**—ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ.

**ಕೃತ್ನುಃ**—ಕೃತೀ ಛೇದನೇ ಧಾತು. ಇದಕ್ಕೆ ಔಣಾದಿಕವಾದ ಕ್ನುಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ವಿಜಃ—ಓವಿಜೀ ಭಯಚಲನಯೋಃ ಧಾತು. ವಿಜಂತಿ ಚಲಂತಿ ಇತಿ ವಿಜಃ. ಪಕ್ಷಿಣಃ **ಕ್ವಿಪ್ ಚ**—ಎಂಬುದರಿಂದ ಕ್ವಿಪ್‌ಪ್ರತ್ಯಯ. ಬಹುವಚನಾಂತರೂಪ.

**ಆಮಿನಾನಾ**—ಮೀಙ್ ಹಿಂಸಾಯಾಂ ಧಾತು. ಕ್ರ್ಯಾದಿ. ಇದುಪ್ವಾದಿಯಲ್ಲಿ ಸೇರಿರುವುದರಿಂದ **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಹ್ರಸ್ವ ಬರುತ್ತದೆ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಾನಚ್ ಪರವಾದಾಗ **ಕ್ರ್ಯಾದಿಭ್ಯಃ ಶ್ನಾ**—ಎಂಬುದರಿಂದ ಶ್ನಾವಿಕರಣ ಆಙ್ ಉಪಸರ್ಗ. ಆಮಿನಾನಾ ಎಂದು ರೂಪವಾಗುತ್ತದೆ. ಶಾನಚ್ ಚಿತ್ತಾದುದರಿಂದ **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೧೦ ॥

---

॥ ಸಂಹಿತಾಪಾಠಃ ॥

ವ್ಯೂರ್ಣ್ವತೀ ದಿವೋ ಅಂತಾಁ ಅಬೋಧ್ಯಪ ಸ್ವಸಾರಂ ಸನುತ-
ರ್ಯುಯೋತಿ ।
ಪ್ರಮಿನತೀ ಮನುಷ್ಯಾ ಯುಗಾನಿ ಯೋಷಾ ಜಾರಸ್ಯ ಚಕ್ಷಸಾ
ವಿ ಭಾತಿ ॥ ೧೧ ॥

ಪದಪಾಠಃ

ವಿಽಊರ್ಣ್ವತೀ । ದಿವಃ । ಅಂತಾನ್ । ಅಬೋಧಿ । ಅಪ । ಸ್ವಸಾರಂ । ಸನುತಃ । ಯುಯೋತಿ ।

ಪ್ರಽಮಿನತೀ । ಮನುಷ್ಯಾ । ಯುಗಾನಿ । ಯೋಷಾ । ಜಾರಸ್ಯ । ಚಕ್ಷಸಾ । ವಿ । ಭಾತಿ ॥ ೧೧ ॥

ಸಾಯಣಭಾಷ್ಯಂ

ದಿವೋ ನಭಸೋಽಂತಾನ್ ಪ್ರಾಂತಾನ್ವ್ಯೂರ್ಣ್ವತೀ ವಿವೃತಾಂಸ್ತಮಸಾ ವಿಯುಕ್ತಾನ್ ಕುರ್ವತ್ಯುಷಾ ಅಬೋಧಿ । ಸರ್ವೈಃ ಪ್ರಾಣಿಭಿರಜ್ಞಾಯಿ । ಜ್ಞಾತಾಽಭೂತ್ । ತದನಂತರಂ ಸ್ವಸಾರಮುಷಸಃ ಪ್ರಾದುರ್ಭಾವೇ ಸತಿ ಸ್ವಯಮೇವ ಸರಂತೀಂ ನಿಶಾಂ ಸನುತಃ । ಅಂತರ್ಹಿತನಾಮೈತತ್ । ಅಂತರ್ಹಿತಪ್ರದೇಶೇಽಪ ಯುಯೋತಿ । ಅಪಗಮಯ್ಯ ಪೃಥಕ್ಕರೋತಿ । ಮನುಷ್ಯಾ ಮನುಷ್ಯಾಣಾಂ ಸಂಬಂಧೀನಿ ಯುಗಾನಿ ಕೃತತ್ರೇತಾದೀನಿ ಪ್ರಮಿನತೀ ಸ್ವಗಮನಾಗಮನಾಭ್ಯಾಂ ಪ್ರಕರ್ಷೇಣ ಹಿಂಸಂತೀ ಜಾರಸ್ಯ ರಾತ್ರೇರ್ಜರಯಿತುಃ ಸೂರ್ಯಸ್ಯ ಯೋಷಾ ಜಾಯೋಷಾಶ್ಚಕ್ಷಸಾತ್ಮೀಯೇನ ಪ್ರಕಾಶೇನ ವಿ ಭಾತಿ । ವಿಶೇಷೇಣ ಪ್ರಕಾಶತೇ ॥ ವ್ಯೂರ್ಣ್ವತೀ । ಊರ್ಣುಞ್ ಆಚ್ಛಾದನೇ । ವಿಪೂರ್ವಾದಸ್ಮಾಲ್ಲಟಃ ಶತೃ । ಉಗಿತಶ್ಚೇತಿ ಙೀಪ್ । ಶತುರನುಮ ಇತಿ ನದ್ಯಾ ಉದಾತ್ತತ್ವಂ । ಸನುತಃ । ನಿತದಂತೋದಾತ್ತಂ ಸ್ವರಾದಿಷು ನಿಪಾತಿತಂ । ಅತೋಽವ್ಯಯಸಂಜ್ಞಾಯಾಮವ್ಯಯಾದಾಪ್ಸುಪ ಇತಿ ಸಪ್ತಮ್ಯಾ ಲುಕ್ । ಯುಯೋತಿ । ಯು ಮಿಶ್ರಣಾಮಿಶ್ರಣಯೋಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಮನುಷ್ಯಾ । ಸುಪಾಂ ಸುಲುಗಿತಿ ಷಷ್ಠ್ಯಾ ಡಾದೇಶಃ । ಯುಗಾನಿ । ಯುಜೇಃ ಕರಣೇ ಕರ್ಮಣಿ ವಾ ಘಞ್ । ಚಜೋಃ ಕು ಘಿಣ್ಯತೋರಿತಿ ಕುತ್ವಂ । ಉಂಛಾದಿಷು ಕಾಲವಿಶೇಷೇ ರಥಾದ್ಯುಪಕರಣೇ ಚ ಯುಗಶಬ್ದಪಾಠಾತ್ ಲಘೂಪಧಗುಣಾಭಾವಃ । ಕಾ. ೬-೧-೧೬೦ । ಉಂಛಾದೀನಾಂ ಚೇತ್ಯಂತೋದಾತ್ತತ್ವಂ । ಜಾರಸ್ಯ । ದಾರಜಾರೌ ಕರ್ತರಿ ಣಿಲುಕ್ಚ । ಪಾ ೩-೩-೨೦-೪ । ಘಞಂತೋ ನಿಪಾತ್ಯತೇ ॥

॥ ಪ್ರತಿಪದಾರ್ಥ ॥

**ದಿವಃ**—ಅಂತರಿಕ್ಷದ । **ಅಂತಾನ್**—ಕೊನೆಯ ಭಾಗಗಳನ್ನೆಲ್ಲಾ । **ವ್ಯೂರ್ಣ್ವತೀ**—( ಕತ್ತಲೆಯಿಂದ ) ಬಿಡಿಸಿ ಪ್ರಕಾಶಗೊಳಿಸುತ್ತಾ ಇರುವ ( ಉಷೋದೇವಿಯು ) । **ಅಬೋಧಿ**—( ಎಲ್ಲರಿಂದಲೂ ) ತಿಳಿಯಲ್ಪಟ್ಟಳು (ಅನಂತರ) । **ಸ್ವಸಾರಂ**—ತಾನಾಗಿಯೇ ಕಳೆದುಹೋಗತಕ್ಕ ರಾತ್ರಿಯನ್ನು । **ಸನುತಃ**—ಮರೆಯಾದ ಪ್ರದೇಶಕ್ಕೆ **ಅಪ ಯುಯೋತಿ**—ಅದೃಶ್ಯವಾಗುವಂತೆ ಅಟ್ಟುತ್ತಾಳೆ । **ಮನುಷ್ಯಾ**—ಮಾನವರ । **ಯುಗಾನಿ**—ಕೃತತ್ರೇತಾದಿ ಯುಗಗಳನ್ನು । **ಪ್ರಮಿನತೀ**—ಸವೆಯುವಂತೆ ಮಾಡುತ್ತಾ । **ಜಾರಸ್ಯ**—( ರಾತ್ರಿಯನ್ನು ) ಕೊನೆಗಾಣಿಸುವ ಸೂರ್ಯನ ಅಥವಾ ತನ್ನ ಪ್ರಿಯನಾದ ಸೂರ್ಯನ । **ಯೋಷಾ**—ಪತ್ನಿಯಾಗಿ । **ಚಕ್ಷಸಾ**—ತನ್ನ ಕಾಂತಿಯೊಡನೆ । **ವಿ ಭಾತಿ**—ಪ್ರಕಾಶಿಸುತ್ತಾಳೆ ॥

ಭಾವಾರ್ಥ

ಉಷೋದೇವಿಯು ಅಂತರಿಕ್ಷದ ಕೊನೆಯ ಭಾಗಗಳನ್ನೆಲ್ಲಾ ಕತ್ತಲೆಯಿಂದ ಬಿಡಿಸಿ ಪ್ರಕಾಶಗೊಳಿಸುತ್ತಾ ಇರುವಾಗ ಎಲ್ಲರೂ ಅವಳ ಸ್ವರೂಪವನ್ನು ತಿಳಿದುಕೊಂಡರು. ಅವಳು ತಾನಾಗಿಯೇ ಕಳೆದುಹೋಗತಕ್ಕ ರಾತ್ರಿಯನ್ನು ಮರೆಯಾದ ಪ್ರದೇಶಕ್ಕೆ ಅನೃಶ್ಯನಾಗುವಂತೆ ಅಟ್ಟುತ್ತಾಳೆ. ಮಾನವರ ಕಾಲಮಾನಗಳಾದ ಕೃತ ತ್ರೇತಾದಿ ಯುಗಗಳನ್ನು ಸವೆಯುವಂತೆ ಮಾಡುತ್ತಾ ರಾತ್ರಿಯನ್ನು ಕೊನೆಗಾಣಿಸುವ ಸೂರ್ಯನ ಪತ್ನಿಯಾಗಿ ತನ್ನ ಕಾಂತಿಯೊಡನೆ ಪ್ರಕಾಶಿಸುತ್ತಾಳೆ ॥

## English Translation

She has been seen illuminating the boundaries of the sky, and driving into disappearance the spontaneously night; wearing away the ages of the human race, she shines with light like the bride of the Sun.

॥ ವಿಶೇಷವಿಷಯಗಳು ॥

**ವ್ಯೂರ್ಣ್ವತೀ—ಊರ್ಣೂಞ್ ಆಚ್ಛಾದನೇ** । ಮರೆಸು, ಹೊದ್ದಿಸು ಎಂಬ ಅರ್ಥದ **ಊರ್ಣು** ಧಾತುವು **ಊರ್ಣ್ವತೀ** ಎಂದಾಗುತ್ತದೆ. ಇಲ್ಲಿ ವಿ ಎಂಬ ಉಪಸರ್ಗದೊಡನೆ ಸೇರಿ ವಿಗತವಾದ ಆಚ್ಛಾದನೆ ಎಂದರೆ ಕತ್ತಲುರೂಪವಾದ ಮರೆಯನ್ನು ತಪ್ಪಿಸುವುದು ಎಂದರ್ಥ. **ವಿವೃತಾಂಸ್ತಮಸಾ ವಿಯುಕ್ತಾನ್ ಕುರ್ವಂತ್ಯುಷಾಃ** ।ಸುತ್ತಲೂ ಆವರಿಸಿರುವ ಕತ್ತಲೆಯಿಂದ ಜಗತ್ತನ್ನು ಬಿಡಿಸಿ ಪ್ರಕಾಶಗೊಳಿಸುತ್ತಿರುವ ಉಷಸ್ಸು ಎಂದರ್ಥ.

ಕೆಲವು ಕಡೆಗಳಲ್ಲಿ ಉಷಸ್ಸಿಗೇ ವಿಶೇಷಣವಾಗಿ ಉಪಯೋಗಿಸಿದಾಗ **ವ್ಯೂರ್ಣ್ವತೀ** ಎಂಬ ಪದಕ್ಕೆ ಕೊಡುವುದು ಎಂಬ ಅರ್ಥವೂ ಇದೆ. ಉದಾಹರಣೆಗೆ—

**ವ್ಯೂರ್ಣ್ವತೀ ದಾಶುಷೇ ವಾರ್ಯಾಣಿ ಪುನರ್ಜ್ಯೋತಿರ್ಯುವತಿಃ ಪೂರ್ವಥಾಕಃ ।**
ಋ. ಸ. ೫-೮೦-೬.

ಎಂಬ ಈ ಋಕ್ಕಿನಲ್ಲಿ **ಪ್ರಯಚ್ಛಂತೀ** । ಕೊಡುವವಳಾಗಿ ಎಂದು ವಿವರಿಸಿದೆ. ಇಲ್ಲೂ ಸಹ ಪ್ರಕಾಶಪಡಿಸಿ ಕೊಡುವುದು ಎಂದಾಗುತ್ತದೆ. ಋ. ಸಂ. ೯-೯೪-೨. ಮುಂತಾದ ಋಕ್ಕುಗಳಲ್ಲಿ **ಸ್ವತೇಜಸಾ ಆಚ್ಛಾದಯನ್** ಎಂದು ವಿವರಿಸುತ್ತಾರೆ. ಅಲ್ಲೆಲ್ಲಾ ವಿ ಎನ್ನುವ ಉಪಸರ್ಗಕ್ಕೆ ವಿಶೇಷವಾದ ವಿಂದಾಗಿ ವಿಶೇಷವಾದ **ಊರ್ಣವನ** ಎಂದರೆ ಸಂಪೂರ್ಣವಾಗಿ ತೇಜಸ್ಸನ್ನು ಹರಡಿ ಆವರಿಸುವುದು ಎಂದಭಿಪ್ರಾಯವು.

**ಸ್ವಸಾರಂ—ಉಷಸಃ ಪ್ರಾದುರ್ಭಾವೇ ಸತಿ ಸ್ವಯಮೇವ ಸರಂತೀಂ ನಿಶಾಂ** । ಉಷಸ್ಸಿನ ಉದಯವಾದೊಡನೆಯೇ ತಾನಾಗಿಯೇ ಕಳೆದುಹೋಗತಕ್ಕ ರಾತ್ರಿಯನ್ನು ಎಂದು ವಿವರಿಸಿದೆ. ಇಲ್ಲಿ **ಸ್ವಸಾರಂ** ಎಂಬ ಪದಕ್ಕೆ ಸಹೋದರಿಯನ್ನು ಎಂದೂ ಅರ್ಥಮಾಡಬಹುದು. ರಾತ್ರಿಯೂ ಉಷಸ್ಸೂ ಸಹೋದರಿಯರೆಂದು ರಾತ್ರಿಯು

ತನ್ನ ಕಾಲವಾದೊಡನೆ ತನ್ನ ಸಹೋದರಿಯಾದ ಉಷಸ್ಸಿಗೆ ದಾರಿಯನ್ನು ಬಿಟ್ಟುಕೊಡುವಳೆಂದೂ ಸಹ **ಅನೇಕ** ಕಡೆ ಇವರಿಬ್ಬರ ಸಂಬಂಧವನ್ನೂ ವಿವರಿಸಿದೆ.

**ಸಮಾನೋ ಅಧ್ವಾ ಸ್ವಸ್ರೋರನಂತಸ್ತಮನ್ಯಾನ್ಯಾ ಚರತೋ ದೇವಶಿಷ್ಟೇ ।**
( ಋ ಸಂ. ೧-೧೧೩-೩ )

**ಸ್ವಸ್ರಾ ಸಸ್ರೇ ಜ್ಯಾಯಸ್ಯೈ ಯೋನಿಮಾರೈಗಪೈತ್ಯಸ್ಯಾಃ ಪ್ರತಿಚಕ್ಷ್ಯೇವ ।**
( ಋ. ಸಂ. ೧-೧೨೪-೮ )

**ಅರುಷಸ್ಯ ದುಹಿತರಾ ವಿರೂಪೇ ಸ್ತೃಭಿರನ್ಯಾ ಪಿಪಿಶೇ ಸೂರೋ ಅನ್ಯಾ ।**
**ಮಿಥಸ್ತುರಾ ವಿಚರಂತೀ ಪಾವಕೇ ಮನ್ಮ ಶ್ರುತಂ ನಕ್ಷತ ಋಚ್ಯಮಾನೇ ।**
(ಋ. ಸಂ. ೬-೪೯-೩)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ರಾತ್ರಿಯು ಮತ್ತು ಉಷಸ್ಸಿನ ಸಹೋದರಿ ಸಂಬಂಧವನ್ನು ವರ್ಣಿಸಿ ಯಾವ ರೀತಿ ಅವರಿಬ್ಬರೂ ಸಹ ತಮ್ಮ ಸತತವಾದ ಮತ್ತು ನಿಯಮಿತವಾದ ಸಂಚಾರದಿಂದ ಲೋಕಯಾತ್ರೆಗೆ ಕಾರಣರಾಗಿರುವವ ರೆಂದು ವಿವರಿಸಿದೆ. ಆದುದರಿಂದ ಇಲ್ಲಿಯೂ ಸಹ **ಸ್ವಸಾರಂ** ಎನ್ನುವುದಕ್ಕೆ ಸಹೋದರಿಯನ್ನು ಎಂದು ಹೇಳಬಹುದು

**ಸನುತಃ**—ನಿಣ್ಯಂ, ಸ್ವಸಃ, ಸನುತಃ ಇತ್ಯಾದಿ ಆರು ಅಂತರ್ಹಿತ ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೯) ಗೂಢವಾದುದು, ಕಣ್ಣಿಗೆ ಕಾಣದಿರುವುದು ಎಂದರ್ಥ. ಈಪದಕ್ಕೆ ಉದಾಹರಣೆಯಾಗಿ ನಿರುಕ್ತಿಕಾರರು

**ಸ ಸುತ್ರಾಮಾ ಸ್ವವಾँ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ।**
( ಋ. ಸಂ. ೬-೪೭-೧೩ )

ಎಂಬ ಋಕ್ಕನ್ನು ಉದಹರಿಸಿರುತ್ತಾರೆ. ಹೀಗೆಯೇ, ಋಂ. ಸಂ. ೨-೨೮-೨ ; ೫-೪೫-೫೫ ; ೮-೯೭-೩ ; ೧೦-೭೭-೬ ಇತ್ಯಾದಿ ಅನೇಕ ಋಕ್ಕುಗಳಲ್ಲಿ ಈ ಪದವು ರಹಸ್ಯ, ಮರೆಯಾಗಿ, ಕಣ್ಣಿಗೆ ಕಾಣದಿರುವ ಪ್ರದೇಶ ಎಂಬ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದೆ ಈ ಸಂದರ್ಭದಲ್ಲೂ ಉಷಸ್ಸು ತನ್ನ ಸಹೋದರಿಯಾದ ನಿಶೆಯನ್ನು ಯಾರಿಗೂ ಕಾಣದಿರುವ ಮರೆಯಾದ ಪ್ರದೇಶಕ್ಕೆ ಅಟ್ಟುತ್ತಾಳೆಂದರ್ಥ.

**ಯುಗಾನಿ ಪ್ರಮಿನತೀ—ಯುಗ ಶಬ್ದಃ ಕಾಲವಚನಃ । ಮನುಷ್ಯಾಣಾಂ ಜೀವಿತಾದಿಕಾಲಾನ್ । ಯುಗ** ಶಬ್ದವು ಮಾನವರ ಜೀವಿತದ ಕಾಲವೆಂದರ್ಥ. (ಇದರ ವಿವರಣೆಯನ್ನು ಬಾಲಗಂಗಾಧರ ತಿಲಕರವರ The Arctic Home in the Vedas ಎಂಬ ಪುಸ್ತಕದ ೧೭೬ ನೆಯ ಪುಟದಲ್ಲಿ ನೋಡಬಹುದು) ಮಾನ ವರ ಜೀವಿತದ ಕಾಲವನ್ನೆಲ್ಲಾ ಸವೆಯುವಂತೆ ಮಾಡುತ್ತಾ)

**ಚಕ್ಷಸಾ ವಿಭಾತಿ**—ತನ್ನ ಕಾಂತಿಯೊಡನೆಯೂ ಸೊಬಗಿನೊಡನೆಯೂ ಸಹ ತನ್ನ ಪ್ರಿಯನಾದ ಸೂರ್ಯ ನೊಡನೆ ಪ್ರಕಾಶಿಸುತ್ತಾಳೆ. ಈ ಭಾವದಲ್ಲಿ ಸತ್ಯಾನುಭವವೂ ಸೌಂದರ್ಯದರ್ಶನವೂ ಒಟ್ಟಿಗೆ ಸೇರಿಕೊಂಡಿದೆ. ಉಷಸ್ಸು ಮಾನವರ ಜೀವಿತದ ಕಾಲವನ್ನೆಲ್ಲಾ ಸವೆಸುತ್ತಾಳೆ ಎಂಬ ಸತ್ಯದರ್ಶನದ ಭಾವವು ಸಾಧಾರಣವಾಗಿ ಉಷಸ್ಸಿನ ವರ್ಣನೆಯು ಋಂದಃಗಳೆಲ್ಲಾ ವ್ಯಕ್ತವಾಗಿದೆ. ಉದಾಹರಣೆಗೆ—

**ಈಯುಷ್ಟೇ ಯೇ ಪೂರ್ವತರಾಮಪಶ್ಯನ್ವ್ಯುಚ್ಛಂತೀಮುಷಸಂ ಮರ್ತ್ಯಾಸಃ ।**
(ಋ. ಸಂ. ೧-೧೧೩-೧೧)

**ಅಮಿನತೀ ದೈವ್ಯಾನಿ ವ್ರತಾನಿ ಪ್ರಮಿನತೀ ಮನುಷ್ಯಾ ಯುಗಾನಿ ।**
(ಋ. ಸಂ. ೧-೧೨೪-೨)

ಇತ್ಯಾದಿ ನಾನಾ ಕಡೆಗಳಲ್ಲಿ ಮಾನವನ ಅಲ್ಪಕಾಲ ಜೀವನದ ಚಿತ್ರವು— ಶಾಶ್ವತವಾದ ಈ ಉಷಸ್ಸಿನ ಸೊಬಗನ್ನು ಹಿಂದೆ ನೋಡಿ ಸಂತೋಷಪಟ್ಟವರೆಲ್ಲರೂ ಗತರಾದರು. ಮುಂದಿನವರ ಪಾಡೂ ಹೀಗೆಯೇ, ಆದರೆ ಉಷಸ್ಸು ಮಾತ್ರ ನಿತ್ಯಳೂ, ನಿತ್ಯ ತರುಣಳೂ ಆಗಿರುತ್ತಾಳೆ ಎಂಬ ಭಾವದಿಂದ ವ್ಯಕ್ತಪಡುತ್ತದೆ.

**ಜಾರಸ್ಯ—ರಾತ್ರೇರ್ಜರಯಿತುಃ ಸೂರ್ಯಸ್ಯ ।** ರಾತ್ರಿಯನ್ನು ಕೊನೆಗಾಣಿಸತಕ್ಕ ಸೂರ್ಯನ ಎಂದಾಗಲಿ, ಅಥವಾ ಪ್ರಿಯನಾದ ಸೂರ್ಯನ ಎಂದಾಗಲಿ ಅರ್ಥವಾಗುತ್ತದೆ. ಎರಡನೆಯ ಅರ್ಥವೇ ಹೆಚ್ಚು ಒಪ್ಪುತ್ತದೆ. **ಯೋಷಾ**—ಪತ್ನಿಯಾಗಿ ಎಂದು ಮುಂದಕ್ಕೆ ಪತಿಪತ್ನೀಸಂಬಂಧವು ಇರುವುದರಿಂದ ಪ್ರಿಯನೆಂಬ ಅರ್ಥವು ಸಮಂಜಸವಾಗಿದೆ. ಉಷಸ್ಸಿಗೂ ಸೂರ್ಯನಿಗೂ ಈ ದಾಂಪತ್ಯಸಂಬಂಧವು ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. ಉದಾಹರಣೆಗೆ—

**ಸೂರ್ಯೋ ದೇವೀಮುಷಸಂ ರೋಚಮಾನಾಂ ಮರ್ಯೋ ನ ಯೋಷಾಮಭ್ಯೇತಿ ಪಶ್ಚಾತ್ ।**
( ಋ. ಸಂ. ೧-೧೧೫-೨ )

**ವಾಜಿನೀವತೀ ಸೂರ್ಯಸ್ಯ ಯೋಷಾ ಚಿತ್ರಾಮಘಾ ರಾಯ ಈಶೇ ವಸೂನಾಂ ।**
( ಋ. ಸಂ. ೭-೭೫-೫ )

ಇತ್ಯಾದಿ ಅನೇಕ ಸಂದರ್ಭಗಳಲ್ಲಿ ಸೂರ್ಯನಿಗೂ ಉಷಸ್ಸಿಗೂ ಇರುವ ಪತಿಪತ್ನಿಯರ ಸಂಬಂಧವು ಸೂಚಿತವಾಗಿದೆ. ನಿರುಕ್ತಕಾರರೂ ಸಹ—**ಸೂರ್ಯಾ ಸೂರ್ಯಸ್ಯ ಪತ್ನೀ ।** ಎಂದು ವಿವರಿಸಿ ಋ. ಸಂ. ೧೦-೮೫-೨೦ನೇ ಋಕ್ಕನ್ನು ಉದಹರಿಸುತ್ತಾರೆ. ( ನಿ. ೧೨- ).

**ಚಕ್ಷಸಾ—ಆತ್ಮೀಯೇನ ಪ್ರಕಾಶಾಖ್ಯೇನ। ದರ್ಶನೇನ** ತನ್ನ ಕಾಂತಿರೂಪವಾದ ದರ್ಶನದಿಂದ ಸೂರ್ಯನೊಂದಿಗೆ ಲೀನಳಾಗಿ ಪ್ರಕಾಶಿಸುತ್ತಾಳೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ವ್ಯೂರ್ಣ್ವತೀ**—ಊರ್ಣುಞ್ ಆಚ್ಛಾದನೇ. ಧಾತು. ವಿ ಉಪಸರ್ಗ ಪೂರ್ವದಲ್ಲಿರುವಾಗ ಇದಕ್ಕೆ ಲಟ್ ಸ್ಥಾನದಲ್ಲಿ ಶತೃ ಪ್ರತ್ಯಯ. **ವ್ಯೂರ್ಣ್ವತ್** ಶಬ್ದವಾಗುತ್ತದೆ. ಸ್ತ್ರೀತ್ವದಲ್ಲಿ ಶತೃ ಉಗಿತ್ತಾದುದರಿಂದ **ಉಗಿತಶ್ಚ** ಎಂಬುದರಿಂದ ಙೀಪ್. ನುಮ್ ರಹಿತವಾದ ಶತೃವಿನ ಪರದಲ್ಲಿ ನದೀಸಂಜ್ಞೆಯುಳ್ಳ ಈಕಾರ ಬಂದುದರಿಂದ **ಶತುರನುಮೋ ನದ್ಯಜಾದೀ** ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ.

**ದಿವಃ—ಊಡಿದಂ ಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಂತಾನ್—ದೀರ್ಘಾದಟಿ ಸಮಾನಪಾದೇ**—ಎಂಬುದರಿಂದ ನಕಾರಕ್ಕೆ ರುತ್ವ. **ಆತೋಟಿ ನಿತ್ಯಮ್** ಎಂಬುದರಿಂದ ಅಕಾರಪರದಲ್ಲಿರುವುದರಿಂದ ಆಕಾರಕ್ಕೆ ಅನುನಾಸಿಕತ್ವ.

**ಅಬೋಧಿ**—ಬುಧ ಅವಗಮನೇ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚಿಣ್ ಭಾವಕರ್ಮಣೋಃ**—ಎಂಬುದರಿಂದ ಚ್ಲಿಗೆ ಚಿಣಾದೇಶ. ಧಾತುವಿನ ಲಘೂಪಧೆಗೆ ತನ್ನಿಮಿತ್ತವಾಗಿ ಗುಣ. **ಚಿಣೋಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ತಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಸನುತಃ**— ಸ್ವರಾದಿಯಲ್ಲಿ ಇದು ಅಂತೋದಾತ್ತವಾಗಿ ಪಠಿತವಾದುದರಿಂದ **ಸ್ವರಾದಿನಿಪಾತಮವ್ಯಯಮ್** ಎಂಬುದರಿಂದ ಅವ್ಯಯಸಂಜ್ಞಾ ಬರುವುದರಿಂದ **ಅವ್ಯಯಾದಾಪ್ಸುಪಃ** (ಪಾ. ಸೂ. ೨-೪-೮೨) ಎಂಬುದರಿಂದ ಇದರ ಪರದಲ್ಲಿರುವ ಸಪ್ತಮೀ ವಿಭಕ್ತಿಗೆ ಲುಕ್.

**ಯುಯೋತಿ**—ಯು ಮಿಶ್ರಣಾಮಿಶ್ರಣಯೋಃ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಬಹುಲಂ ಛಂದಸಿ**—ಸೂತ್ರದಿಂದ ಶಪಿಗೆ ಶ್ಲು ಆದೇಶ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ತಿಪ್ ನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮನುಷ್ಯಾ**—ಮನುಷ್ಯ ಶಬ್ದಕ್ಕೆ ಷಷ್ಠೀವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—ಸೂತ್ರದಿಂದ ವಿಭಕ್ತಿಗೆ ಡಾದೇಶ.

**ಯುಗಾನಿ**—ಯುಜಿರ್ ಯೋಗೇ ಧಾತು. ಕರಣಾರ್ಥದಲ್ಲಿ ಅಥವಾ ಕರ್ಮಣಿಯಲ್ಲಿ ಘಞ್ ಪ್ರತ್ಯಯ. **ಚಜೋಃ ಕುಘಿಣ್ಣ್ಯತೋಃ**—(ಪಾ. ಸೂ. ೭-೩-೫೨) ಎಂಬುದರಿಂದ ಘಿತ್ತ್ವಾದಪ್ರತ್ಯಯ ಪರದಲ್ಲಿರುವುದರಿಂದ ಜಕಾರಕ್ಕೆ ಕುತ್ವದಿಂದ ಜಕಾರಾದೇಶ. ಲಘೂಪಧಗುಣವು ಪ್ರಾಪ್ತವಾದರೆ ಉಂಛಾದಿಗಣದಲ್ಲಿ ಕಾಲವಿಶೇಷಾರ್ಥದ ಯುಗಶಬ್ದವನ್ನು ಪಾಠಮಾಡಿರುವುದರಿಂದ (ಪಾ. ಸೂ. ೬-೧-೧೬೦ ) ಲಘೂಪಧಗುಣ ಬರುವುದಿಲ್ಲ. **ಉಂಛಾದೀನಾಂ ಚ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಜಾರಸ್ಯ**—**ದಾರ ಜಾರೌ ಕರ್ತರಿ ಣಿಲುಕ್ ಚ** (ಪಾ. ಸೂ. ೩-೩-೨೦-೪) ಎಂಬುದರಿಂದ ಘಞಂತವಾಗಿ ನಿಪಾತಿತವಾಗಿದೆ. ॥ ೧೧ ॥



ಸಂಹಿತಾಪಾಠಃ

ಪ್ರಶೂನ್ನ ಚಿತ್ರಾ ಸುಭಗಾ ಪ್ರಥಾನಾ ಸಿಂಧುರ್ನ ಕ್ಷೋದ ಉ-
ರ್ವಿಯಾ ವ್ಯೈಶ್ವೈತ್ ।

ಅಮಿ॑ನತೀ॒ ದೈವ್ಯಾ॑ನಿ ವ್ರ॒ತಾನಿ॒ ಸೂರ್ಯ॑ಸ್ಯ ಚೇತಿ ರ॒ಶ್ಮಿಭಿ॑ರ್ದೃ-
ಶಾ॒ನಾ ॥೧೨॥

॥ ಪದಪಾಠಃ ॥

ಪ॒ಶೂನ್ । ನ । ಚಿ॒ತ್ರಾ । ಸು॒ಽಭಗಾ॑ । ಪ್ರ॒ಥಾ॒ನಾ । ಸಿಂಧುಃ॑ । ನ । ಕ್ಷೋದಃ॑ ।
ಉ॒ರ್ವಿ॒ಯಾ । ವಿ । ಅ॒ಶ್ವೈ॒ತ್ ।

ಅಮಿ॑ನತೀ । ದೈವ್ಯಾ॑ನಿ । ವ್ರ॒ತಾನಿ॑ । ಸೂರ್ಯ॑ಸ್ಯ । ಚೇ॒ತಿ॒ । ರ॒ಶ್ಮಿಽಭಿಃ॑ । ದೃ॒ಶಾ॒ನಾ ॥

ಸಾಯಣಭಾಷ್ಯಂ

ಸುಭಗಾ ಶೋಭನಧನಾ ಚಿತ್ರಾ ಚಾಯನೀಯಾ ಪೂಜನೀಯೋಷಾಃ ಪಶೂನ್ನ ಯಥಾ ಪಶೂನ್ ಗೋಪಾಲಕೋಽರಣ್ಯೇ ವಿಸ್ತಾರಯತಿ ತಥಾ ಪ್ರಥಾನಾ ತೇಜಾಂಸಿ ವಿಸ್ತಾರಯಂತ್ಯುರ್ವಿಯೋರ್ವೀ ಮಹತೀ ಏವಂಭೂತಾ ಸಾ ವ್ಯಶ್ವೈತ್ । ಸರ್ವಂ ಜಗದ್ವ್ಯಾಪ್ನೋತ್ । ತತ್ರ ದೃಷ್ಟಾಂತಃ । ಸಿಂಧುರ್ನ ಕ್ಷೋದಃ । ಯಥಾ ಸ್ಯಂದನಶೀಲಮುದಕಂ ನಿಮ್ನದೇಶೇಽಚಿರಾದೇವ ವ್ಯಾಪ್ನೋತಿ ತದ್ವತ್ । ಸೈವೋಷಾಃ ಸೂರ್ಯಸ್ಯ ರಶ್ಮಿಭಿಃ ಕಿರಣೈಃ ಸಹ ದೃಶಾನಾ ದೃಶ್ಯಮಾನಾ ಸತೀ ಚೇತಿ। ಪ್ರಜ್ಞಾತಾಸೀತ್। ಕಿಂ ಕುರ್ವತೀ । ದೈವ್ಯಾನಿ ದೇವಸಂಬಂಧೀನಿ ವ್ರತಾನಿ ದರ್ಶಪೂರ್ಣಮಾಸಾದೀನಿ ಕರ್ಮಾಣ್ಯಮಿನತೀ ಅಹಿಂಸತೀ । ಅನುಷ್ಠಾನೇ ಯಜಮಾನಾನ್ಪ್ರವರ್ತಯಂತೀತ್ಯರ್ಥಃ । ಉಷಸಃ ಪ್ರಾದುರ್ಭಾವಾನಂತರಂ ಹ್ಯಗ್ನಿಹೋತ್ರಾದೀನಿ ಸರ್ವಾಣಿ ಕರ್ಮಾಣ್ಯನುಷ್ಠೀಯಂತೇ ನ ರಾತ್ರೌ । ನ ಸಾಯಮಸ್ತಿ ದೇವತಾ ಅಜುಷ್ಟಂ । ಋಗ್ವೇ. ೫-೭೭-೨ । ಇತಿ ಶ್ರುತೇಃ ॥ ಪ್ರಥಾನಾ । ಪ್ರಥ ಪ್ರಖ್ಯಾನೇ । ಅಸ್ಮಾದಂತರ್ಭಾವಿತ-ಣ್ಯರ್ಥಾತ್ತಾಚ್ಛೀಲಿಕಶ್ಚಾನಶ್ । ಬಹುಲಂ ಛಂದಸೀತಿ ಶಪೋ ಲುಕ್ । ಸಿಂಧುಃ । ಸ್ಯಂದೂ ಪ್ರಸ್ರ-ವಣೇ । ಸ್ಯಂದೇಃ ಸಂಪ್ರಸಾರಣಂ ಧಶ್ಚ । ಉ. ೧-೧೨ । ಇತ್ಯುಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯು ದಾ-ತ್ತತ್ವಂ। ಅಶ್ವೈತ್। ಟುಓಶ್ವಿ ಗತಿವೃದ್ಧ್ಯೋಃ । ಲುಙ್ಯಙ್ ಚಙೋರ್ವಿಕಲ್ಪಿತತ್ವಾತ್। ಪಾ ೩-೧-೪೯-೫೮ । ಚ್ಲೇಃ ಸಿಚ್ । ಆಗಮಾನುಶಾಸನಸ್ಯಾನಿತ್ಯತ್ವಾದಿಡಭಾವಃ । ಸಿಚಿ ವೃದ್ಧಿಃ । ಪಾ. ೭-೨-೧ । ಅನಿಡಾದಿ-ತ್ವಾತ್ ಹ್ಯಂತಕ್ಷಣೇತಿ ವೃದ್ಧಿಪ್ರತಿಷೇಧಾಭಾವಃ । ಬಹುಲಂ ಛಂದಸಿ । ಪಾ ೭-೩-೯೭ । ಇತೀಡಾಗಮಾ-ಭಾವಃ । ಸ್ಕೋಃ । ಸಂಯೋಗಾದ್ಯೋರಿತಿ ಸಲೋಪಃ । ಚೇತಿ । ಚಿತೀ ಸಂಜ್ಞಾನೇ । ಕರ್ಮಣಿ ಲುಙಃ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ದೃಶಾನಾ । ದೃಶೇಃ ಕರ್ಮಣಿ ಲಟಃ ಶಾನಚ್ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

ಪ್ರತಿಪದಾರ್ಥ

**ಸುಭಗಾ**—ಶ್ರೇಷ್ಠವಾದ ಧನವುಳ್ಳವಳೂ | **ಚಿತ್ರಾ**— ಪೂಜ್ಯಳೂ ಆದ ಉಷೋದೇವಿಯು | **ಪಶೂನ್ ನ**—( ಗೋಪಾಲಕನು ಮೇಯಿಸುವುದಕ್ಕೆ ) ಹಸುಗಳನ್ನು ಚದುರಿಸುವಂತೆಯೂ | **ಸಿಂಧುಃ ನ ಕ್ಷೋದಃ**— ಪ್ರವಹಿಸುವ ನದಿಯು ನೀರನ್ನು ಹರಡುವಂತೆಯೂ | **ಪ್ರಥಾನಾ**— ತನ್ನ ತೇಜಸ್ಸುಗಳನ್ನು ಹರಡಿಕೊಂಡು | **ಉರ್ವಿಯಾ**— ವಿಸ್ತೃತಳಾಗಿ | **ವ್ಯಶ್ವೈತ್**— ಜಗತ್ತನ್ನು ವ್ಯಾಪಿಸಿದಳು | **ದೈವ್ಯಾನಿ**— ದೇವಸಂಬಧವಾದ | **ವ್ರತಾನಿ**— ಯಜ್ಞ ಕರ್ಮಗಳನ್ನು | **ಅಮಿನತೀ**— ಹಿಂಸಿಸದೇ | **ಸೂರ್ಯಸ್ಯ**—ಸೂರ್ಯನ | **ರಶ್ಮಿಭಿಃ**—ಕಿರಣಗಳೊಡನೆ ಕೂಡಿ | **ದೃಶಾನಾ**—ಕಾಣಿಸಿಕೊಂಡು | **ಚೇತಿ**—ತಿಳಿಯಲ್ಪಟ್ಟಳು |'

ಭಾವಾರ್ಥ

ಶ್ರೇಷ್ಠವಾದ ಧನವುಳ್ಳವಳೂ ಮತ್ತು ಪೂಜ್ಯಳೂ ಆದ ಉಷೋ ದೇವಿಯು ಗೋಪಾಲಕನು ಹುಲ್ಲನು ಮೇಯಿಸುವಾಗ ಹಸುಗಳನ್ನು ಹುಲ್ಲುಗಾವಲಿನಲ್ಲಿ ನಾನಾದಿಕ್ಕಿಗೂ ಚದುರಿಸುವಂತೆಯೂ ಪ್ರವಹಿಸುವ ನದಿಯು ತನ್ನ ನೀರನ್ನು ಹರಡುವಂತೆಯೂ ತನ್ನ ತೇಜಸ್ಸುಗಳನ್ನು ಹರಡಿಕೊಂಡು ವಿಸ್ತೃತಳಾಗಿ ಜಗತ್ತನ್ನು ವ್ಯಾಪಿಸಿದಳು. ಮತ್ತು ದೇವಸಂಬಂಧವಾದ ಯಜ್ಞಕರ್ಮಗಳನ್ನು ಹಿಂಸಿಸದೇ ಸೂರ್ಯನ ಕಿರಣಗಳೊಡನೆ ಕಾಣಸಿಕೊಂಡು ಎಲ್ಲರಿಗೂ ಗೋಚರವಾದಳು.

## English Translation

The affluent and adorable Ushas has sent her rays as a cowherd drives the cattle to pasture, and spreads expansive like flowing water ; She is seen associated with the rays of the Sun, unimpeding sacred ceremonies.

ವಿಶೇಷವಿಷಯಗಳು

**ಚಿತ್ರಾ—ಪೂಜನೀಯಾ |** ಪೂಜ್ಯಳಾದ ಉಷೋದೇವಿಯು. **ಚಿತ್ರ**—ಎನ್ನುವ ಪದಕ್ಕೆ ಸಾಧರಣವಾಗಿ **ಚಾಯನೀಯ |** ರಮ್ಯವಾದ, ಆಶ್ಚರ್ಯಕರವಾದ, ಅಥವಾ ಆಕರ್ಷಕವಾದ ಎಂದರ್ಥವೇ ಪ್ರಸಿದ್ಧಿಯಲ್ಲಿರುವುದು. ಆದರೆ ಇಲ್ಲಿ ಮಾತ್ರ ಪೂಜ್ಯಳು ಎಂದರ್ಥವಾಗುತ್ತದೆ. ನಿರುಕ್ತಕಾರರು ಇದರ ಮುಂದಿನ ಋಕ್ಕನ್ನು ಉದಹರಿಸಿ ಅಲ್ಲಿ ಬರುವ **ಚಿತ್ರ** ಶಬ್ದಕ್ಕೆ **ಚಿತ್ರಂ-ಮಂಹನೀಯಂ** ( Respectable ) ಪೂಜ್ಯವಾದ ಎಂದು ವಿವರಿಸಿದ್ದಾರೆ ಅದರಂತೆಯೇ ಇಲ್ಲಿಯೂ ಅರ್ಥಮಾಡಬೇಕು.

**ಸಿಂಧುಃ ನ ಕ್ಷೋದಃ—ಅವನಯಃ, ಯಹ್ವಯಃ, ಖಾಃ** ಇತ್ಯಾದಿ ೩೭ **ನದೀನಾಮ**ಗಳಲ್ಲಿ ಪಠಿತವಾಗಿರುವುದರಿದ ( ನಿ. ೩-೨೪) ಸಿಂಧುವೆಂದರೆ ನದಿಯೆಂದೂ ; ಅರ್ಣಃ, ಕ್ಷೋದಃ, ಇತ್ಯಾದಿ ೧೦೧ **ಉದಕನಾಮ**ಗಳಲ್ಲಿ ಪಠಿತವಾಗಿರುವುದರಿಂದ **ಕ್ಷೋದವೆಂದರೆ** ಉದಕವೆಂದೂ ಅರ್ಥ. ಇಲ್ಲಿ ಉಪಮಾನವು ಉಚಿತವಾಗಿದೆ. ನದಿಯು ತನ್ನ ನೀರನ್ನು ತಡೆಯಿಲ್ಲದೆಯೂ ವಿಸ್ತಾರವಾಗಿ ಹರಡುವಂತೆ ಉಷಸ್ಸೂ ಸಹ ತನ್ನ ಪ್ರಭೆಯನ್ನು ವಿಸ್ತಾರವಾಗಿ ಹರಡುತ್ತಾಳೆ.

**ವ್ಯಶ್ವೈತ್—ಶ್ವವತಿರ್ಗತ್ಯರ್ಥಃ। ವಿವಿಧಂ ಗಚ್ಛತಿ ತ್ರೀನಪಿ ಲೋಕಾನ್ ಪ್ರತಿ।** ಮೂರು ಲೋಕಗಳಿಗೂ ವಿಧವಿಧವಾಗಿ ತನ್ನ ಕಿರಣಗಳನ್ನು ಹರಡುತ್ತಾಳೆ.

**ಉರ್ವಿಯಾ ಪ್ರಥಾನಾ**—ಅತ್ಯಂತ ವಿಸ್ತಾರವಾಗಿ ಹರಡಿಕೊಂಡು ಎಂದರ್ಥ. **ಪ್ರಥಾನಾ** ಎಂಬ ವಿಶೇಷಣವು ಗಗನದಲ್ಲಿ ವಿಸ್ತಾರವಾಗಿ ಹರಡಿ ತನ್ನ ಕಾಂತಿಯನ್ನು ಪ್ರಸರಿಸುವ ಉಷಸ್ಸಿಗೆ ವಿಶೇಷಣವಾಗಿರುವುದು.

**ವಹಂತಿ ಸೀಮರುಣಾಸೋ ರುಶಂತೋ ಗಾವಃ ಸುಭಗಾಮುರ್ವಿಯಾ ಪ್ರಥಾನಾಂ।**
( ಋ. ಸಂ. ೬-೬೪-೩ )

**ದೈವ್ಯಾನಿ ವ್ರತಾನಿ ಅಮಿನತೀ**—ದೇವಸಂಬಂಧವಾದ ಯಾಗಾದಿ ವ್ರತಗಳನ್ನು ಹಿಂಸಿಸದೇ ಎಂದರ್ಥ. ಹಿಂದಿನ ಋಕ್ಕಿನಲ್ಲಿ **ಪ್ರಮಿನತೀ ಮನುಷ್ಯಾ ಯುಗಾನಿ** ಎನ್ನುವ ಭಾವವನ್ನೂ ಈ ಋಕ್ಕಿನ **ಅಮಿನತೀ ದೈವ್ಯಾನಿ ವ್ರತಾನಿ** ಎನ್ನುವ ಭಾವವನ್ನೂ ಒಟ್ಟಿಗೆ ಸೇರಿಸಿ ಋ. ಸಂ. ೧-೧೨೪-೨ನೆಯ ಋಕ್ಕಿನಲ್ಲಿ ಹೇಳಿದೆ.

**ಅಮಿನತೀ ದೈವ್ಯಾನಿ ವ್ರತಾನಿ ಪ್ರಮಿನತೀ ಮನುಷ್ಯಾ ಯುಗಾನಿ।**
**ಈಯುಷೀಣಾಮುಪಮಾ ಶಶ್ವತೀನಾಮಾಯತೀನಾಂ ಪ್ರಥಮೋಷಾ ವ್ಯದ್ಯೌತ್।**
( ಋ. ಸಂ. ೧-೧೨೪-೨ )

ಈ ಋಕ್ಕಿನ ಕಾವ್ಯಾತ್ಮಕವಾದ ಭಾವವನ್ನು ರಚನಾಶೈಲಿಯನ್ನು ವಿವರಿಸುತ್ತಾ **ಬ್ಲೂಂ ಫೀಲ್ಡ್** ಎಂಬ ವಿಮರ್ಶಕನು ಇದನ್ನು ಅತಿಶಯವಾಗಿ ಹೊಗಳಿದ್ದಾನೆ. ಅವನ ಭಾಷೆಯಲ್ಲಿಯೇ ಈ ಋಕ್ಕಿನ ಸ್ವಾರಸ್ಯವನ್ನು ವರ್ಣಿಸುವುದಾದರೆ,

" Stanza I· 124-2· is the high-water mark of Vedic composition· The relation of the two pairs of words may be expressed in the proportion· ಅಮಿನತೀಃ ಆಯತೀನಾಂ=ಪ್ರಮಿನತೀಃ ಈಯುಷೀಣಾಂ That is to say : The dawns preserve the laws of the Gods· ಅಮಿನತೀ by their regular appearance ಆಯತೀನಾಂ the ages of men waste away ಪ್ರಮಿನತೀ as the dawns fade day by day ಈಯುಷೀಣಾಂ ಎಂದು ಹೇಳಬಹುದು· ಈ ರೀತಿ ೧-೯೨-೧೧ ಮತ್ತು ೧-೯೨-೧೨. ಈ ಎರಡು ಋಕ್ಕುಗಳ ಒಟ್ಟಿನ ಭಾವವನ್ನು ಈ ಒಂದೇ ಋಕ್ಕಿನಲ್ಲಿ ಸೇರಿಸಿ ಉತ್ತಮವಾದ ಕಾವ್ಯಶೈಲಿಯಲ್ಲಿರುವ ವಿರೋಧನ್ಯಾಸದ ರಚನಾಕ್ರಮವನ್ನೂ ಭಾವಾಭಿವ್ಯಕ್ತಿಯನ್ನೂ ಬಹಳವಾಗಿ ಶ್ಲಾಘಿಸುತ್ತಾರೆ.

( Rig-Veda Repetitions I· P· 108 )

ವ್ಯಾಕರಣಪ್ರಕ್ರಿಯಾ

**ಪ್ರಥಾನಾ**—ಪ್ರಥ ಪ್ರಖ್ಯಾನೇ ಧಾತು. ಣಿಜರ್ಥವು ಧಾತ್ವರ್ಥದಲ್ಲಿ ಅಂತರ್ಭೂತವಾದುದರಿಂದ ಅಂತರ್ಭಾವಿತಣ್ಯರ್ಥದ ಮೇಲೆ ತಾಚ್ಛೀಲ್ಯಾರ್ಥದಲ್ಲಿ ಚಾನಶ್. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. ಚಿತ್ತ್ವಾದುದರಿಂದ **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಿಂಧುಃ**—ಸ್ಯಂದೂ ಪ್ರಸ್ರವಣೇ ಧಾತು. ಇದಕ್ಕೆ **ಸ್ಯಂದೇಃ ಸಂಪ್ರಸಾರಣಂ ಧಶ್ಚ**– (ಉ. ಸೂ. ೧-೧೧) ಎಂಬುದರಿಂದ ಉ ಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿನ ದಕಾರಕ್ಕೆ ಧಕಾರಾದೇಶ. ಯಕಾರಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ನಿತ್ ಎಂದು ಪೂರ್ವಸೂತ್ರದಿಂದ ಅನುವೃತ್ತವಾಗುವುದರಿಂದ ಉಪ್ರತ್ಯಯಕ್ಕೆ ನಿದ್ವದ್ಭಾವವಿರುವುದರಿಂದ **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಉರ್ವಿಯಾ**—ಇದೇ ಸೂಕ್ತದ ೯ ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಅಶ್ವೈತ್**—ಟುಓಶ್ವಿ ಗತಿವೃದ್ಧ್ಯೋಃ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ **ವಿಭಾಷಾಶ್ವೇಃ**—ಎಂಬುದರಿಂದ ಅಙ್. ಚಙ್ ವಿಕಲ್ಪವೆಂದುದರಿಂದ (ಪಾ. ಸೂ. ೩-೧-೫೮, ೪೯) **ಚ್ಲೇಃ ಸಿಚ್**—ಎಂಬುದರಿಂದ ಚ್ಲಿಗೆ ಸಿಚಾದೇಶ. **ಆಗಮಶಾಸ್ತ್ರಮನಿತ್ಯಮ್**—ಎಂಬುದರಿಂದ ಸಿಚಿಗೆ **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ಇಡಾಗಮ ಬರುವುದಿಲ್ಲ. ಇಡಾದಿಯಾದ ಸಿಚ್ ಇಲ್ಲದಿರುವುದರಿಂದ **ಹ್ಮ್ಯಂತಕ್ಷಣ**–(ಪಾ. ಸೂ. ೭-೨-೫) ಎಂಬುದರಿಂದ ವೃದ್ಧಿನಿಷೇಧ ಬರುವುದಿಲ್ಲ. **ಸಿಚಿವೃದ್ಧಿಃ ಪರಸ್ಮೈಪದೇಷು** (ಪಾ ಸೂ. ೭-೨-೧) ಎಂಬುದರಿಂದ ಧಾತುವಿನ ಇಕಿಗೆ ವೃದ್ಧಿ. **ಬಹುಲಂ ಛಂದಸಿ** (ಪಾ. ಸೂ. ೭-೩-೯೭) ಎಂಬುದರಿಂದ ಅಪೃಕ್ತವಾದ ತಿಪಿಗೆ ಈಡಾಗಮ ಬರುವುದಿಲ್ಲ. ಆಗ ಸಕಾರಾದಿಯಾದ ಸಂಯೋಗವಿರುವುದರಿಂದ **ಸ್ಕೋಃಸಂಯೋಗಾದ್ಯೋರಂತೇಚ**— ಎಂಬುದರಿಂದ ಆದಿಸಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಮಿನತೀ**—ಮೀಙ್ ಹಿಂಸಾಯಾಂ ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃಪ್ರತ್ಯಯ. ಶ್ನಾವಿಕರಣ ಪ್ವಾದಿಯಲ್ಲಿ ಸೇರಿರುವುದರಿಂದ ಧಾತುವಿಗೆ ಹ್ರಸ್ವ. ಶತೃವಿಗೆ ಙಿದ್ವದ್ಭಾವವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಸ್ತ್ರೀತ್ವದಲ್ಲಿ **ಉಗಿತಶ್ಚ**—ಎಂಬುದರಿಂದ ಙೀಪ್. ನಞ್ ತತ್ಪುರುಷಸಮಾಸವಾದಾಗ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಚೇತಿ**—ಚಿತೀ ಸಂಜ್ಞಾನೇ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷದಲ್ಲಿ ತಪ್ರತ್ಯಯ. ಚ್ಲಿಗೆ ಚಿಣ್ ಆದೇಶ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಚಿಣೋ ಲುಕ್**—ಎಂಬುದರಿಂದ ಚಿಣಿನ ಪರದಲ್ಲಿರುವ ತ ಶಬ್ದಕ್ಕೆ ಲುಕ್. **ಬಹುಲಂ ಛಂದಸ್ಯಮಾಙ್ಯೋಗೇಽಪಿ**—ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ದೃಶಾನಾ**—ದೃಶಿರ್ ಪ್ರೇಕ್ಷಣೇ ಧಾತು. ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ (ಶಪ್) ಲುಕ್. ಸ್ತ್ರೀತ್ವದಲ್ಲಿ ಅದಂತನಾದುದರಿಂದ ಟಾಪ್. **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ಉಷಸ್ತಚ್ಚಿತ್ರಮಾ ಭರಾಸ್ಮಭ್ಯಂ ವಾಜಿನೀವತಿ ।
ಯೇನ ತೋಕಂ ಚ ತನಯಂ ಚ ಧಾಮಹೇ ॥ ೧೩ ॥

ಪದಪಾಠಃ

ಉಷಃ । ತತ್ । ಚಿತ್ರಂ । ಆ । ಭರ । ಅಸ್ಮಭ್ಯಂ । ವಾಜಿನೀಽವತಿ ।
ಯೇನ । ತೋಕಂ । ಚ । ತನಯಂ । ಚ । ಧಾಮಹೇ ॥ ೧೩ ॥

॥ ಸಾಯಣಭಾಷ್ಯಂ ॥

ಪ್ರಾತರನುವಾಕಸ್ಯೋಷಸ್ಯೇ ಕ್ರತಾವೌಷ್ಣಿಹೇ ಛಂದಸ್ಯುಷಸ್ತಚ್ಚಿತ್ರಮಿತಿ ತೃಚೋ ವಿನಿಯುಕ್ತಃ । ಆಶ್ವಿನಶಸ್ತ್ರೇ ಚ । ಅಥೋಷಸ್ಯ ಇತಿ ಖಂಡೇ ಸೂತ್ರಿತಂ । ಉಷಸ್ತಚ್ಚಿತ್ರಮಾ ಭರೇತಿ । ತಿಸ್ರ ಔಷ್ಣಿಹಂ । ಆ. ೪-೧೪ । ಇತಿ ॥

ಹೇ ವಾಜಿನೀವತಿ । ವಾಜೋ ಹವಿರ್ಲಕ್ಷಣಮನ್ನಂ । ತದ್ಯುಕ್ತಾ ಕ್ರಿಯಾ ವಾಜಿನೀ । ತಯಾ ಕ್ರಿಯಯಾ ಯುಕ್ತ ಉಷ ಉಷೋದೇವತೇಽಸ್ಮಭ್ಯಂ ಚಿತ್ರಂ ಚಾಯನೀಯಂ ತದ್ಧನಮಾ ಭರ । ಆಹರ । ಪ್ರಯಚ್ಛ । ಯೇನ ಧನೇನ ತೋಕಂ ಪುತ್ರಂ ತನಯಂ ತತ್ಪುತ್ರಂ ಚ ಧಾಮಹೇ ದಧ್ಮಹೇ ಧಾರಯಾಮಃ । ಅತ್ರ ನಿರುಕ್ತಂ । ಉಷಸ್ತಚ್ಚಿತ್ರಂ ಚಾಯನೀಯಂ ಧನಮಾಹರಾಸ್ಮಭ್ಯಮನ್ನವತಿ ಯೇನ ಪುತ್ರಾಂಶ್ಚ ಪೌತ್ರಾಂಶ್ಚ ದಧೀಮಹಿ । ನಿ. ೧೨-೬ । ಇತಿ ॥ ಧಾಮಹೇ । ದಧಾತೇರ್ಲಟಿ ಬಹುಲಂ ಛಂದಸೀತಿ ಶಪೋ ಲುಕ್ । ವ್ಯತ್ಯಯೇನಾದ್ಯುದಾತ್ತತ್ವಂ । ಯದ್ವಾ । ಲೋಟ್ಯಾಡುತ್ತಮಸ್ಯ ಪಿಚ್ಚೇತ್ಯಾಡಾಗಮಃ ಪ್ರತ್ಯಯಸ್ಯ ಪಿದ್ವದ್ಭಾವಶ್ಚ । ಅತಃ ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಅಸ್ಮಿನ್ಪಕ್ಷ ಏತ ಐ । ಪಾ. ೩-೪-೯೩ । ಇತ್ಯೈತ್ವಾಭಾವೋ ವ್ಯತ್ಯಯೇನ ದ್ರಷ್ಟವ್ಯಃ । ಯದ್ವೃತ್ತಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

ವಾಜಿನೀವತಿ—ಹವಿಸ್ಸನ್ನುಳ್ಳ ಕ್ರಿಯಾಯುಕ್ತಳಾದ । ಉಷಃ—ಎಲೈ ಉಷೋದೇವಿಯೇ । ಯೇನ—ಯಾವುದರಿಂದ । ತೋಕಂ ಚ—ಮಗನನ್ನೂ । ತನಯಂ ಚ—ಅವನ ಮಗನನ್ನೂ (ಪೌತ್ರನನ್ನೂ ಕೂಡ । ಧಾಮಹೇ—(ನಾವು) ಭರಣಮಾಡಬಲ್ಲೆವೋ ಅಂತಹ । ಚಿತ್ರಂ—ನಾನಾವಿಧವಾದ (ಅಭಿಮತವಾದ) । ತತ್—ಧನವನ್ನು । ಅಸ್ಮಭ್ಯಂ—ನಮಗೆ । ಆ ಭರ—ತಂದುಕೊಡು ।

ಭಾವಾರ್ಥ

ಹವಿಸ್ಸನ್ನು ಅರ್ಪಿಸುವ ಯಜ್ಞಕರ್ಮಗಳೊಡನೆ ಕೂಡಿರುವ ಎಲೈ ಉಷೋದೇವಿಯೇ, ಯಾವ ಧನದಿಂದ ನಾವು ನಮ್ಮ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಸಲಹುವೆವೋ ಅಂತಹ ಅಭಿನುತವಾದ ಧನವನ್ನು ನಮಗೆ ನಾನಾ ವಿಧದಲ್ಲಿ ತಂದೊದಗಿಸು.

English Translation

Ushas, possessor of food, bring us that various wealth by which we may sustain sons and grandsons.

॥ ವಿಶೇಷವಿಷಯಗಳು ॥

ಪ್ರಾತರನುವಾಕಮಂತ್ರಪಠನ ಕಾಲದಲ್ಲಿ ಉಷಸ್ಯಕ್ರತು ಸಂಬಂಧವಾದ ಉಷ್ಣಿಕ್‌ಛಂದಸ್ಸಿನ ಋಕ್ಕುಗಳನ್ನು ಪಠಿಸುವಾಗ **ಉಷಸ್ತಚ್ಚಿತ್ರಂ** ಎಂದು ಮೊದಲಾಗುವ ಈ ಮೂರು ಋಕ್ಕುಗಳನ್ನು ಪಠಿಸಬೇಕೆಂದೂ ಆಶ್ವಿನಶಸ್ತ್ರ ಮಂತ್ರಪಠನಕಾಲದಲ್ಲಿಯೂ ಈ ಋಕ್ಕುಗಳ ವಿನಿಯೋಗವಿರುವುದೆಂದೂ ಆಶ್ವಲಾಯನ ಶ್ರೌತಸೂತ್ರದ **ಅಥೋಷಸ್ಯ** ಎಂಬ ಖಂಡದ **ಉಷಸ್ತಚ್ಚಿತ್ರಮಾ ಭರ** ಎಂಬ ಸೂತ್ರದಲ್ಲಿ ಹೇಳಿರುವುದು. (ಆ. ೪-೧೪)

**ತೋಕಂ ಚ ತನಯಂ ಚ । ತುಕ್, ತೋಕಂ, ತನಯಃ,** ಇತ್ಯಾದಿ ಹದಿನೈದು ಅಪತ್ಯನಾಮುಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩-೨ ) ಎರಡು ಶಬ್ದಗಳಿಗೂ ಪುತ್ರನೆಂದೇ ಅರ್ಥವು ಸ್ಥೂಲವಾಗಿ ನೋಡಿದರೆ ಈ ಎರಡು ಶಬ್ದಗಳ ಅರ್ಥವೂ ಒಂದೇ ಆದರೂ ವ್ಯವಹಾರದಲ್ಲಿ ಪುತ್ರಪೌತ್ರಾದಿಗಳೆಂದು ಒಟ್ಟಿಗೆ ಹೇಳುವ ರೂಢಿಯಿದೆ. ಅದೂ ಅಲ್ಲದೆ **ತೋಕಂ ತುದ್ಯತೇಃ । ತನಯಂ ತನೋತೇಃ ।** ಎಂದು ನಿರುಕ್ತಕಾರರು ಇವುಗಳ ಸೂಕ್ಷ್ಮವಾದ ವ್ಯತ್ಯಾಸವನ್ನು ತೋರಿಸಿರುವರು. ಇದನ್ನೇ ವ್ಯಾಖ್ಯಾಕಾರರು ವಿವರಿಸುತ್ತಾ **ತೋಕಂ ಇತಿ ಪುತ್ರಃ ಸ ಹಿ ನಿತ್ಯಂ ಪಿತ್ರಾ ವಿನಯತಾ ತುದ್ಯತೇ ಇದಂ ಕುರ್ವಿದಂ ಮಾ ಕಾರ್ಷೀರಿತಿ । ತನಯಂ—ತನೋತೇಃ ಪೌತ್ರಂ । ತದ್ಧ್ಯತಿತರಾಂ ಪಿತುಃ ಸಕಾಶಾತ್ ತತಂ ಭವತಿ ।** ಶಿಕ್ಷಣವನ್ನು ಕೊಡತಕ್ಕ ತಂದೆಯು ಯಾವಾಗಲೂ ಇದನ್ನು ಮಾಡು, ಇದನ್ನು ಮಾಡಬೇಡ ಎಂಬ ನಿರ್ಬಂಧವನ್ನಿಟ್ಟು ನಿಯಮದ ಜೀವನವನ್ನು ನಡೆಸುತ್ತಿರುವುದರಿಂದ ಅಂತಹ ಮಗನಿಗೆ **ತೋಕಂ** ಎಂದೂ, ಸಂತತಿಯನ್ನು ವಿಸ್ತರಿಸಿ ಬೆಳೆಸಲು ಸಾಧನವಾದುದರಿಂದ ಪೌತ್ರನಿಗೆ **ತನಯ**ನೆಂದೂ ಅರ್ಥವಾಗುತ್ತದೆಂದು ವಿವರಿಸುತ್ತಾರೆ. (ನಿ. ೧೦-೭).

**ಧಾಮಹೇ—ದಧೀಮಹಿ।** (ನಿ. ೧೨-೬) ಭರಣ ಮಾಡಲು ಎಂದರೆ ಸಂರಕ್ಷಿಸುವೆವು. ಯಾವ ಧನದಿಂದ ನಾವು ನಮ್ಮ ಪುತ್ರಪೌತ್ರಾದಿಗಳನ್ನು ಸಂರಕ್ಷಿಸಲು ಸಮರ್ಥರಾಗುತ್ತೇವೆಯೋ ಅಂತಹ,

**ಚಿತ್ರಂ—ಮಂಹನೀಯಂ ।** ( ನಿ. ೧೨-೬ ) ಪೂಜ್ಯವಾದ ಧನವನ್ನು ನಮಗೆ ತಂದುಕೊಡು ಎಂದು ಪ್ರಾರ್ಥನೆಯ ಅರ್ಥ.

ಇದೇ ಆನುಪೂರ್ವಿಯುಳ್ಳ ಪ್ರಾರ್ಥನೆಯು ಮುಂದೆ ವಾಮದೇವ ಋಷಿವಿರಚಿತವಾದ ಸೂಕ್ತದಲ್ಲಿ ಉಷಸ್ಸನ್ನುದ್ದೇಶಿಸಿದೆ.

**ಉಷೋ ಮಘೋನ್ಯಾ ವಹ ಸೂನೃತೇ ವಾರ್ಯಾ ಕುರು ।
ಅಸ್ಮಭ್ಯಂ ವಾಜಿನೀವತಿ ।**

( ಋ. ಸಂ. ೪-೫೫-೯ )

॥ ವ್ಯಾಕರಣಪ್ರಕ್ರಿಯಾ ॥

**ಭರ**—ಹೃಞ್ ಹರಣೇ ಧಾತು. ಲೋಣ್ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ **ಸೇರ್ಹ್ಯಪಿಚ್ಚ**— ಎಂಬುದರಿಂದ ಹಿ ಆದೇಶ. ಶಪ್‌ವಿಕರಣ. **ಅತೋ ಹೇಃ**—ಎಂಬುದರಿಂದ ಹಿಗೆ ಲುಕ್. **ಹೃಗ್ರಹೋರ್ಭಶ್ಛಂದಸಿ**—ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ವಾಜಿನೀವತಿ—ಆಮಂತ್ರಿತಸ್ಯ ಚ**-(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಧಾಮಹೇ**—ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್‌ಪ್ರತ್ಯಯ. **ಟಿತಆತ್ಮನೇಪದಾ**—ಎಂಬುದರಿಂದ ಅದಕ್ಕೆ ಏತ್ವ. **ಬಹುಲಂ ಛಂದಸಿ**— ಎಂಬುದರಿಂದ ಶಪಿಗೆ ಲುಕ್. ಅಥವಾ ಲೋಟಿನಲ್ಲಿ **ಆಡುತ್ತಮಸ್ಯಪಿಚ್ಚ** (ಪಾ. ಸೂ. ೩-೪-೯೨) ಎಂಬುದರಿಂದ ಪ್ರತ್ಯಯಕ್ಕೆ ಆಡಾಗಮ. ಪ್ರತ್ಯಯಕ್ಕೆ ಪಿತ್ವದ್ಭಾವ. ಆಗ **ಅನುದಾತ್ತೌ ಸುಪ್ಪಿತೌ**—ಎಂಬುದರಿಂದ ಪ್ರತ್ಯಯವು ಅನುದಾತ್ತವಾಗುತ್ತದೆ. ಧಾತುಸ್ವರ ಉಳಿಯುತ್ತದೆ. ಲೋಟಿನ ರೂಪವೆಂದು ಸ್ವೀಕರಿಸುವುದಾದರೆ **ಏತಐ** (ಪಾ. ಸೂ. ೩-೪-೯೩) ಎಂಬುದರಿಂದ ಐತ್ವವು ವ್ಯತ್ಯಯದಿಂದ ಬರುವುದಿಲ್ಲವೆಂದು ಸ್ವೀಕರಿಸಬೇಕು. **ಯದ್ವೃತ್ತಾನ್ನಿತ್ಯಮ್**—ಎಂಬುದರಿಂದ ಯೇನ ಎಂದು ಹಿಂದೆ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ॥ ೧೩ ॥

ಸಂಹಿತಾಪಾಠಃ

ಉಷೋ ಅದ್ಯೇಹ ಗೋಮತ್ಯಶ್ವಾವತಿ ವಿಭಾವರಿ ।
ರೇವದಸ್ಮೇ ವ್ಯುಚ್ಛ ಸೂನೃತಾವತಿ ॥ ೧೪ ॥

॥ ಪದಪಾಠಃ ॥

ಉಷಃ । ಅದ್ಯ । ಇಹ । ಗೋಽಮತಿ । ಅಶ್ವಽವತಿ । ವಿಭಾಽವರಿ ।
ರೇವತ್ । ಅಸ್ಮೇ ಇತಿ । ವಿ । ಉಚ್ಛ । ಸೂನೃತಾಽವತಿ ॥ ೧೪ ॥

ಸಾಯಣಭಾಷ್ಯಂ

**ಹೇ ಗೋಮತ್ಯಸ್ಮಭ್ಯಂ ದಾತವ್ಯೈರ್ಗೋಭಿರ್ಯುಕ್ತೇ ತಥಾಶ್ವಾವತ್ಯಶ್ವೈರ್ಯುಕ್ತೇ ವಿಭಾವರಿ ವಿಶಿಷ್ಟಪ್ರಕಾಶೋಪೇತೇ ಸೂನೃತಾವತಿ । ಪ್ರಿಯಸತ್ಯಾತ್ಮಿಕಾ ವಾಕ್ ಸೂನೃತಾ । ತಾದೃಶ್ಯಾ ವಾಚಾ ಯುಕ್ತೇ ಏವಂಭೂತೇ ಹೇ ಉಷ ಉಷೋದೇವತೇಽದ್ಯೇದಾನೀಂ ಪ್ರಭಾತಸಮಯ ಇಹಾಸ್ಮಿನ್ದೇಶೇಽಸ್ಮೇ ಅಸ್ಮಾಕಂ ರೇವತ್ ಧನಯುಕ್ತಂ ಕರ್ಮ ಯಥಾ ಭವತಿ ತಥಾ ವ್ಯುಚ್ಛ । ನೈಶಂ ತಮೋ ನಿವಾರಯ ॥ ಅಶ್ವಾವತಿ । ಮಂತ್ರೇ ಸೋಮಾಶ್ವೇಂದ್ರಿಯೇತಿ ಮತೌ ದೀರ್ಘತ್ವಂ । ಪಾದಾದಿತ್ವಾದಾಮಂತ್ರಿತಸ್ಯಾಷ್ಟಮಿಕನಿಘಾತಾಭಾವಃ । ರೇವತ್ । ರಯೇರ್ಮತೌ ಬಹುಲಂ । ಪಾ. ೬-೧-೩೭-೬ । ಇತಿ ಸಂಪ್ರಸಾರಣಂ । ಛಂದ ಸೀರ ಇತಿ ಮತುಪೋ ವತ್ವಂ । ರೇಶಬ್ದಾಚ್ಚ ಮತುಪ ಉದಾತ್ತತ್ವಂ ವಕ್ತವ್ಯಂ । ಕಾ. ೬-೧-೧೭೬-೧ । ಇತಿ ಮತುಪ ಉದಾತ್ತತ್ವಂ । ಉಚ್ಛ । ಉಛೀ ವಿವಾಸೇ । ವಿವಾಸೋ ವರ್ಜನಂ ॥**

ಪ್ರತಿಪದಾರ್ಥ

**ಗೋಮತಿ**—ಗೋವುಗಳಿಂದ ಕೂಡಿದವಳೂ । **ಅಶ್ವಾವತಿ** — ಕುದುರೆಗಳಿಂದ ಕೂಡಿದವಳೂ । **ವಿಭಾವರಿ**— ಪ್ರಭಾಶಾಲಿನಿಯೂ । **ಸೂನೃತಾವತಿ**— ಪ್ರಿಯವಾದುದೂ ಮತ್ತು ಸತ್ಯಾತ್ಮಕವಾದುದೂ ಆದ ವಾಕ್ಕುಳ್ಳವಳೂ ಆದ । **ಉಷಃ**—ಎಲೈ ಉಷೋದೇವಿಯೇ । **ಅದ್ಯ**—ಈ (ಪ್ರಭಾತ)ಕಾಲದಲ್ಲಿ । **ಇಹ**— ಈ (ಯಜ್ಞ) ಪ್ರದೇಶದಲ್ಲಿ । **ಅಸ್ಮೇ**—ನಮಗೆ । **ರೇವತ್**—ನಮ್ಮ ಕರ್ಮಗಳು ಧನಯುಕ್ತವಾಗಿ ಆಗುವಂತೆ ಮಾಡು । **ವ್ಯುಚ್ಛ**— ( ಕತ್ತಲನ್ನು ) ನಿವಾರಿಸಿ ನಾಶಮಾಡು ॥

॥ ಭಾವಾರ್ಥ ॥

ಗೋವುಗಳಿಂದಲೂ, ಕುದುರೆಗಳಿಂದಲೂ ಕೂಡಿಯೂ, ಪ್ರಭಾಶಾಲಿನಿಯೂ, ಪ್ರಿಯವಾದ ಮತ್ತು ಸತ್ಯಾತ್ಮಕವಾದ ವಾಕ್ಕುಳ್ಳವಳೂ ಆದ ಎಲೈ ಉಷೋದೇವಿಯೇ, ಈ ಪ್ರಭಾತಕಾಲದಲ್ಲಿ ನಮ್ಮ ಈ ಯಜ್ಞಪ್ರದೇಶದಲ್ಲಿ ನಮಗೆ ನಮ್ಮ ಕರ್ಮಗಳೆಲ್ಲಾ ಧನಯುಕ್ತವಾಗಿ ಆಗುವಂತೆ ಆವಿರ್ಭವಿಸಿ ಕತ್ತಲನ್ನು ನಿವಾರಿಸಿ ನಾಶಮಾಡು.

English Translation

Luminous Ushas, possessor of cows and horses, true of speech, dawn here to day upon this (ceremoney) that is to bring us wealth.

॥ ವಿಶೇಷವಿಷಯಗಳು ॥

**ವಿಭಾವಿರಿ, ಸೂನೃತಾವತಿ—ವಿಭಾವರೀ, ಸೂನರೀ, ಭಾಸ್ವತೀ,** ಇತ್ಯಾದಿ ಹದಿನಾರು **ಉಷೋನಾಮ**ಗಳಲ್ಲಿ ಪಠಿತವಾಗಿವೆ. ( ನಿ. ೨-೧೮ ) **ವಿಭಾವರಿಯೆಂದರೆ** ವಿಶಿಷ್ಟವಾದ ಪ್ರಕಾಶದಿಂದ ಕೂಡಿದವಳೆಂದೂ, ಸೂನೃತಾವತಿಯೆಂದರೆ ಪ್ರಿಯವಾದುದೂ ಸತ್ಯಾತ್ಮಿಕವಾದದೂ ಆದ ವಾಕ್ಕುಳ್ಳವಳೆಂದೂ ಅರ್ಥವು. ಇಲ್ಲಿ ಅವೆರಡನ್ನು ಸಂಬೋಧನೆಯಲ್ಲುಪಯೋಗಿಸಿದೆ. **ಸೂನೃತಾವತೀ, ಸೂನೃತಾನಾಂ** ನೇತ್ರೀ ಎಂಬ ವಿಶೇಷಣಗಳ ವಿವರಣೆಯನ್ನು ಇದೇ ಸೂಕ್ತದ ೭ನೇ ಋಕ್ಕನ್ನು ವಿವರಿಸುವಾಗ ವಿಶದವಾಗಿ ತಿಳಿಸಿದೆ. **ವಿಭಾವರಿಯೆನ್ನು**ವುದಕ್ಕೆ **ವಿವಿಧಾ ಭಾ ವಿಭಾಃ । ವಿಭಾಯುಕ್ತಾ ವಿಭಾವರೀ ।** ವಿಧವಿಧವಾದ ತೇಜಸ್ಸುಗಳ ಪುಂಜವು ವಿಭಾಃ, ಅಂತಹ

ಕಾಂತಿಸಮೂಹದಿಂದ ಕೂಡಿದವಳು ವಿಭಾವರಿಯೆಂದು ವಿವರಿಸುತ್ತಾರೆ. ಋಕ್ಸಂಹಿತೆಯಲ್ಲಿ ಸಾಧಾರಣವಾಗಿ ವಿಭಾವರಿ ಯೆಂಬ ಪದವು ಬರುವ ಕಡೆಯಲ್ಲೆಲ್ಲಾ ಉಷಸ್ಸಿಗೇ ಸಂಬೋಧಿಸಿದೆ ಅಥವಾ ವಿಶೇಷಣವಾಗಿದೆ. **ಗೋಮತಿ, ಅಶ್ವಾವತಿ** ಎಂಬ ವಿಶೇಷಣಗಳು ಸಾಧಾರಣವಾಗಿ ಇತರ ದೇವತೆಗಳಿಗೂ ಅಲ್ಲಿಯ ಸಂದರ್ಭಾನುಸಾರವಾಗಿ ವಿಶೇಷಣ ರೂಪದಲ್ಲಿ ಉಪಯೋಗಿಸಿದ್ದಾರೆ.

**ರೇವತ್**—**ಧನನಾಮ**ಗಳಲ್ಲಿ ಸೇರಿರುವ (ನಿ. ೨-೯) **ರಯಿ** ಶಬ್ದದಿಂದ **ರೇವತ್** ಎಂದಾಗಿದೆ. ಧನಯುಕ್ತ ವಾದ, ಧನದಿಂದ ತುಂಬಿದ ಎಂದರ್ಥ.

**ವ್ಯುಚ್ಛ**— ವಿವಿಧಂ **ಉಚ್ಛ** । ಸಂಪೂರ್ಣವಾಗಿ ಕತ್ತಲನ್ನು ನಾಶಮಾಡು ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಅಶ್ವಾವತಿ**—ಅಶ್ವಃ ಅಸ್ಯಾ ಅಸ್ತಿ ಎಂಬರ್ಥದಲ್ಲಿ **ತದಸ್ಯಾ**—ಸೂತ್ರದಿಂದ ಮತುಪ್ ಪ್ರತ್ಯಯ. ಅಕಾರದ ಪರದಲ್ಲಿರುವುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವಕಾರಾದೇಶ. **ಮಂತ್ರೇಸೋಮಾಶ್ವೇಂ-ದ್ರಿಯ**-(ಪಾ. ಸೂ. ೬-೩-೧೩೧) ಎಂಬುದರಿಂದ ಮತುಪ್ ಪರವಾದಾಗ ಅಶ್ವಶಬ್ದಕ್ಕೆ ದೀರ್ಘ. ಪಾದಾದಿಯಲ್ಲಿರು ವುದರಿಂದ **ಅಪಾದಾದ್**—ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರೇವತ್**—ರಯಿಃ ಅಸ್ಯಾ ಅಸ್ತಿ ಎಂಬರ್ಥದಲ್ಲಿ ಹಿಂದಿನಂತೆ ಮತುಪ್ ಪ್ರತ್ಯಯ. **ರಯೇರ್ಮತೌ ಬಹುಲಮ್**-(ಪಾ. ಸೂ. ೬-೧-೩೭-೬) ಎಂಬುದರಿಂದ ಮತುಪ್ ಪರವಾದಾಗ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಎಂಬುದರಿಂದ ಪೂರ್ವರೂಪ. ರ+ಇ+ಮತ್ ಎಂದಿರುವಾಗ ಗುಣ. **ಛಂದಸೀರಃ**-(ಪಾ. ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ರೇವತ್ ಶಬ್ದವಾಗುತ್ತದೆ. **ರೇಶಬ್ದಾಚ್ಚ ಮತುಪ ಉದಾತ್ತತ್ವಂ ವಕ್ತವ್ಯಂ** (ಕಾ. ೬-೧-೧೭೬-೧) ಎಂಬುದರಿಂದ ಮತುಪಿಗೆ ಪಿತ್ತಾದರೂ ಉದಾತ್ತಸ್ವರ ಬರುತ್ತದೆ.

**ಉಚ್ಛ**—ಉಛೀ ವಿವಾಸೇ ಧಾತು. ವಿವಾಸವೆಂದರೆ ವರ್ಜನ. ಲೋಟ್ ಮಧ್ಯಮಪುರುಷ ಏಕವಚನ ದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. **ಅತೋಹೇಃ**—ಎಂಬುದರಿಂದ ಹಿಗೆ ಲುಕ್. **ಛೇಚ**—ಎಂಬುದರಿಂದ ಉ ಎಂಬ ಹ್ರಸ್ವಕ್ಕೆ ತುಕಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೪ ॥

——:o:——

॥ ಸಂಹಿತಾಪಾಠಃ ॥

ಯುಕ್ಷ್ವಾ ಹಿ ವಾಜಿನೀವತ್ಯಶ್ವಾँ ಅದ್ಯಾರುಣಾँ ಉಷಃ ।
ಅಥಾ ನೋ ವಿಶ್ವಾ ಸೌಭಗಾನ್ಯಾ ವಹ ॥ ೧೫ ॥

॥ ಪದಪಾಠಃ ॥

ಯು॒ಕ್ಷ್ವ । ಹಿ । ವಾ॒ಜಿ॒ನೀ॒ಽವ॒ತಿ॒ । ಅಶ್ವಾ॑ನ್ । ಅ॒ದ್ಯ । ಅ॒ರು॒ಣಾನ್ । ಉ॒ಷಃ॒ ।
ಅಥ॑ । ನಃ॒ । ವಿಶ್ವಾ॑ । ಸೌಭ॑ಗಾನಿ । ಆ । ವ॒ಹ॒ ॥ ೧೫ ॥

ಸಾಯಣಭಾಷ್ಯಂ

ಹೇ ವಾಜಿನೀವತಿ ಹವಿರ್ಲಕ್ಷಣಾನ್ನವತ್ಯುಷ ಉಷೋದೇವತೇ ಅರುಣಾನರುಣವರ್ಣಾನಶ್ವಾನಶ್ವಸ್ಥಾನೀಯಾನ್ ಗೋವಿಶೇಷಾನದ್ಯಾಸ್ಮಿನ್ಕಾಲೇ ಯುಕ್ಷ್ವಾ ಹಿ । ಯೋಜಯೈವ । ಹಿರವಧಾರಣೇ । ಅಥಾನಂತರಂ ರಥಮಾರುಹ್ಯ ವಿಶ್ವಾ ಸೌಭಗಾನಿ ಸರ್ವಾಣಿ ಸೌಭಾಗ್ಯಾನಿ ನೋಽಸ್ಮಭ್ಯಮಾ ವಹ। ಆನಯ॥ ಅಶ್ವಾನ್ । ದೀರ್ಘಾದಟಿ ಸಮಾನಪಾದ ಇತಿ ಸಂಹಿತಾಯಾಂ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ । ಸೌಭಗಾನಿ । ಸುಭಗಾನ್ಮಂತ್ರೆ ಇತ್ಯುದ್ಗಾತ್ರಾದಿಷು ಪಾಠಾದ್ಭಾವಕರ್ಮಣೋರರ್ಥಯೋಃ ಪ್ರಾಣಭೃಜ್ಜಾತಿವಯೋವಚನೋದ್ಗಾತ್ರಾದಿಭ್ಯೋಽಞಿತ್ಯಞ್ಪ್ರತ್ಯಯಃ । ಹೃದ್ಭಗಸಿಂಧ್ವಂತೇ ಪೂರ್ವಪದಸ್ಯ ಚೇತ್ಯುಭಯಪದವೃದ್ಧೌ ಪ್ರಾಪ್ತಾಯಾಂ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರೋತ್ತರಪದವೃದ್ಧಿರ್ನ ಭವತೀತ್ಯುಕ್ತಂ । ಕಾ. ೭-೩-೧೯ ॥

ಪ್ರತಿಪದಾರ್ಥ

**ವಾಜನೀವತಿ**—(ಹವಿಸ್ಸಿನರೂಪದ) ಅನ್ನದಿಂದ ಕೂಡಿದ । **ಉಷಃ**—ಎಲೈ ಉಷೋದೇವಿಯೇ, । **ಅರುಣಾನ್**—ಹೊಂಬಣ್ಣದ । **ಅಶ್ವಾನ್**—ಅಶ್ವಗಳ ಸ್ಥಾನದಲ್ಲಿ ವಾಹಕಗಳಾದ ಗೋವುಗಳನ್ನು । **ಅದ್ಯ**—ಈ ಯಜ್ಞಕಾಲದಲ್ಲಿ । **ಯುಕ್ಷ್ವಾ ಹಿ**—ಖಂಡಿತವಾಗಿಯೂ (ರಥಕ್ಕೆ) ಕಟ್ಟು । **ಅಥ**—ಅನಂತರ । **ವಿಶ್ವಾ ಸೌಭಗಾನಿ**—ಸಕಲ ಸೌಭಾಗ್ಯಗಳನ್ನೂ । **ನಃ**—ನಮಗೆ । **ಆ ವಹ**—ತಂದೊದಗಿಸು. ।

ಭಾವಾರ್ಥ

ಹವಿಸ್ಸಿನರೂಪದ ಅನ್ನದಿಂದ ಕೂಡಿದ ಎಲೈ ಉಷೋದೇವಿಯೇ, ಅಶ್ವಗಳ ಸ್ಥಾನದಲ್ಲಿ ವಾಹಕಗಳಾದ ನಿನ್ನ ಹೊಂಬಣ್ಣದ ಗೋವುಗಳನ್ನು ಈ ಯಜ್ಞದ ಕಾಲದಲ್ಲಿ ಖಂಡಿತವಾಗಿಯೂ ನಿನ್ನ ರಥಕ್ಕೆ ಕಟ್ಟು. ಅನಂತರ ಆ ರಥದಲ್ಲಿ ನಮಗೆ ಸಕಲ ಸೌಭಾಗ್ಯಗಳನ್ನೂ ತಂದೊದಗಿಸು.

English Translation

Possessor of food, Ushas, yoke today your reddish horses and bring to us all good things.

ವಿಶೇಷ ವಿಷಯಗಳು

**ಅರುಣಾನ್ ಅಶ್ವಾನ್—ಅರುಣಾ ಗಾವ ಉಷಸಾಂ** । ಎಂದು ದೇವತೆಗಳ ವಾಹನಗಳ ನಾಮಧೇಯಗಳಲ್ಲಿ ಪಠಿತವಾಗಿದೆ. (ನಿ. ೨-೨೮) ಉಷಸ್ಸಿನ ವಾಹನಗಳು ಹೊಂಬಣ್ಣದ ಗೋವುಗಳು. ಇವೇ ಅಶ್ವಸ್ಥಾನ

ಗಳಲ್ಲಿದ್ದು ಉಷಸ್ಸಿನ ರಥಕ್ಕೆ ಕಟ್ಟಲ್ಪಡುತ್ತವೆ. ಈ ವಾಹನಗಳಿಗೆ ಗೋವುಗಳು ಎಂದೂ ಕೆಲವು ಕಡೆಗಳಲ್ಲಿ ಅಶ್ವಗಳು ಎಂದೂ ಪ್ರಯೋಗಗಳಿವೆ. ಕೆಲವು ಋಕ್ಕುಗಳಲ್ಲಿ **ಅಪ್ಸವಃ** ಎಂದೂ ಕರೆಯುತ್ತಾರೆ. ಉದಾಹರಣೆಗೆ—

**ವಹಂತ್ವರುಣಪ್ಸವ ಉಪ ತ್ವಾ ಸೋಮಿನೋ ಗೃಹಂ ।**
(ಋ. ಸಂ. ೧-೪೯-೧)

**ಆ ತ್ವಾ ವಹಂತು ಸುಯಮಾಸೋ ಅಶ್ವಾ ಹಿರಣ್ಯವರ್ಣಾಂ ಪೃಥುಪಾಜಸೋ ಯೇ ।**
(ಋ. ಸಂ. ೩-೬೧-೨)

**ಪ್ರತಿ ದ್ಯುತಾನಾಮರುಷಾಸೋ ಅಶ್ವಾಶ್ಚಿತ್ರಾ ಅದೃಶ್ರನ್ನುಷಸಂ ವಹಂತಃ ।**
(ಋ. ಸಂ. ೭-೭೫-೬)

**ಅಪೇಯಮಶ್ವೈದ್ಯುವತಿಃ ಪುರಸ್ತಾದ್ಯುಂಕ್ತೇ ಗವಾಮರುಣಾನಾಮನೀಕಂ ।**
(ಋ. ಸಂ. ೧-೧೨೪-೧೧)

ಇತ್ಯಾದಿ ನಾನಾ ಸಂದರ್ಭಗಳಲ್ಲಿ ಉಷಸ್ಸಿನ ವಾಹನಗಳ ವರ್ಣನೆಯಿದೆ.

**ವಿಶ್ವಾ ಸೌಭಗಾನಿ—ಭಗ ಇತಿ ಧನನಾಮ । ಶೋಭನಾನಿ ಧನಾನಿ ಸುಭಗಾನಿ । ಸುಭಗಾನ್ಯೇವ ಸೌಭಗಾನಿ ।** ಧನನಾಮಗಳಲ್ಲಿ **ಭಗ** ಶಬ್ದವು ಪಠಿತವಾಗಿದೆ. ಶ್ರೇಷ್ಠವಾದ ಧನಗಳೆಂದರ್ಥ. ನಮಗೆ ಪುತ್ರಪೌತ್ರಾದಿ ರೂಪವಾದ ಸಕಲ ಶ್ರೇಷ್ಠವಾದ ಧನವನ್ನೂ ತಂದೊದಗಿಸು ಎಂಬ ಪ್ರಾರ್ಥನೆ. ೧-೩೦-೨೨ ; ೧-೪೮-೧ ; ೯-೧೧೦-೫ ; ೪-೫೧-೭. ಇತ್ಯಾದಿ ಅನೇಕ ಸ್ಥಳಗಳಲ್ಲಿ ಉಷಸ್ಸನ್ನುದ್ದೇಶಿಸಿ ಆಯುರ್ವೃದ್ಧಿಯನ್ನೂ ಪುತ್ರ ಪೌತ್ರಾದಿ ಧನಗಳನ್ನೂ ಬೇಡುವ ಪ್ರಾರ್ಥನೆ ಇರುವುದು.

## ವ್ಯಾಕರಣಪ್ರಕ್ರಿಯಾ

**ಯುಕ್ಷ್ವ**—ಯುಜಿರ್ ಯೋಗೇ ಧಾತು. ಲೋಟಿನಲ್ಲಿ **ಥಾಸಃ ಸೇ**—ಎಂಬುದರಿಂದ ಸೇ ಆದೇಶ ಬಂದಾಗ **ಸವಾಭ್ಯಾಂವಾಮೌ**-(ಪಾ. ಸೂ. ೩-೪-೯೧) ಎಂಬುದರಿಂದ ಏಕಾರಕ್ಕೆ ವಕಾರಾದೇಶ. **ಚೋಃ ಕುಃ**-ಎಂಬುದರಿಂದ ಜಕಾರಕ್ಕೆ ಕುತ್ವ. **ಖರಿ ಚ**—ಸೂತ್ರದಿಂದ ಚರ್ತ್ವ. **ಆದೇಶಪ್ರತ್ಯಯಯೋಃ**—ಸೂತ್ರದಿಂದ ಸಕಾರಕ್ಕೆ ಷತ್ವ. ಯುಕ್ಷ್ವ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿ ಬಂದಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಶ್ವಾನ್—ದೀರ್ಘಾದಟಿ ಸಮಾನಪಾದೇ**-(ಪಾ. ಸೂ. ೮-೩-೯) ಎಂಬುದರಿಂದ ಸಂಹಿತಾದಲ್ಲಿ ನಕಾರಕ್ಕೆ ರುತ್ವ. **ಆತೋಟಿ ನಿತ್ಯಮ್**-(ಪಾ. ಸೂ. ೮-೩-೩) ಎಂಬುದರಿಂದ ಆಕಾರಕ್ಕೆ ಅನುನಾಸಿಕತ್ವ. ಹೀಗೆಯೇ ಅರುಣಾನ್ ಎಂಬಲ್ಲಿಯೂ ಅಟ್ ಪರವಾದುದರಿಂದ ರುತ್ವಾನುನಾಸಿಕತ್ವ ಬರುತ್ತದೆ.

ಸೌಭಗಾನಿ—**ಸುಭಗಾನ್ಮಂತ್ರೇ** — ಎಂದು ಉದ್ಗಾತ್ರಾದಿಯಲ್ಲಿ ಪಾಠವಾಗಿರುವುದರಿಂದ ಭಾವ, ಕರ್ಮಾರ್ಥ ತೋರುತ್ತಿರುವಾಗ **ಪ್ರಾಣಭೃತ್‌ಜಾತಿ ವಯೋವಚನೋದ್ಗಾತ್ರಾದಿಭ್ಯೋಽಞ್**—ಎಂಬುದರಿಂದ ಅಞ್ ಪ್ರತ್ಯಯ. ಹೃದ್‌ಭಗ ಸಿಂಧ್ವಂತೇ **ಪೂರ್ವಪದಸ್ಯ ಚ**-(ಪಾ. ಸೂ. ೭-೩-೧೯) ಎಂಬುದರಿಂದ ಭಗೋ

ತ್ತರಪದವಾಗಿರುವುದರಿಂದ ಉಭಯಪದವೃದ್ಧಿಯು ಪ್ರಾಪ್ತವಾದರೆ **ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ** -(ಕಾ. ೭-೩-೧೯) ಎಂಬ ವಚನದಿಂದ ಉತ್ತರಪದವೃದ್ಧಿ ಬರುವುದಿಲ್ಲ.

**ವಹ**—ವಹ ಪ್ರಾಪಣೇ. ಧಾತು. ಲೋಣ್ಮಧ್ಯಮಪುರುಷ ಏಕವಚನರೂಪ. ಶಿಜಂತನಿಘಾತಸ್ವರ ಬರುತ್ತದೆ. ॥ ೧೫ ॥



ಸಂಹಿತಾಪಾಠಃ

ಅಶ್ವಿನಾ ವರ್ತಿರಸ್ಮದಾ ಗೋಮದ್ದಸ್ರಾ ಹಿರಣ್ಯವತ್ ।
ಅರ್ವಾಗ್ರಥಂ ಸಮನಸಾ ನಿ ಯಚ್ಛತಂ ॥ ೧೬ ॥

ಪದಪಾಠಃ

ಅಶ್ವಿನಾ । ವರ್ತಿಃ । ಅಸ್ಮತ್ । ಆ । ಗೋಽಮತ್ । ದಸ್ರಾ । ಹಿರಣ್ಯಽವತ್ ।
ಅರ್ವಾಕ್ । ರಥಂ । ಸಽಮನಸಾ । ನಿ । ಯಚ್ಛತಂ ॥ ೧೬ ॥

ಸಾಯಣಭಾಷ್ಯಂ

ಪ್ರಾತರನುವಾಕಸ್ಯಾಶ್ವಿನೇ ಕ್ರತಾವೌಷ್ಣಿಹೇ ಛಂದಸ್ಯಶ್ವಿನಾ ವರ್ತಿರಿತ್ಯಯಂ ತೃಚಃ । ಆಶ್ವಿನಶಸ್ತ್ರೇ ಚ । ತಥಾ ಚ ಸೂತ್ರಿತಂ । ಅಶ್ವಿನಾ ವರ್ತಿರಸ್ಮದಾಶ್ವಿನಾವೇಹ ಗಚ್ಛತಮಿತಿ ತೃಚೌ । ಆ. ೪-೧೫ । ಇತಿ ॥

ಉಷಃಸಾಹಚರ್ಯಾದ್ಬುದ್ಧಿಸ್ಥಾವಶ್ವಿನಾವಿದಮಾದಿಕೇನ ತೃಚೇನ ಸ್ತೂಯೇತೇ । ಹೇ ಅಶ್ವಿನಾಶ್ವವಂತೌ ವ್ಯಾಪನಶೀಲೌ ವಾ ದೇವೌ ದಸ್ರಾ ಶತ್ರೂಣಾಮುಪಕ್ಷಪಯಿತಾರೌ ಅಸ್ಮದಸ್ಮಾಕಂ ವರ್ತಿರ್ವರ್ತನಹೇತುಭೂತಂ ಗೃಹಮಾ ಸಮಂತಾದ್ಗೋಮದ್ಬಹುಭಿರ್ಗೋಭಿರ್ಯುಕ್ತಂ । ಹಿರಣ್ಯವದ್ಧಿತರಮಣೀಯಧನಯುಕ್ತಂ ಚ ಯಥಾ ಭವತಿ ತಥಾ ಸಮನಸಾ ಸಮಾನಮನಸ್ಕೌ ಸಂತೌ ಯುವಾಂ ಯುಷ್ಮದೀಯಂ ರಥಮರ್ವಾಗರ್ವಾಚೀನಮಸ್ಮದೀಯಗೃಹಮಭಿಮುಖಂ ನಿ ಯಚ್ಛತಂ । ಆವರ್ತ-

ಯತಂ ॥ ಅಶ್ವಿನಾ । **ಸುಪಾಂ ಸುಲುಗಿತ್ಯಾಕಾರಃ ಃ ।** **ವರ್ತಿಃ । ವರ್ತತೇಽಸ್ಮಿನ್ನಿತಿ ವರ್ತಿರ್ಗೃಹಂ ।** **ಔಣಾದಿಕ ಇಸಿಪ್ರತ್ಯಯಃ । ಅಸ್ಮತ್ । ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ । ಸಮನಸಾ । ಸಮಾನಂ ಮನೋ ಯಯೋಸ್ತೌ । ಸಮಾನಸ್ಯ ಛಂದಸೀತಿ ಸಭಾವಃ ॥**

ಪ್ರತಿಪದಾರ್ಥ

ದಸ್ರಾ—ಶತ್ರುನಾಶಕರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಅಸ್ಮತ್**—ನಮ್ಮ । **ವರ್ತಿಃ**—ವಾಸಸ್ಥಾನವಾದ ಗೃಹವು । **ಆ**—ಸುತ್ತಲೂ । **ಗೋಮತ್**—ಗೋವುಗಳಿಂದ ಕೂಡಿದ್ದಾಗಿ ಇರುವಂತೆಯೂ । **ಹಿರಣ್ಯವತ್**—ಹಿತವಾದುದೂ, ರಮಣೀಯವಾದುದೂ ಆದ ಧನದಿಂದ ತುಂಬಿರುವಂತೆಯೂ (ಆಗುವುದಕ್ಕಾಗಿ) । **ಸಮನಸಾ**—ಅನುಗ್ರಹ ಬುದ್ಧಿಯುಳ್ಳವರಾಗಿ । **ರಥಂ**—ನಿಮ್ಮ ರಥವನ್ನು । **ಅರ್ವಾಕ್**—( ನಮ್ಮ ಗೃಹದ ) ಅಭಿಮುಖವಾಗಿ । **ನಿ ಯಚ್ಛತಂ**—ತಿರುಗಿಸಿ ಹೊಡೆಯಿರಿ ॥

॥ ಭಾವಾರ್ಥ ॥

ಶತ್ರುನಾಶಕರಾದ ಎಲೈ ಅಶ್ವಿನೀ ದೇವತೆಗಳೇ, ನಮ್ಮ ಗೃಹವು ಸುತ್ತಲೂ ಗೋವುಗಳಿಂದ ತುಂಬಿರ ವಂತೆಯೂ ಪ್ರಭೂತವಾದ ಧನದಿಂದ ತುಂಬಿರುವಂತೆ ಆಗುವುದಕ್ಕಾಗಿಯೂ ಸಹ ನಮ್ಮಲ್ಲಿ ಅನುಗ್ರಹಬುದ್ಧಿ ಯುಳ್ಳವರಾಗಿ ನಿಮ್ಮ ರಥವನ್ನು ನಮ್ಮ ಗೃಹದ ಅಭಿಮುಖವಾಗಿ ತಿರುಗಿಸಿ ಹೊಡೆಯಿರಿ.

English Translation

Aswins, destroyers of foes, turn your chariot towards our abode, so that with your favour it may become full of cattle and gold.

॥ ವಿಶೇಷವಿಷಯಗಳು ॥

ಪ್ರಾತರನುವಾಕಮಂತ್ರಪಠನ ಕಾಲದಲ್ಲಿ ಆಶ್ವಿನಕ್ರತು ಸಂಬಂಧವಾದ ಉಷ್ಣಿಕ್ ಛಂದಸ್ಸಿನ ಋಕ್ಕುಗಳನ್ನು ಪಠಿಸುವಾಗ **ಅಶ್ವಿನಾ ವರ್ತಿಃ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪಠಿಸಬೇಕೆಂದೂ ಆಶ್ವಿನ ಶಸ್ತ್ರಮಂತ್ರ ಪಠನದಲ್ಲಿಯೂ ಈ ಋಕ್ಕುಗಳನ್ನು ಪಠಿಸಬೇಕೆಂದೂ ಆಶ್ವಲಾಯನ ಶ್ರೌತಸೂತ್ರದ **ಅಶ್ವಿನಾ ವರ್ತಿರಸ್ಮದಾಶ್ವಿನಾ-ನೇಹ ಗಚ್ಛತಮಿತಿ ತೃಚೌ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪–೧೫).

ಅಶ್ವಿನೀದೇವತೆಗಳ ಉತ್ಪತ್ತಿ, ಅವರ ಸ್ವರೂಪ, ಮತ್ತು ಸ್ಥಾನ ಇವುಗಳ ವಿಷಯವನ್ನು ಹಿಂದೆ ವಿಶದವಾಗಿ ತಿಳಿಸಿದೆ, ಭಾಗ 4 ಪೇಜು 75 ನೋಡಿ.

**ದಸ್ರಾ—ದಸು ಉಪಕ್ಷಯೇ—ಶತ್ರೂಣಾಂ ಉಪಕ್ಷಪಯಿತಾರೌ । ಯದ್ವಾ । ದೇವವೈದ್ಯತ್ವೇನ ರೋಗಾಣಾಂ ಉಪಕ್ಷಪಯಿತಾರೌ ।** ಶತ್ರುನಾಶಕರು ಅಥವಾ ದೇವವೈದ್ಯರಾದ್ದರಿಂದ ರೋಗನಾಶಕರು ಎಂದರ್ಥ **ದಸ್ರಾ** ಅನ್ನುವುದಕ್ಕೆ **ದರ್ಶನೀಯೌ** । ಸುಂದರವಾದ ರೂಪವುಳ್ಳವರು ಎಂದೂ ಆಗುತ್ತದೆ. ಈ ಋಕ್ಕಿನಲ್ಲಿ ಶತ್ರು ನಾಶಕರೆಂದು ಭಾಷ್ಯಕಾರರು ಅರ್ಥಮಾಡುತ್ತಾರೆ. ಸರಣ್ಯುಪುತ್ರರಾದ ಅಶ್ವಿಗಳಲ್ಲಿ ಒಬ್ಬನಿಗೆ **ದಸ್ರ** ಇನ್ನೊಬ್ಬನಿಗೆ **ನಾಸತ್ಯ** ಎಂದು ಹೆಸರಿದ್ದರೂ ಸಹ ಸಾಧಾರಣವಾಗಿ **ದಸ್ರಾ** ಎಂದು ಇಬ್ಬರನ್ನೂ ಸೇರಿಸಿ ಹೇಳುವುದು ಪ್ರಸಿದ್ಧವಾಗಿದೆ.

**ವರ್ತಿಃ— ವರ್ತನಹೇತುಭೂತಂ ಗೃಹಂ ।** ವಾಸಮಾಡಲು ಆಧಾರಭೂತವಾದ ಮನೆಯೆಂದು ಸಾಯಣರೂ. **ವರ್ತನ್ಯಾ । ಪ್ರಸಿದ್ಧೇನ ಪಥಾ ।** ಪ್ರಸಿದ್ಧವಾದ ಮಾರ್ಗದಿಂದ ಎಂದು ಸ್ಕಂದಸ್ವಾಮಿಗಳೂ ವಿವರಿಸುತ್ತಾರೆ. ಸಾಧರಣವಾಗಿ **ವರ್ತಿ** ಶಬ್ದವು ಬಂದಾಗಲೆಲ್ಲಾ ಸಾಯಣರು ಗೃಹವೆಂದೂ, ಸ್ಕಂದಸ್ವಾಮಿಗಳು ಪ್ರಸಿದ್ಧವಾದ ಅಥವಾ ಶ್ರೇಷ್ಠವಾದ ಮಾರ್ಗವೆಂದೂ ವಿವರಿಸಿರುವರು. ಉದಾಹರಣೆಗೆ ೧-೩೪-೪ ; ೧-೧೧೬-೧೮ ; ೧-೧೧೭-೨; ೧-೧೧೯-೪ ಇತ್ಯಾದಿ ಋಕ್ಕುಗಳಲ್ಲೆಲ್ಲಾ ಇದೇ ರೀತಿ ಇಬ್ಬರೂ ಬೇರೆ ಬೇರೆ ಅರ್ಥಮಾಡಿರುತ್ತಾರೆ. ಈ ಋಕ್ಕುಗಳು ಇರುವ ಸೂಕ್ತಗಳೆಲ್ಲವೂ ಅಶ್ವಿನೀದೇವತೆಗಳ ಪರವಾದವೇ ಎಂಬುದೂ ಒಂದು ವಿಶೇಷವಿಷಯ.

**ಅರ್ವಾಗ್ರಥಂ ಸಮನಸಾ ನಿ ಯಚ್ಛತಂ** - ನಮ್ಮಲ್ಲಿ ಅನುಗ್ರಹ ಬುದ್ಧಿಯುಳ್ಳವರಾಗಿ ನಮ್ಮ ಗೃಹದ ಅಭಿಮುಖವಾಗಿ ನಿಮ್ಮ ರಥವನ್ನು ತಿರುಗಿಸಿಕೊಂಡು ಬನ್ನಿರಿ. ಅಶ್ವಿನೀದೇವತೆಗಳ ರಥವು ವೈಚಿತ್ರ್ಯದಲ್ಲಿಯೂ ಸೊಬಗಿನಲ್ಲಿಯೂ ಅತ್ಯಂತ ಪ್ರಸಿದ್ಧವಾದುದರಿಂದ ಈ ದೇವತೆಗಳನ್ನು ಪ್ರಾರ್ಥಿಸುವಾಗ ಅವರ ಮಹಿಮೆಯಿಂದ ಯುಕ್ತವಾದ ರಥದ ಸಂಬಂಧದೊಂದಿಗೇ ಅವರ ವರ್ಣನೆಯೂ ಅವರನ್ನು ಕುರಿತು ಪ್ರಾರ್ಥನೆಯೂ ಇರುತ್ತದೆ. ಉದಾಹರಣೆಗೆ— ಏಳನೆಯ ಮಂಡಲದಲ್ಲಿ ವಸಿಷ್ಠರಿಂದಲೂ ಎಂಟನೆಯದರಲ್ಲಿ ಶ್ಯಾವಾಶ್ವ ಆತ್ರೇಯರಿಂದಲೂ ಸಹ ಈ ಋಕ್ಕಿನ ಆನುಪೂರ್ವಿಯಲ್ಲಿಯೇ ಅಶ್ವಿನೀದೇವತೆಗಳು ಈ ರೀತಿ ಪ್ರಾರ್ಥಿಸಲ್ಪಟ್ಟಿರುವರು—

**ಅರ್ವಾಗ್ರಥಂ ಸಮನಸಾ ನಿ ಯಚ್ಛತಂ ಪಿಬತಂ ಸೋಮ್ಯಂ ಮಧು ।**
( ಋ. ಸಂ. ೭-೭೪-೨ )

**ಅರ್ವಾಗ್ರಥಂ ನಿ ಯಚ್ಛತಂ ಪಿಬತಂ ಸೋಮ್ಯಂ ಮಧು ।**
( ಋ. ಸಂ. ೮-೩೫-೨೨ )

ಹೀಗೆ ಅವರನ್ನು ಕುರಿತು ಪ್ರಾರ್ಥಿಸುವ ಕಾಲದಲ್ಲೆಲ್ಲಾ ಅವರ ರಥದ ಮಹಿಮೆಯೂ ಹೊಗಳಲ್ಪಟ್ಟಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಿನಾ**—ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಅದಕ್ಕೆ ಆಕಾರಾದೇಶ.

**ವರ್ತಿಃ**—ವರ್ತತೇಽಸ್ಮಿನ್ ಇತಿ ವರ್ತಿಃ ಗೃಹಮ್. ವೃತು ವರ್ತನೇ ಧಾತು. ಇದಕ್ಕೆ ಔಣಾದಿಕ ಇಸಿ ಪ್ರತ್ಯಯ. ವರ್ತಿಸ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ.

**ಅಸ್ಮತ್**—ಅಸ್ಮತ್ ಶಬ್ದ. ಇದಕ್ಕೆ ಷಷ್ಠೀವಿಭಕ್ತಿ ಪರವಾದಾಗ ಅದಕ್ಕೆ **ಸುಪಾಂಸುಲುಕ್**—ಎಂಬುದರಿಂದ ಲುಕ್.

**ದಸ್ರಾ**—ಇಲ್ಲಿಯೂ ಔಕಾರವಿಭಕ್ತಿಗೆ ಹಿಂದಿನಂತೆ **ಸುಪಾಂ ಸುಲುಕ್**—ಸೂತ್ರದಿಂದ ಆಕಾರಾದೇಶ.

**ಸಮನಸಾ**—ಸಮಾನಂ ಮನಃ ಯಯೋಃಸ್ತೌ ಸಮನಸೌ. **ಸಮಾನಸ್ಯ ಛಂದಸಿ**– (ಪಾ. ಸೂ. ೬-೩-೮೪) ಎಂಬುದರಿಂದ ಸಮಾನ ಶಬ್ದಕ್ಕೆ ಸಭಾವ. **ಸುಪಾಂ ಸುಲುಕ್**—ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ.

ಯಚ್ಛತಮ್—ದಾಣ್ ದಾನೇ. ಧಾತು. ಲೋಣ್ಮಧ್ಯಮಪುರುಷ ದ್ವಿವಚನದಲ್ಲಿ ಥಸಿಗೆ ಲಜ್ವದ್ಭಾವವಿರುವುದರಿಂದ ತಸ್‌ಥಸ್‌ಥ— ಸೂತ್ರದಿಂದ ತಮಾದೇಶ. ಪಾಘ್ರಾಧ್ಮಾ—ಎಂಬುದರಿಂದ ಧಾತುವಿಗೆ ಯಚ್ಛ ಎಂಬ ಆದೇಶ. ತಿಙಂತ ನಿಘಾತಸ್ವರ ಬರುತ್ತದೆ. ॥ ೧೬ ॥



ಸಂಹಿತಾಪಾಠಃ

ಯಾವಿತ್ಥಾ ಶ್ಲೋಕಮಾ ದಿವೋ ಜ್ಯೋತಿರ್ಜನಾಯ ಚಕ್ರಥುಃ ।
ಆ ನ ಊರ್ಜಂ ವಹತಮಶ್ವಿನಾ ಯುವಂ ॥ ೧೭ ॥

ಪದಪಾಠಃ

ಯೌ । ಇತ್ಥಾ । ಶ್ಲೋಕಂ । ಆ । ದಿವಃ । ಜ್ಯೋತಿಃ । ಜನಾಯ । ಚಕ್ರಥುಃ ।
ಆ । ನಃ । ಊರ್ಜಂ । ವಹತಂ । ಅಶ್ವಿನಾ । ಯುವಂ ॥ ೧೭ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯೌ ಯುವಾಂ ದಿವೋ ದ್ಯುಲೋಕಾತ್ ಶ್ಲೋಕಮುಪಶ್ಲೋಕನೀಯಂ ಪ್ರಶಂಸನೀಯಂ ಜ್ಯೋತಿಸ್ತೇಜ ಇತ್ಥೇತ್ಥಮಸ್ಮಾಭಿರನುಭೂಯಮಾನೇನ ಪ್ರಕಾರೇಣ ಚಕ್ರಥುಃ ಕೃತವಂತೌ । ಕೇಷಾಂಚಿನ್ಮತೇನ ಸೂರ್ಯಾಚಂದ್ರಮಸಾವಶ್ವಿನಾವುಚ್ಯೇತೇ । ತದುಕ್ತಂ ಯಾಸ್ಕೇನ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇಽಹೋರಾತ್ರಾವಿತ್ಯೇಕೇ ಸೂರ್ಯಾಚಂದ್ರಮಸಾವಿತ್ಯೇಕೇ । ನಿ. ೧೨-೧ । ಇತಿ । ತಥಾ ಚ ಪ್ರಕಾಶಕತ್ವಂ ತಯೋರುಪಪನ್ನಂ । ತೌ ಯುವಂ ಯುವಾಂ ನೋಽಸ್ಮಭ್ಯಮೂರ್ಜಂ ಬಲಪ್ರದಮನ್ನಮಾ ವಹತಂ । ಆನಯತಂ । ಪ್ರಯಚ್ಛತಂ ॥ ಶ್ಲೋಕಂ । ಶ್ಲೋಕೃ ಸಂಘಾತೇ । ಅಯಂ ಸ್ತುತ್ಯರ್ಥೋಽಪಿ । ಕರ್ಮಣಿ ಘಞ್ । ಞಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಅಶ್ವಿನಾ— ಎಲೈ ಅಶ್ವಿನೀದೇವತೆಗಳೇ । ಯೌ— ಯಾವ ನೀವು । ಆ ದಿವಃ—ದ್ಯುಲೋಕದಿಂದ । ಶ್ಲೋಕಂ—ಪ್ರಶಂಸನೀಯವಾದ । ಜ್ಯೋತಿಃ—ತೇಜಸ್ಸನ್ನು । ಜನಾಯ—ಮಾನವರಾದ ನಮಗೆ । ಇತ್ಥಾ—

(ನಾವು) ಈರೀತಿ (ಅನುಭವಿಸುವಂತೆ) । **ಚಕ್ರಥುಃ**—ಮಾಡಿದಿರೋ । **ಯುವಂ**—ಅದೇ ನೀವು । **ನಃ**—ನಮಗೆ । **ಊರ್ಜಂ**—ಶಕ್ತಿಯುತವಾದ ಅನ್ನವನ್ನು । **ಆ ವಹತಂ**—ತಂದುಕೊಡಿ ॥

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನೀವು ದ್ಯುಲೋಕದಿಂದ ಪ್ರಶಂಸನೀಯವಾದ ತೇಜಸ್ಸನ್ನು ತಂದೊದಗಿಸಿ ಮಾನವರಾದ ನಾವು ಈ ರೀತಿ ಸುಖವನ್ನನುಭವಿಸುವಂತೆ ಮಾಡಿದಿರಿ. ಅದೇ ಉದಾರಸ್ವಭಾವವುಳ್ಳ ನೀವು ನಮಗೆ ಶಕ್ತಿಯುತವಾದ ಅನ್ನವನ್ನು ತಂದುಕೊಡಿ.

English Translation

Aswins, you have sent adorable light from heaven to man ; bring us strength.

ವಿಶೇಷವಿಷಯ.ಗಳು

**ಶ್ಲೋಕಂ—ಶ್ಲೋಕಃ, ಧಾರಾ, ಇಳಾ** ಇತ್ಯಾದಿ ೫೭ **ವಾಜ್** ನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೨-೩೩ ) ಸ್ತುತಿರೂಪವಾದ ವಾಕ್ಕು ಎಂದರ್ಥ. **ಶ್ಲೋಕಂ ಜ್ಯೋತಿಃ** ಎನ್ನುವುದಕ್ಕೆ ಸ್ತುತ್ಯವಾದ ಅಥವಾ ಪ್ರಶಂಸನೀಯವಾದ ತೇಜಸ್ಸೆಂದಾಗುತ್ತದೆ.

**ಯಸ್ಯ ಯೋಗೇ ದುಹಿತಾ ಜಾಯತೇ ದಿವ ಉಭೇ ಅಹನೀ ಸುದಿನೇ ವಿವಸ್ವತಃ ।**
(ಋ.ಸಂ ೧೦.೩೯-೧೨)

ಎಂದು ಅಶ್ವಿನೀದೇವತೆಗಳೇ ಉಷಸ್ಸಿನ ಆವಿರ್ಭಾವಕ್ಕೂ, ಸೂರ್ಯನ ಉದಯಕ್ಕೂ ಮೂಲಕಾರಣರಾದುದರಿಂದ ಅವರೇ ಜ್ಯೋತಿಯನ್ನು ಕೊಟ್ಟು ಲೋಕಕ್ಕೆ ಪ್ರಕಾಶನನ್ನುಂಟುಮಾಡಿದರೆಂದು ಹೊಗಳಿದೆ.

**ಆ ನ ಊರ್ಜಂ ವಹತಂ**—ಅಂಧಃ, ವಾಜಃ, ಪಯಃ ಇತ್ಯಾದಿ ೨೮ ಅನ್ನನಾಮಗಳಲ್ಲಿ ಪಠಿವಾಗಿರುವುದರಿಂದ ( ನಿ. ೩-೯ ) **ಊರ್ಜ** ಶಬ್ದಕ್ಕೆ ಅನ್ನವೆಂದಾಗುತ್ತದೆ. ಕೆಲವುಕಡೆ ಶಕ್ತಿಯುತವಾದ ಅಥವಾ ಶಕ್ತಿಯನ್ನು ಕೊಡತಕ್ಕ ಅನ್ನವೆಂದೂ ಆಗುತ್ತದೆ. ಇಲ್ಲಿ **ಬಲಪ್ರದಂ ಅನ್ನಂ** । ಶಕ್ತಿದಾಯಕವಾದ ಅನ್ನವೆಂದು ವಿವರಿಸುತ್ತಾರೆ. **ನಃ** ನಮಗೆ **ಆ ವಹತಂ** ಒದಗಿಸಿ ಕೊಡಿ—ಮುಂದೆಯೂ ೧-೧೫೭-೪ನೇ ಋಕ್ಕಿನಲ್ಲಿ ಇದೇ ಆನುಪೂರ್ವಿಯಿಂದ ಅಶ್ವಿನೀದೇವತೆಗಳನ್ನು ಕುರಿತ ಪ್ರಾರ್ಥನೆಯಿದೆ.

**ಆ ನ ಊರ್ಜಂ ವಹತಮಶ್ವಿನಾ ಯುವಂ ಮಧುಮತ್ಯಾ ನಃ ಕಶಯಾ ಮಿಮಿಕ್ಷತಂ ।**
( ಋ. ಸಂ. ೧-೧೫೭-೪ )

ವ್ಯಾಕರಣಪ್ರಕ್ರಿಯಾ

**ದಿವಃ—ಊಡಿದಂ ಪದಾದಿ—**ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಚಕ್ರಥುಃ**—ಡುಕೃಞ್ ಕರಣೇ. ಧಾತು. ಲಿಣ್ಮಧ್ಯಮಪುರುಷ ದ್ವಿವಚನದಲ್ಲಿ **ಪರಸ್ಮೈಪದಾನಾಂ—**ಎಂಬುದರಿಂದ ಥಸಿಗೆ ಅಥುಸ್ ಆದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ. ಚುತ್ವ. ಯಣಾದೇಶ.

ಯೌ ಎಂದು ಒಂದೆ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಶ್ಲೋಕಮ್**—ಶ್ಲೋಕೃ ಸಂಘಾತೇ ಧಾತು. ಧಾತುಗಳಿಗೆ ಅನೇಕಾರ್ಥವಿದೆಯೆಂದು ಸ್ವೀಕರಿಸಿರುವುದರಿಂದ ಇಲ್ಲಿ ಸ್ತುತ್ಯರ್ಥದಲ್ಲಿ ಗೃಹೀತವಾಗಿದೆ. ಶ್ಲೋಕ್ಯತೇ ಇತಿ ಶ್ಲೋಕಃ. ಕರ್ಮಣಿಯಲ್ಲಿ ಘಞ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್**-(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಹತಮ್**—ವಹ ಪ್ರಾಪಣೇ ಧಾತು. ಲೋಣ್ಮಧ್ಯಮಪುರುಷ ದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಶ್ವಿನಾ**—**ಸುಪಾಂ ಸುಲುಕ್**—ಸೂತ್ರದಿಂದ ಔ ವಿಭಕ್ತಿಗೆ ಆಕಾರಾದೇಶ.

**ಯುವಮ್**—ಯುಷ್ಮಚ್ಛಬ್ದ ದ್ವಿವಚನದಲ್ಲಿ **ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್** (ಪಾ. ಸೂ. ೭-೨-೮೮) ಎಂಬಲ್ಲಿ ಲೋಕದಲ್ಲಿ ಮಾತ್ರ ಆತ್ವಹೇಳಿರುವುದರಿಂದ ಛಂದಸ್ಸಿನಲ್ಲಿ ಆತ್ವ ಬರುವುದಿಲ್ಲ. **ಙೇ ಪ್ರಥಮಯೋರಮ್**—ಎಂಬುದರಿಂದ ವಿಭಕ್ತಿಗೆ ಅಮಾದೇಶ. ಪ್ರಕೃತಿಗೆ **ಯುವಾವೌ ದ್ವಿವಚನೇ**—ಎಂಬುದರಿಂದ ಯುವಾದೇಶ. **ಶೇಷೇ ಲೋಪಃ**—ಸೂತ್ರದಿಂದ ಮಪರ್ಯಂತದ ಪರಕ್ಕೆ (ಅದ್) ಲೋಪ. ॥ ೧೭ ॥



ಸಂಹಿತಾಪಾಠಃ

ಏಹ ದೇವಾ ಮಯೋಭುವಾ ದಸ್ರಾ ಹಿರಣ್ಯವರ್ತನೀ ।
ಉಷರ್ಬುಧೋ ವಹಂತು ಸೋಮಪೀತಯೇ ॥ ೧೮ ॥

॥ ಪದಪಾಠಃ ॥

ಆ । ಇಹ । ದೇವಾ । ಮಯಃऽಭುವಾ । ದಸ್ರಾ । ಹಿರಣ್ಯವರ್ತನೀ ಇತಿ ಹಿರಣ್ಯಾऽವರ್ತನೀ ।
ಉಷಃऽಬುಧಃ । ವಹಂತು । ಸೋಮಽಪೀತಯೇ ॥ ೧೮ ॥

॥ ಸಾಯಣಭಾಷ್ಯಂ ॥

**ಉಷರ್ಬುಧ ಉಷಸಿ ಪ್ರಬುದ್ಧಾ ಅಶ್ವಾ ಇಹಾಸ್ಮಿನ್ಯಾಗೇ ಸೋಮಪೀತಯೇ ಸೋಮಪಾನಾಯ ದಸ್ರಾ ಶತ್ರೂಣಾಮುಪಕ್ಷಪಯಿತಾರಾವಶ್ವಿನಾವಾ ವಹಂತು। ಆನಯಂತು। ಕೀದೃಶೌ। ದೇವಾ ದೇವನಶೀಲೌ ದಾನಾದಿಗುಣಯುಕ್ತೌ ವಾ ಮಯೋಭುವಾ ಮಯಸ ಆರೋಗ್ಯಪ್ರದಸ್ಯ ಸುಖಸ್ಯ ಭಾವಯಿತಾರೌ। ಅಶ್ವಿನೌ ವೈ ದೇವಾನಾಂ ಭಿಷಜೌ। ಐ. ಬ್ರಾ. ೧-೧೮। ಇತಿ ಶ್ರುತೇಃ। ಹಿರಣ್ಯವರ್ತನೀ। ವರ್ತತೇಽನೇನೇತಿ ವ್ಯುತ್ಪತ್ತ್ಯಾ ವರ್ತನಿಶಬ್ದೇನ ರಥ ಉಚ್ಯತೇ। ಸುವರ್ಣಮಯೋ ವರ್ತನಿರ್ಯಯೋಸ್ತೌ॥ ದೇವೇತ್ಯಾದಿಷು ತ್ರಿಷು ಸುಪಾಂ ಸುಲುಗಿತ್ಯಾಕಾರಃ। ಸೋಮಪೀತಯೇ। ಪಾ ಪಾನೇ। ಭಾವೇ ಕ್ತಿನಿ ಘುಮಾಸ್ಥೇತೀತ್ವಂ। ಸೋಮಸ್ಯ ಪೀತಿಃ ಸೋಮಪೀತಿಃ। ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ॥**

ಪ್ರತಿಪದಾರ್ಥ

**ಉಷರ್ಬುಧಃ**—ಉಷಃಕಾಲದಲ್ಲಿ ಎಚ್ಚರಗೊಂಡ ಅಶ್ವಗಳು। **ಇಹ**—ಈ (ನಮ್ಮ) ಯಾಗಭೂಮಿಗೆ। **ಸೋಮಪೀತಯೇ**—ಸೋಮರಸ ಪಾನಾರ್ಥವಾಗಿ। **ದೇವಾ**—ಉದಾರವಾದ ದಾನಶೀಲರೂ। **ಮಯೋಭುವಾ**—ಸುಖಪ್ರದಾತರೂ। **ಹಿರಣ್ಯವರ್ತನೀ**— ಚಿನ್ನದ ರಥಾರೂಢರೂ। **ದಸ್ರಾ**— ಶತ್ರುನಾಶಕರೂ ಆದ ಅಶ್ವಿನೀದೇವತೆಗಳನ್ನು। **ಆ ವಹಂತು**—ಕರೆತರಲಿ॥

ಭಾವಾರ್ಥ

ಅಶ್ವಿನೀದೇವತೆಗಳು ಉದಾರವಾದ ದಾನಶೀಲರೂ, ಸುಖಪ್ರದರೂ ಚಿನ್ನದ ರಥಾರೂಢರೂ ಮತ್ತು ಶತ್ರುನಾಶಕರೂ ಆಗಿದ್ದಾರೆ. ಅಂತಹ ಮಹಿಮೆಯುಳ್ಳ ಅಶ್ವಿನೀದೇವತೆಗಳನ್ನು ಉಷಃಕಾಲದಲ್ಲಿ ಎಚ್ಚರಗೊಂಡ ಅಶ್ವಗಳು ನಮ್ಮ ಈ ಯಾಗಭೂಮಿಗೆ ಸೋಮರಸಪಾನಾರ್ಥವಾಗಿ ಕರೆತರಲಿ.

English Translation

May the horses awakened at dawn bring hither, to drink the Soma-juice, the divine Aswins, who are the givers of happiness, the destroyers of foes, seated in a golden chariot.

ವಿಶೇಷವಿಷಯಗಳು

**ಉಷರ್ಬುಧಃ—ಉಷಸಿ ಪ್ರಬುದ್ಧಾ ಅಶ್ವಾಃ।** ಉಷಃಕಾಲದಲ್ಲಿ ಎಚ್ಚರಗೊಂಡ ಅಶ್ವಗಳು. ಈ ಪದವು ಸಾಧಾರಣವಾಗಿ ಉಷಃ ಕಾಲದಲ್ಲಿ ಯಜ್ಞಕ್ಕಾಗಿ ಎಚ್ಚರಗೊಳ್ಳತಕ್ಕ ಯಜಮಾನರಿಗೂ, ಹವಿಸ್ಸಿನ ಸ್ವೀಕಾರಕ್ಕಾಗಿ ಏಳತಕ್ಕ ದೇವತೆಗಳಿಗೂ ಅದರಲ್ಲೂ ಮುಖ್ಯವಾಗಿ ಅಗ್ನಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಒಟ್ಟು ಋಕ್ಸಂಹಿತೆಯಲ್ಲೆಲ್ಲಾ ಎರಡು ಸ್ಥಳಗಳಲ್ಲಿ ಮಾತ್ರ ಅಶ್ವಿನೀದೇವತೆಗಳ ಕುದುರೆಗಳು ಎಂಬರ್ಥವಿದೆ. ಈ ಋಕ್ಕಿನಲ್ಲಿಯೂ ಋ. ಸಂ. ೪-೪೫-೪ ನೇ ಋಕ್ಕಿನಲ್ಲಿಯೂ ಅಶ್ವಿನೀದೇವತೆಗಳ ಕುದುರೆಗಳೆಂದರ್ಥ.

**ದೇವಾ**—ಪ್ರಕಾಶಮಾನರು ಅಥವಾ ದಾನಾದಿಗುಣಶೀಲರು.

**ಮಯೋಭುವಾ— ಶಿಂಬಾತಾ, ಶತರಾ,** ಇತ್ಯಾದಿ ಇಪ್ಪತ್ತು **ಸುಖನಾಮ**ಗಳಲ್ಲಿ ಪಠಿತವಾಗಿರು ವುದರಿಂದ **ಮಯಸ್** ಎಂದರೆ ಸುಖವೆಂದರ್ಥ (ನಿ. ೩-೧೧) **ಮಯೋಭುವಃ** ಎಂಬ ಪದವು ಸಾಧಾರಣವಾಗಿ ಇತರ ದೇವತೆಗಳಿಗೂ ವಿಶೇಷಣವಾಗಿದೆ. ಎಲ್ಲರೂ ಒಂದಲ್ಲ ಒಂದು ವಿಧದಲ್ಲಿ ಯಜಮಾನರಿಗೆ ಸುಖದಾತೃಗಳು. ಆದರೂ ಸಹ **ಅಶ್ವಿನೀದೇವತೆ**ಗಳಲ್ಲಿ ಒಂದು ವೈಶಿಷ್ಟ್ಯವಿದೆ-

**ಅಶ್ವಿನೌ ವೈ ದೇವಾನಾಂ ಭಿಷಜೌ ।**
(ಐ. ಬ್ರಾ। ೧-೧೮)

ಇತ್ಯಾದಿ ಶ್ರುತಿವಾಕ್ಯಗಳಿಂದ ಅಶ್ವಿನೀದೇವತೆಗಳು ದೇವವೈದ್ಯರೆಂದೂ ದೇವತೆಗಳ ಅನುಗ್ರಹವನ್ನು ಸಂಪಾದಿಸಿದ ಯಜ್ಞಕರ್ತರಿಗೂ ಸಹ ಆರೋಗ್ಯರೂಪವಾದ ಸುಖವನ್ನು ಅನುಗ್ರಹಿಸುವರೆಂದೂ ಪ್ರಸಿದ್ಧವಾಗಿದೆ. ಆದುದರಿಂದ ಇಲ್ಲಿ **ಮಯಸಃ ಆರೋಗ್ಯಪ್ರದಸ್ಯ ಸುಖಸ್ಯ ಭಾವಯಿತಾರೌ ।** ಆರೋಗ್ಯರೂಪವಾದ ಸುಖವನ್ನು ಕೊಡುವವರು ಎಂದರ್ಥ.

**ಹಿರಣ್ಯವರ್ತನೀ—ವರ್ತನಿ**ಯೆಂದರೆ ರಥವೆಂದೂ ರಥದ ಚಕ್ರದ ನೇಮಿಯೆಂದೂ (ಹೊರವಲಯ) ಅಥವಾ ರಥದ ಮಾರ್ಗವೆಂದೂ ಅರ್ಥವಾಗಬಹುದು. **ಹಿರಣ್ಯವರ್ತನಿ**ಯೆಂದರೆ ಸಾಧಾರಣವಾಗಿ ಸ್ವರ್ಣಮಯವಾದ ರಥವೆಂದೇ ಹೆಚ್ಚು ಕಡೆಗಳಲ್ಲಿ ಅರ್ಥಮಾಡಿದೆ- ಇಲ್ಲಿ ಸ್ವರ್ಣಮಯವಾದ ರಥವುಳ್ಳವರೆಂದರ್ಥ. ಈ ವಿಶೇಷಣವು ಋಕ್ಸಂಹಿತೆಯಲ್ಲಿ ೬-೬೧-೭ ನೇ ಋಕ್ಕನ್ನು ಬಿಟ್ಟರೆ ಉಳಿದೆಡೆಗಳಲ್ಲೆಲ್ಲಾ ಅಶ್ವಿನೀದೇವತೆಗಳ ಪರವಾಗಿಯೇ ಇವೆ. ಕೆಲವೆಡೆಗಳಲ್ಲಿ **ದಸ್ರಾ ಹಿರಣ್ಯವರ್ತನೀ** ಎಂಬ ಎರಡು ವಿಶೇಷಣಗಳೂ ಸೇರಿಕೊಂಡು ಬರುತ್ತವೆ. ಉದಾಹರಣೆಗೆ—

**ದಸ್ರಾ ಹಿರಣ್ಯವರ್ತನೀ ಸುಷುಮ್ನಾ ಸಿಂಧುವಾಹಸಾ ಮಾಧ್ವೀ ಮಮ ಶ್ರುತಂ ಹವಂ ।**
(ಋ. ಸಂ. ೫-೭೫-೨)

**ನಾವೃಧಾನಾ ಶುಭಸ್ಪತೀ ದಸ್ರಾ ಹಿರಣ್ಯವರ್ತನೀ ।**
(ಋ. ಸಂ. ೮-೫-೧೧)

**ದಸ್ರಾ ಹಿರಣ್ಯವರ್ತನೀ ಪಿಬತಂ ಸೋಮ್ಯಂ ಮಧು ।**
(ಋ. ಸಂ. ೮-೮-೧)

**ದಸ್ರಾ ಹಿರಣ್ಯವರ್ತನೀ ಶುಭಸ್ಪತೀ ಪಾತಂ ಸೋಮಮೃತಾವೃಧಾ ।**
(ಋ. ಸಂ. ೮-೮೭-೫)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ದಸ್ರಾ ಹಿರಣ್ಯವರ್ತನೀ** ಎಂಬ ಎರಡು ವಿಶೇಷಣಗಳೂ ಒಟ್ಟಿಗೆ ಸೇರಿಕೊಂಡು **ಅಶ್ವಿನೀ**ದೇವತೆಗಳ ಸ್ವರೂಪವನ್ನೂ ಸೌಂದರ್ಯವನ್ನೂ ವರ್ಣಿಸುತ್ತವೆ.

ವ್ಯಾಕರಣಪ್ರಕ್ರಿಯಾ

**ದೇವಾ**—ಈ ಮಂತ್ರದಲ್ಲಿ ಇವೇ ಮೊದಲಾದ ಮೂರು ಶಬ್ದಗಳಲ್ಲಿಯೂ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಸೋಮಪೀತಯೇ** — ಸೋಮಸ್ಯ ಪೀತಿಃ ಸೋಮಪೀತಿಃ ಪಾ ಪಾನೇ. ಧಾತು. ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್**-(ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ **ಘುಮಾಸ್ಥಾಗಾಪಾಜಹಾತಿಸಾಂ ಹಲಿ** (ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. ಪೀತಿಃ ಎಂದು ರೂಪವಾಗುತ್ತದೆ. ದಾಸೀಭಾರಾದಿಯಲ್ಲಿ ಪಠಿತವಾದುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವಹಂತು**—ವಹ ಪ್ರಾಪಣೇ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಂತಃ**—ಎಂಬುದರಿಂದ ಅಂತಾದೇಶ. **ಏರುಃ**—ಎಂಬುದರಿಂದ ಉತ್ವ. ಶಪ್ ವಿಕರಣ. **ಅತೋಗುಣೇ**—ಎಂಬುದರಿಂದ ಪೂರ್ವರೂಪ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧೮ ॥

---

# ತೊಂಭತ್ತಮೂರನೆಯ ಸೂಕ್ತವು

**ಅಗ್ನೀಷೋಮಾವಿತಿ ದ್ವಾದಶರ್ಚಂ ನವಮಂ ಸೂಕ್ತಂ ಗೋತಮಸ್ಯಾರ್ಷಂ। ಆದಿತಸ್ತಿಸ್ರೋಽನುಷ್ಟುಭಃ। ನವಮ್ಯಾದ್ಯಾಸ್ತಿಸ್ರೋ ಗಾಯತ್ರ್ಯಃ। ಅಷ್ಟಮೀ ಜಗತೀ ತ್ರಿಷ್ಟುಬ್ವಾ। ಶಿಷ್ಟಾಃ ಪಂಚ ತ್ರಿಷ್ಟುಭಃ। ಅಗ್ನೀಷೋಮೌ ದೇವತಾ। ತಥಾ ಚಾನುಕ್ರಾಂತಂ। ಅಗ್ನೀಷೋಮೌ ದ್ವಾದಶಾಗ್ನೀಷೋಮೀಯಮಾದ್ಯಾಸ್ತಿಸ್ರೋಽನುಷ್ಟುಭ ಉಪಾಂತ್ಯಾಸ್ತಿಸ್ರೋ ಗಾಯತ್ರ್ಯೋಽಷ್ಟಮೀ ಜಗತೀ ವೇತಿ॥ ಅಗ್ನೀಷೋಮೀಯಸ್ಯ ಪಶೋರ್ವಪಾಪುರೋಡಾಶಹವಿಷಾಮಾದಿತಸ್ತಿಸ್ರ ಋಚಃ ಕ್ರಮೇಣಾನುವಾಕ್ಯಾಃ। ಸೂತ್ರಿತಂ ಚ । ಅಗ್ನಿಷೋಮಾವಿಮಂ ಸುಮೇ ಯುವಮೇತಾನಿ ದಿವಿ ರೋಚನಾನೀತಿ ತೃಚೌ। ಆ. ೩-೮। ಇತಿ॥**

ಅನುವಾದವು— **ಅಗ್ನೀಷೋಮೌ** ಎಂಬ ಸೂಕ್ತವು ಹದಿನಾಲ್ಕನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋತಮನು ಋಷಿಯು. ಮೊದಲಿನ ಮೂರು ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು. ಒಂಭತ್ತರಿಂದ ಮೂರು ಋಕ್ಕುಗಳು ಗಾಯತ್ರೀ ಛಂದಸ್ಸಿನವು. ಎಂಟನೆಯ ಋಕ್ಕು ಜಗತೀ ಅಥವಾ ತ್ರಿಷ್ಟುಪ್‌ಛಂದಸ್ಕವು. ಉಳಿದ ಐದು ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಅಗ್ನಿ ಮತ್ತು ಸೋಮನು ಈ ಸೂಕ್ತಕ್ಕೆ ದೇವತೆಗಳು. ಅನುಕ್ರಮಣಿಕೆಯಲ್ಲಿ **ಅಗ್ನೀಷೋಮೌ ದ್ವಾದಶಾಗ್ನೀಷೋಮೀಯಮಾದ್ಯಾಸ್ತಿಸ್ರೋಽನುಷ್ಟುಭ ಉಪಾಂತ್ಯಾಸ್ತಿಸ್ರೋ ಗಾಯತ್ರ್ಯೋಽಷ್ಟಮೀ ಜಗತೀ ವೇತಿ** ಎಂದುಹೇಳಿರುವುದು. ಅಗ್ನೀಷೋಮೀಯ ಸಂಬಂಧವಾದ ಪಶುಯಾಗದಲ್ಲಿ ವಪಾಪುರೋಡಾಶಹವಿಸ್ಸುಗಳನ್ನು ಹೋಮಮಾಡುವಾಗ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳು ಕ್ರಮವಾಗಿ ಪುರೋನುವಾಕ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಅಗ್ನಿಷೋಮಾವಿಮಂ ಸು ಮೇ ಯುವಮೇತಾನಿ ದಿವಿ ರೋಚನಾನೀತಿ ತೃಚೌ** ಎಂಬ ಸೂತ್ರದಿಂದ ವಿವೃತವಾಗಿರುವುದು ( ಆ. ೩-೮ ).

---- :0: ----

# ಸೂಕ್ತ—೯೩

ಮಂಡಲ—೧ ॥ ಅನುವಾಕ—೧೪ ॥ ಸೂಕ್ತ—೯೩ ॥

ಅಷ್ಟಕ—೧ ॥ ಅಧ್ಯಾಯ—೬ ॥ ವರ್ಗ— ೨೮, ೨೯, ॥

ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೨

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ— ಅಗ್ನೀಷೋಮೌ ॥

॥ ಛಂದಃ—೧-೩ ಅನುಷ್ಟುಪ್ । ೪-೭, ೧೨. ತ್ರಿಷ್ಟುಪ್ । ೮. ಜಗತೀ ತ್ರಿಷ್ಟುಬ್ವಾ । ೯-೧೧. ಗಾಯತ್ರೀ ॥

॥ ಸಂಹಿತಾಪಾಠಃ ॥

ಅಗ್ನೀಷೋಮಾವಿಮಂ ಸು ಮೇ ಶೃಣುತಂ ವೃಷಣಾ ಹವಂ।
ಪ್ರತಿ ಸೂಕ್ತಾನಿ ಹರ್ಯತಂ ಭವತಂ ದಾಶುಷೇ ಮಯಃ ॥ ೧ ॥

ಪದಪಾಠಃ

ಅಗ್ನೀಷೋಮೌ । ಇಮಂ । ಸು । ಮೇ । ಶೃಣುತಂ । ವೃಷಣಾ । ಹವಂ ।
ಪ್ರತಿ । ಸುಽಉಕ್ತಾನಿ । ಹರ್ಯತಂ । ಭವತಂ । ದಾಶುಷೇ । ಮಯಃ ॥೧॥

ಸಾಯಣಭಾಷ್ಯಂ

ವೃಷಣಾ ವೃಷಣೌ ಕಾಮಾನಾಂ ವರ್ಷಿತಾರೌ ಹೇ ಅಗ್ನೀಷೋಮೌ ಇಮಮಿದಾನೀಂ ಪ್ರಯುಜ್ಯಮಾನಂ ಮೇ ಮದೀಯಂ ಹವಮಾಹ್ವಾನಂ ಸು ಶೃಣುತಂ। ಸಮ್ಯಗವಗಚ್ಛತಂ। ಸೂಕ್ತಾನಿ ಶೋಭನಾನಿ ಸ್ತುತಿಲಕ್ಷಣಾನ್ಯಸ್ಮಾಭಿಃ ಕೃತಾನಿ ವಚಾಂಸಿ ಪ್ರತಿ ಹರ್ಯತಂ। ಪ್ರತ್ಯೇಕಂ ಕಾಮಯೇಥಾಂ। ತದನಂತರಂ ದಾಶುಷೇ ಚರುಪುರೋಡಾಶಾದೀನಿ ದತ್ತವತೇ ಯಜಮಾನಾಯ ಮಯೋ ಮಯಸಃ ಸುಖಸ್ಯ ದಾತಾರೌ ಭವತಂ ॥ ಅಗ್ನಿಷೋಮೌ। ಅಗ್ನಿಶ್ಚ ಸೋಮಶ್ಚ। ದ್ವಂದ್ವಃ ಈದಗ್ನೇಃ ಸೋಮವರುಣಯೋಃ। ಪಾ. ೬-೩-೨೭। ಇತೀತ್ತ್ವಂ। ಅಗ್ನೇಃ ಸ್ತುತ್ಸ್ತೋಮಸೋಮಾಃ। ಪಾ.-

**೮-೩-೮೨ । ಇತಿ ಷತ್ವಂ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರೇ ಪ್ರಾಪ್ತೆ ಆಮಂತ್ರಿತಸ್ಯ ಚೇತ್ಯಾದ್ಯುದಾತ್ತತ್ವಂ । ವೃಷಣಾ । ಸುಪಾಂ ಸುಲುಗಿತ್ಯಾಕಾರಃ । ವಾ ಷಪೂರ್ವಸ್ಯೇತಿ ವಿಕಲ್ಪನಾದು-ಪಧಾಯಾ ದೀರ್ಘಾಭಾವಃ । ಹವಂ । ಭಾವೇಽನುಪಸರ್ಗಸ್ಯೇತಿ ಹ್ವಯತೇರಪ್ ಸಂಪ್ರಸಾರಣಂ ಚ । ಸೂಕ್ತಾನಿ । ಸುಪೂರ್ವಾದ್ವಕ್ತೇಃ ಕರ್ಮಣಿ ನಿಷ್ಠಾ । ಸೂಪಮಾನಾತ್ ಕ್ತ ಇತ್ಯುತ್ತರಪದಾಂತೋ-ದಾತ್ತತ್ವಂ । ಹರ್ಯತಂ । ಹರ್ಯ ಗತಿಕಾಂತ್ಯೋಃ । ಭೌವಾದಿಕಃ ॥**

॥ ಪ್ರತಿಪದಾರ್ಥ ॥

**ವೃಷಣಾ**—ಇಷ್ಟಾರ್ಥಗಳನ್ನು ಸುರಿಸತಕ್ಕ । **ಅಗ್ನೀಷೋಮಾ**—ಅಗ್ನಿ ಮತ್ತು ಸೋಮದೇವತೆಗಳೇ **ಮೇ**—ನನ್ನ । **ಇಮಂ ಹವಂ**—ಈ ಆಹ್ವಾನವನ್ನು । **ಸು ಶೃಣತಂ**—ಚೆನ್ನಾಗಿ ಆಲಿಸಿ ಕೇಳಿರಿ । **ಸೂಕ್ತಾನಿ**—(ನಮ್ಮಿಂದ ಪಠಿತವಾದ) ಸ್ತೋತ್ರವಾಕ್ಯಗಳನ್ನು । **ಪ್ರತಿಹರ್ಯತಂ**— ಪ್ರತ್ಯೇಕವಾಗಿ ಅಪೇಕ್ಷಿಸಿರಿ ( ಅನಂತರ ) **ದಾಶುಷೇ**—( ಚರುಪುರೋಡಾಶಾದಿಗಳನ್ನು ) ಅರ್ಪಿಸುವ ಯಜಮಾನನಿಗೆ । **ಮಯಃ**— ಸುಖದಾತರಾಗಿ । **ಭವತಂ**—ಆಗಿರಿ ॥

ಭಾವಾರ್ಥ

ಎಲೈ ಅಗ್ನೀಷೋಮದೇವತೆಗಳೇ, ನೀವು ಭಕ್ತರಿಗೆಲ್ಲಾ ಇಷ್ಟಾರ್ಥಗಳನ್ನು ತುಂಬಿಸುವವರು. ಆದೇ ಅಭಿಮಾನದಿಂದ ಈ ನನ್ನ ಆಹ್ವಾನವನ್ನು ಲಾಲಿಸಿ ಕೇಳಿರಿ. ನಮ್ಮಿಂದ ಪಠಿತವಾದ ಸ್ತೋತ್ರವಾಕ್ಯಗಳನ್ನು ಪ್ರತ್ಯೇಕವಾಗಿ ಸ್ವೀಕರಿಸಿ. ಅನಂತರ ಚರುಪುರೋಡಾಶಾದಿಗಳನ್ನು ಅರ್ಪಿಸುವ ಯಜಮಾನನಿಗೆ ಸುಖದಾತರಾಗಿರಿ.

## English Translation

Agni and Soma, showerers of desires, favourably hear this my invocation, graciously accept my hymns, and bestow happiness on the donor of the oblation.

ವಿಶೇಷವಿಷಯಗಳು

**ವೃಷಣಾ**—ಈ ವಿಶೇಷಣವು ಇತರ ದೇವತೆಗಳ ವಿಷಯದಲ್ಲೂ ಅನೇಕ ಸಲ ಉಪಯೋಗಿಸಿದ್ದರೂ ಸಹ ಅಗ್ನೀಷೋಮಗಳನ್ನು **ವೃಷಣಾ** ಎನ್ನುವುದರಲ್ಲಿ ವಿಶೇಷವಾದ ಅರ್ಥವಿದೆ. **ದಧದ್ರತ್ನಾನಿ ದಾಶುಷೇ ; ಪರ್ಷಿ ರಾಧೋ ಮಘೋನಾಂ** ಇತ್ಯಾದಿ ಒಂದೇ ಆನುಪೂರ್ವಿಯುಳ್ಳ ಪ್ರಾರ್ಥನೆಯು ಅನೇಕ ಸಂದರ್ಭಗಳಲ್ಲಿರುತ್ತವೆ. ಋ. ಸಂ. ೪-೧೫-೩ ; ೮-೧೦೩-೭ ಮುಂತಾದ ಋಕ್ಕುಗಳಲ್ಲಿ ಅಗ್ನಿಗೂ ೯-೩-೬ ; ೯-೧-೩ ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಗೂ ಸೋಮನಿಗೂ ಲಕ್ಷಿಸಿರುವ ಕ್ರಮವು ಒಂದೇ ವಿಧವಾಗಿರುತ್ತದೆ. ವಿಶೇಷವಾದ ಧನಗಳ ದಾತರೆಂದರ್ಥವು.

**ಹರ್ಯತಂ**—**ವಶ್ಮಿ, ಉಶ್ಮಸಿ** ಇತ್ಯಾದಿ ಕಾಂತಿಕರ್ಮಗಳಲ್ಲಿ **ಹರ್ಯತಿ** ಎಂಬುದು ಪಠಿತವಾಗಿರುವುದರಿಂದಲೂ (ನಿ. ೩-೯) **ಹರ್ಯತಿಃ ಪ್ರೇಪ್ಸಾಕರ್ಮ** ಎಂಬ ನಿರ್ವಚನವಿರುವುದರಿಂದಲೂ ಸಹ (ನಿ. ೭-೧೭) **ಹರ್ಯತಂ** ಎಂದರೆ

ಇಚ್ಛಿಸಿರಿ, ಅಪೇಕ್ಷಿಸಿ ಎಂದರ್ಥವು. ಈ ಋಕ್ಕಿನಲ್ಲಿ ಇಬ್ಬರಿಗೂ ಒಟ್ಟಿಗೆ ಸೇರಿಸಿ **ಇಮಂ ಹವಂ ಶೃಣುತಂ ಸೂಕ್ತಾ ನಿ ಪ್ರತಿ ಹರ್ಯತಂ** ಎಂದು ಮಾಡಿರುವ ಪ್ರಾರ್ಥನೆಯಂತೆಯೇ ಪ್ರತ್ಯೇಕವಾಗಿಯೂ ಸಹ ಒಂದೇ ಆನುಪೂರ್ವಿಯುಳ್ಳ ಪ್ರಾರ್ಥನೆಯು ಬೇರೆ ಬೇರೆ ಸ್ಥಳಗಳಲ್ಲಿವೆ. ಉದಾಹರಣೆಗೆ—

**ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ ।**
( ಋ. ಸಂ. ೧೦-೧೫೦-೨ )
**ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ ।**
( ಋ. ಸಂ. ೧-೯೧-೧೦ )

ಎಂದು ಅಗ್ನಿಗೆ ಮಾಡಿರುವ ಪ್ರಾರ್ಥನೆಯಂತೆಯೇ ಸ್ವಲ್ಪವೂ ವ್ಯತ್ಯಾಸವಿಲ್ಲದೇ ಋ. ಸಂ. ೧-೯೧-೧೦ನೇಯ ಋಕ್ಕಿನಲ್ಲಿ ಸೋಮನನ್ನು ಕುರಿತ ಪ್ರಾರ್ಥನೆಯಿದೆ. ಈ ಋಕ್ಕಿನಲ್ಲಿ ಇಬ್ಬರನ್ನೂ ಸೇರಿಸಿದೆ. ನಮ್ಮ ಯಜ್ಞವನ್ನು ನಮ್ಮ ಪ್ರಾರ್ಥನೆಯನ್ನೂ ಅತ್ಯಂತ ಅಭಿಮಾನದಿಂದ ಇಚ್ಛಿಸಿರಿ ಎಂದರ್ಥವು.

**ಮಯಃ**—**ಶರ್ಮ, ಸ್ಯೂಮಕಂ** ಇತ್ಯಾದಿ **ಸುಖ**ನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩-೧೩ ) **ಮಯಃ** ಎಂದರೆ ಸುಖವೆಂದರ್ಥವು. ಇಲ್ಲಿ ಸುಖದಾತೃವೆಂದಾಗುತ್ತದೆ. ಇದರಿಂದ ಲಭಿಸತಕ್ಕ ಸುಖದ ಸ್ವರೂಪವೇನೆಂಬುದನ್ನು ಋ. ಸಂ. ೧-೯೧-೯ನೆಯ ಋಕ್ಕಿನ ವಿವರಣೆಯಲ್ಲಿ ವಿಶದವಾಗಿ ತಿಳಿಸಿದೆ.

ವ್ಯಾಕರಣಪ್ರಕ್ರಿಯಾ

**ಅಗ್ನೀಷೋಮೌ**—ಅಗ್ನಿಶ್ಚ ಸೋಮಶ್ಚ ಅಗ್ನೀಷೋಮೌ. ದ್ವಂದ್ವಸಮಾಸ. **ಈದಗ್ನೇಃ ಸೋಮವರುಣಯೋಃ**-(ಪಾ. ಸೂ. ೬-೩-೨೭) ಎಂಬುದರಿಂದ ಸೋಮ ಶಬ್ದ ಪರದಲ್ಲಿರುವುದರಿಂದ ಅಗ್ನಿ ಶಬ್ದಕ್ಕೆ ಈತ್ವ. **ಅಗ್ನೇಃ ಸ್ತುತ್‌ಸ್ತೋಮ ಸೋಮಾಃ** (ಪಾ. ಸೂ. ೮-೩-೮೨) ಎಂಬುದರಿಂದ ಸೋಮಶಬ್ದದ ಸಕಾರಕ್ಕೆ ಷತ್ವ. ಸಂಬೋಧನಾದ್ವಿವಚನಾಂತರೂಪ. **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರವು ಪ್ರಾಪ್ತವಾದರೆ **ಆಮಂತ್ರಿತಸ್ಯ ಚ**-(ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶೃಣುತಮ್**—ಶ್ರು ಶ್ರವಣೇ ಧಾತು. ಲೋಣ್ಮಧ್ಯಮಪುರುಷದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಮಾದೇಶ. **ಶ್ರುವಃ ಶೃ ಚ**-(ಪಾ. ಸೂ. ೩-೧-೭೪) ಎಂಬುದರಿಂದ ಧಾತುವಿಗೆ ಶೃ ಆದೇಶ. ಶಪಿಗೆ ಶ್ನು ವಿಕರಣ ಅಪಿತ್ ಸಾರ್ವಧಾತುಕವಾದುದರಿಂದ ಙಿದ್ವದ್ಭಾವವಿರುವುದರಿಂದ ಗುಣ ಬರುವುದಿಲ್ಲ.

**ವೃಷಣಾ**—**ಸುಪಾಂ ಸುಲುಕ್**—ಎಂಬುದರಿಂದ ಔಕಾರ ವಿಭಕ್ತಿಗೆ ಆಕಾರಾದೇಶ. **ಸರ್ವನಾಮಸ್ಥಾನೇ ಚಾಽಸಂಬುದ್ಧೌ**—ಎಂಬುದರಿಂದ ಯದ್ಯಪಿ ಉಪಧಾದೀರ್ಘ ಬರಬೇಕಾಗುತ್ತದೆ. ಆದರೆ **ವಾಷಪೂರ್ವಸ್ಯ ನಿಗಮೇ** ( ಪಾ. ಸೂ. ೬-೪-೯) ಎಂಬುದರಿಂದ ವಿಕಲ್ಪವೆಂದುದರಿಂದ ಉಪಧಾದೀರ್ಘ ಬರುವುದಿಲ್ಲ.

**ಹವಮ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಇದಕ್ಕೆ **ಭಾವೇಽನುಪಸರ್ಗಸ್ಯ** (ಪಾ. ಸೂ. ೩-೩-೭೫) ಎಂಬುದರಿಂದ ಅಪ್ ಪ್ರತ್ಯಯ ; ತತ್ಸನ್ನಿಯೋಗದಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ**—ಸೂತ್ರದಿಂದ ಪೂರ್ವರೂಪ. ಹು+ಅ ಎಂದಿರುವಾಗ **ಸಾರ್ವಧಾತುಕಾ**—ಎಂಬುದರಿಂದ ಗುಣ. ಅವಾದೇಶ. ಅಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸೂಕ್ತಾನಿ**—ವಚ ಪರಿಭಾಷಣೇ ಧಾತು. ಸುಪೂರ್ವವಾಗಿರುವಾಗ ಇದಕ್ಕೆ ನಿಷ್ಠಾ ಕ್ತ ಪ್ರತ್ಯಯ. ಕಿತ್ತಾದುದರಿಂದ **ವಚಿಸ್ವಪಿಯಜಾದೀ**-(ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. ಸೂಕ್ತ ಎಂದು ರೂಪವಾಗುತ್ತದೆ. **ಸೂಪಮಾನಾತ್** ಕ್ತಃ—ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಹರ್ಯತಮ್**—ಹರ್ಯ ಗತಿಕಾಂತ್ಯೋಃ ಧಾತು. ಭ್ವಾದಿ. ಕಾಂತಿಯೆಂದರೆ ಇಚ್ಛಾ. ಲೋಣ್ಮಧ್ಯಮಪುರುಷ ದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭವತಮ್**—ಹಿಂದಿನಂತೇ ಲೋಣ್ಮಧ್ಯಮಪುರುಷದ್ವಿವಚನರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ತಮ್) **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಆಗ ಧಾತು ಸ್ವರ ಉಳಿಯುತ್ತದೆ. ‖ ೧ ‖

:O:

॥ ಸಂಹಿತಾಪಾಠಃ ॥

ಅಗ್ನೀಷೋಮಾ ಯೋ ಅದ್ಯ ವಾಮಿದಂ ವಚಃ ಸಪರ್ಯತಿ ।
ತಸ್ಮೈ ಧತ್ತಂ ಸುವೀರ್ಯಂ ಗವಾಂ ಪೋಷಂ ಸ್ವಶ್ವ್ಯಂ ‖ ೨ ‖

ಪದಪಾಠಃ

ಅಗ್ನೀಷೋಮಾ । ಯಃ । ಅದ್ಯ । ವಾಂ । ಇದಂ । ವಚಃ । ಸಪರ್ಯತಿ ।
ತಸ್ಮೈ । ಧತ್ತಂ । ಸುಽವೀರ್ಯಂ । ಗವಾಂ । ಪೋಷಂ । ಸುಽಅಶ್ವ್ಯಂ ‖ ೨ ‖

ಸಾಯಣಭಾಷ್ಯಂ

ಯದಾ ಪೌರ್ಣಮಾಸ್ಯಾಮಗ್ನಿಷೋಮಾವುಪಾಂಶುಯಾಜಸ್ಯ ದೇವತಾ ತದಾನೀಮಗ್ನಿಷೋಮಾ ಯೋ ಅದ್ಯೇತಿ ತಸ್ಯಾನುವಾಕ್ಯಾ । ಸೂತ್ರಿತಂ ಚೋಕ್ತಾ ದೇವತಾ ಇತಿ ಖಂಡೇ । ಅಗ್ನೀಷೋಮಾ ಯೋ ಅದ್ಯ ವಾಮಾನ್ಯಂ ದಿವೋ ಮಾತರಿಶ್ವಾ ಜಭಾರ । ಆ. ೧-೬ । ಇತಿ ‖

ಹೇ ಅಗ್ನಿಷೋಮೌ ಯೋ ಯಜಮಾನೋಽದ್ಯಾಸ್ಮಿನ್ಕರ್ಮಣಿ ವಾಂ ಯುವಾಭ್ಯಾಂ ಯುಷ್ಮದರ್ಥಮಿದಂ ಸ್ತುತಿಲಕ್ಷಣಂ ವಚೋ ವಾಕ್ಯಂ ಸಪರ್ಯತಿ ಪೂಜಿತಂ ಕರೋತಿ ತಸ್ಮೈ ಯಜಮಾನಾಯ ಗವಾಂ ಪಶೂನಾಂ ಪೋಷಮಭಿವೃದ್ಧಿಂ ಧತ್ತ । ಪ್ರಯಚ್ಛತಂ । ಕೀದೃಶಂ ಪೋಷಂ । ಸುವೀರ್ಯಂ ಶೋಭನೇನ ವೀರ್ಯೇಣ ಸಾಮರ್ಥ್ಯೇನೋಪೇತಂ ಸ್ವಶ್ವ್ಯಂ ಶೋಭನೈರಶ್ವೈರ್ಯುಕ್ತಂ ॥ ಗವಾಂ । ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತತ್ವಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ ॥

ಪ್ರತಿಪದಾರ್ಥ

**ಅಗ್ನೀಷೋಮಾ**— ಎಲೈ ಅಗ್ನಿ ಮತ್ತು ಸೋಮದೇವತೆಗಳೇ। **ಯಃ**— ಯಾವ ಯಜಮಾನನು । **ಅದ್ಯ**— ಈ ಯಾಗಕರ್ಮದಲ್ಲಿ । **ವಾಂ**— ನಿಮ್ಮನ್ನು ಉದ್ದೇಶಿಸಿ ( ನಿಮಗೆ) **ಇದಂ ವಚಃ**— ಈ ಸ್ತೋತ್ರರೂಪವಾದ ವಾಕ್ಕನ್ನು । **ಸಪರ್ಯತಿ**— ಉಪಚಾರ ಪೂರ್ವಕವಾಗಿ ಪೂಜಾರೂಪದಿಂದ ಅರ್ಪಿಸುತ್ತಾನೆಯೋ। **ತಸ್ಮೈ**— ಆ ಯಜಮಾನನಿಗೆ। **ಸುವೀರ್ಯಂ**— ಶ್ರೇಷ್ಠವಾದ ಸಾಮರ್ಥ್ಯದಿಂದ ಕೂಡಿದವೂ ।**ಸ್ವಶ್ವ್ಯಂ**— ಉತ್ತಮವಾದ ಕುದುರೆಗಳಿಂದ ಕೂಡಿದವೂ ಆದ। **ಗವಾಂ**— ಪಶುಗಳ । **ಪೋಷಂ**— ಸಮೃದ್ಧಿಯನ್ನು । **ಧತ್ತಂ**— ಕೊಡಿ ॥

ಭಾವಾರ್ಥ

ಎಲೈ ಅಗ್ನೀಷೋಮದೇವತೆಗಳೇ, ನಿಮ್ಮನ್ನು ಉದ್ದೇಶಿಸಿ ಈ ಯಜ್ಞಕರ್ಮದಲ್ಲಿ ನಿಮಗೆ ಈ ಸ್ತೋತ್ರವನ್ನು ಅರ್ಪಿಸುವ ಯಜಮಾನನಿಗೆ ಶ್ರೇಷ್ಠವಾದ ಸಾಮರ್ಥ್ಯದಿಂದ ಕೂಡಿದವೂ, ಉತ್ತಮವಾದ ಕುದುರೆಗಳಿಂದ ಕೂಡಿದವೂ ಆದ ಪಶುಗಳ ಸಮೃದ್ಧಿಯನ್ನು ಕೊಡಿ.

## English Translation

Agni and Soma, grant to him who addresses this prayer to you both, store of cattle with sound strength and good horses.

ವಿಶೇಷ ವಿಷಯಗಳು

ಪೌರ್ಣಮಾಸ್ಯೇಷ್ಟಿಯಲ್ಲಿ ಅಗ್ನೀಷೋಮದೇವತೆಗಳನ್ನುದ್ದೇಶಿಸಿ ಉಪಾಂಶು ಯಾಜದ ದೇವತೆಗಳನ್ನು ಆಹ್ವಾನಮಾಡುವುದಕ್ಕಾಗಿ **ಅಗ್ನೀಷೋಮಾ ಯೋ ಅದ್ಯ** ಎಂಬ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಉಕ್ತಾ ದೇವತಾ** ಎಂಬ ಖಂಡದಲ್ಲಿ **ಅಗ್ನೀಷೋಮಾ ಯೋ ಅದ್ಯ ವಾಮಾನ್ಯಂ ದಿವೋ ಮಾತರಿಶ್ವಾ ಜಭಾರ** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು ( ಆ. ೧-೬ ).

ಸಪರ್ಯತಿ – ಇರಜ್ಯತಿ, ವಿಧೇಮ, ಸಪರ್ಯತಿ ಇತ್ಯಾದಿ ಪರಿಚರಣ ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಉಪಚಾರಪೂರ್ವಕವಾದ ಪೂಜೆಯೆಂದರ್ಥವು. **ರೋದಸೀ ಸಪರ್ಯತಃ** (ಋ.ಸಂ. ೧೦-೫೦-೧) ಎಂಬ ಉದಾಹರಣೆಯನ್ನು ಕೊಟ್ಟು ನಿರುಕ್ತಕಾರರು (ನಿ ೧೨-೧೦) **ಪರಿಚರತಃ** ಎಂದರೆ **ಪೂಜಯತಃ** ಎಂದು ವಿವರಿಸುತ್ತಾರೆ. ಹಾಗೆಯೇ ಇಲ್ಲಿಯೂ ಸಹ ಉಪಚಾರಪೂರ್ವಕವಾದ ಪೂಜೆಯು, ಅರ್ಪಣೆಯೆಂದು ಅರ್ಥವು.

**ಸುವೀರ್ಯಂ ಸ್ವಶ್ವ್ಯಂ ಗವಾಂ ಪೋಷಂ**—ಅಗ್ನಿ ಮತ್ತು ಸೋಮ ಈ ಎರಡು ದೇವತೆಗಳೂ ಸಹ ಸಕಲ ಧನಕ್ಕೂ ಒಡೆಯರೆಂದು ಅನೇಕ ಕಡೆ ವರ್ಣಿತವಾಗಿದೆ. **ದಧದ್ರತ್ನಾನಿ ದಾಶುಷೇ** (ಋ. ಸಂ. ೧–೧೫–೩) ಎಂದು ಅಗ್ನಿಗೆ ಹೇಳುವಂತೆಯೇ ಸೋಮನಿಗೂ ( ಋ. ಸಂ. ೯–೩–೬ ) ಸಂಬೋಧಿಸಿದೆ. ಅದು ಎಂತಹ ರತ್ನಗಳು ಎಂಬುದನ್ನು ವಿವರಿಸುತ್ತಾ.

**ಗೋಜಿನ್ನಃ ಸೋಮೋ ರಥಜಿದ್ಧಿರಣ್ಯಜಿತ್ಸ್ವರ್ಜಿದಬ್ಜಿತ್ಪವತೇ ಸಹಸ್ರಜಿತ್ ।**

( ಋ. ಸಂ. ೯-೭೮-೪ )

ಎಂಬ ಋಕ್ಕಿನಲ್ಲಿ ವಿವರಿಸುವಂತೆ ಯಜ್ಞಕರ್ತರಿಗೆ ನಾನಾವಿಧವಾದ ಎಂದರೆ ಗೋವುಗಳು, ರಥ, ಚಿನ್ನ, ಮುಂತಾದ ಧನಗಳನ್ನು ಒದಗಿಸಿ ಕೊಡುವವನೆಂದು ಸೋಮನ ಶಕ್ತಿಯನ್ನೂ, ಔದಾರ್ಯವನ್ನು ವರ್ಣಿಸಿರುವುದು.

**ವಸುರ್ವಸೂನಾಂ ಕ್ಷಯಸಿ ತ್ವಮೇಕ ಇದ್ದ್ಯಾವಾ ಚ ಯಾನಿ ಪೃಥಿವೀ ಚ ಪುಷ್ಯತಃ ।**

( ಋ. ಸಂ. ೧೦–೯೧-೩ )

ಎಂಬ ಋಕ್ಕಿನಲ್ಲಿ ವರ್ಣಿಸುವಂತೆ ಅನೇಕ ಕಡೆಗಳಲ್ಲಿ ಅಗ್ನಿಯೇ ಸಕಲವಿಧವಾದ ಧನಕ್ಕೂ ಒಡೆಯನು ಮತ್ತು ದ್ಯಾವಾಪೃಥಿವಿಗಳೆರಡೂ ಸಹ ಈ ದಾತೃವಿನ ಧನದಿಂದಲೇ ಪುಷ್ಟವಾಗುತ್ತವೆ ಎಂದು ಅಗ್ನಿಯನ್ನು ಸ್ತುತಿಸುತ್ತಾರೆ. ಹೀಗೆ ಸಕಲ ಧನಕ್ಕೂ ಒಡೆಯರಾದ ಅಗ್ನೀಸೋಮ ದೇವತೆಗಳನ್ನು ಉತ್ತಮವಾದುದೂ ಪಶ್ವಶ್ವಾದಿರೂಪವಾದುದೂ ಆದ ಧನಗಳ ದಾನಕ್ಕಾಗಿ ಪ್ರಾರ್ಥಿಸುವುದು ರೂಢಿಯಾಗಿರುವುದು.

ವ್ಯಾಕರಣಪ್ರಕ್ರಿಯಾ

**ಅಗ್ನೀಷೋಮಾ**—ಇದರ ಪರದಲ್ಲಿರುವ ಔಕಾರ ವಿಭಕ್ತಿಗೆ **ಸುಪಾಂ ಸುಲುಕ್**—ಸೂತ್ರದಿಂದ ಆಕಾರಾದೇಶ. ರೂಪಸಿದ್ಧಿಯು ಹಿಂದಿನ ಮಂತ್ರದಲ್ಲಿ ಉಕ್ತವಾಗಿದೆ.

**ವಚಃ**—ವಚ ಪರಿಭಾಷಣೇ. ಧಾತು. **ಸರ್ವಧಾತುಭ್ಯ ಅಸುನ್**—ಎಂಬುದರಿಂದ ಅಸುನ್‌ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಪರ್ಯತಿ**—ಸಪರ ಪೂಜಾಯಾಂ ಧಾತು. ಕಂಡ್ವಾದಿಯಲ್ಲಿ ಸೇರಿರುವುದರಿಂದ **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. **ಸನಾದ್ಯಂತಾಧಾತವಃ**—ಎಂಬುದರಿಂದ ಧಾತು ಸಂಜ್ಞಾ. ಲಟ್ ಪ್ರಥಮಪುರುಷ ಏಕವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಕ್‌ಸ್ವರ ಉಳಿಯುತ್ತದೆ.

**ಧತ್ತಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲೋಣ್ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. ಶ್ಲುವಿಕರಣ. ಧಾತುವಿಗೆ ದ್ವಿತ್ವ- **ಶ್ನಾಭ್ಯಸ್ತಯೋರಾತಃ**—ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಖರಿ ಚ**—ಎಂಬುದರಿಂದ ಧಕಾರಕ್ಕೆ ತಕಾರಾದೇಶ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಗವಾಮ್**—ಗೋ ಶಬ್ದದ ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ಪ್ರಾಪ್ತವಾಗುವ ವಿಭಕ್ತ್ಯುದಾತ್ತಕ್ಕೆ **ನ ಗೋಶ್ವನ್‌ಸಾವವರ್ಣ**-(ಪಾ. ಸೂ. ೬-೧-೧೮೨) ಎಂಬುದರಿಂದ ನಿಷೇಧ ಬರುವುದರಿಂದ ಪ್ರಕೃತಿಸ್ವರ ಉಳಿಯುತ್ತದೆ. ॥ ೨ ॥



ಸಂಹಿತಾಪಾಠಃ

ಅಗ್ನೀಷೋಮಾ ಯ ಆಹುತಿಂ ಯೋ ವಾಂ ದಾಶಾದ್ಧವಿಷ್ಕೃ-
ತಿಂ ।
ಸ ಪ್ರಜಯಾ ಸುವೀರ್ಯಂ ವಿಶ್ವಮಾಯುರ್ವ್ಯಶ್ನವತ್ ॥ ೩ ॥

॥ ಪದಪಾಠಃ ॥

ಅಗ್ನೀಷೋಮಾ । ಯಃ । ಆಽಹುತಿಂ । ಯಃ । ವಾಂ । ದಾಶಾತ್ । ಹವಿಃಽಕೃ-
ತಿಂ ।
ಸಃ । ಪ್ರಽಜಯಾ । ಸುಽವೀರ್ಯಂ । ವಿಶ್ವಂ । ಆಯುಃ । ವಿ । ಅಶ್ನವತ್ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೀಷೋಮೌ ಯೋ ಯಜಮಾನ ಆಹುತಿಮಾಜ್ಯಾಹುತಿಂ ವಾಂ ಯುವಾಭ್ಯಾಂ ದಾಶಾತ್ ದದ್ಯಾತ್ । ಅಥವಾ ಹವಿಷ್ಕೃತಿಂ ಹವಿಷಾ ಚರುಪುರೋಡಾಶಾದಿನಾ ಕೃತಾಮಾಹುತಿಂ ಯೋ ಯಜಮಾನೋ ದದ್ಯಾತ್ । ಸ ಯಜಮಾನಃ ಪ್ರಜಯಾ ಪುತ್ರಪೌತ್ರಾದಿನಾ ಯುಕ್ತಂ ಸುವೀರ್ಯಂ ಶೋಭನವೀರ್ಯಯುಕ್ತಂ ವಿಶ್ವಂ ಸರ್ವಮಾಯುರ್ಜೀವನಂ ವ್ಯಶ್ನವತ್ । ವ್ಯಾಪ್ನೋತು ॥ ಆಹುತಿಂ । ಜುಹೋತೇಃ ಕ್ತಿನಿ ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ದಾಶಾತ್ । ದಾಶೃ ದಾನೇ । ಲೇಟ್ಯಾಡಾಗಮಃ । ಯದ್ವೃತ್ತಯೋಗಾದನಿಘಾತಃ । ಹವಿಷ್ಕೃತಿಂ । ಹವಿಷಃ ಕೃತಿಃ ಕರಣಂ ಯಸ್ಯಾಮಾಹುತೌ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ನಿತ್ಯಂ ಸಮಾಸೇಽನುತ್ತರಪದಸ್ಥಸ್ಯೇತಿ ವಿಸರ್ಜನೀಯಸ್ಯ ಷತ್ವಂ । ಅಶ್ನವತ್ । ಅಶ್ನೋತೇರ್ವ್ಯತ್ಯಯೇನ ಪರಸ್ಮೈಪದಂ । ಲೇಟ್ಯಡಾಗಮಃ ॥

॥ ಪ್ರತಿಪದಾರ್ಥ ॥

**ಅಗ್ನೀಷೋಮಾ**— ಎಲೈ ಅಗ್ನಿ ಮತ್ತು ಸೋಮದೇವತೆಗಳೇ । **ಯಃ**—ಯಾವ ಯಜಮಾನನು । **ಆಹುತಿಂ**—ಆಜ್ಯಾಹುತಿಯನ್ನೂ (ಮತ್ತು) । **ಯಃ**—ಯಾವ ಯಜಮಾನನು । **ಹವಿಷ್ಕೃತಿಂ**—ಚರುಪುರೋಡಾಶಾದಿಗಳ ಆಹುತಿಯನ್ನು । **ದದ್ಯಾತ್**— ಅರ್ಪಿಸುವನೋ । **ಸಃ**— ಆ ಯಜಮಾನನು । **ಪ್ರಜಯಾ**— ಪುತ್ರಪೌತ್ರಾದಿಗಳಿಂದ ಕೂಡಿದ । **ಸುವೀರ್ಯಂ**— ಉತ್ತಮವಾದ ಶಕ್ತಿಯನ್ನು । **ವಿಶ್ವಂ ಆಯುಃ**— (ಅವನ) ಪೂರ್ಣಾಯುಸ್ಸನ್ನು (ಅಥವಾ ಸಕಲವಾದ ಅನ್ನವನ್ನು) । **ವ್ಯಶ್ನವತ್**—ಹೊಂದಲಿ ॥

॥ ಭಾವಾರ್ಥ ॥

ಎಲೈ ಅಗ್ನೀಷೋಮದೇವತೆಗಳೇ, ಯಾವ ಯಜಮಾನನು ನಿಮಗೆ ಆಜ್ಯಾಹುತಿಯನ್ನು ಮತ್ತು ಚರುಪುರೋಡಾಶಾದಿಗಳ ಆಹುತಿಯನ್ನು ಅರ್ಪಿಸುವನೋ ಆ ಯಜಮಾನನು ಪುತ್ರಪೌತ್ರಾದಿಗಳಿಂದ ಕೂಡಿದ ಉತ್ತಮವಾದ ಶಕ್ತಿಯನ್ನೂ, ಪೂರ್ಣಾಯುಸ್ಸನ್ನೂ ಹೊಂದಲಿ.

## English Translation

Agni and Soma, may he who offers you the oblation of clarified butter, enjoy sound strength with progeny, through all his life.

॥ ವಿಶೇಷವಿಷಯಗಳು ॥

**ಹವಿಷ್ಕೃತಿಂ**—ಚರುಪುರೋಡಾಶಾದಿಗಳ ರೂಪವಾದ ಆಹುತಿಯನ್ನು.

**ವಿಶ್ವಂ ಆಯುಃ**— **ಅಂಧಃ ವಾಜಃ** ಇತ್ಯಾದಿ **ಅನ್ನ** ನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩-೯ ) ಇಲ್ಲಿ ಸಮಸ್ತವಾದ ಅನ್ನವನ್ನು ಎಂದಾಗಲೀ ಅಥವಾ **ಪ್ರಣ ಆಯೂಂಷಿ ತಾರಿಷತ್** ( ಋ. ಸಂ. ೧೦-೧೮೬-೧ ) ಇತ್ಯಾದಿ ಸ್ಥಳಗಳಲ್ಲಿ ಹೇಳಿರುವಂತೆ ಆಯಸ್ಸು ಎಂಬ ಅರ್ಥವನ್ನು ಮಾಡಿದರೆ ನಮ್ಮ ಜೀವಿತಕಾಲದಲ್ಲಿ ಸಂಪೂರ್ಣವಾಗಿ ಅಥವಾ ನಮ್ಮ ಸಂಪೂರ್ಣವಾದ ಜೀವಿತಕಾಲದಲ್ಲೆಲ್ಲಾ ಎಂದಾಗಲೀ ಆಗುತ್ತದೆ. ಅಥವಾ ಪೂರ್ಣವಾದ ಆಯಸ್ಸನ್ನು ನಾವು ಹೊಂದೋಣ ಎಂಬ ಅರ್ಥವನ್ನೂ ಹೇಳಬಹುದು.

**ಪ್ರಜಯಾ ಸುವೀರ್ಯಂ ವಿಶ್ವಮಾಯುಃ**—ಸೋಮನೂ ಮತ್ತು ಅಗ್ನಿಯೂ ಸಹ ಆಯುರ್ವರ್ಧಕರೆಂದೂ ಸತ್ಪ್ರಜೆಗಳನ್ನು ಅನುಗ್ರಹಿಸುವವರೆಂದೂ ಅನೇಕ ಕಡೆಗಳಲ್ಲಿ ಅವರ ಔದಾರ್ಯವು ವರ್ಣಿತವಾಗಿದೆ. ಉದಾಹರಣೆಗೆ—

**ವಯಾವಂತಂ ಪುಷ್ಯತಿ ಕ್ಷಯಮಗ್ನೇ ಶತಾಯುಷಂ ।**

( ಋ. ಸಂ. ೬-೨-೫ )

**ಅತೂರ್ತಂ ಶ್ರಾವಯತ್ಪತಿಂ ಪುತ್ರಂ ದದಾತಿ ದಾಶುಷೇ ।**

( ಋ. ಸಂ. ೫-೨೫-೫ )

**ತ್ವಂ ಚ ಸೋಮ ನೋ ವಶೋ ಜೀವಾತುಂ ನ ಮರಾಮಹೇ ।**

( ಋ. ಸಂ. ೧-೯೧-೬ )

ಇತ್ಯಾದಿ ಸ್ಥಳಗಳಲ್ಲೆಲ್ಲಾ ಅಗ್ನಿಯೂ ಸೋಮನೂ ಸಹ ಪುತ್ರಪೌತ್ರಾದಿ ರೂಪವಾದ ಕವಲುಗಳಿಂದ ಕೂಡಿದ ಸಂತಾನ ಸಂಪತ್ತನ್ನೂ, ದೀರ್ಘವಾದ ಆಯುಸ್ಸನ್ನೂ, ಪುರಾಣರಾಹಿತ್ಯವನ್ನೂ ಹವಿರ್ದಾತೃವಾದ ಯಜಮಾನನಿಗೆ ಅನುಗ್ರಹಿಸುತ್ತಾರೆ ಎಂಬ ಭರವಸೆಯನ್ನು ತೋರಿಸಿ ಇಲ್ಲಿ ಅಂತಹ ಹವಿರ್ದಾತನಿಗೆ ಈ ಎಲ್ಲಾ ಸಂಪತ್ತನ್ನೂ ಒದಗಿಸ ಬೇಕೆಂದು ಬೇಡುತ್ತಾರೆ.

(೩) **ಅಶ್ನವತ್**—ವಿಧವಿಧವಾಗಿ ಹೊಂದಲಿ ಎಂದರ್ಥವು.

ಈ ಋಕ್ಕಿನಲ್ಲಿ ಪಠಿತವಾಗಿರುವಂತೆಯೇ **ವಿಶ್ವಮಾಯುರ್ವ್ಯಶ್ನುತಃ** ಎಂಬ ಆನುಪೂರ್ವಿಯು ಋಗ್ವೇದದಲ್ಲಿ ಇನ್ನು ಕೆಲವುಕಡೆ ಇರುತ್ತದೆ. ಉದಾಹರಣೆಗೆ—

**ಪುತ್ರಿಣಾ ತಾ ಕುಮಾರಿಣಾ ವಿಶ್ವಮಾಯುರ್ವ್ಯಶ್ನುತಃ ।**
( ಋ. ಸಂ. ೮-೩೧-೮ )

**ಇಹೈವ ಸ್ತಂ ಮಾ ವಿ ಯೌಷ್ಟಂ ವಿಶ್ವಮಾಯುರ್ವ್ಯಶ್ನುತಂ ।**
**ಕ್ರೀಳಂತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇ ಗೃಹೇ ॥**
( ಋ. ಸಂ. ೧೦-೮೫-೪೨ )

ಇತ್ಯಾದಿ ಋಕ್ಕುಗಳಲ್ಲಿ ಹೇಳಿರುವಂತೆ ಹವಿರ್ದಾತನಿಗೆ ಸಕಲ ಪುತ್ರಪೌತ್ರಾದಿಲಾಭವೂ ಅದರಿಂದುಂಟಾದ ಆನಂದವೂ ದೀರ್ಘವಾದ ಆಯಸ್ಸೂ ಲಭಿಸುತ್ತದೆ ಎಂದು ಅನೇಕಕಡೆಗಳಲ್ಲಿ ವರ್ಣಿತವಾಗಿದೆ..

॥ ವ್ಯಾಕರಣಪ್ರಕ್ರಿಯಾ ॥

**ಆಹುತಿಮ್**—ಹು ದಾನಾದನಯೋಃ ಧಾತು. ಆಙ್ ಉಪಸರ್ಗ. ಇದಕ್ಕೆ ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್**—ಎಂಬುದರಿಂದ ಕ್ತಿನ್‌ಪ್ರತ್ಯಯ. ಹುತಿ ಎಂದು ರೂಪವಾಗುತ್ತದೆ. **ತಾದೌಚ ನಿತಿ** (ಪಾ. ಸೂ ೬-೨.೫೦) ಎಂಬುದರಿಂದ ಗತಿಗೆ (ಆಙ್) ಪ್ರಕೃತಿಸ್ವರ ಬರುತ್ತದೆ.

**ದಾಶಾತ್**—ದಾಶೃ ದಾನೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ-ಲೋಪಃ ಪರಸ್ಮೈಪದೇಷು** ಎಂಬುದರಿಂದ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಯಃ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ

**ಹವಿಷ್ಕೃತಿಮ್**—ಹವಿಷಃ ಕೃತಿಃ ಕರಣಂ ಯಸ್ಯಾಂ ಆಹುತೌ ಹವಿಷ್ಕೃತಿಃ. **ನಿತ್ಯಂ ಸಮಾಸೇಽನುತ್ತರಪದಸ್ಥಸ್ಯ** (ಪಾ. ಸೂ. ೮-೩-೪೫) ಎಂಬುದರಿಂದ ಹವಿಃ ಎಂಬಲ್ಲಿರುವ ವಿಸರ್ಗಕ್ಕೆ ಸಮಾಸದಲ್ಲಿ ನಿತ್ಯವಾಗಿ ಷತ್ವ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**—ಎಂಬುದರಿಂದ ಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸುವೀರ್ಯಮ್**—ಶೋಭನಂ ವೀರ್ಯಂ ಯಸ್ಯ. ಬಹುವ್ರೀಹಿ ಸಮಾಸದಲ್ಲಿ **ವೀರವೀರ್ಯೌಚ**—(ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಆಶ್ನವತ್**—ಅಶೂ ವ್ಯಾಪ್ತೌ ಧಾತು. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಪರಸ್ಮೈಪದಿ ಯಾಗುತ್ತದೆ. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪಿನ ಇಕಾರಕ್ಕೆ ಲೋಪ. **ಲೇಟೋಽಡಾಟೌ**—ಎಂಬುದ ರಿಂದ ಅಡಾಗಮ. **ಸ್ವಾದಿಭ್ಯಃ ಶ್ನುಃ**—ಎಂಬುದರಿಂದ ಶ್ನುವಿಕರಣ. ಪ್ರತ್ಯಯನಿಮಿತ್ತವಾಗಿ ಅದಕ್ಕೆ ಗುಣ. ಅವಾದೇಶ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೩ ‖



॥ ಸಂಹಿತಾಪಾಠಃ ॥

ಅಗ್ನೀಷೋಮಾ ಚೇತಿ ತದ್ವೀರ್ಯಂ ವಾಂ ಯದಮುಷ್ಣೀತಮ-
ವಸಂ ಪಣಿಂ ಗಾಃ ।
ಅವಾತಿರತಂ ಬೃಸಯಸ್ಯ ಶೇಷೋಽವಿಂದತಂ ಜ್ಯೋತಿರೇಕಂ
ಬಹುಭ್ಯಃ ‖ ೪ ‖

॥ ಪದಪಾಠಃ ॥

ಅಗ್ನೀಷೋಮಾ । ಚೇತಿ । ತತ್ । ವೀರ್ಯಂ । ವಾಂ । ಯತ್ । ಅಮು-
ಷ್ಣೀತಂ । ಅವಸಂ । ಪಣಿಂ । ಗಾಃ ।
ಅವ । ಅತಿರತಂ । ಬೃಸಯಸ್ಯ । ಶೇಷಃ । ಅವಿಂದತಂ । ಜ್ಯೋತಿಃ । ಏಕಂ ।
ಬಹುಽಭ್ಯಃ ‖ ೪ ‖

॥ ಸಾಯಣಭಾಷ್ಯಂ ॥

ಹೇ ಅಗ್ನಿಷೋಮೌ ವಾಂ ಯುವಯೋಸ್ತದ್ವಕ್ಷ್ಯಮಾಣಂ ವೀರ್ಯಂ ಸಾಮರ್ಥ್ಯಂ ಚೇತಿ । ಅಸ್ಮಾಭಿರ್ಜ್ಞಾತಮಭೂತ್ । ಯದ್ಯೇನ ವೀರ್ಯೇಣ ಗಾ ಅವಸಂ ಗೋರೂಪಮನ್ನಂ ಪಣಿಂ ಪಣೇಃ ।

ವಿಭಕ್ತಿವ್ಯತ್ಯಯಃ । ಏತನ್ನಾಮ್ನೋಽಸುರಾದಮುಷ್ಣೀತಂ ಅಪಾಹಾರ್ಷ್ಟಂ । ತಥಾ ಬೃಸಯಸ್ಯ । ವೃಸಿರ್ವೇಷ್ಟನಾರ್ಥಃ । ವೃಸಯತಿ ಸರ್ವಂ ವೇಷ್ಟಯತೀತಿ ಬೃಸಯೋಽಸುರಸ್ತ್ವಷ್ಟಾ । ತಸ್ಯಾಸುರಸ್ಯ ಶೇಷೋಽಪತ್ಯಂ । ಶೇಷ ಇತ್ಯಪತ್ಯನಾಮ । ಶಿಷ್ಯತೇ ಪ್ರಯತ ಇತಿ ಯಾಸ್ಕಃ । ನಿ. ೩-೨ । ತ್ವಷ್ಟೃ-ಸಕಾಶಾದುತ್ಪನ್ನಂ ವೃತ್ರಮವಾತಿರತಂ । ಅವಧಿಷ್ಟಂ । ಅವತಿರತಿರ್ವಧಕರ್ಮಾ । ಪ್ರಾಣಾಪಾನರೂಪ-ಯೋರ್ಯುವಯೋರ್ವೃತ್ರೇಽನವಸ್ಥಾನಾತ್ಸ ಮರಣಂ ಪ್ರಾಪ್ತಃ । ತಥಾ ಚಾಮ್ನಾಯತೇ । ತಸ್ಮಾ-ಜ್ಜಂಜಭ್ಯಮಾನಾದಗ್ನೀಷೋಮೌ ನಿರಕ್ರಾಮತಾಂ ಪ್ರಾಣಾಪಾನೌ ವಾ ಏನಂ ತದಜಹಿತಾಂ । ತೈ. ಸಂ॰ ೨-೫-೨-೪। ಇತಿ । ತತೋ ವೃತ್ರವಧಾನಂತರಂ ಜ್ಯೋತಿರ್ದ್ಯೋತಮಾನಂ ಸೂರ್ಯಮೇಕಂ ನಭಸಿ ಗಚ್ಛಂತಂ ಬಹುಭ್ಯೋ ಜನೇಭ್ಯೋ ಬಹೂನಾಮರ್ಥಾಯಾವಿಂದತಂ । ಅಲಪ್ಸಾಥಾಂ । ಏತತ್ತತ್ಸರ್ವಂ ಯೇನ ವೀರ್ಯೇಣ ಕ್ರಿಯತೇ ತದಸ್ಮಾಭಿರ್ಜ್ಞಾತಮಿತ್ಯರ್ಥಃ ॥ ಚಿತೀ । ಚಿತೀ ಸಂಜ್ಞಾನೇ । ಲುಙಿ ಚಿಣ್ ಭಾವಕರ್ಮಣೋಃ । ಪಾ. ೩-‐-೬೬ । ಇತಿ ಚ್ಲೇಶ್ಚಿಣಾದೇಶಃ । ಚಿಣೋ ಲುಗಿತಿ ತಶಬ್ದಸ್ಯ ಲುಕ್ । ಅಮುಷ್ಣೀತಂ । ಮುಷ ಸ್ತೇಯೇ । ಕ್ರ್ಯಾದಿಕಃ । ಅವಸಂ । ಅವತೇರೌಣಾದಿಕೋಽಸಚ್ । ಶೇಷಃ । ಸುಪಾಂ ಸುಲುಗಿತಿ ದ್ವಿತೀಯಾಯಾಃ ಸುಃ । ಏಕಂ । ಇಣ್ ಗತೌ । ಇಣ್ಭೀಕಾಪಾಶಲ್ಯತಿ-ಮರ್ಚಿಭ್ಯಃ ಕನ್ । ಉ. ೩-೪೩ ! ಇತಿ ಕನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ಅಗ್ನೀಷೋಮಾ**— ಎಲೈ ಅಗ್ನಿ ಮತ್ತು ಸೋಮದೇವತೆಗಳೇ। **ವಾಂ**— ನಿಮ್ಮ । **ಯತ್**— ಯಾವ ವೀರ್ಯದಿಂದ । **ಗಾಃ ಅವಸಂ**— ಗೋರೂಪವಾದ ಅನ್ನವನ್ನು । **ಪಣಿಂ**— ಪಣಿಯೆಂಬ ರಾಕ್ಷಸನಿಂದ । **ಅಮುಷ್ಣೀತಂ**— ಅಪಹರಿಸಿಕೊಂಡುಬಂದಿರೋ ; (ಮತ್ತು)। **ಬೃಸಯಸ್ಯ**— ಬೃಸಯನೆಂಬ ರಾಕ್ಷಸನ (ತ್ವಷ್ಟೃವಿನ)। **ಶೇಷಃ**— ಮಗನಾದ ವೃತ್ರನನ್ನು। **ಅವಾತಿರತಂ**— ಕೊಂದಿರೊ ; (ಅಲ್ಲದೇ) । **ಜ್ಯೋತಿಃ ಏಕಂ**— ಪ್ರಕಾಶಮಾನನಾದ ಸೂರ್ಯನೊಬ್ಬನನ್ನು । **ಬಹುಭ್ಯಃ**— ಬಹುಜನಗಳ ಉಪಕಾರಕ್ಕಾಗಿ । **ಅವಿಂದತಂ**— ಪೊಂದಿದಿರೋ । **ತತ್ ವೀರ್ಯಂ**— ಆ ಸಾಮರ್ಥ್ಯವು । **ಚೇತಿ**— (ನಮ್ಮಿಂದ) ತಿಳಿಯಲ್ಪಟ್ಟಿತು.

ಭಾವಾರ್ಥ

ಎಲೈ ಅಗ್ನಿ ಮತ್ತು ಸೋಮದೇವತೆಗಳೇ, ಯಾವ ನಿಮ್ಮ ವೀರ್ಯದಿಂದ ಗೋರೂಪವಾದ ಅನ್ನವನ್ನು ಪಣಿಯೆಂಬ ರಾಕ್ಷಸನಿಂದ ಅಪಹರಿಸಿಕೊಂಡು ಬಂದಿರೋ, ಮತ್ತು ಬೃಸಯನೆಂಬ ರಾಕ್ಷಸನ ಮಗನಾದ ವೃತ್ರಾಸುರನನ್ನು ಕೊಂದಿರೋ, ಅಲ್ಲದೇ ಪ್ರಕಾಶಮಾನನಾದ ಸೂರ್ಯನನ್ನು ಸಕಲ ಮಾನವರ ಉಪಕಾರಕ್ಕಾಗಿ ಅಂತರಿಕ್ಷದಲ್ಲಿ ಸಂಚರಿಸುವಂತೆ ಮಾಡಿದಿರೋ, ಆ ನಿಮ್ಮ ಸಾಮರ್ಥ್ಯವನ್ನು ನಾವೆಲ್ಲಾ ಚೆನ್ನಾಗಿ ಅರಿತಿದ್ದೇವೆ.

English Translation

Agni and Soma, that prowess of yours by which you have carried of the cows that were the food of Pani, is well known to us ; you have slain the offspring of Brisaya, and you have acquired the one luminary ( the Sun ) for the benefit of the many.

॥ ವಿಶೇಷವಿಷಯಗಳು ॥

**ಅವಸಂ**— ಗತ್ಯರ್ಥಕವಾದ **ಅವ** ಧಾತುವಿನಿಂದ **ಅವಸಂ** ಎಂದಾಗಿದೆಯೆಂದು ನಿರುಕ್ತಕಾರರು (೧-೧೭) ತೋರಿಸಿ ಋ. ಸಂ. ೧೦-೧೬೯-೧ನೇ ಋಕ್ಕಿನ ಕೊನೆಯ ಪಾದವಾದ **ಅವಸಾಯ ಪದ್ವತೇ ರುದ್ರ ಮೃಳ** । ಎಂಬ ಉದಾಹರಣೆಯನ್ನು ಕೊಟ್ಟು **ಪದ್ವದವಸಂ ಗಾವಃ** ಎಂದರೆ ಗೋವುಗಳ ಸಂಚಾರಕಾಲದ ಅನ್ನವು ಎಂದು ವಿವರಿಸುತ್ತಾರೆ. ಅದರಂತೆ ಇಲ್ಲಿಯೂ ಸಹ ಗೋರೂಪವಾದ ಅನ್ನವೆಂದರ್ಥ.

**ಪಣಿಂ**—ಪಣಿಯೆಂಬ ರಾಕ್ಷಸನ ಅಥವಾ ರಾಕ್ಷಸ ಗುಂಪಿನ ದುಷ್ಟಸ್ವಭಾವವನ್ನು ಅವರಿಂದ ಯಜ್ಞಾನುಷ್ಠಾನಪರರಾದ ವೈದಿಕರಿಗೆ ಯಾವ ವಿಧವಾದ ಕೇಡಕಾಗುತ್ತಿತ್ತೆಂಬುದನ್ನು, ಮುಖ್ಯವಾಗಿ ಇಂದ್ರನೇ ಈ ರಾಕ್ಷಸರ ಹಾವಳಿಯನ್ನು ತಪ್ಪಿಸಲು ಸಹಾಯಕನಾಗಿ ಅಪಹೃತವಾದ ಗೋವುಗಳನ್ನು ಹಿಂದಕ್ಕೆ ತಂದುಕೊಟ್ಟು ಯಜ್ಞಕರ್ತರಿಗೆ ಸಹಾಯಮಾಡುತ್ತಿದ್ದ ವಿಷಯವನ್ನೂ ಹಿಂದಿನ ಸಂಪುಟದಲ್ಲಿ ವಿಶದವಾಗಿ ವಿವರಿಸಿದೆ. ಅಗ್ನಿಯೂ ಸಹ ಈ ಸಂದರ್ಭಗಳಲ್ಲಿ ಸಹಾಯಮಾಡುತ್ತಿದ್ದನೆಂಬ ವಿಷಯವನ್ನು

**ನ್ಯಕ್ರತೂನ್ ಗ್ರಥಿನೋ ಮೃಧ್ರವಾಚಃ ಪಣೀಁರಶ್ರದ್ಧಾಂ ಅವೃಧಾಁಂ ಅಯಜ್ಞಾನ್ ।**

**ಪಪ್ರ ತಾನ್ ದಸ್ಯೂಁರಗ್ನಿರ್ವಿವಾಯ ಪೂರ್ವಶ್ಚಕಾರಾಪರಾಁ ಅಯಜ್ಯೂನ್ ॥**

( ಋ. ಸಂ. ೭-೬-೩ )

**ತ್ವಂ ದಸ್ಯೂಁ ರೋಕಸೋ ಅಗ್ನ ಆಜ ಉರು ಜ್ಯೋತಿರ್ಜನಯನ್ನಾರ್ಯಾಯ ।**

( ಋ. ಸಂ. ೭-೫-೬ )

ಇತ್ಯಾದಿ ಋಕ್ಕುಗಳಲ್ಲಿ ವಿವರಿಸಿರುವಂತೆ ಅಗ್ನಿಯೂ ಸಹ ಪಣಿಯೆಂಬ ಅಸುರರ ಹಿಂಸೆಯಿಂದ ಆರ್ಯರನ್ನು ಬಿಡಿಸಿ ಅವರಿಗೆ ಜ್ಯೋತಿಯನ್ನು ಒದಗಿಸಿದನು ಎಂದು ತಿಳಿಯಬರುತ್ತದೆ.

**ಬೃಸಯಸ್ಯ—ಬೃಸಿಃ ವೇಷ್ಟನಾರ್ಥಃ ಬೃಸಯತಿ ಸರ್ವಂ ವೇಷ್ಟಯತೀತಿ ಬೃಸಯಃ ಅಸುರಃ ತ್ವಷ್ಟಾ ।** ಸರ್ವವನ್ನು ಆವರಿಸು, ಸುತ್ತುವರಿದು ಮುಚ್ಚು ಎನ್ನುವ ಅರ್ಥವನ್ನು ಕೊಡುವ **ಬೃಸಿ** ಎಂಬ ಪದದಿಂದ ಬೃಸಯ ಎಂದಾಗಿದೆಯೆಂದೂ ಮತ್ತು ಆವರಿಸಿ ಮುಚ್ಚುವ ರಾಕ್ಷಸನ ಹೆಸರೆಂದೂ ಇದು ತ್ವಷ್ಟಾ ಎಂಬ ಅಸುರನ ನಾಮಧೇಯವೆಂದೂ ಸಾಯಣರು ವಿವರಿಸುತ್ತಾರೆ.

**ಬೃಸಯಸ್ಯ ಶೇಷಃ—ತುತ್ ತೋಕಂ, ತನಯಃ** ಇತ್ಯಾದಿ ಅಪತ್ಯ (ಸಂತಾನ) ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೨) ಶೇಷಃ ಎಂದರೆ ಮಗನೆಂದರ್ಥವು. **ಶೇಷ ಇತ್ಯಪತ್ಯನಾಮ ಶಿಷ್ಯತೇ ಪ್ರಯತಃ ।** ( ನಿ. ೩-೨ ) ವೃತ್ರನು ಬೃಸಯನ ಮಗನೆಂದು ಪ್ರಸಿದ್ಧವಾಗಿದೆ.

**ಅನಾತಿರತಂ—ದಭ್ನೋತಿ, ಶ್ನಥತಿ** ಇತ್ಯಾದಿ ವಧಕರ್ಮದ ನಾಮಗಳಲ್ಲಿ (ನಿ. ೩-೧೦) ಪಠಿತವಾಗಿರುವುದರಿಂದ ವಧಮಾಡಿದರು ಎಂದರ್ಥವು. ಅಗ್ನಿ ಮತ್ತು ಸೋಮ ಈ ಎರಡು ದೇವತೆಗಳೂ ಸಹ ಪ್ರಾಣಾಪಾನ ರೂಪವಾದ ಮುಖ್ಯಸತ್ತ್ವಗಳ ಅಭಾವವನ್ನುಂಟುಮಾಡಿ ವೃತ್ರನನ್ನು ಕೊಂದರು ಎಂದು ತೈತ್ತಿರೀಯ ಸಂಹಿತೆಯ.

ತಸ್ಮಾಜ್ಜಂಜಭ್ಯಮಾನಾದಗ್ನೀಷೋಮೌ ನಿರಕ್ರಾಮತಾಂ ಪ್ರಾಣಾಪಾನೌ ವಾ ಏನಂ ತದಜಹಿತಾಂ ।

( ತೈ. ಸಂ. ೨-೫-೨೪ )

ಎಂಬ ಭಾಗದಲ್ಲಿ ವಿವರಿಸಿದೆ. ಅದೂ ಅಲ್ಲದೇ ಋಕ್ಸಂಹಿತೆಯಲ್ಲಿಯೂ ಸಹ ನಾನಾ ಕಡೆಗಳಲ್ಲಿ ಅಗ್ನಿ ಮತ್ತು ಸೋಮ ದೇವತೆಗಳು ವೃತ್ರಸಂಹಾರಮಾಡಿ ಲೋಕಕ್ಕೆ ಜ್ಯೋತಿಯನ್ನು ಬೀರಿದರು ಎಂದು ವಿವರಿಸಿದೆ. ಉದಾಹರಣೆಗೆ—

**ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।**

( ಋ. ಸಂ. ೧-೫೯-೬)

**ತಮು ತ್ವಾ ವೃತ್ರಹಂತಮಂ ಯೋ ದಸ್ಯೂಁರವಧೂನುಷೇ ।**

(ಋ. ಸಂ. ೧–೭೮–೪)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯು ವೃತ್ರನನ್ನು ಸಂಹರಿಸಿ ತಮಸ್ಸನ್ನು ನಿವಾರಿಸಿದನೆಂದೂ, ಅಲ್ಲದೇ,

**ಪವಸ್ವ ವೃತ್ರಹಂತಮೋಕ್ಥೇಭಿರನುಮಾದ್ಯಃ ।**

(ಋ. ಸಂ. ೯-೨೪-೬)

**ಸಂ ದೇವೈಃ ಶೋಭತೇ ವೃಷಾ ಕವಿರ್ಯೋನಾವಧಿ ಪ್ರಿಯಃ ।**
**ವೃತ್ರಹಾ ದೇವವೀತಮಃ ।**

(ಋ. ಸಂ.–೯–೨೫–೩)

ಇತ್ಯಾದಿ ಋಕ್ಕುಗಳಲ್ಲಿ ಸೋಮನು ವೃತ್ರಹನೆಂದೂ ಸಂಬೋಧಿಸಿದೆ. ಈ ರೀತಿ ಕಗ್ಗತ್ತಲೆಯನ್ನುಂಟುಮಾಡತಕ್ಕ ವೃತ್ರಾಸುರನನ್ನು ಸಂಹರಿಸಿ ಲೋಕಕ್ಕೆ ಬೆಳಕನ್ನು ತಂದರು ಎಂದೂ ಸಹ ಅನೇಕ ಕಡೆ ವರ್ಣಿತವಾಗಿದೆ-

**ಜ್ಯೋತಿಃ ಏಕಂ ಬಹುಭ್ಯಃ ಅವಿಂದತಂ**—ಲೋಕದ ಎಲ್ಲಾ ಪ್ರಾಣಿಗಳಿಗೂ ಸಹ ಸೂರ್ಯರೂಪವಾದುದೂ ನಕ್ಷತ್ರರೂಪವಾದುದೂ ಆದ ಜ್ಯೋತಿಯನ್ನು ಒದಗಿಸಿದಿರಿ ಎಂದು ಇಲ್ಲಿ ಅಗ್ನಿ ಮತ್ತು ಸೋಮ ಎರಡು ದೇವತೆಗಳನ್ನೂ ಉದ್ದೇಶಿಸಿ ಹೇಳಿದೆ. ಇಲ್ಲೇ ಅಲ್ಲದೆ ಋಕ್ಸಂಹಿತೆಯ ಉಳಿದ ಅನೇಕ ಕಡೆಗಳಲ್ಲಿಯೂ ಸಹ ಅಗ್ನಿಯೂ ಮತ್ತು ಸೋಮನೂ ಸಹ ಜ್ಯೋತಿಯನ್ನು ತಂದೊದಗಿಸಿದರು ಎಂಬ ವರ್ಣನೆಯಿದೆ. ಉದಾಹರಣೆಗೆ-

**ಅಗ್ನೇ ನಕ್ಷತ್ರಮಜರಮಾ ಸೂರ್ಯಂ ರೋಹಯೋ ದಿವಿ ।**
**ದಧಜ್ಜ್ಯೋತಿರ್ಜನೇಭ್ಯಃ ।**

(ಋ. ಸಂ. ೧೦-೧೫೬-೪)

ವಿ ಯೋ ರಜಾಂಸ್ಯಮಿಮೀತ ಸುಕ್ರತುರ್ವೈಶ್ವಾನರೋ ವಿ ದಿವೋ ರೋಚನಾ ಕವಿಃ

(ಋ. ಸಂ ೬-೭-೭)

ಮುಂತಾದ ಅನೇಕ ಕಡೆಗಳಲ್ಲಿ ಅಗ್ನಿಯು ಜ್ಯೋತಿರ್ಮಂಡಲಗಳನ್ನು ನಿರ್ಮಿಸಿದನೆಂದೂ, ಅಲ್ಲದೇ—

ಪವಮಾನೋ ಅಜೀಜನದ್ದಿವಶ್ಚಿತ್ರಂ ನ ತನ್ಯತುಂ । ಜ್ಯೋತಿರ್ವೈಶ್ವಾನರಂ ಬೃಹತ್ ।

(ಋ. ಸಂ. ೯-೬೧-೧೬)

ಅಯುನುಕ್ತ ಜೋಮುಷಸಃ ಸುಪತ್ನೀರಯಂ ಸೂರ್ಯೇ ಅದಧಾಜ್ಜ್ಯೋತಿರಂತಃ ।

(ಋ. ಸ. ೬-೪೪-೨೩)

ಇತ್ಯಾದಿ ನಾನಾ ಕಡೆಗಳಲ್ಲಿ ಸೋಮನು ತಮೋನಿವಾರಣೆಯನ್ನು ಮಾಡಿ ಅನಂತರ ತೇಜಸ್ಸನ್ನು ನಿರ್ಮಿಸಿ ಲೋಕಕ್ಕೆಲ್ಲಾ ಒದಗಿಸಿದನೆಂದೂ ವಿವರಿಸಿದೆ. ಅಗ್ನೀಷೋಮರ ಆ ಮಹಿಮೆಯನ್ನೂ ಲೋಕೋಪಕಾರವನ್ನೂ ಸ್ಮರಿಸ್ಸಿ ಇಲ್ಲಿ **ಜ್ಯೋತಿಃ ಏಕಂ ಬಹುಭ್ಯಃ ಅವಿದಂತಂ** ಎಂದು ಉಪಕಾರಸ್ಮರಣೆಯನ್ನು ತೋರಿಸುತ್ತಾರೆ.

**ತತ್ ವೀರ್ಯಂ ಚೇತಿ—ಚಿತೀ ಸಂಜ್ಞಾನೇ** । ಜ್ಞಾನಾರ್ಥದಲ್ಲಿ **ಚೇತಿ** ಎಂದು ಉಪಯೋಗಿಸಿ ಅಗ್ನೀಷೋಮರ ಲೋಕೋಪಕಾರವೂ ಪರಾಕ್ರಮಾತ್ಮಕವಾದುದೂ ಆದ ಆ ಜೋತಿರ್ನಿರ್ಮಾಣಕಾರ್ಯವು ಸಕಲರಿಂದಲೂ ತಿಳಿಯಲ್ಪಟ್ಟಿದೆ ಎಂದು ಕೃತಜ್ಞತಾ ಸೂಚಕವಾದ ಅಭಿಪ್ರಾಯವನ್ನು ತಿಳಿಸುತ್ತಾರೆ.

ವ್ಯಾಕರಣಪ್ರಕ್ರಿಯಾ

**ಚೇತಿ**—ಚಿತೀ ಸಂಜ್ಞಾನೇ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ **ಚಿಣ್ ಭಾವಕರ್ಮಣೋಃ**-(ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಚಿಣೋಲುಕ್** (ಪಾ. ಸೂ ೬-೪-೧೦೪) ಎಂಬುದರಿಂದ ಚಿಣಿನ ಪರದಲ್ಲಿರುವ ತಶಬ್ದಕ್ಕೆ ಲುಕ್. ಪೂರ್ವದಲ್ಲಿ ಆಮಂತ್ರಿತವಿರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್**—ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಅತಿಙಂತದ ಪರದಲ್ಲಿ ಬಂದಂತೆ ಆಗಲಿಲ್ಲ. ಆದುದರಿಂದ **ತಿಙ್ಙತಿಙಃ**—ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. **ಬಹುಲಂ ಛಂದಸ್ಯಮಾಙ್‌ಯೋಗೇऽಪಿ**—ಎಂಬುದರಿಂದ ಅಡಾಗನು ಬರುವುದಿಲ್ಲ.

**ಅಮುಷ್ಣೀತಮ್** -- ಮುಷ ಸ್ತೇಯೇ. ಧಾತು. ಕ್ರ್ಯಾದಿ. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ ಥಸಿಗೆ ತಮಾದೇಶ. **ಕ್ರ್ಯಾದಿಭ್ಯಃ ಶ್ನಾ**—ಎಂಬುದರಿಂದ ಶ್ನಾವಿಕರಣ. **ಈಹಲ್ಯಘೋಃ**- ( ಪಾ. ಸೂ. ೬-೪-೧೧೩) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಈಕಾರಾದೇಶ. ಷಕಾರದ ಪರದಲ್ಲಿರುವುದರಿಂದ ಪ್ರತ್ಯಯ ನಕಾರಕ್ಕೆ **ರಷಾಭ್ಯಾಂ ನೋಣಃ ಸಮಾನಪದೇ**—ಎಂಬುದರಿಂದ ಣತ್ವ. ಅಂಗಕ್ಕೆ ಅಡಾಗನು. **ಯದ್ವೃತ್ತಾನ್ನಿತ್ಯಮ್**—ಎಂಬುದರಿಂದ ಹಿಂದೆ ಯತ್ ಎಂಬುದರ ಸಂಬಂಧವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗನು ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅವಸಮ್**—ಅವ ರಕ್ಷಣೇ ಧಾತು. ಇದಕ್ಕೆ ಔಣಾದಿಕವಾದ ಅಸಚ್ ಪ್ರತ್ಯಯ. **ಚಿತಃ**—ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅತಿರತಮ್**—ಅವ ಉಪಸರ್ಗಪೂರ್ವಕವಾದ ತಿರಧಾತುವು ಹನನ ಕ್ರಿಯಾವಾಚಿಯಾಗಿದೆ. ಲಙ್ ಮಧ್ಯಮಪುರುಷ ದ್ವಿವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಶೇಷಃ**—ಇದರ ಪರದಲ್ಲಿರುವ ದ್ವಿತೀಯಾವಿಭಕ್ತಿ ಏಕವಚನದ ಅಮಿಗೆ **ಸುಪಾಂ ಸುಲುಕ್** ಎಂಬುದರಿಂದ ಸು ಆದೇಶ.

**ಅವಿಂದತಮ್**—ವಿದ್‌ಲೃ ಲಾಭೇ ಧಾತು. **ಶೇ ಮುಚಾದೀನಾಮ್** (ಪಾ. ಸೂ. ೭-೧-೫೯)ಎಂಬುದರಿಂದ ನುಮಾಗಮ. ಲಙ್ ಮಧ್ಯಮಪುರುಷ ದ್ವಿವಚನರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗನು ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಏಕಮ್—ಇಣ್ ಗತೌ ಧಾತು. ಇದಕ್ಕೆ **ಇಣ್ಭೀಕಾಪಾಶಲ್ಯತಿಮರ್ಚಿಭ್ಯಃ ಕನ್** (ಉ. ಸೂ. ೩-೪೩) ಎಂಬುದರಿಂದ ಕನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ‖ ೪ ‖

——:o:——

ಸಂಹಿತಾಪಾಠಃ

ಯುವಮೇತಾನಿ ದಿವಿ ರೋಚನಾನ್ಯಗ್ನಿಶ್ಚ ಸೋಮ ಸಕ್ರತೂ ಅಧತ್ತಂ ।
ಯುವಂ ಸಿಂಧೂಁರಭಿಶಸ್ತೇರವದ್ಯಾದಗ್ನೀಷೋಮಾವಮುಂಚತಂ ಗೃಭೀತಾನ್ ‖ ೫ ‖

॥ ಪದಪಾಠಃ ॥

ಯುವಂ । ಏತಾನಿ । ದಿವಿ । ರೋಚನಾನಿ । ಅಗ್ನಿಃ । ಚ । ಸೋಮ । ಸಕ್ರತೂ ಇತಿ ಸಽಕ್ರತೂ । ಅಧತ್ತಂ ।
ಯುವಂ । ಸಿಂಧೂನ್ । ಅಭಿಽಶಸ್ತೇಃ । ಅವದ್ಯಾತ್ । ಅಗ್ನೀಷೋಮೌ । ಅಮುಂಚತಂ । ಗೃಭೀತಾನ್ ‖ ೫ ‖

ಸಾಯಣಭಾಷ್ಯಂ

ಅಗ್ನೀಷೋಮೀಯಸ್ಯ ಪಶೋರ್ವಪಾಪುರೋಡಾಶಹವಿಷಾಂ ಯುವಮೇತಾನಿತ್ಯಾದ್ಯಾಸ್ತಿಸ್ರ ಋಚಃ ಕ್ರಮೇಣ ಯಾಜ್ಯಾಃ । ಸೂತ್ರಂ ತು ಪೂರ್ವಮೇವೋದಾಹೃತಂ । ಆ. ೩-೮ ‖ ಪೌರ್ಣಮಾಸಯಾಗೇಽಗ್ನೀಷೋಮೀಯಸ್ಯ ಪುರೋಡಾಶಸ್ಯ ಯುವಮೇತಾನೀತ್ಯೇಷಾ ಯಾಜ್ಯಾ । ಉಕ್ತಾ ದೇವತಾ ಇತಿ ಖಂಡೇ ಸೂತ್ರಿತಂ । ಯುವಮೇತಾನಿ ದಿವಿ ರೋಚನಾನೀಂದ್ರಾಗ್ನೀ ಅವಸಾ ಗತಂ । ಆ. ೧-೬ । ಇತಿ ‖

ಹೇ ಸೋಮ ತ್ವಮಗ್ನಿಶ್ಚ ಸಕ್ರತೂ ಸಮಾನಕರ್ಮಾಣೌ ಸಂತೌ ಯುವಂ ಯುವಾಂ ರೋಚನಾನಿ ರೋಚಮಾನಾನಿ ದೀಪ್ಯಮಾನಾನ್ಯೇತಾನ್ಯಸ್ಮಾಭಿರ್ನಿಶಿ ದೃಶ್ಯಮಾನಾನಿ ತಾರಾಗ್ರಹಾದೀನಿ ಜ್ಯೋತೀಂಷಿ ದಿವಿ ದ್ಯುಲೋಕೇಽಧತ್ತಂ । ಅಧಾರಯತಂ । ಉತ್ತರಾರ್ಧಸ್ಯೇಯಮಾಖ್ಯಾಯಿಕಾ । ಇಂದ್ರೋ ವೃತ್ರಂ ಹತ್ವಾ ಬ್ರಹ್ಮಹತ್ಯಯಾ ಭೀತಃ ಸನ್ ಪೃಥಿವ್ಯಾಂ ವೃಕ್ಷೇಷು ಸ್ತ್ರೀಷ್ವಪ್ಸು ಚ ತಾಂ ಬ್ರಹ್ಮಹತ್ಯಾಂ ನ್ಯಮಾರ್ಕ್ಷೀತ್ ತಾಸಾಮಪಾಂ ಶುದ್ಧಿರಗ್ನೀಷೋಮಾಭ್ಯಾಂ ಜಾತೇತಿ । ಬ್ರಹ್ಮಹತ್ಯಾಂಶೇನ ಪಾಪೇನ ಗೃಭೀತಾನ್ ಗೃಹೀತಾನಾಕ್ರಾಂತಾನ್ ಸಿಂಧೂನ್ ನದೀವಿಶೇಷಾನ್ ಹೇ ಅಗ್ನೀಷೋಮೌ ಯುವಾಮಭಿಶಸ್ತೇರಭಿಶಸ್ಯಮಾನಾದಭಿತಃ ಪ್ರಕಟಿತಾದವದ್ಯಾತ್ತಸ್ಮಾತ್ಪಾಪಾದಮುಂಚತಂ । ಮುಕ್ತವಂತೌ । ಯದ್ವಾ । ವೃತ್ರ ಇಂದ್ರೇಣ ಹತಃ ಸನ್ ನದೀಷು ಪಪಾತ । ತತೋ ಮೃತೇನ ವೃತ್ರಶರೀರೇಣ ನದ್ಯಃ ಸರ್ವಾ ದುಷ್ಟಾ ಬಭೂವುಃ । ತಥಾ ಚ ತೈತ್ತಿರೀಯಕಂ । ಇಂದ್ರೋ ವೃತ್ರಮಹನ್ ಸೋಽಪೋಽಭ್ಯಮ್ರಿಯತ ತಾಸಾಂ ಯನ್ಮೇಧ್ಯಂ ಯಜ್ಞಿಯಂ ಸದೇವಮಾಸೀತ್ತದಪೋದಕ್ರಾಮತ್ । ತೈ. ಬ್ರಾ. ೩-೨-೫-೧ । ಇತಿ । ತೇನ ದೋಷೇಣ ಗೃಹೀತಾ ನದೀಸ್ತಸ್ಮಾದ್ದೋಷಾದಗ್ನೀಷೋಮೌ ಮುಕ್ತವಂತೌ ॥ ರೋಚನಾನಿ । ರುಚ ದೀಪ್ತೌ । ಅನುದಾತ್ತೇತಶ್ಚ ಹಲಾದೇರಿತಿ ಯುಚ್ । ಸಿಂಧೂನ್ । ದೀರ್ಘಾದಟಿ ಸಮಾನಪಾದ ಇತಿ ನಕಾರಸ್ಯ ರುತ್ವಂ । ಅತ್ರಾನುನಾಸಿಕ ಇತ್ಯನುನಾಸಿಕಃ । ಗೃಭೀತಾನ್ । ಹೃಗ್ರಹೋರ್ಭ ಇತಿ ಭತ್ವಂ ॥

ಪ್ರತಿಪದಾರ್ಥ

**ಸೋಮ**—ಎಲೈ ಸೋಮದೇವತೆಯೇ । **ಅಗ್ನಿಶ್ಚ**—ಮತ್ತು ಎಲೈ ಅಗ್ನಿದೇವನೇ । **ಸಕ್ರತೂ**—ಒಂದೇ ವಿಧವಾದ ಕ್ರಿಯೆಯುಳ್ಳವರಾದ । **ಯುವಂ**—ನೀವಿಬ್ಬರೂ । **ರೋಚನಾನಿ**—ಪ್ರಕಾಶಮಾನಗಳಾದ । **ಏತಾನಿ**—ಈ ( ಈ ನಮ್ಮ ಕಣ್ಣಿಗೆ ಗೋಚರವಾಗುವ ) ನಕ್ಷತ್ರ ಮಂಡಲಗಳನ್ನು । **ದಿವಿ**—ದ್ಯುಲೋಕದಲ್ಲಿ । **ಅಧತ್ತಂ**—ಎತ್ತಿ ಹಿಡಿದಿದ್ದೀರಿ । **ಅಗ್ನೀಷೋಮೌ**—ಎಲೈ ಅಗ್ನಿ ಮತ್ತು ಸೋಮದೇವತೆಗಳೇ ನೀವು । [ ವೃತ್ರವಧದಿಂದ ಉಂಟಾದ ಬ್ರಹ್ಮಹತ್ಯಾದೋಷದಿಂದ ] । **ಗೃಭೀತಾನ್**—ಆವರಿಸಲ್ಪಟ್ಟ । **ಸಿಂಧೂನ್**—ನದೀವಿಶೇಷಗಳನ್ನು । **ಅಭಿಶಸ್ತೇಃ**— ಸುತ್ತಲೂ ಹರಡಿರುವ ( ಅಥವಾ ಅಪವಾದ ರೂಪವಾದ) । [ **ಅವದ್ಯಾತ್**— ಪಾಪದಿಂದ **ಗೃಭೀತಾನ್**— (ಮೃತವಾದ ವೃತ್ರನ ಶರೀರವು ಬಿದ್ದುದರಿಂದ ಕಲುಷಿತವಾಗಿ) ಕಲ್ಮಷದಿಂದ ಆವರಿಸಲ್ಪಟ್ಟ ] **ಸಿಂಧೂನ್**—ನದೀ ವಿಶೇಷಗಳನ್ನು । **ಅಭಿಶಸ್ತೇಃ**—ಸುತ್ತಲೂ ಹರಡಿರುವ । **ಅವದ್ಯಾತ್**—ಕಲ್ಮಷದಿಂದ ।] **ಅಮುಂಚತಂ**—ಬಿಡಿಸಿ (ಶುದ್ಧಿಮಾಡಿ)ದಿರಿ ॥

ಭಾವಾರ್ಥ

ಎಲೈ ಅಗ್ನಿ ಮತ್ತು ಸೋಮದೇವತೆಗಳೇ ನೀವಿಬ್ಬರೂ ಸಮಾನವಾದ ಕ್ರಿಯೆ ಯುಳ್ಳವರು. ನಮ್ಮ ಕಣ್ಣಿಗೆ ಗೋಚರವಾಗುವ ಈ ಪ್ರಕಾಶಮಾನಗಳಾದ ನಕ್ಷತ್ರಮಂಡಲಗಳನ್ನು ನೀವಿಬ್ಬರೂ ಒಟ್ಟಿಗೆ ದ್ಯುಲೋಕದಲ್ಲಿ ಎತ್ತಿಹಿಡಿದಿದ್ದೀರಿ. ಮತ್ತು ವೃತ್ರವಧದಿಂದ ಉಂಟಾದ ಹತ್ಯಾದೋಷದಿಂದಲೂ ಕಲ್ಮಷದಿಂದಲೂ ಆವರಿತವಾದ ನದೀ ವಿಶೇಷಗಳನ್ನು ಆ ದೋಷದಿಂದ ಬಿಡಿಸಿ ಶುದ್ಧಿಮಾಡಿದ್ದೀರಿ.

## English Translation

Agni and Soma, you two acting together have sustained these constellations in the sky ; you have liberated the rivers that had been defied from the notorious imputation.

### ವಿಶೇಷವಿಷಯಗಳು .

ಅಗ್ನೀಷೋಮೀಯದೇವತಾ ಸಂಬಂಧವಾದ ಪಶುಯಾಗದಲ್ಲಿ ವಪಾಪುರೋಡಾಶ ಹವಿಸ್ಸುಗಳನ್ನು ಹೋಮ ಮಾಡುವಾಗ **ಯುವಮೇತಾನಿ** ಎಂದು ಮೊದಲಾಗುವ ಮೂರು ಋಕ್ಕುಗಳು ಕ್ರಮವಾಗಿ ಯಾಜ್ಯಾಮಂತ್ರಗಳಾಗಿರುವವು. ಈ ವಿಷಯದಲ್ಲಿ ಸೂತ್ರವು ಹಿಂದೆಯೇ ಹೇಳಲ್ಪಟ್ಟಿರುವುದು (ಆ. ೩-೮) ಮತ್ತು ಪೌರ್ಣಮಾಸ್ಯಯಾಗದಲ್ಲಿಯೂ ಅಗ್ನೀಷೋಮೀಯ ದೇವತಾ ಸಂಬಂಧವಾದ ಪುರೋಡಾಶದ ಹೋಮಕ್ಕಾಗಿ **ಯುವಮೇತಾನಿ** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಉಕ್ತಾ ದೇವತಾ** ಎಂಬ ಖಂಡದ **ಯುವಮೇತಾನಿ ದಿವಿ ರೋಚನಾನೀಂದ್ರಾಗ್ನೀ ಅವಸಾ ಗತಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೧-೬).

**ಸಕ್ರತೂ—ಸಮಾನಕರ್ಮಾಣೌ** । ಯಾಗಾದಿ ಕ್ರಿಯೆಗಳಲ್ಲಿ ಸಮಾನವಾದ ಮುಖ್ಯಪಾತ್ರವನ್ನು ವಹಿಸುವುದೂ, ಮೇಲಿನ ಋಕ್ಕುಗಳಲ್ಲಿ ವಿವರಿಸುವಂತೆ ಇಂದ್ರಾದಿದೇವತೆಗಳಿಗೆ ಹವಿಸ್ಸನ್ನು ಹಂಚುವುದರ ಮೂಲಕ ತೃಪ್ತಿಯನ್ನುಂಟುಮಾಡುವುದೂ, ಅವರ ಅನುಗ್ರಹವನ್ನು ಯಜ್ಞಕರ್ತರಿಗೆ ಒದಗಿಸುವುದೂ, ಲೋಕವನ್ನೆಲ್ಲಾ ಆವರಿಸುವ ತಮಸ್ಸನ್ನು ನಾಶಮಾಡಿ ಬೆಳಕನ್ನು ಹರಡುವುದೂ. ಇತ್ಯಾದಿ ನಾನಾ ವಿಧವಾದ ಲೋಕೋಪಕಾರವಾದ ಕರ್ಮಗಳಲ್ಲಿ ಸಮಾನವಾದ ಭಾಗವಹಿಸಿ ಕಾರ್ಯವನ್ನು ಸಾಧಿಸುವವರೆಂದರ್ಥವು.

**ರೋಚನಾಗಿ ಏತಾನಿ ದಿವಿ ಅಧತ್ತಂ**—ಪ್ರಕಾಶಮಾನಗಳಾದ ನಕ್ಷತ್ರಮಂಡಲಗಳನ್ನು ದ್ಯುಲೋಕದಲ್ಲಿ ಎತ್ತಿಹಿಡಿದು ಲೋಕಕ್ಕೆ ಬೆಳಕನ್ನು ಬೀರುವ ಇವರ ಉಪಕಾರಕ ಕರ್ಮವು ಪ್ರಸಿದ್ಧವಾಗಿದೆ. ಉದಾಹರಣೆಗೆ—

**ನಿಷತ್ತಮಸ್ಯ ಚರತೋ ಧ್ರುವಸ್ಯ ವಿಶ್ವಾ ದಿವೋ ರೋಚನಾಪಪ್ರಿವಾಂಸಂ ।**

( ಋ. ಸಂ. ೧-೧೪೬-೧ )

**ಅಧಿ ದ್ಯಾಮಸ್ಥಾದ್ವೃಷಭೋ ವಿಚಕ್ಷಣೋಽರೂರುಚದ್ವಿ ದಿವೋ ರೋಚನಾ ಕವಿಃ ।**

(ಋ. ಸಂ. ೯-೮೫-೯ )

ಹೀಗೆಯೇ, ( ಋ. ಸಂ. ೬-೭-೭ ; ೬-೮-೨ ; ೬-೪೪-೨೩ ; ೯-೯೭-೪೧ ಇತ್ಯಾದಿ ) ನಾನಾ ಸ್ಥಳಗಳಲ್ಲಿ ಅಗ್ನೀಷೋಮರಿಬ್ಬರೂ ಸಹ ದ್ಯುಲೋಕದ ತೇಜೋಮಂಡಲಗಳೆಲ್ಲವನ್ನೂ ಸಹ ಎತ್ತಿಹಿಡಿದು ಅವುಗಳ ಪ್ರಕಾಶವನ್ನು ಅತ್ಯಧಿಕವಾಗಿ ಹೆಚ್ಚುಮಾಡಿದ್ದಾರೆ ಎಂದು ವರ್ಣಿತವಾಗಿದೆ.

**ಗೃಭೀತಾನ್**—ಹಿಡಿಯಲ್ಪಟ್ಟು ಅಂದರೆ ಸುತ್ತಲೂ ಆವೃತವಾಗಿ ತಡೆಯಲ್ಪಟ್ಟ ಎಂದರ್ಥವು.

**ಸಿಂಧೂನ್**—ಅವನಯಃ, ಯಹ್ವಯಃ ಸೀರಾಃ ಇತ್ಯಾದಿ ನದೀನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೨೪) **ಸಿಂಧೂನ್** ಅಂದರೆ ಪ್ರವಹಿಸುವ ನದಿಗಳೆಂದರ್ಥವಾಗುತ್ತದೆ.

**ಅಭಿಶಸ್ತೇಃ**—ಸುತ್ತಲೂ ಪ್ರಕಟವಾಗಿರತಕ್ಕ.

**ಅವದ್ಯಾತ್**—ವೃತ್ರಹನನರೂಪವಾದ ಪಾಪದಿಂದ. ವೃತ್ರಹನನರೂಪವಾದ ದೋಷದಿಂದ ನದಿಗಳೆಲ್ಲವೂ ಆವೃತವಾಗಿ ಕಲ್ಮಷಪೂರಿತವಾದ ಕಾಲದಲ್ಲಿ ಆ ದೋಷವನ್ನು ನಿವಾರಿಸಿದಿರಿ ಎಂದರ್ಥವು.

ಇಲ್ಲಿ **ಸಿಂಧೂನ್** ಎಂದರೆ ಪ್ರವಾಹರೂಪವಾದ ನದಿಗಳನ್ನು ಎಂದು ಸಾಯಣರು ಅರ್ಥಮಾಡಿ ವೃತ್ರಹನನ ವಾದಾಗ ವೃತ್ರನ ಮೃತಶರೀರವು ನದಿಗಳಲ್ಲಿ ಬಿದ್ದಿತೆಂದೂ, ಆಗ ಎಲ್ಲಾ ನದಿಗಳೂ ದೋಷದಿಂದ ಪೂರಿತವಾದವೆಂದೂ—

**ಇಂದ್ರೋ ವೃತ್ರಮಹನ್ ಸೋಽಪೋಽಭ್ಯಮ್ರಿಯತ ತಾಸಾಂ ಯನ್ಮೇಧ್ಯಂ ಯಜ್ಞಿಯಂ ಸದೇವ-ಮಾಸೀತ್ತದಪೋದಕ್ರಾಮತ್ ।**

ಎಂಬ ತೈತ್ತಿರೀಯ ಬ್ರಾಹ್ಮಣದ ೩-೨-೫೧ನೆಯ ವಾಕ್ಯವನ್ನು ಉದಹರಿಸುತ್ತಾ ವಿವರಿಸಿ ಆಗ ಆ ದೋಷದಿಂದ ಹಿಡಿಯಲ್ಪಟ್ಟ ನದಿಗಳನ್ನು ಅಗ್ನೀಷೋಮರು ದೋಷ ನಿವಾರಣಾಪೂರ್ವಕವಾಗಿ ಶುದ್ಧಿಮಾಡಿದರು ಎಂದು ವಿಶದಪಡಿಸುತ್ತಾರೆ.

ಆದರೆ ಸ್ಕಂದಸ್ವಾಮಿಗಳು ಇಲ್ಲಿ **ಸಿಂಧೂನ್** ಎಂಬ ಪದಕ್ಕೆ **ಸ್ಯಂದನಾತ್ ಸಿಂಧವೋ ರಶ್ಮಯ ಇಹೋ-ಚ್ಯಂತೇ ।** ಎಂದರೆ ಪ್ರಸರಿಸುವ ರಶ್ಮಿಗಳೆಂದು ಅರ್ಥಮಾಡಿ **ನ ಸಿಂಧವೋ ರಜಸೋ ಅಂತಮಾನಶುಃ** (ಋ. ಸಂ. ೧-೫೨-೧೪) ಎಂಬ ವಾಕ್ಯವನ್ನು ಉದಹರಿಸಿ ಅದರಂತೆಯೇ ಇಲ್ಲಿಯೂ ರಶ್ಮಿಗಳೆಂಬ ಅರ್ಥವನ್ನು ಹೇಳಬೇಕೆನ್ನು ತ್ತಾರೆ. ಹಾಗೆಮಾಡಿದರೆ ಅಗ್ನಿಷೋಮರು ವೃತ್ರಾಸುರನಿಂದ ಆವೃತವಾದ ಈ ರಶ್ಮಿಗಳನ್ನು ವೃತ್ರಹನನವನ್ನು ಮಾಡುವುದರ ಮೂಲಕ ಸುತ್ತಲೂ ಪ್ರಕಟವಾದ ಮತ್ತು ವೃತ್ರರೂಪವಾದ ಪಾಪದಿಂದ ಬಿಡಿಸಿದರು ಎಂದು ವಿವರಿಸುತ್ತಾರೆ.

### ವ್ಯಾಕರಣಪ್ರಕ್ರಿಯಾ

**ಯುವಮ್**—ಯುಷ್ಮಚ್ಛಬ್ದಕ್ಕೆ ಪ್ರಥಮಾದ್ವಿವಚನದಲ್ಲಿ ಅಮಾದೇಶ. **ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್**—ಎಂಬುದರಿಂದ ಸಂಹಿತಾದಲ್ಲಿ ಆತ್ವ ಬರುವುದಿಲ್ಲ.

ದಿವಿ—**ಊಡಿದಂ ಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರೋಚನಾನಿ**—ರುಚ ದೀಪ್ತೌ ಧಾತು. ಇದು ಅನುದಾತ್ತೇತ್ತಾದುದರಿಂದ **ಅನುದಾತ್ತೇತಶ್ಚ ಹಲಾದೇಃ** (ಪಾ. ಸೂ. ೩-೨-೧೪೯) ಎಂಬುದರಿಂದ ಯುಚ್ ಪ್ರತ್ಯಯ. **ಯುವೋರನಾಕೌ**—ಎಂಬುದರಿಂದ ಅದಕ್ಕೆ ಅನಾ ದೇಶ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ದ್ವಿತೀಯಾಬಹುವಚನಾಂತರೂಪ. **ಚಿತಃ**—ಎಂಬುದ ರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಧತ್ತಮ್**— ಡುಧಾಞ್ ಧಾರಣಪೋಷಣಯೋಃ ಧಾತು. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ

ತಮಾದೇಶ. ಶ್ಲುವಿಕರಣ. **ಶ್ಲೌ**—ಎಂಬುದರಿಂದ ಧಾತುವಿಗೆ ದ್ವಿತ್ವ. **ಶ್ನಾಭ್ಯಸ್ತಯೋರಾತಃ**—ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಿಂಧೂನ್**—ಇದಕ್ಕೆ ಅಟ್ ಪರದಲ್ಲಿರುವುದರಿಂದ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಅತ್ರಾನುನಾಸಿಕಃ ಪೂರ್ವಸ್ಯ ತು ವಾ**—ಎಂಬುದರಿಂದ ರುವಿನ ಪೂರ್ವಕ್ಕೆ ಅನುನಾಸಿಕ.

**ಗೃಭೀತಾನ್**—ಗ್ರಹ ಉಪಾದಾನೇ. ಧಾತು. ಇದಕ್ಕೆ ಕ್ತಪ್ರತ್ಯಯ ಪರವಾದಾಗ **ಆರ್ಧಧಾತುಕಸ್ಯೇಡ್ವಲಾದೇಃ**—ಎಂಬುದರಿಂದ ಇಡಾಗಮ. ಅದಕ್ಕೆ **ಗ್ರಹೋಽಲಿಟಿ ದೀರ್ಘ**-(ಪಾ. ೭-೨-೩೭) ಎಂಬುದರಿಂದ ದೀರ್ಘ. **ಗ್ರಹಿಜ್ಯಾವಯಿ**—ಎಂಬುದರಿಂದ ಸಂಪ್ರಸಾರಣ. **ಹೃಗ್ರಹೋರ್ಭಶ್ಛಂದಸಿ**— ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತ. ದ್ವಿತೀಯಾಬಹುವಚನಾಂತರೂಪ. ॥ ೫ ॥

---

ಸಂಹಿತಾಪಾಠಃ

ಆನ್ಯಂ ದಿವೋ ಮಾತರಿಶ್ವಾ ಜಭಾರಾಮಥ್ನಾದನ್ಯಂ ಪರಿಶ್ಯೇನೋ ಅದ್ರೇಃ ।
ಅಗ್ನೀಷೋಮಾ ಬ್ರಹ್ಮಣಾ ವಾವೃಧಾನೋರುಂ ಯಜ್ಞಾಯ ಚಕ್ರಥುರು ಲೋಕಂ ॥ ೬ ॥

॥ ಪದಪಾಠಃ ॥

ಆ । ಅನ್ಯಂ । ದಿವಃ । ಮಾತರಿಶ್ವಾ । ಜಭಾರ । ಅಮಥ್ನಾತ್ । ಅನ್ಯಂ । ಪರಿ । ಶ್ಯೇನಃ । ಅದ್ರೇಃ ।

ಪದಪಾಠಃ

ಅಗ್ನೀಷೋಮಾ । ಬ್ರಹ್ಮಣಾ । ವವೃಧಾನಾ । ಉರುಂ । ಯಜ್ಞಾಯ । ಚಕ್ರಥುಃ । ಊಂ ಇತಿ । ಲೋಕಂ ॥ ೬ ॥

ಸಾಯಣಭಾಷ್ಯಂ

ಅಗ್ನೀಷೋಮೀಯಸ್ಯೋಪಾಂಶುಯಾಜಸ್ಯಾನ್ಯಂ ದಿವ ಇತ್ಯೇಷಾ ಯಾಜ್ಯಾ । ಅಗ್ನೀಷೋಮಾ ಯೋ ಅದ್ಯ ವಾಮಿತ್ಯತ್ರ ಸೂತ್ರಮುದಾಹೃತಂ ॥

ಹೇ ಅಗ್ನೀಷೋಮೌ ಯುವಯೋರ್ಮಧ್ಯೇಽನ್ಯಮೇಕಮಗ್ನಿಂ ಮಾತರಿಶ್ವಾ ವಾಯುರ್ದಿವೋ ದ್ಯುಲೋಕಾದಾ ಜಭಾರ ಭೃಗವೇ ಯಜಮಾನಾಯಾಜಹಾರ । ತಥಾ ಚ ಮಂತ್ರಾಂತರಂ । ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ । ಋಗ್ವೇ- ೧-೬೦-೧ । ಇತಿ । ಶ್ಯೇನಃ ಶಂಸನೀಯಗತಿಮಾನ್ಪಕ್ಷೀ ಪಕ್ಷ್ಯಾಕಾರಾ ಗಾಯತ್ರ್ಯನ್ಯಂ ಸೋಮಮದ್ರೇಃ ಪರಿ ಮೇರೋರುಪರ್ಯವಸ್ಥಿತಾತ್ಸ್ವರ್ಗಾದಮಥ್ನಾತ್ । ಬಲಾದಾಹೃತವತೀ । ಏವಂ ಮಹಾನುಭಾವೌ ಯುವಾಂ ಬ್ರಹ್ಮಣಾ ಸ್ರಷ್ಟ್ರಾ ಮಂತ್ರರೂಪೇಣ ಸ್ತೋತ್ರೇಣ ಹವಿರ್ಲಕ್ಷಣೇನಾನ್ನೇನ ವಾ ವವೃಧಾನಾ ವರ್ಧಮಾನೌ ಯುವಾಂ ಯಜ್ಞಾಯಾನ್ಯೇಷಾಂ ದೇವಾನಾಂ ಯಾಗಾಯೋರುಂ ವಿಸ್ತೀರ್ಣಂ ಲೋಕಂ ಸ್ಥಾನಂ ಚಕ್ರಥುಃ । ಕೃತವಂತೌ । ಉ ಇತ್ಯೇತತ್ಪಾದಪೂರಣಂ । ಆಜ್ಯಭಾಗದೇವತಯೋರಗ್ನೀಷೋಮಯೋರುತ್ತರಾರ್ಧದಕ್ಷಿಣಾರ್ಧಯೋರ್ಹೂಯತೇ । ತನ್ಮಧ್ಯೇಽನ್ಯದೇವತ್ಯಾನಿ ಸರ್ವಾಣಿ ಹವೀಂಷಿ ಹೂಯಂತೇ । ತನ್ಮಧ್ಯಮಂ ಸ್ಥಾನಮಗ್ನೀಷೋಮಕೃತಂ । ತಥಾ ಚ ತೈತ್ತಿರೀಯಕಂ । ರಾಜಾನೌ ವಾ ಏತೌ ದೇವಾನಾಂ ಯದಗ್ನಿಷೋಮಾವಂತರಾ ದೇವತಾ ಇಜ್ಯೇತೇ ದೇವತಾನಾಂ ವಿಧೃತ್ಯಾ ಇತಿ ॥ ವವೃಧಾನಾ । ವೃಧೇರ್ಲಿಟಃ ಕಾನಚ್ । ಛಾಂದಸಮಭ್ಯಾಸಸ್ಯ ದೀರ್ಘತ್ವಂ । ಸುಪಾಂ ಸುಲುಗಿತ್ಯಾಕಾರಃ ॥

॥ ಪ್ರತಿಪದಾರ್ಥ ॥

**ಅಗ್ನೀಷೋಮಾ**—ಎಲೈ ಅಗ್ನಿ ಮತ್ತು ಸೋಮದೇವತೆಗಳೇ । **ಅನ್ಯಂ**—ನಿಮ್ಮಿಬ್ಬರಲ್ಲಿ ಒಬ್ಬನಾದ ಅಗ್ನಿಯನ್ನು । **ಮಾತರಿಶ್ವಾ**—ವಾಯುವು । **ದಿವಃ**—ದ್ಯುಲೋಕದಿಂದ । **ಆಜಭಾರ**—(ಯಜ್ಞಕರ್ತನಾದ ಭೃಗುವಿಗಾಗಿ) ತಂದುಕೊಟ್ಟನು. । **ಶ್ಯೇನಃ**—ಶ್ಯೇನರೂಪದಲ್ಲಿ ಗಾಯತ್ರಿಯು । **ಅನ್ಯಂ**—ಇನ್ನೊಬ್ಬನಾದ ಸೋಮದೇವನನ್ನು । **ಅದ್ರೇಃ ಪರಿ**— ಮೇರುಪರ್ವತದ ಶಿಖರದ ಸ್ವರ್ಗದಿಂದ । **ಅಮಥ್ನಾತ್** — ಅಪಹರಿಸಿ ಕೊಂಡು ಬಂದಳು. (ಇಂತಹ ಮಹಾನುಭಾವರಾದ ನೀವು) । **ಬ್ರಹ್ಮಣಾ**—ಮಂತ್ರರೂಪವಾದ ಸ್ತೋತ್ರದಿಂದ ಅಥವಾ ಹವಿಸ್ಸಿನ ರೂಪದ ಅನ್ನದಿಂದ । **ವವೃಧಾನಾ** — ವರ್ಧಿತರಾಗಿ । **ಯಜ್ಞಾಯ**—ಇತರ ದೇವತೆಗಳ ಯಾಗಕ್ಕಾಗಿ । **ಉರು**—ವಿಸ್ತಾರವಾದ । **ಲೋಕಂ**—(ಯಜ್ಞ) ಪ್ರದೇಶವನ್ನು । **ಚಕ್ರಥುಃ**—ನಿರ್ಮಿಸಿದಿರಿ.

### ಭಾವಾರ್ಥ

ಎಲೈ ಅಗ್ನಿ ಮತ್ತು ಸೋಮದೇವತೆಗಳೇ, ನಿಮ್ಮಿಬ್ಬರಲ್ಲಿ ಒಬ್ಬನಾದ ಅಗ್ನಿಯನ್ನು ಯಜ್ಞಕರ್ತನಾದ ಭೃಗುವಿಗಾಗಿ ವಾಯುವು ದ್ಯುಲೋಕದಿಂದ ತಂದುಕೊಟ್ಟನು. ಇನ್ನೊಬ್ಬನಾದ ಸೋಮದೇವನನ್ನು ಶ್ಯೇನರೂಪದ ಗಾಯತ್ರಿಯು ಮೇರುಪರ್ವತದ ಶಿಖರವಾದ ಸ್ವರ್ಗದಿಂದ ಅಪಹರಿಸಿಕೊಂಡು ಬಂದಳು. ಇಂತಹ ಮಹಾನುಭಾವರಾದ ನೀವು ಮಂತ್ರರೂಪವಾದ ಸ್ತೋತ್ರದಿಂದ ವರ್ಧಿತರಾಗಿ ಇತರ ದೇವತೆಗಳ ಯಾಗಕ್ಕಾಗಿ ಯಜ್ಞಪ್ರದೇಶವನ್ನು ವಿಸ್ತಾರವಾಗಿ ನಿರ್ಮಿಸಿದಿರಿ.

## English Translation

Agni and Soma, the wind brought one of you from heaven, a hawk carried off the other by force from the summit of the mountain; growing vast by praise you have made the world wide for sacrifice.

### ವಿಶೇಷವಿಷಯಗಳು

**ಮಾತರಿಶ್ವಾ—ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ।** ಅಂತರಿಕ್ಷದಲ್ಲಿ ಶ್ವಾಸಮಾಡುವುದರಿಂದ ಅಥವಾ ಸಂಚರಿಸುವುದರಿಂದ ವಾಯುವಿಗೆ **ಮಾತರಿಶ್ವ**ನೆಂದು ಹೆಸರು ಬಂದಿದೆ. ಋ. ಸಂ. ೧-೯೬-೪ ನೇ ಋಕ್ಕಿನಲ್ಲಿ ಈ ಪದಕ್ಕೆ ಅಗ್ನಿಯೆಂದೂ ೧-೧೪೧-೩ನೆಯದರಲ್ಲಿ ಯಜಮಾನನೆಂದೂ ಅರ್ಥಮಾಡುತ್ತಾರೆ. ಆದರೆ ಇಂತಹ ಒಂದೆರಡು ಕಡೆಗಳಲ್ಲಿ ಬಿಟ್ಟು ಉಳಿದೆಡೆಗಳಲ್ಲೆಲ್ಲಾ **ಮಾತರಿಶ್ವಾ** ಎಂದರೆ ವಾಯುವೆಂದೇ ಅರ್ಥವು.

**ಅನ್ಯಂ ಮಾತರಿಶ್ವಾ ದಿವ ಆ ಜಭಾರ**–ಯಜ್ಞಾತ್ಮನಾದ ಅಗ್ನಿಯ ಅಲೌಕಿಕವಾದ ಆವಿರ್ಭಾವವೂ ಲೌಕಿಕವಾದ ಉತ್ಪತ್ತಿಯೂ ಅನೇಕ ವಿಧಗಳಲ್ಲಿ ವರ್ಣಿತವಾಗಿದೆ. ಯಜ್ಞಗಳಿಗೆ ಕೇತುವೂ, ವಿಪಥಕ್ಕೆ ಸಾಧನವೂ, ಯಾಗಾದಿಗಳ ಪಿತೃವೂ, ಅಧ್ವರಗಳ ರಾಜನೂ ( ಋ. ಸಂ. ೩-೩-೩ ; ೩-೧೧-೨ ; ೪-೨-೩ ಇತ್ಯಾದಿ ಋಕುಗಳಲ್ಲಿರುವ ವರ್ಣನೆಗಳನ್ನು ನೋಡಿ ) ಆದ ಅಗ್ನಿಯ ಆವಿರ್ಭಾವವು ವಿದ್ಯುದ್ರೂಪದಲ್ಲಿ ಮೊದಲು ವಾಯುವಿಗಾಯಿತೆಂದು ಋಕ್ಸಂಹಿತೆಯ

**ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂಯಾ ವಿವಸ್ವತೇ ।**
( ಋ. ಸಂ. ೧-೩೧-೩ )

**ಸ ಜಾಯಮಾನಃ ಪರಮೇ ವ್ಯೋಮನ್ಯಾವಿರಗ್ನಿರಭವನ್ಮಾತರಿಶ್ವನೇ ।**
( ಋ. ಸಂ. ೧-೪೩-೨ )

ಮುಂತಾದ ಋಕ್ಕುಗಳಲ್ಲಿ ಹೊಗಳಿದೆ. ಈ ವಾಯುವು ಯಜ್ಞಕರ್ತರಾದ ಭೃಗುವಿಗಾಗಿಯೂ ಮನುವಿಗಾಗಿಯೂ ಅತ್ಯಂತ ದೂರಪ್ರದೇಶದಲ್ಲಿ ಗೂಢನಾಗಿದ್ದ ಅಗ್ನಿಯನ್ನು ಕರೆತಂದು ಇವರಿಗೆ ಸಹಾಯಮಾಡಿದನು ಎಂದು ಅನೇಕ ಸ್ತೋತ್ರಗಳಿವೆ. ಉದಾಹರಣೆಗೆ—

**ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ ।**
( ಋ. ಸಂ. ೧-೬೦-೧ )

**ಯಂ ಮಾತರಿಶ್ವಾ ಮನವೇ ಪರಾವತೋ ದೇವಂ ಭಾಃ ಪರಾವತಃ ।**
(ಋ. ಸಂ. ೧-೧೨೮-೨)

**ಐನಂ ನಯನ್ಮಾತರಿಶ್ವಾ ಪರಾವತೋ ದೇವೇಭ್ಯೋ ಮಥಿತಂ ಪರಿ ।**
( ಋ. ಸಂ. ೩-೯-೫ )

**ಆ ದೂತೋ ಅಗ್ನಿಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।**
( ಋ. ಸಂ. ೬-೮-೪ )

**ಈಳೇನ್ಯಂ ಪ್ರಥಮಂ ಮಾತರಿಶ್ವಾ ದೇವಾಸ್ತತಕ್ಷುರ್ಮನವೇ ಯಜತ್ರಂ ।**
( ಋ. ಸಂ. ೧೦-೪೬-೯ )

ಇತ್ಯಾದಿ ನಾನಾ ಋಕ್ಕುಗಳಲ್ಲಿ ಮಾತರಿಶ್ವನು ಯಜ್ಞಕರ್ತರಾದ ಭೃಗು ಮತ್ತು ಮನು ಇವರ ಪ್ರಯೋಜನಕ್ಕಾಗಿ ದೂರದೇಶದಲ್ಲಿ ಗುಪ್ತವಾಗಿದ್ದ ಅಗ್ನಿಯನ್ನು ಪೃಥ್ವಿಗೆ ಕರೆತಂದು ಪೃಥ್ವಿಯಲ್ಲಿ ಎಲ್ಲಾ ಪ್ರಜೆಗಳಿಗೂ ಉಪಕಾರ ಮಾಡಿದನೆಂದು ಶ್ರುತಿಪ್ರಸಿದ್ಧವಾಗಿದೆ. ಈ ಕಥೆಯು ಮುಂದೆ ವಿಶದವಾಗಿ ವಿವರಿಸಲಾಗುತ್ತದೆ.

**ಶ್ಯೇನಃ ಅನ್ಯಂ ಅದ್ರೇಃ ಪರಿ ಆಮಥಾತ್**—ಶ್ಯೇನರೂಪದಲ್ಲಿ ಗಾಯತ್ರಿಯು ಪರ್ವತ ಶಿಖರದಿಂದ ಅಪಹರಿಸಿಕೊಂಡು ಬಂದಳು. ಬಹುದೂರಪ್ರದೇಶದಲ್ಲಿದ್ದ ಅಗ್ನಿಯನ್ನು ಮಾತರಿಶ್ವನು ತಂದಂತೆಯೇ ಶ್ಯೇನಪಕ್ಷಿಯೂ ಕೂಡ ಸೋಮನನ್ನು ಪೃಥ್ವಿಗೆ ತಂದ ಕಥಾವರ್ಣನೆಯು ನಾನಾ ಶ್ರುತಿಗಳಲ್ಲಿ ವರ್ಣಿತವಾಗಿದೆ.

**ಮಂದ್ರಸ್ಯ ರೂಪಂ ವಿವಿದುರ್ಮನೀಷಿಣಃ ಶ್ಯೇನೋ ಯದಂಧೋ ಅಭರತ್ಪರಾವತಃ ।**
( ಋ. ಸಂ. ೯-೬೮-೬ )

**ಯಂ ಸುಪರ್ಣಃ ಪರಾವತಃ ಶ್ಯೇನಸ್ಯ ಪುತ್ರ ಆಭರತ್ ।**
( ಋ. ಸಂ. ೧೦ ೧೪೪-೪ )

ಈ ಕಥೆಯ ಮುಖ್ಯವಾದ ಭಾಗವು ಋಕ್ಸಂಹಿತೆಯಲ್ಲಿ ನಾಲ್ಕನೆಯ ಮಂಡಲದ ೨೬ ಮತ್ತು ೨೭ನೇ ಸೂಕ್ತಗಳಲ್ಲಿ ಸಂಭಾಷಣಾರೂಪದಲ್ಲಿ ವರ್ಣಿತವಾಗಿದೆ. ಆದರೆ **ಶ್ಯೇನ, ಸುಪರ್ಣ, ಗಾಯತ್ರೀ** ಎಂಬ ಬೇರೆ ಬೇರೆ ಪದಗಳನ್ನು ಈ ಸಂದರ್ಭಗಳಲ್ಲಿ ಉಪಯೋಗಿಸಿರುವುದರಿಂದ ಈ ಕಥಾ ವಿವರಣೆಯನ್ನು ತಿಳಿದ ಹೊರತು ಈ ಸಂದರ್ಭಗಳು ಅರ್ಥವಾಗುವುದಿಲ್ಲ.

ಈ ಋಕ್ಕನ್ನು ವಿವರಿಸುವಾಗ ಸ್ಕಂದಸ್ವಾಮಿಗಳು ಐತರೇಯ ಬ್ರಾಹ್ಮಣದಲ್ಲಿ ಉಕ್ತವಾಗಿರುವ ಕಥೆಯನ್ನು ಉದಹರಿಸುತ್ತಾರೆ. ಅದರ ಪ್ರಕಾರ (ಐ.ಬ್ರಾ. ೩-೨೫ರಿಂದ ೨೭), ದ್ಯುಲೋಕದಲ್ಲಿದ್ದ **ಸೋಮನನ್ನು** ರಾಜನನ್ನಾಗಿ ಪಡೆಯಬೇಕೆಂದು ಋಷಿಗಳು ಆಶಿಸಿ ಆ ಸೋಮರಾಜನನ್ನು ತಮ್ಮಲ್ಲಿಗೆ ಕರೆದುಕೊಂಡು ಬರಬೇಕೆಂದು **ಛಂದಸ್ಸುಗಳನ್ನು** ಪ್ರಾರ್ಥಿಸಿದರು. ಆಗ ಅವು ಒಪ್ಪಿಕೊಂಡು ಈ ಕಾರ್ಯಸಾಧನೆಗೆ **ಸುಪರ್ಣ** ( ಪಕ್ಷಿ ) ರೂಪದಲ್ಲಿ ಪರಿವರ್ತನೆಯನ್ನು ಹೊಂದಿದುದರಿಂದ ಈ ಸಂದರ್ಭವು **ಸೌಪರ್ಣಾಖ್ಯಾನವೆಂದು** ಪ್ರಸಿದ್ಧವಾಗಿದೆ. ಅನಂತರ ಪಕ್ಷಿರೂಪದ

ಛಂದಸ್ಸುಗಳು ಪ್ರಯತ್ನಪಟ್ಟಾಗ **ಜಗತಿಯು** ಅರ್ಧದಾರಿಯಲ್ಲಿಯೇ ಸೋತುಹೋದುದರಿಂದ **ತ್ರಿಷ್ಟುಪ್** ಛಂದಸ್ಸು ಪ್ರಯತ್ನಿಸಿತು. ಇದೂ ಸಹ ಅರ್ಧದಾರಿಗಿಂತ ಮೀರಿಹೋದರೂ ಪೂರ್ಣವಾದ ದಾರಿಯನ್ನು ದಾಟಲಾಗದೆ ಹಿಂತಿರುಗಬೇಕಾಯಿತು. **ಆಗ ಗಾಯತ್ರಿಯು** ಮೇಲಕ್ಕೆ ಹಾರಿ **ಸೋಮರಕ್ಷಕರನ್ನು** ಬೆದರಿಸಿ ಕೊಕ್ಕಿಂದಲೂ ಕಾಲುಗಳಿಂದಲೂ ಸೋಮನನ್ನು ಹಿಡಿದುಕೊಂಡಿತು. ಆಗ ಸೋಮರಕ್ಷಕರಲ್ಲೊಬ್ಬನಾದ ಕೃಶಾನುವು ಒಂದು ಬಾಣವನ್ನು ಬಿಟ್ಟಾಗ ಈ ಪಕ್ಷಿಯ ಪಾಲಿನ ಒಂದು ಚೂಪಾದ ಉಗುರು ಕತ್ತರಿಸಿಹೋಯಿತು. ಆದರೂ ಸಹ **ಗಾಯತ್ರಿಯು** ತನ್ನ ಕೆಲಸವನ್ನು ಸಾಧಿಸಿತು. ಅದು ತನ್ನ ಬಲಗಾಲಿನಲ್ಲಿ ಹಿಡಿದ ಭಾಗವು **ಪ್ರಾತಸ್ಸವನವಾಗಿಯೂ,** ಎಡಗಾಲಿನಲ್ಲಿ ಹಿಡಿದ ಭಾಗವು **ಮಾಧ್ಯಂದಿನಸವನವಾಗಿಯೂ** ಕೊಕ್ಕಿನಲ್ಲಿ ಹಿಡಿದ ಭಾಗವು **ತೃತೀಯಸವನವಾಗಿಯೂ** ಪ್ರಸಿದ್ಧವಾದವು.

ಇದೇ ರೀತಿ **ಶತಪಥಬ್ರಾಹ್ಮಣದಲ್ಲಿಯೂ** ಸಹ (೧-೮-೨-೧೦) **ತದ್ವೈ ಕನಿಷ್ಠಂ ಛಂದಃ ಸದ್ಗಾಯತ್ರೀ ಪ್ರಥಮಾ ಛಂದಸಾಂ ಯುಜ್ಯತೇ ತದು ತದ್ವೀರ್ಯೇಣೈವ ಯಚ್ಛ್ಯೇನೋ ಭೂತ್ವಾ ದಿವಃ ಸೋಮಮಾ-ಭರತ್ ।** ಛಂದಸ್ಸುಗಳಲ್ಲೆಲ್ಲಾ ಆಕಾರದಲ್ಲಿ ಅತ್ಯಂತ ಚಿಕ್ಕದಾದರೂ ಸಹ **ಗಾಯತ್ರಿಯು** ಎಲ್ಲಾ ಛಂದಸ್ಸುಗಳಿಗಿಂತ ಪ್ರಥಮ ಸ್ಥಾನವನ್ನು ಪಡೆಯುತ್ತದೆ. ತನ್ನ ಸ್ವಶಕ್ತಿಯಿಂದ ಶ್ಯೇನರೂಪವಾಗಿ ಪರಿವರ್ತನವನ್ನು ಹೊಂದಿ ದೇವಲೋಕದಿಂದ ಸೋಮನನ್ನು ತಂದಿತು. ಆಹುತಿಕಾಲದಲ್ಲೂ ಸಹ ಶ್ಯೇನರೂಪದ ಗಾಯತ್ರಿಯ ಸ್ತುತಿಯು ಪ್ರಸಿದ್ಧವಾಗಿದೆ. (ಶ. ಬ್ರಾ. ೩-೪-೧ ೧೨; ೩-೯-೪-೧೦). ಇದೇ ಸಂದರ್ಭದಲ್ಲಿ **ಅಗ್ನಿರ್ವೈ ಗಾಯತ್ರೀ ತದ್ಗಾಯತ್ರ್ಯೈಮಿಮೀತೇ ಸ ಯದ್ಗಾಯತ್ರೀ ಶ್ಯೇನೋ ಭೂತ್ವಾ** ಎಂದು ಅಗ್ನಿಗೂ ಗಾಯತ್ರಿಗೂ ತಾದಾತ್ಮ್ಯವನ್ನು ಹೇಳಿರುವ ವಿಷಯವನ್ನು ಮುಂದೆ ವಿವರಿಸಲಾಗುತ್ತೆ.

ಇದೇ ಆಖ್ಯಾನವು ಕೊಂಚ ಬದಲಾವಣೆಯನ್ನು ಹೊಂದಿ **ತೈತ್ತಿರೀಯ ಸಂಹಿತೆಯಲ್ಲಿ** ಪಠಿತವಾಗಿದೆ. (ತೈ. ಸಂ. ೬-೧-೬-೧) ಒಂದು ಸಲ **ಕದ್ರುವಿಗೂ ಸುಪರ್ಣಿಗೂ** ವಾಜ್ಯವಾದಾಗ **ಕದ್ರುವು** ಜಯಿಸಿದ್ದರಿಂದ ಸುಪರ್ಣಿಯು ಅವಳ ಅಧೀನಳಾಗಬೇಕಾಯಿತು. ಆಗ ಕದ್ರುವು ಸುಪರ್ಣಿಯನ್ನು ಕುರಿತು ಅಂತರಿಕ್ಷದಲ್ಲಿರುವ ಸೋಮನನ್ನು ತಸ್ಕರ ರೂಪದಿಂದ ತಂದು ಪ್ರತಿಫಲವಾಗಿ ಕೊಟ್ಟರೆ ಆಗ ಅವಳ ಬಿಡುಗಡೆಯಾಗಬಹುದೆಂದಳು. ಆಗ ಸುಪರ್ಣಿಯು ತನ್ನ ಮಕ್ಕಳಾದ ಛಂದಸ್ಸುಗಳ ಸಹಾಯವನ್ನು ಬೇಡಲಾಗಿ **ಜಗತೀ, ತ್ರಿಷ್ಟುಪ್** ಈ ಎರಡು ಛಂದಸ್ಸುಗಳ ಪ್ರಯತ್ನವೂ ವಿಫಲವಾಗಿ **ಗಾಯತ್ರಿಯು** ಆಕಾರ್ಯವನ್ನು ಸಾಧಿಸಿತೆಂದು ತೈತ್ತಿರೀಯ ಸಂಹಿತೆಯ ಕಥೆಯಿದೆ.

**ಬ್ರಹ್ಮಣಾ ವವೃಧಾನಾ—ಅಂಧಃ, ವಾಜಃ, ಪಯಃ** ( ನಿ. ೩-೯ ) ಇತ್ಯಾದಿ **ಅನ್ನನಾಮಗಳಲ್ಲಿ** ಪಠಿತವಾಗಿರುವುದರಿಂದ ಇಲ್ಲಿ ಹವಿಸ್ಸಿನ ರೂಪದ ಅನ್ನದಿಂದ ಎಂದಾಗಲಿ, ಅಥವಾ **ಬ್ರಹ್ಮಶಬ್ದಕ್ಕೆ ಕರ್ಮ** ಅಥವಾ **ಮಂತ್ರವೆಂದು** ಅರ್ಥಮಾಡಿರುವುದರಿಂದ (ನಿ. ೧೨-೩೪) ಯಾಗಾದಿ ಕರ್ಮದಿಂದ ಅಥವಾ ಮಂತ್ರದಿಂದ ಎಂದಾಗಲಿ ಅರ್ಥವಾಗಬಹುದು. ಇವುಗಳಿಂದ ವೃದ್ಧಿಯನ್ನು ಹೊಂದಿದವರಾಗಿ ಎಂದಾಗುತ್ತದೆ. ಅಥವಾ ವೃಧ್ ಧಾತುವು ಸಾಧಾರಣವಾಗಿ ಋಕ್ಸಂಹಿತೆಯಲ್ಲಿ ಪ್ರಶಂಸೆ ಎನ್ನುವ ಅಭಿಪ್ರಾಯದಲ್ಲಿ ಉಪಯೋಗಿಸಲ್ಪಡುವುದರಿಂದ ಪ್ರಶಂಸಿಸಲ್ಪಟ್ಟವರಾಗಿ ಎಂದಾದರೂ ಆಗಬಹುದು.

**ಯಜ್ಞಾಯ ಉರು ಲೋಕಂ ಚಕ್ರಥುಃ**—ಇತರ ದೇವತೆಗಳನ್ನು ಉದ್ದೇಶಿಸಿ ಮಾಡುವ ಯಾಗಕ್ಕಾಗಿ ವಿಸ್ತಾರವಾದ ಯಜ್ಞಭೂಮಿಯನ್ನು ನಿರ್ಮಿಸಿದಿರಿ ಎಂದರ್ಥ.

### ವ್ಯಾಕರಣಪ್ರಕ್ರಿಯಾ

**ಜಭಾರ**—ಹೃಞ್ ಹರಣೇ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಿಪಿಗೆ **ಪರಸ್ಮೈಪದಾನಾಂ**—ಎಂಬುದರಿಂದ ಣಲಾದೇಶ. ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಉರದತ್ವ. ಚುತ್ವ. **ಅತ ಉಪಧಾಯಾಃ**—ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಹೃಗ್ರಹೋರ್ಭಶ್ಛಂದಸಿ**—ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಮಥ್ನಾತ್**—ಮಂಥ ವಿಲೋಡನೇ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ **ಇತಶ್ಚ**—ಎಂಬುದರಿಂದ ಇಕಾರಲೋಪ. **ಕ್ರ್ಯಾದಿಭ್ಯಃ ಶ್ನಾ**—ಎಂಬುದರಿಂದ ಶ್ನಾವಿಕರಣ. **ಸಾರ್ವಧಾತುಕಮಪಿತ್**—ಎಂಬುದರಿಂದ ಇದು ಙಿತ್ತಾದುದರಿಂದ **ಅನಿದಿತಾಂ ಹಲಃ**—ಎಂಬುದರಿಂದ ಉಪಧಾ ನಕಾರಲೋಪ. ಅಂಗಕ್ಕೆ ಅಡಾಗಮ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತಪದವಾಗುತ್ತದೆ.

**ವವೃಧಾನಾ**—ವೃಧು ವೃದ್ಧೌ. ಧಾತು. ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ**—(ಪಾ. ಸೂ ೩-೨-೧೦೬) ಎಂಬುದರಿಂದ ಕಾನಚ್. ಧಾತುವಿಗೆ ತನ್ನಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಉರದತ್ವ. ಪುನಃ ಹಲಾದಿಶೇಷ. ಕಾನಚ್ ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಇದಕ್ಕೆ ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಅದಕ್ಕೆ ಆಕಾರಾದೇಶ. ॥ ೬ ॥



### ಸಂಹಿತಾಪಾಠಃ

ಅಗ್ನೀಷೋಮಾ ಹವಿಷಃ ಪ್ರಸ್ಥಿತಸ್ಯ ವೀತಂ ಹರ್ಯತಂ ವೃಷಣಾ ಜುಷೇಥಾಂ ।
ಸುಶರ್ಮಾಣಾ ಸ್ವವಸಾ ಹಿ ಭೂತಮಥಾ ಧತ್ತಂ ಯಜಮಾನಾಯ ಶಂ ಯೋಃ ॥ ೭ ॥

ಪದಪಾಠಃ

ಅಗ್ನೀಷೋಮಾ । ಹವಿಷಃ । ಪ್ರऽಸ್ಥಿತಸ್ಯ । ವೀತಂ । ಹರ್ಯತಂ । ವೃಷಣಾ । ಜುಷೇಥಾಂ ।

ಸುऽಶರ್ಮಾಣಾ । ಸುऽಅವಸಾ । ಹಿ । ಭೂತಂ । ಅಥ । ಧತ್ತಂ । ಯಜಮಾನಾಯ । ಶಂ । ಯೋಃ ॥ ೭ ॥

ಸಾಯಣಭಾಷ್ಯಂ

ಹೇ ಅಗ್ನಿಷೋಮೌ ಪ್ರಸ್ಥಿತಸ್ಯ ಹೋಮಾರ್ಥಮಾಹವನೀಯಸಮೀಪಂ ಪ್ರಾಪ್ತಂ ಹವಿಷ ಇದಂ ಹವಿರ್ವೀತಂ ಭಕ್ಷಯತಂ । ತದನಂತರಂ ಚ ಹರ್ಯತಂ । ಅಸ್ಮಾನ್ಕಾಮಯೇಥಾಂ । ಹೇ ವೃಷಣಾ ಕಾಮಾನಾಂ ವರ್ಷಿತಾರೌ ಜುಷೇಥಾಂ । ಅಸ್ಮದೀಯಂ ಪರಿಚರಣಂ ಸೇವೇಥಾಂ । ತದನಂತರಂ ಸುಶರ್ಮಾಣಾ ಶೋಭನಸುಖೌ ಸ್ವವಸಾ ಹಿ ಶೋಭನರಕ್ಷಣೌ ಚ ಭೂತಂ । ಅಸ್ಮಾಕಂ ಭವತಂ । ಅಥಾನಂತರಂ ಹವಿರ್ದತ್ತವತೇ ಯಜಮಾನಾಯ ಶಂ ಶಮನೀಯಾನಾಂ ರೋಗಾಣಾಂ ಶಮನಂ ಯೋಃ ಪೃಥಕ್ಕರ್ತವ್ಯಾನಾಂ ಭಯಾನಾಂ ಯಾವನಂ ಪೃಥಕ್ಕರಣಂ ಚ ಧತ್ತಂ । ವಿಧತ್ತಂ । ಕುರುತಂ । ಉಕ್ತಂ ಚ ಯಾಸ್ಕೇನ । ಶಮನಂ ಚ ರೋಗಾಣಾಂ ಯಾವನಂ ಚ ಭಯಾನಾಂ । ನಿ. ೪-೨೧ । ಇತಿ ॥ ಹವಿಷಃ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ವೀತಂ । ವೀ ಗತಿಪ್ರಜನಕಾಂತ್ಯಶನಖಾದನೇಷು । ಥಸಸ್ತಂ । ಅದಾದಿತ್ವಾಚ್ಛಪೋ ಲುಕ್ । ವೀತಂ ಚ ಹರ್ಯತಂ ಚೇತಿ ಚಾರ್ಥಪ್ರತೀತೇಶ್ಚಾದಿಲೋಪೇ ವಿಭಾಷೇತಿ ಪ್ರಥಮಾಯಾಸ್ತಿಙ್ವಿಭಕ್ತೇರ್ನಿಘಾತಪ್ರತಿಷೇಧಃ । ಹರ್ಯತಂ । ಪಾದಾದಿತ್ವಾನ್ನಿಘಾತಾಭಾವಃ । ಜುಷೇಥಾಂ । ವೃಷಣೇತ್ಯಾಮಂತ್ರಿತಸ್ಯಾಮಂತ್ರಿತಂ ಪೂರ್ವಮವಿದ್ಯಮಾನವತ್ತ್ವೇ ಸತಿ ತಿಙಃ ಪರತ್ವಾನ್ನಿಘಾತಾಭಾವಃ । ಸುಶರ್ಮಾಣಾ ಸ್ವವಸಾ । ಉಭಯತ್ರ ಬಹುವ್ರೀಹೌ ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾತ್ತತ್ವಂ । ಭೂತಂ । ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ ॥ ೭

॥ ಪ್ರತಿಪದಾರ್ಥ ॥

**ಅಗ್ನಿಷೋಮಾ**—ಎಲೈ ಅಗ್ನಿ ಮತ್ತು ಸೋಮ ದೇವತೆಗಳೇ । **ಪ್ರಸ್ಥಿತಸ್ಯ**—(ಆಹವನೀಯಾಗ್ನಿಯನ್ನು) ಸೇರಿದ । **ಹವಿಷಃ**—ಹವಿಸ್ಸನ್ನು । **ವೀತಂ**—ಭಕ್ಷಿಸಿರಿ । **ಹರ್ಯತಂ**—(ನಮ್ಮಮೇಲೆ) ಕೃಪೆಮಾಡಿ. ಅಥವಾ ಈ ಹವಿಸ್ಸನ್ನು ಇಚ್ಛಿಸಿ ಭಕ್ಷಿಸಿರಿ । **ವೃಷಣಾ**—ಇಷ್ಟಾರ್ಥಗಳನ್ನು ಸುರಿಸುವವರಾಗಿ । **ಜುಷೇಥಾಂ**—(ನಮ್ಮ ಸೇವೆಯನ್ನು) ಸ್ವೀಕರಿಸಿ ಸೇವಿಸಿ । **ಸುಶರ್ಮಾಣಾ**— ಶ್ರೇಷ್ಠವಾದ ಸುಖದಾತರೂ । **ಸ್ವದಸಾ ಹಿ**—ಉತ್ತಮವಾದ ರಕ್ಷಣೆಯನ್ನು ಕೊಡುವವರೂ । **ಭೂತಂ**—(ನಮ್ಮ ವಿಷಯದಲ್ಲಿ) ಆಗಿರಿ । **ಅಥ**—ಅನಂತರ । **ಯಜಮಾನಾಯ**

ಯಜ್ಞಕರ್ತನಿಗೆ । **ಶಂ**—(ರೋಗರಹಿತವಾದ) ಸುಖವನ್ನೂ । **ಯೋಃ**—ಭಯರಾಹಿತ್ಯರೂಪವಾದ ಸುಖವನ್ನು । **ಧತ್ತಂ**—ಉಂಟುಮಾಡಿರಿ ॥

॥ ಭಾವಾರ್ಥ ॥

ಎಲೈ ಅಗ್ನೀಷೋಮದೇವತೆಗಳೇ, ಆಹವನೀಯಾಗ್ನಿಯಲ್ಲಿ ಅರ್ಪಿಸಿದ ನಮ್ಮ ಹವಿಸ್ಸುಗಳನ್ನು ಭಕ್ಷಿಸಿರಿ. ನಮ್ಮಮೇಲೆ ಕೃಪೆಮಾಡಿ ನಮ್ಮ ಇಷ್ಟಾರ್ಥಗಳನ್ನು ಸುರಿಸುವವರಾಗಿ ನಮ್ಮ ಉಪಚಾರಗಳನ್ನು ಸ್ವೀಕರಿಸಿ ನಮಗೆ ಶ್ರೇಷ್ಠವಾದ ಸುಖದಾತರೂ, ಉತ್ತಮವಾದ ರಕ್ಷಣೆಯನ್ನು ಕೊಡುವವರಾಗಿ ಮತ್ತು ಹವಿಸ್ಸನ್ನು ಅರ್ಪಿಸುವ ಯಜ್ಞಕರ್ತನಿಗೆ ರೋಗರಹಿತವೂ ಮತ್ತು ಭಯರಹಿತವೂ ಆದ ಸುಖವನ್ನು ಉಂಟುಮಾಡಿರಿ ॥

English Translation

Agni and Soma, partake of the proffered oblations ; be gracious to us ; showerers of desires, be pleased ; prosperous and deligent protectors, be propitious and grant to the sacrificer health exemption from ill.

॥ ವಿಶೇಷವಿಷಯಗಳು ॥

**ಪ್ರಸ್ಥಿತಸ್ಯ**—ಆಹವನೀಯಾಗ್ನಿಯನ್ನು ಸೇರಿದ ಅಂದರೆ ಅದರಲ್ಲಿ ಅರ್ಪಿಸಲ್ಪಟ್ಟ ಎಂದರ್ಥವು.

**ವೀತಂ—ವೀತಂ-ಅಶ್ನೀತಂ ।** ( ನಿ. ೪-೧ )ೞ ಭಕ್ಷಿಸಿರಿ.

**ಶಂಯೋಃ—ಸುಖಂ ಯುಃ** (ನಿ. ೪-೨೧) **ಶಮನಂ ಚ ರೋಗಾಣಾಂ ಯಾವನಂ ಚ ಭಯಾನಾಂ ।** ಅಂದರೆ ರೋಗಗಳ ಶಮನರೂಪವಾದ ಸುಖವೂ ಭಯದ ನಿವಾರಣಾರೂಪವಾದ ಸುಖವೂ ಎಂದರ್ಥವು. ನಮ್ಮ ರೋಗಗಳನ್ನು ಶಮನಮಾಡಿ ಭಯವನ್ನು ನಿವಾರಿಸು ಎಂಬಭಿಪ್ರಾಯವು. ತಚ್ಛಂಯೋರಾವೃಣೀಮಹೇ (ತೈ.ಸಂ. ೨-೬-೧೦-೨) ಎಂಬಲ್ಲಿ ಶಂಯುವೆಂದರೆ ಬೃಹಸ್ಪತಿ ಪುತ್ರನೆಂಬರ್ಥವು. ಆದರೆ ಇಲ್ಲಿ ಮಾತ್ರ ಸುಖದಾತರೆಂದಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ಹವಿಷಃ**—ಸಂಪ್ರದಾನ ಸಂಜ್ಞಾ ಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಮ್**—ಎಂಬ ವಚನವಿರುವುದರಿಂದ ಕರ್ಮಕ್ಕೆ ಸಂಪ್ರದಾನ ಸಂಜ್ಞಾ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬಂದಿದೆ.

**ವೀತಮ್**—ವೀ ಗತಿಪ್ರಜನಕಾಂತ್ಯಶನಖಾದನೇಷು. ಧಾತು. ಅದಾದಿ. ಲೋಟ್ ಮಧ್ಯಮ ಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ **ತಸ್ಥಸ್ಥ**—ಎಂಬುದರಿಂದ ತಮಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ವೀತಂ ಚ ಹರ್ಯತಂ ಚ ಎಂದು ಅನ್ವಯಮಾಡುವಾಗ ಚಾರ್ಥ ತೋರುವುದರಿಂದ **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಎಂಬುದರಿಂದ ಮೊದಲಿನಲ್ಲಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಆಗ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹರ್ಯತಮ್**—ಹರ್ಯ ಗತಿಕಾಂತ್ಯೋಃ ಧಾತು. ಭ್ವಾದಿ. ಕಾಂತಿಯೆಂದರೆ ಇಚ್ಛಾ. ಹಿಂದಿನಂತೆ ಲೋಣ್ಮಧ್ಯಮಪುರುಷ ದ್ವಿವಚನರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದ ರಿಂದ ಅನುದಾತ್ತ. ಅನುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವೃಷಣಾ**—ಇದಕ್ಕೆ ಪ್ರಥಮಾ ದ್ವಿವಚನ ಔ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—ಸೂತ್ರದಿಂದ ಆಕಾರಾದೇಶ. **ಬಹುಲಂ ಛಂದಸಿ**—ಎಂಬುದರಿಂದ ಉಪಧಾದೀರ್ಘ ಬರುವುದಿಲ್ಲ.

**ಜುಷೇಥಾಮ್**—ಜುಷೀ ಪ್ರೀತಿಸೇವನಯೋಃ ಧಾತು ಅನುದಾತ್ತೇತ್ತಾದುದರಿಂದ ಆತ್ಮನೇಪದಿ ಲೋಣ್ಮಧ್ಯಮಪುರುಷ ದ್ವಿವಚನರೂಪ. ಇದರ ಪೂರ್ವದಲ್ಲಿ ಆಮಂತ್ರಿತಸಂಜ್ಞೆ ಇರುವ ವೃಷಣಾ ಎಂಬ ಪದ ವಿರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್**—ಎಂಬುದರಿಂದ ಅವಿದ್ಯಮಾನವದ್ಭಾವವಿರುವುದರಿಂದ ಅದರ ಹಿಂದೆ ತಿಙಂತವಿರುವುದರಿಂದ **ಅತಿಙಃ**—ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಸುಶರ್ಮಣಾ, ಸ್ವವಸಾ**— ಈ ಎರಡುಶಬ್ದಗಳೂ ಬಹುವ್ರೀಹಿಸಮಾಸದಿಂದ ನಿಷ್ಪನ್ನವಾದುದರಿಂದ ಮನ್ನಂತ, ಅಸಂತವಾಗಿರುವುದರಿಂದಲೂ **ಸೋರ್ಮನಸೀ ಅಲೋಮೋಷಸೀ** — (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಭೂತಮ್**—ಭೂ ಸತ್ತಾಯಾಂ ಧಾತು. ಲೋಣ್ಮಧ್ಯಮಪುರುಷದ್ವಿವಚನದಲ್ಲಿ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪ್ ವಿಕರಣಕ್ಕೆ ಲುಕ್. **ಸಾರ್ವಧಾತುಕಮಪಿತ್**—ಎಂಬುದರಿಂದ ಪ್ರತ್ಯಯಕ್ಕೆ ಙಿತ್ವ ವಿರುವುದರಿಂದ ಧಾತುವಿನ ಇಕಿಗೆ ತನ್ನಿಮಿತ್ತವಾಗಿ ಗುಣ ಬರುವುದಿಲ್ಲ. ಹಿ ಎಂಬುದರ ಯೋಗವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ. ॥ ೭ ॥

———— :O: ————

॥ ಸಂಹಿತಾಪಾಠಃ ॥

ಯೋ ಅಗ್ನೀಷೋಮಾ ಹವಿಷಾ ಸಪರ್ಯಾದ್ದೇವದ್ರೀಚಾ ಮ-
ನಸಾ ಯೋ ಘೃತೇನ।

ತಸ್ಯ ವ್ರತಂ ರಕ್ಷತಂ ಪಾತಮಂಹಸೋ ವಿಶೇ ಜನಾಯ ಮಹಿ
ಶರ್ಮ ಯಚ್ಛತಂ ‖ ೮ ‖

ಪದಪಾಠಃ

ಯಃ । ಅಗ್ನೀಷೋಮಾ । ಹವಿಷಾ । ಸಪರ್ಯಾತ್ । ದೇವದ್ರೀಚಾ । ಮನಸಾ ।
ಯಃ । ಘೃತೇನ ।

ತಸ್ಯ । ವ್ರತಂ । ರಕ್ಷತಂ । ಪಾತಂ । ಅಂಹಸಃ । ವಿಶೇ । ಜನಾಯ । ಮಹಿ ।
ಶರ್ಮ । ಯಚ್ಛತಂ ‖ ೮ ‖

‖ ಸಾಯಣಭಾಷ್ಯಂ ‖

ಯೋ ಯಜಮಾನೋಽಗ್ನೀಷೋಮಾ ಅಗ್ನೀಷೋಮೌ ದೇವದ್ರೀಚಾ ದೇವಾನಂಚತಾ ದೇವತಾಪರಾಯಣೇನ ಶ್ರದ್ಧಾಯುಕ್ತೇನ ಮನಸಾಂತಃಕರಣೇನ ಯುಕ್ತಃ ಸನ್ ಹವಿಷಾ ಚರುಪುರೋಡಾಶಾದಿನಾ ಸಪರ್ಯಾತ್ ಸಪರ್ಯತಿ ಪರಿಚರತಿ । ಯಶ್ಚ ಯಜಮಾನೋ ಘೃತೇನಾಜ್ಯೇನಾಗ್ನೀಷೋಮೌ ಪರಿಚರಿತಿ । ತಸ್ಯ ಯಜಮಾನಸ್ಯ ವ್ರತಂ ಕರ್ಮ ರಕ್ಷತಂ । ಅಂಹಸಃ ಪಾಪಾತ್ತಂ ಚ ಯಜಮಾನಂ ಪಾತಂ । ರಕ್ಷತಂ । ವಿಶೇ ಯಾಗೇಷು ಪ್ರವಿಶತೇ ತಸ್ಮೈ ಜನಾಯೆ ಯಜಮಾನಾಯ ಮಹಿ ಮಹತ್ಪ್ರಭೂತಂ ಶರ್ಮ ಸುಖಂ ಯಚ್ಛತಂ। ದತ್ತಂ ‖ ಅಗ್ನಿಷೋಮಾ। ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಸಪರ್ಯಾತ್ । ಸಪರ ಪೂಜಾಯಾಂ । ಕಂಡ್ವಾದಿಃ । ಲೇಟ್ಯಾಡಾಗಮಃ । ದೇವದ್ರೀಚಾ । ಸೇವಾನಂಚತೀತಿ ಸೇವದ್ರ್ಯಜ್ । ಅಂಚತೇಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ವಿಷಗ್ದೇವಯೋಶ್ಚ ಟೇರದ್ರ್ಯಂಚತಾವಪ್ರತ್ಯಯೇ । ಪಾ.–೬–೩–೯೨ । ಇತಿ ದೇವಶಬ್ದಸ್ಯ ಟೇರದ್ರ್ಯಾದೇಶಃ । ತೃತೀಯೈಕವಚನೇಽಚ ಇತ್ಯಾಕಾರಲೋಪೇ ಚಾವಿತಿ ದೀರ್ಘತ್ವಂ । ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತೇಽದ್ರಿಸಧ್ರ್ಯೋರಂತೋದಾತ್ತನಿಪಾತನಂ ಕೃತ್ಸ್ವರನಿವೃತ್ತ್ಯರ್ಥಂ । ಪಾ. ೬–೩–೯೫–೧ । ಇತಿ ವಚನಾದದ್ರ್ಯಾದೇಶೋಽಂತೋದಾತ್ತಃ । ವಿಶೇ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ‖

ಪ್ರತಿಪದಾರ್ಥ

ಅಗ್ನೀಷೋಮಾ ಎಲೈ ಅಗ್ನಿ ಮತ್ತು ಸೋಮದೇವತೆಗಳೇ, । ಯಃ—ಯಾವ ಯಜಮಾನನು । ದೇವದ್ರೀಚಾ—ದೇವತಾಪರವಾದ ಭಕ್ತಿಶ್ರದ್ಧೆಯುಳ್ಳ । ಮನಸಾ—ಅಂತಃಕರಣದೊಡನೆ ಕೂಡಿ । ಹವಿಷಾ—

ಚರುಪುರೊಡಾಶಾದಿಗಳಿಂದ । **ಸಪರ್ಯಾತ್**—ಪೂಜಿಸುತ್ತಾನೋ, (ಮತ್ತು) । **ಯಃ**—ಯಾವ ಯಜಮಾನನು । **ಘೃತೇನ**—ಆಜ್ಯಾಹುತಿಯಿಂದ (ಪೂಜಿಸುತ್ತಾನೋ) । **ತಸ್ಯ**—ಅಂತಹ (ಎಲ್ಲಾ) ಯಜಮಾನರ । **ವ್ರತಂ**—ಕರ್ಮವನ್ನು । **ರಕ್ಷತಂ**—ರಕ್ಷಿಸಿರಿ. । **ಅಂಹಸಃ**—ಪಾಪದಿಂದ । **ಪಾತಂ**—(ಅವನನ್ನು) ರಕ್ಷಿಸಿ. । **ವಿಶೇ**—ಯಜ್ಞಕರ್ಮದಲ್ಲಿ ಪ್ರವೇಶಿಸಿದ । **ಜನಾಯ**—ಯಜಮಾನನಿಗೆ । **ಮಹಿ**—ಪ್ರಭೂತವಾದ । **ಶರ್ಮ**—ಸುಖವನ್ನು । **ಯಚ್ಛತಂ**—ಕೊಡಿರಿ. ।

ಭಾವಾರ್ಥ

ಎಲೈ ಅಗ್ನೀಷೋಮದೇವತೆಗಳೇ, ಯಾವ ಯಜಮಾನನು ದೇವತೆಗಳಲ್ಲಿ ಅತ್ಯಂತವಾಗಿ ಭಕ್ತಿಶ್ರದ್ಧೆಯನ್ನಿಟ್ಟು ಚರುಪುರೋಡಾಶಾದಿಗಳಿಂದ ಪೂಜಿಸುತ್ತಾನೋ ಮತ್ತು ಯಾವ ಯಜಮಾನನು ದೇವತೆಗಳನ್ನು ಆಜ್ಯಾಹುತಿಯಿಂದ ಪೂಜಿಸುತ್ತಾನೆಯೋ ಆ ಎಲ್ಲಾ ಯಜಮಾನರ ಕರ್ಮಗಳನ್ನು ರಕ್ಷಿಸಿ ಅವರನ್ನು ಪಾಪದಿಂದ ಬಿಡುಗಡೆಮಾಡಿ. ಯಜ್ಞಕರ್ಮದಲ್ಲಿ ಪ್ರವೇಶಿಸಿದ ಆ ಯಜಮಾನನಿಗೆ ಪ್ರಭೂತವಾದ ಸುಖವನ್ನು ಕೊಡಿರಿ.

English Translation

Agni and Soma, protect his sacrifice and defend him from ill, who with a mind devoted to the gods, worships you with clarified butter and oblations ; grant to the man engaged in devotion extreme happiness.

ವಿಶೇಷವಿಷಯಗಳು

**ದೇವದ್ರೀಚಾ—ದೇವಾನ್ ಅಂಚತಾ ದೇವತಾಪರಾಯಣೇನ ಶ್ರದ್ಧಾಯುಕ್ತೇನ** । ಅನನ್ಯಮನಸನಾಗಿ ದೇವತೆಗಳಲ್ಲಿಯೇ ಶ್ರದ್ಧಾಭಕ್ತಿಗಳನ್ನಿಟ್ಟು ಅವರ ಸೇವೆಯಲ್ಲಿಯೇ ತತ್ಪರವಾಗಿ ಅವರನ್ನೇ ಸೇರುವ ಮನಸ್ಸಿನಿಂದ ಎಂದರ್ಥವು.

**ವ್ರತಂ ರಕ್ಷತಂ**—ಯಾಗಾದಿ-ಕರ್ಮಗಳನ್ನು ಅಸುರರ ಹಿಂಸೆಯಿಂದ ರಕ್ಷಿಸಿ ಯಾಗವು ಪೂರ್ಣವಾಗಿ ನೆರವೇರುವಂತೆ ಮಾಡಿರಿ.

**ಪಾತಂ ಅಂಹಸಃ**—ಅನೇಕ ವಿಧವಾದ ನ್ಯೂನತೆಗಳು ಯಾಗದಲ್ಲಾಗಲೀ ಅಥವಾ ಇತರ ಕಾಲಗಳಲ್ಲಾಗಲಿ ಕಂಡುಬಂದರೆ ಅವೆಲ್ಲವೂ ಪಾಪಕಾರ್ಯಗಳಾದುದರಿಂದ ನಮ್ಮನ್ನು ವಿನಾಶ ಪ್ರಾಪ್ತವಾಗುವ ಇಂತಹ ನ್ಯೂನತೆಗಳನ್ನು ತಪ್ಪಿಸಿ ಪಾಪದಿಂದ ತಪ್ಪಿಸಿರಿ ಎಂದರ್ಥವು. ಯಜ್ಞಕರ್ತರಿಗೆ ಇಂತಹ ಪಾಪಭೀತಿಯು ಬಹಳವಾಗಿದ್ದುದರಿಂದ ಅಗ್ನಿಯನ್ನೂ ಮತ್ತು ಸೋಮನನ್ನೂ ಈ ರೀತಿ ಪದೇ ಪದೇ ಪ್ರಾರ್ಥಿಸುವ ಉದಾಹರಣೆಗಳು ಅನೇಕವಿವೆ—

ಯಚ್ಚಿದ್ಧಿ ತೇ ಪುರುಷತ್ರಾ ಯವಿಷ್ಠಾಚಿತ್ತಿಭಿಶ್ಚಕೃಮಾ ಕಚ್ಚಿದಾಗಃ ।
ಕೃಧೀ ಷ್ವಸ್ಮಾಁ ಅದಿತೇರನಾಗಾನ್ವ್ಯೇನಾಂಸಿ ಶಿಶ್ರಥೋ ವಿಷ್ವಗಗ್ನೇ ॥
(ಋ. ಸಂ. ೪.೧೨.೪)

**ಯತ್ತೇ ವಯಂ ಪ್ರಮಿನಾಮ ವ್ರತಾನಿ ಸ ನೋ ಮೃಳ ಸುಷಖಾ ದೇವ ವಸ್ಯಃ ।**
(ಋ. ಸಂ- ೮-೪೮-೯)

ಇತ್ಯಾದಿ ಋಕ್ಕುಗಳಲ್ಲಿ ವ್ರತಲೋಪದಿಂದಲಾಗಲೀ ಇತರ ವಿಧದಿಂದಾಗಲೀ ಸಂಭವಿಸುವ ಪಾಪದಿಂದ ರಕ್ಷಿಸಬೇಕೆಂದು ಅಗ್ನೀಷೋಮರನ್ನು ಪ್ರಾರ್ಥಿಸಿರುವುದು ಕಂಡುಬರುವುದು.

**ವಿಶೇ ಜನಾಯ**—ಇಲ್ಲಿ ಎರಡು ವಿಧವಾದ ಅರ್ಥಕ್ಕೆ ಅವಕಾಶವಿದೆ. **ವಿಶೇ ಯಾಗೇಷು ಪ್ರವಿಶತೇ । ಜನಾಯ ಯಜಮಾನಾಯ ।** ಎಂದರೆ ಯಾಗಕರ್ಮಗಳಲ್ಲಿ ಪ್ರವೇಶಿಸಿ ದೇವತೆಗಳನ್ನು ಪೂಜಿಸುತ್ತಿರುವ ಯಜಮಾನನಿಗೆ (ಸುಖವನ್ನು ಕೊಡಿರಿ) ಎಂದು ಸಾಯಣರು ವಿವರಿಸುತ್ತಾರೆ. ಆದರೆ ಸ್ಕಂದಸ್ವಾಮಿಗಳು, **ವಿಶೇ । ಮನುಷ್ಯನಾಮೈತತ್ । ಪುತ್ರಾದಿಮನುಷ್ಯಜಾತಸ್ವಭೂತಾಯ ಯಜಮಾನಾಯ ।** ಎಂದರೆ ವಿಶ ಶಬ್ದವು **ಮನುಷ್ಯಾಃ, ನರಃ, ಧನಾಃ** ಇತ್ಯಾದಿ ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ.೩-೭) **ವಿಶೇ** ಎಂಬುದಕೆ ಪುತ್ರಪೌತ್ರಾದಿಗಳಿಂದ ಕೂಡಿದ **ಜನಾಯ ।** ಯಜಮಾನನಿಗೆ ಎಂದು ಅರ್ಥಮಾಡುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಅಗ್ನೀಷೋಮಾ — ಸುಪಾಂ ಸುಲುಕ್**—ಎಂಬುದರಿಂದ ದ್ವಿತೀಯಾದ್ವಿವಚನಕ್ಕೆ ಆಕಾರಾದೇಶ. **ದೇವತಾದ್ವಂದ್ವೇ ಚ**—(ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ.

**ಸಪರ್ಯಾತ್**—ಸಪರ ಪೂಜಾಯಾಂ. ಧಾತು. ಕಂಡ್ವಾದಿ. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪಿನ ಇಕಾರಕ್ಕೆ **ಇತಶ್ಚ ಲೋಪಃ**—ಎಂಬುದರಿಂದ ಲೋಪ. **ಲೇಟೋ ಡಾಟೌ**—ಎಂಬುದರಿಂದ ಅದಕ್ಕೆ ಆಡಾಗಮ. **ಕಂಡ್ವಾದಿಭ್ಯೋ ಯಕ್**-(ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. **ಸನಾದ್ಯಂತಾ ಧಾತವಃ**—ಎಂಬುದರಿಂದ ಯಗಂತಕ್ಕೆ ಧಾತುಸಂಜ್ಞೆ ಬರುವುದರಿಂದ ಇದರ ಮೇಲೆ ಲೇಟ್ ಲಕಾರವನ್ನು ಹೇಳಬೇಕು. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಕ್‌ಸ್ವರ ಉಳಿಯುತ್ತದೆ.

**ದೇವದ್ರೀಚಾ**—ದೇವಾನ್ ಅಂಚತಿ ಇತಿ ದೇವದ್ರ್ಯಜ್. ಅಂಚು ಗತಿಪೂಜನಯೋಃ ಧಾತು. ಇದಕ್ಕೆ ದೇವರೂಪ ಸುಬಂತವು ಉಪಪದವಾಗಿರುವಾಗ **ಋತ್ವಿಕ್‌ದಧೃಕ್**—ಎಂಬುದರಿಂದ ಕ್ವಿನ್‌ಪ್ರತ್ಯಯ. **ಅನಿದಿತಾಂ ಹಲ ಉಪಧಾಯಾಃ**—ಎಂಬುದರಿಂದ ಉಪಧಾನ ಕಾರಕ್ಕೆ ಲೋಪ. ಅಪ್ರತ್ಯಯಾಂತ ಅಂಚುಧಾತುವು ಪರದಲ್ಲಿರುವುದರಿಂದ ದೇವ ಶಬ್ದಕ್ಕೆ **ವಿಷ್ವಕ್‌ದೇವಯೋಶ್ಚ ಟೇರದ್ರ್ಯಂಚತಾವಪ್ರತ್ಯಯೇ** (ಪಾ. ಸೂ. ೬-೩-೯೨) ಎಂಬುದರಿಂದ ಅದ್ರ್ಯಾದೇಶ. (ಟಿಗೆ ಮಾತ್ರ) ತೃತೀಯಾಏಕವಚನದಲ್ಲಿ ಟಾಪ್ರತ್ಯಯ. ದೇವದ್ರ್ಯಚ್+ಆ ಎಂದಿರುವಾಗ **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಟೇಃ ಲೋಪ (ಪಾ. ಸೂ. ೬-೩-೧೩೮) ಲುಪ್ತಾಕಾರ ನಕಾರವುಳ್ಳ ಅಂಚುಧಾತುವು ಪರವಾದಾಗ ಪೂರ್ವಪದಕ್ಕೆ ದೀರ್ಘ ಎಂಬುದರಿಂದ ದೇವದ್ರಿ ಎಂಬುದಕ್ಕೆ ದೀರ್ಘ. ದೇವದ್ರೀಚಾ ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಪ್ರಾಪ್ತವಾದರೆ **ಅದ್ರಿಸಧ್ರ್ಯೋರಂತೋದಾತ್ತನಿಪಾತನಂ ಕೃತ್‌ಸ್ವರನಿವೃತ್ತ್ಯರ್ಥಮ್**-(ಪಾ. ಸೂ. ೬-೩-೯೫-೧) ಎಂಬ ವಚನದಿಂದ ಅದ್ರ್ಯಾದೇಶವು ಅಂತೋದಾತ್ತವಾಗುತ್ತದೆ.

**ಪಾತಮ್**—ಪಾ ರಕ್ಷಣೇ ಧಾತು. ಲೋಣ್ಮಧ್ಯಮಪುರುಷದ್ವಿವಚನರೂಪ. ಅದಾದಿ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಶೇ**—ವಿಶ ಪ್ರವೇಶನೇ. ಧಾತು. ಕ್ವಿಪ್ ಪ್ರತ್ಯಯ. ಚತುರ್ಥೀಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ**-(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯಚ್ಛತಮ್**—ದಾಣ್ ದಾನೇ ಧಾತು. ಲೋಣ್ಮಧ್ಯಮಪುರುಷದ್ವಿವಚನರೂಪ. **ಪಾಘ್ರಾಧ್ಮಾ**-(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಯಚ್ಛ ಎಂಬ ಆದೇಶ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥



ಸಂಹಿತಾಪಾಠಃ

ಅಗ್ನೀಷೋಮಾ ಸವೇದಸಾ ಸಹೂತೀ ವನತಂ ಗಿರಃ ।
ಸಂ ದೇವತ್ರಾ ಬಭೂವಥುಃ ॥ ೯ ॥

॥ ಪದಪಾಠಃ ॥

ಅಗ್ನೀಷೋಮಾ । ಸಽವೇದಸಾ । ಸಹೂತೀ ಇತಿ ಸಽಹೂತೀ । ವನತಂ । ಗಿರಃ ।
ಸಂ । ದೇವಽತ್ರಾ । ಬಭೂವಥುಃ ॥ ೯ ॥

॥ ಸಾಯಣಭಾಷ್ಯಂ ॥

ಪೌರ್ಣಮಾಸಯಾಗೇಽಗ್ನೀಷೋಮೀಯಸ್ಯ ಯಾಗಸ್ಯಾಗ್ನೀಷೋಮೇತ್ಯೇಷಾನುವಾಕ್ಯಾ । ತಥಾ ಚ ಸೂತ್ರಿತಮುಕ್ತಾ ದೇವತಾ ಇತಿ ಖಂಡೇ । ಅಗ್ನೀಷೋಮಾ ಸವೇದಸಾ ಯುವಮೇತಾನಿ ದಿವಿ ರೋಚನಾನಿ । ಆ॥ - ೧-೬ । ಇತಿ

ಹೇ ಅಗ್ನೀಷೋಮೌ ಯುವಾಂ ಸವೇದಸಾ ಸಮಾನೇನೈಕೇನ ವೇದಸಾ ಹವಿರ್ಲಕ್ಷಣೇನ ಧನೇನ ಯುಕ್ತೌ ಸಹೂತೀ ಸಮಾನಹ್ವಾನೌ ಚ ಸಂತೌ ಗಿರೋಽಸ್ಮದೀಯಾಃ ಸ್ತುತೀರ್ವನತಂ । ಸಂಭ-

**ಜೇಥಾಂ । ದೇವತ್ರಾ ದೇವೇಷು ಸರ್ವೇಷು ಯೌ ಯುವಾಂ ಸಂ ಬಭೂವಥುಃ ಸಂಭೂತಾ ಸಂಭಾವಿತಾ ಪ್ರಶಸ್ತೌ ಸ್ಥಃ । ರಾಜಾನೌ ವಾ ಏತೌ ದೇವತಾನಾಂ ಯದಗ್ನೀಷೋಮಾವಿತಿ ಶ್ರುತೇಃ ॥ ಸವೇದಸಾ । ಸಮಾನಂ ವೇದೋ ಯಯೋಃ । ಸಮಾನಸ್ಯ ಚ್ಛಂದಸೀತಿ ಸಭಾವಃ । ವನತಂ । ವನ ಷಣ ಸಂಭಕ್ತೌ । ದೇವತ್ರಾ । ದೇವಮನುಷ್ಯಪುರುಷಪುರುಮರ್ತ್ಯೇಭ್ಯೋ ದ್ವಿತೀಯಾಸಪ್ತಮ್ಯೋರ್ಬಹುಲಮಿತ್ಯಾದಿನಾ ಸಪ್ತಮ್ಯರ್ಥೇ ತ್ರಾಪ್ರತ್ಯಯಃ ॥**

ಪ್ರತಿಪದಾರ್ಥ

**ಅಗ್ನೀಷೋಮಾ**—ಎಲೈ ಅಗ್ನಿ ಮತ್ತು ಸೋಮದೇವತೆಗಳೇ । **ಸವೇದಸಾ**—ಒಂದೇ ವಿಧವಾದ (ಹವಿಸ್ಸಿನರೂಪದ) ಧನವುಳ್ಳವರಾಗಿಯೂ । **ಸ ಹೂತೀ**—ಒಂದೇ ವಿಧವಾದ ಆಹ್ವಾನವುಳ್ಳವರಾಗಿಯೂ । ಗಿರಃ—ನಮ್ಮ ಸ್ತೋತ್ರವಾಕ್ಕುಗಳನ್ನು । **ವನತಂ**—ಸ್ವೀಕರಿಸಿ ಸೇವಿಸಿರಿ । **ದೇವತ್ರಾ**—ದೇವತೆಗಳಲ್ಲಿ । **ಸಂ ಬಭೂವಥುಃ**—(ನೀವು) ಅತ್ಯಂತ ಪೂಜ್ಯರಾಗಿದ್ದೀರಿ ॥

ಭಾವಾರ್ಥ

ಎಲೈ ಅಗ್ನೀಷೋಮ ದೇವತೆಗಳೇ, ನಿಮ್ಮಿಬ್ಬರಿಗೂ ಒಂದೇವಿಧವಾದ ಹವಿಸ್ಸು ಅರ್ಪಿಸಲ್ಪಡುತ್ತದೆ. ಒಂದೇ ವಿಧವಾದ ಆಹ್ವಾನವಿರುತ್ತದೆ. ಒಟ್ಟಿಗೆ ನಮ್ಮ ಸ್ತೋತ್ರವಾಕ್ಕುಗಳನ್ನು ಸ್ವೀಕರಿಸಿ ಸೇವಿಸಿರಿ. ನೀವಿಬ್ಬರೂ ದೇವತೆಗಳಲ್ಲೆಲ್ಲಾ ಅತ್ಯಂತ ಪೂಜ್ಯರಾಗಿದ್ದೀರಿ.

English Translation

Agni and Soma, endowed with the like wealth, and invoked by a common invocation, share our praises, for you have ever been the chief of the Gods,

॥ ವಿಶೇಷವಿಷಯಗಳು ॥

ಪೌರ್ಣಮಾಸ್ಯೇಷ್ಟಿಯ ಅಗ್ನೀಷೋಮ ಸಂಬಂಧವಾದ ಯಾಗದಲ್ಲಿ **ಅಗ್ನೀಷೋಮಾ ಸವೇದಸಾ** ಎಂಬ ಈ ಋಕ್ಕನ್ನು ಪುರೋನುವಾಕ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಉಕ್ತಾ ದೇವತಾ** ಎಂಬ ಖಂಡದ **ಅಗ್ನೀಷೋಮಾ ಸವೇದಸಾ ಯುವಮೇತಾನಿ ದಿವಿ ರೋಚನಾನಿ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೧-೬).

**ಗಿರಃ—ಸ್ತುತಯೋ ಗಿರಃ ಗೃಣಾತೇಃ ।** (ನಿ. ೧-೧೧) ಎಂಬ ವಿವರಣೆಯನ್ನು ಹಿಂದೆಯೇ ಹೇಳಿರುವಂತೆ ಇಲ್ಲಿ ಗಿರಃ ಎಂದರೆ ಸ್ತೋತ್ರಗಳನ್ನು ಎಂದರ್ಥವು.

**ವನತಂ—ವಶ್ಮಿ , ಉಶ್ಮಸಿ** ಇತ್ಯಾದಿ ಕಾಂತಿಕರ್ಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೯) ಇಚ್ಛಿಸಿರಿ, ಅಂದರೆ ನಮ್ಮ ಸ್ತುತಿಗಳನ್ನು ಅಭಿಮಾನಪೂರ್ವಕವಾಗಿ ಸ್ವೀಕರಿಸಿ ಸೇವಿಸಿರಿ ಎಂದರ್ಥವು.

**ದೇವತ್ರಾ ಸಂಬಭೂವಥುಃ ಸರ್ವೇಷು ದೇವೇಷು ಯುವಾಂ ಸಂಭಾವಿತೌ ಪ್ರಶಸ್ತೌ ಸ್ಥಃ ।** ಸಕಲ ದೇವತೆಗಳ ನಡುವೆಯೂ ನೀವೇ ಅತ್ಯಂತ ಗೌರವಕ್ಕೆ ಅರ್ಹರಾಗಿದ್ದೀರಿ ಎಂಬುದಾಗಿ ಸಾಯಣರು ಅರ್ಥಮಾಡುತ್ತಾರೆ,

ಆದರೆ ಸ್ಕಂದಸ್ವಾಮಿಗಳು ಸಕಲ ದೇವತೆಗಳಲ್ಲಿ ಒಂದಾಗಿ ಈ ಪುರೋಡಾಶರೂಪದ ಹವಿಸ್ಸಿಗೆ ಭಾಗಿಗಳಾಗಿ ಎಂದು ಅರ್ಥವನ್ನು ಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸವೇದಸಾ**—ಸಮಾನಂ ವೇದಃ ಯಯೋಃ ತೌ. ಸವೇದಸೌ. **ಸಮಾನಸ್ಯ ಛಂದಸಿ**-(ಪಾ. ಸೂ. ೬-೩-೮೪) ಎಂಬುದರಿಂದ ಸಮಾನಕ್ಕೆ ಸಭಾವ. ದ್ವಿವಚನದ ಔಕಾರವಿಭಕ್ತಿಗೆ **ಸುಪಾಂ ಸುಲುಕ್**—ಸೂತ್ರದಿಂದ ಆಕಾರಾದೇಶ.

**ಸಹೂತೀ**—ಸಮಾನಾ ಹೂತಿಃ ಯಯೋಃ ತೌ. ಹಿಂದಿನಂತೆ ಸಭಾವ. ದ್ವಿವಚನಾಂತರೂಪ.

**ವನತಮ್**—ವನ ಷಣ. ಸಂಭಕ್ತೌ ಧಾತು. ಲೋಣ್ಮಧ್ಯಮಪುರುಷದ್ವಿವಚನಾಂತರೂಪ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವತ್ರಾ**—ದೇವ ಶಬ್ದದಮೇಲೆ ಸಪ್ತಮ್ಯರ್ಥದಲ್ಲಿ **ದೇವಮನುಷ್ಯ ಪುರುಷ ಪುರುಮರ್ತ್ಯ**—(ಪಾ. ಸೂ. ೫-೪-೫೬) ಎಂಬುದರಿಂದ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ಅಗ್ನೀಷೋಮಾವನೇನ ವಾಂ ಯೋ ವಾಂ ಘೃತೇನ ದಾಶತಿ ।
ತಸ್ಮೈ ದೀದಯತಂ ಬೃಹತ್ ॥ ೧೦ ॥

॥ ಪದಪಾಠಃ ॥

ಅಗ್ನೀಷೋಮೌ । ಅನೇನ । ವಾಂ । ಯಃ । ವಾಂ । ಘೃತೇನ । ದಾಶತಿ ।
ತಸ್ಮೈ । ದೀದಯತಂ । ಬೃಹತ್ ॥ ೧೦ ॥

### ಸಾಯಣಭಾಷ್ಯಂ

**ಹೇ ಅಗ್ನೀಷೋಮೌ ವಾಂ ಯುವಯೋಃ ಸಂಬಂಧೀ ಯೋ ಯಜಮಾನೋಽನೇನ ಘೃತೇ-ನೋತ್ಪವನಾದಿಭಿಃ ಸಂಸ್ಕೃತೇನಾಜ್ಯೇನ ಯುಕ್ತಂ ಹವಿರ್ವಾಂ ಯುವಾಭ್ಯಾಂ ದಾಶತಿ ಪ್ರಯಚ್ಛತಿ ತಸ್ಮೈ ಯಜಮಾನಾಯ ಬೃಹತ್ಪ್ರಭೂತಂ ಧನಂ ದೀದಯತಂ। ಪ್ರಕಾಶಯತಂ। ಪ್ರಯಚ್ಛತಮಿತ್ಯರ್ಥಃ॥ ದಾಶತಿ। ದಾಶೃ ದಾನೇ। ಶಪ್ತಿಪೋಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ। ಯದ್ವೃತ್ತಯೋಗಾ-ನ್ನಿಘಾತಃ। ದೀದಯತಂ। ದೀದಯತಿರ್ದೀಪ್ತಿಕರ್ಮಾ॥**

### ॥ ಪ್ರತಿಪದಾರ್ಥ ॥

**ಅಗ್ನೀಷೋಮೌ**— ಎಲೈ ಅಗ್ನಿ ಮತ್ತು ಸೋಮದೇವತೆಗಳೇ। **ವಾಂ**—ನಿಮ್ಮಿಬ್ಬರಿಗೂ ಸೇರಿದ। **ಯಃ**—ಯಾವ ಯಜಮಾನನು। **ಅನೇನ ಘೃತೇನ**—ಈ ಆಜ್ಯಾಹುತಿಯಿಂದ ಕೂಡಿದ ಹವಿಸ್ಸನ್ನು। **ವಾಂ**—ನಿಮಗೆ। **ದಾಶತಿ**—ಅರ್ಪಿಸುತ್ತಾನೆಯೋ। **ತಸ್ಮೈ**—ಆ ಯಜಮಾನನಿಗೆ। **ಬೃಹತ್**—ಪ್ರಭೂತವಾದ ಧನವನ್ನು। **ದೀದಯತಂ**—ಕೊಡಿರಿ.

### ಭಾವಾರ್ಥ

ಎಲೈ ಅಗ್ನೀಷೋಮದೇವತೆಗಳೇ, ನಿಮ್ಮಿಬ್ಬರಿಗೂ ಸೇರಿದ ಯಾವ ಯಜಮಾನನು ಈ ಆಜ್ಯಾಹುತಿಯಿಂದ ಕೂಡಿದ ಹವಿಸ್ಸನ್ನು ನಿಮ್ಮಿಬ್ಬರಿಗೂ ಅರ್ಪಿಸುತ್ತಾನೆಯೋ, ಆ ಯಜಮಾನನಿಗೆ ಪ್ರಭೂತವಾದ ಧನವನ್ನು ಕೊಡಿರಿ.

### English Translation

Agni and Soma, give ample recompense to him who presents to you both, this clarified butter.

### ॥ ವಿಶೇಷವಿಷಯಗಳು ॥

**ಘೃತೇನ**—ಉತ್ಪವನಾದಿಗಳಿಂದ ಸಂಸ್ಕೃತವಾದ ಆಜ್ಯದಿಂದ ಕೂಡಿದ ಹವಿಸ್ಸು ಎಂದರ್ಥವು.

**ದೀದಯತಂ—ಭ್ರಾಜತೇ, ಭ್ರಾಶತೇ** ಇತ್ಯಾದಿ ಜ್ವಲನ ಕರ್ಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೨೮) ಇಲ್ಲಿ ಪ್ರಭೂತವಾದ ಧನವನ್ನು ಪ್ರಕಾಶಪಡಿಸಿ ಎಂದರೆ ಒದಗಿಸಿಕೊಡಿ ಎಂದರ್ಥವಾಗುತ್ತದೆ. **ಮಾಧವರು ವರ್ಧಯತಂ।** ಎಂದರೆ ವೃದ್ಧಿಯಾಗುವಂತೆ ಮಾಡಿರಿ ಎಂದಭಿಪ್ರಾಯವು.

### ವ್ಯಾಕರಣಪ್ರಕ್ರಿಯಾ

**ದಾಶತಿ**—ದಾಶೃ ದಾನೇ ಧಾತು. ಲಟ್ ಪ್ರಥಮಪುರುಷಏಕವಚನರೂಪ. ಶಪ್ ಪಿತ್ತಾದುದರಿಂದಲೂ, ತಿಪ್‌ಪ್ರತ್ಯಯವೂ ಅದರಂತೆ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. ಯಃ ಎಂದು ಹಿಂದೆ ಇರುವುದರಿಂದ-**ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧ ೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ದೀದಯತಮ್**—ದೀದಯ ಎಂಬ ಧಾತುವು ದೀಪ್ತ್ಯರ್ಥದಲ್ಲಿದೆ. ಲೋಣ್ಮಧ್ಯಮಪುರುಷ ದ್ವಿವಚನ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೦ ॥

ಸಂಹಿತಾಪಾಠಃ

ಅಗ್ನೀಷೋಮಾವಿಮಾನಿ ನೋ ಯುವಂ ಹವ್ಯಾ ಜುಜೋಷತಂ ।
ಆ ಯಾತಮುಪ ನಃ ಸಚಾ ॥ ೧೧ ॥

ಪದಪಾಠಃ

ಅಗ್ನಿಷೋಮೌ । ಇಮಾನಿ । ನಃ । ಯುವಂ । ಹವ್ಯಾ । ಜುಜೋಷತಂ ।
ಆ । ಯಾತಂ । ಉಪ । ನಃ । ಸಚಾ ॥ ೧೧ ॥

ಸಾಯಣಭಾಷ್ಯಂ

ಹೇ ಅಗ್ನೀಷೋಮೌ ಯುವಂ ಯುವಾಂ ನೋಽಸ್ಮದೀಯಾನೀಮಾನಿ ಹವ್ಯಾ ಹವೀಂಷಿ ಜುಜೋಷತಂ । ಸೇವೇಥಾಂ । ತದರ್ಥಂ ನೋಽಸ್ಮಾನ್ ಸಚಾ ಸಹ ಯುವಾಮುಪಾ ಯಾತಂ । ಉಪಾಗಚ್ಛತಂ ॥ ಜುಜೋಷತಂ । ಜುಷೀ ಪ್ರೀತಿಸೇವನಯೋಃ । ಲೋಟಿ ವ್ಯತ್ಯಯೇನ ಶಪ್ । ಛಾಂದಸಂ ದ್ವಿರ್ವಚನಂ । ಯದ್ವಾ । ವಿಕರಣಸ್ಯ ಬಹುಲಂ ಛಂದಸೀತಿ ಶ್ಲುಃ । ತತೋ ವ್ಯತ್ಯಯೇನ ಶಪ್ । ಬಹುಲಂ ಛಂದಸೀತಿ ವಕ್ತವ್ಯಮಿತಿ ವಚನಾನ್ನಾಭ್ಯಸ್ತಸ್ಯಾಚಿ ಪಿತೀತಿ ಲಘೂಪಧಗುಣಪ್ರತಿಷೇಧಾಭಾವಃ ॥

ಪ್ರತಿಪದಾರ್ಥ

**ಅಗ್ನೀಷೋಮೌ**—ಎಲೈ ಅಗ್ನಿ ಮತ್ತು ಸೋಮ ದೇವತೆಗಳೇ । **ಯುವಂ**—ನೀವಿಬ್ಬರೂ ಸಹ । **ನಃ**—ನಮ್ಮ । **ಇಮಾನಿ ಹವ್ಯಾ**—ಈ ಹವಿಸ್ಸುಗಳನ್ನು । **ಜುಜೋಷತಂ**— ಸೇವಿಸಿ (ಅದಕ್ಕಾಗಿ) । **ನಃ**—ನಮ್ಮನ್ನು ಲಕ್ಷಿಸಿ । **ಸಚಾ**—ಇಬ್ಬರೂ ಒಟ್ಟಿಗೆ । **ಉಪ ಆ ಯಾತಂ**—ಸೇರಿಕೊಂಡು ಬನ್ನಿರಿ ॥

॥ ಭಾವಾರ್ಥ ॥

ಎಲೈ ಅಗ್ನಿ ಮತ್ತು ಸೋಮದೇವತೆಗಳೇ, ನೀವಿಬ್ಬರೂ ನಮ್ಮ ಈ ಹವಿಸ್ಸುಗಳನ್ನು ಸೇವಿಸುವುದಕ್ಕಾಗಿ ನಮ್ಮ ಯಜ್ಞಪ್ರದೇಶಕ್ಕೆ ಒಟ್ಟಿಗೆ ಸೇರಿಕೊಂಡು ಜೊತೆಯಾಗಿ ಬನ್ನಿರಿ.

English Translation

Agni and Soma, be pleased with these our oblations and come to us together.

**ಹವ್ಯಾ—ಹವೀಂಷಿ ।** ಹವಿಸ್ಸುಗಳನ್ನು ; ದ್ವಿತೀಯಾ ಬಹುವಚನಾಂತ ಪದವು.
**ಸಚಾ—ಸಹ ।** ನೀವಿಬ್ಬರೂ ಒಟ್ಟಾಗಿ ಸೇರಿ ( ಬನ್ನಿ ) ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಹವ್ಯಾ**—ನಪುಂಸಕ ಬಹುವಚನದಲ್ಲಿ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಮ್**—ಎಂಬುದರಿಂದ ಶಿಗೆ ಲೋಪ.

**ಜುಜೋಷತಮ್**—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ತಮಾದೇಶ. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಶಪ್ ವಿಕರಣ. ಛಾಂದಸವಾಗಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಆದಿಹಲ್ ಶೇಷ. ಶಪ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಅಥವಾ ವಿಕರಣಕ್ಕೆ **ಬಹುಲಂ ಛಂದಸಿ**—ಎಂಬುದರಿಂದ ಶ್ಲು ಆದೇಶ ಆಮೇಲೆ ವ್ಯತ್ಯಯದಿಂದ ಶಪ್. ಯದ್ಯಪಿ ಇಲ್ಲಿ ಧಾತುವಿಗೆ ದ್ವಿತ್ವ ಬಂದುದರಿಂದ ಅಭ್ಯಸ್ತಸಂಜ್ಞೆ ಇರುವುದರಿಂದ **ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ** (ಪಾ. ಸೂ. ೭-೩-೮೭) ಎಂಬುದರಿಂದ ಲಘೂಪಧಗುಣ ನಿಷೇಧ ಬರಬೇಕಾಗುತ್ತದೆ. ಆದರೆ **ಬಹುಲಂ ಛಂದಸೀತಿ ವಕ್ತವ್ಯಮ್**—ಎಂಬ ವಚನದಿಂದ ನಿಷೇಧ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಣ್ಮಧ್ಯಮಪುರುಷ ದ್ವಿವಚನರೂಪ. ತಿಙಂತನಿಘಾತ ಸ್ವರ ಬರುತ್ತದೆ. ॥ ೧೧ ॥

॥ ಸಂಹಿತಾಪಾಠಃ ॥

ಅಗ್ನೀಷೋಮಾ ಪಿಪೃತಮರ್ವತೋ ನ ಆ ಪ್ಯಾಯಂತಾಮು-
ಸ್ರಿಯಾ ಹವ್ಯಸೂದಃ ।
ಅಸ್ಮೇ ಬಲಾನಿ ಮಘವತ್ಸು ಧತ್ತಂ ಕೃಣುತಂ ನೋ ಅಧ್ವರಂ
ಶ್ರುಷ್ಟಿಮಂತಂ ॥ ೧೨ ॥

ಪದಪಾಠಃ

ಅಗ್ನೀಷೋಮಾ । ಪಿಪೃತಂ । ಅರ್ವತಃ । ನಃ । ಆ । ಪ್ಯಾಯಂತಾಂ । ಉಸ್ರಿಯಾಃ । ಹವ್ಯಽಸೂದಃ ।

ಅಸ್ಮೇ ಇತಿ । ಬಲಾನಿ । ಮಘವತ್ಽಸು । ಧತ್ತಂ । ಕೃಣುತಂ । ನಃ । ಅಧ್ವರಂ । ಶ್ರುಷ್ಟಿಽಮಂತಂ ॥ ೧೨ ॥

ಸಾಯಣಭಾಷ್ಯಂ

ಹೇ ಅಗ್ನೀಷೋಮೌ ನೋಽಸ್ಮಾಕಮರ್ವತೋಽಶ್ವಾನ್ಪಿಪೃತಂ । ಪಾಲಯತಂ । ಹವ್ಯಸೂದಃ ಕ್ಷೀರಾದಿಹವಿಷ ಉತ್ಪಾದಯಿತ್ರ್ಯ ಉಸ್ರಿಯಾ ಅಸ್ಮದೀಯಾ ಗಾವಶ್ಚಾ ಪ್ಯಾಯಂತಾಂ । ಆಪ್ಯಾಯಿತಾಃ ಪ್ರವೃದ್ಧಾಃ ಸಂತು । ಮಘವತ್ಸು ಹವಿರ್ಲಕ್ಷಣಧನಯುಕ್ತೇಷ್ವಸ್ಮೇ ಅಸ್ಮಾಸು ಬಲಾನಿ ಧತ್ತಂ । ಸ್ಥಾಪಯತಂ । ತಥಾ ನೋಽಸ್ಮಾಕಮಧ್ವರಂ ಯಾಗಂ ಶ್ರುಷ್ಟಿಮಂತಂ ಧನಯುಕ್ತಂ ಕೃಣುತಂ । ಕುರುತಂ ॥ ಪಿಪೃತಂ । ಪೄ ಪಾಲನಪೂರಣಯೋಃ । ಪೄ ಇತ್ಯೇಕೇ । ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಹವ್ಯಸೂದಃ । ಹವ್ಯಂ ಸೂದಂತೇ ಕ್ಷರಂತೀತಿ ಹವ್ಯಸೂದಃ । ಷೂದ ಕ್ಷರಣೇ । ಕ್ವಿಪ್ಚೇತಿ ಕ್ವಿಪ್ । ಅಸ್ಮೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇ ಆದೇಶಃ । ಶ್ರುಷ್ಟಿಮಂತಂ । ಶ್ರುಷ್ಟೀತಿ ಧನನಾಮ । ಶು ಆಶ್ವಶ್ಯತೇ ವ್ಯಾಪ್ಯತ ಇತಿ ಶ್ರುಷ್ಟಿಃ । ಪೃಷೋದರಾದಿಃ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ ॥

ಪ್ರತಿಪದಾರ್ಥ

ಅಗ್ನೀಷೋಮಾ—ಎಲೈ ಅಗ್ನಿ ಮತ್ತು ಸೋಮದೇವತೆಗಳೇ । ನಃ—ನಮ್ಮ । ಅರ್ವತಃ—ಕುದುರೆಗಳನ್ನು । ಪಿಪೃತಂ—ಕಾಪಾಡಿರಿ । ಹವ್ಯಸೂದಃ—ಹವಿಸ್ಸಿಗೆ ಬೇಕಾದ ಕ್ಷೀರಾದಿಗಳನ್ನು ಒದಗಿಸುವ । ಉಸ್ರಿಯಾಃ—ನಮ್ಮ ಗೋವುಗಳು । ಆಪ್ಯಾಯಂತಾಂ—ಪುಷ್ಟವಾಗಿ ಬೆಳೆದು ವೃದ್ಧಿಯಾಗಲಿ । ಮಘವತ್ಸು—ಹವಿಸ್ಸಿನ ರೂಪದ ಧನವುಳ್ಳ । ಅಸ್ಮೇ—ನಮ್ಮಲ್ಲಿ । ಬಲಾನಿ—ಶಕ್ತಿಗಳನ್ನು । ಧತ್ತಂ—ಇಟ್ಟು ತುಂಬಿಸಿರಿ । ನಃ—ನಮ್ಮ । ಅಧ್ವರಂ—ಯಾಗವನ್ನು । ಶ್ರುಷ್ಟಿಮಂತಂ—ಧನಯುಕ್ತವನ್ನಾಗಿ । ಕೃಣುತಂ—ಮಾಡಿರಿ ॥

ಭಾವಾರ್ಥ

ಎಲೈ ಅಗ್ನಿ ಮತ್ತು ಸೋಮದೇವತೆಗಳೇ, ನಮ್ಮ ಕುದುರೆಗಳನ್ನು ಕಾಪಾಡಿರಿ. ಹವಿಸ್ಸಿಗೆ ಬೇಕಾದ ಕ್ಷೀರಾದಿಗಳನ್ನು ಒದಗಿಸುವ ನಮ್ಮ ಗೋವುಗಳು ಪುಷ್ಟವಾಗಿ ಬೆಳೆದು ವೃದ್ಧಿಯಾಗಲಿ. ನಾವು ಹವಿಸ್ಸಿನ ರೂಪದ ಧನವುಳ್ಳವ

ರಾಗಿದ್ದೇವೆ ನಮ್ಮಲ್ಲಿ ನಾನಾ ವಿಧವಾದ ಶಕ್ತಿಗಳನ್ನು ತುಂಬಿರಿ. ನಮ್ಮ ಯಾಗವನ್ನು ಧನಯುಕ್ತವನ್ನಾಗಿ ಮಾಡಿರಿ

English Translation

Agni and Soma, cherish our horses, and may our cows, affording milk that yields butter for oblations be well nourished; give to us who are affluent, strength to perform religious rites and make our sacrfice productive of wealth.

ವಿಶೇಷವಿಷಯಗಳು

**ಅರ್ವತಃ—ಅತ್ಯಃ, ಹಯಃ** ಇತ್ಯಾದಿ ಅಶ್ವನಾಮಗಳಲ್ಲಿ ಪಠಿತವಾಗಿ ( ನಿ. ೨-೨೭ )ರುವುದರಿಂದ **ಅರ್ವಾ** ಅಂದರೆ ಅಶ್ವವೆಂದರ್ಥವು. **ಅರ್ತಿ ಗಚ್ಛತೀತ್ಯರ್ವಾ** ಎಂದಾಗಲಿ ಅಥವಾ **ಅರ್ವೇರಣರ್ವಾ** (ನಿ.೧೧-೩೧) ಎಂದಾಗಲಿ ಆಗುತ್ತದೆ. ಶೀಘ್ರವಾಗಿ ಸಂಚಾರಮಾಡಬಲ್ಲ ಪ್ರಾಣಿಯಾದುದರಿಂದ **ಅರ್ವಾ** ಎಂಬ ಹೆಸರು ಬಂದಿದೆ. **ಅರ್ವತಃ** ಅಂದರೆ ನಮ್ಮ ಅಶ್ವಗಳನ್ನು ಎಂದರ್ಥವು.

**ಪಿಪೃತಂ —ಪೃ ಪಾಲನಪೂರಣಯೋಃ ।** ಇಲ್ಲಿ ಪಾಲನಾರ್ಥದಲ್ಲಿ **ಪೃ** ಧಾತುವನ್ನು ಪಯೋಗಿಸಿದೆ ನಮ್ಮ ಅಶ್ವಗಳನ್ನು ಪಾಲಿಸಿ ಎಂದರ್ಥವು.

**ಉಸ್ರಿಯಾಃ—ಅಘ್ನ್ಯಾ, ಉಸ್ರಾ, ಉಸ್ರಿಯಾ** ಇತ್ಯಾದಿ ಗೋನಾಮಗಳಲ್ಲಿ ಪಠಿತವಾಗಿದೆ. (ನಿ.೩-೮) **ಉಸ್ರಿಯೇತಿ ಗೋನಾಮ । ಉಸ್ರಾವಿಣೋಽಸ್ಯಾಂ ಭೋಗಾಃ ।** ಸುಖಸಾಧನವಾದ ಕ್ಷೀರವು ಹರಿಯುವುದರಿಂದ **ಉಸ್ರಿಯಾಃ** ಎಂಬ ಹೆಸರು ಬಂದಿದೆಯೆಂದು **ವೀತಂ ಪಾತಂ ಪಯಸ ಉಸ್ರಿಯಾಃ ।** (ಋ. ಸಂ. ೧-೧೫೩-೪) ಎಂಬ ಉದಾಹರಣೆಯನ್ನು ಕೊಟ್ಟು ನಿರುಕ್ತಕಾರರು ವಿವರಿಸುತ್ತಾರೆ (ನಿ. ೪-೧೯).

**ಶ್ರುಷ್ಟಿಮಂತಂ—ಧನಯುಕ್ತಂ।** ಧನದಿಂದ ಕೂಡಿದುದು ಎಂದು ಸಾಯಣರೂ, **ಅಪರಿಮಿತಮಪಿ ಸುಖನಾಮ ಏತದ್ದ್ರಷ್ಟವ್ಯಂ। ಫಲಭೂತೇನ ಸುಖೇನ ಸುಖವಂತಂ।** ಎಂದರೆ ಸುಖನಾಮಗಳಲ್ಲಿ ಪಠಿತವಾಗಿಲ್ಲದಿದ್ದರೂ ಸಹ **ಶ್ರುಷ್ಟಿ** ಶಬ್ದಕ್ಕೆ ಸುಖವೆಂಬ ಅರ್ಥವೆಂದೂ, ಫಲಭೂತವಾದ ಸುಖದಿಂದ ಕೂಡಿದುದು ಎಂಬುದಾಗಿಯೂ ಸ್ಕಂದಸ್ವಾಮಿಗಳೂ ಅರ್ಥಮಾಡುತ್ತಾರೆ. ಅವರು ಇನ್ನೂ ಮುಂದುವರಿಸಿ **ಅಥವಾ ಶ್ರುಷ್ಟೀತಿ ಕ್ಷಿಪ್ರನಾಮ । ಕ್ಷಿಪ್ರವಂತಂ ।** ಎಂದರೆ ಶೀಘ್ರವಾಗಿ ಫಲವನ್ನು ಕೊಡತಕ್ಕದ್ದು ಎಂದೂ ಆಗಬಹುದು ಎಂಬರ್ಥವನ್ನು ಮಾಡುತ್ತಾರೆ, ನಮ್ಮ ಅಧ್ವರವನ್ನು ಶೀಘ್ರವಾದ ಫಲಕೊಡುವಂತೆ ಮಾಡಿರಿ ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಪಿಪೃತಮ್—** ಪೃ ಪಾಲನಪೂರಣಯೋಃ ಧಾತು. ಕೆಲವರು ಪೃ ಎಂದು ಹ್ರಸ್ವಾಂತವಾಗಿ ಸ್ವೀಕರಿಸುತ್ತಾರೆ. ಜುಹೋತ್ಯಾದಿ ಲೋಣ್ಮಧ್ಯಮ ಪುರುಷ ದ್ವಿವಚನದಲ್ಲಿ ತಮಾದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಅರ್ತಿಪಿಪರ್ತ್ಯೋಶ್ಚ—** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ ಧಾತುವಿನ ಇಕಿಗೆ ತನ್ನಿಮಿತ್ತವಾಗಿ ಗುಣ ಬರುವುದಿಲ್ಲ. ಹಿಂದೆ ಅಗ್ನೀಷೋಮಾ ಎಂದು ಆಮಂತ್ರಿತವಿರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್**

ಎಂಬುದರಿಂದ ಅವಿದ್ಯಮಾನವದ್ಭಾವವಿರುವುದರಿಂದ ಅತಿಜಂತದ ಪರದಲ್ಲಿ ಬಾರದಿರುವುದರಿಂದ ಇದಕ್ಕೆ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅರ್ವತಃ**— ಅರ್ವನ್ ಶಬ್ದಕ್ಕೆ ದ್ವಿತೀಯಾ ಬಹುವಚನ ಪರವಾದಾಗ **ಅರ್ವಣಸ್ತ್ರಸಾವನಞಃ** ಎಂಬು ದರಿಂದ ತೃ ಎಂಬುದು ಅಂತಾದೇಶವಾಗಿ ಬರುತ್ತದೆ.

**ಹವ್ಯಸೂದಃ**— ಹವ್ಯಂ ಸೂದಂತೇ ಕ್ಷರಂತೀತಿ ಹವ್ಯಸೂದಃ ಷೂದ ಕ್ಷರಣೇ ಧಾತು. **ಕ್ವಿಪ್ ಚ** ಎಂಬು ದರಿಂದ ಇದಕ್ಕ ಕ್ವಿಪ್. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕಾರಕಪೂರ್ವಪದವಾಗಿರುವುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಅಸ್ಮೇ**—ಅಸ್ಮತ್ ಶಬ್ದ. ಇದಕ್ಕೆ ಸಪ್ತಮೀವಿಭಕ್ತಿ ಪರವಾದಾಗ **ಸುಪಾಂ ಸುಲುಕ್**— ಎಂಬುದರಿಂದ ಅದಕ್ಕೆ ಶೀ ಆದೇಶ. **ಶೇಷೇ ಲೋಪಃ** ಎಂಬುದರಿಂದ ಮಪರ್ಯಂತದ ಪರಕ್ಕೆ ಲೋಪ.

**ಶ್ರುಷ್ಟಿಮಂತಮ್**— ಶ್ರುಷ್ಟಿ ಎಂಬುದು ಧನದ ಹೆಸರು. ಶು=ಆಶು ಅಶ್ಯತೇ ವ್ಯಾಪ್ಯತೇ ಇತಿ ಶ್ರುಷ್ಟಿಃ (ಬೇಗ ವ್ಯಾಪಿಸುವುದು) **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಪೃಷೋದರಾದಿಯಲ್ಲಿ ಪಠಿತ ವಾದುದರಿಂದ ಅಭಿಮತರೂಪ ಸಿದ್ಧಿಯಾಗುತ್ತದೆ. ಶ್ರುಷ್ಟಿಃ ಅಸ್ಯ ಅಸ್ತಿ ಇತಿ ಶ್ರುಷ್ಟಿಮಾನ್ **ತದಸ್ಯಾಸ್ತಿ**-- ಎಂಬುದರಿಂದ ಮತುಪ್ ಪ್ರತ್ಯಯ. **ಹ್ರಸ್ವನುಡ್ಭ್ಯಾಂ ಮತುಪ್**— (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತ ಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಕೃಣುತಮ್**—ಕೃಞ್ ಹಿಂಸಾಯಾಂ ಧಾತು. ಸ್ವಾದಿ ಲೋಣ್ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಸ್ವಾದಿಭ್ಯಃ ಶ್ನುಃ**— (ಪಾ. ಸೂ. ೩-೧-೭೩) ಎಂಬುದರಿಂದ ಶ್ನುವಿಕರಣ. ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದ ರಿಂದ ಗುಣ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಕೇವಲ ಕರಣಾರ್ಥ ಸ್ವೀಕೃತವಾಗಿದೆ. ಅಥವಾ ಡುಕೃಞ್ ಕರಣೇ ಈ ಧಾತುವಿಗೆ ಲೋಟನಲ್ಲಿ **ವ್ಯತ್ಯಯೋ ಬಹುಲಮ್** ಎಂಬುದರಿಂದ ಉ ವಿಕರಣಕ್ಕೆ ಬದಲಾಗಿ ಶ್ನು ವಿಕರಣ ಬರುತ್ತದೆ. ಆಗ ಅಭಿಮತರೂಪ ಸಿದ್ಧಿಯಾಗುತ್ತದೆ. ॥ ೧೨ ॥

ಇಲ್ಲಿಗೆ ೯೩ನೇ ಸೂಕ್ತವು ಮುಗಿದುದು.



# ತೊಂಭತ್ತನಾಲ್ಕನೆಯ ಸೂಕ್ತವು

**ಪಂಚದಶೇಽನುವಾಕೇ ದ್ವಾದಶ ಸೂಕ್ತಾನಿ । ತತ್ರೇಮಂ ಸ್ತೋಮಮಿತಿ ಷೋಡಶರ್ಚಂ ಪ್ರಥಮಂ ಸೂಕ್ತಂ। ಆಂಗಿರಸಸ್ಯ ಕುತ್ಸಸ್ಯಾರ್ಷಂ। ಪಂಚದಶೀಷೋಡಶ್ಯೌ ತ್ರಿಷ್ಟುಭೌ ಶಿಷ್ಟಾ ಜಗತ್ಯಃ। ಅಗ್ನಿರ್ದೇವತಾ। ಪೂರ್ವೋ ದೇವಾ ಭವತು ಸುನ್ವತೋ ರಥ ಇತಿ ತ್ರಯಃ ಪಾದಾ ದೇವದೇವತ್ಯಾಃ। ತನ್ನೋ ಮಿತ್ರೋ ವರುಣ ಇತ್ಯರ್ಧರ್ಚೋ ಲಿಂಗೋಕ್ತಮಿತ್ರಾವರುಣಾದಿಷಡ್ದೇವತ್ಯಃ । ಅಥವಾ ತಸ್ಯಾಪ್ಯಗ್ನಿರೇವ ದೇವತಾ ಮಿತ್ರಾವರುಣಾದಯಸ್ತು ನಿಪಾತಭಾಕ್ತ್ವೇನಾಪ್ರಧಾನಾಃ। ಏತತ್ಸರ್ವಮನುಕ್ರಾಂತಂ। ಇಮಂ ಷೋಳಶ ಕುತ್ಸ ಆಗ್ನೇಯಂ ತದ್ವಿತ್ರಿಷ್ಟುಬಂತಂ ಪೂರ್ವೋ ದೇವಾಸ್ತ್ರಯಃ ಪಾದಾ ದೈವಾಸ್ತನ್ನೋ ಮಿತ್ರೋಽರ್ಧರ್ಚೋ ಲಿಂಗೋಕ್ತದೇವತೋ ಯದ್ದೇವತ್ಯಂ ವಾ ಸೂಕ್ತಮಿತಿ ॥ ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ಜಾಗತೇ ಛಂದಸ್ಯೇತತ್ಸೂಕ್ತಂ। ಆಶ್ವಿನಶಸ್ತ್ರೇ ಚ। ತಥಾ ಚ ಸೂತ್ರಿತಂ। ಇಮಂ ಸ್ತೋಮಮರ್ಹತೇ ಸಂ ಜಾಗೃವದ್ಭಿಃ। ಆ. ೪-೧೩। ಇತಿ॥ ಆಭಿಪ್ಲವಿಕೇ ಷಷ್ಠೇಽಹನ್ಯಾಗ್ನಿಮಾರುತೇಽಪ್ಯೇತತ್ಸೂಕ್ತಂ ಜಾತವೇದಸ್ಯನಿವಿದ್ಧಾನಂ । ಸೂತ್ರಿತಂ ಚ। ಪ್ರಯಜ್ಯವ ಇಮಂ ಸ್ತೋಮಮಿತ್ಯಾಗ್ನಿಮಾರುತಂ। ಆ. ೭-೭। ಇತಿ॥ ತೃತೀಯಸವನ ಇಮಂ ಸ್ತೋಮಮಿತ್ಯೇಷಾಗ್ನೀಧ್ರಃ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ। ಇಮಂ ಸ್ತೋಮಮರ್ಹತೇ ಜಾತವೇದಸ ಇತಿ ತಾರ್ತೀಯಸವನಿಕ್ಯಃ। ಆ. ೫-೫। ಇತಿ॥**

ಅನುವಾದವು—ಈ ಸೂಕ್ತದಿಂದ ಪ್ರಥಮಮಂಡಲದ ಹದಿನೈದನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಹನ್ನೆರಡು (೯೪-೧೦೫) ಸೂಕ್ತಗಳಿರುವವು. ಅವುಗಳಲ್ಲಿ **ಇಮಂ ಸ್ತೋಮಂ** ಎಂಬ ಮೊದಲನೆಯ ಸೂಕ್ತದಲ್ಲಿ ಹದಿನಾರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸ ಪುತ್ರನಾದ ಕುತ್ಸನೆಂಬುವನು ಋಷಿಯು. ಅಗ್ನಿಯು ದೇವತೆಯು. ಈ ಸೂಕ್ತದ ಹದಿನೈದು ಮತ್ತು ಹದಿನಾರನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಉಳಿದ ಋಕ್ಕುಗಳು ಜಗತೀ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ. **ಇಮಂ ಷೋಳಶ ಕುತ್ಸ ಆಗ್ನೇಯಂ ತದ್ವಿತ್ರಿಷ್ಟುಬಂತಂ ಪೂರ್ವೋ ದೇವಾಸ್ತ್ರಯಃ ಪಾದಾ ದೈವಾಸ್ತನ್ನೋ ಮಿತ್ರೋಽರ್ಧರ್ಚೋ ಲಿಂಗೋಕ್ತ ದೇವತೋ ಯದ್ದೇವತ್ಯಂ ವಾ ಸೂಕ್ತಮಿತಿ** ಎಂದು ಹೇಳಿರುವುದು. ಈ ಸೂಕ್ತದ ಎಂಟನೆಯ ಋಕ್ಕಿನಲ್ಲಿ ಮೊದಲಿನ ಮೂರು ಪಾದಗಳಿಗೆ ದೇವತೆಗಳೇ ದೇವತೆಗಳು. ಕೊನೆಯ ಪಾದಕ್ಕೆ ಅಗ್ನಿಯು ದೇವತೆಯು. ಹದಿನಾರನೆಯ ಋಕ್ಕಿನ ಉತ್ತರಾರ್ಧಕ್ಕೆ ಮಿತ್ರ, ವರುಣ ಅದಿತಿ, ಸಿಂಧು ಪೃಥಿವಿ, ದ್ಯೌಃ ಎಂಬ ಆರು ಮಂದಿ ದೇವತೆಯರು. ಅಥವಾ ಅಗ್ನಿಯೇ ಪ್ರಧಾನ ದೇವತೆಯೆಂದು ಹೇಳಬಹುದು. ವರುಣಾದಿಗಳು ಅಷ್ಟು ಮುಖ್ಯರಲ್ಲ. ಪ್ರಾತರನುವಾಕ ಮಂತ್ರಪಠನದಲ್ಲಿ ಆಗ್ನೇಯಕ್ರತು ಸಂಬಂಧವಾದ ಜಗತೀ ಛಂದಸ್ಸಿನ ಮಂತ್ರಗಳಿಗಾಗಿಯೂ ಆಶ್ವಿನ ಶಸ್ತ್ರಮಂತ್ರ ಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಇಮಂ ಸ್ತೋಮಮರ್ಹತೇ ಸಂಜಾಗೃವದ್ಭಿಃ** ಎಂಬ ಸೂತ್ರವು ನಿರ್ದೇಶಿಸುವುದು. ( ಆ- ೪-೧೩ ) ಮತ್ತು ಅಭಿಪ್ಲವನೆಂಬ ಯಾಗದ ಆರನೆಯ ದಿವಸದಲ್ಲಿ ಆಗ್ನಿಮಾರುತ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತವನ್ನು ಜಾತವೇದಸಸಂಬಂಧವಾದ ನಿವಿತ್ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಪ್ರಯಜ್ಯವ ಇಮಂ ಸ್ತೋಮಮಿತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ ವಿಧಿತವಾಗಿರುವುದು ( ಆ. ೭-೭ ) ತೃತೀಯಸವನದಲ್ಲಿಯೂ ಆಗ್ನೀಧ್ರನೆಂಬ ಋತ್ವಿಜನು **ಇಮಂ**

**ಸ್ತೋಮಂ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಪ್ರಸ್ಥಿತಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಇಮಂ ಸ್ತೋಮಮರ್ಹತೇ ಜಾತವೇದಸ ಇತಿ ತಾರ್ತೀಯಸವನಿಕ್ಯಃ** ಎಂಬ ಸೂತ್ರವು ನಿರ್ದೇಶಿಸುವುದು (ಆ. ೫-೫).

---

## ಸೂಕ್ತ—೯೪

ಮಂಡಲ—೧ ॥ ಅನುವಾಕ—೧೫ ॥ ಸೂಕ್ತ—೯೪ ॥

ಅಷ್ಟಕ—೧ ॥ ಅಧ್ಯಾಯ—೬ ॥ ವರ್ಗ— ೩೦, ೩೧, ೩೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೬

॥ ಋಷಿಃ—ಕುತ್ಸ ಆಂಗಿರಸಃ ॥

॥ ದೇವತಾ— ೧-೭, ೮ ರಲ್ಲಿ ೪ ನೆಯ ಪಾದ, ೯-೧೫, ೧೬ ೧ ಮತ್ತು ೨ ನೆಯ ಪಾದಗಳು ಅಗ್ನಿಃ । ೮ ರಲ್ಲಿ ೧, ೨, ೩, ನೆಯ ಪಾದಗಳು, ದೇವಾಃ । ೧೬ ರಲ್ಲಿ ೩ ಮತ್ತು ೪ ಪಾದಗಳು, ಮಿತ್ರೋ ವರುಣೋಽದಿತಿಃ ಸಿಂಧುಃ ಪೃಥಿವೀ ದ್ಯೌರಗ್ನಿರ್ವಾ ॥

॥ ಛಂದಃ—೧-೧೪ ಜಗತೀ । ೧೫-೧೬ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಮಂ ಸ್ತೋಮಮರ್ಹತೇ ಜಾತವೇದಸೇ ರಥಮಿವ ಸಂ ಮಹೇಮಾ
ಮನೀಷಯಾ ।
ಭದ್ರಾ ಹಿ ನಃ ಪ್ರಮತಿರಸ್ಯ ಸಂಸದ್ಯಗ್ನೇ ಸಖ್ಯೇ ಮಾ ರಿಷಾಮಾ
ವಯಂ ತವ ॥೧॥

ಪದಪಾಠಃ

ಇಮಂ । ಸ್ತೋಮಂ । ಅರ್ಹತೇ । ಜಾತಽವೇದಸೇ । ರಥಂಽಇವ । ಸಂ ।
ಮಹೇಮ । ಮನೀಷಯಾ ।

ಭದ್ರಾ । ಹಿ । ನಃ । ಪ್ರಽಮತಿಃ । ಅಸ್ಯ । ಸಂಽಸದಿ । ಅಗ್ನೇ । ಸಖ್ಯೇ ।
ಮಾ । ರಿಷಾಮ । ವಯಂ । ತವ ॥ ೧ ॥

ಸಾಯಣಭಾಷ್ಯಂ

ಅರ್ಹತೇ ಪೂಜ್ಯಾಯ ಜಾತವೇದಸೇ ಜಾತಾನಾಮುತ್ಪನ್ನಾನಾಂ ವೇದಿತ್ರೇ ಜಾತಪ್ರಜ್ಞಾಯ ಜಾತಧನಾಯ ವಾಗ್ನಯೇ ಮನೀಷಯಾ ನಿಶಿತಯಾ ಬುದ್ಧ್ಯೇಮಮೇತತ್ಸೂಕ್ತರೂಪಂ ಸ್ತೋಮಂ ಸ್ತೋತ್ರಂ ರಥಮಿವ ಯಥಾ ತಕ್ಷಾ ರಥಂ ಸಂಸ್ಕರೋತಿ ತಥಾ ಸಂ ಮಹೇಮ। ಸಮ್ಯಕ್ ಪೂಜಿತಂ ಕುರ್ಮಃ। ಅಸ್ಯಾಗ್ನೇಃ ಸಂಸದಿ ಸಂಭಜನೇ ನೋಽಸ್ಮಾಕಂ ಪ್ರಮತಿಃ ಪ್ರಕೃಷ್ಟಾ ಬುದ್ಧಿರ್ಭದ್ರಾ ಹಿ ಕಲ್ಯಾಣೀ ಸಮರ್ಥಾ ಖಲು। ಅತಸ್ತಯಾ ಬುದ್ಧ್ಯಾ ಸ್ತುಮ ಇತ್ಯರ್ಥಃ। ಹೇ ಅಗ್ನೇ ತವ ಸಖ್ಯೇಽಸ್ಮಾಕಂ ತ್ವಯಾ ಸಹ ಸಖಿತ್ವೇ ಸತಿ ವಯಂ ಮಾ ರಿಷಾಮ । ಹಿಂಸಿತಾ ನ ಭವಾಮ। ಅಸ್ಮಾನ್ರಕ್ಷೇತ್ಯರ್ಥಃ॥ ಅರ್ಹತೇ। ಅರ್ಹ ಪೂಜಾಯಾಂ । ಅರ್ಹಃ ಪ್ರಶಂಸಾಯಾಂ । ಪಾ- ೩-೨-೧೩೩ । ಇತಿ ಲಟಃ ಶತ್ರಾದೇಶಃ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚಾದುಪದೇಶಾಲ್ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ। ಮಹೇಮ। ಮಹ ಪೂಜಾಯಾಂ। ರಿಷಾಮ। ರಿಷ ಹಿಂಸಾಯಾಂ। ವ್ಯತ್ಯಯೇನ ಶಃ। ತವ। ಯುಷ್ಮದಸ್ಮದೋರ್ಙಸೀತ್ಯಾದ್ಯುದಾತ್ತತ್ವಂ॥

॥ ಪ್ರತಿಪದಾರ್ಥ ॥

**ಅರ್ಹತೇ**—ಪೂಜ್ಯನೂ। **ಜಾತವೇದಸೇ**—ಉತ್ಪನ್ನವಾದ ಸಕಲವನ್ನು ತಿಳಿಯುವವನೂ ಅಥವಾ ಧನ ಅಥವಾ ಪ್ರಜ್ಞೆಯುಳ್ಳವನೂ ಆದ ಅಗ್ನಿಗೆ। **ಮನೀಷಯಾ**—ನಮ್ಮ (ಚುರುಕಾದ) ಬುದ್ಧಿಯಿಂದ। **ಇಮಂ ಸ್ತೋಮಂ**— ಈ ಸೂಕ್ತರೂಪವಾದ ಸ್ತೋತ್ರವನ್ನು। **ರಥಮಿವ** (ರಥಕಾರನು) ರಥವನ್ನು ನಿರ್ಮಿಸುವಂತೆ। **ಸಂ ಮಹೇಮ**—ಬಹಳ ಕುಶಲತೆಯಿಂದ ಸೃಷ್ಟಿಸುತ್ತೇವೆ। **ಅಸ್ಯ**—ಈ ಅಗ್ನಿಯ। **ಸಂಸದಿ**—ಸಾಂಘಿಕವಾದ ಪೂಜೆಯಲ್ಲಿ। **ನಃ**—ನಮ್ಮ। **ಪ್ರಮತಿಃ**— ಶ್ರೇಷ್ಠವಾದ ಬುದ್ಧಿಯು। **ಭದ್ರಾ ಹಿ**— ಕಲ್ಯಾಣಾತ್ಮಕವಾಗಿದೆ-। **ಅಗ್ನೇ**—ಎಲೈ ಅಗ್ನಿಯೇ। **ತವ**—ನಿನ್ನ। **ಸಖ್ಯೇ**— ಸ್ನೇಹದ ನಿಮಿತ್ತವಾಗಿ। **ವಯಂ**—ನಾವು। **ಮಾ ರಿಷಾಮ**—ಹಿಂಸಿತರಾಗದೇ ಇರುವಂತೆ (ಅನುಗ್ರಹಿಸು) ॥

ಭಾವಾರ್ಥ

ಪೂಜ್ಯನೂ, ಸಕಲವನ್ನೂ ತಿಳಿಯುವ ಜ್ಞಾನವುಳ್ಳವನೂ ಆದ ಅಗ್ನಿಗೆ ರಥಕಾರನು ನಾಜೋಕಾಗಿ ರಥವನ್ನು ಸೃಷ್ಟಿಸುವಂತೆ ನಾವೂ ಸಹ ನಮ್ಮ ಚುರುಕಾದ ಬುದ್ಧಿಯಿಂದ ಈ ಸೂಕ್ತರೂಪವಾದ ಸ್ತೋತ್ರವನ್ನು ಕುಶಲತೆಯಿಂದ ಸೃಷ್ಟಿಸುತ್ತೇವೆ. ಈ ಅಗ್ನಿದೇವನ ಪೂಜೆಯಲ್ಲಿ ನಮ್ಮ ಬುದ್ಧಿಯು ಕಲ್ಯಾಣಾತ್ಮಕವಾಗಿದೆ. ಎಲೈ ಅಗ್ನಿಯೇ, ನಿನ್ನೊಡನೆ ನಮ್ಮ ಸ್ನೇಹವಿರುವ ಕಾರಣ ನಾವು ಶತ್ರುಗಳಿಂದ ಹಿಂಸಿತರಾಗದೇ ಇರುವಂತೆ ಅನುಗ್ರಹಿಸು

## English Translation

To him who is worthy of praise, and all-knowing, we constuct, with our minds, this hymn, as (a workman makes) a car; happy is our understading when engaged in his adoration ; O Agui, let us not suffer injury through your friendship.

ವಿಶೇಷವಿಷಯಗಳು

**ಜಾತವೇದಸೇ-- ಜಾತಾನಿ ವೇದ ; ಜಾತಾನಿ ವೈನಂ ವಿದುಃ ; ಜಾತೇ ಜಾತೇ ವಿದ್ಯತ ಇತಿ ವಾ ; ಜಾತವಿತ್ತೋ ವಾ ಜಾತಧನಃ ; ಜಾತವಿದ್ಯೋ ವಾ ಜಾತ್ರಜ್ಞಾನಃ ।** ಉತ್ಪನ್ನವಾದ ಸಕಲವನ್ನು ತಿಳಿಯುವವನೆಂದಾಗಲಿ, ಅಥವಾ ಉತ್ಪನ್ನವಾದ ಸಕಲವೂ ಇವನನ್ನು ತಿಳಿಯುವುವು ಎಂದಾಗಲಿ, ಅಥವಾ ಉತ್ಪನ್ನವಾದ ಸಕಲ ವಸ್ತುಗಳಲ್ಲಿಯೂ ಅವರಿಸಿಕೊಂಡಿರುತ್ತಾನೆಂದಾಗಲಿ, ಅಥವಾ ಉತ್ಪನ್ನವಾದ ಸಕಲ ಧನವುಳ್ಳವನೆಂದೂ ಅಥವಾ ಸಮಸ್ತವನ್ನೂ ತಿಳಿಯುವ ಪ್ರಜ್ಞೆಯುಳ್ಳವನೆಂದಾಗಲಿ ಅರ್ಥಮಾಡಬಹುದೆಂದು ನಿರುಕ್ತಕಾರರು ವಿವರಿಸುತ್ತಾರೆ (ನಿ. ೭-೧೯ ) **ಬೃಹದ್ದೇವತೆಯಲ್ಲಿಯೂ** ಸಹ ಜಾತವೇದಸ್ಸಿನ ಸ್ವರೂಪ ಮತ್ತು ಸ್ಥಾನಗಳನ್ನು ವಿಶದವಾಗಿ ವಿವರಿಸಿದ್ದಾರೆ.

**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ।**
**ಜಾತವೇದಾಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ।**
( ಬೃ. ದೇ. ೧-೬೭ )

ಋಷಿಗಳು ಪೃಥ್ವಿಯಮೇಲಿರುವ ಅಗ್ನಿಯನ್ನು ಅಗ್ನಿಯೆಂದೂ, ಮಧ್ಯಲೋಕದಲ್ಲಿರುವ ಅಗ್ನಿಯನ್ನು **ಜಾತವೇದಸ್ಸೆಂದೂ** ದ್ಯುಲೋಕದಲ್ಲಿರುವವನನ್ನು **ವೈಶ್ವಾನರನೆಂದೂ** ಹೊಗಳುತ್ತಾರೆಂದು ಈ ಶ್ಲೋಕದಲ್ಲಿ ಹೇಳಿ ಇದೇ ಭಾವವನ್ನು ಮುಂದುವರಿಸುತ್ತಾ.

**ವೈಶ್ವಾನರಂ ಶ್ರಿತೋ ಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।**
**ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸೀ ॥**
( ಬೃ. ದೇ. ೧-೯೭ )

ಅಗ್ನಿಯು ವೈಶ್ವಾನರನಲ್ಲಿಯೂ ವೈಶ್ವಾನರನು ಅಗ್ನಿಯಲ್ಲಿಯೂ ಅಡಕವಾಗಿ **ಜಾತವೇದಸ್ಸು** ಇವೆರಡರಲ್ಲಿಯೂ ಅಡಕವಾಗಿದ್ದಾನೆಂದೂ ಇವೆರಡೂ ಜಾತವೇದಸ್ಸಿನ ಎರಡು ಅಂಶಗಳೆಂದೂ ವಿವರಿಸಿದೆ. ಹೀಗೆ ಮೊದಲನೇ ಅಧ್ಯಾಯದಲ್ಲಿ ಜಾತವೇದಸ್ಸಿನ ಸ್ಥಾನಗಳನ್ನು ಹೇಳಿ ಎರಡನೇ ಅಧ್ಯಾಯದಲ್ಲಿ ಸ್ವರೂಪ ನಿರ್ವಚನವನ್ನು ಮಾಡಿದೆ:

**ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ ।**

**ಯಚ್ಚೈಷ ಜಾತವಿದ್ಯೋಽಭೂತ್ ವಿತ್ತಂ ಜಾತೋಽಧಿವೇತ್ತಿ ವಾ ||**
( ಬೃ. ದೇ. ೨-೩೦ )

**ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃ ಪುನಃ |**
**ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ ||**
( ಬೃ. ದೇ. ೨-೩೧ )

ಉತ್ಪನ್ನವಾಗುವಾಗಲೇ ಸಕಲವನ್ನೂ ತಿಳಿಯುವುದರಿಂದಲೂ ಅಥವಾ ಜ್ಞಾನವು ಅವನಲ್ಲೇ ಉತ್ಪನ್ನವಾದುದರಿಂದಲೂ, ಅಥವಾ ಉತ್ಪನ್ನವಾದಾಗಲೇ ಸಕಲಧನವನ್ನು ತಿಳಿದು ಹೊಂದುವುದರಿಂದಲೂ, ಅಥವಾ ಪುನಃ ಪುನಃ ಉತ್ಪನ್ನನಾದಾಗಲೆಲ್ಲಾ ಸಕಲ ಭೂತಗಳಿಂದಲೂ ತಿಳಿಯಲ್ಪಡುವವನಾದುದರಿಂದಲೂ ಮಧ್ಯಲೋಕವಾಸಿಯಾದ **ಇಂದ್ರನಂತೆ ಜಾತವೇದಸ್ಸೆಂದು ಅಗ್ನಿಯು** ಸ್ತುತನಾಗಿದ್ದಾನೆಂದು **ಬೃಹದ್ದೇವತೆಯ** ನಿರ್ವಚನವಿದೆ. **ಜಾತವೇದಸೇ** ಎಂದರೆ ಇಂತಹ ಸ್ವರೂಪವುಳ್ಳ ಅಗ್ನಿಗೆ ಎಂದರ್ಥ.

**ಇಮಂ ಸ್ತೋಮಂ ರಥಮಿವ ಸಂ ಮಹೇಮ—ಯಥಾ ತಕ್ಷಾ ರಥಂ ಸಂಸ್ಕರೋತಿ ತಥಾ ಸಮ್ಯಕ್ ಪೂಜಿತಂ ಕುರ್ಮಃ |** ರಥಕಾರನು ರಥವನ್ನು ನಾಜೂಕಾಗಿಯೂ ಸಂಚಾರಕಾಲದಲ್ಲಿ ಆಹ್ಲಾದವನ್ನುಂಟುಮಾಡುವಂತೆಯೂ ಇರುವಹಾಗೆ ಮಾಡುವ ರೀತಿಯಲ್ಲಿ ನಾವೂ ಸಹ ಸುಸಂಸ್ಕೃತವಾದ ಭಾಷೆಯಿಂದ ಶ್ರಾವ್ಯವಾಗಿರುವುದೂ ಶ್ರದ್ಧಾಯುಕ್ತವಾದ ಭಾವದಿಂದ ನಿಮಗೆ ಆಹ್ಲಾದವನ್ನುಂಟುಮಾಡುವುದೂ ಆದ ಸ್ತೋತ್ರಗಳನ್ನು ನಿಮಗೆ ಅರ್ಪಿಸಲು ಯೋಗ್ಯವಾದ ರೀತಿಯಲ್ಲಿ ನಿರ್ಮಿಸುವೆವು ಎಂದರ್ಥ. ಎಲ್ಲಾ ದೃಷ್ಟಿಯಿಂದಲೂ ಕಾವ್ಯಾತ್ಮಕವಾದ ಸ್ತೋತ್ರದ ರಚನೆಯನ್ನು ಅನೇಕಸಲ ರಥದ ನಿರ್ಮಾಣಕ್ಕೆ ಹೋಲಿಸಿ ಈ ಸ್ತೋತ್ರದ ಸೃಷ್ಟಿಗೆ ಕೌಶಲ್ಯವು ಎಷ್ಟು ಪ್ರಧಾನವೆಂಬುದನ್ನು ತೋರಿಸುವ ಉದಾಹರಣೆಗಳು ಕೆಲವಿವೆ—

**ಅಸ್ಮಾ ಇದು ಸ್ತೋಮಂ ಸಂ ಹಿನೋಮಿ ರಥಂ ನ ತಷ್ಟೇವ ತತ್ಸಿನಾಯ |**
( ಋ. ಸಂ. ೧-೬೧-೪ )

**ವಸ್ತ್ರೇವ ಭದ್ರಾ ಸುಕೃತಾ ವಸೂಯೂ ರಥಂ ನ ಧೀರಃ ಸ್ವಪಾ ಅತಕ್ಷಂ |**
( ಋ. ಸಂ. ೫-೨೯-೧೫ )

**ಏನೇದಿಂದ್ರಾಯ ವೃಷಭಾಯ ವೃಷ್ಣೇ ಬ್ರಹ್ಮಾಕರ್ಮ ಭೃಗವೋ ನ ರಥಂ |**
( ಋ. ಸಂ. ೪-೧೬-೨೦ )

**ಏತಂ ವಾಂ ಸ್ತೋಮಮಶ್ವಿನಾವಕರ್ಮಾತಕ್ಷಾಮ ಭೃಗವೋ ನ ರಥಂ |**
( ಋ. ಸಂ. ೧೦-೩೯-೧೪ )

ಇತ್ಯಾದಿ ಋಕ್ಕುಗಳಲ್ಲಿ ಕಾವ್ಯರೂಪವಾದ ಸ್ತೋತ್ರದ ನಿರ್ಮಾಣ ಕೌಶಲ್ಯಕ್ಕೂ ರಥದ ನಿರ್ಮಾಣ ಕೌಶಲ್ಯಕ್ಕೂ ಸಾದೃಶ್ಯವನ್ನು ತೋರಿಸಿ ಸ್ತೋಮಗಳ ಮಹಿಮೆಯನ್ನು ಕೊಂಡಾಡಿದೆ.

**ತವ ಸಖ್ಯೇ ವಯಂ ಮಾ ರಿಷಾಮ—**ಅಗ್ನಿಯ ಸ್ನೇಹವನ್ನು ಬೆಳೆಸಿ ಅವನನ್ನು ಉದ್ದೇಶಿಸಿ ಶ್ರದ್ಧೆಯಿಂದ ಯಾಗಮಾಡಿದರೆ ಅಗ್ನಿಯ ಸಹಾಯವು ಸಿದ್ಧವಾದುದರಿಂದ ಯಾವ ಶತ್ರುವೂ ಹಿಂಸಿಸಲಾರನು ಅಥವಾ ಇನ್ನು ಯಾವ ವಿಧವಾದ ಹಿಂಸೆಯೂ ಆಗಲಾರದು.

**ನ ತಸ್ಯ ಮಾಯಯಾ ಚನ ರಿಪುರೀಶೀತ ಮರ್ತ್ಯಃ ।**
**ಯೋ ಅಗ್ನಯೇ ದದಾಶ ಹವ್ಯದಾತಿಭಿಃ ॥**

( ಋ. ಸಂ. ೮-೨೩-೧೫ )

**ಮಾ ತೇ ಸಖಾಯಃ ಸದಮಿದ್ರಿಷಾಮ ಯಚ್ಛಾ ತೋಕಾಯ ತನಯಾಯ ಶಂ ಯೋಃ ।**

( ಋ. ಸಂ. ೪-೧೨-೫ )

ಇತ್ಯಾದಿ ಪ್ರಾರ್ಥನಾ ಕಾಲಗಳಲ್ಲೆಲ್ಲಾ ಅಗ್ನಿಯ ಸಖ್ಯವನ್ನು ಪಡೆದ ಯಜಮಾನನಿಗೆ ಯಾವ ಹಿಂಸೆಯೂ ಒದಗಲಾರದೆಂಬ ಭರವಸೆಯು ಕಾಣುತ್ತದೆ. ಈ ಸೂಕ್ತದ ಕೊನೆಯವರೆಗೂ ಈ ಆನುಪೂರ್ವಿಯು ಪಲ್ಲವಿಯಂತೆ ಪ್ರತಿಯೊಂದು ಋಕ್ಕಿನಲ್ಲಿಯೂ ನಾಲ್ಕನೆಯ ಪಾದವಾಗಿ ಪಠಿತವಾಗಿರುವುದು.

ವ್ಯಾಕರಣಪ್ರಕ್ರಿಯಾ

**ಅರ್ಹತೇ**— ಅರ್ಹ ಪೂಜಾಯಾಂ ಧಾತು. ಇದಕ್ಕೆ **ಅರ್ಹಃ ಪ್ರಶಂಸಾಯಾಮ್**— (ಪಾ. ಸೂ. ೩-೨-೧೩೩) ಎಂಬುದರಿಂದ ಪ್ರಾಶಸ್ತ್ಯತೋರುವಾಗ ಲಟಿಗೆ ಶತೃ ಆದೇಶ. ಶಪ್ ವಿಕರಣ ಅರ್ಹತ್ ಶಬ್ದವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ಶತೃ) **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ. ಚತುರ್ಥೀಏಕವಚನಾಂತರೂಪ.

**ಮಹೇಮ**—ಮಹ ಪೂಜಾಯಾಂ ಧಾತು. ವಿಧಿಲಿಙ್. ಉತ್ತಮ ಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂಙಿತಃ** ಎಂಬುದರಿಂದ ಸಕಾರಲೋಪ. ಯಾಸುಟಾಗಮ. ಶಪ್ ವಿಕರಣ. **ಅತೋಯೇಯಃ** ಎಂಬುದರಿಂದ ಯಾಸಿಗೆ ಇಯಾದೇಶ. ಯಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಸಖ್ಯೇ**—ಸಖ್ಯುಃ ಭಾವಃ ಸಖ್ಯಮ್. **ಸಖ್ಯುರ್ಯಃ** ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಏಕವಚನಾಂತರೂಪ.

**ರಿಷಾಮ**— ರಿಷ ಹಿಂಸಾಯಾಮ್ ಧಾತು. ದಿವಾದಿ ಲೋಡುತ್ತಮ ಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಲಙ್ವದ್ಭಾವವಿರುವುದರಿಂದ ಸಲೋಪ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಶವಿಕರಣ ಬರುತ್ತದೆ, **ಆಡುತ್ತಮಸ್ಯಪಿಚ್ಚ**— (ಪಾ. ಸೂ. ೩-೪-೯೨) ಎಂಬುದರಿಂದ ಆಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. **ಅನ್ಯೇಷಾಮಪಿದೃಶ್ಯತೇ** ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ತವ**— ಯುಷ್ಮತ್ ಶಬ್ದ. ಷಷ್ಠೀ ಏಕವಚನ ಪರವಾದಾಗ ಮಪರ್ಯಂತಕ್ಕೆ **ತವಮಮೌಙಸಿ** ಎಂಬುದರಿಂದ ತವ ಆದೇಶ. ಙಸ್ ಪ್ರತ್ಯಯಕ್ಕೆ ಅಶಾದೇಶ ಮಪರ್ಯಂತಕ್ಕೆ ಲೋಪ. **ಯುಷ್ಮದಸ್ಮದೋರ್ಙಸಿ**— (ಪಾ. ಸೂ. ೬-೧-೨೧೧) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ॥ ೧ ॥

ಸಂಹಿತಾಪಾಠಃ

ಯಸ್ಮೈ ತ್ವಮಾಯಜಸೇ ಸ ಸಾಧತ್ಯನರ್ವಾ ಕ್ಷೇತಿ ದಧತೇ ಸುವೀರ್ಯಂ ।
ಸ ತೂತಾವ ನೈನಮಶ್ನೋತ್ಯಂಹತಿರಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ ॥ ೨ ॥

ಪದಪಾಠಃ

ಯಸ್ಮೈ । ತ್ವಂ । ಆऽಯಜಸೇ । ಸಃ । ಸಾಧತಿ । ಅನರ್ವಾ । ಕ್ಷೇತಿ । ದಧತೇ । ಸುವೀऽರ್ಯಂ ।
ಸಃ । ತೂತಾವ । ನ । ಏನಂ । ಅಶ್ನೋತಿ । ಅಂಹತಿಃ । ಅಗ್ನೇ । ಸಖ್ಯೇ । ಮಾ । ರಿಷಾಮ । ವಯಂ । ತವ ॥ ೨ ॥

ಸಾಯಣಭಾಷ್ಯಂ

ಯಸ್ಮೈ ಯಜಮಾನಾಯ ಹೇ ಅಗ್ನೇ ತ್ವಮಾಯಜಸೇ ದೇವಾನಾಭಿಮುಖ್ಯೇನ ಯಜಸಿ ಸ ಯಜಮಾನಃ ಸಾಧತಿ । ಸ್ವಾಭಿಲಷಿತಂ ಸಾಧಯತಿ । ಪ್ರಾಪ್ನೋತೀತ್ಯರ್ಥಃ । ಕಿಂಚ ಸ ಯಜಮಾನೋऽನರ್ವಾ ಶತ್ರುಭಿರಪ್ರತ್ಯೃತಃ ಸನ್ ಕ್ಷೇತಿ । ನಿವಸತಿ । ತಥಾ ಸುವೀರ್ಯಂ ಶೋಭನವೀರ್ಯೋಪೇತಂ ಧನಂ ದಧತೇ । ಧಾರಯತಿ । ಪ್ರಾಪ್ನೋತೀತ್ಯರ್ಥಃ । ಧೃತ್ವಾ ಚ ಸ ಯಜಮಾನಸ್ತೂತಾವ । ವರ್ಧತೇ । ಏನಂ ಯಜಮಾನಮಂಹತಿರಾರ್ತಿರ್ದಾರಿದ್ರ್ಯಂ ನಾಶ್ನೋತಿ । ನ ಪ್ರಾಪ್ನೋತಿ । ಅನ್ಯತ್ಪೂರ್ವವತ್ ॥ ಸಾಧತಿ ॥ ಷಿಧು ಸಂರಾದ್ಧೌ । ಣಿಚಿ ಸಿಧ್ಯತೇರಪಾರಲೌಕಿಕೇ । ಪಾ. ೬.೧-೪೯ । ಇತ್ಯಾತ್ವಂ । ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿ ಲೋಪಃ । ಕ್ಷೇತಿ । ಕ್ಷಿ ನಿವಾಸಗತ್ಯೋಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ದಧತೇ । ದಧ ಧಾರಣೇ । ಭೌವಾದಿಕಃ । ತೂತಾವ । ತು ಇತಿ ವೃದ್ಧ್ಯರ್ಥಃ ಸೌತ್ರೋ ಧಾತುಃ । ಅಸ್ಮಾಚ್ಛಾಂದಸೋ ಲಿಟ್ । ತುಜಾದಿತ್ವಾದಭ್ಯಾಸಸ್ಯ ದೀರ್ಘತ್ವಂ । ಅಶ್ನೋತಿ । ವ್ಯತ್ಯಯೇನ ಪರಸ್ಮೈಪದಂ । ಅಂಹತಿಃ ಹಂತೇರಂಹ ಚ ಉ. ೪-೬೨ । ಇತ್ಯತಿಪ್ರತ್ಯಯಃ । ಚಿದಿತ್ಯನುವೃತ್ತೇರಂತೋದಾತ್ತತ್ವಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ, । **ತ್ವಂ**—ನೀನು । **ಯಸ್ಮೈ**—ಯಾವ ಯಜಮಾನನಿಗಾಗಿ । **ಆಯಜಸೇ**-(ದೇವತೆಗಳನ್ನು ಉದ್ದೇಶಿಸಿ) ಯಾಗ ಮಾಡುತ್ತೀಯೋ । **ಸಃ**—ಆ ಯಜಮಾನನು । **ಸಾಧತಿ**—(ತನ್ನ ಇಷ್ಟಾರ್ಥಗಳನ್ನು)ಪಡೆಯುತ್ತಾನೆ. । **ಅನರ್ವಾ**—(ಶತ್ರುಗಳಿಂದ ಸಂಭವಿಸುವ) ಮುತ್ತಿಗೆಯ ಭಯದಿಂದ ರಹಿತನಾಗಿ ; ಶತ್ರುಗಳ ಆಧೀನನಾಗುವುದನ್ನು ತಪ್ಪಿಸಿಕೊಂಡು, **ಕ್ಷೇತಿ**—(ನಿಶ್ಚಿಂತೆಯಿಂದ) ಜೀವಿಸುತ್ತಾನೆ. । **ಸುವೀರ್ಯಂ**-ಶ್ರೇಷ್ಠವಾದ ವೀರ್ಯಕ್ಕೆ ಸಾಧನನಾದ ಧನವನ್ನು । **ದಧತೇ**—ಹೊಂದುತ್ತಾನೆ । (ಅನಂತರ) । **ಸಃ**—ಆ ಯಜಮಾನನು । **ತೂತಾವ**—ಅಭಿವೃದ್ಧಿಯನ್ನು ಹೊಂದುತ್ತಾನೆ. । **ಏನಂ** ಈ ಯಜಮಾನನನ್ನು । **ಅಂಹತಿಃ**—ದಾರಿದ್ರ್ಯವು । **ನ ಅಶ್ನೋತಿ**—ಅಂಟುವುದಿಲ್ಲ. । **ಅಗ್ನೇ**—ಎಲೈ ಅಗ್ನಿಯೇ, । **ತವ ಸಖ್ಯೇ**—ನಿನ್ನೊಡನೆ ಸ್ನೇಹವಿರುವ ಕಾರಣ । **ವಯಂ**—ನಾವು । **ಮಾ ರಿಷಾಮ**—ಹಿಂಸಿತರಾಗದಿರುವಂತೆ (ಅನುಗ್ರಹಿಸು) ।

॥ ಭಾವಾರ್ಥ ॥

ಎಲೈ ಅಗ್ನಿಯೇ. ನೀನು ಯಾವ ಯಜಮಾನನಿಗಾಗಿ ದೇವತೆಗಳನ್ನು ಉದ್ದೇಶಿಸಿ ಯಾಗಮಾಡುತ್ತೀಯೋ ಆ ಯಜಮಾನನು ತನ್ನ ಇಷ್ಟಾರ್ಥಗಳನ್ನು ಪಡೆಯುತ್ತಾನೆ. ಶತ್ರುಗಳ ಮುತ್ತಿಗೆಯ ಭಯವಿಲ್ಲದೇ ನಿಶ್ಚಿಂತೆಯಿಂದ ಜೀವಿಸುತ್ತಾನೆ. ಶ್ರೇಷ್ಠವಾದ ವೀರ್ಯಕ್ಕೆ ಸಾಧನವಾದ ಧನವನ್ನು ಹೊಂದುತ್ತಾನೆ. ಅಭಿವೃದ್ಧಿಯನ್ನು ಪಡೆಯುತ್ತಾನೆ. ಅವನಿಗೆ ದಾರಿದ್ರ್ಯದ ಸಂಪರ್ಕವೇ ಇರುವುದಿಲ್ಲ. ಎಲೈ ಅಗ್ನಿಯೇ, ನಿನ್ನೊಡನೆ ಸ್ನೇಹವಿರುವ ಕಾರಣ ನಾವು ಹಿಂಸಿತರಾಗದಿರುವಂತೆ ಅನುಗ್ರಹಿಸಿ ರಕ್ಷಿಸು.

## English Translation

He for whom you sacrifice, accomplishes (his objects), abides free from aggression, and enjoys (wealth, the source of) strength ; he prospers and poverty never approaches him ; let us not suffer injury, through your friendship.

ವಿಶೇಷವಿಷಯಗಳು

**ತ್ವಂ ಯಸ್ಮೈ ಆಯಜಸೇ ಸಃ ಸಾಧತಿ**— ನೀನು ಯಾವ ಯಜಮಾನನಿಗಾಗಿ ದೇವತೆಗಳನ್ನು ಉದ್ದೇಶಿಸಿ ಯಾಗಮಾಡುತ್ತೀಯೋ ಆ ಯಜಮಾನನು ತನ್ನ ಇಷ್ಟಾರ್ಥಗಳನ್ನು ಪಡೆಯುತ್ತಾನೆಂದರ್ಥ. ಅಗ್ನಿಯು ಉತ್ಪನ್ನನಾದೊಡನೆಯೆ ಯಜ್ಞವನ್ನು ನಿರ್ಮಿಸಿ ಮಾನವರಿಗಾಗಿ ದೇವತೆಗಳನ್ನುದ್ದೇಶಿಸಿ ಯಜ್ಞಮಾಡುತ್ತಾನೆ. ಅವನೇ ಗೃಹಪತಿಯ ಪ್ರಾರ್ಥನೆಯನ್ನು ಅಂಗೀಕರಿಸಿ ಸಂದರ್ಭಾನುಸಾರವಾಗಿ ಪುರೋಹಿತನಾಗಿಯೂ ಋತ್ವಿಕ್ಕಾಗಿಯೂ, ಹೋತೃವಾಗಿಯೂ, ಬ್ರಹ್ಮನಾಗಿಯೂ ಇದ್ದುಕೊಂಡು ದೇವತೆಗಳಿಗೆ ಆಹುತಿಗಳನ್ನು ಅರ್ಪಿಸಿ ಅವರ ಅನುಗ್ರಹವು ಮನೆಯ ಯಜಮಾನನಿಗೆ ಲಭಿಸುವಂತೆ ಮಾಡುತ್ತಾನೆ. ಋ. ಸಂ. ೧-೧-೧ ; ೧-೧೨-೧ ; ೧-೧೩-೧ ; ೧-೭೪೪-೭ ; ಇತ್ಯಾದಿ ಅಗ್ನಿಪರವಾದ ಋಕ್ಕುಗಳು ಪಠಿತವಾಗುವ ಸುಮಾರು ಇನ್ನೂರು ಸಂದರ್ಭಗಳಲ್ಲಿ ಯಜ್ಞಗಳಲ್ಲಿ ಅಗ್ನಿಯು ಮುಖ್ಯಪಾತ್ರವು ವರ್ಣಿತವಾಗಿದೆ. ಇವನೇ ಯಜ್ಞಾತ್ಮನಾದುದರಿಂದಲೂ ದೇವತೆಗಳ ತೃಪ್ತಿಗೆ ಪೂರ್ಣವಾದ ಕಾರಣನಾದುದರಿಂದಲೂ ಸಕಲವಿಧವಾದ ದೇವತೆಗಳ ಅನುಗ್ರಹವೂ ಇವನ ಮೂಲಕವಾಗಿ ಸಾಧಿಸಬಹುದೆಂದು ಅಭಿಪ್ರಾಯವು.

**ಅನರ್ವಾ— ಅನರ್ವಾऽಪ್ರತ್ಯೃತೋऽನ್ಯಸ್ಮಿನ್** (ನಿ. ೬-೨೩) ಇತರರ ಆಶ್ರಯವೂ ಅಧೀನವೂ ಇಲ್ಲದಿರುವುದು ಎಂಬರ್ಥದಲ್ಲಿ ಈ ಪದವು ಅನೇಕ ಸಂದರ್ಭಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಋ. ಸಂ. ೨-೪೦-೬ ; ೪-೧೭-೨೦ ; ೫-೪೯-೪ ; ೭-೨೦-೩ ; ೧೦-೬೧-೫ ಇತ್ಯಾದಿ ಋಕ್ಕುಗಳಲ್ಲಿ ವರ್ಣಿತಗಳಾದ ದೇವತೆಗಳು ಶತ್ರುಗಳಿಂದ ಅಪ್ರತಿಹತರಾಗಿ, ಅವರ ಅಧೀನರಾಗದೇ ತಮ್ಮ ಪರಾಕ್ರಮವನ್ನು ತೋರಿಸುವವರು ಎಂಬರ್ಥವನ್ನು ಕೊಡುತ್ತದೆ. ಅದರಂತೆಯೇ ಇಲ್ಲಿಯೂ ಸಹ ಅಗ್ನಿಯ ಅನುಗ್ರಹವನ್ನು ಪಡೆದ ಯಜಮಾನನು ಶತ್ರುಗಳಿಂದ ಜಿತನಾಗದೆಯೂ, ಅವರ ಅಧೀನನಾಗದೆಯೂ ಸ್ವತಂತ್ರವಾಗಿ ಜೀವಿಸುತ್ತಾನೆಂದರ್ಥವು.

**ಕ್ಷೇತಿ**—ಸ್ವತಂತ್ರವಾಗಿ ತನ್ನ ನಿವಾಸಸ್ಥಾನದಲ್ಲಿಯೇ ವಾಸಮಾಡುತ್ತಾ ಸುಖದಿಂದಿರುತ್ತಾನೆಂದಭಿಪ್ರಾಯ.

**ತೂತಾವ**—ವೃದ್ಧಿಯಾಗು ಅಥವಾ ಶಕ್ತಿಯನ್ನು ಹೊಂದು ಎಂದರ್ಥವನ್ನು ಕೊಡುವ **ತು** ಎಂಬ ಧಾತುವಿನಿಂದ **ತೂತಾವ** ಎಂದಾಗಿದೆ. ವೃದ್ಧಿಯನ್ನು ಪಡೆದನು ಅಥವಾ ಶಕ್ತಿಯನ್ನು ಪಡೆದನು ಎಂದಭಿಪ್ರಾಯವು.

**ಅಂಹತಿಃ— ಅಂಹತಿಶ್ಚಾಂಹುಶ್ಚಾಂಹಶ್ಚ ಹಂತೇಃ** (ನಿ.೪-೨೫) **ಹನ್** ಧಾತುವಿನಿಂದ ಅಂಹತಿ ಶಬ್ದದ ನಿಷ್ಪತ್ತಿಯು ಆಗಿದೆ. ಹಿಂಸೆಮಾಡು, ದುಃಖಪಡಿಸು ಎಂದಾಗುತ್ತದೆ. ಇಲ್ಲಿ ದಾರಿದ್ರ್ಯರೂಪವಾದ ದುಃಖವು ಎಂದಭಿಪ್ರಾಯವು. ಅಗ್ನಿಯ ಅನುಗ್ರಹವನ್ನು ಪಡೆದ ಯಜಮಾನನಿಗೆ **ಅಂಹತಿಃ ನಾಶ್ನೋತಿ** ದಾರಿದ್ರ್ಯವು ಅಂಟುವುದೇ ಇಲ್ಲ ಎಂದರ್ಥ.

### ವ್ಯಾಕರಣಪ್ರಕ್ರಿಯಾ

**ಯಜಸೇ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಲಟ್ ಮಧ್ಯಮಪುರುಷ ಏಕವಚನ ರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿರುವುದರಿಂದ ಪ್ರತ್ಯಯವು ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

**ಸಾಧತಿ**—ಷಿದು ಸಂರಾದ್ಧೌ ಧಾತು. ಇದಕ್ಕೆ **ಹೇತುಮತಿ ಚ** ಎಂಬುದರಿಂದ ಪ್ರಯೋಜಕವ್ಯಾಪಾರ ತೋರುವುದರಿಂದ ಣಿಚ್ ಬರುತ್ತದೆ. ಣಿಚ್ ಪರವಾದಾಗ **ಸಿಧ್ಯತೇರಪಾರಲೌಕಿಕೇ**— (ಪಾ. ಸೂ.೬-೧-೪೯) ಎಂಬುದರಿಂದ ಆತ್ವ. **ಛಂದಸ್ಯುಭಯಥಾ** ಎಂಬುದರಿಂದ ಶಪಿಗೆ ಆರ್ಧಧಾತುಕ ಸಂಜ್ಞೆ ಬರುವುದರಿಂದ ತನ್ನಿಮಿತ್ತವಾಗಿ ಣಿಚಿಗೆ **ಣೇರನಿಟಿ** ಎಂಬುದರಿಂದ ಲೋಪ ತಿಙಂತನಿಘಾತಸ್ವರ ಬರುತ್ತದೆ.

**ಕ್ಷೇತಿ** – ಕ್ಷಿ ನಿವಾಸಗತ್ಯೋಃ ಧಾತು. ಭ್ವಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶಪಿಗೆ) ಲುಕ್ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅತಿಙಂತದ ಪರದಲ್ಲಿ ರುವುದರಿಂದ ನಿಘಾತಸ್ವರ ಬರುತ್ತದೆ.

**ಧಧತೇ**— ದಧ ಧಾರಣೇ ಧಾತು. ಭ್ವಾದಿ ಅನುದಾತ್ತೇತ್ತಾದುದರಿಂದ ಆತ್ಮನೇಪದೀ. ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ತೇ) **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತು ಸ್ವರ ಉಳಿಯುತ್ತದೆ.

**ಸುವೀರ್ಯಮ್**— ಬಹುವ್ರೀಹಿಯಲ್ಲಿ ಸುವಿನ ಸ್ವರವು ಬಾಧಿತವಾಗಿ **ವೀರವೀರ್ಯೌಚ** ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ತೂತಾವ**— ತು ಎಂಬುದು ಸೂತ್ರಪಠಿತವಾದ ಧಾತು. ವೃದ್ಧ್ಯರ್ಥದಲ್ಲಿದೆ. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಿಟ್ ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಣಿತ್ ಪ್ರತ್ಯಯ ಪರವಾದುದರಿಂದ **ಅತ ಉಪಧಾಯಾಃ** ಎಂಬುದರಿಂದ ಉಪಧಾವೃದ್ಧಿ. ತುಜಾದಿಯಲ್ಲಿ ಸೇರಿರುವುದರಿಂದ **ತುಜಾದೀನಾಂ ದೀರ್ಘೋಽಭ್ಯಾಸಸ್ಯ**—(ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಶ್ನೋತಿ**— ಅಶೂ ವ್ಯಾಪ್ತೌ ಧಾತು. ಸ್ವಾದಿ **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಂಹತಿಃ**— ಹನ ಹಿಂಸಾಗತ್ಯೋಃ ಧಾತು. ಇದಕ್ಕೆ **ಹಂತೇರಂಹಚ**— (ಉ. ಸೂ. ೪-೫೦೨) ಎಂಬದರಿಂದ ಅತಿ ಪ್ರತ್ಯಯ. ತತ್ಸನ್ನಿನಿಯೋಗದಿಂದ ಧಾತುವಿಗೆ ಅಂಹ ಎಂಬ ಆದೇಶ. **ವಹಿವಸ್ಯ**—(ಉ ಸೂ. ೪-೫೦೦) ಎಂಬುದರಿಂದ ಚಿತ್ ಎಂದು ಅನುವೃತ್ತವಾಗುವುದರಿಂದ **ಚಿತಃ** ಸೂತ್ರದಿಂದ ಅಂತೋದಾತ್ತವಾಗುತ್ತದೆ.

---

॥ ಸಂಹಿತಾಪಾಠಃ ॥

ಶಕೇಮ ತ್ವಾ ಸಮಿಧಂ ಸಾಧಯಾ ಧಿಯಸ್ತ್ವೇ ದೇವಾ ಹವಿ-
ರದನ್ತ್ಯಾಹುತಂ ।
ತ್ವಮಾದಿತ್ಯಾಁ ಆ ವಹ ತಾನ್ಹ್ಯು೧ಶ್ಮಸ್ಯಗ್ನೇ ಸಖ್ಯೇ ಮಾ ರಿಷಾ-
ಮಾ ವಯಂ ತವ ॥ ೩ ॥

ಪದಪಾಠಃ

ಶಕೇಮ । ತ್ವಾ । ಸಂऽಇಧಂ । ಸಾಧಯ । ಧಿಯಃ । ತ್ವೇ ಇತಿ । ದೇವಾಃ ।
ಹವಿಃ । ಅದಂತಿ । ಆऽಹುತಂ ।
ತ್ವಂ । ಆದಿತ್ಯಾನ್ । ಆ । ವಹ । ತಾನ್ । ಹಿ । ಉಶ್ಮಸಿ । ಅಗ್ನೇ । ಸಖ್ಯೇ । ಮಾ ।
ರಿಷಾಮ । ವಯಂ । ತವ । ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಾತ್ವಾಂ ಸಮಿಧಂ ಸಮ್ಯಗಿದ್ಧಂ ಕರ್ತುಂ ಶಕೇಮ । ಶಕ್ತಾ ಭೂಯಾಸ್ಮ । ತ್ವಂ ಚ ಧಿಯೋಽಸ್ಮದೀಯಾನಿ ದರ್ಶಪೂರ್ಣಮಾಸಾದೀನಿ ಕರ್ಮಾಣಿ ಸಾಧಯ । ನಿಷ್ಪಾದಯ । ತ್ವಯಾ ಹಿ ಸರ್ವೇ ಯಾಗಾ ನಿಷ್ಪಾದ್ಯಂತೇ । ಯಸ್ಮಾತ್ತ್ವೇ ತ್ವಯ್ಯಗ್ನಾವಾಹುತಂ ಋತ್ವಿಗ್ಭಿಃ ಪ್ರಕ್ಷಿಪ್ತಂ ಚರುಪುರೋಡಾಶಾದಿಕಂ ಹವಿರ್ದೇವಾ ಅದಂತಿ ಭಕ್ಷಯಂತಿ । ತಸ್ಮಾತ್ತ್ವಂ ಸಾಧಯೇತ್ಯರ್ಥಃ । ಅಪಿ ಚ ತ್ವಮಾದಿತ್ಯಾನದಿತೇಃ ಪುತ್ರಾನ್ ಸರ್ವಾನ್ದೇವಾನಾ ವಹ । ಅಸ್ಮದ್ಯಜ್ಞಾರ್ಥಮಾನಯ । ತಾನ್ಹೀದಾನೀಮೇವ ವಯಮುಶ್ಮಸಿ । ಕಾಮಯಾಮಹೇ । ಅನ್ಯತ್ಪೂರ್ವವತ್ ॥ ಶಕೇಮ । ಶಕ್ಲೃ ಶಕ್ತೌ । ಲಿಙ್ಯಾಶಿಷ್ಯಙ್ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇಽಙ ಏವ ಸ್ವರಃ ಶಿಷ್ಯತೇ । ಸಮಿಧಂ । ಞಿಇಂಧೀ ದೀಪ್ತೌ । ಅಸ್ಮಾತ್ಸಂಪದಾದಿಲಕ್ಷಣಃ ಕರ್ಮಣಿ ಕ್ವಿಪ್ । ತ್ವೇ । ಸುಪಾಂ ಸುಲುಗಿತಿ ಸಪ್ತಮ್ಯೇಕವಚನಸ್ಯ ಶೇ ಆದೇಶಃ । ಉಶ್ಮಸಿ । ವಶ ಕಾಂತೌ । ಇದಂತೋ ಮಸಿಃ । ಅದಾದಿತ್ವಾಚ್ಛಪೋ ಲುಕ್ । ಗ್ರಹಿಜ್ಯೇತ್ಯಾದಿನಾ ಸಂಪ್ರಸಾರಣಂ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ, । ತ್ವಾ—ನಿನ್ನನ್ನು । ಸಮಿಧಂ -- ಪ್ರಜ್ವಲಿತನನ್ನಾಗಿ ಮಾಡಲು । ಶಕೇಮ-ನಾವು ಶಕ್ತರಾಗುವಂತಾಗಲಿ. । ಧಿಯಃ—ನಮ್ಮ (ದರ್ಶಪೂರ್ಣಮಾಸಾದಿ) ಕರ್ಮಗಳನ್ನು । ಸಾಧಯ—ಸಂಪಾದಿಸು. [ನೆರವೇರಿಸು] (ಏತಕ್ಕೆಂದರೆ) । ತ್ವೇ—ನಿನ್ನಲ್ಲಿ । ಆಹುತಂ—(ಅರ್ಪಿಸಿದ) ಆಹುತಿಯಾದಿದ । ಹವಿಃ—(ಚರುಪುರೋಡಾಶಾದಿ) ಹವಿಸ್ಸುಗಳನ್ನು । ದೇವಾಃ—ದೇವತೆಗಳು । ಅದಂತಿ—ಸೇವಿಸುತ್ತಾರೆ । ತ್ವಂ—ನೀನು । ಆದಿತ್ಯಾನ್—ಅದಿತಿ ಪುತ್ರರಾದ ಸಕಲ ದೇವತೆಗಳನ್ನು । ಆ ವಹ—(ಯಜ್ಞಕ್ಕೆ) ಕರೆದುಕೊಂಡು ಬಾ । ಹಿ—ಏತಕ್ಕೆಂದರೆ । ತಾನ್—ಅವರನ್ನು । ಉಶ್ಮಸಿ—ನಾವು ಬಯಸುತ್ತೇವೆ । ಅಗ್ನೇ—ಎಲೈ ಅಗ್ನಿಯೇ । ತವ—ನಿನ್ನೊಡನೆ । ಸಖ್ಯೇ—ಸ್ನೇಹವಿರಲಾಗಿ । ವಯಂ—ನಾವು । ಮಾರಿಷಾಮ—(ಯಾವ) ಹಿಂಸೆಯನ್ನು ಅನುಭವಿಸದಿರುವಂತಾಗಲಿ ॥

ಭಾವಾರ್ಥ

ಎಲೈ ಅಗ್ನಿಯೇ, ನಿನ್ನನ್ನು ಪ್ರಜ್ವಲಿಸುವಂತೆ ಮಾಡುವ ಶಕ್ತಿಯನ್ನು ನಮಗೆ ಕೊಡು. ನಿನ್ನಲ್ಲಿ ಹೋಮ ಮಾಡಿದ ಚರುಪುರೋಡಾಶಾದಿಗಳನ್ನೇ ದೇವತೆಗಳು ಸೇವಿಸುವುದರಿಂದ ನಮ್ಮ ದರ್ಶಪೂರ್ಣಮಾಸಾದಿಯಾಗಕರ್ಮಗಳನ್ನು ನೆರವೇರಿಸು. ನಾವು ಪ್ರೀತಿಸಿ ಬಯಸುವ ಸಕಲರಾದ ಅದಿತಿಪುತ್ರರಾದ ದೇವತೆಗಳನ್ನೂ ನಮ್ಮ ಯಾಗಕ್ಕೆ ಕರೆದುಕೊಂಡು ಬಾ. ಎಲೈ ಅಗ್ನಿಯೇ, ನಿನ್ನೊಡನೆ ನಮ್ಮ ಸ್ನೇಹವಿರುವುದರಿಂದ ನಮಗೆ ಯಾವ ಹಿಂಸೆಯೂ ಉಂಟಾಗದಿರಲಿ.

## English Translation

May we be able to kindle you ; make the rite perfect, for through you the gods partake of the offered oblations ; bring hither the Aditayas, for we love them ; let us not suffer injury, through your friendship.

॥ ವಿಶೇಷವಿಷಯಗಳು ॥

**ಧಿಯಃ— ಅಪಃ, ಅಪ್ನಃ, ದಂಸಃ—** ಇತ್ಯಾದಿ ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೧) **ಧಿಯಃ** ಎಂದರೆ ಕರ್ಮಗಳನ್ನು ಎಂದರ್ಥ. ಪ್ರಕೃತದಲ್ಲಿ ನಮ್ಮ ದರ್ಶಪೂರ್ಣಮಾಸಾದಿ ಕರ್ಮಗಳು ನೆರವೇರುವಂತೆ ಸಹಾಯಮಾಡು ಎಂಬ ಪ್ರಾರ್ಥನೆ.

**ಉಶ್ಮಸಿ— ವಶ್ಮಿ, ಉಶ್ಮಸಿ, ವೇತಿ** ಇತ್ಯಾದಿ ಹದಿನೆಂಟು ಕಾಂತಿಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೨-೯ ) ಇಲ್ಲಿ ಅಪೇಕ್ಷಿಸುತ್ತೇವೆ ಎಂದರ್ಥ.

**ಆದಿತ್ಯಾನ್— ಆದಿತ್ಯಃ ಕಸ್ಮಾದಾದತ್ತೇ ರಸಾನಾದತ್ತೇ ಭಾಸಂ ಜ್ಯೋತಿಷಾಮಾದೀಪ್ತೋ ಭಾಸಾ ಇತಿ ವಾದಿತೇಃ ಪುತ್ರ ಇತಿ ವಾ ।** ( ನಿ. ೨-೧೩ ) ರಸಗಳನ್ನು ಸ್ವೀಕರಿಸುತ್ತಾನೆ (ಹಿಂಡುತ್ತಾನೆ) ಎಂದಾಗಲಿ, ಜ್ಯೋತಿರ್ಮಂಡಲಗಳ ಪ್ರಕಾಶವನ್ನು ಸ್ವೀಕರಿಸುತ್ತಾನೆ (ತನ್ನಕಾಂತಿಯಿಂದ ಮರೆಸುತ್ತಾನೆ) ಎಂದಾಗಲಿ, ತನ್ನಕಾಂತಿಯಿಂದ ಪ್ರಕಾಶಿಸುತ್ತಾನೆ ಎಂದಾಗಲಿ, ಅಥವಾ ಅದಿತಿಪುತ್ರನೆಂದಾಗಲಿ **ಆದಿತ್ಯ** ಶಬ್ದಕ್ಕೆ ಅರ್ಥವಾಗುತ್ತದೆ. ಸೂರ್ಯನಿಗೆ ಪರ್ಯಾಯ ಶಬ್ದವಾದುದರಿಂದ ಇವುಗಳಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು. ಆದರೆ ಈ ಋಕ್ಕಿನಲ್ಲಿ **ಆದಿತ್ಯಾನ್** ಎಂದು ಬಹುವಚನವಿರುವುದರಿಂದ **ಆದಿತ್ಯ** ಶಬ್ದವು ಸೂರ್ಯನಿಗೇ ಅಲ್ಲದೆ ಇತರ ದೇವತೆಗಳಿಗೂ ಅನ್ವಯಿಸುತ್ತದೆ ಎಂದು ತಿಳಿಯಬೇಕು. ನಿರುಕ್ತಕಾರರೇ ಇದನ್ನು ವಿವರಿಸುತ್ತಾ **ಏವಮನ್ಯಾಸಾಮಪಿ ದೇವತಾನಾಮಾದಿತ್ಯಪ್ರವಾದಾಃ ಸ್ತುತಯೋ ಭವಂತಿ ತದ್ಯಥೈತನ್ಮಿತ್ರಸ್ಯ ವರುಣಸ್ಯಾರ್ಯಮ್ಣೋ ದಕ್ಷಸ್ಯ ಭಗಸ್ಯಾಂಶಸ್ಯೇತಿ ।** (ನಿ. ೨-೧೩) ಆದಿತ್ಯಪದವಾದ ಸ್ತುತಿಗಳು ಮಿತ್ರನಿಗೂ, ವರುಣನಿಗೂ, ಅರ್ಯಮನಿಗೂ, ದಕ್ಷನಿಗೂ, ಭಗನಿಗೂ, ಅಂಶನಿಗೂ ಅನ್ವಯಿಸುತ್ತವೆಂದು ತಿಳಿಸಿ ಉದಾಹರಣೆಗಳನ್ನು ಕೊಡುತ್ತಾರೆ. ಋಕ್ಸಂಹಿತೆಯಲ್ಲಿ ಆದಿತ್ಯಪದವಾದ—

**ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।**

**ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥**

( ಋ. ಸಂ. ೨-೨೭-೧ )

ಎಂಬ ಈ ಋಕ್ಕಿನಲ್ಲಿ ಮಿತ್ರ, ಅರ್ಯಮ, ಭಗ, ವರುಣ, ದಕ್ಷ ಮತ್ತು ಅಂಶ ಎಂಬುದಾಗಿ ಆದಿತ್ಯರು ಆರುಮಂದಿಯೆಂದು ವಿವರಿಸಿದೆ ಆದರೆ,

**ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾಯೇಂದೋ ಪರಿಸ್ರವ ।**

(ಋ. ಸಂ. ೯-೧೧೪-೩)

**ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವಸ್ಪರಿ ।**

( ಋ. ಸಂ. ೧೦-೭೨-೮ )

ಎಂಬ ಋಕ್ಕಿನಲ್ಲಿ ಅದಿತಿಪುತ್ರರು ಎಂಟುಮಂದಿಯೆಂದು ಸೂಚಿಸಿದೆ. ಈಗ ರೂಢಿಯಲ್ಲಿರುವ **ದ್ವಾದಶಾದಿತ್ಯರ** ಸಂಖ್ಯೆಯು ಹನ್ನೆರಡಕ್ಕೆ ಹೇಗೆ ಬೆಳೆಯಿತೆಂದು ಉದಾಹರಣೆಗಳೊಡನೆ ಮುಂದೆ ತಿಳಿಸಲಾಗುತ್ತದೆ.

## ವ್ಯಾಕರಣಪ್ರಕ್ರಿಯಾ

**ಶಕೇಮ**— ಶಕ್ಲೃ ಶಕ್ತೌ ಧಾತು. ಆಶೀರ್ಲಿಙ್. ಉತ್ತಮ ಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಕ್ಕೆ ಲೋಪ. **ಲಿಙ್ಯಾಶಿಷ್ಯಙ್**— (ಪಾ. ಸೂ. ೩-೧-೮೬) ಎಂಬುದರಿಂದ ಧಾತುವಿಗೆ ಅಙ್. ಅದುಪದೇಶದ ಪರದಲ್ಲಿರುವುದರಿಂದ **ತಾಸ್ಯನುದಾತ್ತೇತ್** ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಆಗ ಅಙ್ ಸ್ವರ ಉಳಿಯುವುದರಿಂದ ಮಧ್ಯೋದಾತ್ತವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಸಮಿಧಂ**— ಞಿಇಂಧೀ ದೀಪ್ತೌ ಧಾತು. **ಸಂಪದಾದಿಭ್ಯಃಕ್ವಿಪ್** ಎಂಬುದರಿಂದ ಸಂಪದಾದಿಯಲ್ಲಿ ಸೇರುವುದರಿಂದ ಕರ್ಮಣಿಯಲ್ಲಿ ಕ್ವಿಪ್. **ಅನಿದಿತಾಂ** ಸೂತ್ರದಿಂದ ಉಪಧಾ ನ ಕಾರಕ್ಕೆ ಲೋಪ. ಧಕಾರಾಂತ ಶಬ್ದವಾಗುತ್ತದೆ. ದ್ವಿತಿಯಾ ಏಕವಚನಾಂತರೂಪ.

**ಅದಂತಿ**— ಅದ ಭಕ್ಷಣೇ ಧಾತು. ಲಟ್. ಪ್ರಥಮ ಪುರುಷ ಬಹುವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆದಿತ್ಯಾನ್—ದೀರ್ಘಾದಟಿ ಸಮಾನಪಾದೇ** ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿ ನಿತ್ಯಮ್** ಎಂಬುದರಿಂದ ಆಕಾರಕ್ಕೆ ಅನುನಾಸಿಕತ್ವ.

**ತ್ವೇ**— ಯುಷ್ಮದ್ ಶಬ್ದ. ಸಪ್ತಮೀಏಕವಚನದಲ್ಲಿ ಮಪರ್ಯಂತಕ್ಕೆ ತ್ವಾದೇಶ. **ಶೇಷೇ ಲೋಪಃ** ಎಂಬುದರಿಂದ ಅದಿಗೆ ಲೋಪ. **ಸುಪಾಂ ಸುಲುಕ್**— ಎಂಬುದರಿಂದ ವಿಭಕ್ತಿಗೆ ಶೇ ಆದೇಶ.

**ಉಶ್ಮಸಿ**— ವಶ ಕಾಂತೌ ಧಾತು. ಅದಾದಿ ಲಟ್ ಉತ್ತಮ ಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ **ಅದಿಪ್ರಭೃತಿಭ್ಯಃಶಪಃ** ಎಂಬುದರಿಂದ ಶಪಿಗೆ ಲುಕ್ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ **ಗ್ರಹಿಜ್ಯಾವಯಿ**— (ಪಾ. ಸೂ. ೬-೧-೧೬) ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. **ಇದಂತೋಮಸಿ**— (ಪಾ. ಸೂ. ೭-೧-೪೬)

ಎಂಬುದರಿಂದ ಮಸಿಗೆ ಇಕಾಗಮ. **ಹಿಚಿ**—(ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ. ॥ ೩ ॥

——:O:——

ಸಂಹಿತಾಪಾಠಃ

ಭರಾಮೇಧ್ಮಂ ಕೃಣವಾಮಾ ಹವೀಂಷಿ ತೇ ಚಿತಯಂತಃ ಪರ್ವ-
ಣಾಪರ್ವಣಾ ವಯಂ।
ಜೀವಾತವೇ ಪ್ರತರಂ ಸಾಧಯಾ ಧಿಯೋಽಗ್ನೇ ಸಖ್ಯೇ ಮಾ
ರಿಷಾಮಾ ವಯಂ ತವ ॥ ೪ ॥

ಪದಪಾಠಃ

ಭರಾಮ । ಇಧ್ಮಂ । ಕೃಣವಾಮ । ಹವೀಂಷಿ । ತೇ । ಚಿತಯಂತಃ । ಪರ್ವ-
ಣಾಽಪರ್ವಣಾ । ವಯಂ ।
ಜೀವಾತವೇ । ಪ್ರಽತರಂ । ಸಾಧಯ । ಧಿಯಃ । ಅಗ್ನೇ । ಸಖ್ಯೇ । ಮಾ । ರಿ-
ಷಾಮ । ವಯಂ । ತವ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವದ್ಯಾಗಾರ್ಥಮಿಧ್ಮಮಿಂಧನಸಾಧನಮೇಕವಿಂಶತಿದಾರ್ವಾತ್ಮಕಂ ಸಮಿತ್ಸಮೂಹಂ ಭರಾಮ । ಸಂಪಾದಯಾಮ । ತದನಂತರಂ ತೇ ತುಭ್ಯಂ ಹವೀಂಷಿ ಚರುಪುರೋಡಾಶಾದೀನ್ಯನ್ನಾನಿ ವಯಂ ಕೃಣವಾಮ । ಕರವಾಮ । ಕಿಂ ಕುರ್ವಂತಃ । ಪರ್ವಣಾ ಪರ್ವಣಾ ಪ್ರತಿಪಕ್ಷಮಾವೃತ್ತಾಭ್ಯಾಂ ದರ್ಶಪೂರ್ಣಮಾಸಾಭ್ಯಾಂ ಚಿಂತಯಂತಸ್ತ್ವಾಂ ಪ್ರಜ್ಞಾಪಯಂತಃ । ಸ ತ್ವಂ ಜೀವಾತವೇಽಸ್ಮಾಕಂ

**ಜೀವನೌಷಧಾಯ ಚಿರಕಾಲಾವಸ್ಥಾನಾಯ ಧಿಯಃ ಕರ್ಮಾಣ್ಯಗ್ನಿಹೋತ್ರಾದೀನಿ ಪ್ರತರಂ ಪ್ರಕೃಷ್ಟತರಂ ಸಾಧಯ। ನಿಷ್ಪಾದಯ। ಅನ್ಯತ್ಸಮಾನಂ॥ ಚಿತಯಂತಃ। ಚಿತೀ ಸಂಜ್ಞಾನೇ। ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾಲ್ಲಘೂಪಧಗುಣಾಭಾವಃ। ಪರ್ವಣಾ ಪರ್ವಣಾ। ನಿತ್ಯವೀಪ್ಸಯೋರಿತಿ ವೀಪ್ಸಾಯಾಂ ದ್ವಿರ್ಭಾವಃ। ತಸ್ಯ ಪರಮಾಮ್ರೇಡಿತಮಿತಿ ಪರಸ್ಯಾಮ್ರೇಡಿತಸಂಜ್ಞಾಯಾಮನುದಾತ್ತಂ ಚೇತ್ಯನುದಾತ್ತತ್ವಂ। ಪ್ರತರಂ ತರಬಂತಾತ್ಪ್ರಶಬ್ದಾತ್ಕಿಮೇತ್ತಿಙವ್ಯಯಾಪ್ರಕರ್ಷೇ ವರ್ತಮಾನಾದಮು ಚ ಚ್ಛಂದಸಿ। ಪಾ. ೫-೪-೧೨। ಇತ್ಯಮುಪ್ರತ್ಯಯಃ॥**

ಪ್ರತಿಪದಾರ್ಥ

(ಅಗ್ನೇ—ಎಲೈ ಅಗ್ನಿಯೇ) । **ಇಧ್ಮಂ**— (ನಿನ್ನನ್ನು ಪ್ರಜ್ವಲಿತನನ್ನಾಗಿ ಮಾಡುವುದಕ್ಕೆ) ಸಮಿತ್ತುಗಳ ಕಟ್ಟನ್ನು । **ಭರಾಮ**—ಸಂಪಾದಿಸುತ್ತೇವೆ । **ತೇ**—ನಿನಗೆ। **ಪರ್ವಣಾ ಪರ್ವಣಾ**—ದರ್ಶಪೂರ್ಣಮಾಸಾದಿ ಕರ್ಮಗಳಿಂದ (ಪಕ್ಷಕಾಲಗಳನ್ನು) । **ಚಿತಯಂತಃ**—ಜ್ಞಾಪಿಸುತ್ತಾ । **ಹವೀಂಷಿ**—ಚರುಪುರೋಡಾಶಾದಿ ಹವಿಸ್ಸುಗಳನ್ನು । **ವಯಂ**—ನಾವು । **ಕೃಣವಾಮ**—ಅರ್ಪಿಸುತ್ತೇವೆ । **ಜೀವಾತವೇ**—(ನಾವು) ಚಿರಕಾಲ ಬದುಕುವುದಕ್ಕಾಗಿ। **ಧಿಯಃ**—(ನಮ್ಮ ಅಗ್ನಿಹೋತ್ರಾದಿ) ಕರ್ಮಗಳನ್ನು । **ಪ್ರತರಂ**—ಅತ್ಯುತ್ಕೃಷ್ಟತರವಾಗಿ । **ಸಾಧಯ**—ಸಂಪಾದಿಸು । **ಅಗ್ನೇ**—ಎಲೈ ಅಗ್ನಿಯೇ । **ತವ ಸಖ್ಯೇ**—ನಿನ್ನೊಡನೆ ಸ್ನೇಹವಿರುವುದರಿಂದ । **ವಯಂ**—ನಾವು । **ಮಾ ರಿಷಾಮ**—ಯಾವ ಹಿಂಸೆಯನ್ನೂ ಅನುಭವಿಸದಿರುವಂತಾಗಲಿ ॥

ಭಾವಾರ್ಥ

ಎಲೈ ಅಗ್ನಿಯೇ ನಿನ್ನನ್ನು ಹೊತ್ತಿಸುವುದಕ್ಕಾಗಿ ನಾವು ಸಮಿತ್ತುಗಳ ಕಟ್ಟನ್ನು ಸಂಪಾದಿಸುತ್ತೇವೆ. ನಿನಗೆ ದರ್ಶಪೂರ್ಣಮಾಸಾದಿಕರ್ಮಗಳಿಂದ ಪಕ್ಷಕಾಲಗಳನ್ನು ಜ್ಞಾಪಿಸುತ್ತಾ ಚರುಪುರೋಡಾಶಾದಿ ಹವಿಸ್ಸುಗಳನ್ನು ಅರ್ಪಿಸುತ್ತೇವೆ. ನಾವು ಚಿರಕಾಲ ಬದುಕುವುದಕ್ಕಾಗಿ ನಮ್ಮ ಅಗ್ನಿಹೋತ್ರಾದಿ ಕರ್ಮಗಳನ್ನು ಉತ್ಕೃಷ್ಟತರವಾಗಿ ಸಂಪಾದಿಸು. ನಿನ್ನೊಡನೆ ನಮಗೆ ಸ್ನೇಹವಿರುವುದರಿಂದ ನಮಗೆ ಯಾವ ಹಿಂಸೆಯೂ ಆಗದಿರುವಂತೆ ಅನುಗ್ರಹಿಸು.

English Translation

We bring fuel, we offer oblations, reminding you of the successive seasons (of worship); thoroughly complete the rite in order to prolong our lives; Agni, let us not suffer injury through four freindship.

ವಿಶೇಷ ವಿಷಯಗಳು

**ಇಧ್ಮಂ— ಇಧ್ಮಃ ಸಮಿಂಧನಾತ್ । (ನಿ. ೮-೪)** ಉರಿಸು. ಹೊತ್ತಿಸು ಎಂಬರ್ಥವನ್ನು ಕೊಡುವ **ಇಂಧ್** ಧಾತುವಿನಿಂದ **ಇಧ್ಮಃ** ಎಂದಾಗಿದೆ. ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಸಮಿತ್ತು ಎಂದರ್ಥ.

**ಪರ್ವಣಾಪರ್ವಣಾ— ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ—ಅರ್ಧಮಾಸಪರ್ವ ದೇವಾನಸ್ಮಿನ್ ಪ್ರೀಣಂತೀತಿ । (ನಿ. ೧-೨೦)** ಎಂಬ ಅರ್ಥವನ್ನು ಕೊಡುವ ಪೃಧಾತುವಿನಿಂದಾಗಲಿ ಅಥವಾ ತೃಪ್ತಿ

ಗೊಳಿಸು ಎಂಬರ್ಥವನ್ನು ಕೊಡುವ **ಪ್ರೀಞ್** ಧಾತುವಿನಿಂದಾಗಲೀ **ಪರ್ವ** ಶಬ್ದದ ನಿಷ್ಪತ್ತಿಯನ್ನು ಹೇಳಬಹುದು. ದೇವತೆಗಳನ್ನು ಹವಿಸ್ಸುಗಳಿಂದ ಅಥವಾ ಸ್ತೋತ್ರಗಳಿಂದ ಹರ್ಷಗೊಳಿಸತಕ್ಕ ಎಂಬುದು ಒಂದು ಪಕ್ಷಕಾಲ. ಅಮಾವಾಸ್ಯಾ ಪೌರ್ಣಮೀ ಕಾಲಗಳಲ್ಲಿ ನಿಯತವಾಗಿ ನೆರವೇರಿಸಬೇಕಾದ ದರ್ಶ ಪೂರ್ಣಮಾಸಾದಿ ಕರ್ಮಗಳಿಂದ ಎಂಬುವುದು ಇನ್ನೊಂದರ್ಥ

**ಚಿಂತಯಂತಃ— ಪ್ರಜ್ಞಾಪಯಂತಃ** ಜ್ಞಾಪಿಸುತ್ತಾ; ಅಂತಾ ಪಕ್ಷಕಾಲಗಳಲ್ಲಿ ನೆರವೇರಿಸಬೇಕಾದ ಕರ್ಮಗಳಿಂದ ನಿಮಗೆ ಪಕ್ಷಕಾಲಗಳನ್ನು ಜ್ಞಾಪಿಸುತ್ತಾ ಎಂದು ಒಂದು ವಿಧವಾದ ಅರ್ಥವನ್ನೂ ಅಥವಾ ಸ್ಕಂದಸ್ವಾಮಿಗಳು ಹೇಳುವಂತೆ **ಯಜ್ಞಕರ್ಮ ತ್ವನ್ಮಾಹಾತ್ಮ್ಯಂ ವಾ ಜ್ಞಾತವಂತಃ ।** ಆಯಾಕಾಲಗಳಲ್ಲಿ ನಡೆಯಬೇಕಾದ ಯಜ್ಞಕರ್ಮವನ್ನೂ ನಿನ್ನ ಮಾಹಾತ್ಮ್ಯವನ್ನೂ ಒಟ್ಟಿಗೆ ತಿಳಿದವರಾಗಿ ಎಂದು ಇನ್ನೊಂದು ಅರ್ಥವನ್ನೂ ಹೇಳಬಹುದು.

ವ್ಯಾಕರಣಪ್ರಕ್ರಿಯಾ

**ಭರಾಮ—** ಡುಭೃಞ್ ಭರಣೇ ಧಾತು. ಲಡುತ್ತಮಪುರುಷ ಬಹುವಚನರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ

**ಚಿತಯಂತಃ—** ಚಿತೀ ಸಂಜ್ಞಾನೇ ಧಾತು. ಚುರಾದಿ. **ಸತ್ಯಾಪಪಾಶ—** (ಪಾ. ಸೂ. ೩-೧-೨೫) ಎಂಬುದರಿಂದ ಇದಕ್ಕೆ ಸ್ವಾರ್ಥದಲ್ಲಿ ಣಿಚ್. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ಪರಿಭಾಷೆಯಿಂದ ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಸನಾದ್ಯಂತಾ ಧಾತವಃ** ಎಂಬುದರಿಂದ ಣಿಜಂತಕ್ಕೆ ಧಾತುಸಂಜ್ಞಾ. ಇದರ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ತನ್ನಿಮಿತ್ತವಾಗಿ ಣಿಚಿಗೆ ಗುಣ ಆಯಾದೇಶ. ಚಿತಯತ್ ಶಬ್ದವಾಗುತ್ತದೆ. ಪ್ರಥಮಾ ಬಹುವಚನಾಂತರೂಪ. ಣಿಚ್ ಸ್ವರ ಉಳಿಯುತ್ತದೆ.

**ಪರ್ವಣಾಪರ್ವಣಾ— ನಿತ್ಯವೀಪ್ಸಯೋಃ—** (ಪಾ. ಸೂ. ೮-೧-೪) ಎಂಬುದರಿಂದ ವೀಪ್ಸಾ ತೋರುವಾಗ ದ್ವಿತ್ವ. **ತಸ್ಯಪರಮಾಮ್ರೇಡಿತಮ್—** (ಪಾ. ಸೂ. ೮-೧-೨) ಎಂಬುದರಿಂದ ದ್ವಿತ್ವ ಬಂದಾಗ ಪರರೂಪಕ್ಕೆ ಆಮ್ರೇಡಿತಸಂಜ್ಞೆ ಬರುತ್ತದೆ. **ಅನುದಾತ್ತಂ ಚ—** (ಪಾ. ಸೂ. ೮-೧-೩) ಎಂಬುದರಿಂದ ಆ ಆಮ್ರೇಡಿತಕ್ಕೆ ಅನುದಾತ್ತಸ್ವರ ಬರುತ್ತದೆ.

**ಪ್ರತರಮ್—** ಕ್ರಿಯಾ ಪ್ರಕರ್ಷ ತೋರುವಾಗ ಪ್ರಶಬ್ದದ ಮೇಲೆ ತರಪ್ ಪ್ರತ್ಯಯ. ಪ್ರತರ ಎಂಬ ತರಬಂತದ ಮೇಲೆ **ಅಮು ಚ ಛಂದಸಿ—** (ಪಾ. ಸೂ. ೫-೪-೧೨) ಎಂಬುದರಿಂದ ಸಂಹಿತಾದಲ್ಲಿ ಅಮು ಪ್ರತ್ಯಯ.

**ಸಾಧಯ—** ಷಿಧು ಸಂರಾದ್ಧೌ ಧಾತು ಇದಕ್ಕೆ ಪ್ರೇರಣಾ ತೋರುವಾಗ ಣಿಚ್ ಬಂದಾಗ **ಸಿಧ್ಯತೇರಪಾರಲೌಕಿಕೇ** (ಪಾ. ಸೂ. ೬-೧-೪೯) ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿಗೆ ಆತ್ವ. ಲೋಣ್ಮಧ್ಯಮಪುರುಷ ಏಕವಚನರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

———— :0: ————

ಸಂಹಿತಾಪಾಠಃ

ವಿಶಾಂ ಗೋಪಾ ಅಸ್ಯ ಚರಂತಿ ಜಂತವೋ ದ್ವಿಪಚ್ಚ ಯದುತ
ಚತುಷ್ಪದಕ್ತುಭಿಃ ।
ಚಿತ್ರಃ ಪ್ರಕೇತ ಉಷಸೋ ಮಹಾಁ ಅಸ್ಯಗ್ನೇ ಸಖ್ಯೇ ಮಾ ರಿ-
ಷಾಮಾ ವಯಂ ತವ ॥ ೫ ॥

ಪದಪಾಠಃ

ವಿಶಾಂ । ಗೋಪಾಃ । ಅಸ್ಯ । ಚರಂತಿ । ಜಂತವಃ ದ್ವಿಽಪತ್ । ಚ । ಯತ್ ।
ಉತ । ಚತುಃಽಪತ್ । ಅಕ್ತುಽಭಿಃ ।
ಚಿತ್ರಃ । ಪ್ರಽಕೇತಃ । ಉಷಸಃ । ಮಹಾನ್ । ಅಸಿ । ಅಗ್ನೇ । ಸಖ್ಯೇ । ಮಾ ।
ರಿಷಾಮ । ವಯಂ । ತವ ॥ ೫ ॥

॥ ಸಾಯಣಭಾಷ್ಯಂ ॥

ಅಸ್ಯಾಗ್ನೇರ್ಜಂತವೋ ಜಾತಾ ರಶ್ಮಯೋ ವಿಶಾಂ ಸರ್ವೇಷಾಂ ಪ್ರಾಣಿನಾಂ ಗೋಪಾ ಗೋಪಾಯಿತಾರೋ ರಕ್ಷಕಾಃ ಸಂತಶ್ಚರಂತಿ । ಉದ್ಗಚ್ಛಂತಿ । ತದನಂತರಂ ಯಚ್ಚ ದ್ವಿಪತ್ ದ್ವಿಪಾತ್ ಮನುಷ್ಯಾದಿಕಮಸ್ತಿ ಉತಾಪಿ ಚ ಚತುಷ್ಪತ್ ಚತುಷ್ಪಾತ್ ಗವಾದಿಕಂ ಯದಸ್ತಿ ತದುಭಯಮಕ್ತುಭಿರಂಜಕೈರಸ್ಯ ರಶ್ಮಿಭಿರಕ್ತಮಾಶ್ಲಿಷ್ಟಮಭೂತ್ । ಹೇ ಅಗ್ನೇ ಚಿತ್ರೋ ವಿಚಿತ್ರದೀಪ್ತಿಯುಕ್ತಃ ಪ್ರಕೇತೋ ರಾತ್ರಾವಂಧಕಾರಾವೃತಾನಾಂ ಸರ್ವೇಷಾಂ ಪ್ರಜ್ಞಾಪಯಿತಾ ಪ್ರದರ್ಶಯಿತೋಷಸ ಉಷೋದೇವತಾಯಾ ಅಪಿ ಮಹಾನ್ ಗುಣೈರಧಿಕೋಽಸಿ । ಭವಸಿ । ಉಷಾಸ್ತು ರಾತ್ರೇಶ್ಚರಮಭಾಗೇ ಪ್ರಕಾಶಯತಿ । ಅಗ್ನಿಸ್ತು ಸರ್ವಸ್ಯಾಂ ರಾತ್ರೌ ಪ್ರಕಾಶಯತೀತಿ ತಸ್ಯ ಗುಣಾಧಿಕ್ಯಂ ॥ ಗೋಪಾಃ । ಗುಪೂ ರಕ್ಷಣೇ । ಗುಪೂಧೂಪವಿಚ್ಛಿಪಣಿಪನಿಭ್ಯ ಆಯ ಇತ್ಯಾಯಪ್ರತ್ಯಯಃ । ಪಾ. ೩-೧-೨೮ । ಅಸ್ಮಾತ್ಕ್ವಿಪ್ । ಅತೋ ಲೋಪಃ । ವೇರಪೃಕ್ತಲೋಪಾದ್ವಲಿ ಲೋಪೋ ಬಲೀಯಾನಿತಿ ಪೂರ್ವಂ ವಲಿ ಲೋಪಃ । ನ ಚಾತೋ ಲೋಪಸ್ಯ ಸ್ಥಾನಿ-

ವತ್ತ್ವಂ । ನ ಪದಾಂತೇತ್ಯಾದಿನಾ ಯಲೋಪಂ ಪ್ರತಿ ತನ್ನಿಷೇಧಾತ್ । ದ್ವಿಪತ್ । ದ್ವೌ ಪಾದಾವಸ್ಯೇತಿ ಬಹುವ್ರೀಹೌ ಸಂಖ್ಯಾಸುಪೂರ್ವಸ್ಯ । ಪಾ. ೫-೪-೧೪೦ । ಇತಿ ಪಾದಶಬ್ದಸ್ಯಾಂತ್ಯಲೋಪಃ ಸಮಾಸಾಂತಃ । ಅಯಸ್ಮಯಾದಿತ್ವೇನ ಭತ್ವೇ ಪಾದಃ ಪತ್ । ಪಾ. ೬-೪-೧೩೦ । ಇತಿ ಪದ್ಭಾವಃ । ಏಕದೇಶವಿಕೃತಸ್ಯಾನನ್ಯವತ್ತ್ವಾತ್ ! ಪರಿ. ೩೭ । ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸು । ಪಾ ೬-೨-೧೯೭ । ಇತ್ಯುತ್ತರಪದಾಂತೋದಾತ್ತತ್ವಂ । ಚತುಷ್ಪತ್ । ಪೂರ್ವವತ್ಸಮಾಸಾಂತಃ ಪದ್ಭಾವಶ್ಚ । ಇದುದುಪಧಸ್ಯ ಚಾಪ್ರತ್ಯಯಸ್ಯೇತಿ ವಿಸರ್ಜನೀಯಸ್ಯ ಷತ್ವಂ । ನ್ರಃ ಸಂಖ್ಯಾಯಾಃ । ಫಿ. ೨-೫ । ಇತಿ ಚತುರ್ಶಬ್ದ ಆದ್ಯುದಾತ್ತಃ । ಸ ಏವ ಬಹುವ್ರಿಹಿಸ್ವರೇಣ ಶಿಷ್ಯತೇ ॥ ೫

॥ ಪ್ರತಿಪದಾರ್ಥ ॥

**ಅಸ್ಯ**—ಈ ಅಗ್ನಿಯ । **ಜಂತವಃ**—ರಶ್ಮಿಗಳು । **ವಿಶಾಃ**— (ಸಕಲ) ಪ್ರಾಣಿಗಳ । **ಗೋಪಾಃ**—ರಕ್ಷಕಗಳಾಗಿ । **ಚರಂತಿ**—ಪರಡುತ್ತವೆ. । **ಯತ್**—ಯಾವ ಯಾವ । **ದ್ವಿಪತ್**—ಮನುಷ್ಯಾದಿ ದ್ವಿಪಾದಿಗಳೂ । **ಉತ**—ಮತ್ತು । **ಚತುಷ್ಪತ್ ಚ**—ಗವಾದಿಚತುಷ್ಪಾದಿಗಳೂ ಸಹ । **ಅಕ್ತುಭಿಃ**—(ಈ ಅಗ್ನಿಯ) ಕಿರಣಗಳಿಂದ (ಚೈತನ್ಯವನ್ನು ಹೊಂದುತ್ತವೆ.) । **ಅಗ್ನೇ**- ಎಲೈ ಅಗ್ನಿಯೇ (ನೀನು) । **ಚಿತ್ರಃ**—ನಾನಾ ವಿಧವಾದ ಕಾಂತಿಯುಳ್ಳವನಾಗಿ । **ಪ್ರಕೇತಃ**—(ಅಂಧಕಾರಾವೃತವಾದ ಸಕಲವನ್ನೂ) ಬೆಳಗಿಸುತ್ತಾ । **ಉಷಸಃ**—ಉಷೋದೇವತೆಗಿಂತಲೂ । **ಮಹಾನ್ ಅಸಿ**—ಉತ್ಕೃಷ್ಟನಾಗಿದ್ದೀಯೆ. । **ತವ**—ನಿನ್ನ । **ಸಖ್ಯೇ**—ಸ್ನೇಹವಿರುವುದರಿಂದ । **ವಯಂ**—ನಾವು । **ಮಾರಿಷಾಮ**—ಹಿಂಸೆಯಿಂದ ಪೀಡಿತರಾಗದೆ ಇರುವಂತಾಗಲಿ ।

ಭಾವಾರ್ಥ

ಈ ಅಗ್ನಿಯ ರಶ್ಮಿಗಳು ಸಕಲ ಪ್ರಾಣಿಗಳ ರಕ್ಷಕಗಳಾಗಿ ಸುತ್ತಲೂ ಪರಡುತ್ತವೆ. ಮನುಷ್ಯಾದಿದ್ವಿಪಾದಿಗಳೂ ಮತ್ತು ಗವಾದಿ ಚತುಷ್ಪಾದಿಗಳೂ ಸಹ ಈ ಅಗ್ನಿಯ ಕಿರಣಗಳಿಂದ ಚೈತನ್ಯವನ್ನು ಹೊಂದುತ್ತವೆ. ಎಲೈ ಅಗ್ನಿಯೇ, ನೀನು ನಾನಾ ವಿಧವಾದ ಕಾಂತಿಯುಳ್ಳವನಾಗಿ ಅಂಧಕಾರದಿಂದ ಆವೃತವಾದ ಸಕಲಲೋಕವನ್ನೂ ಬೆಳಗಿಸುತ್ತಾ ಹಗಲಿನಲ್ಲಿ ಮಾತ್ರ ಕಾಂತಿಯನ್ನು ಬೀರತಕ್ಕ ಉಷೋದೇವತೆಗಿಂತಲೂ ಅಧಿಕವಾದ ಮಹಿಮೆಯುಳ್ಳವನಾಗಿದ್ದೀಯೆ. ನಿನ್ನೊಡನೆ ನಮಗೆ ಸ್ನೇಹವಿರುವುದರಿಂದ ನಾವು ಯಾವ ವಿಧವಾದ ಹಿಂಸೆಯಿಂದಲೂ ಪೀಡಿತರಾಗದೇ ಇರುವಂತಾಗಲಿ.

## English Translation

His genial (flames), the preservers of mankind, spread around and both bipeds and quadrupeds are enlivened by his rays ; Shining with various lustre, and illuminating (the world by night) you are superior to the dawn ; Agni, let us not suffer injury through your friendship.

ವಿಶೇಷವಿಷಯಗಳು

ವಿಶಾಂ—ಮನುಷ್ಯಾಃ, ನರಃ ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ( ನಿ. ೩-೭ ) ಪಠಿತವಾಗಿದ್ದರೂ ಇಲ್ಲಿ ಸರ್ವೇಷಾಂ ಪ್ರಾಣಿನಾಂ । ಸಕಲ ಪ್ರಾಣಿಗಳ ಎಂದು ಅರ್ಥಮಾಡಬೇಕು.

**ಜಂತವಃ—ಜಾತಾಃ ರಶ್ಮಯಃ** ಅಗ್ನಿಯಿಂದ ಉತ್ಪನ್ನವಾದ ಅಗ್ನಿಯ ಕಿರಣಗಳು. ಉತ್ಪನ್ನವಾದ. ವಸ್ತುಗಳಲ್ಲಿ ಯಾವುದಕ್ಕೆ ಬೇಕಾದರೂ ಸಂದರ್ಭಾನುಸಾರವಾಗಿ ಅರ್ಥಕೊಡುವಂತೆ ಈ ಪದವು ವಿಶೇಷಣವಾಗಿರುತ್ತದೆ ಋಕ್ಸಂಹಿತೆಯಲ್ಲಿ **ಜಂತು, ಜಂತವಃ, ಜಂತುಭಿಃ** ಎಂಬ ಪದಗಳಿಗೆ ಋತ್ವಿಕ್ಕುಗಳು, ಯಜಮಾನರು, ಶತ್ರುಗಳು, ಸಕಲ ಪ್ರಾಣಿಗಳು ಇತ್ಯಾದಿ ಜನ್ಮವುಳ್ಳ ವಸ್ತುಗಳಿಗೆಲ್ಲಾ ಅನ್ವಯವಾಗುವಂತೆ ಬೇರೆಬೇರೆ ಸಂದರ್ಭಗಳಲ್ಲಿ ಆಯಾ ಪ್ರಕರಣಗಳಿಗೆ ತಕ್ಕಂತೆ ಅರ್ಥವಾಗುತ್ತದೆ. ( ಋ. ಸಂ. ೧–೪೫–೬ ; ೧–೭೪–೩ ; ೫–೭–೨ ; ೬–೬೭-೧೩ ; ೧೦-೧೪೦–೪ ಇತ್ಯಾದಿ ಋಕ್ಕುಗಳನ್ನು ನೋಡಿ.

**ಅಕ್ತುಭಿಃ—ಶ್ಯಾವೀ, ಕ್ಷಪಾ, ಶರ್ವರೀ, ಅಕ್ತುಃ** ಇತ್ಯಾದಿ ೨೩ ರಾತ್ರಿನಾಮಗಳಲ್ಲಿ ಪಠಿತವಾಗಿದೆ. (ನಿ. ೧–೧೮) ಅನೇಕ ಕಡೆಗಳಲ್ಲಿ ಅಕ್ತು ಶಬ್ದಕ್ಕೆ ರಾತ್ರಿಯೆಂದೇ ಅರ್ಥವಾಗುತ್ತದೆ. ಆದರೆ ಕೆಲವು ಸಂದರ್ಭಗಳಲ್ಲಿ ಕಿರಣ, ಆಯುಧ, ಕತ್ತಲು ಇತ್ಯಾದಿ ಅರ್ಥಗಳಲ್ಲೂ ಈ ಶಬ್ದದ ಪ್ರಯೋಗವಿದೆ. **ಅಂಜ್** ಧಾತುವಿಗೆ, ಆವರಿಸು, ಮುಚ್ಚು, ಬಳಿ ಇತ್ಯಾದಿ ಅರ್ಥಗಳಿರುವುದರಿಂದ ಛಾಯೆಯಿಂದ ಮುಚ್ಚುವ ಕತ್ತಲೆಯೆಂದೂ, ಸುತ್ತಲೂ ಆವರಿಸತಕ್ಕ ಕಿರಣವೆಂತಲೂ, ಕತ್ತಲೆಯಿಂದ ಮುಚ್ಚುವ ರಾತ್ರಿಯೆಂದೂ, ದೇಹವನ್ನು ಆವರಿಸುವ ಆಯುಧವೆಂದೂ ಅರ್ಥಗಳು ಆಗುತ್ತವೆ. ಉದಾಹರಣೆಗೆ, ಋ. ಸಂ. ೧-೩೬-೧೬ನೇ ಋಕ್ಕಿನ ಬರುವ ಅಕ್ತು ಶಬ್ದಕ್ಕೆ ಆಯುಧವೆಂದು ಅರ್ಥ ಮಾಡುತ್ತಾರೆ. ೨-೧೦-೩ನೇ ಋಕ್ಕಿನಲ್ಲಿ ಬರುವ ಶಬ್ದಕ್ಕೆ ಕತ್ತಲೆಂದರ್ಥ. ಆದರೆ ರಾತ್ರಿಪರ್ಯಾಯವೇ ಹೆಚ್ಚುಕಡೆ ಗಳಲ್ಲಿ ಇರುತ್ತದೆ.

ಈ ಋಕ್ಕಿನಲ್ಲಿ ರಾತ್ರಿಯೆಂದು ಅರ್ಥಮಾಡಿದರೆ ಒಂದು ವಿಧವಾದ ಅನ್ವಯವೂ, ಕಿರಣಗಳೆಂದು ಮಾಡಿದರೆ ಇನ್ನೊಂದು ವಿಧವಾದ ಅನ್ವಯವೂ ಆಗುತ್ತದೆ. ಸ್ಕಂದಸ್ವಾಮಿಗಳ ವಿವರಣೆಯಂತೆ : **ಅಕ್ತುಭಿಃ—ರಾತ್ರಿನಾಮೈ-ತತ್ । ಇಹ ತು ಸಾಹಚರ್ಯಾನ್ನಕ್ತಂಚರೇಷು ರಕ್ಷಃಪಿಶಾಚಾದಿಷು ವರ್ತತೇ । ರಾತ್ರಿಚರೈಃ ಸಹ ಇತ್ಯರ್ಥಃ।** ಅಕ್ತು ಶಬ್ದವು ರಾತ್ರಿನಾಮಗಳಲ್ಲಿ ಪಠಿತವಾಗಿರುವುದರಿಂದ ರಾತ್ರಿಯೆಂದರ್ಥವಾಗಬೇಕು. ಆದರೆ ಇಲ್ಲಿ ಸಾಹಚರ್ಯ ದಿಂದ ರಾತ್ರಿಕಾಲದಲ್ಲಿ ಸಂಚರಿಸುವ ರಕ್ಷಃಪಿಶಾಚಾದಿಗಳೊಡನೆ ಮಾನವಾದಿ ಸಕಲಪ್ರಾಣಿಗಳೂ ಗುರ್ತಿಸಲ್ಪಡು ತ್ತವೆ. ಆದುದರಿಂದಲೇ, **ಉಷಸಃ (ಅಪಿ) ಮಹಾಃ ಅಸಿ** ಉಷೋ ದೇವತೆಗಿಂತಲೂ ಅಧಿಕನಾಗಿದ್ದೀಯೆ. ಉಷಸ್ಸು ರಾತ್ರಿಯ ಕೊನೆಯ ಭಾಗದಲ್ಲಿ ಮಾತ್ರ ಪ್ರಕಾಶಿಸುತ್ತಾ ಜಗತ್ತಿನ ಭೂತಗಳನ್ನೂ ಪ್ರಕಾಶಿಸುವಂತೆ ಮಾಡಿದರೆ ನೀನು ರಾತ್ರಿಕಾಲವೆಲ್ಲೆಲ್ಲಾ ಸಂಪೂರ್ಣವಾಗಿ ಎಲ್ಲವನ್ನು ಪ್ರಕಾಶಿಸುವಂತೆ ಮಾಡುತ್ತೀಯೆ. ಆದುದರಿಂ ದಲೇ ನೀನು ಉಷಸ್ಸಿಗಿಂತಲೂ ಅಧಿಕನು. ಸಾಯಣರ ವಿವರಣೆಯಂತೆ:—ಸಕಲವಾದ **ದ್ವಿಪತ್** ಮನುಷ್ಯಾದಿಗಳೂ; ಚತುಷ್ಪತ್-ಗವಾದಿಗಳೂ ಸಹ, **ಅಕ್ತುಭಿಃ** ಆವರಿಸತಕ್ಕ ಕಿರಣಗಳಿಂದ ತಿಳಿಯಲ್ಪಟ್ಟವೆ ಎಂದಾಗುತ್ತದೆ.

### ವ್ಯಾಕರಣಪ್ರಕ್ರಿಯಾ

**ಗೋಪಾಃ**— ಗುಪೂ ರಕ್ಷಣೇ ಧಾತು. **ಗುಪೂಧೂಪವಿಚ್ಛಿಪಣಿಭ್ಯ ಆಯಃ**—(ಪಾ. ಸೂ. ೩-೧-೨೮) ಎಂಬುದರಿಂದ ಇದಕ್ಕೆ ಸ್ವಾರ್ಥದಲ್ಲಿ ಆಯ ಪ್ರತ್ಯಯ. **ಸನಾದ್ಯಂತಾ ಧಾತವಃ** ಎಂಬುದರಿಂದ ಆಯಪ್ರತ್ಯಯವು ಸನಾದಿಯಲ್ಲಿ ಸೇರಿರುವುದರಿಂದ ಗೋಪಾಯ ಎಂಬ ಆಯ ಪ್ರತ್ಯಯಾಂತವಾದುದಕ್ಕೆ ಧಾತು ಸಂಜ್ಞಾ ಬರುತ್ತದೆ. ಇದರಮೇಲೆ ಕ್ವಿಪ್ ಪ್ರತ್ಯಯ **ಅತೋಲೋಪಃ** ಎಂಬುದರಿಂದ ತನ್ನಿಮಿತ್ತವಾಗಿ ಧಾತುವಿನ ಅಕಾರಕ್ಕೆ ಲೋಪ.

ಕ್ವಿಪಿನಲ್ಲಿರುವ ಅಪೃಕ್ತವಾದ ವಕಾರಕ್ಕೆ ಲೋಪ ಬರಬೇಕಾದರೆ ಮೊದಲು **ವೇರಪೃಕ್ತಲೋಪಾತ್ಪೂರ್ವಂ ಲೋಪೋ-ಬಲೀಯಾನ್** ಎಂಬ ವಚನದಿಂದ ವಲ್ ನಿಮಿತ್ತವಾಗಿ **ಲೋಪೋ ವ್ಯೋರ್ವಲಿ** ಎಂಬುದರಿಂದ ಯಕಾರಕ್ಕೆ ಲೋಪ. ಇಲ್ಲಿ ಯಕಾರ ಲೋಪವಾಡುವಾಗ ಅಕಾರಕ್ಕೆ ಸ್ಥಾನಿವದ್ಭಾವ ಬರುವುದಿಲ್ಲವೇ ಎಂದು ಆಶಂಕೆ ಬರುತ್ತದೆ. ಆದರೆ **ನಪದಾಂತವರೇಯಲೋಪೆ**— (ಪಾ. ಸೂ. ೧-೧-೫೮) ಎಂಬುದರಿಂದ ಯಲೋಪವಿಷಯದಲ್ಲಿ ಸ್ಥಾನಿವದ್ಭಾವ ಪ್ರತಿಷೇಧ ಬರುತ್ತದೆ. ಆ ಮೇಲೆ **ವೇರಪೃಕ್ತಸ್ಯ**— (ಪಾ. ಸೂ. ೬-೧-೬೭) ಎಂಬುದರಿಂದ ಕ್ವಿಪಿನ ವಕಾರಕ್ಕೆ ಲೋಪ. ಗೋಪಾ ಎಂದು ಆಕಾರಾಂತ ಶಬ್ದವಾಗುತ್ತದೆ.

**ಚರಂತಿ**— ಚರ ಗತಿಭಕ್ಷಣಯೋಃ ಧಾತು. ಲಟ್ ಪ್ರಥಮ ಪುರುಷ ಬಹುವಚನರೂಪ. ಅತಿಙಂತವ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದ್ವಿಪತ್**— ದ್ವೌ ಪಾದೌ ಅಸ್ಯ. ಬಹುವ್ರೀಹಿಸಮಾಸದಲ್ಲಿ **ಸಂಖ್ಯಾಸುಪೂರ್ವಸ್ಯ**— (ಪಾ. ಸೂ. ೫-೪-೧೪೦) ಎಂಬುದರಿಂದ ಸಂಖ್ಯಾಪೂರ್ವದಲ್ಲಿರುವುದರಿಂದ ಪಾದ ಶಬ್ದದ ಅಂತ್ಯಕ್ಕೆ ಲೋಪವು ಸಮಾಸಾಂತವಾಗಿ ಬರುತ್ತದೆ. **ಅಯಸ್ಮಯಾದೀನಿ ಛಂದಸಿ**— (ಪಾ. ಸೂ. ೧-೪-೨೦) ಎಂಬುದರಿಂದ ಇದಕ್ಕೆ ಭಸಂಜ್ಞಾ ಬರುವುದರಿಂದ **ಪಾದಃ ಪತ್**— (ಪಾ. ಸೂ. ೬-೪-೧೩೦) ಎಂಬುದರಿಂದ ಪದ್‌ಭಾವ ಬರುತ್ತದೆ. ಪಾದ್ ಎಂಬಲ್ಲಿ ಕೇವಲ ಹ್ರಸ್ವ ಬಂದಿರುವುದರಿಂದ **ಏಕದೇಶವಿಕೃತಮನನ್ಯವತ್** ಎಂಬ ಪರಿಭಾಷೆಯಿಂದ ಪಾದ್ ಇದ್ದಂತೆ. ಆಗುವುದರಿಂದ **ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸು**—(ಪಾ. ಸೂ. ೬-೨-೧೯೭) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಚತುಷ್ಪತ್**— ಹಿಂದಿನಂತೇ ಸಮಾಸವಾದಾಗ ಸಮಾಸಾಂತಲೋಪವೂ ಪದ್‌ಭಾವವೂ ಬರುತ್ತವೇ ಚತುಃ+ಪತ್ ಎಂದಿರುವಾಗ **ಇದುದುಪಧಸ್ಯ ಚಾಪ್ರತ್ಯಯಸ್ಯ** ಎಂಬುದರಿಂದ ವಿಸರ್ಗಕ್ಕೆ ಷತ್ವ ಬರುತ್ತದೆ.

**ನ್ರಃ ಸಂಖ್ಯಾಯಾಃ**—(ಫಿ. ಸೂ. ೨೮) ನಾಂತ, ರೇಫಾಂತ ಸಂಖ್ಯಾವಾಚಕಗಳು ಆದ್ಯುದಾತ್ತವಾಗುತ್ತವೆ ಎಂಬುದರಿಂದ ಚತುರ್‌ಶಬ್ದವು ರೇಫಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಸಮಾಸದಲ್ಲಿ ಆ ಸ್ವರವೇ ಉಳಿಯುತ್ತದೆ. ॥ ೫ ॥



ಸಂಹಿತಾಪಾಠಃ

ತ್ವಮಧ್ವರ್ಯುರುತ ಹೋತಾಸಿ ಪೂರ್ವ್ಯಃ ಪ್ರಶಾಸ್ತಾ ಪೋತಾ
ಜನುಷಾ ಪುರೋಹಿತಃ ।
ವಿಶ್ವಾ ವಿದ್ವಾಁ ಆರ್ತ್ವಿಜ್ಯಾ ಧೀರ ಪುಷ್ಯಸ್ಯಗ್ನೇ ಸಖ್ಯೇ ಮಾ ರಿ-
ಷಾಮಾ ವಯಂ ತವ ॥ ೬ ॥

॥ ಪದಪಾಠಃ ॥

ತ್ವಂ । ಅಧ್ವರ್ಯುಃ । ಉತ । ಹೋತಾ । ಅಸಿ । ಪೂರ್ವ್ಯಃ । ಪ್ರಽಶಾಸ್ತಾ ।
ಪೋತಾ । ಜನುಷಾ । ಪುರಃಽಹಿತಃ ।
ವಿಶ್ವಾ । ವಿದ್ವಾನ್ । ಆರ್ತ್ವಿಜ್ಯಾ । ಧೀರ । ಪುಷ್ಯಸಿ । ಅಗ್ನೇ । ಸಖ್ಯೇ । ಮಾ ।
ರಿಷಾಮ । ವಯಂ । ತವ ॥ ೬ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಮಧ್ವರ್ಯುರಧ್ವರಸ್ಯ ಯಾಗಸ್ಯ ನೇತಾ ದೇವಾನ್ಪ್ರತಿ ಪ್ರೇರಯಿತಾ ಯದ್ವಾ ಯಾಗ ಆಧ್ವರ್ಯವಸ್ಯ ಕರ್ತಾ ಭವಸಿ । ಅಧ್ವರ್ಯೌ ಮನುಷ್ಯೇ ಜಾಠರರೂಪೇಣ ವಾಗಿಂದ್ರಿಯಾಧಿಷ್ಠಾತೃತ್ವೇನ ವಾವಸ್ಥಾಯ ಯಾಗನಿಷ್ಪಾದಕೋಽಸಿ । ಉತಾಪಿ ಚ ಪೂರ್ವ್ಯೋ ಮುಖ್ಯೋ ಹೋತಾ ದೇವಾನಾಮಾಹ್ವಾತಾ ಪೂರ್ವವದ್ಧೋತರ್ಯವಸ್ಥಾಯ ಹೌತ್ರಸ್ಯ ಕರ್ಮಣಃ ಕರ್ತಾ ವಾಸಿ । ಭವಸಿ । ಮಾನುಷೋ ಹೋತಾಮುಖ್ಯಃ । ತದಪೇಕ್ಷಯಾಸ್ಯ ಮುಖ್ಯತ್ವಂ । ತಥಾ ಪ್ರಶಾಸ್ತಾ ಪ್ರಕರ್ಷೇಣ ಶಾಸ್ತಾ ಸರ್ವೇಷಾಂ ಶಿಕ್ಷಕೋಽಸಿ । ಯದ್ವಾ । ಹೋತರ್ಯಜ ಪೋತರ್ಯಜೇತ್ಯಾದೀನಾ ಪ್ರೈಷೇಣ ಶಾಸ್ತೀತಿ ಮೈತ್ರಾವರುಣಃ ಪ್ರಶಾಸ್ತಾ । ಪೂರ್ವವತ್ತಸ್ಮಿನ್ನವಸ್ಥಾಯ ಯಾಗನಿಷ್ಪಾದಕೋಽಸಿ । ಪೋತಾ ಯಜ್ಞಸ್ಯ ಪಾವಯಿತಾ ಶೋಧಯಿತಾಸಿ । ಯದ್ವಾ । ಪೋತೃನಾಮಕಸ್ಯರ್ತ್ವಿಜಃ ಪೂರ್ವವದಧಿಷ್ಠಾಯ ಯಾಗನಿಷ್ಪಾದಕೋಽಸಿ । ತಥಾ ಜನುಷಾ ಜನ್ಮನಾ ಸ್ವಾಭಾವ್ಯೇನ ಪುರೋಹಿತಃ ಪುರಸ್ತಾದಾಗಾಮಿನಿ ಸ್ವರ್ಗಾದೌ

ಹಿತೋಽನುಕೂಲಾಚರಣೋಽಸಿ । ಯದ್ವಾ । ಸರ್ವೇಷು ಕರ್ಮಸು ಪೂರ್ವಸ್ಯಾಂ ದಿಶ್ಯಾಹವನೀಯೇ ಸ್ಥಾಪಿತೋಽಸಿ । ಅಥವಾ ಪುರೋಹಿತೋ ಬ್ರಹ್ಮಾ ದೇವಪುರೋಹಿತಸ್ಯ ಬೃಹಸ್ಪತೇಃ ಪ್ರತಿನಿಧಿತ್ವಾತ್ । ತಥಾ ಚ ಮಂತ್ರಾಂತರಂ । ಬೃಹಸ್ಪತಿರ್ದೇವಾನಾಂ ಬ್ರಹ್ಮಾಽಹಂ ಮನುಷ್ಯಾಣಾಮಿತಿ । ಅತಸ್ತಸ್ಮಿನ್ಬ್ರಹ್ಮಣಿ ಪೂರ್ವವದವಸ್ಥಾಯ ತದ್ರೂಪಃ ಸನ್ವಿಶ್ವಾ ಸರ್ವಾಣ್ಯಾರ್ತ್ವಿಜ್ಯಾ ಋತ್ವಿಜಃ ಕರ್ಮಾಣ್ಯಾಧ್ವರ್ಯವಾದೀನಿ ವಿದ್ವಾನ್ ಜಾನಂಸ್ತ್ವಂ ಹೇ ಧೀರ ಪ್ರಾಜ್ಞಾಗ್ನೇ ಪುಷ್ಯಸಿ । ನ್ಯೂನಾಧಿಕಭಾವರಾಹಿತ್ಯೇನ ಸಂಪೂರ್ಣಾನಿ ಕರೋಷಿ । ಅನ್ಯತ್ಸಮಾನಂ ॥ ಜನುಷಾ । ಜನೇರುಸಿಃ । ಪುರೋಹಿತಃ । ದಧಾತೇಃ ಕರ್ಮಣಿ ನಿಷ್ಠಾ ಪೂರ್ವಾಧರೇತ್ಯಾದಿನಾಸಿಪ್ರತ್ಯಯಾಂತಃ ಪುರಸ್‌ಶಬ್ದೋಽಂತೋದಾತ್ತಃ । ತದ್ಧಿತಶ್ಚಾಸರ್ವವಿಭಕ್ತಿರಿತ್ಯವ್ಯಯಸಂಜ್ಞಾಯಾಂ ಪುರೋಽವ್ಯಯಮಿತಿ ಗತಿತ್ವಾದ್ಗತಿರನಂತರ ಇತಿ ಪೂರ್ವಪದ ಪ್ರಕೃತಿಸ್ವರತ್ವಂ । ಆರ್ತ್ವಿಜ್ಯಾ । ಬ್ರಾಹ್ಮಣಾದಿತ್ವಾತ್ ಷ್ಯಞ್ । ಞಿತ್ತ್ವಾದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

( ಅಗ್ನೇ—ಎಲೈ ಅಗ್ನಿಯೇ) ತ್ವಂ— ನೀನು । ಅಧ್ವರ್ಯುಃ—(ಯಜ್ಞದಲ್ಲಿ) ಅಧ್ವರ್ಯುವಾಗಿಯೂ ಅಥವಾ ನಿಶ್ಚಿತವಾದ ಕರ್ಮಗಳ ಕರ್ತನಾಗಿಯೂ । **ಉತ**— ಮತ್ತು । **ಪೂರ್ವ್ಯಃ**— ಮುಖ್ಯನಾದ । **ಹೋತಾ**— ಹೋತೃವಾಗಿಯೂ (ಅಥವಾ ದೇವತೆಗಳಿಗೆ ಆಹ್ವಾನವನ್ನು ಕೊಡುವವನಾಗಿಯೂ) । **ಅಸಿ**— ಆಗಿದ್ದೀಯೆ । **ಶಾಸ್ತಾ**— (ಯಜ್ಞಕ್ರಿಯೆಯಲ್ಲಿ) ಎಲ್ಲರಿಗೂ ಶಿಕ್ಷಣವನ್ನು ಕೊಡುವವನಾಗಿಯೂ ಅಥವಾ ಮೈತ್ರಾವರುಣಸ್ಥಾನದಲ್ಲಿರುವವನೂ ಮತ್ತು । **ಪೋತಾ**— (ಯಜ್ಞದ ಶುದ್ಧಿಕರ್ತನೂ ಅಥವಾ (ಯಾಗ ನಿಷ್ಪಾದಕನಾದ) ಪೋತೃವಾಗಿಯೂ ಆಗಿದ್ದೀಯೆ । **ಜನುಷಾ**— ಸ್ವಭಾವವಾಗಿಯೇ । **ಪುರೋಹಿತಃ**— ಮುಂದೆ ಸ್ವರ್ಗಾದಿಲಾಭಗಳಿಗೆ ಅನುಕೂಲವಾದ ಆಚರಣೆಯುಳ್ಳವನಾಗಿಯೂ ಅಥವಾ ದೇವಪುರೋಹಿತನಾಗಿಯೂ ಆಗಿದ್ದೀಯೆ (ಆದ್ದರಿಂದ) **ವಿಶ್ವಾ**— ಸಕಲವಾದ । **ಆರ್ತ್ವಿಜ್ಯಾ**— ಋತ್ವಿಕ್ಕುಗಳ ಕರ್ತವ್ಯಗಳನ್ನೂ । **ವಿದ್ವಾನ್**— ತಿಳಿದವನಾಗಿದ್ದು । **ಧೀರ**—ಪ್ರಾಜ್ಞನಾದ । **ಅಗ್ನೇ**— ಎಲೈ ಅಗ್ನಿಯೇ । **ಪುಷ್ಯಸಿ**— (ಕೊಂಚವೂ ನ್ಯೂನಾಧಿಕ್ಯಗಳಿಲ್ಲದೇ) ಯಜ್ಞವನ್ನು ಸಾಂಗವಾಗಿ ನೆರವೇರಿಸುತ್ತೀಯೆ । **ತವ**— ನಿನ್ನ । **ಸಖ್ಯೇ**— ಸ್ನೇಹವಿರುವುದರಿಂದ । **ವಯಂ**—ನಾವು । **ಮಾ ರಿಷಾಮ**— ಹಿಂಸೆಯನ್ನು ಅನುಭವಿಸದಂತಾಗಲಿ.

ಭಾವಾರ್ಥ

ಎಲೈ ಅಗ್ನಿಯೇ, ನೀನು ಯಜ್ಞದಲ್ಲಿ ಅಧ್ವರ್ಯುವಾಗಿಯೂ, ಮುಖ್ಯನಾದ ಹೋತೃವಾಗಿಯೂ, ಮೈತ್ರಾವರುಣ ಸ್ಥಾನಗಳಲ್ಲಿರುವವನಾಗಿಯೂ, ಪೋತೃಸ್ಥಾನಗಳಲ್ಲಿರುವವನಾಗಿಯೂ, ಸ್ವಾಭಾವಿಕವಾಗಿಯೇ ಪುರೋಹಿತನಾಗಿಯೂ ಆಗಿದ್ದೀಯೆ. ಪ್ರಾಜ್ಞನಾದ ನೀನು ಸಕಲ ಋತ್ವಿಕ್ಕುಗಳ ಕರ್ತವ್ಯವನ್ನೂ ತಿಳಿದವನಾಗಿ ಯಜ್ಞವನ್ನು ಸ್ವಲ್ಪವೂ ಲೋಪದೋಷಗಳಿಲ್ಲದೇ ಸಾಂಗವಾಗಿ ನೆರವೇರಿಸುತ್ತೀಯೆ. ನಿನ್ನೊಡನೆ ಇರುವ ಸ್ನೇಹದ ನಿಮಿತ್ತ ನಾವು ಯಾವ ಹಿಂಸೆಯನ್ನೂ ಅನುಭವಿಸದಂತಾಗಲಿ.

## English Translation

You are the sacrificing or the invoking priest, you are the principal (presenter of the offering) the director ( of the ceremonies ), their performer

or by birth the family priest; thus conversant with all the priestly functions, you make the rite perfect; Agni, let us not suffer injury through your friendship.

॥ ವಿಶೇಷವಿಷಯಗಳು ॥

**ಅಧ್ವರ್ಯು, ಹೋತೃ, ಪ್ರಶಾಸ್ತೃ, ಪುರೋಹಿತ—** ಇತ್ಯಾದಿ ಋತ್ವಿಕ್ಕುಗಳ ಪ್ರಭೇದಗಳನ್ನು ಹಿಂದಿನ ಸಂಚಿಕೆಗಳಲ್ಲಿ ವಿಶದವಾಗಿ ವಿವರಿಸಿದೆ. ಅಗ್ನಿದೇವನೇ ಅಧ್ವರಗಳ ರಾಜನಾದುದರಿಂದಲೂ, ಹೋತೃವಾದುದರಿಂದಲೂ ಸಕಲವಾದ ನಿರ್ವಹಣಭಾರವನ್ನು ವಹಿಸಿರುವುದರಿಂದಲೂ, ದೇವತೆಗಳನ್ನು ಯಜ್ಞಕ್ಕೆ ಬರಮಾಡುವಂತೆ ಆಹ್ವಾನ ಕೊಡುವುದರಿಂದಲೂ. ಹವಿಸ್ಸನ್ನು ಅರ್ಪಿಸಿ ಹಂಚುವುದರಿಂದಲೂ ಸಂಪೂರ್ಣವಾಗಿ ದೇವತೆಗಳಿಗೂ ಯಜ್ಞಕರ್ತರಿಗೂ ಅವರವರ ಅಭೀಷ್ಟಕ್ಕೆ ತಕ್ಕಂತೆ ತೃಪ್ತಿಯನ್ನು ಫಲಗಳನ್ನು ಒದಗಿಸುವುದರಿಂದಲೂ ಸಹ **ವಿಶ್ವಾ ಆರ್ತ್ವಿಜ್ಯಾ ವಿದ್ವಾನ್ ಧೀರ ಅಗ್ನೇ ಪುಷ್ಯಸಿ**—ಎಂಬುದಾಗಿ ಸಕಲವಾದ ಋತ್ವಿಕ್ಕುಗಳ ಕರ್ತವ್ಯವನ್ನು ಚೆನ್ನಾಗಿ ತಿಳಿದವನಾಗಿದ್ದು ಕೊಂಚವೂ ನ್ಯೂನಾಧಿಕ್ಯಗಳಿಲ್ಲದೆ ಯಜ್ಞವನ್ನು ಸಾಂಗವಾಗಿ ನೇರವೇರಿಸುತ್ತಾನೆಂದು ಹೊಗಳಿದೆ.

**ಕೇತುಂ ಯಜ್ಞಾನಾಂ ವಿದಥಸ್ಯ ಸಾಧನಂ ವಿಪ್ರಾಸೋ ಅಗ್ನಿಂ ಮಹಯಂತ ಚಿತ್ತಿಭಿಃ ।**
( ಋ. ಸಂ. ૩-૩-૩ )

**ಸ ಕೇತುರಧ್ವರಾಣಾಮಗ್ನಿರ್ದೇವೇಭಿರಾ ಗಮತ್ ।**
( ಋ. ಸಂ. ૩-೧೦-೪ )

**ಅ ವೋ ರಾಜಾನಮಧ್ವರಸ್ಯ ರುದ್ರಂ ಹೋತಾರಂ ಸತ್ಯಯಜಂ ರೋದಸ್ಯೋಃ ।**
( ಋ. ಸಂ. ೪-೩-೧ )

**ಹೋತಾರಂ ಚಿತ್ರರಥಮಧ್ವರಸ್ಯ ಯಜ್ಞಸ್ಯಯಜ್ಞಸ್ಯ ಕೇತುಂ ರುಶಂತಂ ।**
( ಋ. ಸಂ. ೧೦-೧-೫ )

**ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।**
(ಋ. ಸಂ. ೧೦-೧೧೦-೧೧)

ಹೀಗೆ ಋಕ್ಸಂಹಿತೆಯಲ್ಲಿ ನೂರಾರು ಸಂದರ್ಭಗಳಲ್ಲಿ ಅಗ್ನಿಯೇ ಅಧ್ವರಗಳ ರಾಜನೆಂದೂ, ಸಕಲ ಋತ್ವಿಕ್ಕುಗಳ ಕಾರ್ಯವನ್ನು ನೆರವೇರಿಸುವವನೆಂದೂ ಸಾಂಗವಾಗಿ ಯಜ್ಞವು ನೆರವೇರುವಂತೆ ಮಾಡಲು ಸಹಾಯಕನಾಗುವನೆಂದೂ ನಾನಾವಿಧವಾಗಿ ಹೊಗಳಿದೆ.

**ಜನುಷಾ—ಜನ್ಮನಾ** ಹುಟ್ಟಿದಾಗಿನಿಂದ ಎಂದರೆ ಸ್ವಭಾವವಾಗಿಯೇ. ಋ. ಸಂ. ೧೦-೧೧೦-೧೧ನೇ ಋಕ್ಕಿನಲ್ಲಿ ವರ್ಣಿಸುವಂತೆ ಅಗ್ನಿಯು ಉತ್ಪನ್ನನಾದೊಡನೆಯೇ ಯಜ್ಞನಿರ್ವಹಣ ಶಕ್ತಿಯನ್ನು ಪ್ರಕಟಿಸಿ ದೇವತೆಗಳ ಪುರೋಹಿತನಾದನೆಂದು ಶ್ರುತಿವಾಕ್ಯವಿದೆ.

**ಪ್ರಶಾಸ್ತಾ— ಪ್ರಕರ್ಷೇಣ ಶಾಸ್ತಾ ಶಿಕ್ಷಕಃ** ಅಸಿ ಋತ್ವಿಕ್ಕುಗಳಿಗೂ ಯಜಮಾನರಿಗೂ ಅತ್ಯುತ್ತಮವಾದ ಶಿಕ್ಷಣವನ್ನು ಕೊಡುವವನೆಂದು ಎಂದರ್ಥ. ಅಥವಾ **ಪ್ರಶಾಸ್ತೃವು** ಹೋತೃವಿಗೆ ಸಹಾಯಕನಾದ ಮೈತ್ರಾವರುಣ ಸ್ಥಾನದಲ್ಲಿರುವ ಋತ್ವಿಕ್ಕು.

ಪೋತಾ—**ಯಜ್ಞಸ್ಯ ಪಾವಯಿತಾ.** ಯಜ್ಞವನ್ನು ಶುದ್ಧಿಮಾಡುವವನು ಅಥವಾ ಬ್ರಹ್ಮಸ್ಥಾನದ ಋತ್ವಿಕ್ಕಿಗೆ ಸಹಾಯಕನು.

॥ ವ್ಯಾಕರಣಪ್ರಕ್ರಿಯಾ ॥

**ಹೋತಾ**—ಹು ದಾನಾದನಯೋಃ ಧಾತು. ಕರ್ತ್ರರ್ಥದಲ್ಲಿ ತೃನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಶಾಸ್ತಾ**—ಶಾಸು ಅನುಶಿಷ್ಟೌ. ಧಾತು. ತೃಚ್ ಪ್ರತ್ಯಯ. ಚಿತ್ತ್ವಾದುದರಿಂದ ಅಂತೋದಾತ್ತವಾಗುತ್ತದೆ.

**ಜನುಷಾ**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಔಣಾದಿಕವಾದ ಉಸಿ ಪ್ರತ್ಯಯ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಪುರೋಹಿತಃ**—ಪುರಸ್ತಾತ್ (ಆಗಾಮಿನಿ ಸ್ವರ್ಗಾದೌ) ಹಿತಃ (ಅನುಕೂಲಾಚರಣಃ) ಪುರೋಹಿತಃ ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ ಕ್ತಪ್ರತ್ಯಯ ಪರವಾದಾಗ **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಹಿ ಆದೇಶ. **ಪೂರ್ವಾಧರಾವರಾಣಾಮಸಿಪುರಧವಶ್ಚೈಷಾಮ್** (ಪಾ. ಸೂ. ೫-೩-೩೯) ಎಂಬುದರಿಂದ ಪೂರ್ವಶಬ್ದಕ್ಕೆ ಅಸ್ತಾತ್ಯರ್ಥದಲ್ಲಿ ಅಸಿ ಪ್ರತ್ಯಯ ಬರುತ್ತದೆ. ಅಸಿಪ್ರತ್ಯಯ ಸನ್ನಿಯೋಗದಿಂದ ಪ್ರಕೃತಿಗೆ ಪುರ್ ಎಂಬ ಆದೇಶ ಆಗ ಪುರಸ್ ಎಂಬುದು ಅಂತೋದಾತ್ತವಾದ ಶಬ್ದವಾಗುತ್ತದೆ. **ತದ್ಧಿತಶ್ಚಾಸರ್ವ-ವಿಭಕ್ತಿಃ** ( ಪಾ. ಸೂ. ೧-೧-೩೮ ) ಎಂಬುದರಿಂದ ಪುರಸ್ ಎಂಬುದಕ್ಕೆ ಅವ್ಯಯಸಂಜ್ಞಾ ಬರುತ್ತದೆ. **ಪುರೋಽವ್ಯಯಮ್** ( ಪಾ. ಸೂ. ೧-೪-೬೭ ) ಅವ್ಯಯಸಂಜ್ಞೆಯುಳ್ಳ ಪುರಃ ಎಂಬುದು ಗತಿಸಂಜ್ಞೆಯನ್ನು ಹೊಂದುತ್ತದೆ. ಎಂಬುದರಿಂದ ಇದಕ್ಕೆ ಗತಿ ಸಂಜ್ಞಾ ಬಂದಾಗ **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಪುರೋಹಿತಃ ಎಂಬಲ್ಲಿ ಓಕಾರ ಉದಾತ್ತವಾಗುತ್ತದೆ.

ವಿಶ್ವಾ— ನಪುಂಸಕದಲ್ಲಿ ಶಸಿಗೆ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಮ್** ಎಂಬುದರಿಂದ ಶಿಗೆ ಲೋಪ.

ಆರ್ತ್ವಿಜ್ಯಾ— ಋತ್ವಿಜಃ ಇಮಾನಿ (ಕರ್ಮಾಣಿ) ಆರ್ತ್ವಿಜ್ಯಾನಿ. ಬ್ರಾಹ್ಮಣಾದಿಯಲ್ಲಿ ಸೇರಿರುವುದರಿಂದ **ಗುಣವಚನಬ್ರಾಹ್ಮಣಾದಿಭ್ಯಃ ಷ್ಯಞ್ಚ**— (ಪಾ. ಸೂ. ೫-೧-೧೨೪) ಎಂಬುದರಿಂದ ಷ್ಯಞ್ ಪ್ರತ್ಯಯ. ಞಿತ್ತ್ವಾದುದರಿಂದ **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಪುಂಸಕದಲ್ಲಿ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಮ್** ಎಂಬುದರಿಂದ ಶಿಗೆ ಲೋಪ.

**ವಿದ್ವಾನ್**— ವಿದ ಜ್ಞಾನೇ ಧಾತು. ಲಡರ್ಥದಲ್ಲಿ ಶತೃ ಬಂದಾಗ **ವಿದೇಃ ಶತುರ್ವಸುಃ**—(ಪಾ. ಸೂ. ೭-೧-೩೬) ಎಂಬುದರಿಂದ ಅದಕ್ಕೆ ವಸು ಆದೇಶ. ವಿದ್ವಸ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತ** ಎಂಬುದರಿಂದ ಉಪಧಾ ದೀರ್ಘ. ಉಗಿತ್ತ್ವಾದುದರಿಂದ ನುಮಾಗಮ. ಹಲ್‌ಙ್ಯಾದಿ ಸೂತ್ರದಿಂದ ಸುಲೋಪ. ಸಂಯೋಗಾಂತಲೋಪದಿಂದ ಅಂತ್ಯ ಸಕಾರ ಲೋಪ.

**ಪುಷ್ಯಸಿ**—ಪುಷ ಪುಷ್ಟೌ ಧಾತು. ದಿವಾದಿ ಲಟ್ ಮಧ್ಯಮಪುರುಷ ಏಕವಚನ ರೂಪ. ತಿಙಂತನಿಘಾತ ಸ್ವರ ಬರುತ್ತದೆ. ‖ ೬ ‖



ಸಂಹಿತಾಪಾಠಃ

ಯೋ ವಿಶ್ವತಃ ಸುಪ್ರತೀಕಃ ಸದೃಙ್ಙಸಿ ದೂರೇ ಚಿತ್ಸಂತಳಿದಿವಾತಿ ರೋಚಸೇ ।
ರಾತ್ರ್ಯಾಶ್ಚಿದಂಧೋ ಅತಿ ದೇವ ಪಶ್ಯಸ್ಯಗ್ನೇ ಸಖ್ಯೇ ಮಾ ರಿ-
ಷಾಮಾ ವಯಂ ತವ ‖ ೭ ‖

ಪದಪಾಠಃ

ಯಃ । ವಿಶ್ವತಃ । ಸುऽಪ್ರತೀಕಃ । ಸಽದೃಙ್ । ಅಸಿ । ದೂರೇ। ಚಿತ್। ಸನ್ ।
ತಳಿತ್ऽಇವ । ಅತಿ । ರೋಚಸೇ ।
ರಾತ್ರ್ಯಾಃ । ಚಿತ್ । ಅಂಧಃ । ಅತಿ । ದೇವ । ಪಶ್ಯಸಿ । ಅಗ್ನೇ। ಸಖ್ಯೇ । ಮಾ।
ರಿಷಾಮ । ವಯಂ। ತವ ‖ ೭ ‖

ಸಾಯಣಭಾಷ್ಯಂ

ಹೇ ಅಗ್ನೇ ಯಸ್ತ್ವಂ ಸುಪ್ರತೀಕಃ ಶೋಭನಾಂಗಃ ಸನ್ ವಿಶ್ವತಃ ಸರ್ವಸ್ಮಾದಪಿ ಸದೃಙ್ಙಸಿ ಅನ್ಯೂನಃ ಸದೃಶೋ ಭವಸಿ ಸ ತ್ವಂ ದೂರೇ ಚಿತ್ಸನ್ ದೂರೇಽಪಿ ವರ್ತಮಾನಃ ಸನ್ ತಳಿದಿವ । ಅಂತಿಕನಾಮೈತತ್ । ಅಂತಿಕೇ ವರ್ತಮಾನ ಇವಾತಿ ರೋಚಸೇ। ಅತಿಶಯೇನ ದೀಪ್ಯಸೇ। ತದುಕ್ತಂ

ಯಾಸ್ಕೇನ । ದೂರೇಽಪಿ ಸನ್ನಂತಿಕ ಇವ ಸನ್ದೃಶ್ಯಸೇ । ನಿ. ೩-೧೧ । ಇತಿ । ರಾತ್ರ್ಯಾಶ್ಚಿತ್ ರಾತ್ರೇರಪಿ ರಾತ್ರೇಃ ಸಂಬಂಧಿನಮಂಧೋ ಬಹುಲಮಂಧಕಾರಮಪಿ ಹೇ ದೇವ ದ್ಯೋತಮಾನಾಗ್ನೇಽತಿ ಪಶ್ಯಸಿ । ಅತೀತ್ಯ ಪ್ರಕಾಶಸೇ । ಅನ್ಯತ್ಪೂರ್ವವತ್ ॥ ಸುಪ್ರತೀಕಃ । ಶೋಭನಂ ಪ್ರತೀಕೋಽಂಗಂ ಯಸ್ಯ । ಕ್ರತ್ವಾದಯಶ್ಚೇತ್ಯುತ್ತರಪದಾದ್ಯುದಾತ್ತತ್ವಂ । ಸದೃಙ್ । ಸಮಾನಾನ್ಯಯೋಶ್ಚೇತಿ ವಕ್ತವ್ಯಂ । ಪಾ. ೩-೨-೬೦-೧ । ಇತಿ ಸಮಾನೋಪಪದಾದ್ದೃಶೇಃ ಕ್ವಿನ್ । ದೃಕ್ದೃಶವತುಷು । ಪಾ. ೬-೩ ೮೯ । ಇತಿ ಸಮಾನಸ್ಯ ಸಭಾವಃ । ದೃಕ್ಸ್ವವಃಸ್ವತವಸಾಂ ಛಂದಸಿ । ಪಾ. ೭-೧-೮೩ । ಇತಿ ನುಮ್ । ಸಂಯೋಗಾಂತಲೋಪಃ । ಕ್ವಿನ್ಪ್ರತ್ಯಯಸ್ಯ ಕುರಿತಿ ಕುತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ರಾತ್ರ್ಯಾಃ । ರಾತ್ರೇಶ್ಚಾಜಸೌ । ಪಾ. ಸೂ ೪-೧-೩೧ । ಇತಿ ಙೀಪ್ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಯಃ**—ಯಾವ ನೀನು । **ಸುಪ್ರತೀಕಃ**—ರಮ್ಯವಾದ ದೇಹವುಳ್ಳವನಾಗಿ । **ವಿಶ್ವತಃ**—ಎಲ್ಲಾ ಕಡೆಗಳಲ್ಲಿಯೂ । **ಸದೃಙ್ ಅಸಿ**—(ಕೊಂಚವೂ ವ್ಯತ್ಯಾಸವಿಲ್ಲದೇ) ಒಂದೇ ಸಮನಾಗಿದ್ದೀಯೆ। (ಅಂತಹ ನೀನು) । **ದೂರೇ ಚಿತ್ ಸನ್**—ದೂರದಲ್ಲಿದ್ದರೂ ಸಹ । **ತಳಿದಿವ**—ಹತ್ತಿರದಲ್ಲಿರುವಂತೆಯೇ । **ಅತಿ ರೋಚಸೇ**—ಅತಿಶಯನಾಗಿ ಪ್ರಕಾಶಿಸುತ್ತೀಯೆ । **ದೇವ**—ಪ್ರಕಾಶಮಾನನಾದ ಅಗ್ನಿಯೇ, (ನೀನು)। **ರಾತ್ರ್ಯಾಶ್ಚಿತ್ ಅಂಧಃ**—ರಾತ್ರಿಕಾಲದ ಕಗ್ಗತ್ತಲೆಯನ್ನೂ ಸಹ । **ಅತಿ ಪಶ್ಯಸಿ**—ಭೇದಿಸಿಕೊಂಡು ಪ್ರಕಾಶಿಸುತ್ತೀಯೆ । **ತವ**—ನಿನ್ನ । **ಸಖ್ಯೇ**—ಸ್ನೇಹವಿರುವುದರಿಂದ । **ವಯಂ**—ನಾವು । **ಮಾ ರಿಷಾಮ**—ಹಿಂಸಿತರಾಗದಿರುವಂತೆ ಆಗಲಿ.

ಭಾವಾರ್ಥ

ಎಲೈ ಅಗ್ನಿಯೇ, ನೀನು ರಮ್ಯವಾದ ದೇಹವುಳ್ಳವನಾಗಿ ಎಲ್ಲಾ ಕಡೆಗಳಲ್ಲಿಯೂ ಒಂದೇ ಸಮನಾಗಿ ಯಾವ ವ್ಯತ್ಯಾಸವೂ ಇಲ್ಲದೇ ಪ್ರಕಾಶಿಸುತ್ತೀಯೆ. ನೀನು ಅತಿದೂರದಲ್ಲಿದ್ದರೂ ಹತ್ತಿರದಲ್ಲಿರುವಂತೆಯೇ ಬೆಳಗುತ್ತೀಯೆ. ನಿನ್ನ ಪ್ರಭೆಯಿಂದ ರಾತ್ರಿಕಾಲದ ಕಗ್ಗತ್ತಲೆಯನ್ನೂ ಸಹ ಭೇದಿಸಿ ಪ್ರಕಾಶಿಸುತ್ತೀಯೆ. ನಿನ್ನ ಸ್ನೇಹವಿರುವುದರಿಂದ ನಾವು ಯಾವ ವಿಧವಾದ ಹಿಂಸೆಯನ್ನೂ ಅನುಭವಿಸದಿರುವಂತಾಗಲಿ.

English Translation

You are of graceful form and alike on every side, and although remote, shine as if near ; O divine Agni, you can see beyond the darkness of night ; Agni, let us not suffer jinury through your friendship.

ವಿಶೇಷ ವಿಷಯಗಳು

**ಸುಪ್ರತೀಕಃ—ಶೋಭನಮುಖಃ** । ರಮ್ಯವಾದ ಮುಖವುಳ್ಳವನಾಗಿ; ಈ ವಿಶೇಷಣವು ಸಾಧಾರಣವಾಗಿ ಅಗ್ನಿ, ಸೂರ್ಯ,ಉಷಸ್ಸು, ಇವರ ಪರವಾಗಿಯೇ ಹೆಚ್ಚಾಗಿ ಉಪಯೋಗಿಸಲ್ಪಟ್ಟದೆ ಕಾಂತಿಯಿಂದ ಕೂಡಿದ ರೂಪವುಳ್ಳ

ವರಾಗಿದ್ದರಿಂದ, **ಸುಪ್ರತೀಕಃ, ಸುಸಂದೃಶಃ** ಎಂಬ ವಿಶೇಷಣಗಳು ಇವರ ವಿಷಯದಲ್ಲಿ ಅಧಿಕವಾಗಿ ಉಪಯುಕ್ತವಾಗಿವೆ

**ತಳಿತ್—ತಳಿತ್, ಆಸಾತ್, ಅಂಬರಂ—** ಇತ್ಯಾದಿ ಹನ್ನೊಂದು **ಅಂತಿಕ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಹತ್ತಿರದಲ್ಲಿ ಎಂದರ್ಥ. ಅಗ್ನಿಯು ಅತಿಶಯವಾದ ಪ್ರಕಾಶವು ದೂರದಲ್ಲಿದ್ದರೂ ಹತ್ತಿರದಲ್ಲಿರುವಂತೆಯೇ ಶೋಭಿಸುತ್ತದೆ.

**ಅಂಧಃ—ತಮೋಽಪ್ಯಂಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ। ನ ದರ್ಶನಮಂಧಂತಮ ಇತ್ಯಭಿಭಾಷಂತೇ ।** (ನಿ. ೫-೧) ಅವಧಾನದಿಂದ ಅಥವಾ ಗಮನವಿಟ್ಟು ನೋಡಲಾಗದಿರುವುದು. ಅಂಧ ಶಬ್ದಕ್ಕೆ ಕತ್ತಲು ಎಂದರ್ಥ. ಕುರುಡಾಗಿಸುವ ಕತ್ತಲೆಯೆಂದು ಜನಗಳು ಆಡುವ ಭಾಷೆಯು ಪ್ರಸಿದ್ಧವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವತಃ—** ವಿಶ್ವ ಶಬ್ದಕ್ಕೆ ಪಂಚಮ್ಯರ್ಥದಲ್ಲಿ **ಪಂಚಮ್ಯಾಸ್ತಸಿಲ್** ಎಂಬುದರಿಂದ ತಸಿಲ್ ಪ್ರತ್ಯಯ. **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸುಪ್ರತೀಕಃ—** ಶೋಭನಂ ಪ್ರತೀಕಃ ಅಂಗಂ ಯಸ್ಯ ಸಃ ಸುಪ್ರತೀಕಃ ಸುಸ್ವರವು ಪ್ರಾಪ್ತವಾದರೆ **ಕೃತ್ಯಾದಯಶ್ಚ** ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಸದೃಙ್—** ದೃಶಿರ್ ಪ್ರೇಕ್ಷಣೇ ಧಾತು. ಇದಕ್ಕೆ ಸಮಾನವೆಂಬ ಪದವು ಉಪಪದವಾಗಿರುವಾಗ **ಸಮಾನಾನ್ಯಯೋಶ್ಚೇತಿ ವಕ್ತವ್ಯಮ್—** (ಪಾ. ಸೂ. ೩-೨-೧) ಎಂಬುದರಿಂದ ಕ್ವಿನ್ ಪ್ರತ್ಯಯ. ದೃಶ್ ಧಾತುವು ಪರದಲ್ಲಿರುವಾಗ **ದೃಗ್‌ದೃಶ ವತುಷು—**(ಪಾ. ಸೂ. ೬-೩-೮೮) ಎಂಬುದರಿಂದ ಸಮಾನ ಶಬ್ದಕ್ಕೆ ಸಭಾವ. ಸದೃಶ್ ಶಬ್ದವಾಗುತ್ತದೆ. ಇದಕ್ಕೆ ಸು ಪರವಾದಾಗ **ದೃಕ್‌ಸ್ವವಃಸ್ವತವಸಾಂ ಛಂದಸಿ—** (ಪಾ. ಸೂ. ೭-೧-೮೩) ಎಂಬುದರಿಂದ ನುಮಾಗಮ ಬರುತ್ತದೆ. ಸದೃನ್‌ಶಸ್ ಎಂದಿರುವಾಗ **ಸಂಯೋಗಾಂತಸ್ಯಲೋಪಃ** ಎಂಬುದರಿಂದ ಶಕಾರಕ್ಕೆ ಲೋಪ. ಮೊದಲು **ಹಲ್‌ಙ್ಯಾಭ್ಯೋ** ಸೂತ್ರದಿಂದ ಸುವಿಗೆ ಲೋಪ ಹೇಳಬೇಕು. **ಕ್ವಿನ್‌ಪ್ರತ್ಯಯಸ್ಯ ಕುಃ—** (ಪಾ. ಸೂ. ೮-೨-೬೨) ಎಂಬುದರಿಂದ ನಕಾರಕ್ಕೆ ಕುತ್ವದಿಂದ ಙಕಾರಾದೇಶ. ಸದೃಙ್ ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್‌ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಸಿ—** ಅಸ ಭುವಿ ಧಾತು. ಅದಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪರವಾದಾಗ **ತಾಸಸ್ತ್ಯೋರ್ಲೋಪಃ** ಎಂಬುದರಿಂದ ಧಾತುವಿನ ಸಕಾರಕ್ಕೆ ಲೋಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರ ಉಳಿಯುತ್ತದೆ.

**ರಾತ್ರ್ಯಾಃ—** ರಾತ್ರಿ ಶಬ್ದ ಇಕಾರಾಂತ ಸ್ತ್ರೀಲಿಂಗ. ಇದಕ್ಕೆ **ರಾತ್ರೇಶ್ಚಾಜಸೌ—**(ಪಾ. ಸೂ. ೪-೧-೩೧) ಎಂಬುದರಿಂದ ಙೀಪ್. ಷಷ್ಠೀಏಕವಚನಾಂತರೂಪ. ॥ ೭ ॥

——:o:——

ಸಂಹಿತಾಪಾಠಃ

ಪೂರ್ವೋ ದೇವಾ ಭವತು ಸುನ್ವತೋ ರಥೋಽಸ್ಮಾಕಂ ಶಂ-
ಸೋ ಅಭ್ಯಸ್ತು ದೂಢ್ಯಃ।
ತದಾ ಜಾನೀತೋತ ಪುಷ್ಯತಾ ವಚೋಽಗ್ನೇ ಸಖ್ಯೇ ಮಾ ರಿ-
ಷಾಮಾ ವಯಂ ತವ ॥೮॥

ಪದಪಾಠಃ

ಪೂರ್ವಃ । ದೇವಾಃ । ಭವತು । ಸುನ್ವತಃ । ರಥಃ । ಅಸ್ಮಾಕಂ । ಶಂಸಃ । ಅ-
ಭಿ । ಅಸ್ತು । ದುಃಽಧ್ಯಃ ।
ತತ್ । ಆ । ಜಾನೀತ । ಉತ । ಪುಷ್ಯತ । ವಚಃ । ಅಗ್ನೇ । ಸಖ್ಯೇ ।
ಮಾ । ರಿಷಾಮ । ವಯಂ । ತವ ॥೮॥

॥ ಸಾಯಣಭಾಷ್ಯಂ ॥

ಹೇ ದೇವಾ ಅಗ್ನ್ಯವಯವಭೂತಾಃ ಸರ್ವೇ ದೇವಾಃ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ರಥಃ ಪೂರ್ವ ಅನ್ಯೇಷಾಮಯಜಮಾನಾನಾಂ ರಥೇಭ್ಯೋ ಮುಖ್ಯೋ ಭವತು । ಅಪಿ ಚಾಸ್ಮಾಕಂ ಶಂಸಃ ಶಂಸನೀಯಮಭಿಶಾಪರೂಪಂ ಪಾಪಂ ದೂಢ್ಯೋ ದುರ್ಧಿಯಃ ಪಾಪಬುದ್ಧೀನಸ್ಮ-ದನಿಷ್ಟಾಚರಣಪರಾಞ್ಛತ್ರೂನಭ್ಯಸ್ತು । ಅಭಿಭವತು । ತಾನ್ಬಾಧತಾಂ । ತದಿದಂ ಮದ್ವಾಕ್ಯಂ ಹೇ ದೇವಾ ಆ ಜಾನೀತ । ಅಭಿಮುಖ್ಯೇನಾವಗಚ್ಛತ । ಉತಾಪಿ ಚ ತನ್ಮಚೋಽಸ್ಮದೀಯಂ ವಚನಂ ತದರ್ಥಾಚರಣೇನ ಪುಷ್ಯತ । ಪ್ರವರ್ಧಯತ । ಹೇ ಸರ್ವದೇವಾತ್ಮಕಾಗ್ನೇ ಸಖ್ಯ ಇತ್ಯಾದಿ ಪೂರ್ವವತ್ ॥ ಸುನ್ವತಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಶಂಸಃ । ಶಂಸ್ಯತೇ ಕೀರ್ತ್ಯತ ಇತಿ ಶಂಸೋಽಭಿ-ಶಾಪಃ । ಕರ್ಮಣಿ ಘಞ್ । ಞಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ದೂಢ್ಯಃ । ದುಷ್ಟಂ ಧ್ಯಾಯಂತೀತಿ ದುರ್ಧಿಯಃ । ಧ್ಯೈ ಚಿಂತಾಯಾಮಿತ್ಯಸ್ಮಾತ್ ಕ್ವಿಪ್ಚೇತಿ ಕ್ವಿಪ್ । ದೃಶಿಗ್ರಹಣಾನುವೃತ್ತೇಸ್ತಸ್ಯ ಚ

**ವಿಧ್ಯಂತರೋಪಸಂಗ್ರಹಾರ್ಥತ್ವಾತ್ಸಂಪ್ರಸಾರಣಂ । ಪೃಷೋದರಾದಿಷು ಧ್ಯೈ ಚೇತಿ ಪಾಠಾದ್ದುರೋ ರೇಫಸ್ಯೋತ್ವಂ ಉತ್ತರಪದಾದೇಃ ಷ್ಟುತ್ವಂ ಚ ॥**

॥ ಪ್ರತಿಪದಾರ್ಥ ॥

**ದೇವಾಃ**—(ಅಗ್ನಿಯ ಅವಯವಗಳಾದ) ಸಕಲ ದೇವತೆಗಳೇ । **ಸುನ್ವತಃ**—ಸೋಮರಸವನ್ನು ಹಿಂಡುವ ಯಜಮಾನನ । **ರಥಃ**—ರಥವು । **ಪೂರ್ವಃ**—(ಇತರ ಎಲ್ಲರ ರಥಕ್ಕಿಂತಲೂ) ಮುಂದಾಗಿ । **ಭವತು**—ಇರಲಿ । **ಅಸ್ಮಾಕಂ**—ನಮ್ಮ । **ಶಂಸಃ**—ನಿಂದಾರೂಪವಾದ ಅನಿಷ್ಟವು । **ದೂಢ್ಯಃ**—ಪಾಪ ಬುದ್ಧಿಗಳುಳ್ಳ ಶತ್ರುಗಳನ್ನು । **ಅಭ್ಯಸ್ತು**—ಹಿಂಸಿಸಲಿ । **ತತ್**—(ನನ್ನ) ಈ ಸ್ತೋತ್ರವನ್ನು । **ಆ ಜಾನೀತ**—ಚೆನ್ನಾಗಿ ಅರ್ಥಮಾಡಿಕೊಳ್ಳಿರಿ । **ಉತ**—ಮತ್ತು । **ವಚಃ**—ನನ್ನ ಪ್ರಾರ್ಥನೆಯನ್ನು । **ಪುಷ್ಯತ**—ನೆರವೇರಿಸಿರಿ । **ಅಗ್ನೇ**—ಎಲೈ ಅಗ್ನಿಯೇ । **ತವ**—ನಿನ್ನ । **ಸಖ್ಯೇ**—ಸ್ನೇಹವಿರಲಾಗಿ। **ವಯಂ**—ನಾವು । **ಮಾ:ರಿಷಾಮ**—ಹಿಂಸಿತರಾಗದೇ ಇರುವಂತಾಗಲಿ॥

॥ ಭಾವಾರ್ಥ ॥

ಎಲೈ ದೇವತೆಗಳೇ, ನೀವೆಲ್ಲಾ ಅಗ್ನಿಯ ಅವಯವಗಳೇ ಆಗಿದ್ದೀರಿ. ನಿಮ್ಮ ದಯೆಯಿಂದ ಸೋಮರಸವನ್ನು ಹಿಂಡುವ ಯಜಮಾನನ ರಥವು ಇತರ ಎಲ್ಲರ ರಥಕ್ಕಿಂತಲೂ ಮುಂದಾಗಿರಲಿ ನಮ್ಮ ನಿಂದಾರೂಪವಾದ ಅನಿಷ್ಟವು ಪಾಪಬುದ್ಧಿಗಳುಳ್ಳ ಶತ್ರುಗಳನ್ನು ಹಿಂಸಿಸಲಿ. ನನ್ನ ಈ ಸ್ತೋತ್ರವನ್ನು ನೀವೆಲ್ಲರೂ ಚೆನ್ನಾಗಿ ಅರ್ಥಮಾಡಿಕೊಳ್ಳಿರಿ ಮತ್ತು ನನ್ನ ಪ್ರಾರ್ಥನೆಯನ್ನು ನೆರವೇರಿಸಿರಿ. ಎಲೈ ಅಗ್ನಿಯೇ, ನಿನ್ನೊಡನೆ ಇರುವ ಸ್ನೇಹದಿಂದ ನಾವು ಯಾವ ವಿಧದಲ್ಲಿಯೂ ಹಿಂಸಿತರಾಗದೇ ಇರುವಂತಾಗಲಿ.

## English Translation

Gods, let the chariot of the offerer of the libation be foremost ; let our, denunciations overwhelm the wicked ; understand and fulfil my words ; Agni! let us not suffer injury through your friendship.

ವಿಶೇಷವಿಷಯಗಳು

**ದೂಢ್ಯಃ**—**ದುರ್ಧಿಯಃ ಪಾಪಬುದ್ಧಯಃ** ( ನಿ. ೫-೨ ) ದುಷ್ಟವಾದವೂ ಪಾಪಾತ್ಮಕವಾದವೂ ಆದ ಬುದ್ಧಿಗಳುಳ್ಳ ನಮ್ಮ ಶತ್ರುಗಳನ್ನು ಎಂದರ್ಥ.

**ಶಂಸಃ**—**ಅಭಿಶಾಪರೂಪಂ ಪಾಪಂ ।** ನಿಂದಾತ್ಮಕವಾದ ನಮ್ಮ ಪಾಪವು ನಮ್ಮ ಶತ್ರುಗಳನ್ನು ಆಕ್ರಮಿಸಿ ಹಿಂಸಿಸಲಿ.

**ಪುಷ್ಯತ**—**ಪ್ರವರ್ಧಯತ ।** ತುಂಬಿ ಬೆಳೆಯುವಂತೆ ಮಾಡಿರಿ.

ವ್ಯಾಕರಣಪ್ರಕ್ರಿಯಾ

**ಸುನ್ವತಃ**— **ಷುಞ್** ಅಭಿಷವೇ ಧಾತು. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಸ್ವಾದಿಭ್ಯಃ ಶ್ನುಃ** ಎಂಬುದರಿಂದ ಶ್ನು ವಿಕರಣ. ಧಾತುವಿನ ಆದಿಗೆ ಸಕಾರಾದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ವಿಕರ

ಣಕ್ಕೂ ಪ್ರತ್ಯಯಕ್ಕೂ ಹುವ್ಯವಧಾನವಿರುವುದರಿಂದ ಇತಿಗೆ ಗುಣ ಬರುವುದಿಲ್ಲ. ಸುಸ್ವತ್ ಶಬ್ದವಾಗುತ್ತದೆ. ಚತುರ್ಥಿ ಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ ಅದು ಅಜಾದಿಯಾದುದರಿಂದ **ಶತುರನುಮೋ ನದ್ಯಜಾದೀ**—(ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಶಂಸಃ**— ಶಂಸು ಸ್ತುತೌ ಧಾತು. ಶಂಸ್ಯತೇ ಕೀರ್ತ್ಯತೇ ಇತಿ ಶಂಸಃ ಅಭಿಶಾಪಃ ಕರ್ಮಣಿಯಲ್ಲಿ ಘಞ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಪ್ರತ್ಯಯ ಞಿತ್ತಾಗುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ದೂಢ್ಯಃ**—ದುಷ್ಟಂ ಧ್ಯಾಯಂತಿ ಇತಿ ದುರ್ಧಿಯಃ ಧ್ಯೈ ಚಿಂತಾಯಾಂ ಧಾತು. ಇದಕ್ಕೆ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಅನ್ಯೇಭ್ಯೋಽಪಿ ದೃಶ್ಯಂತೇ**— (ಪಾ. ಸೂ. ೩-೨-೭೫) ಎಂಬುದರಿಂದ ಈ ಸೂತ್ರದಲ್ಲಿ ದೃಶಿಗ್ರಹಣವು ಅನುವೃತ್ತವಾಗುವುದರಿಂದ ಅದು (ದೃಶಿ) ಕಾರ್ಯಾಂತರವನ್ನು ಬೋಧಿಸುವುದರಿಂದ ಈ ಧಾತುವಿಗೆ ಕ್ವಿಪ್ ಪರವಾದಾಗ ಸಂಪ್ರಸಾರಣ ಬರುತ್ತದೆ. **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬಲ್ಲಿ ಪೃಷೋದರಾದಿಯಲ್ಲಿ **ಧ್ಯೈ ಚ** ಎಂದು ಪಾಠಮಾಡಿರುವುದರಿಂದ ಇದರ ಪೂರ್ವದಲ್ಲಿರುವ ದುರಿನ ರೇಫಕ್ಕೆ ಉತ್ವವೂ ಉತ್ತರಪಾದಾದಿಯಾದ ಧಾತುವಿನ ಧಕಾರಕ್ಕೆ ಷ್ಟುತ್ವವೂ ಬರುತ್ತವೆ.

**ಜಾನೀತ**—ಜ್ಞಾ ಅವಬೋಧನೇ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಜ್ವ್ಯವಧಾನವಿರುವುದರಿಂದ ತಆದೇಶ. **ಜ್ಞಾಜನೋರ್ಜಾ**— (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. ಹಲಾದಿ ಙಿತ್ತಾದಪ್ರತ್ಯಯ ಪರದಲ್ಲಿರುವುದರಿಂದ **ಈಹಲ್ಯಘೋಃ**- (ಪಾ. ಸೂ. ೬-೪-೧೧೩) ಎಂಬುದರಿಂದ ವಿಕರಣಕ್ಕೆ ಈತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪುಷ್ಯತಃ**— ಪುಷ ಪುಷ್ಟೌ ಧಾತು. ದಿವಾದಿ ಲೋಣ್ಮಧ್ಯಮಪುರುಷ ಬಹುವಚನ ರೂಪ. ತಿಙಂತ ನಿಘಾತಸ್ವರ ಬರುತ್ತದೆ. **ಅನ್ಯೇಷಾಮಪಿ ದೃಶ್ಯತೇ** ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ॥ ೮ ॥

---

॥ ಸಂಹಿತಾಪಾಠಃ ॥

ವಧೈರ್ದುಃಶಂಸಾಁ ಅಪ ದೂಢ್ಯೋ ಜಹಿ ದೂರೇ ವಾ ಯೇ
ಅಂತಿ ವಾ ಕೇ ಚಿದತ್ರಿಣಃ।

ಅಥಾ ಯಜ್ಞಾಯ ಗೃಣತೇ ಸುಗಂ ಕೃಧ್ಯಗ್ನೇ ಸಖ್ಯೇ ಮಾ
ರಿಷಾಮಾ ವಯಂ ತವ ॥೯॥

ಪದಪಾಠಃ

ವಧೈಃ । ದುಃऽಶಂಸಾನ್ । ಅಪ । ದುಃऽಧ್ಯಃ । ಜಹಿ । ದೂರೇ । ವಾ ।
ಯೇ । ಅಂತಿ । ವಾ । ಕೇ । ಚಿತ್ । ಅತ್ರಿಣಃ ।
ಅಥ । ಯಜ್ಞಾಯ । ಗೃಣತೇ । ಸುऽಗಂ । ಕೃಧಿ । ಅಗ್ನೇ । ಸಖ್ಯೇ । ಮಾ ।
ರಿಷಾಮ । ವಯಂ । ತವ ॥೯॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ವಧೈರ್ಹನನಸಾಧನೈರಾಯುಧೈರ್ದುಃಶಂಸಾನ್ದುಃಖೇನ ಕೀರ್ತನೀಯಾನ್ದುಧ್ಯೋ ದುರ್ಧಿಯಃ ಪಾಪಬುದ್ಧೀನಪ ಜಹಿ । ವಧಂ ಪ್ರಾಪಯ । ಯೇ ಕೇಚಿತ್ ಯೇ ಕೇ ಚನ ದೂರೇ ವಿಪ್ರಕೃಷ್ಟದೇಶೇ ವಾಂತಿಕೇ ಸಮೀಪದೇಶೇ ವಾ ವರ್ತಮಾನಾ ಅತ್ರಿಣೋಽತ್ತಾರೋ ರಾಕ್ಷಸಾದಯೋ ವಿದ್ಯಂತೇ ತಾನ್ದುರ್ಧಿಯೋಽಪ ಜಹೀತ್ಯರ್ಥಃ ॥ ಅಥಾನಂತರಂ ಯಜ್ಞಾಯ ಯಜ್ಞಪತಯೇ ಗೃಣತೇ ತ್ವಾಂ ಸ್ತುವತೇ ಯಜಮಾನಾಯ ಸುಗಂ ಶೋಭನಂ ಮಾರ್ಗಂ ಕೃಧಿ । ಕುರು । ಅನ್ಯತ್ಪೂರ್ವವತ್ ॥ ವಧೈಃ । ಹನಶ್ಚ ವಧ ಇತಿ ಹಂತೇಃ ಕರಣೇಽಪ್ ವಧಾದೇಶಶ್ಚ । ಸ ಚಾದಂತೋಽಂತೋದಾತ್ತಃ । ತಸ್ಯಾತೋ ಲೋಪೇ ಸತ್ಯುದಾತ್ತನಿವೃತ್ತಿಸ್ವರೇಣ ಪ್ರತ್ಯಯಸ್ಯೋದಾತ್ತತ್ವಂ । ದುಃಶಂಸಾನ್ । ಈಷದ್ದುಃಸುಷ್ವಿತಿ ಕರ್ಮಣಿ ಖಲ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಜಹಿ । ಲೋಟಿ ಹಿಃ । ಹಂತೇರ್ಜ ಇತಿ ಜಾದೇಶಃ । ತಸ್ಯಾಸಿದ್ಧವದತ್ರಾಭಾದಿತ್ಯಸಿದ್ಧತ್ವಾದ್ಧೇರ್ಲುಗಭಾವಃ । ಅಂತಿ । ಅಂತಿಕಸ್ಯ ಕಾದಿಲೋಪೋ ಬಹುಲಮಿತಿ ಕಲೋಪಃ । ಅತ್ರಿಣಃ । ಅದೇಸ್ತ್ರಿನಿ ಚೇತಿ ತ್ರಿನಿಪ್ರತ್ಯಯಃ । ಇಕಾರೋ ನಕಾರಪರಿತ್ರಾಣಾರ್ಥಃ । ಗೃಣತೇ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಸುಗಂ । ಸುದುರೋರಧಿಕರಣೇ । ಪಾ. ೩-೨-೪೮-೩ । ಇತಿ ಗಮೇರ್ಡಃ । ಕೃಧಿ । ಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ವಧೈಃ**—ಸಾವನ್ನುಂಟುಮಾಡುವ ಆಯುಧಗಳಿಂದ । **ದುಃಶಂಸಾನ್**—ದುಷ್ಟರೆಂದು ಪ್ರಸಿದ್ಧರಾಗಿರುವವರೂ । **ದೂಢ್ಯಃ**— ಪಾಪಬುದ್ಧಿಯುಳ್ಳವರೂ ಆದ ಶತ್ರುಗಳನ್ನು । **ಅಪ ಜಹಿ**—ಸಾಯಿಸಿಬಿಡು । **ಯೇ ಕೇಚಿತ್**—ಯಾವ ಶತ್ರುವಾಗಲಿ । **ದೂರೇ**—ದೂರದಲ್ಲಿ । **ವಾ**—ಅಥವಾ ಹತ್ತಿರದಲ್ಲಿ । **ವಾ**—ಇದ್ದರೂ । **ಅತ್ರಿಣಃ**—ಅಂತಹ ರಾಕ್ಷಸಾದಿದುಷ್ಟ ಶತ್ರುಗಳನ್ನು (ಸಾಯಿಸು) । **ಅಥ**—ಆಮೇಲೆ । **ಯಜ್ಞಾಯ**—ಯಜ್ಞಕರ್ತನೂ । **ಗೃಣತೇ**—( ನಿನ್ನನ್ನು ) ಸ್ತೋತ್ರಮಾಡುವವನೂ ಆದ ಯಜಮಾನನಿಗೆ । **ಸುಗಂ**—ಶೋಭನವಾದ ಮಾರ್ಗವನ್ನು । **ಕೃಧಿ**—ಉಂಟುಮಾಡು । **ಅಗ್ನೇ**—ಎಲೈ ಅಗ್ನಿಯೇ । **ತವ**—ನಿನ್ನ । **ಸಖ್ಯೇ**—ಸ್ನೇಹವಿರುವುದರಿಂದ । **ವಯಂ**—ನಾವು । **ಮಾ ರಿಷಾಮ**—ಹಿಂಸೆಯನ್ನು ಅನುಭವಿಸದೇ ಇರೋಣ ॥

ಭಾವಾರ್ಥ

ಎಲೈ ಅಗ್ನಿಯೇ, ದುಷ್ಟರೆಂದು ಪ್ರಸಿದ್ಧರಾಗಿರುವವರೂ, ಪಾಪ ಬುದ್ಧಿಯುಳ್ಳವರೂ ಆದ ಶತ್ರುಗಳನ್ನು ವಧಕಾರಿಗಳಾದ ನಿನ್ನ ಆಯುಧಗಳಿಂದ ಸಾಯಿಸಿಬಿಡು. ದೂರದಲ್ಲಿರಲಿ ಅಥವಾ ಹತ್ತಿರದಲ್ಲಿರಲಿ. ರಾಕ್ಷಸಾದಿಗಳಾದ ನಮ್ಮ ದುಷ್ಟಶತ್ರುಗಳನ್ನು ಸಾಯಿಸು. ಯಜ್ಞಕರ್ತನೂ, ನಿನ್ನನ್ನು ಸ್ತೋತ್ರಮಾಡುವವನೂ ಆದ ಯಜಮಾನನಿಗೆ ಶೋಭನಕಾರಿಯಾದ ಮಾರ್ಗವನ್ನುಂಟುಮಾಡು. ನಿನ್ನ ಸ್ನೇಹದ ನಿಮಿತ್ತವಾಗಿ ಯಾವ ಹಿಂಸೆಯನ್ನೂ ನಾವು ಅನುಭವಿಸದಿರುವಂತೆ ಅನುಗ್ರಹಿಸು.

English Translation

Overcome with your fatal (weapons) the wicked and the impicus, all who are enemies whether distant or near, and then provide an easy ( path ) for the sacrficer who praises you ; Agni, let us not suffer injury through your friendship.

ವಿಶೇಷವಿಷಯಗಳು

**ವಧೈಃ—ಹನನಸಾಧನೈರಾಯುಧೈಃ** । ಕೊಲ್ಲಲು ಸಾಧನಗಳಾದ ಆಯುಧಗಳಿಂದ ಎಂದರ್ಥ. ಸಾಧಾರಣವಾಗಿ ಋಕ್ಸಂಹಿತೆಯಲ್ಲಿ **ವಧೈಃ** ಎನ್ನುವ ಪದವನ್ನು **ವಧಸಾಧನೈರುಪಾಯೈಃ**, ಎಂಬ ಅರ್ಥದಲ್ಲಿಯೇ ಉಪಯೋಗಿಸಿದ್ದಾರೆ. ಉದಾಹರಣೆಗೆ –

**ಕುತ್ಸಾಯ ಯತ್ರ ಪುರುಹೂತ ವನ್ವಞ್ಛುಷ್ಣಮನಂತೈಃ ಪರಿಯಾಸಿ ವಧೈಃ ।**

(ಋ. ಸಂ. ೧–೧೭೧–೯)

**ಸ್ವಯಂ ಸೋ ಅಸ್ಮದಾ ನಿದೋ ವಧೈರಜೇತ ದುರ್ಮತಿಂ ।**

( ಋ. ಸಂ. ೧-೧೨೯-೬ )

ಹೀಗೆಯೇ, ೧-೧೩೩-೬ ; ೨-೨೮-೭ ; ೬-೨೦-೪ ಇತ್ಯಾದಿ ಋಕ್ಕುಗಳಲ್ಲೆಲ್ಲಾ **ವಧೈಃ** ಎನ್ನುವ ಪದವನ್ನು ವಧಸಾಧನವೆಂಬ ಅರ್ಥದಲ್ಲಿಯೇ ಉಪಯೋಗಿಸಿದೆ.

**ಅತ್ರಿಣಃ**—**ಅತ್ತಾರಃ**, ಭಕ್ಷಿಸತಕ್ಕ ನರಭಕ್ಷಕರಾದ ಅಥವಾ ಹೊಟ್ಟೆಬಾಕರಾದ ರಾಕ್ಷಸರನ್ನು.

**ಸುಗಂ**—**ಶೋಭನಂ ಮಾರ್ಗಂ ।** ಸಂಚಾರದ ದೃಷ್ಟಿಯಿಂದ ಸುಲಭವಾಗಿ ಸಂಚರಿಸಬಹುದಾದ ಮಾರ್ಗವೆಂದೂ, ನೈತಿಕದೃಷ್ಟಿಯಿಂದ ಶ್ರೇಷ್ಠವಾದ ಮಾರ್ಗವೆಂದೂ ಅರ್ಥವಾಗುತ್ತದೆ. ಈ ಎರಡು ಅರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ದೇವಯಾನಾನ್ ಸುಗಾನ್ ಪಥಃ ಕುರುಷ್ವ ಸುಮನಾಃ ಸ್ವಯಂ ।**

( ಬೃಹದ್ದೇವತಾ. ೭-೬-೫ )

ಎಂಬ ಶ್ಲೋಕದಲ್ಲಿ ದೇವತೆಗಳು ಸುಲಭವಾಗಿ ಸಂಚರಿಸತಕ್ಕ ಮಾರ್ಗಗಳೆಂದಾಗುತ್ತದೆ. ಇದೇ ಅರ್ಥದಲ್ಲಿ ಋಕ್ಸಂಹಿತೆಯಲ್ಲಿಯೂ ಸಹ

**ಶಂ ನಃ ಕರತ್ಯರ್ವತೇ ಸುಗಂ ಮೇಷಾಯ ಮೇಷ್ಯೇ ।**
**ನೃಭ್ಯೋ ನಾರಿಭ್ಯೋ ಗವೇ ॥**

( ಋ. ಸಂ. ೧-೪೩-೬ )

ಈ ಋಕ್ಕಿನಲ್ಲಿಯೂ, ೮-೯೩-೧೦ ; ೧೦-೮೬-೫. ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಸುಲಭವಾಗಿ ಸಂಚರಿಸಬಹುದಾದ ಮಾರ್ಗವೆಂದೂ,

**ಬೃಹಸ್ಪತೇ ಅಪ ತಂ ವರ್ತಯಾ ಪಥಃ ಸುಗಂ ನೋ ಅಸ್ಯೈ ದೇವವೀತಯೇ ಕೃಧಿ ।**

( ಋ. ಸಂ. ೨-೨೩-೭ )

ಇತ್ಯಾದಿ ಋಕ್ಕುಗಳಲ್ಲಿ ಬರುವ **ಸುಗಂ** ಶಬ್ದಕ್ಕೆ ನೈತಿಕವಾದ ದೃಷ್ಟಿಯಲ್ಲಿ **ಸುಷ್ಠು ಗಂತವ್ಯಂ । ಯಜ್ಞಾನುಷ್ಠಾನಾಯ ಸುಮತಿಂ ದೇಹಿ ।** ಯಜ್ಞಾನುಷ್ಠಾನಾದಿಗಳನ್ನು ಮಾಡತಕ್ಕ ಸದ್ಬುದ್ಧಿಯೆಂದೂ ಅರ್ಥವಾಗುತ್ತದೆ. ಇದೂ ಅಲ್ಲದೇ, ೧-೧೦೨-೪ ; ೭-೧೦೪-೭ ; ಇತ್ಯಾದಿ ಸ್ಥಳಗಳಲ್ಲಿ **ಸುಗಂ** ಎಂಬ ಶಬ್ದಕ್ಕೆ ಸುಖವೆಂದೂ ವಿವರಿಸಿದೆ.

ಈ ಕೊನೆಯ ಅರ್ಥವನ್ನೇ ಈ ಋಕ್ಕಿನಲ್ಲಿಯೂ ಹೇಳಬೇಕೆಂದು ಸ್ಕಂದಸ್ವಾಮಿಗಳು ವಿವರಿಸುತ್ತಾ **ಅಪಠಿತಮಪಿ ಸುಖನಾಮೈತತ್ ; ಇಹ ದ್ರಷ್ಟವ್ಯಂ ;** ಎಂದು

**ಅಸ್ಮಭ್ಯಮಿಂದ್ರ ವರಿವಃ ಸುಗಂ ಕೃಧಿ ಪ್ರ ಶತ್ರೂಣಾಂ ಮಘವನ್ ವೃಷ್ಣ್ಯಾ ರುಜ ।**

( ಋ. ಸಂ. ೧-೧೦೨-೪ )

ಎಂಬ ಋಕ್ಕನ್ನು ಉದಹರಿಸಿ ಅಲ್ಲಿ ಅರ್ಥವಾಗುವಂತೆಯೇ ಇಲ್ಲಿಯೂ ಸಹ **ಸುಗ** ಶಬ್ದವು **ಸುಖ**ನಾಮಗಳಲ್ಲಿ ಪಠಿತವಾಗಿಲ್ಲದಿದ್ದರೂ ಸಹ **ಸುಖ**ವೆಂದೇ ಅರ್ಥವಾಗುತ್ತದೆ ಎಂಬು ವಿವರಿಸುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ವಧೈಃ**—ಹನ ಹಿಂಸಾಗತ್ಯೋಃ ಧಾತು. ಇದಕ್ಕೆ **ಹನಶ್ಚ ವಧಃ**—(ಪಾ. ಸೂ. ೩-೩-೭೬) ಎಂಬುದರಿಂದ ಕರಣಾರ್ಥದಲ್ಲಿ ಅಪ್ ಪ್ರತ್ಯಯ. ಧಾತುವಿಗೆ ವಧಾದೇಶ. ವಧ ಎಂಬುದು ಅಕಾರಾಂತವಾಗಿಯೂ ಅಂತೋದಾತ್ತವಾಗಿಯೂ ಬರುತ್ತದೆ. ಆಗ **ಅತೋ ಲೋಪಃ** ಎಂಬುದರಿಂದ ಅಪ್ ನಿಮಿತ್ತವಾಗಿ ಅದರ ಅಕಾರಕ್ಕೆ ಲೋಪ.

ಅಪ್‌ಪಿತ್ತಾಗುವದರಿಂದ ಅನುದಾತ್ತ. ಅನುದಾತ್ತ ನಿಮಿತ್ತವಾಗಿ ಉದಾತ್ತ ಅಕಾರ ಲೋಪವಾದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ**— (ಪಾ. ಸೂ. ೬-೧-೧೬೧) ಎಂಬುದರಿಂದ ಪ್ರತ್ಯಯಕ್ಕೆ ಉದಾತ್ತಸ್ವರ ಬರುತ್ತದೆ.

**ದುಃಶಂಸಾನ್**— ಶಂಸು ಸ್ತುತೌ ಧಾತು. ಇದಕ್ಕೆ ಕೃಚ್ಛ್ರಾರ್ಥತೋರುತ್ತಿರುವಾಗ ದುಸ್ ಉಪಪದವಾಗಿರುವಾಗ **ಈಷದ್ದುಃ ಸುಷು**— (ಪಾ. ಸೂ. ೩-೩-೧೨೬) ಎಂಬುದರಿಂದ ಕರ್ಮಣಿಯಲ್ಲಿ ಖಲ್ ಪ್ರತ್ಯಯ. ದುಃಶಂಸ ಶಬ್ದವಾಗುತ್ತದೆ. **ಲಿತಿ**— (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯವು ಲಿತ್ತಾದುದುರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನದಲ್ಲಿ ದುಃಶಂಸಾನ್ ಎಂಬ ರೂಪವಾಗುತ್ತದೆ. ಇದಕ್ಕೆ ಅಟ್ ಪರದಲ್ಲಿರುವುದರಿಂದ **ದೀರ್ಘಾದಟಿ ಸಮಾನಪಾದೇ** ಎಂಬುದರಿಂದ ನಕಾರಕ್ಕೆ ರುತ್ವವೂ **ಆತೋಟಿ ನಿತ್ಯಮ್** ಎಂಬುದರಿಂದ ಪೂರ್ವದಲ್ಲಿರುವ ಆಕಾರಕ್ಕೆ ಅನುನಾಸಿಕತ್ವವೂ ಬರುತ್ತದೆ.

**ಜಹಿ**— ಹನ ಹಿಂಸಾಗತ್ಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಹಿ ಪರವಾದಾಗ **ಹಂತೇರ್ಜಃ**— (ಪಾ. ಸೂ. ೬-೪-೩೬) ಎಂಬುದರಿಂದ ಧಾತುವಿಗೆ ಜಾದೇಶ. **ಅಸಿದ್ಧವದತ್ರಾಭಾತ್**— (ಪಾ. ಸೂ. ೬-೪-೨೨) ಎಂಬುದರಿಂದ ಜಾದೇಶ ಬಂದುದು ಅಸಿದ್ಧವಾದುದರಿಂದ **ಅತೋ ಹೇಃ** ಎಂಬುದರಿಂದ ಹಿಗೆ ಲುಕ್ ಬರುವುದಿಲ್ಲ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಂತಿ**— ಅಂತಿಕ ಶಬ್ದ. ಇದಕ್ಕೆ **ಕಾದಿಲೋಪೋ ಬಹುಲಮ್** ಎಂಬುದರಿಂದ ಅಂತ್ಯಕಕಾರಕ್ಕೆ ಲೋಪ ಬರುತ್ತದೆ.

**ಅತ್ರಿಣಃ**—ಅದ ಭಕ್ಷಣೇ ಧಾತು. ಇದಕ್ಕೆ **ಅದೇಸ್ತ್ರಿನಿಚ**— (ಉ. ಸೂ. ೪-೫೦) ಎಂಬುದರಿಂದ ತ್ರಿನಿ ಪ್ರತ್ಯಯ. ಪ್ರತ್ಯಯದಲ್ಲಿ ನಕಾರೋತ್ತರ ಇಕಾರವು ನಕಾರವು ಲೋಪವಾಗದಂತೆ ಇರಲಿ ಎಂದು ಪಠಿತವಾಗಿದೆ. ಇಕಾರವು ಅಂತ್ಯದಲ್ಲಿ ಇಲ್ಲದಿದ್ದರೆ **ಹಲಂತ್ಯಮ್** ಎಂಬುದರಿಂದ ನಕಾರವು ಲೋಪವಾಗಬೇಕಾಗುತ್ತದೆ. ಅತ್ರಿನ್ ಶಬ್ದವಾಗುತ್ತದೆ. ಪ್ರಥಮಾ ಬಹುವಚನದಲ್ಲಿ ಅತ್ರಿಣಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಗೃಣತೇ**—ಗೄ ಧಾತುವು ಇಲ್ಲಿ ಸ್ತುತ್ಯರ್ಥದಲ್ಲಿ ಇದೆ. ಲಡರ್ಥದಲ್ಲಿ ಇದಕ್ಕೆ ಶತೃ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ **ಸಾರ್ವಧಾತುಕಮಪಿತ್** ಎಂಬುದರಿಂದ ಶತೃ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ ಇದು ಪರವಾದಾಗ **ಶ್ನಾಭ್ಯಸ್ತಯೋರಾತಃ**— (ಪಾ. ಸೂ. ೬-೪-೧೧೨) ಎಂಬುದರಿಂದ ಶ್ನಾ ವಿಕರಣವಾದ ಆಕಾರಕ್ಕೆ ಲೋಪ. ಗೃಣತ್ ಶಬ್ದವಾಗುತ್ತದೆ. ಚತುರ್ಥೀಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿರುವುದರಿಂದ ಚತುರ್ಥೀವಿಭಕ್ತಿಗೆ **ಶತುರನುಮೋ ನದ್ಯಜಾದೀ** ಎಂಬುದರಿಂದ ಉದಾತ್ತಸ್ವರ ಬರುತ್ತದೆ.

**ಸುಗಮ್**— ಗಮ್‌ೢ ಗತೌ ಧಾತು. ಇದಕ್ಕೆ ಸು ಉಪಪದವಾಗಿರುವಾಗ **ಸುದುರೋರಧಿಕರಣೇ**— (ಪಾ. ಸೂ. ೩-೨-೪೮) ಎಂಬುದರಿಂದ ಅಧಿಕರಣಾರ್ಥದಲ್ಲಿ ಡ ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ

ಲೋಪ. ಸುಗ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಕೃಧಿ**— ಡುಕೃಞ್ ಕರಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಶ್ರುಶೃಣುಪೃಕೃವೃಭ್ಯಶ್ಛಂದಸಿ**—(ಪಾ. ಸೂ. ೬-೪-೧೦೨) ಎಂಬುದರಿಂದ ಹಿಗೆ ಧಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೯ ॥



ಸಂಹಿತಾಪಾಠಃ

ಯದಯುಕ್ಥಾ ಅರುಷಾ ರೋಹಿತಾ ರಥೇ ವಾತಜೂತಾ ವೃಷಭ-
ಸ್ಯೇವ ತೇ ರವಃ ॥
ಆದಿನ್ವಸಿ ವನಿನೋ ಧೂಮಕೇತುನಾಗ್ನೇ ಸಖ್ಯೇ ಮಾ ರಿಷಾಮಾ
ವಯಂ ತವ ॥ ೧೦ ॥

॥ ಪದಪಾಠಃ ॥

ಯತ್ । ಅಯುಕ್ಥಾಃ । ಅರುಷಾ । ರೋಹಿತಾ । ರಥೇ । ವಾತऽಜೂತಾ ।
ವೃಷಭಸ್ಯऽಇವ । ತೇ । ರವಃ ।
ಆತ್ । ಇನ್ವಸಿ । ವನಿನಃ । ಧೂಮऽಕೇತುನಾ । ಅಗ್ನೇ । ಸಖ್ಯೇ । ಮಾ ।
ರಿಷಾಮ । ವಯಂ । ತವ । ॥ ೧೦ ॥

ಹೇ ಅಗ್ನೇ ಅರುಷಾರೋಚಮಾನೌ ರೋಹಿತಾ ಲೋಹಿತವರ್ಣೌ । ರೋಹಿತ ಇತ್ಯಗ್ನೇರಶ್ವ-ಸ್ಯಾಖ್ಯಾ । ರೋಹಿತೋಽಗ್ನೇರಿತಿ ದರ್ಶನಾತ್ । ರೋಹಿತೇನ ತ್ವಾಗ್ನಿರ್ದೇವತಾಂ ಗಮಯತು । ತೈ. ಸಂ. ೧-೬-೪-೩ । ಇತಿ ಮಂತ್ರವರ್ಣಾಚ್ಚ । ಏತೇ ವೈ ದೇವಾಶ್ವಾಃ । ತೈ. ಸಂ- ೧-೭-೪-೩ । ಇತಿ ಹಿ ತತ್ರ ವ್ಯಾಖ್ಯಾತಂ । ವಾತಜೂತಾ ವಾತಸ್ಯ ವಾಯೋರ್ಜೂತಂ ಜವೋ ವೇಗ ಇವ ವೇಗೋ ಯಯೋಸ್ತೌ । ಈದೃಶಾವಶ್ವೌ ರಥೇ ಯದ್ಯದಾಯುಕ್ಥಾಃ ಅಯೋಜಯಃ ತದಾನೀಂ ವನಾನಿ ದಹ-ತಸ್ತೇ ತವ ರವಃ ಶಬ್ದೋ ವೃಷಭಸ್ಯೇವ ದೃಪ್ತಸ್ಯ ಮಹೋಕ್ಷಸ್ಯ ಶಬ್ದ ಇವ ಗಂಭೀರೋ ಭವತಿ । ಆದನಂತರಂ ವನಿನೋ ವನಸಂಬದ್ಧಾನ್ವೃಕ್ಷಾನ್ಧೂಮಕೇತುನಾ ಧೂಮಃ ಕೇತುಃ ಪ್ರಜ್ಞಾಪಕೋ ಯಸ್ಯ ತಾದೃಶೇನ ರಶ್ಮಿನೇನ್ವಸಿ । ವ್ಯಾಪ್ನೋಷಿ । ಅನ್ಯತ್ಪೂರ್ವವತ್ ॥ ಅಯುಕ್ಥಾಃ । ಯುಜಿರ್ ಯೋಗೇ । ಲುಙಃ ಝಲೋ ಝಲೀತಿ ಸಕಾರಲೋಪಃ । ಅರುಷೇತ್ಯಾದಿದ್ವಿವಚನೇಷು ಸುಪಾಂ ಸುಲುಗಿತ್ಯಾ-ಕಾರಃ । ರವಃ । ರು ಶಬ್ದೇ । ಋದೋರಬಿತಿ ಭಾವೇಽಪ್ । ಇನ್ವಸಿ । ಇವಿ ವ್ಯಾಪ್ತೌ । ಭೌವಾದಿಕಃ । ಇದಿತ್ತ್ವಾನ್ನುಮ್ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಅರುಷಾ**—ಪ್ರಕಾಶಮಾನವಾದವೂ । **ರೋಹಿತಾ**—ಹೊಂಬಣ್ಣವುಳ್ಳವೂ । **ವಾತಜೂತಾ**—ವಾಯುವೇಗವುಳ್ಳವೂ ಆದ ( ನಿನ್ನ ) ಕುದುರೆಗಳು । **ರಥೇ**—ರಥದಲ್ಲಿ । **ಯತ್**—ಯಾವಾಗ **ಅಯುಕ್ಥಾಃ**—ಕಟ್ಟಲ್ಪಡುವುವೋ (ಆಗ) । **ತೇ**—(ಕಾಡನ್ನು ದಹಿಸುವ) ನಿನ್ನ । **ರವಃ**—ಶಬ್ದವು । **ವೃಷಭ-ಸ್ಯೇವ**—ಗೂಳಿಯ ಗುಟುರಿನಂತೆ (ಗಂಭೀರವಾಗಿರುತ್ತದೆ) । **ಆತ್**—ಅನಂತರ । **ವನಿನಃ**—ವನದಲ್ಲಿರುವ ಸಕಲ ವೃಕ್ಷಗಳನ್ನೂ । **ಧೂಮಕೇತುನಾ**—ಧ್ವಜದಂತಿರುವ ಹೊಗೆಯಿಂದ ಸೂಚಿತವಾಗುವ ಜ್ವಾಲೆಯಿಂದ । **ಇನ್ವಸಿ**—ಆವರಿಸಿಕೊಳ್ಳುತ್ತೀಯೆ । **ತವ**—ನಿನ್ನ । **ಸಖ್ಯೇ**—ಸ್ನೇಹದ ನಿಮಿತ್ತವಾಗಿ । **ವಯಂ**—ನಾವು । **ಮಾ ರಿಷಾಮ**—ಹಿಂಸೆಯನ್ನು ಅನುಭವಿಸದೇ ಇರುವಂತಾಗಲಿ ॥

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನವಾದವೂ, ಹೊಂಬಣ್ಣವುಳ್ಳವೂ ವಾಯುವೇಗವುಳ್ಳವೂ ಆದ ನಿನ್ನ ಕುದುರೆಗಳನ್ನು ನೀನು ರಥಕ್ಕೆ ಕಟ್ಟಿದ ಕೂಡಲೇ ಕಾಡನ್ನು ದಹಿಸುವ ನಿನ್ನ ಶಬ್ದವು ಗೂಳಿಯ ಗುಟರಿನಂತೆ ಗಂಭೀರವಾಗಿರುತ್ತದೆ. ಅನಂತರ ನೀನು ವನದಲ್ಲಿರುವ ಸಕಲ ವೃಕ್ಷಗಳನ್ನೂ ಸಹ ಧ್ವಜದಂತಿರುವ ಹೊಗೆಯಿಂದ ಕೂಡಿದ ಜ್ವಾಲೆಯಿಂದ ಆವರಿಸಿಕೊಳ್ಳುತ್ತೀಯೆ. ನಿನ್ನ ಸ್ನೇಹದ ನಿಮಿತ್ತವಾಗಿ ನಾವು ಯಾವಹಿಂಸೆಯನ್ನೂ ಅನುಭವಿಸದೇ ಇರುವಂತಾಗಲಿ.

When you have yoked the bright red horses, swift as the wind to your car, your roar is like that of a bull, and you envelope the forest trees with a banner of smoke ; Agni, let us not suffer injury, through your friendship.

ವಿಶೇಷವಿಷಯಗಳು

**ಅರುಷಾ—ಅರುಷ** ಶಬ್ದಕ್ಕೆ ಕೆಂಪುಬಣ್ಣ ಎಂದು ಸಾಧಾರಣವಾದ ಅರ್ಥವಿದ್ದರೂ ಸಹ ಇಲ್ಲಿ ಮಾತ್ರ ಪುನಃ **ರೋಹಿತಾ** ಎಂಬ ವಿಶೇಷಣವಿರುವುದರಿಂದ ಪ್ರಕಾಶಮಾನವಾದ ಎಂದು ಅರ್ಥಮಾಡಿರುವರು.

**ರೋಹಿತಾ—ರೋಹಿತೋಽಗ್ನೇಃ** (ನಿ. ೨-೨೮) ಎಂದು ನಿರುಕ್ತಕಾರರು ಅಗ್ನಿಯ ಕುದುರೆಯ ಸ್ವರೂಪ ವನ್ನು ತಿಳಿಸುತ್ತಾರೆ. ಹೊಂಬಣ್ಣವುಳ್ಳವೆಂದರ್ಥ.

**ವಾತಜೂತಾ—ವಾತಸ್ಯ ವಾಯೋಃ ಜೂತಂ ಜವಃ ವೇಗ ಇವ ವೇಗಃ ಯಯೋಃ ತೌ ।** ವಾಯುವಿನ ವೇಗದಂತೆ ವೇಗವುಳ್ಳ ಕುದುರೆಗಳೆಂದರ್ಥ, ಇಲ್ಲಿ **ವಾತಜೂತ**ವೆಂಬ ಪದವು ಅಗ್ನಿಯ ಕುದುರೆಗಳಿಗೆ ವಿಶೇಷಣವಾಗಿದೆ. ಕೆಲವು ಕಡೆಗಳಲ್ಲಿ ಅಗ್ನಿಗೇ ವಿಶೇಷಣವಾಗಿ ಉಪಯೋಗಿಸಿರುವುದೂ ಉಂಟು.

**ವಿ ವಾತಜೂತೋ ಅತಸೇಷು ತಿಷ್ಠತೇ ವೃಥಾ ಜುಹೂಭಿಃ ಸೃಣ್ಯಾ ತುವಿಷ್ವಣಿಃ ।**
( ಋ. ಸಂ. ೧-೫೮-೪ )

**ಯದ್ವಾತಜೂತೋ ವನಾ ವ್ಯಸ್ಥಾದಗ್ನಿರ್ದಾತಿ ರೋಮಾ ಪೃಥಿವ್ಯಾಃ ।**
(ಋ. ಸಂ. ೧-೬೫-೪)

ಇತ್ಯಾದಿಸ್ಥಳಗಳಲ್ಲಿ ಅಗ್ನಿಗೆ ವಿಶೇಷಣವಾಗಿ **ವಾತೇನ ಪ್ರೇರಿತಃ** ವಾಯುವಿನಿಂದ ಪ್ರೇರಿತನಾದ ಅಗ್ನಿಯು ಎಂದರ್ಥಗುತ್ತದೆ.

**ವನಿನಃ— ವನಸಂಬಧಾನ್ ವೃಕ್ಷಾನ್ ।**

**ಇನ್ವಸಿ**—ಇನ್ವತಿ, ನಕ್ಷತಿ, ಇತ್ಯಾದಿಹತ್ತು ವ್ಯಾಪ್ತಿಕರ್ಮವನ್ನು ಹೇಳುವ ಧಾತುಗಳಲ್ಲಿ ಪಠಿತವಾಗಿರು ವುದರಿಂದ (ನಿ. ೩-೧೦) ಇನ್ವಸಿ ಎಂದರೆ ವ್ಯಾಪಿಸುತ್ತೀಯೆ ಎಂದರ್ಥ.

**ಧೂಮಕೇತುನಾ—ಧೂಮಕೇತು**ವೆಂಬ ಶಬ್ದಕ್ಕೆ ಎರಡು ವಿಧವಾಗಿ ಅರ್ಥಮಾಡುತ್ತಾರೆ. **ಕೇತುಃ ಪತಾಕಾಃ ; ಕೇತುಃ ಪತಾಕಾಸ್ಥಾನೀಯೋ ಯಸ್ಯ ಸಃ ।** ಕೇತುವೆಂದರೆ ಧ್ವಜ. ಧೂಮವೇ ಧ್ವಜವಾಗಿರ ತಕ್ಕ ಅಗ್ನಿಯೆಂಗು ಒಂದು ವಿಧವಾಗಿಯೂ, **ಕೇತುಃ ಜ್ಞಾನಂ ವಾ । ಧೂಮೇನ ಯಃ ಜ್ಞಾಯತೇ ಸ ಇತಿ ವಾ** ಕೇತುವೆಂದರೆ ಜ್ಞಾನ. ಧೂಮದಿಂದ ಯಾವನು ತಿಳಿಯಲ್ಪಡುವನೋ ಆ ಅಗ್ನಿಯೆಂದು ಇನ್ನೊಂದು ವಿಧವಾಗಿಯೂ ಅರ್ಥವಾಗಬಹುದೆಂದು ವ್ಯಾಖ್ಯಾನಕಾರರು ವಿವರಿಸುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಅಯುಕ್ಥಾಃ**—ಯುಜಿರ್ ಯೋಗೇ ಧಾತು. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ **ಚ್ಲೇಃ ಸಿಚ್** ಎಂಬುದರಿಂದ ಚ್ಲಿಗೆ **ಸಿಚ್** ಆದೇಶ. **ಝಲೋ ಝಲಿ**—(ಪಾ. ಸೂ. ೮-೨-೨೬) ಎಂಬುದರಿಂದ ಸಿಚಿಗೆ ಲೋಪ. **ಚೋಃ ಕುಃ** ಎಂಬುದರಿಂದ ಜಕಾರಕ್ಕೆ ಕುತ್ವದಿಂದ ಗಕಾರಾದೇಶ. ಖರಿ ಚ ಎಂಬುದರಿಂದ

ಗಕಾರಕ್ಕೆ ಕಕಾರಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾಗುವುದರಿಂದ ಆದ್ಯುದಾತ್ತವಾದಪದವಾಗುತ್ತದೆ.

ಅರುಷಾ—ಅರುಷಾ, ರೋಹಿತ್ಯಾ ವಾತಭೂತಾ, ಈ ಶಬ್ದಗಳಿಗೆ ದ್ವಿವಚನ ಪರವಾದಾಗ (ಔ) **ಸುಪಾಂ ಸುಲುಕ್** ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ.

**ರವಃ**— ರು ಶಬ್ದೇ ಧಾತು. ಇದಕ್ಕೆ **ಋದೋರಪ್** ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿಗೆ ಗುಣ. ಅವಾದೇಶ. ಅಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರ ಉಳಿಯುತ್ತದೆ.

ಇನ್ವಸಿ— ಇವಿ ವ್ಯಾಪ್ತೌ ಧಾತು. ಭ್ವಾದಿ. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ ಬರುತ್ತದೆ. ಶಪ್ ವಿಕರಣ. ಲಟ್ ಮಧ್ಯಮಪುರುಷದಲ್ಲಿ ಸಿಪ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವನಿನಃ**—ವನ ಮೇಷಾಮಸ್ತಿ ಇತಿ ವನಿನಃ **ಅತ ಇನಿ ಠನ್** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ವನಿನ್ ಶಬ್ದವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

———— :o: ————

ಸಂಹಿತಾಪಾಠಃ

ಅಧ ಸ್ವನಾದುತ ಬಿಭ್ಯುಃ ಪತತ್ರಿಣೋ ದ್ರಪ್ಸಾ ಯತ್ತೇ ಯವ-
ಸಾದೋ ವ್ಯಸ್ಥಿರನ್ ।
ಸುಗಂ ತತ್ತೇ ತಾವಕೇಭ್ಯೋ ರಥೇಭ್ಯೋಽಗ್ನೇ ಸಖ್ಯೇ ಮಾ
ರಿಷಾಮಾ ವಯಂ ತವ ॥೧೧॥

ಪದಪಾಠಃ

ಅಧ । ಸ್ವನಾತ್ । ಉತ । ಬಿಭ್ಯುಃ । ಪತತ್ರಿಣಃ । ದ್ರಪ್ಸಾಃ । ಯತ್ । ತೇ ।
ಯವಸಽಅದಃ । ವಿ । ಅಸ್ಥಿರನ್ ।
ಸುಽಗಂ । ತತ್ । ತೇ । ತಾವಕೇಭ್ಯಃ । ರಥೇಭ್ಯಃ । ಅಗ್ನೇ । ಸಖ್ಯೇ ।
ಮಾ । ರಿಷಾಮ । ವಯಂ । ತವ ॥೧೧॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಅಧ ದಗ್ಧುಂ ವನಪ್ರವೇಶಾನಂತರಂ ಸ್ವನಾತ್ತ್ವದೀಯಾತ್ಪೂರ್ವೋಕ್ತಗಂಭೀರಶಬ್ದಾತ್ । ಉತಶಬ್ದೋಽಪ್ಯರ್ಥಃ । ಪತತ್ರಿಣಃ ಪಕ್ಷಿಣೋಽಪಿ ಬಿಭ್ಯುಃ । ಬಿಭ್ಯತಿ । ಭಯಂ ಪ್ರಾಪ್ನುವಂತಿ । ಉತ್ಪತನೇನ ದೇಶಾಂತರಂ ಗಂತುಂ ಸಮರ್ಥಾಃ ಪಕ್ಷಿಣೋಽಪಿ ಯದಾ ಭಯಂ ಪ್ರಾಪ್ನುವಂತಿ ಕಿಮು ವಕ್ತವ್ಯಮನ್ಯೇಷಾಂ ತತ್ರತ್ಯಾನಾಂ ವೃಕಾದೀನಾಂ ಭೀತಿರ್ಜಾಯತ ಇತಿ । ಅತಸ್ತ್ವಯಿ ವನಂ ಪ್ರವಿಶತಿ ಸರ್ವೇ ಪ್ರಾಣಿನೋ ಭಯಂ ಪ್ರಾಪ್ನುವಂತೀತ್ಯರ್ಥಃ । ತಾದೃಶಸ್ಯ ತೇ ತವ ದ್ರಪ್ಸಾ ಜ್ವಾಲೈಕದೇಶಾ ಯವಸಾದೋ ಯವಸಾನಾಮರಣ್ಯೇ ವರ್ತಮಾನಾನಾಂ ತೃಣಾನಾಮತ್ತಾರಃ ಸಂತೋ ಯದ್ಯದಾ ವ್ಯಸ್ಥಿರನ್ ವಿವಿಧಮುವತಿಷ್ಠಂತೇ ತತ್ತದಾ ತೇ ತವ ಸರ್ವಮರಣ್ಯಂ ಸುಗಂ ಸುಖೇನ ಗಂತುಂ ಶಕ್ಯಂ । ಅತಸ್ತಾವಕೇಭ್ಯಸ್ತ್ವದೀಯೇಭ್ಯೋ ರಥೇಭ್ಯಶ್ಚ ತದರಣ್ಯಂ ಸುಗಂ ಭವತಿ । ಪೂರ್ವಂ ಪ್ರವೃತ್ತೈರ್ಜ್ವಾಲಾಗ್ರೈಸ್ತೃಣಾದಿಷು ದಗ್ಧೇಷು ಸತ್ಸು ತ್ವದೀಯಾ ರಥಾಃ ಪ್ರತಿಬಂಧಮಂತರೇಣ ಪಶ್ಚಾದ್ಗಚ್ಛಂತೀತಿ ಭಾವಃ । ಅನ್ಯತ್ಸಮಾನಂ ॥ ಬಿಭ್ಯುಃ । ಞಿಭೀ ಭಯೇ । ಛಾಂದಸೋ ಲಿಟ್ । ಏರನೇಕಾಚ ಇತಿ ಯಣ್ । ವ್ಯಸ್ಥಿರನ್ । ಸಮವಪ್ರವಿಭ್ಯ ಇತಿ ತಿಷ್ಠತೇರಾತ್ಮನೇಪದಂ । ಲುಙಃ ವ್ಯತ್ಯಯೇನ ಝಸ್ಯ ರನ್ । ಸ್ಥಾಘ್ವೋರಿಚ್ಚೇತೀತ್ವಂ । ಹ್ರಸ್ವಾದಂಗಾತ್ । ಪಾ. ೮-೨-೨೭ । ಇತಿ ಸಲೋಪಃ । ತಾವಕೇಭ್ಯಃ । ತವಕಮಮಕಾವೇಕವಚನೇ ।ಪಾ. ಸೂ. ೪-೩-೩ । ಇತಿ ಯುಷ್ಮದಸ್ತವಕಾದೇಶಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅಧ—ನೀನು ವನಕ್ಕೆ ಪ್ರವೇಶಿಸಿದನಂತರ। ಸ್ವನಾತ್—(ನಿನ್ನ) ಶಬ್ದದಿಂದ । ಪತತ್ರಿಣಃ ಉತ— ಪಕ್ಷಿಗಳೂ ಕೂಡ । ಬಿಭ್ಯುಃ— ಭಯಪಡುತ್ತವೆ । ತೇ— ನಿನ್ನ । ದ್ರಪ್ಸಾಃ— ಜ್ವಾಲೆಯ ಅಂಶಗಳು । ಯವಸಾದಃ - ಹುಲ್ಲುಗಳನ್ನೆಲ್ಲಾ ದಹಿಸುತ್ತಾ । ಯತ್—ಯಾವಾಗ । ವ್ಯಸ್ಥಿರನ್—ಎಲ್ಲಾ ದಿಕ್ಕುಗಳಲ್ಲೂ ಹರಡುತ್ತವೆಯೋ । ತತ್—ಆಗ । ತೇ—ನಿನಗೆ । ಸುಗಂ—(ಸಕಲ ಅರಣ್ಯವೂ) ಸುಲಭವಾಗಿ ಪ್ರವೇಶಿಸಲು ಸಾಧ್ಯವಾಗುತ್ತದೆ । ತಾವಕೇಭ್ಯಃ—ನಿನ್ನ । ರಥೇಭ್ಯಃ—ರಥಗಳಿಗೂ (ಸುಲಭವಾಗಿ ಪ್ರವೇಶಿಸಲು ಸಾಧ್ಯ

ವಾಗುತ್ತದೆ । **ತವ**—ನಿನ್ನ । **ಸಖ್ಯೇ—**ಸ್ನೇಹದ ನಿಮಿತ್ತವಾಗಿ । **ವಯಂ**—ನಾವು । **ಮಾ ರಿಷಾಮ**—(ಯಾವ) ಹಿಂಸೆಯನ್ನು ಅನುಭವಿಸದೇ ಇರುವಂತಾಗಲಿ ॥

ಭಾವಾರ್ಥ

ಎಲೈ ಅಗ್ನಿಯೇ, ನೀನು ವನಕ್ಕೆ ಪ್ರವೇಶಿಸಿದ ಕೂಡಲೇ ನಿನ್ನ ಶಬ್ದದಿಂದ ಪಕ್ಷಿಗಳೂ ಕೂಡ ಭಯಪಡುತ್ತವೆ. ನಿನ್ನ ಜ್ವಾಲೆಯ ಅಂಶಗಳು ಹುಲ್ಲುಗಳನ್ನೆಲ್ಲಾ ದಹಿಸುತ್ತಾ ಎಲ್ಲಾ ದಿಕ್ಕುಗಳಲ್ಲಿಯೂ ಹರಡಿದಾಗ ನಿನಗೂ ಮತ್ತು ನಿನ್ನ ರಥಕ್ಕೂ ಅರಣ್ಯ ಪ್ರವೇಶವು ಬಹಳ ಸುಲಭವಾಗಿ ಆಗುತ್ತದೆ. ನಿನ್ನ ಸ್ನೇಹದ ನಿಮಿತ್ತವಾಗಿ ನಾವು ಯಾವ ಹಿಂಸೆಯನ್ನೂ ಅನುಭವಿಸದೇ ಇರುವಂತಾಗಲಿ.

## English Translation

At your roaring even the birds are terrified ; when your flames, consuming the grass, have spread in all directions, (the wood) is easy of access to you and to your chariots ; Agni, let us not suffer injury through your friendship.

ವಿಶೇಷವಿಷಯ.ಗಳು

**ದ್ರಪ್ಸಾಃ—ದ್ರಪ್ಸ** ಶಬ್ದವು ಸಾಧಾರಣವಾಗಿ **ದ್ರವಣ** ಶೀಲವಾದುದು ಎಂದರೆ ಹರಿಯತಕ್ಕದ್ದು ಅಥವಾ ನೀರಿನ ತೊಟ್ಟುಗಳಂತಿರುವ ಸೋಮರಸದ ಬಿಂದುಗಳು ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಆದರೆ ಕೆಲವು ಸಂದರ್ಭಗಳಲ್ಲಿ ಅಗ್ನಿಕಿರಣವೆಂದೂ, ಪತಾಕೆಯೆಂದೂ, ಚಂದ್ರನೆಂದೂ, ಅರ್ಥವಾಗುತ್ತದೆ. ಈ ಋಕ್ಕಿನಲ್ಲಿ ಬರುವ **ದ್ರಪ್ಸಾಃ**:ಎಂಬುದಕ್ಕೆ **ಜ್ವಾಲೈಕದೇಶಾಃ** ಜ್ವಾಲೆಯ ಭಾಗಗಳು ಎಂದರ್ಥವನ್ನು ಮಾಡುತ್ತಾರೆ. ಸ್ಕಂದಸ್ವಾಮಿಗಳು **ದ್ರಪ್ಸಶಬ್ದಃ ಕಠಿನವಚನಃ ಕಠಿನಾಃ ಬಹುಳರೂಪಾಃ ।** ದ್ರಪ್ಸಶಬ್ದವು ಕಠಿನವೆಂದು ಅರ್ಥವನ್ನು ಕೊಡುತ್ತದೆಂದೂ, ಇಲ್ಲಿ ಕಠಿನವಾಗಿಯೂ ಬಹುಳವಾಗಿಯೂ ಇರತಕ್ಕ ಅಗ್ನಿಯಜ್ವಾಲೆಯೆಂದು ತಿಳಿಯಬೇಕೆಂದೂ ಹೇಳುತ್ತಾರೆ.

**ವ್ಯಸ್ಥಿರನ್—ತಿಷ್ಠತೇರಿದಂ ರೂಪಂ । ವಿತಿಷ್ಠಂತೇ । ಸರ್ವಂ ವ್ಯಾಪ್ನುವಂತೀತ್ಯರ್ಥಃ ।** ಸಕಲವನ್ನೂ ಆಕ್ರಮಿಸಿ ಇರು. ಅಥವಾ ವ್ಯಾಪಿಸು ಎಂದಾಗುತ್ತದೆ. ಅಗ್ನಿಯ ಜ್ವಾಲೆಯು ಸಕಲವನ್ನೂ ವ್ಯಾಪಿಸಿ ಹರಡುತ್ತದೆ ಎಂದರ್ಥ.

**ಸುಗಂ**—ಈ ಶಬ್ದದ ನಾನಾರ್ಥಗಳನ್ನು ಇದೇ ಸೂಕ್ತದ ೯ನೇ ಋಕ್ಕನ್ನು ವಿವರಿಸುವಾಗ ತಿಳಿಸಿದೆ.

ವ್ಯಾಕರಣಪ್ರಕ್ರಿಯಾ

**ಅಧ**— ಅಥ ಎಂಬಲ್ಲಿ ಥಕಾರಕ್ಕೆ ಛಾಂದಸವಾಗಿ ಧಕಾರಾದೇಶ ಬರುತ್ತದೆ.

ಬಿಭ್ಯಃ—ಞಿಭೀ ಭಯೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ಲಙ್ಲಿಟಃ** ಎಂಬುದರಿಂದ ಲಿಟ್. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಜಶ್ತ್ವ. ಪ್ರಥಮಪುರುಷಬಹುವಚನದಲ್ಲಿ ಉಸಾದೇಶ. **ಅಸಂಯೋ-**

**ಗಾಙ್ಕುಟ್ ಕಿತ್** ಎಂಬುದರಿಂದ ಇದು ಕಿತ್ತಾದುದರಿಂದ ಧಾತುವಿನ ಇಕಿಗೆ ಗುಣಬರುವುದಿಲ್ಲ. **ಏರನೇಕಾಚೋಽ-ಸಂಯೋಗಪೂರ್ವಸ್ಯ** ಎಂಬುದರಿಂದ ಯಣ್. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ವ್ಯಸ್ಥಿರನ್—ಷ್ಠಾ ಗತಿನಿವೃತ್ತೌ ಧಾತು. ಇದು ಪರಸ್ಮೈಪದಿಯಾದರೂ **ಸಮವಪ್ರವಿಭ್ಯಃ ಸ್ಥಃ**—(ಪಾ. ಸೂ. ೧-೩-೨೨) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಝ ಪ್ರತ್ಯಯಕ್ಕೆ ರನ್ ಆದೇಶ ಬರುತ್ತದೆ. **ಸ್ಥಾಘ್ವೋರಿಚ್ಚ**-(ಪಾ. ಸೂ. ೧-೨-೧೭) ಎಂಬುದರಿಂದ ಲುಙಿನಲ್ಲಿ ಧಾತುವಿಗೆ ಇತ್ವ ಬರುತ್ತದೆ. ಆಗ ಹ್ರಸ್ವದ ಪರದಲ್ಲಿ ಸಿಚ್ ಬಂದುದರಿಂದ **ಹ್ರಸ್ವಾದಂಗಾತ್**— (ಪಾ. ಸೂ. ೮-೨-೨೭) ಎಂಬುದರಿಂದ ಸಿಚಿಗೆ ಲೋಪ. ಅಂಗಕ್ಕೆ ಅಡಾಗಮ. ಯತ್ ಎಂದು ಹಿಂದೆ ಸಂಬಂಧವಿರುವಿರುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ತಾವಕೇಭ್ಯಃ—ತವ ಇಮಾಃ ತಾವಕಾಃ ಸಂಬಂಧಾರ್ಥವಿವಕ್ಷಾ ಮಾಡಿದಾಗ **ಯುಷ್ಮದಸ್ಮದೋರನ್ಯತ-ರಸ್ಯಾಂ ಖಂಚ** ಎಂಬುದರಿಂದ ಅಣ್ ಪರವಾದಾಗ **ತವಕಮಮಕಾವೇಕವಚನೇ**— (ಪಾ. ಸೂ. ೪-೩-೩) ಎಂಬುದರಿಂದ ಯುಷ್ಮಚ್ಛಬ್ದಕ್ಕೆ ತವಕ ಎಂಬ ಆದೇಶ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಬಹುವಚನಾಂತರೂಪ. ॥ ೧೧ ॥



ಸಂಹಿತಾಪಾಠಃ

ಅ॒ಯಂ ಮಿ॒ತ್ರಸ್ಯ॒ ವರು॑ಣಸ್ಯ॒ ಧಾಯ॑ಸೇಽವಯಾ॒ತಾಂ ಮ॒ರು-
ತಾ॒ಂ ಹೇಳೋ॒ ಅದ್ಭು॑ತಃ।
ಮೃ॒ಳಾ ಸು ನೋ॒ ಭೂತ್ವೇ॑ಷಾ॒ಂ ಮನಃ॒ ಪುನ॒ರಗ್ನೇ ಸ॒ಖ್ಯೇ
ಮಾ ರಿ॑ಷಾಮಾ ವ॒ಯಂ ತವ॑ ॥ ೧೨ ॥

॥ ಪದಪಾಠಃ ॥

ಅಯಂ । ಮಿತ್ರಸ್ಯ । ವರುಣಸ್ಯ । ಧಾಯಸೇ । ಅವಽಯಾತಾಂ । ಮರುತಾಂ ।
ಹೇಳಃ । ಅದ್ಭುತಃ ।
ಮೃಳ । ಸು । ನಃ । ಭೂತು । ಏಷಾಂ । ಮನಃ । ಅಗ್ನೇ । ಸಖ್ಯೇ । ಮಾ ।
ರಿಷಾಮ । ವಯಂ । ತವ ॥೧೨॥

ಸಾಯಣಭಾಷ್ಯಂ

ಅಯಮಗ್ನೇಃ ಸ್ತೋತಾ ಮಿತ್ರಸ್ಯಾಹರಭಿಮಾನಿನೋ ದೇವಸ್ಯ ವರುಣಸ್ಯ ರಾತ್ರ್ಯಭಿಮಾನಿನಶ್ಚ ಸಂಬಂಧಿನೇ ಧಾಯಸೇ ಧಾರಣಾಯಾವಸ್ಥಾಪನಾಯ ಭವತು । ಮಿತ್ರಾವರುಣಾವಿಮಮಗ್ನೇಃ ಸ್ತೋತಾರಂ ಧಾರಯಿತಾಮಿತ್ಯರ್ಥಃ । ಅವಯಾತಾಮವಸ್ತಾದ್ಗಚ್ಛತಾಂ ಸ್ವರ್ಗಲೋಕಸ್ಯಾಧಸ್ತಾದಂತರಿಕ್ಷೇ ವರ್ತಮಾನಾನಾಂ ಮರುತಾಮೇತತ್ಸಂಜ್ಞಾನಾಂ ದೇವಾನಾಂ ಹೇಳಃ ಕ್ರೋಧೋಽದ್ಭುತೋ ಮಹಾನ್ಭವತಿ। ಅದ್ಭುತ ಇತ್ಯೇತನ್ಮಹನ್ನಾಮ। ತಸ್ಮಾತ್ಕ್ರೋಧಾದಿಮಮಗ್ನೇಃ ಸ್ತೋತಾರಂ ಮಿತ್ರಾವರುಣೌ ರಕ್ಷತಾಮಿತಿ ಶೇಷಃ । ಅಪಿ ಚ ನೋಽಸ್ಮಾನ್ ಹೇ ಅಗ್ನೇ ಸು ಮೃಳ। ಸುಷ್ಠು ಮೃಡಯ। ಸುಖಯ। ಏಷಾಂ ಮರುತಾಂ ಮನಶ್ಚ ಪುನರ್ಭೂತು। ಪುನರಪಿ ಪ್ರಸನ್ನಂ ಭವತು। ಅನ್ಯತ್ಸಮಾನಂ॥ ಧಾಯಸೇ ವಹಿಹಾಧಾಞ್ಭ್ಯಶ್ಛಂದಸೀತಿ ಧಾಞೋಽಸುನ್ । ಣಿದಿತ್ಯನುವೃತ್ತೇರಾತೋ ಯುಕ್ ಚಿಣ್ಕೃತೋರಿತಿ ಯುಕ್। ಅವಯಾತಾಂ । ಯಾ ಪ್ರಾಪಣೇ । ಅಸ್ಮಾದವಪೂರ್ವಾಲ್ಲಟಃ ಶತೃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ। ಮೃಳ। ಮೃಡ ಸುಖನೇ । ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ। ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ। ಭೂತು। ಬಹುಲಂ ಛಂದಸೀತಿ ಶಪೋ ಲುಕ್ ॥

ಪ್ರತಿಪದಾರ್ಥ

**ಅಯಂ**—(ಅಗ್ನಿಯನ್ನು ಸ್ತೋತ್ರಮಾಡುವ) ಈ ಯಜಮಾನನು । **ಮಿತ್ರಸ್ಯ**— (ಅಹರಭಿಮಾನಿದೇವನಾದ) ಮಿತ್ರನ (ಮತ್ತು) **ವರುಣಸ್ಯ**—(ರಾತ್ರ್ಯಭಿಮಾನಿದೇವನಾದ) ವರುಣನ । **ಧಾಯಸೇ**— ಬೆಂಬಲವನ್ನು ಪಡೆಯುವುದಕ್ಕೆ (ಯೋಗ್ಯನಾಗಿ) । **ಅವಯಾತಾಂ**— ಆಗಲಿ । (ಸ್ವರ್ಗಲೋಕದ) ಕೆಳಭಾಗದಲ್ಲಿ ಸಂಚರಿಸುವ **ಮರುತಾಂ**—ಮರುದ್ದೇವತೆಗಳ ! **ಹೇಳಃ**—ಕ್ರೋಧವು । **ಅದ್ಭುತಃ**—ಮಹತ್ತಾಗಿರುತ್ತದೆ । (ಅಗ್ನಿಯನ್ನು ಸ್ತುತಿಸುವ ಯಜಮಾನನನ್ನು ಮಿತ್ರಾವರುಣರು ಈ ಕ್ರೋಧದಿಂದ ರಕ್ಷಿಸಲಿ) । **ಅಗ್ನೇ**—ಎಲೈ ಅಗ್ನಿಯೇ । **ನಃ**—ನಮ್ಮನ್ನು । **ಸುಮೃಳ**—ಚೆನ್ನಾಗಿ ಸುಖಪಡಿಸು । **ಏಷಾಂ**—ಈ ಮರುತ್ತುಗಳ । **ಮನಃ**—ಮನಸ್ಸು । **ಪುನಃ**—

ತಿರುಗಿಯೂ । **ಭೂತು**—(ಪ್ರಸನ್ನವಾಗಿ) ಆಗಲಿ । **ತವ**—ನಿನ್ನ । **ಸಖ್ಯೇ**—ಸ್ನೇಹದ ನಿಮಿತ್ತವಾಗಿ । **ವಯಂ**—ನಾವು । **ಮಾ ರಿಷಾಮ**—(ಯಾವ) ಹಿಂಸೆಯನ್ನೂ ಅನುಭವಿಸದೇ ಇರುವಂತಾಗಲಿ ॥

॥ ಭಾವಾರ್ಥ ॥

ಅಗ್ನಿಯನ್ನು ಸ್ತೋತ್ರಮಾಡುವ ಈ ಯಜಮಾನನು ಮಿತ್ರಾವರುಣರ ಬೆಂಬಲವನ್ನು ಪಡೆಯುವುದಕ್ಕೆ ಯೋಗ್ಯನಾಗಿದ್ದು ಅವರ ರಕ್ಷಣೆಯನ್ನು ಪಡೆಯಲಿ. ಸ್ವರ್ಗಲೋಕದ ಕೆಳಭಾಗದಲ್ಲಿ ಸಂಚರಿಸುವ ಮರುತ್ತುಗಳ ಕ್ರೋಧವು ಭಯಜನಕವಾಗಿರುತ್ತದೆ. ಮಿತ್ರಾವರುಣರು ಯಜಮಾನನನ್ನು ಈ ಕ್ರೋಧದಿಂದ ರಕ್ಷಿಸಲಿ. ಎಲೈ ಅಗ್ನಿಯೇ ನಮ್ಮನ್ನು ಚೆನ್ನಾಗಿ ಸುಖಪಡಿಸು. ಈ ಮರುತ್ತುಗಳ ಮನಸ್ಸು ಪುನಃ ಪ್ರಸನ್ನವಾಗಿ ಆಗಲಿ. ನಿನ್ನ ಸ್ನೇಹದ ನಿಮಿತ್ತವಾಗಿ ನಾವು ಹಿಂಸೆಯನ್ನೂ ಅನುಭವಿಸದೇ ಇರುವಂತಾಗಲಿ.

## English Translation

May this (your adorer) enjoy the support of Mitra aud of Varuna; wonderful is the fury of the Maruts; (dwellers in the region) below (the heavens) encourage us; Agni, let us not suffer injury through your friendship.

ವಿಶೇಷ ವಿಷಯಗಳು

**ಧಾಯಸೇ**—ಈ ಪದವು ಧರಿಸು, ಧಾರಣೆಮಾಡು ಎಂದು ಅರ್ಥವನ್ನು ಕೊಡುವ **ಧಾ** ಧಾತುವಿನಿಂದಾಗಲಿ ಅಥವಾ ಕುಡಿ ಎಂಬ ಅರ್ಥವನ್ನು ಕೊಡುವ **ಧೇಟ್ ಪಾನೇ** ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. **ಧಾಯಸೇ** ಎಂದರೆ ಇಲ್ಲಿ ಯಜಮಾನರನ್ನು ರಕ್ಷಣಾದಿಗಳಿಂದ ಧಾರಣೆಮಾಡುವುದಕ್ಕೋಸ್ಕರ ಎಂದಾಗಲೀಅಥವಾ ಸೋಮರಸದ ಪಾನಕ್ಕೋಸ್ಕರ ಎಂದಾಗಲೀ ಅರ್ಥ ವಾಗುತ್ತದೆ. ಇತರ ಕಡೆಗಳಲ್ಲೂ ಸಹ ಈ ಎರಡರ್ಥಗಳಲ್ಲೂ ಈ ಶಬ್ದಪ್ರಯೋಗವಿರುವುದು. ಋ. ಸಂ. ೧-೩೧-೧೩ ; ೧-೭೨-೯ ಇತ್ಯಾದಿ ಸ್ಥಳಗಳಲ್ಲಿ **ಪೋಷಕಾಯ । ಜಗತಃ ಧಾರಣಾಯ ।** ಜಗತ್ತನ್ನು ಧಾರಣೆ ಮಾಡುವುದಕ್ಕೆ ಎಂದೂ ; ೧-೧೩೦-೨ ; ೨-೧೭-೨ ಇತ್ಯಾದಿ ಸ್ಥಳಗಳಲ್ಲಿ **ಸೋಮಪಾನಾಯ ।** ಸೋಮರಸವನ್ನು ಪಾನಮಾಡುವುದಕ್ಕೆ ಎಂದೂ ವಿವರಿಸುತ್ತಾರೆ. ಅದರಂತೆ ಇಲ್ಲಿಯೂ ಎರಡರಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು. ಸಾಯಣರು **ಧಾರಣಾಯ, ಅವಸ್ಥಾಪನಾಯ ಭವತು** ಎಂದೂ ಸ್ಕಂದಸ್ವಾಮಿಗಳು **ಸೋಮಪಾನಾಯ** ಎಂದೂ ವಿವರಿಸುತ್ತಾರೆ.

ಸ್ಕಂದಸ್ವಾಮಿಗಳು ಈ ಋಕ್ಕಿನ ಸನ್ನಿವೇಶವನ್ನು ವಿವರಿಸುವುದಕ್ಕಾಗಿ ಒಂದು ಕಥೆಯನ್ನು ಉದಹರಿಸುತ್ತಾರೆ. ಅದೇನೆಂದರೆ—

**ಮಿತ್ರೋ ವರುಣೋ ಮರುತಶ್ಚ ಕುತ್ಸಸ್ಯ ಯಜ್ಞಮಾಜಗ್ಮುಃ । ಸೋಽಗ್ನಿಸ್ತುತ್ಯಾ ಕ್ಷಿಪ್ರಮನಾಃ ತಾನ್ನತುಷ್ಟಾವ । ತಸ್ಮೈ ಕ್ರುದ್ಧಾ ಯಜ್ಞಾದ್ಪೇನಾ ಜಗ್ಮುಃ । ತತ್ರ ಸಕ್ತಯೋ ಕುತ್ಸೋಽಗ್ನಿಮುವಾಚ ।**

ಒಂದುಸಲ ಮಿತ್ರನೂ, ವರುಣನೂ ಮರುತ್ತುಗಳೂ ಒಟ್ಟಿಗೆ ಕುತ್ಸನ ಯಜ್ಞಗೃಹಕ್ಕೆ ಬಂದಾಗ ಕುತ್ಸನು ಅಗ್ನಿಸ್ತುತಿಯಲ್ಲೇ ಮಗ್ನನಾಗಿದ್ದು ಅವರನ್ನು ಗಮನಿಸಲಿಲ್ಲವಾದ್ದರಿಂದ ಅವರು ಕೋಪಿಸಿಕೊಂಡು ಹೊರಟುಹೋದರು. ಆಗ ಅವನು ಅಗ್ನಿಯನ್ನು ಈ ಋಕ್ಕಿನಿಂದ ಪ್ರಾರ್ಥಿಸುತ್ತಾನೆ. ಇದರ ಅರ್ಥವು ಕೋಪಿಸಿಕೊಂಡು ಹೊರಟುಹೋದ ದೇವತೆಗಳ ಕ್ರೋಧವು ಅತಿ ಪ್ರಬಲವಾದುದೆಂದೂ. ಅಗ್ನಿಯು ಸೋಮಪಾನಕ್ಕಾಗಿ ಅವರನ್ನು ಸಮಾಧಾನಗೊಳಿಸಿ ಕರೆತರಬೇಕೆಂದೂ ಆಗುತ್ತದೆ.

**ಅವಯಾತಾಂ—ಅಪಗಚ್ಛತಾಂ ।** ಕೋಪಿಸಿಕೊಂಡು ಹೊರಟುಹೋಗುತ್ತಿರುವ.

**ಹೇಳಃ—ಕ್ರೋಧಃ । ರೇಳತೇ, ಹೇಳತೇ ಭಾಮತೇ** ಇತ್ಯಾದಿ ಕೋಪಗೊಳ್ಳು ಎನ್ನುವ ಅರ್ಥದಲ್ಲಿ ಉಪಯೋಗಿಸಿರುವ ಹತ್ತು **ಕ್ರುಧ್ಯತಿಕರ್ಮಧಾತು**ಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಕ್ರೋಧವೆಂದು ಅರ್ಥ. ಋ. ಸಂ. ೧-೨೪-೧೪ ; ೧-೧೧೪-೪ ; ೧-೧೭೧-೧ ಇತ್ಯಾದಿ ಅನೇಕ ಋಕ್ಕುಗಳಲ್ಲಿ ಕ್ರೋಧವೆಂಬ ಅರ್ಥದಲ್ಲಿ ಈ ಶಬ್ದದ ಪ್ರಯೋಗವಿದೆ.

**ಸುಮೃಳ**—ಚೆನ್ನಾಗಿ ಸುಖಪಡಿಸು.

ವ್ಯಾಕರಣಪ್ರಕ್ರಿಯಾ

**ಧಾಯಸೇ**—ಡುಧಾಞ್ ಧಾರಣಪೋಷಣಯೋಃ ಧಾತು ಇದಕ್ಕೆ **ವಹಿಹಾಧಾಞ್‌ಭ್ಯಶ್ಛಂದಸಿ**—(ಉ. ಸೂ. ೪-೬೬೦) ಎಂಬುದರಿಂದ ಭಾವಾರ್ಥದಲ್ಲಿ ಅಸುನ್ ಪ್ರತ್ಯಯ. **ವಸೇರ್ಣಿತ್**—(ಉ. ಸೂ. ೪-೬೮೭) ಎಂಬುದರಿಂರ ಣಿತ್ ಎಂದು ಅನುವೃತ್ತವಾಗುವುದರಿಂದ **ಅತೋಯುಕ್ ಚಿಣ್‌ಕೃತೋಃ**—(ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಧಾಯಸ್ ಎಂದು ಸಾಂತಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತ ರೂಪ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಪ್ರತ್ಯಯ ನಿತ್ತಾಗುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಅವಯಾತಾಮ್**—ಯಾ ಪ್ರಾಪಣೇ ಧಾತು. ಅದಾದಿ. ಅವ ಎಂಬ ಉಪಸರ್ಗವು ಪೂರ್ವದಲ್ಲಿರುವಾಗ ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. ಅವಯಾತ್ ಶಬ್ದವಾಗುತ್ತದೆ. ಷಷ್ಠೀಬಹುವಚನಾಂತರೂಪ. ನುಮ್ ರಹಿತವಾದ ಶತೃವಿನ ವಿಭಕ್ತಿಗೆ **ಶತುರನುಮೋ ನದ್ಯಜಾದೀ**—(ಪಾ. ಸೂ. ೬-೧-೧೭೩)ಎಂಬುದರಿಂದ ಉದಾತ್ತ ಸ್ವರಬರುತ್ತದೆ.

**ಮೃಳ**—ಮೃಡ ಸುಖನೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** ಎಂಬುದರಿಂದ ಣಿಚ್. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದಕ್ಕೆ **ಸೇರ್ಹ್ಯಪಿಚ್ಚ** ಎಂಬುದರಿಂದ ಹಿ ಆದೇಶ. ಶಪ್ ವಿಕರಣ. **ಛಂದಸ್ಯುಭಯಥಾ** ಎಂಬುದರಿಂದ ಶಪಿಗೆ ಆರ್ಧಧಾತುಕ ಸಂಜ್ಞೆ ಬರುವುದರಿಂದ **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಶಪ್ ನಿಮಿತ್ತವಾಗಿ ಣಿಚಿಗೆ ಲೋಪ **ಅತೋ ಹೇಃ** ಎಂಬುದರಿಂದ ಹಿಗೆ ಲೋಪ. **ದ್ವ್ಯಚೋಽತಸ್ತಿಙಃ**—(ಪಾ. ಸೂ. ೬-೩-೧೩೫) ಎಂಬುದರಿಂದ ದ್ವ್ಯಚ್ಕವಾಗಿ ಉಳಿಯುವುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಭೂತು— ಭೂ ಸತ್ತಾಯಾಂ ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ **ಏರುಃ** ಎಂಬುದರಿಂದ ಪ್ರತ್ಯಯಕ್ಕೆ ಉತ್ವ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶಪ್) ಲುಕ್. **ಭೂಸುವೋಸ್ತಿಙ್** ಎಂಬುದರಿಂದ ಗುಣ ನಿಷೇಧ. ಭೂತು ಎಂದು ರೂಪವಾಗುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ದೇವೋ ದೇವಾನಾಮಸಿ ಮಿತ್ರೋ ಅದ್ಭುತೋ ವಸುರ್ವಸೂ-
ನಾಮಸಿ ಚಾರುರಧ್ವರೇ ।
ಶರ್ಮನ್ತ್ಸ್ಯಾಮ ತವ ಸಪ್ರಥಸ್ತಮೇಽಗ್ನೇ ಸಖ್ಯೇ ಮಾ
ರಿಷಾಮಾ ವಯಂ ತವ ॥೧೩॥

ಪದಪಾಠಃ

ದೇವಃ । ದೇವಾನಾಂ । ಅಸಿ । ಮಿತ್ರಃ । ಅದ್ಭುತಃ । ವಸುಃ । ವಸೂನಾಂ ।
ಅಸಿ । ಚಾರುಃ । ಅಧ್ವರೇ ।
ಶರ್ಮನ್ । ಸ್ಯಾಮ । ತವ । ಸಪ್ರಥಃಽತಮೇ । ಅಗ್ನೇ । ಸಖ್ಯೇ । ಮಾ ।
ರಿಷಾಮ । ವಯಂ । ತವ । ॥೧೩॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ದೇವೋ ದ್ಯೋತಮಾನಸ್ತ್ವಂ ದೇವಾನಾಂ ಸರ್ವೇಷಾಮದ್ಭುತೋ ಮಹಾನ್ಮಿತ್ರೋಽಸಿ ಪ್ರೌಢಃ ಸಖಾ ಭವಸಿ । ತಥಾ ಚಾರುಃ ಶೋಭಸ್ತ್ವಮಧ್ವರೇ ಯಜ್ಞೇ ವಸೂನಾಂ ಸರ್ವೇಷಾಂ ಧನಾನಾಂ ವಸುರಸಿ । ನಿವಾಸಯಿತಾ ಭವಸಿ । ಅತೋಽಸ್ಮಾಕಂ ವಸೂನಿ ದೇಹೀತ್ಯರ್ಥಃ । ಕಿಂಚ ಸಪ್ರಥಸ್ತಮೇ ಸರ್ವತಃ ಪೃಥುತಮೇಽತಿಶಯೇನ ವಿಸ್ತೀರ್ಣೇ ತವ ತ್ವತ್ಸಂಬಂಧಿನಿ ಶರ್ಮಣಿ ಯಜ್ಞಗೃಹೇ ಸ್ಯಾಮ । ವರ್ತಮಾನಾ ಭವೇಮ । ಅನ್ಯತ್ಪೂರ್ವವತ್ ॥ ಶರ್ಮನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ದೇವಃ—ಪ್ರಕಾಶಮಾನನಾದ ನೀನು । ದೇವಾನಾಂ—(ಸಕಲ)ದೇವತೆಗಳಿಗೂ । ಅದ್ಭುತಃ—ಮಹಾಮಹಿಮನಾಗ । ಮಿತ್ರಃ ಅಸಿ—ಸಖನಾಗಿದ್ದೀಯೆ. । ಚಾರುಃ—ಮನೋಹರ

ರೂಪವುಳ್ಳ ನೀನು । **ಅಧ್ವರೇ**—ಯಜ್ಞದಲ್ಲಿ । **ವಸೂನಾಂ**—(ಸಕಲ) ಧನಗಳಿಗೂ । **ವಸುಃ ಅಸಿ**—ಸ್ಥಾಪಕನಾಗಿದ್ದೀಯೆ. । **ಸಪ್ರಥಸ್ತಮೇ**—ಅತಿಶಯವಾಗಿ ವಿಸ್ತಾರವಾಗಿರುವ । **ತವ**—ನಿನ್ನ । **ಶರ್ಮನ್**—ಯಜ್ಞಗೃಹದಲ್ಲಿ । **ಸ್ಯಾಮ**—(ನಾವು) ಇರುವಂತಾಗಲಿ. । **ತವ**—ನಿನ್ನ ।**ಸಖ್ಯೇ**—ಸ್ನೇಹದ ನಿಮಿತ್ತವಾಗಿ । **ವಯಂ**—ನಾವು । **ಮಾ ರಿಷಾಮ**—ಹಿಂಸಿತರಾಗದೇ ಇರುವಂತಾಗಲಿ. ।

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನನಾದ ನೀನು ಸಕಲದೇವತೆಗಳಿಗೂ ಮಹಾಮಹಿಮನಾದ ಸಖನಾಗಿದ್ದೀಯೆ. ಮನೋಹರವಾದ ರೂಪವುಳ್ಳ ನೀನು ಯಜ್ಞದಲ್ಲಿ ಸಕಲಧನಗಳಿಗೂ ಸ್ಥಾಪಕನಾಗಿದ್ದೀಯೆ. ಅತಿಶಯವಾಗಿ ವಿಸ್ತಾರವಾಗಿರುವ ನಿನ್ನ ಯಜ್ಞಗೃಹದಲ್ಲಿ ನಾವು ನಿಶ್ಚಿಂತೆಯಿಂದ ಇರುವಂತೆಯೂ ನಿನ್ನ ಸ್ನೇಹದ ನಿಮಿತ್ತವಾಗಿ ಯಾವ ಹಿಂಸೆಯನ್ನೂ ಅನುಭವಿಸದಿರುವಂತೆಯೂ ಅನುಗ್ರಹಿಸು.

## English Translation

You brilliant (Agni) are the especial friend of the gods ; you who are graceful in the sacrifice are the confirmer of all riches may we be present in your most spacious chamber of sacrfice; Agni, let us not suffer injury through your friendship.

॥ ವಿಶೇಷವಿಷಯಗಳು ॥

**ದೇವಾನಾಂ ಅದ್ಭುತಃ ಮಿತ್ರಃ ಅಸಿ**—ದೇವತೆಗಳಿಗೆಲ್ಲಾ ದೊಡ್ಡ ಮಿತ್ರನಾಗಿದ್ದೀಯೆ, ಎಂದು ಅಗ್ನಿಗೂ ಇತರ ದೇವತೆಗಳಿಗೂ ಇರುವ ಸಂಬಂಧವನ್ನೂ ತಿಳಿಸುತ್ತದೆ. ಹವಿಸ್ಸಿಗಾಗಿ ಆಸೆಪಡುತ್ತಿರುವ ಸಕಲ ದೇವತೆಗಳಿಗೂ ಯಜ್ಞದ ಮೂಲಕವಾಗಿ ಹವಿಸ್ಸುಗಳನ್ನು ಹಂಚುವುದರಿಂದ ಅಗ್ನಿಯು ಅವರೆಲ್ಲರ ಮಿತ್ರನು. ಅದರಲ್ಲೂ ಮಹತ್ತಾದ ಮಿತ್ರನು.

**ತ್ವೇ ಅಗ್ನೇ ವಿಶ್ವೇ ಅಮೃತಾಸೋ ಅದ್ರುಹ ಆಸಾ ದೇವಾ ಹವಿರದಂತ್ಯಾಹುತಂ ।**

(ಋ. ಸಂ. ೨-೧-೧೪)

**ತಾಂ ದೂತಮಗ್ನೇ ಅಮೃತಂ ಯುಗೇಯುಗೇಹವ್ಯವಾಹಂ ದಧಿರೇ ಪಾಯುಮೀಡ್ಯಂ ।**

**ದೇವಾಸಶ್ಚ ಮರ್ತಾಸಶ್ಚ ಜಾಗೃವಿಂ ವಿಭುಂ ವಿಶ್ಪತಿಂ ನಮಸಾ ನಿ ಷೇದಿರೇ ।**

(ಋ. ಸಂ. ೬-೧೫-೮)

ಇತ್ಯಾದಿ ನಾನಾ ಸಂದರ್ಭಗಳಲ್ಲಿ ಅಗ್ನಿಗೂ ದೇವತೆಗಳಿಗೂ ಇರುವ ನಿಕಟಸಂಬಂಧವನ್ನು ತಿಳಿಸಿ ಸಕಲ ದೇವತೆಗಳ ತೃಪ್ತಿಯೂ ಅಗ್ನಿಯೊಬ್ಬನಿಂದಲೇ ಸಾಧ್ಯವೆಂದೂ ಆದುದರಿಂದಲೇ ಅಗ್ನಿಯು ಅವರೆಲ್ಲರ ಮಿತ್ರನೆಂದೂ ಹೊಗಳಿದೆ.

**ವಸೂನಾಂ ವಸುಃ ಅಸಿ**—ಸಕಲಧನಗಳಿಗೂ ಸ್ಥಾಪಕನಾಗಿದ್ದೀಯೆ.

**ವಸುರ್ವಸೂನಾಂ ಕ್ಷಯಸಿ ತ್ವಮೇಕ ಇದ್ದ್ಯಾವಾ ಚ ಯಾನಿ ಪೃಥಿವೀ ಚ ಪುಷ್ಯತಃ ।**

(ಋ. ಸಂ, ೧೦–೯೧-೩)

ಇತ್ಯಾದಿ ಮಂತ್ರಗಳಲ್ಲಿ ಹೊಗಳುವಂತೆ ಅಗ್ನಿಯು ದ್ಯುಲೋಕದ ಸಂರಕ್ಷಣೆಗೂ ಪೃಥ್ವಿಯ ಬೆಳವಣಿಗೆಗೂ ಬೇಕಾದ ಸಕಲ ವಿಧವಾದ ಧನಗಳಿಗೂ ಒಬ್ಬನೇ ಅಧಿಪತಿಯಾದುದರಿಂದ **ವಸೂನಾಂ ವಸುಃ ಅಸಿ** ಎಂದು ಹೊಗಳಿದೆ.

**ಸಪ್ರಥಸ್ತಮೇ—ಸರ್ವತಃ ಪೃಥುತಮೇ ।** ಸುತ್ತಲೂ ಅತ್ಯಂತ ವಿಸ್ತಾರವಾಗಿರತಕ್ಕ ಎಂದರ್ಥ. ಈ ಅರ್ಥದಲ್ಲಿ ಬರುವ ಈ ಪದವನ್ನು ೫–೬೫–೫ ಇತ್ಯಾದಿ ಅನೇಕ ಸಂದರ್ಭಗಳಲ್ಲಿ ಉಪಯೋಗಿಸಿದೆ.

**ಶರ್ಮನ್**—ಯಜ್ಞಗೃಹದಲ್ಲಿ. **ಗಯಃ, ಕೃದರಃ, ಗರ್ತಃ** ಇತ್ಯಾದಿ ೨೨ ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಇಲ್ಲಿ ಗೃಹವೆಂದರ್ಥ. ಅನೇಕ ಸಂದರ್ಭಗಳಲ್ಲಿ **ಶರ್ಮ** ಶಬ್ದಕ್ಕೆ ಸಂರಕ್ಷಣೆ, ಆಶ್ರಯ ಎಂಬ ಅರ್ಥವೂ ಉಂಟು. ನಿರುಕ್ತಕಾರರು ಆಶ್ರಯ, ರಕ್ಷಣೆ ಎಂಬ ಅರ್ಥವಿರುವ—

**ಯಚ್ಛಾ ನಃ ಶರ್ಮ ಸಪ್ರಥಃ ।**

(ಋ. ಸಂ. ೧–೨೨–೧೫)

ಎಂಬ ಋಕ್ಕನ್ನು ಉದಹರಿಸಿ **ಶರ್ಮ** ಶಬ್ದಕ್ಕೆ **ಶರಣಂ** ಎಂದು ಅರ್ಥವನ್ನು ಮಾಡಿರುವರು. ಹೀಗೆ ಈ ಪದಕ್ಕೆ ಎರಡು ಅರ್ಥಗಳಲ್ಲಿಯೂ ಈ ಪದವನ್ನು ಹೇರಳವಾಗಿ ಉಪಯೋಗಿಸಿದೆ. ಇಲ್ಲಿ ಅತ್ಯಂತ ವಿಸ್ತಾರವಾದ ಗೃಹದಲ್ಲಿ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅಸಿ**— ಅಸ ಭುವಿ ಲಿಟ್ ಮಧ್ಯಮಪುರುಷ ಏಕವಚನ ಪರವಾದಾಗ **ತಾಸಸ್ತ್ಯೋರ್ಲೋಪಃ** ಎಂಬುದರಿಂದ ಧಾತುವಿನ ಸಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಶರ್ಮನ್**—ಇದು ನಾಂತವಾದ ಶಬ್ದ. ಇದಕ್ಕೆ ಸಪ್ತಮೀ ಙಿ ವಿಭಕ್ತಿ ಪರವಾದಾಗ **ಸುಪಾಂ ಸುಲುಕ್** ಎಂಬುದರಿಂದ ಅದಕ್ಕೆ ಲುಕ್ ಬರುತ್ತದೆ-

**ಸ್ಯಾಮ**—ಅಸ ಭುವಿ. ಧಾತು. ಅದಾದಿ. ವಿಧಿಲಿಙ್ ಉತ್ತಮಪುರುಷಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ**—(ಪಾ. ಸೂ. ೩-೪-೯೯) ಎಂಬುದರಿಂದ ಮಸಿನ ಸಕಾರಕ್ಕೆ ಲೋಪ. **ಯಾಸುಟ್-ಪರಸ್ಮೈ**—(ಪಾ. ಸೂ. ೩-೪-೧೦೩) ಎಂಬುದರಿಂದ ಯಾಸುಟಾಗಮ. ಅದಕ್ಕೆ ಙಿತ್ವವಿಧಾನ ಮಾಡಿರುವುದರಿಂದ

ಶ್ನಸೋರಲ್ಲೋಪಃ— (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೩ ॥



ಸಂಹಿತಾಪಾಠಃ

ತತ್ತೇ ಭದ್ರಂ ಯತ್ಸಮಿದ್ಧಃ ಸ್ವೇ ದಮೇ ಸೋಮಾಹುತೋ ಜ-
ರಸೇ ಮೃಳಯತ್ತಮಃ ।
ದಧಾಸಿ ರತ್ನಂ ದ್ರವಿಣಂ ಚ ದಾಶುಷೇಽಗ್ನೇ ಸಖ್ಯೇ ಮಾ
ರಿಷಾಮಾ ವಯಂ ತವ ॥ ೧೪ ॥

ಪದಪಾಠಃ

ತತ್ । ತೇ । ಭದ್ರಂ । ಯತ್ । ಸಂಽಇದ್ಧಃ । ಸ್ವೇ । ದಮೇ । ಸೋ-
ಮಽಆಹುತಃ । ಜರಸೇ । ಮೃಳಯತ್ಽತಮಃ ।
ದಧಾಸಿ । ರತ್ನಂ । ದ್ರವಿಣಂ । ಚ । ದಾಶುಷೇ । ಅಗ್ನೇ । ಸಖ್ಯೇ ।
ಮಾ । ರಿಷಾಮ । ವಯಂ । ತವ ॥ ೧೪ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತ್ವತ್ಸಂಬಂಧಿ ತತ್ಖಲು ಭದ್ರಂ ಭಜನೀಯಂ । ಪ್ರಶಸ್ತಮಿತ್ಯರ್ಥಃ । ಕಿಂ ಪುನಸ್ತತ್ । ಸ್ವೇ ದಮೇ ಸ್ವಕೀಯೇ ಉತ್ತರವೇದಿಲಕ್ಷಣೇ ನಿವಾಸಸ್ಥಾನೇ । ತಸ್ಯೈಷ ಸ್ವೋಲೋಕೋ

ಯದುತ್ತರವೇದೀ ನಾಭಿಃ । ಐ. ಬ್ರಾ. ೧–೨೮ । ಇತಿ ಶ್ರುತೇಃ । ತಸ್ಯಾಮುತ್ತರವೇದ್ಯಾಂ ಸಮಿದ್ಧಃ ಸಮ್ಯಗಿದ್ಧಃ ಪ್ರಜ್ವಲಿತಃ ಸೋಮಾಹುತೋ ಹುತೇನ ಸೋಮರಸೇನ ಸಂತರ್ಪಿತಃ ಸನ್ ಜರಸೇ । ಋತ್ವಿಗ್ಭಿಃ ಸ್ತೂಯಸ ಇತಿ ಯದಸ್ತಿ ತದ್ಭದ್ರಮಿತ್ಯರ್ಥಃ । ಏವಂ ಪ್ರಶಸ್ತಸ್ತ್ವಂ ಮೃಳಯತ್ತಮೋಽತಿಶಯೇನಾಸ್ಮಾಕಂ ಸುಖಯಿತಾ ಭೂತ್ವಾ ರತ್ನಂ ರಮಣೀಯಂ ಕರ್ಮಫಲಂ ದ್ರವಿಣಂ ಧನಂ ಚ ದಾಶುಷೇ ಹವಿರ್ದತ್ತವತೇ ಯಜಮಾನಾಯ ದಧಾಸಿ । ಪ್ರಯಚ್ಛಸಿ । ಅನ್ಯತ್ಸಮಾನಂ ॥ ಸಮಿದ್ಧಃ । ಞಿಇಂಧೀ ದೀಪ್ತೌ । ಕರ್ಮಣಿ ನಿಷ್ಠಾ । ಶ್ವೀದಿತೋ ನಿಷ್ಠಾಯಾಮಿತೀಟ್‌ಪ್ರತಿಷೇಧಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸೋಮಾಹುತಃ । ಸೋಮೇನಾಹುತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಜರಸೇ । ಜರತಿಃ ಸ್ತುತಿಕರ್ಮಾ । ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ । ಯದ್ವೃತ್ತಯೋಗಾದನಿಘಾತಃ । ದಧಾಸಿ । ಅನುದಾತ್ತೇ ಚೇತ್ಯಭ್ಯಸ್ತಸ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸ್ವೇ ದಮೇ**—(ಶಾಸ್ತ್ರವಿಹಿತವಾದ) ನಿನ್ನ ನಿವಾಸಸ್ಥಾನದಲ್ಲಿ। **ಸಮಿದ್ಧಃ**—ಚೆನ್ನಾಗಿ ಪ್ರಜ್ವಲಿತನಾಗಿಯೂ (ಮತ್ತು) । **ಸೋಮಾಹುತಃ**—ಸೋಮರಸವನ್ನು ಅರ್ಪಿಸಲ್ಪಟ್ಟು । **ಜರಸೇ**—( ಋತ್ವಿಕ್ಕುಗಳಿಂದ ) ಸ್ತುತಿಸಲ್ಪಟ್ಟವನಾಗಿಯೂ ಇರುವ । **ತೇ**—ನಿನ್ನ । **ತತ್**—ಆ ಪ್ರಜ್ವಲನವೂ ಮತ್ತು ಸ್ತೋತ್ರವೂ ಸಹ । **ಭದ್ರಂ**—(ನಿನಗೆ) ಶ್ರೇಷ್ಠವಾದ ತೃಪ್ತಿದಾಯಕವಾಗಿವೆ (ಇಂತಹ ತೃಪ್ತಿಯನ್ನು ಪಡೆದ ನೀನು) । **ಮೃಳಯತ್ತಮಃ**—(ನಮ್ಮನ್ನು) ಅತಿಶಯವಾಗಿ ಸುಖಪಡಿಸುತ್ತಾ । **ರತ್ನಂ**—ರಮಣೀಯವಾದ ಕರ್ಮ ಫಲವನ್ನೂ । **ದ್ರವಿಣಂ ಚ**— ಧನವನ್ನೂ ಸಹ । **ದಾಶುಷೇ**— ಹವಿಸ್ಸನ್ನು ಅರ್ಪಿಸಿದ ಯಜಮಾನನಿಗೆ । **ದಧಾಸಿ**—ಕೊಡುತ್ತೀಯೆ । **ತವ**— ನಿನ್ನ । **ಸಖ್ಯೇ**— ಸ್ನೇಹದ ನಿಮಿತ್ತವಾಗಿ । **ವಯಂ**— ನಾವು । **ಮಾ ರಿಷಾಮ**—ಹಿಂಸಿತರಾಗದೇ ಇರುವಂತಾಗಲಿ ॥

ಭಾವಾರ್ಥ

ಎಲೈ ಅಗ್ನಿಯೇ, ಶಾಸ್ತ್ರವಿಹಿತವಾದ ನಿನ್ನ ನಿವಾಸಸ್ಥಾನದಲ್ಲಿ ನೀನು ಚೆನ್ನಾಗಿ ಪ್ರಜ್ವಲಿತನಾಗಿಯೂ ಮತ್ತು ಸೋಮರಸದ ಅರ್ಪಣಾನಂತರ ಋಕ್ವಿಕ್ಕುಗಳಿಂದ ಸ್ತುತಿಸಲ್ಪಟ್ಟವನಾಗಿಯೂ ಇರುವ ನಿನ್ನ ಆ ಪ್ರಜ್ವಲನವೂ ಮತ್ತು ಸ್ತೋತ್ರವೂ ನಿನಗೆ ಶ್ರೇಷ್ಠವಾದ ತೃಪ್ತಿದಾಯಕವಾಗಿವೆ. ಇಂತಹ ತೃಪ್ತಿಯನ್ನು ಪಡೆದ ನೀನು ನಮ್ಮನ್ನು ಅತಿಶಯವಾಗಿ ಸುಖಪಡಿಸುತ್ತಾ ರಮಣೀಯವಾದ ಕರ್ಮಫಲವನ್ನೂ ಧನವನ್ನೂ ಸಹ ನಿನಗೆ ಹವಿಸ್ಸನ್ನು ಅರ್ಪಿಸಿದ ಯಜಮಾನನಿಗೆ ಕೊಡುತ್ತೀಯೆ. ನಿನ್ನ ಸ್ನೇಹದ ನಿಮಿತ್ತನಾಗಿ ನಮಗೆ ಯಾವ ಹಿಂಸೆಯ ಅನುಭವವೂ ಇಲ್ಲದಿರಲಿ.

English Translation

It is pleasant to you when you are lighted in your own abode and propitiated by libations are praised (by the priests) ; then, much delighted, you give rewards and riches to the worshipper ; Agni, let us not suffer injury through your friendship.

ವಿಶೇಷವಿಷಯಗಳು

**ಸ್ವೇ ದಮೇ**—**ಗಯಃ, ಕೃದರಃ, ಗರ್ತಃ** ಇತ್ಯಾದಿ ೨೨ ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧೩) **ದಮೇ** ಎಂದರೆ ಮನೆಯಲ್ಲಿ ಎಂದರ್ಥ. ಇಲ್ಲಿ **ಸ್ವೇ ದಮೇ** ಎಂದರೆ ಅಗ್ನಿಯ ಶಾಸ್ತ್ರವಿಹಿತವಾದ ನಿವಾಸ ಸ್ಥಾನದಲ್ಲಿ ಎಂದರ್ಥ. ಐತರೇಯ ಬ್ರಾಹ್ಮಣದಲ್ಲಿ ವರ್ಣಿಸಿರುವಂತೆ **ತಸ್ಯೈಷ ಸ್ವೋ ಲೋಕೋ ಯದುತ್ತರ-ವೇದೀ ನಾಭಿಃ** (೧-೨೮) ಉತ್ತರವೇದಿರೂಪವಾದ ವಾಸಸ್ಥಾನವು ಅಗ್ನಿಯ **ಸ್ವಗೃಹ** ಅಥವಾ **ಸ್ವಲೋಕ**ವೆಂದು ಪ್ರಸಿದ್ಧವಾಗಿದೆ.

**ಜರಸೇ**—**ಜರತಿಃ ಸ್ತುತಿಕರ್ಮ**ವಾದುದರಿಂದ **ಜರಸೇ** ಎಂದರೆ ದೇವತೆಗಳನ್ನು ಸ್ತುತಿಸುವುದಕ್ಕೆ ಎಂದಾಗಲಿ, ಅಥವಾ ಋತ್ವಿಕ್ಕುಗಳಿಂದ ನೀನು ಸ್ತುತಿಸಲ್ಪಡಲು ಎಂದಾಗಲೀ ಆಗುತ್ತದೆ.

**ರತ್ನಂ ದ್ರವಿಣಂ ಚ ದಾಶುಷೇ ದಧಾಸಿ**—ಹವಿರ್ದಾತನಾದ ಯಜಮಾನನಿಗೆ ನೀನು ಸಕಲವಿಧವಾದ ಧನವನ್ನೂ ಕೊಡುತ್ತೀಯೆ ಎಂದು ಹೊಗಳಿದೆ. **ವಸುರ್ವಸೂನಾಂ** ಎಂದು ಅಗ್ನಿಯು ಐಶ್ವರ್ಯಕ್ಕೆಲ್ಲಾ ಕ್ಷೇತ್ರವೆಂದೂ ಅಧಿಪತಿಯೆಂದೂ—

**ವಿಶ್ವಂ ಸೋ ಅಗ್ನೇ ಜಯತಿ ತ್ವಯಾ ಧನಂ ಯಸ್ತೇ ದದಾಶ ಮರ್ತ್ಯಃ ।**
( ಋ. ಸಂ ೧-೩೬-೪ )

**ಪೀಪಾಯ ಸ ಶ್ರವಸಾ ಮರ್ತ್ಯೇಷು ಯೋ ಅಗ್ನಯೇ ದದಾಶ ವಿಪ್ರ ಉಕ್ಥೈಃ ।**
( ಋ. ಸಂ. ೬-೧೦ ೩ )

**ಯೋ ಅಗ್ನಿಂ ತನ್ವೋ೩ ದಮೇ ದೇವಂ ಮರ್ತಃ ಸಪರ್ಯತಿ ।**
**ತಸ್ಮಾ ಇದ್ದೀದಯದ್ವಸು ।**
( ಋ. ಸಂ. ೮-೪೪-೧೫ )

ಇತ್ಯಾದಿ ಅನೇಕ ಸನ್ನಿವೇಶಗಳಲ್ಲಿ ಅಗ್ನಿಗೆ ಶಾಸ್ತ್ರೋಕ್ತವಾಗಿ ಆಹುತಿಯನ್ನರ್ಪಿಸತಕ್ಕ ಯಜಮಾನನು ಸಕಲ ವಿಧವಾದ ಸಂಪತ್ತನ್ನೂ ಅಗ್ನಿಯಿಂದ ಪಡೆಯುತ್ತಾನೆಂದು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಸಮಿದ್ಧಃ**— ಞಿಇಂಧೀ ದೀಪ್ತೌ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಧಾತುವು ಈದಿತ್ತಾದುದರಿಂದ **ಶ್ವೀದಿತೋನಿಷ್ಠಾಯಾಮ್**—(ಪಾ. ಸೂ. ೭-೨-೧೪) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. ಪ್ರತ್ಯಯ ಕಿತ್ತಾದುದರಿಂದ **ಅನಿದಿತಾಂ ಹಲ ಉಪಧಾಯಾಃ** ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. **ಝಷಸ್ತಥೋರ್ಧೋಽಧಃ**— (ಪಾ ಸೂ. ೮-೨-೪೧) ಎಂಬುದರಿಂದ ಧಕಾರನಿಮಿತ್ತವಾಗಿ ಪ್ರತ್ಯಯ ತಕಾರಕ್ಕೆ ಧಕಾರಾದೇಶ. **ಝಲಾಂ ಜಶ್ ಝಶಿ** ಎಂಬುದರಿಂದ ಪೂರ್ವಧಕಾರಕ್ಕೆ ಜಶ್ತ್ವ. **ಗತಿರನಂತರಃ**— (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸಮ್) ಪ್ರಕೃತಿಸ್ವರ ಬರುತ್ತದೆ.

**ಸೋಮಾಹುತಃ** — ಸೋಮೇನ ಆಹುತಃ ಸೋಮಾಹುತಃ ತೃತೀಯಾತತ್ಪುರುಷಸಮಾಸದಲ್ಲಿ **ತೃತೀಯಾ ಕರ್ಮಣಿ**— (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಜರಸೇ**— ಜೄಷ್ ವಯೋಹಾನೌ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಕರ್ಮಣಿಯಲ್ಲಿ ಕರ್ತೃಪ್ರತ್ಯಯ ಬಂದಿದೆ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃ ಸೇ** ಎಂಬುದರಿಂದ ಅದಕ್ಕೆ ಸೇ ಆದೇಶ. ಶಪ್ ವಿಕರಣ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಿಗೆ ಗುಣ. ಜರಸೇ ಎಂದು ರೂಪವಾಗುತ್ತದೆ. ಯತ್ ಎಂದು ವ್ಯವಹಿತವಾದ ಸಂಬಂಧವಿದ್ದರೂ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ದಧಾಸಿ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲು** ಎಂಬುದರಿಂದ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. **ಅನುದಾತ್ತೇ ಚ**—(ಪಾ. ಸೂ. ೬-೧-೧೯೦) ಅಭ್ಯಾಸಕ್ಕೆ ಆದ್ಯುದಾತ್ತ ಸ್ವರ ಬರುತ್ತದೆ.

**ದಾಶುಷೇ**— ದಾಶೃ ದಾನೇ ಧಾತು. **ದಾಶ್ವಾನ್ ಸಾಹ್ವಾನ್**—(ಪಾ. ಸೂ. ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀವಿಭಕ್ತಿ ಪರವಾದಾಗ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್** ಎಂಬುದರಿಂದ ವಸುವಿನ ವಕಾರಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಶಾಸಿ ವಸಿ ಘಸೀನಾಂ ಚ** ಎಂಬುದರಿಂದ ಷತ್ವ. ದಾಶುಷೇ ಎಂದು ರೂಪವಾಗುತ್ತದೆ. ॥ ೧೪



॥ ಸಂಹಿತಾಪಾಠಃ ॥

ಯಸ್ಮೈ॒ ತ್ವಂ ಸು॑ದ್ರವಿಣೋ॒ ದದಾ॑ಶೋಽನಾಗಾ॒ಸ್ತ್ವಮ॑ದಿತೇ
ಸ॒ರ್ವತಾ॑ತಾ ।
ಯಂ ಭ॒ದ್ರೇಣ॒ ಶವ॑ಸಾ ಚೋ॒ದಯಾ॑ಸಿ ಪ್ರ॒ಜಾವ॑ತಾ॒ ರಾಧ॑-
ಸಾ॒ ತೇ ಸ್ಯಾ॑ಮ ॥ ೧೫ ॥

ಪದಪಾಠಃ

ಯಸ್ಮೈ । ತ್ವಂ । ಸುऽದ್ರವಿಣಃ । ದದಾಶಃ । ಅನಾಗಾಃऽತ್ವಂ । ಅದಿತೇ । ಸರ್ವऽತಾತಾ ।

ಯಂ । ಭದ್ರೇಣ । ಶವಸಾ । ಚೋದಯಾಸಿ । ಪ್ರಜಾऽವತಾ । ರಾಧಸಾ । ತೇ । ಸ್ಯಾಮ

ಸಾಯಣಭಾಷ್ಯಂ

ಹೇ ಸುದ್ರವಿಣಃ ಶೋಭನಧನಾದಿತೇऽಖಂಡನೀಯಾಗ್ನೇ ಸರ್ವತಾತಾ ಸರ್ವಾಸು ಕರ್ಮತತಿಷು । ಯದ್ವಾ ಸರ್ವೇಷು ಯಜ್ಞೇಷು ವರ್ತಮಾನಾಯ ಯಸ್ಮೈ ಯಜಮಾನಾಯಾನಾಗಾಸ್ತ್ವಮಪಾಪತ್ವಂ ಪಾಪರಾಹಿತ್ಯೇನ ಕರ್ಮಾರ್ಹತಾಂ ತ್ವಂ ದದಾಶಃ ಪ್ರಯಚ್ಛಸಿ ಸ ಯಜಮಾನಃ ಸಮೃದ್ಧೋ ಭವತಿ । ಯಂ ಚ ಯಜಮಾನಂ ಭದ್ರೇಣ ಭಜನೀಯೇನ ಕಲ್ಯಾಣೇನ ಶವಸಾ ಬಲೇನ ಚೋದಯಾಸಿ ಸಂಯೋಜಯಸಿ ಸೋऽಪಿ ಸಮೃದ್ಧೋ ಭವತಿ । ವಯಂ ಚ ಸ್ತೋತಾರಃ ಪ್ರಜಾವತಾ ಪ್ರಜಾಭಿಃ ಪುತ್ರಪೌತ್ರೈರ್ಯುಕ್ತೇನ ತೇ ರಾಧಸಾ ತ್ವಯಾ ದತ್ತೇನ ಧನೇನ ಯುಕ್ತಾಃ ಸ್ಯಾಮ । ಭವೇಮ ॥ ಸುದ್ರವಿಣಃ । ಶೋಭನಾನಿ ದ್ರವಿಣಾನಿ ಧನಾನಿ ಯಸ್ಯ । ದ್ರು ಗತೌ । ದ್ರುದಕ್ಷಿಭ್ಯಾಮಿನನ್ । ಉ. ೨-೫೦ । ದ್ರವಿಣಶಬ್ದಸ್ಯಾಂತೇ ಮಕಾರೋಪಜನಶ್ಛಾಂದಸಃ । ದದಾಶಃ । ದಾಶೃ ದಾನೇ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಸರ್ವತಾತಾ । ಸರ್ವದೇವಾತ್ತಾತಿಲಿತಿ ಸ್ವಾರ್ಥೇ ತಾತಿಲ್ಪ್ರತ್ಯಯಃ । ಯಾಸ್ಕಪಕ್ಷೇತು ಸರ್ವಾಃ ಸ್ತುತಯೋ ಯೇಷು ಯಾಗೇಷ್ವಿತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವರ್ಣವ್ಯಾಪತ್ತ್ಯಾತ್ವಂ । ಉಭಯತ್ರಾಪಿ ಸುಪಾಂ ಸುಲಗಿತಿ ಸಪ್ತಮ್ಯಾ ಡಾದೇಶಃ । ಚೋದಯಾಸಿ । ಚುದ ಪ್ರೇರಣೇ । ಲೇಟ್ಯಾಡಾಗಮಃ ॥

ಪ್ರತಿಪದಾರ್ಥ

**ಸುದ್ರವಿಣಃ**—ಶ್ರೇಷ್ಠವಾದ ಧನವುಳ್ಳವನೂ । **ಅದಿತೇ**—ಅಖಂಡನೀಯನೂ ಆದ ಅಗ್ನಿಯೇ । **ಸರ್ವತಾತಾ**—ಸಕಲ ಕರ್ಮಗಳ ಗುಂಪಿನಲ್ಲೂ ಅಥವಾ (ಶ್ರದ್ಧೆಯಿಂದ) ಸಕಲ ಯಜ್ಞಗಳಲ್ಲಿಯೂ ಶ್ರದ್ಧೆಯಿಂದ ಇರತಕ್ಕ। **ಯಸ್ಮೈ**-ಯಾವ ಯಜಮಾನನಿಗೆ। **ಅನಾಗಾಸ್ತ್ವಂ**—ಪಾಪರಹಿತವಾದ (ಕರ್ಮಾರ್ಹತೆಯನ್ನು)। **ತ್ವಂ**—ನೀನು। **ದದಾಶಃ**— ಕೊಡುತ್ತೀಯೋ ಅವನೂ (ಮತ್ತು) । **ಯಂ**— ಯಾವ ಯಜಮಾನನನ್ನು । **ಭದ್ರೇಣ**—ಕಲ್ಯಾಣಾತ್ಮಕವಾದ । **ಶವಸಾ**— ಶಕ್ತಿಯಿಂದ । **ಚೋದಯಾಸಿ**—ಸೇರಿಸುತ್ತೀಯೋ ಅವನೂ (ಅಭಿವೃದ್ಧಿಯನ್ನು ಹೊಂದುವನು ಖಂಡಿತ. ನಾವೂ ಸಹ) । **ಪ್ರಜಾವತಾ**— ಪುತ್ರಪೌತ್ರಾದಿಗಳಿಂದ ತುಂಬಿದ । **ತೇ ರಾಧಸಾ**—ನಿನ್ನಿಂದ ಕೊಡಲ್ಪಟ್ಟ ಧನದೊಂದಿಗೆ । **ಸ್ಯಾಮ**— (ಕೂಡಿಕೊಂಡು) ಇರುವಂತಾಗಲಿ.

ಭಾವಾರ್ಥ

ಶ್ರೇಷ್ಠವಾದ ಧನವುಳ್ಳವನೂ ಅಖಂಡನೀಯನೂ ಆದ ಎಲೈ ಅಗ್ನಿಯೇ, ಸಕಲ ಯಜ್ಞಕರ್ಮಗಳಲ್ಲೂ ಶ್ರದ್ಧೆಯಿಂದ ಇರತಕ್ಕ ಯಾವ ಯಜಮಾನನಿಗೆ ನೀನು ಪಾಪರಹಿತವಾದ ಕರ್ಮಾರ್ಹತೆಯನ್ನು ಕೊಡುತ್ತೀಯೋ ಅವನೂ, ಮತ್ತು ಯಾವ ಯಜಮಾನನನ್ನು ನೀನು ಕಲ್ಯಾಣಾತ್ಮಕವಾದ ಶಕ್ತಿಯಿಂದ ಸೇರಿಸುತ್ತೀಯೋ ಅವನೂ ಸಹ ಅಭಿವೃದ್ಧಿಯನ್ನು ಹೊಂದುವುನು ಖಂಡಿತ. ನಾವೂ ಸಹ ನಿನ್ನ ಅನುಗ್ರಹದಿಂದ ಪುತ್ರಪೌತ್ರಾದಿಗಳಿಂದ ಕೂಡಿದ ಧನದೊಂದಿಗೆ ಕೂಡಿಕೊಂಡು ಇರುವಂತಾಗಲಿ.

English Translation

Fortunate is the worshipper to whom (assiduous) in all pious works, you possessor of riches, indivisible Agni, grant exemption from sin, whom you associate with auspicious strength, may he be (enriched) by you with wealth that comprehends progeny.

॥ ವಿಶೇಷವಿಷಯಗಳು ॥

**ಸುದ್ರವಿಣಃ—ಶೋಭನಧನಃ**। ಶ್ರೇಷ್ಠವಾದ ಧನವುಳ್ಳವನೆಂದರ್ಥ. ಈ ವಿಶೇಷಣವು ಋಕ್ಸಂಹಿತೆಯಲ್ಲಿ ಅಗ್ನಿಪರ್ಯಾಯವಾಗಿ ಮಾತ್ರ ಉಪಯೋಗಿಸಲ್ಪಟ್ಟಿದೆ. ಈ ಋಕ್ಕಲ್ಲದೇ ಋ. ಸಂ. ೧೦-೬೧-೨೧ ನೇ ಋಕ್ಕಿನಲ್ಲಿಯೂ ಈ ವಿಶೇಷಣವು ಅಗ್ನಿಯ ಧನದ ವೈಶಿಷ್ಟ್ಯವನ್ನು ತೋರಿಸುತ್ತದೆ.

**ಅದಿತೇ—ಅಖಂಡನೀಯಾಗ್ನೇ ಅಥವಾ ಅದಿತೇಃ ಪುತ್ರ ಅಗ್ನೇ ।** ಎಂದು ಎರಡು ವಿಧವಾದ ಅರ್ಥವನ್ನೂ ಮಾಡಬಹುದು. ಮೊದಲನೆಯದಾಗಿ **ಅದಿತಿಯೆನ್ನುವುದಕ್ಕೆ ಅದೀನಾ** ಎಂದು ಅರ್ಥಮಾಡಿದರೆ ದೀನವಲ್ಲದ್ದು, ಕ್ಷಯಿಸದಿರುವುದು ಎಂದಾಗುತ್ತದೆ. ಅಗ್ನಿಯು ಕ್ಷಯರಹಿತನು, ಮರಣರಹಿತನು ಎಂದು ಅನೇಕ ಕಡೆಗಳಲ್ಲಿ ಹೇಳಿದೆ.

**ಅಗ್ನೇ ತ್ರಾತಾರಮಮೃತಂ ಮಿಯೇಧ್ಯ ಯಜಿಷ್ಠಂ ಹವ್ಯವಾಹನ ।**
(ಋ. ಸಂ. ೧-೪೪-೫)

**ನೂ ಚಿತ್ಸಹೋಜಾ ಅಮೃತೋ ನಿ ತುಂದತೇ ಹೋತಾ ಯದ್ದೂತೋ ಅಭವದ್ವಿವಸ್ವತಃ ।**
(ಋ. ಸಂ. ೧-೫೮-೧)

ಇತ್ಯಾದಿ ಅನೇಕಸನ್ನಿವೇಶಗಳಲ್ಲಿ ಅಗ್ನಿಯನ್ನು ಮರಣರಹಿತನೆಂದು ಹೇಳಿದೆ. ಆದ್ದರಿಂದಲೇ **ಅದಿತಿಯೆಂದೂ** ಹೇಳಬಹುದು. ಎರಡನೆಯದಾಗಿ ಅದಿತಿಯು **ದೇವಮಾತಾ** (ನಿ. ೪-೨೩) ದೇವತೆಗಳ ತಾಯಿ ಎಂದು ಹೇಳಿರುವುರಿಂದ ಅಗ್ನಿಯೂ ಅದಿತಿಪುತ್ರನಾದನು. ಆದುದರಿಂದ **ಅದಿತೇ** ಎಂದರೆ ಅದಿತಿಪುತ್ರನೇ ಎಂದು ತಿಳಿಯಬೇಕೆಂದು ಸ್ಕಂದಸ್ವಾಮಿಗಳು ಹೇಳುತ್ತಾರೆ. ಅಥವಾ **ಅಗ್ನಿರಪ್ಯದಿತಿರುಚ್ಯತೇ** ಎಂದು ನಿರುಕ್ತಕಾರರು (ನಿ. ೧೧-೨೩) **ಅದಿತಿ**

ಯೆಂಬುದು ಅಗ್ನಿಪರ್ಯಾಯ ಶಬ್ದವೆಂದೇ ಹೇಳಿ ಈ ಋಕ್ಕನ್ನೇ ಉದಹರಿಸುತ್ತಾರೆ. **ಅದಿತೇ** ಎಂದರೆ ಎಲೈ ಅಗ್ನಿಯೇ ಎಂದಾಗುತ್ತದೆ.

**ಸರ್ವತಾತಾ**—ನಿರುಕ್ತಕಾರರು ಈ ಋಕ್ಕನ್ನೇ ಉದಹರಿಸಿ **ಸರ್ವತಾತಾ** ಎಂಬ ಶಬ್ದವನ್ನು ವಿವರಿಸುವಾಗ **ಸರ್ವಾಸು ಕರ್ಮತತಿಷು** ಸಕಲ ಯಜ್ಞಕರ್ಮಗಳ ಸಮೂಹದಲ್ಲಿ ಎಂದು ಅರ್ಥವನ್ನು ಮಾಡುತ್ತಾರೆ. (ನಿ.೧೧-೨೪) **ಸರ್ವತಾತಾ** ಏನ್ನುವ ಪದವು ಸಾಧಾರಣವಾಗಿ ಯಜ್ಞಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ದೇವಾನಾಂ ದೂತಃ ಪುರುಧ ಪ್ರಸೂತೋಽನಾಗಾನ್ನೋ ವೋಚತು ಸರ್ವತಾತಾ ।**

(ಋ. ಸಂ. ೩-೫೪-೧೯)

**ಶತತಮಂ ವೇಶ್ಯಂ ಸರ್ವತಾತಾ ದಿವೋದಾಸಮತಿಥಿಗ್ವಂ ಯದಾವಂ ।**

( ಋ. ಸಂ. ೪-೨೬-೩ )

**ರಾಯೇ ಮಿತ್ರಾವರುಣಾ ಸರ್ವತಾತೇಳೇ ತೋಕಾಯ ತನಯಾಯ ಶಂ ಯೋಃ ।**

( ಋ. ಸಂ. ೫-೬೯-೩ )

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ ೭-೧೫-೧೮ ; ೭-೧೮ ೧೯ ಇತ್ಯಾದಿ ಅನೇಕ ಋಕ್ಕುಗಳಲ್ಲಿಯೂ **ಸರ್ವತಾತಾ** ಶಬ್ದವು ಯಜ್ಞಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆ. ಈ ಸಂದರ್ಭದಲ್ಲಿ ಸಕಲಕರ್ಮಗಳ ನಡುವೆಯೂ ಎಂದು ಅರ್ಥಮಾಡಬಹುದು.

**ಅನಾಗಾಸ್ತ್ವಂ**—ಪಾಪರಾಹಿತ್ಯವನ್ನು ಅಥವಾ ಪಾಪರಹಿತವಾದ ಕರ್ಮಾರ್ಹತೆಯನ್ನು ಎಂದರ್ಥವು. ಅಜ್ಞಾನದಿಂದ ಯಾವ ವಿಧವಾದ ಕರ್ಮಲೋಪಬಂದರೂ ಅಥವಾ ಇನ್ನು ಬೇರೆ ರೀತಿಯಾದ ನ್ಯೂನತೆಯಿದ್ದರೂ ಸಹ ಅಗ್ನಿಯು ಈ ದೋಷದಿಂದ ಬಿಡುಗಡೆಮಾಡಿಸುತ್ತಾನೆಂಬ ಶ್ರದ್ಧೆಯಿಂದ ಪದೇ ಪದೇ ಇಂತಹ ಪ್ರಾರ್ಥನೆಯು ಅಗ್ನಿಯನ್ನು ಕುರಿತು ಮಾಡಲ್ಪಟ್ಟಿದೆ. ಉದಾಹರಣೆಗೆ—

**ಯಚ್ಚಿದ್ಧಿ ತೇ ಪುರುಷತ್ರಾ ಯವಿಷ್ಠಾಚಿತ್ತಿಭಿಶ್ಚಕೃಮಾ ಕಚ್ಚಿದಾಗಃ ।**
**ಕೃಧೀ ಷ್ವಸ್ಮಾँ ಅದಿತೇರನಾಗಾನ್ವ್ಯೇನಾಂಸಿ ಶಿಶ್ರಥೋ ವಿಷ್ವಗಗ್ನೇ ॥**

( ಋ. ಸಂ. ೪-೧೨-೪ )

**ಯತ್ಸೀಮಾಗಶ್ಚಕೃಮಾ ತತ್ಸು ಮೃಳ ತದರ್ಯಮಾದಿತಿಃ ಶಿಶ್ರಥಂತು ।**

( ಋ. ಸಂ. ೭-೯೩-೭ )

ಇತ್ಯಾದಿ ನಾನಾಸಂದರ್ಭಗಳಲ್ಲಿ ಸಕಲ ಪಾಪಗಳನ್ನು ನಾಶಮಾಡಬೇಕೆಂದು ಅಗ್ನಿಯನ್ನು ಕುರಿತು ಪ್ರಾರ್ಥನೆಯು ಅತ್ಯಂತ ಪಶ್ಚಾತ್ತಾಪ ಪೂರಿತವಾಗಿಯೂ ಶ್ರದ್ಧಾಯುಕ್ತವಾಗಿಯೂ ಇದೆ.

॥ ವ್ಯಾಕರಣಪ್ರಕ್ರಿಯಾ ॥

**ಸುದ್ರವಿಣಃ**—ಶೋಭನಾನಿ ದ್ರವಿಣಾನಿ ಧನಾನಿ ಯಸ್ಯ ಸಃ ಸುದ್ರವಿಣಃ. ದ್ರು ಗತೌ ಧಾತು. ಇದಕ್ಕೆ ದ್ರುದಕ್ಷಿಭ್ಯಾಮಿನನ್— (ಉ. ಸೂ. ೨-೨೦೮) ಎಂಬುದರಿಂದ ಇನನ್ ಪ್ರತ್ಯಯ. ದ್ರು ಎಂಬುದಕ್ಕೆ ಪ್ರತ್ಯಯ

ನಿಮಿತ್ತವಾಗಿ ಗುಣ, ಅವಾದೇಶ. ರೇಫನಿಮಿತ್ತವಿರುವುದರಿಂದ **ಅಟ್‌ಕುಪ್ವಾಙ್**—ಸೂತ್ರದಿಂದ ಪ್ರತ್ಯಯ, ನಕಾರಕ್ಕೆ ಣತ್ವ. ದ್ರವಿಣ ಎಂದು ರೂಪವಾಗುತ್ತದೆ. ಸಂಹಿತಾದಲ್ಲಿ ದ್ರವಿಣ ಶಬ್ದದ ಅಂತ್ಯದಲ್ಲಿ ಸಕಾರಾಗಮವು ಛಾಂದಸ ವಾಗಿ ಬರುತ್ತದೆ. ಸಂಬುದ್ಧಿಯಲ್ಲಿ ಆಮಂತ್ರಿತಸಂಜ್ಞೆ ಬರುವುದರಿಂದ **ಆಮಂತ್ರಿತಸ್ಯಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ದದಾಶಃ**— ದಾಶೃ ದಾನೇ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ–ಲೋಪಃ ಪರಸ್ಮೈಪದೇಷು** ಎಂಬುದರಿಂದ ಇಕಾರ ಲೋಪ. **ಲೇಟೋಽಡಾಟೌ** ಎಂಬುದರಿಂದ ಅಡಾಗಮ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿ ಶೇಷ. ಹ್ರಸ್ವ. ದದಾಶಸ್ ಎಂದಿರುವಾಗ ರುತ್ವ ವಿಸರ್ಗ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುವರಿಂದ ಆದ್ಯುದಾತ್ತಸ್ವರ ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಸರ್ವತಾತಾ—ಸರ್ವದೇವಾತ್ತಾತಿಲ್**— (ಪಾ. ಸೂ. ೪-೪-೧೪೨) ಎಂಬುದರಿಂದ ಸರ್ವಶಬ್ದದಮೇಲೆ ತಾತಿಲ್ ಪ್ರತ್ಯಯ. **ಲಿತಿ**— (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಯಾಸ್ಕ ಪಕ್ಷದಲ್ಲಿ ಸರ್ವಾಃ ಸ್ತುತಯಃ ಯೇಷು ಯಾಗೇಷು ಇತಿ ಸರ್ವತಾತಾ ಎಂದು ಬಹುವ್ರೀಹಿ ಸಮಾಸ. ಛಂದಸ್ಸಿನಲ್ಲಿ ವರ್ಣ ವ್ಯತ್ಯಯದಿಂದ ಆತ್ವ ಬರುತ್ತದೆ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಎರಡು ಪಕ್ಷಗಳಲ್ಲಿಯೂ **ಸುಪಾಂ ಸುಲುಕ್**– ಎಂಬುದರಿಂದ ಸಪ್ತಮಿಗೆ ಡಾದೇಶ ಬರುತ್ತದೆ.

**ಚೋದಯಾಸಿ**— ಚುದ ಪ್ರೇರಣೇ ಧಾತು. ಲೇಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್ ಪ್ರತ್ಯಯ. ಚುರಾದಿಯಲ್ಲಿ ಸೇರಿರುವುದರಿಂದ **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್ ಪ್ರತ್ಯಯ. **ಪುಗಂತಲಘೂಪಧಸ್ಯಚ** ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಲೇಟೋಽಡಾಟೌ** ಎಂಬುದರಿಂದ ಆಡಾಗಮ. ಪ್ರತ್ಯಯನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಯುವ್ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಸ್ವರದಿಂದ ದಕಾರೋತ್ತರಾಕಾರವು ಉದಾತ್ತವಾಗುತ್ತದೆ.

**ಪ್ರಜಾವತಾ**— ಪ್ರಜಾಃ ಅಸ್ಯ ಸಂತಿ ಇತಿ ಪ್ರಜಾವಾನ್. **ತದಸ್ಯಾಸ್ತೀ**—ಸೂತ್ರದಿಂದ ಮತುಪ್ ಅಕಾರದ ಪರದಲ್ಲಿ ಮತುಪ್ ಬಂದುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವಕಾರಾದೇಶ. ತೃತೀಯಾ ಏಕವಚನಾಂತರೂಪ.



ಸಂಹಿತಾಪಾಠಃ

ಸ ತ್ವಮಗ್ನೇ ಸೌಭಗತ್ವಸ್ಯ ವಿದ್ವಾನಸ್ಮಾಕಮಾಯುಃ ಪ್ರ ತಿರೇಹ
ದೇವ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥೧೬॥

॥ ಪದಪಾಠಃ ॥

ಸಃ । ತ್ವಂ । ಅಗ್ನೇ । ಸೌಭಗಽತ್ವಸ್ಯ । ವಿದ್ವಾನ್ । ಅಸ್ಮಾಕಂ । ಆಯುಃ ।
ಪ್ರ । ತಿರ । ಇಹ । ದೇವ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ । ಉತ । ದ್ಯೌಃ ॥ ೧೬ ॥

ಸಾಯಣಭಾಷ್ಯಂ

ಹೇ ದೇವ ದಾನಾದಿಗುಣಯುಕ್ತಾಗ್ನೇ ಸ ಪೂರ್ವೋಕ್ತಗುಣವಿಶಿಷ್ಟಸ್ತ್ವಂ ಸೌಭಗತ್ವಸ್ಯ ಸುಭಗತ್ವಂ ಸೌಭಾಗ್ಯಂ ವಿದ್ವಾನ್ ಜಾನನ್ ಇಹಾಸ್ಮಿನ್ಕರ್ಮಣ್ಯಸ್ಮಾಕಮಾಯುಃ ಪ್ರ ತಿರ । ಪ್ರವರ್ಧಯ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ತ್ವಯಾ ಪ್ರವರ್ಧಿತಂ ನೋಽಸ್ಮಾಕಂ ತದಾಯುರ್ಮಿತ್ರಾದಯಃ ಷಡ್ದೇವತಾ ಮಮಹಂತಾಂ । ಪೂಜಯಂತಾಂ । ರಕ್ಷಂತ್ವಿತ್ಯರ್ಥಃ । ಮಿತ್ರಃ ಪ್ರಮೀತೇಸ್ತ್ರಾತಾ ವರುಣೋಽನಿಷ್ಟಾನಾಂ ನಿವಾರಯಿತಾ ಅದಿತಿರದೀನಾಖಂಡನೀಯಾ ವಾ ದೇವಮಾತಾ ಸಿಂಧುಃ ಸ್ಯಂದನಶೀಲೋದಕಾತ್ಮಾ ದೇವತಾ ಪೃಥಿವೀ ಪ್ರಥಿತಾ ಭೂದೇವತಾ । ಉತೇತಿ ಸಮುಚ್ಚಯೇ । ದ್ಯೌಃ ಪ್ರಕಾಶಮಾನಾ ದ್ಯುಲೋಕಾತ್ಮಾ ದೇವತಾ । ಏತಾಶ್ಚ ಸರ್ವಾ ಅಗ್ನಿನಾ ಪ್ರವರ್ಧಿತಮಾಯುರ್ಮಮಹಂತಾಮಿತಿ ಪೂರ್ವತ್ರಾನ್ವಯಃ ॥ ಸೌಭಗತ್ವಸ್ಯ । ಸುಭಗಸ್ಯ ಭಾವಃ ಸೌಭಗಂ । ಸುಭಗಾನ್ಮಂತ್ರ ಇತ್ಯುದ್ಗಾತ್ರಾದಿಷು ಪಾಠಾದ್ಭಾವೇಽಞ್ । ಪುನರಪಿ ಭಾವಪ್ರತ್ಯಯೋತ್ಪತ್ತಿಶ್ಛಾಂದಸೀ । ಮಮಹಂತಾಂ । ಮಹ ಪೂಜಾಯಾಂ । ಭೌವಾದಿಕಃ । ಲೋಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ತುಜಾದಿತ್ವಾದಭ್ಯಾಸಸ್ಯ ದೀರ್ಘತ್ವಂ ॥

॥ ಪ್ರತಿಪದಾರ್ಥ ॥

**ದೇವ**—ದಾನಾದಿಗುಣಗಳಿಂದ ಕೂಡಿದ । **ಅಗ್ನೇ**—ಎಲೈ ಅಗ್ನಿಯೇ । **ಸಃ**—ಸಕಲಗುಣಪೂರಿತನಾದ । **ತ್ವಂ**—ಆ ನೀನು । **ಸೌಭಗತ್ವಸ್ಯ**— ಸೌಭಾಗ್ಯದ ಸ್ವರೂಪವನ್ನು । **ವಿದ್ವಾನ್**— ತಿಳಿದುಕೊಂಡು । **ಇಹ**—ಈ ಯಜ್ಞಕರ್ಮದಲ್ಲಿ । **ಅಸ್ಮಾಕಂ ಆಯುಃ**—ನಮ್ಮ ಆಯಸ್ಸನ್ನು । **ಪ್ರ ತಿರ**—ಬೆಳೆಸು । **ನಃ**—(ಅಂತಹ) ನಮ್ಮ । **ತತ್**—ಆ ಆಯುಸ್ಸನ್ನು । **ಮಿತ್ರಃ**—(ರಕ್ಷಕನಾದ) ಮಿತ್ರನೂ । **ವರುಣಃ**—(ಅನಿಷ್ಟಗಳನ್ನು ನಾಶಮಾಡುವ) । ವರುಣನೂ । **ಅದಿತಿಃ**— ಅಖಂಡಳಾದ ದೇವಮಾತೆಯೂ । **ಸಿಂಧುಃ**— ಪ್ರವಹಿಸುವ ನದೀ ದೇವತೆಯೂ । **ಪೃಥಿವೀ**—ವಿಸ್ತಾರವಾದ ಭೂಮಾತೆಯೂ । **ಉತ**—ಮತ್ತು । **ದ್ಯೌಃ**— ಪ್ರಕಾಶಮಾನವಾದ ದ್ಯುಲೋಕಾಧಿದೇವತೆಯೂ । **ಮಮಹಂತಾಂ**—ರಕ್ಷಿಸಲಿ ॥

॥ ಭಾವಾರ್ಥ ॥

ದಾನಾದಿಗುಣಗಳಿಂದ ಕೂಡಿದ ಎಲೈ ಅಗ್ನಿಯೇ, ಸಕಲಗುಣಪೂರಿತನಾದ ನೀನು ಸೌಭಾಗ್ಯದ ಸ್ವರೂಪವನ್ನು ತಿಳಿದುಕೊಂಡು ಈ ಯಜ್ಞಕರ್ಮದಲ್ಲಿ ನಮ್ಮ ಆಯಸ್ಸನ್ನು ಬೆಳೆಸು. ನಮ್ಮ ಆಯಸ್ಸನ್ನು ಮಿತ್ರನೂ, ವರುಣನೂ, ಅದಿತಿಯೂ ಸಾಗರಾಧಿದೇವತೆಯೂ, ಭೂಮಾತೆಯೂ ಮತ್ತು ದ್ಯುಲೋಕಾಧಿದೇವತೆಯೂ ಸಹ ವೃದ್ಧಿಪಡಿಸಿ ರಕ್ಷಿಸಲಿ.

## English Translation

Divine Agni, do you who know what is good fortune on this occasion, prolong our existence, and may Mitra, Varuna, Aditi, ocean, earth and heaven preserve it to us.

॥ ವಿಶೇಷವಿಷಯಗಳು ॥

**ಸ ತ್ವಮಗ್ನೇ**—ಅಂತಹ ನೀನು ಎಂದು ಹೇಳಿರುವುದರಿಂದ ಹಿಂದೆ ಹೇಳಿದ ಗುಣಗಳಿಂದ ಕೂಡಿದ ನೀನು ಎಂದರ್ಥ. ಎಂದರೆ ಹಿಂದಿನ ಋಕ್ಕುಗಳಲ್ಲಿ

**ದೇವೋ ದೇವಾನಾಮಸಿ ಮಿತ್ರೋ ಅದ್ಭುತೋ ವಸುರ್ವಸೂನಾಮಸಿ ಚಾರುರಧ್ವರೇ ।**
( ಋ. ಸಂ. ೧-೯೪-೧೩ )

**ತತ್ತೇ ಭದ್ರಂ ಯತ್ಸಮಿದ್ಧಃ ಸ್ವೇ ದಮೇ ಸೋಮಾಹುತೋ ಜರಸೇ ಮೃಳಯತ್ತಮಃ ।**
**ದಧಾಸಿ ರತ್ನಂ ದ್ರವಿಣಂ ಚ ದಾಶುಷೇಽಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ ॥**
( ಋ. ಸಂ. ೧-೯೪-೧೪ )

ಎಂಬುದಾಗಿ ದೇವತೆಗಳ ಮತ್ತು ಮಾನವರ ಸಕಲಸೌಭಾಗ್ಯಕ್ಕೂ ಕಾರಣನಾದ ಅಗ್ನಿಯೇ ಎಂದು ಸಂಬೋಧನೆ ಮಾಡಲಾಗಿದೆ.

**ಸೌಭಗತ್ವಸ್ಯ ವಿದ್ವಾನ್—ಸುಭಗಸ್ಯ ಭಾವಃ ಸೌಭಗಂ । ತಸ್ಯ ಭಾವಃ ।** ಎಂದರೆ ಸಕಲಸೌಭಾಗ್ಯ ಸಂಪತ್ತುಗಳನ್ನೂ ತಿಳಿದವನಾಗಿ ; **ಜಾತವೇದಾಃ** ಇತ್ಯಾದಿ ವಿಶೇಷಣಗಳಿಂದ ಅಗ್ನಿಯ ಸರ್ವಜ್ಞತ್ವವನ್ನು ವರ್ಣಿಸಿರುವುದರಿಂದ ಯಜ್ಞಕರ್ತರಶ್ರದ್ಧಾ ಭಕ್ತಿಗಳನ್ನೂ, ಅವರ ಕರ್ತವ್ಯತತ್ಪರತೆಯನ್ನೂ ಆಯಾ ಸತ್ಕರ್ಮಗಳಿಗೆ ತಕ್ಕ ಫಲಗಳನ್ನೂ ಸಂಪೂರ್ಣವಾಗಿ ತಿಳಿದು ಸಕಲ ಸೌಭಾಗ್ಯ ಸಂಪತ್ತುಗಳನ್ನು ಅವರಿಗೆ ಒದಗಿಸುತ್ತಾ.

**ಅಸ್ಮಾಕಮಾಯುಃ ಪ್ರ ತಿರ—** ನಮ್ಮ ಆಯುಸ್ಸನ್ನು ವೃದ್ಧಿಯಾಗುವಂತೆ ಮಾಡು. **ಪ್ರ ತಿರ** ಶಬ್ದಕ್ಕೆ **ಪ್ರವರ್ಧಯ** ಎಂದು ನಿರುಕ್ತಕಾರರು ವಿವರಿಸಿ (ನಿ. ೧೦-೪೦) ಋಕ್ಸಂಹಿತೆಯ—

**ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸು ಪ್ರ ತಿರಾ ನ ಆಯುಃ ।**

( ಋ. ಸಂ. ೧೦-೫೯-೫ )

ಎಂಬ ಋಕ್ಕನ್ನು ಉದಹರಿಸಿ ತೋರಿಸುತ್ತಾರೆ. ಇವರಂತೆಯೇ ಅನೇಕಸಂದರ್ಭಗಳಲ್ಲಿ ನಮ್ಮ ಆಯುಸ್ಸನ್ನು ಬೆಳೆಸು, ನಾವು ದೀರ್ಘಕಾಲ ಜೀವಿಸುವಂತಾಗಲಿ ಎಂದರ್ಥವನ್ನು ಕೊಡುತ್ತದೆ. ಅದರಂತೆ ಇಲ್ಲಿಯೂ **ಅಸ್ಮಾಕಮಾಯುಃ ಪ್ರ ತಿರ** ಎಂದರೆ ನಮ್ಮ ಆಯುಸ್ಸು ವೃದ್ಧಿಯಾಗುವಂತೆ ಮಾಡು ಎಂದರ್ಥ.

**ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ।** ಈ ದೇವತೆಗಳೆಲ್ಲರೂ ಸಹ ಅಗ್ನಿಯಿಂದ ಅನುಗೃಹೀತವಾದ ನಮ್ಮ ಸೌಭಾಗ್ಯಸಂಪತ್ತುಗಳನ್ನು ಬೆಳೆಸಲಿ, ಪೂಜ್ಯವಾದುದನ್ನಾಗಿ ಮಾಡಲಿ. ಅವು ನಮ್ಮ ಭಾಗಕ್ಕೆ ಶ್ರೇಯಸ್ಕರಗಳಾಗುವಂತೆ ಮಾಡಲಿ. ಇದು ಈ ಸೂಕ್ತದ ಕೊನೆಯ ಪ್ರಾರ್ಥನೆ. ಸೂಕ್ತದ ಆದಿಯಿಂದ ಇಲ್ಲಿಯ ವರೆಗೆ ಅಗ್ನಿದೇವತಾಕವಾಗಿದ್ದು, ಸೂಕ್ತದ ಕೊನೆಯ ಅರ್ಧದಲ್ಲಿ ಈ ವಿಧವಾಗಿ ಸರ್ವದೇವತಾಕವಾದ ಪ್ರಾರ್ಥನೆಯು ಕುತ್ಸಋಷಿಗಳ ಕೃತಿಯ ವೈಶಿಷ್ಟ್ಯವು. ಈ ವೈಶಿಷ್ಟ್ಯವು ಭಾರದ್ವಾಜ, ಗೃತ್ಸಮದ ಇತ್ಯಾದಿ ಋಷಿಗಳ ಕೃತಿಗಳಲ್ಲೂ ಕಂಡು ಬರುತ್ತದೆ. ಇದಕ್ಕೆ **ಉದರ್ಕ**ವೆಂದು ಪಾರಿಭಾಷಿಕ ವಚನವು ಪ್ರಸಿದ್ಧವಾಗಿದೆ. ಕುತ್ಸಋಷಿಗಳ **ಉದರ್ಕ**ವನ್ನು ಬೃಹದ್ದೇವತೆಯು ಈ ರೀತಿ ಪ್ರಶಂಸಿಸಿದೆ.

**ಇಮಂ ಕುತ್ಸ ಆಂಗಿರಸೋ ದದರ್ಶ ಜಾತವೇದಸ್ಯಂ ಜಗಾದ ಷೋಳಶರ್ಚಂ ।**
**ಪೂರ್ವೋ ದೇವಾ ಇತ್ಯೃಚೋ ದೇವದೇವಾಸ್ತ್ರಯಃ ಪಾದಾ ಉತ್ತಮಾಯಾ ಸ್ತತೋಽರ್ಧಂ ॥**

**ತಸ್ಯೈವ ವಾ ಯಸ್ಯ ತತ್ಪೂರ್ವಸೂಕ್ತಂ ಮಿತ್ರಾದಿಭ್ಯೋ ವಾತ್ರ ಷಡ್ಭಃ ಪ್ರಕೃತಾಭ್ಯಃ ।**
**ಅಂತ್ಯೋಽರ್ಧರ್ಚಸ್ತು ವಾ ಷಣ್ಣಾಂ ಸ್ತುತಾನಾಂ ಪೂರ್ವೋ ದೇವಾಃ ಪಾದೈಸ್ತು ದ್ರಿಭಿಃ ಸ್ತುತಾಃ॥**

**ಭರದ್ವಾಜೇ ಗೃತ್ಸಮದೇ ವಸಿಷ್ಠೇ ನೋಧಸ್ಯಗಸ್ತ್ಯೇ ವಿಮದೇ ನಭಾಕೇ ।**
**ಕುತ್ಸೇ ನೋದರ್ಕಾ ಬಹುದೈವತೇಷು ತಥಾ ದ್ವಿದೇವೇಷು ಸಮಾನಧರ್ಮಿಣಃ ॥**

( ಬೃಹದ್ದೇವತಾ III. 126—128 )

ಕುತ್ಸ ಆಂಗಿರಸನು ಈ ಸೂಕ್ತದ (೧–೯೪) ದರ್ಶನವನ್ನು ಪಡೆದು ಹದಿನಾರು ಋಕ್ಕುಗಳುಳ್ಳ ಈ ಸೂಕ್ತವನ್ನು ಜಾತವೇದಸ್ಸಿನ ಪರವಾಗಿ ಪಠಿಸಿದನು. **ಪೂರ್ವೋ ದೇವಃ** ಎಂಬ ಏಂಟನೇ ಋಕ್ಕಿನ ಮೊದಲು ಮೂರು ಪಾದಗಳೂ, ಕೊನೆಯ ಋಕ್ಕಿನ ಉತ್ತರಾರ್ಧವೂ ಬಹುದೇವತಾಕವಾಗಿದೆ. ಭರದ್ವಾಜ, ಗೃತ್ಸಮದ. ವಸಿಷ್ಠ, ನೋಧಾಃ, ಅಗಸ್ತ್ಯ, ವಿಮದ, ನಭಾಕ ಇವರ ಸೂಕ್ತಗಳಲ್ಲಿಯೂ **ಉದರ್ಕ**ಗಳಿದ್ದರೂ ಸಹ ಅವು ಬಹುದೇವತಾಕವಾಗಿರಲಿ, ದ್ವಿದೇವತಾಕವಾಗಿರಲಿ ಕುತ್ಸಋಷಿಯ **ಉದರ್ಕ**ದಲ್ಲಿರುವ ಪಲ್ಲವಿಯ ಸಮಾನ ಧರ್ಮವನ್ನು ಹೊಂದಿರುವುದಿಲ್ಲ, ಎಂದು ಕುತ್ಸಋಷಿಯ ಕೃತಿಯಲ್ಲಿ ವೈಶಿಷ್ಟ್ಯವನ್ನು ತೋರಿಸಲಾಗಿದೆ.

ಒಟ್ಟಿನಲ್ಲಿ ಎಂಟು ಋಷಿಗಳ ಕೃತಿಗಳಲ್ಲಿ ಈ ವಿಧವಾದ **ಉದರ್ಕವು** ಸೂಕ್ತಗಳ ಕೊನೆಯಲ್ಲಿ ಪಠಿತವಾಗಿವೆ. ಆದರೆ ಯಾವ ಋಷಿಯ ಸೂಕ್ತದ ಕೊನೆಯ ಅರ್ಧವೂ ಬಹುದೇವತಾಕವಾಗಿಲ್ಲ. ಈ ಅಂಶವನ್ನು ಉದಾಹರಣೆಗಳೊಂದಿಗೆ ಮುಂದಿನ ಸೂಕ್ತದ ವಿವರಣೆಯಲ್ಲಿ ವಿಶದವಾಗಿ ವಿಮರ್ಶಿಸಲಾಗುವುದು

### ವ್ಯಾಕರಣಪ್ರಕ್ರಿಯಾ

**ಸೌಭಗತ್ವಸ್ಯ**—ಸುಭಗಸ್ಯ ಭಾವಃ ಸೌಭಗಮ್. **ಸುಭಗಾನ್ಮಂತ್ರೇ**—ಎಂದು ಉದ್ಗಾತ್ರಾದಿಯಲ್ಲಿ ಪಾಠ ಮಾಡಿರುವುದರಿಂದ ಭಾವಾರ್ಥದಲ್ಲಿ ಞಞ್ ಪ್ರತ್ಯಯ. ಞಿತ್ತಾದುದರಿಂದ ಆದಿವೃದ್ಧಿ ಬರುತ್ತದೆ. ಸೌಭಗವೆಂದರೇ ಭಾವಾರ್ಥ ತೋರುತ್ತಿರುವಾಗ ತಿರುಗಿ ಭಾವಾರ್ಥಕ ತ್ವಪ್ರತ್ಯಯವನ್ನು ಸೌಭಗ ಶಬ್ದದ ಮೇಲೆ ಛಾಂದಸವಾಗಿ ಸ್ವೀಕರಿಸಬೇಕು. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತಿರ**—ಪ್ರ ಪೂರ್ವವಾದ ತಿರ ಧಾತುವು ವೃದ್ಧ್ಯರ್ಥದಲ್ಲಿದೆ. ಲೋಟ್. ಮಧ್ಯಮಪುರುಷ, ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮಮಹಂತಾಮ್**—ಮಹ ಪೂಜಾಯಾಂ ಧಾತು. ಭ್ವಾದಿ. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಝೋಽಂತಃ** ಎಂಬುದರಿಂದ ಅಂತಾದೇಶ **ಆಮೇತಃ** (ಪಾ.ಸೂ.೩-೪-೯೦) ಎಂಬುದರಿಂದ ಲೋಟಿನಲ್ಲಿ ಬಂದ ಏತ್ವಕ್ಕೆ ಆಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ತುಜಾದಿಯಲ್ಲಿ ಸೇರಿರುವುದರಿಂದ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೬ ॥

೯೪ ನೇ ಸೂಕ್ತವು ಸಮಾಪ್ತವಾಗಿದೆ.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಮಹೀಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ ಷಷ್ಠೋಽಧ್ಯಾಯಃ ಸಮಾಪ್ತಃ

ಶ್ರೀಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಆರನೆಯ ಅಧ್ಯಾಯವು ಸಮಾಪ್ತವಾದುದು.

———:o:———

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥

P.D